# ಜಾನಪದ ಜಂಗಮ

ಪ್ರಧಾನ ಸಂಪಾದಕರು

ಸತ್ಯಮೂರ್ತಿ ಆನಂದೂರು



ಅಭಿನಂದನ ಗ್ರಂಥ

# ಜಾನಪದ ಜಂಗಮ

## ಡಾ॥ ದೊಡ್ಡರಂಗೇಗೌಡ ಅಭಿನಂದನಾ ಗ್ರಂಥ

ಪ್ರಧಾನ ಸಂಪಾದಕರು

**ಸತ್ಯಮೂರ್ತಿ ಆನಂದೂರು**

ಸಂಪಾದಕರು

**ಎನ್. ಅಮರೇಶ್**

**ಬಿ.ಸಿ. ಜಗದೀಶ್**




ಪ್ರಸ್ತುತ ಪ್ರಕಾಶನ

ನಂ. 49, ಪೂರ್ವ ವೃತ್ತ ರಸ್ತೆ, ಸಜ್ಜನ್‌ರಾವ್ ವೃತ್ತ, ವಿಶ್ವೇಶ್ವರಪುರ, ಬೆಂಗಳೂರು-04

**JANAPADA JANGAMA** - Edited by Satyamurthy Anandoor Published by PRASTUTHA PRAKASHANA No. 49. East Circle Road, Sajjan Rao Circle, Vishweswarapuram, Bangalore - 560004





First Impression : 2006

Copies : 1000

Price : Rs. 325/-

Pages : XVI + 559

Cover Page Designing : Gopi - Prakruthi Creations

D.T.P. : H. Soujanya



**Printed at : Prastutha Printers**
No. 49, East Circle Road,
V.V. Puram Bangalore - 560004.

# ಸಂಪಾದಕರ ಮಾತು

ನಿಜ. ಇದು ಅಚ್ಚರಿಯ, ಸಾಹಸದ ಹಾಗೂ ಸಂತಸದ ನಿಟ್ಟುಸಿರು. ಸುಮಾರು ಆರು ತಿಂಗಳ ಕಾಲ ಕವಿಯೊಬ್ಬರ ಕಾವ್ಯ, ಪ್ರಬಂಧ, ವಿಮರ್ಶೆ, ಅಂಕಣ ಇತ್ಯಾದಿ ಒಂದು ಸಾರಸ್ವತ ಲೋಕದಲ್ಲಿ ನಿರಂತರವಾಗಿ ತಿರುಗಾಡಿ ಇದೀಗ ತಾನೆ ಮರಳಿಬಂದ ಅನುಭವ. ಇದರಲ್ಲಿ ಅಚ್ಚರಿ, ಸಾಹಸದ ಮಾತು ಬಂದ ಬಗ್ಗೆ ಎರಡು ನುಡಿಗಳು.

ಜನತೆಯ ಕವಿ ಡಾ|| ದೊಡ್ಡರಂಗೇಗೌಡರು ಸುಮಾರು 30 ವರ್ಷಗಳ ಹಿಂದೆಯೇ ಕೇಳಿದ ಹೆಸರು. ಆಗಿನ್ನು ಪ್ರೌಢಶಾಲೆ ಮುಗಿಸಿ ಕಾಲೇಜಿನ ಮೆಟ್ಟಿಲು ಹತ್ತಲು ಬೆಂಗಳೂರು ಮಹಾನಗರಿಗೆ ಬಂದಾಗ ಇಲ್ಲಿನ ದಿಗ್ಗಜರ ಸಾರಸ್ವತಲೋಕದಲ್ಲಿ ಆಗತಾನೇ ಮುಖ ತೂರಿಸಿ ನೋಡುತ್ತಿದ್ದೆ... ಎಲ್ಲವೂ ಅಚ್ಚರಿ, ಬೆಡಗು! ಗೌಡರ 'ಅಕಾವ್ಯ' ಎಂಬ ಪ್ರತಿಭಟನೆಯ ಸಾಹಿತ್ಯ ಪತ್ರಿಕೆ ಶುರುವಾಗಿದ್ದ ಆ ಬೆಡಗಿನ ದಿನಗಳಲ್ಲಿ, ಅಕ್ಷರ ಲೋಕದ ಎಲ್ಲರೂ ನಮ್ಮ ಕಣ್ಣಿಗೆ ಹೀರೋಗಳಂತೆ ಕಾಣುತ್ತಿದ್ದರು. ಅದೇ ರೀತಿ ಗೌಡರು ಕೂಡ. ಆದರೆ ಅದೇ ಗೌಡರ ಕುರಿತಾದ 60ನೆಯ ಅಭಿನಂದನಾ ಗ್ರಂಥವನ್ನು ನಾನೇ ಸಂಪಾದಿಸುವ ಸುಂದರ ಗಳಿಗೆ ಬರುವುದೆಂದು ಊಹಿಸಿಯೇ ಇರಲಿಲ್ಲ.

ಆರು ತಿಂಗಳ ಹಿಂದೆ ಗೆಳೆಯ ಚಂದ್ರಶೇಖರ ಗುಬ್ಬಿ ಈ ಬಗೆಯ ಪುಸ್ತಕವೊಂದನ್ನು ಸಂಪಾದಿಸಿ ಕೊಡುವ ವಿಚಾರ ತಿಳಿಸಿದಾಗ ಒಮ್ಮೆ ಬೆಚ್ಚಿಬಿದ್ದಿದ್ದೆ. ಯಾಕೆಂದರೆ ಗೌಡರು ಬರೆದ ಸಾವಿರಾರು ಪುಟಗಳು, ಕಿವಿ ತುಂಬುವಷ್ಟು ಹಾಡುಗಳು ಇವನ್ನೆಲ್ಲ ಮತ್ತೊಮ್ಮೆ ನಾನು ಜಾಲಾಡಬಹುದೇ? ಆದರೆ ಅಂತಹದ್ದೊಂದು ಖುಷಿಯ ಸಂಗತಿ ಇನ್ನೇನಿದೆ ಎಂದೇ ಒಪ್ಪಿಕೊಂಡೆ.

ಪ್ರಸ್ತುತ ಪ್ರಕಾಶನದ ಅಮರೇಶ್ ಹಾಗೂ ಜಗದೀಶ್ ನನಗೆ ಪರಿಚಯವಾಗಿದ್ದೇ ಈ ಅಭಿನಂದನಾ ಗ್ರಂಥದ ನೆಪದಲ್ಲಿ, ಇಬ್ಬರೂ ಗೆಳೆಯರಾಗಿ, ಮುಕ್ತವಾಗಿ ಹಾಗೂ ಎಲ್ಲೂ ಕಲಸುಮೇಲೋಗರವಾಗದಂತೆ ಈ ಕೆಲಸದಲ್ಲಿ ಅತ್ಯಂತ ಶ್ರಮವಹಿಸಿದ್ದು ಈ ಪುಸ್ತಕ ಹೊರಬರಲು ಮೊದಲ ಕಾರಣ. ಹಾಗಾಗಿ ಈ ಗ್ರಂಥದ ಮಹತ್ತರ ಪಾಲು ಅವರಿಗೂ ದಕ್ಕಲೇಬೇಕು.

ಗೌಡರ ಸಾಹಸಗಾಥೆಯನ್ನು, ಅವರ ನೆಲದ ಆಳದಿಂದ ಆಗಸದವರೆಗೆ ಹಬ್ಬಿರುವ ಜೀವನ ಪ್ರೀತಿಯನ್ನು ವಿಸ್ತಾರವಾಗಿ ಅರಿಯಲು ಸಹಾಯವಾಗಿದ್ದೇ ಈ ಬೃಹತ್ ಗ್ರಂಥದ ಕೆಲಸದಿಂದ. ಜಾನಪದ, ನವ್ಯ, ರಮ್ಯ, ಬಂಡಾಯ, ಚಿತ್ರಗೀತೆಯ ಹಲವು ಬಗೆಗಳನ್ನು ಇಲ್ಲಿ ಮೊದಲಿನಿಂದ ಕೊನೆಯತನಕ ಓದಿದ್ದು ನನ್ನ ಬದುಕಿನ ನಿಜದ ಸಫಲ ಅನುಭವ. ಬಹುಶಃ ಈ ಅಭಿನಂದನಾ

ಗ್ರಂಥದ ಕೆಲಸವನ್ನು ವಹಿಸಿಕೊಳ್ಳದೇ ಹೋಗಿದ್ದರೆ ಬಹುದೊಡ್ಡ ಅವಕಾಶದಿಂದ ವಂಚಿತನಾಗುತ್ತಿದ್ದೆನೋ ಏನೋ. ಹಾಗಾಗಿ ಅಮರೇಶ್, ಜಗದೀಶ್ ಮತ್ತು ಗೆಳೆಯ ಗುಬ್ಬಿ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ತಿಳಿಸುವುದು ಮೊದಲ ಕರ್ತವ್ಯ.

ಪುಸ್ತಕದ ಆರಂಭಕ್ಕೆ ಮುನ್ನ ಈ ಕುರಿತು ಚಿಕ್ಕ ಸುದ್ದಿಯೊಂದನ್ನು ಪತ್ರಿಕೆಗಳಿಗೆ ಕೊಡಲಾಗಿತ್ತು. ಆ ಸುದ್ದಿ ಪ್ರಕಟವಾದ ವಾರದಲ್ಲೇ ನಮ್ಮ ನಿರೀಕ್ಷೆಗೂ ಮೀರಿ ಕರ್ನಾಟಕದ ಮೂಲೆ ಮೂಲೆಗಳಿಂದ ಗೌಡರ ಕುರಿತು ಲೇಖನಗಳು ಬಂದವು. ಹಾಗೆಯೇ ವಿದೇಶದಿಂದ ಅವರ ಗೆಳೆಯರೂ ಬರೆದರು. ಗೌಡರ ಅಭಿಮಾನಿವೃಂದ ಬಲು ದೊಡ್ಡದು.

ಆದರೆ ಹೊರಗಿನಿಂದ ಬಂದ ಲೇಖನಗಳ ಮಹಾಪೂರವನ್ನು ನಾವಂತೂ ನಿರೀಕ್ಷಿಸಿರಲಿಲ್ಲ. ಎಲ್ಲವನ್ನು ಅಚ್ಚುಮಾಡುವುದಾಗಿದ್ದರೆ ಸುಮಾರು ನಾಲ್ಕೈದು ಈ ಗಾತ್ರದ ಅಭಿನಂದನಾ ಗ್ರಂಥಗಳನ್ನಾದರೂ ತರಬೇಕಿತ್ತು. ಗೌಡರ ಜನಪ್ರಿಯತೆಯ ಪರಿ ಇದು! ಅದರಲ್ಲಿ ಅವರ ಬಗೆಗಿನ ಅಭಿಮಾನ, ಸ್ನೇಹ, ಪ್ರೀತಿಯ ಬರತೆಗಳೇ ಹೆಚ್ಚು. ಹಾಗಾಗಿ ಬಹಳಷ್ಟು ಲೇಖನಗಳನ್ನು ಈ ಗ್ರಂಥದಲ್ಲಾಗಲೀ ಅಥವಾ ಸ್ಮರಣಸಂಚಿಕೆಯಲ್ಲಾಗಲೀ ಪ್ರಕಟಮಾಡಲು ಸಾಧ್ಯವಾಗಲೇ ಇಲ್ಲ. ಅದಕ್ಕಾಗಿ ಎಲ್ಲರ ಕ್ಷಮೆ ಕೋರುವುದು ಅಗತ್ಯ ಎಂದು ಅನಿಸುತ್ತದೆ.

ನಾವು ಲೇಖನ ಕೋರಿ ಕರ್ನಾಟಕದ 150 ಮಹತ್ವದ ಸಾಹಿತಿಗಳಿಗೆ ಪತ್ರ ಕಳುಹಿಸಿದಾಗ ಯಾರೂ ಇಲ್ಲವೆನ್ನಲಿಲ್ಲ. ಆದರೆ ಕೆಲವರ ಲೇಖನಗಳು ನಾವು ನಿಗದಿ ಪಡಿಸಿಕೊಂಡ ಸಮಯವನ್ನು ಮೀರಿ ಬಂದದ್ದರಿಂದ ಅಂತಹ ಹಲವು ಲೇಖನಗಳು ಇಲ್ಲಿ ಅಚ್ಚಾಗುತ್ತಿಲ್ಲ. ಅಂತಹ ಲೇಖನಗಳು ಸ್ಮರಣ ಸಂಚಿಕೆಯಲ್ಲಿ ಅಚ್ಚಾಗುತ್ತಿವೆ. ಇದಕ್ಕಾಗಿ ವಿಷಾದ ಸೂಚಿಸುತ್ತ ಗೌಡರ ಬಗ್ಗೆ, ಅವರ ಕಾವ್ಯದ ಬಗ್ಗೆ ಪ್ರೀತಿ, ಆತ್ಮೀಯತೆ ತೋರಿದ ಲೇಖಕರು ಕ್ಷಮಿಸುವರೆಂದು ನಂಬುತ್ತೇನೆ.

ಇಂತಹ ಬೃಹತ್ ಪುಸ್ತಕದ ಕರಡು ತಿದ್ದುವ ಕೆಲಸ ಸಾಮಾನ್ಯದ್ದಲ್ಲ. ಮೇಲುಕೋಟೆ ವಿ.ಎನ್. ಗೌಡ, ಕೆಂಪರಾಜ್ ಮತ್ತು ಸೋಮಶಂಕರ್ ಈ ಕೆಲಸದಲ್ಲಿ ಪೂರ್ತಿ ನೆರವಾಗಿ ನಮ್ಮ ಭಾರ ಇಳಿಸಿಕೊಟ್ಟರು. ಅವರಿಗೆ ಸಂಸ್ಥೆಯ ಹಾಗೂ ನನ್ನ ಪರವಾಗಿಯೂ ಅನಂತ ಧನ್ಯವಾದಗಳು.

ಹೇಳುವ ಮಾತುಗಳೆಲ್ಲ ಬಹುಪಾಲು ಈ ಗ್ರಂಥದಲ್ಲಿಯೇ ಅಚ್ಚಾಗಿದೆ. ಇಲ್ಲಿ ಬಂದಿರುವ ಉತ್ಕೃಷ್ಟ ಲೇಖನಗಳಿಗಾಗಿ ಎಲ್ಲರಿಗೆ ಕೃತಜ್ಞತೆ ಹೇಳುವುದು ಸಂಪ್ರದಾಯ. ಆದರೆ ಅವರಿಗೆಲ್ಲ ಹೃದಯ ತುಂಬಿದ ನಮನ ಅರ್ಪಿಸುವುದು ಈ ಸಂದರ್ಭದ ಕರ್ತವ್ಯ ಕೂಡ. ನಮ್ಮೆಲ್ಲರ ಕಷ್ಟಗಳನ್ನು ನಗುತ್ತಾ ಸಹಿಸಿಕೊಂಡ ಕವಿ ಹೃದಯದ ಮುಗ್ಧ ಜಾನಪದ ಜೀವಿ ಶ್ರೀಯುತ ದೊಡ್ಡರಂಗೇಗೌಡರ ಆತ್ಮೀಯತೆಯನ್ನು ಬಣ್ಣಿಸುವುದು ಮಾತ್ರ ದುಸ್ಸಾಹಸದ ಕೆಲಸ....

• ಸತ್ಯಮೂರ್ತಿ ಆನಂದೂರು

# ಪ್ರಕಾಶಕರ ಮಾತು

ಜನಸಾಮಾನ್ಯರಲ್ಲಿ-ಜನ ಸಾಮಾನ್ಯರಂತೆ ಸರಳವಾಗಿ ಬದುಕುತ್ತಿರುವ ಕನ್ನಡ ನಾಡಿನ ಹೆಸರಾಂತ ಕವಿ ಸಾಹಿತಿ ಡಾ॥ ದೊಡ್ಡರಂಗೇಗೌಡರ ಅಭಿನಂದನಾ ಗ್ರಂಥವನ್ನು ಪ್ರಸ್ತುತ ಪ್ರಕಾಶನದ ಮೂಲಕ ಹೊರತರುತ್ತಿರುವುದಕ್ಕೆ ಅತ್ಯಂತ ಸಂತಸವೆನಿಸುತ್ತದೆ. ಡಾ॥ ದೊಡ್ಡರಂಗೇಗೌಡರು ನನಗೆ ಪರಿಚಿತರಾಗಲಿಲ್ಲ. ನಮ್ಮ ಪ್ರಕಾಶನದ ಮುಖೇನ ರಾಷ್ಟ್ರಪ್ರಶಸ್ತಿ ವಿಜೇತ ಶಿಕ್ಷಕರಾದ ಬಿ.ವಿ. ನಾಗರಾಜ್‌ರವರ ಬಗ್ಗೆ ಅಭಿನಂದನಾ ಗ್ರಂಥವನ್ನು ಮುದ್ರಣ ಮಾಡಿದ್ದೆವು. ಅದರ ಬಿಡುಗಡೆ ಕಾರ್ಯಕ್ರಮಕ್ಕೆ ಡಾ॥ ದೊಡ್ಡರಂಗೇಗೌಡರನ್ನು ಪುಸ್ತಕ ಬಿಡುಗಡೆಗಾಗಿ ಆಹ್ವಾನಿಸಿದ್ದೆವು ಡಾ॥ ದೊಡ್ಡರಂಗೇಗೌಡರು ಅಂದು ನನಗೆ ಪರಿಚಿತರಾದದ್ದು. ನನ್ನ ಆತ್ಮೀಯ ಮಿತ್ರರಾದ ಜಗದೀಶ್‌ರವರಿಗೆ ಸುಮಾರು 25 ವರ್ಷಗಳ ಹಿಂದಿನ ಗೆಳೆಯರಾಗಿದ್ದರು. ಡಾ॥ ದೊ.ರಂ.ಗೌರವರ ಬಗ್ಗೆ ಅನೇಕ ಬಾರಿ ನನ್ನೊಡನೆ ಸಂಭಾವನಾ ಗ್ರಂಥ ಮಾಡುವ ಬಗ್ಗೆ ಜಗದೀಶ್ ಚರ್ಚೆ ನಡೆಸಿದ್ದರು. ನನಗೋ ಭಯ, ಕಾರಣವೇನೆಂದರೆ ಡಾ॥ ದೊಡ್ಡರಂಗೇಗೌಡರಂತಹ ಹಿರಿಯ ಕವಿಗಳ ಬಗ್ಗೆ ನಾವು ಗ್ರಂಥವನ್ನು ಮಾಡಲು ಹೊರಟಾಗ ಏನಾದರೂ ವ್ಯತ್ಯಾಸಗಳುಂಟಾಗಿ ವ್ಯತಿರಿಕ್ತ ಪರಿಣಾಮ ಉಂಟಾಗಬಹುದೇನೋ ಎಂಬ ಭೀತಿ ಸದಾ ನನ್ನನ್ನು ಕಾಡುತ್ತಲೇ ಇತ್ತು. ಸುಮಾರು 2 ವರ್ಷಗಳ ಸುಧೀರ್ಘ ಚಿಂತನೆ ನಂತರ ನಾನು ಹಾಗೂ ಜಗದೀಶ್ ಹಾಗೂ ನನ್ನ ಮತ್ತೊಬ್ಬ ಸನ್ಮಿತ್ರರಾದ ಚಂದ್ರಶೇಖರ್ ಗುಬ್ಬಿಯವರು ಡಾ॥ ದೊಡ್ಡರಂಗೇಗೌಡರವರ ಅಭಿನಂದನಾ ಗ್ರಂಥವನ್ನು ಹೊರತರುವ ಬಗ್ಗೆ ಸಮಗ್ರ ನೀಲನಕ್ಷೆ ತಯಾರಿಸಿ ಅದಕ್ಕೆ ಅವರ ಒಪ್ಪಿಗೆ ಪಡೆದು ಕೆಲಸ ಆರಂಭಿಸಿಯೇ ಬಿಟ್ಟೆವು.

ನಮ್ಮ ಈ ಮಹತ್ಕಾರ್ಯಕ್ಕೆ ನನ್ನ ಬೆನ್ನೆಲುಬಾಗಿ ನಿಂತವರು ನನ್ನ ಯಶಸ್ಸಿನ ಹಿಂದಿನ ಶಕ್ತಿ ಹಾಗೂ ಸೂಕ್ತ ಸಮಯದಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ನನ್ನನ್ನು ತಿದ್ದಿ ತೀಡಿ ರೂಪಿಸಿದ ಶ್ರೀಯುತ ಕೆ.ಎಂ. ನಾಗರಾಜ್‌ರವರು. ಅವರ ಬಳಿ ಈ ಬಗ್ಗೆ ಪ್ರಸ್ತಾಪಿಸಿದಾಗ ಬಹಳ ಸೂಕ್ತವಾದ ವ್ಯಕ್ತಿಯನ್ನು ನೀವು ಗೌರವಿಸುವ ಆಲೋಚನೆ ನಡೆಸಿದ್ದೀರಿ. ಇದು ಅವಶ್ಯಕವಾಗಿ ಆಗಬೇಕಾದ ಕೆಲಸ ಎಂದು ನನ್ನ ಬೆನ್ನು ತಟ್ಟಿ ಹುರಿದುಂಬಿಸಿ ಈ ಮಹತ್ಕಾರ್ಯಕ್ಕೆ ಚಾಲನೆ ನೀಡಿದರು.

ತದನಂತರ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠಾಧೀಶರಾದ ಪರಮಪೂಜ್ಯ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮೀಜಿಯವರನ್ನು ಭೇಟಿಮಾಡಿ ಅವರ ಆಶೀರ್ವಾದವನ್ನು ಪಡೆದು. ನಾಡಿನ ಖ್ಯಾತ ನಾಮಧೇಯರುಗಳನ್ನೊಳಗೊಂಡ ಹತ್ತು ಮಹನೀಯರುಗಳ ಒಂದು ಸಮಿತಿಯನ್ನು ರಚಿಸಿ ಅದರ ಪ್ರಧಾನ ಸಂಚಾಲಕನಾಗಿ ಕಾರ್ಯನಿರ್ವಹಿಸುವ ಅವಕಾಶ ಪಡೆದದ್ದು ನನ್ನ ಸುಯೋಗವೇ ಸರಿ ಎಂದು ಭಾವಿಸಿದ್ದೇನೆ.

ನಾಡಿನ ಖ್ಯಾತ ಪತ್ರಕರ್ತರಾಗಿ ಎಲೆ ಮರೆಯ ಕಾಯಿಯಂತೆ ಸಮಾಜಕ್ಕೆ ತನ್ನ ಬರವಣಿಗೆ ಮುಖೇನ ಸೇವೆ ಸಲ್ಲಿಸುತ್ತಿರುವ ಸತ್ಯಮೂರ್ತಿ ಆನಂದೂರು ಇವರನ್ನು ಡಾ॥ ದೊಡ್ಡರಂಗೇಗೌಡರವರ ಅಭಿನಂದನಾ ಗ್ರಂಥ ರಚಿಸಿಕೊಂಡುವಂತೆ ಜಗದೀಶ್ ಹಾಗೂ ಚಂದ್ರಶೇಖರ್ ಗುಬ್ಬಿ ಹಾಗೂ ನಾನು ಒಪ್ಪಿಸಿದೆವು. ಇಂದು ನಮ್ಮ ಕೋರಿಕೆಯಂತೆ ನಾಡಿನ ಜನಪ್ರಿಯ ಕವಿ ಡಾ॥ ದೊಡ್ಡರಂಗೇಗೌಡರವರ 'ಜಾನಪದ ಜಂಗಮ'ವನ್ನು ಪ್ರಕಟಿಸಲು ಸಾಧ್ಯವಾಗಿದೆ.

ಪ್ರಕಾಶಕನಾಗಿ ಹಾಗೂ ಡಾ॥ ದೊ.ರಂ.ಗೌ ಅಭಿನಂದನಾ ಸಮಿತಿ ಪ್ರಧಾನ ಸಂಚಾಲಕನಾಗಿ ಅತ್ಯಂತ ಉತ್ಸುಕತೆಯಿಂದ ಕೆಲಸ ಮಾಡಲು ನನ್ನನ್ನು ಪ್ರೋತ್ಸಾಹಿಸಿದ ನನ್ನ ಸನ್ಮಿತ್ರ ಜಗದೀಶ್ ಹಾಗೂ ಚಂದ್ರಶೇಖರ ಗುಬ್ಬಿ ಮತ್ತು ಪ್ರಧಾನ ಸಂಪಾದಕರಾದ ಸತ್ಯಮೂರ್ತಿ ಆನಂದೂರು ಇವರುಗಳಿಗೆ ನಾನು ಅನಂತಾನಂತ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನನ್ನು ಪ್ರತಿನಿತ್ಯ ಕಛೇರಿಯಲ್ಲಿ ಸಹಿಸಿಕೊಂಡು ಅತ್ಯಂತ ಸುಂದರವಾಗಿ ಅಕ್ಷರಗಳನ್ನು ಜೋಡಿಸಿಕೊಟ್ಟ ನನ್ನ ಸಹೋದ್ಯೋಗಿ ಕು॥ ಹೆಚ್. ಸೌಜನ್ಯರವರಿಗೂ, ಅತ್ಯಂತ ಕಡಿಮೆ ಅವಧಿಯಲ್ಲಿ ಉತ್ತಮವಾದ ಮುಖಪುಟವನ್ನು ರಚಿಸಿಕೊಟ್ಟ ಪ್ರಕೃತಿ ಕ್ರಿಯೇಷನ್ಸ್‌ನ ಗೋಪಿರವರಿಗೂ ಹಾಗೂ ಅಷ್ಟೇ ತಾಳ್ಮೆಯಿಂದ ಚುಕ್ಕಿ ಚಿತ್ರ ನಿರ್ಮಿಸಿಕೊಟ್ಟ ನನ್ನ ಮತ್ತೊಬ್ಬ ಮಿತ್ರರಾದ ಮೋಹನ್ ವರ್ಣೇಕರ್‌ರವರನ್ನು ನಾನು ಸ್ಮರಿಸಲೇಬೇಕು.

ಪುಸ್ತಕವನ್ನು ಅಂದವಾಗಿ ಮುದ್ರಿಸಲು ನನ್ನೊಡನೆ ಸಹಕರಿಸಿ ತಾಂತ್ರಿಕ ಸಲಹೆಗಳನ್ನು ನೀಡಿದ ನಂದಿ ಪ್ರೋಸೆಸ್‌ನ ಗೋಪಾಲ್‌ರವರಿಗೂ ಹಾಗೂ ಪುಸ್ತಕಕ್ಕೆ ಅಂದವಾಗಿ ಬೈಂಡಿಂಗ್ ಮಾಡಿಕೊಟ್ಟ ಸರೋಜ ಬೈಂಡಿಂಗ್‌ನ ರಮೇಶ್‌ರವರಿಗೂ ಹಾಗೂ ಈ ಪುಸ್ತಕವು ಹೊರಬರಲು ನನ್ನೊಡನೆ ಸಹಕರಿಸಿದ ಎಲ್ಲಾ ನನ್ನ ಸನ್ಮಿತ್ರರುಗಳಿಗೂ ನಾನು ಅಭಾರಿಯಾಗಿರುತ್ತೇನೆ. ಇದು ಪುಟ್ಟ ಪ್ರಕಾಶನದ ದೊಡ್ಡ ಪ್ರಯತ್ನ, ಏನಾದರೂ ವ್ಯತ್ಯಾಸಗಳು ಉಂಟಾಗಿದ್ದರೆ ದಯಮಾಡಿ ಕ್ಷಮಿಸಿ.

ಡಾ॥ ದೊಡ್ಡರಂಗೇಗೌಡರಂತಹ ನಾಡಿನ ಖ್ಯಾತ ಕವಿಗಳ 'ಅಭಿನದಂದನಾ ಗ್ರಂಥ'ವನ್ನು ಹೊರತರುವ ಮೂಲಕ ಕನ್ನಡ ನಾಡಿನ ಜನತೆಗೆ, ಕನ್ನಡ ಪುಸ್ತಕ ಲೋಕಕ್ಕೆ ನನ್ನದೊಂದು ಕಿರು ಕಾಣಿಕೆ ಸಮರ್ಪಿಸುತ್ತಿದ್ದೇನೆ.

● ಎನ್. ಅಮರೇಶ್

## ದೊಡ್ಡರಂಗೇಗೌಡರಿಗೆ ಅರವತ್ತು

# ಕವಿಮಿತ್ರನಿಗೆ ಕಿವಿಮಾತು

ಡಾ|| 'ಜೀವಿ' ಕುಲಕರ್ಣಿ

ಕವಿಮಿತ್ರ! ನಿನಗೀಗ ಅರವತ್ತು; ಆದರೂ
ಉತ್ಸಾಹ ಕುಗ್ಗಿಲ್ಲ, ಬೆನ್ನೆಲಬು ಬಗ್ಗಿಲ್ಲ
ಕನ್ನಡವೆ ಕನ್ನಡಕ, ಜಾನಪದ ಸೊಗಡು
ಚೈತನ್ಯ ಉಕ್ಕುತಿದೆ, ಉಕ್ಕಲದು ನೂರು ವರುಷ.

ಅಭಿಜಾತ ಕವಿ ನೀನು, ಕವನ ಉಸಿರಾಗಿಹುದು
ಅದಕಾಗಿ ಇದಕಾಗಿ ಎದಕಾಗಿ ಬರೆವ ಕಲೆ
ನಿನಗಾಯ್ತು ಹಸ್ತಗತ; ಬರಬೇಕು ಇನ್‌ಮುಂದೆ
ನಿನ್ನಾತ್ಮ ಧ್ವನಿಯಾದ ಅನುಭಾವ ಮಹತ್ ಕಾವ್ಯ

ವ್ಯಕ್ತಿಗಿದೆ ನಿವೃತ್ತಿ, ಉಸಿರಿಗೆಲ್ಲಿದೆ ತೃಪ್ತಿ?
ಮಾತಿನಾಚೆಗೆ ಇರುವ ಮೌನದಾ ದಾರಿಹಿಡಿ
ಉಸಿರಿನಲಿ ಇರೆ ಧ್ಯಾನ, ಚಿತ್ತದಲಿ ಇರೆ ಯೋಗ
ಬರಲಿ ನಾಳಿನ ಕಾವ್ಯ 'ಗುರುದೇವ ರವಿಶಂಕರ'

ನಿನಗೆ ಬಡಿಸಿದ ಮಾತು ಕದ್ದು ನಾನೂ ಉಂಡೆ
ನಿನ್ನ ಮುಖದರ್ಪಣದಿ ನನ್ನ ಮುಖವನೆ ಕಂಡೆ!

# ಜಾನಪದ ಜಂಗಮ

## ನೆಲದಾಳದಲ್ಲಿ ಬೇರಿಳಿಯುವ ಮುನ್ನ

(ಪುಟ : 1 - 38)

– ಸತ್ಯಮೂರ್ತಿ ಆನಂದೂರು

## ಚೆಲ್ಲಿದರೋ ಮಲ್ಲಿಗೆಯಾ...

(ಪುಟ : 39 - 74)

1. ಸರಳ ಸಜ್ಜನಿಕೆಯ ವ್ಯಕ್ತಿ – ಜಿ. ನಾರಾಯಣ
2. ಸಮಾಜದ ಒಳಿತಿಗೆ ಜೀವನ ಮುಡಿಪಾಗಿಟ್ಟ ಸಾಹಿತಿ – ಸಿ. ರಂಗಸ್ವಾಮಯ್ಯ
3. ಉನ್ನತ ಆಕಾಂಕ್ಷಿ – ಪ್ರೊ|| ಜಿ. ವೆಂಕಟಸುಬ್ಬಯ್ಯ
4. ಸಿಹಿ ಕಾವ್ಯದ ಸಂತಸ – ಪ್ರೊ|| ಎಲ್.ಎಸ್. ಶೇಷಗಿರಿರಾವ್
5. ಒಂದು ಆಪ್ತ ಸಮಾಲೋಚನೆ – ಪ್ರೊ|| ಎಚ್.ಜೆ. ಸಣ್ಣಗುಡ್ಡಯ್ಯ
6. ಶತಮಾನದ ಶ್ರೇಯಸ್ಸು ಲಭಿಸಲಿ – ಕಯ್ಯಾರ ಕಿಞ್ಞಣ್ಣ ರೈ
7. ಅತ್ಯುತ್ತಮ ವ್ಯಕ್ತಿ – ವೀ. ಚಿಕ್ಕವೀರಯ್ಯ
8. ಜಾನಪದ ತಜ್ಞ – ಪ್ರೊ|| ಎನ್. ಬಸವಾರಾಧ್ಯ
9. ಗೀತ ಗಾರುಡಿಗ – ಬಾಕಿನ
10. ಮಿತ ಮೃದುಭಾಷಿ – ಡಾ|| ಹೋ. ಶ್ರೀನಿವಾಸಯ್ಯ
11. ತುಂಬಿದ ಕೊಡ ತುಳುಕುವುದಿಲ್ಲ – ಸಿ. ಲಿಂಗಪ್ಪ
12. ಚಿರಂಜೀವಿಯಾಗಲಿ – ಐ.ಎ. ಪೆರುಮಾಳ್

## ಸ್ನೇಹದ ಹೊಳೆಯಲಿ ಈಜುತಾ... ತೇಲುತಾ...

(ಪುಟ : 75 - 144)

## ರಾಗಿ ಜೋಳದಾ ತೆನೆ ತೆನೆ ತೂಗಿ....

(ಪುಟ : 145 - 198)



## ನೆಲ ಮುಗಿಲ ಮಾತುಕತೆ

(ಪುಟ : 199 - 402)

## ಬಣ್ಣದ ಬದುಕಿನ ಚಿತ್ತಾರ...

**(ಪುಟ : 403 - 446)**

## ನೆನಪಿನ ನವಿಲು ಜಾಗರವಾಡಿದಾಗ...

## ಕೊಳಲ ಕರೆಯ ಕೇಳಿ....



## ಚಿತ್ರಸಂಪುಟ



# ನೆಲದಾಳದಲ್ಲಿ ಬೇರಿಳಿಯುವ ಮುನ್ನ

● ಸತ್ಯಮೂರ್ತಿ ಆನಂದೂರು

## ಹಾಡು ಹಕ್ಕಿಯ ಜಾಡು

ನೀರಿಗ್ಹೋಗೋ ಹೆಣ್ಣೆ
ನಿಲ್ಲೆ ನಾ ಬರುತೀನಿ

ನಾಟಿ ಮಾಡುವ ಗದ್ದೆಯ ಪಕ್ಕದಲ್ಲಿ ಕಪಿಲೆ ಹೊಡೆಯುತ್ತಿದ್ದ ಚಿಕ್ಕಂಪ್ಪಂದಿರು ರಾಗವಾಗಿ ಹಾಡುತ್ತಿದ್ದರೆ ಗದ್ದೆಯಲ್ಲಿ ಮೊಣಕಾಲ ಮಟ್ಟಕ್ಕೆ ಸೀರೆ ಕಟ್ಟಿಕೊಂಡು ನಾಟಿ ಮಾಡುತ್ತಿದ್ದ ಹೆಂಗಸರು ಇನ್ನಷ್ಟು ಜಾನಪದ ಹಾಡುಗಳನ್ನು ಹರಿಬಿಡುತ್ತಿದ್ದರು. ಆಗ ಪುಟ್ಟ ಹುಡುಗ ಅಪ್ಪಯ್ಯನಿಗೆ ನಾಟಿ ಮಾಡುವ ಹೆಂಗಸರಿಗೆ ಸಿವುಡಿ ಕಟ್ಟಿದ ಕುಚ್ಚುಗಳನ್ನು ಸರಬರಾಜು ಮಾಡುವ ಕೆಲಸ.

ಆ ಕೆಲಸ ಎಷ್ಟು ಪ್ರಿಯವಾಗಿತ್ತೆಂದರೆ, ಅವರ ಲಯಕ್ಕೆ ಅನುಗುಣವಾಗಿ ಅಪ್ಪಯ್ಯ ಕುಚ್ಚುಗಳನ್ನು ವಿತರಣೆ ಮಾಡುತ್ತಿದ್ದ. ಸಾಮಾನ್ಯವಾಗಿ ಬೇಸಾಯವಾಗಲಿ ಇನ್ನಾವುದೇ ಶ್ರಮದ ಕೆಲಸವಾಗಲಿ ಅದಕ್ಕೆ ಹಿನ್ನೆಲೆಯಾಗಿ ಜಾನಪದ ಹಾಡುಗಳು ತುಂಬಿಕೊಂಡಿರುತ್ತಿದ್ದವು. ಸಾಮಾನ್ಯವಾಗಿ ಶ್ರಮಿಕರ ಕಷ್ಟದ ಕೆಲಸವನ್ನು ಹಗುರ ಮಾಡಿಕೊಳ್ಳುವ ಸಮಯದಲ್ಲೆಲ್ಲ ಪದಗಳು ರಾಗವಾಗಿ ಹಾಡಾಗಿ ಹೊಮ್ಮುತ್ತಿದ್ದವು. ಕುರುಬರ ಹಳ್ಳಿಯೂ ಇದಕ್ಕೆ ಹೊರತಲ್ಲ. ಅಲ್ಲಿ ಎಲ್ಲ ಕೆಲಸಗಳಿಗೂ ಹಾಡಿನ ಹಿನ್ನೆಲೆ ಇರುತ್ತಿತ್ತು. ಜಾನಪದದ ಸೊಗಡು ತುಂಬಿರುತ್ತಿತ್ತು. ಅದಕ್ಕೆ ತಕ್ಕ ಪರಿಸರವೂ ಅಲ್ಲಿತ್ತು.

ಮಾರಮ್ಮನ ಗುಡಿ, ಚಾವಡಿ, ಕುರುಬರಹಳ್ಳಿಯ ಪ್ರಾಥಮಿಕ ಶಾಲೆ, ರಂಗನಾಥಸ್ವಾಮಿಯ ದೇವಸ್ಥಾನ ಇವೆಲ್ಲ ಜಾನಪದದ ನೆಲೆಗಟ್ಟಿನಲ್ಲಿ ಜನಪದ ನುಡಿಗಟ್ಟನ್ನು ಪದೇ ಪದೆ ನೆನಪು ಮಾಡುತ್ತಿದ್ದ ಜಾಗಗಳು. ಅಪ್ಪಯ್ಯನ ಮನಸ್ಸಿನಲ್ಲಿ ಇವೆಲ್ಲ ಅರಿವಿಲ್ಲದಂತೆಯೇ ಮೂಡುತ್ತಾ ಹೋಗಿದ್ದವು.

ಗದ್ದೆಯ ಕೆಲಸವೆಂದರೆ ಬರಿ ಬೇಸಾಯ ಮಾತ್ರವಲ್ಲ, ಪೈರನ್ನು ಮುತ್ತುವ ಹಕ್ಕಿ ಪಕ್ಕಿಗಳನ್ನು ಓಡಿಸುವ ಕೆಲಸವೂ ಅದರಲ್ಲೊಂದು. ಅಪ್ಪಯ್ಯನ ಚಿಕ್ಕಪ್ಪಂದಿರು ಕವಣೆಗೆ ಕಲ್ಲು ಜೋಡಿಸಿ 'ಹೋಯ್' ಎಂದು ತಾರಕ ಧ್ವನಿಯಲ್ಲಿ ಬೀಸುತ್ತಿದ್ದರು. ಬಹುಶಃ ಕಲ್ಲುಗಳು ಪಕ್ಕಿಗಳನ್ನು ತಲುಪುವ ಮುನ್ನವೇ ಈ ಸ್ವರಕ್ಕೆ ಪಕ್ಕಿಗಳು ಹಾರುತ್ತಿದ್ದವು. ಅಪ್ಪಯ್ಯ ಆ ಸ್ವರವನ್ನೆ ಅನುಸರಿಸಿ ಖುಷಿಪಡುತ್ತಿದ್ದ. ಹಳ್ಳದ ದಂಡೆಯಲ್ಲಿ ಕಟ್ಟಿದ ಗೀಜಗನಗೂಡು ಗೊರವನ ಹಕ್ಕಿ, ಇವುಗಳೆಲ್ಲ ಅಪ್ಪಯ್ಯನ ಪುಟ್ಟ ಮನಸ್ಸಿನಲ್ಲಿ ಏಳುವ ಹಾಡುಗಳಿಗೆ ವಸ್ತುವಾಗುತ್ತಿದ್ದವು.

ಗೊರವನ ಹಕ್ಕಿಗಳನ್ನು ಕುರಿತು ಪಕ್ಕದ ಹುಡುಗರು ತಮಾಷೆ ಮಾಡುತ್ತಾ ಕೆಣಕುವ ಹಾಡುಗಳನ್ನು ಹಾಡುತ್ತಿದ್ದರೆ, ಅಪ್ಪಯ್ಯ ಅದಕ್ಕೆ ಹೊಸ ಬಗೆಯ ಪದಗಳನ್ನು ಕಟ್ಟಿ ಹಾಡುತ್ತಿದ್ದ. ಪ್ರತಿದಿನವೂ ಶುರುವಾಗುವುದೆ ಪ್ರಕೃತಿಯ ಜೊತೆಗೆ. ಬಿರುಗಾಳಿ ಬಂದಾಗ ಬೀಳುವ ಮಾವಿನ ಹಣ್ಣುಗಳನ್ನು ಆಯ್ದುಕೊಳ್ಳುವುದರಿಂದ ಹಿಡಿದು ತರಕಾರಿ ಬಿಡಿಸುವ ವರೆಗೂ ಹಾಗೆಯೇ ನುಗ್ಗೆಮರದಿಂದ ಕಾಯಿಗಳನ್ನು ಕೀಳುವುದರಿಂದ ಹಿಡಿದು ತಾಯಿಗೆ ಮಲ್ಲಿಗೆ ಹೂವುಗಳನ್ನು ಬಿಡಿಸುವವರೆಗೂ ಎಲ್ಲವೂ ಪ್ರಕೃತಿಯೊಡನೆ ಸಹಜದ ಆಟವಾಗುತ್ತಿತ್ತು. ಆ ಆಟದೊಂದಿಗೆ ಹಾಡೂ ಬೆಸೆದುಕೊಳ್ಳುತ್ತಿತ್ತು.

ತಂದೆಗೆ ಉಪಾಧ್ಯಾಯರ ಕೆಲಸ. ಕುರುಬರಹಳ್ಳಿಯ ಶಾಲಾ ಮುಖ್ಯೋಪಾಧ್ಯಾಯ ರಾಗಿದ್ದರು. ಬಹಳ ಕಟ್ಟುನಿಟ್ಟಿನ ಮನುಷ್ಯರು. ರಜದ ಸಂದರ್ಭದಲ್ಲಿ ತಂದೆ ಊರಿನವರಿಗೆ ನಾಟಕ ಕಲಿಸುವ ಮಾಸ್ತರರೂ ಹೌದು. ಕೃಷ್ಣ ಪಾರಿಜಾತ, ಸಂಸಾರನೌಕೆ, ಬಯಲಾಟ ಇವೆಲ್ಲ ತಂದೆ ಆಡಿಸುತ್ತಿದ್ದ ಆಟಗಳು. ಅದಕ್ಕೆಲ್ಲ ಹಾಡುಗಾರಿಕೆಯೂ ಅವರದೇ, ದಿಗ್ದರ್ಶನವೂ ಅವರದೇ. ಅದಕ್ಕಿಂತ ಮುಖ್ಯವಾಗಿ ಅವರಿಗೆ ಕನ್ನಡ ಸಾಹಿತ್ಯದ ದೊಡ್ಡ ದೊಡ್ಡ ಗ್ರಂಥಗಳೆಲ್ಲ ಬಾಯಲ್ಲೇ ಇರುತ್ತಿತ್ತು. ಜೈಮಿನಿ ಭಾರತವನ್ನು ರಾಗವಾಗಿ ಹಾಡಿ, ವ್ಯಾಖ್ಯಾನ ಮಾಡುವುದರಲ್ಲಿ ಅವರು ಪರಿಣತರು. ಅದೆಷ್ಟು ಪರಿಣತಿ ಹೊಂದಿದ್ದರೆಂದರೆ, ಇಡೀ ಜೈಮಿನಿ ಭಾರತವನ್ನು ನೋಡಿಕೊಳ್ಳದೆ ಹಾಡುತ್ತಿದ್ದರು. ಅಲ್ಲದೆ ಆ ಕಾಲದ ಪ್ರಸಿದ್ಧ ಕವಿಗಳ ಕವನಗಳನ್ನು ತರಗತಿಗಳಲ್ಲಿ ಮಕ್ಕಳಿಗೆ ಹಾಡಿ ತೋರಿಸುತ್ತಿದ್ದರು. ಕಾವ್ಯವನ್ನು ಓದುವುದಕ್ಕಿಂತ ಹಾಡುವುದರಲ್ಲೇ ಅವರಿಗೆ ಆನಂದ. ಕುವೆಂಪು, ಬೇಂದ್ರೆ, ಪಂಜೆ ಮಂಗೇಶರಾಯರು, ಎಲ್.ಗುಂಡಪ್ಪ ಹಾಗೂ ರಾಜರತ್ನಂ ಅವರ ಕವನಗಳನ್ನು ಅವರು ಯಾವಾಗಲೂ ಹಾಡಿಯೇ ತೋರಿಸುತ್ತಿದ್ದರು.

ಮನೆಯಲ್ಲೊಂದು ಪುಟ್ಟ ಹಾರ್ಮೋನಿಯಂ ಇತ್ತು. ಅದು ನಾಟಕದ ತಾಲೀಮಿಗಾಗಿ. ತಂದೆ ಮಾತ್ರ ಅದನ್ನು ಬಳಸುತ್ತಿದ್ದರು. ಮಗ ಅಪ್ಪಯ್ಯ ಅದರ ಹತ್ತಿರವೂ ಸುಳಿಯಲು ಸಾಧ್ಯವಿರಲಿಲ್ಲ. ತಂದೆಗೆ ಮಾತ್ರ ಹಾರ್ಮೋನಿಯಂ ನುಡಿಸುವುದರಲ್ಲಿ ಅಪಾರ ಪಾಂಡಿತ್ಯವಿತ್ತು. ಅಪ್ಪಯ್ಯನನ್ನು ಯಾಕೆ ಅವರು ದೂರಿಟ್ಟರೆಂದರೆ, ಈ ಹಾಡು, ಸಾಹಿತ್ಯ, ಸಂಗೀತ ಇತ್ಯಾದಿಗಳ

ಬೆನ್ನು ಹತ್ತಿ ಮಗ ಹಾಳಾಗಬಾರದು, ಮಗ ದೊಡ್ಡ ವಿಜ್ಞಾನಿಯಾಗಬೇಕು ಎಂಬುದು ಅವರ ಆಸೆ. ಅದೇನು ಕಾರಣವೋ ಏನೋ ತಂದೆಗೆ ತಮ್ಮ ಮಗ ಡಾಕ್ಟರ್, ಇಂಜಿನಿಯರ್ ಎಂಬ ಬೇರಾವ ವ್ಯಾಮೋಹವೂ ಇರಲಿಲ್ಲ. ವಿಜ್ಞಾನ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿ ಬೆಳಗಬೇಕು, ಮನೆಯ ಆರ್ಥಿಕ ಸಂಕಷ್ಟಗಳು ನೀಗಬೇಕು ಎಂಬ ಅವ್ಯಕ್ತ ಆಶಯ ಅವರಲ್ಲಿತ್ತು. ಅದನ್ನು ಆಗಾಗ ಅಪ್ಪಯ್ಯನ ಎದುರು ಹೇಳುತ್ತಲೂ ಇದ್ದರು. ಆದರೆ ಮನೆಯಲ್ಲಿ, ಅಕ್ಕಪಕ್ಕದಲ್ಲಿ, ಗದ್ದೆಯ ಬದುಗಳಲ್ಲಿ, ಪ್ರಕೃತಿಯ ನಡುವಲ್ಲಿ, ಶ್ರಮಿಕರ ಹಾಡಿನ ಸ್ವರದಲ್ಲಿ ಅಪ್ಪಯ್ಯನ ಮನಸ್ಸು ಸೇರಿಹೋಗಿತ್ತು. ಅರಿವಿಲ್ಲದಂತೆಯೇ ಜಾನಪದದ ದಾರಿಯೊಂದು ಅವ್ಯಕ್ತವಾಗಿ ಮನದೊಳಗೆ ತೆರೆದುಕೊಂಡಿತ್ತು.

ಮಧುಗಿರಿಯ ಬೆಟ್ಟ ಇತಿಹಾಸ ಪ್ರಸಿದ್ಧವಾದುದು. ಹಾಗೆಯೇ ಅತ್ಯಂತ ಪ್ರಾಚೀನವಾದ ಜಾನಪದದ ಸಂಸ್ಕೃತಿಯೊಂದು ಅಲ್ಲಿ ನಿರಂತರವಾಗಿ ಧಾರೆಯಾಗಿ ಹರಿಯುತ್ತಿತ್ತು. ಪ್ರತಿ ವರ್ಷ ನಡೆಯುವ ಬೆಟ್ಟದ ಬುಡದ ದಂಡಿ ಮಾರಮ್ಮನ ಜಾತ್ರೆ ಸುತ್ತಲ ಊರುಗಳಿಗೆಲ್ಲ ಅತ್ಯಂತ ಪ್ರಸಿದ್ಧವಾದುದು. ಆ ಜಾತ್ರೆಯ ವೈಶಿಷ್ಟ್ಯವೆಂದರೆ ಅಲ್ಲಿ ಹೋರಿಗಳ ಮಾರಾಟ ನಡೆಯುತ್ತಿತ್ತು. ಅದರ ನಡುವೆಯೇ ಮರದ ದಿಮ್ಮಿಗಳನ್ನು ಒಟ್ಟು ಸೇರಿಸಿ ಬೆಂಕಿ ಹಾಕಿ ಕಿಚ್ಚು ಹಾಯಿಸುವ ಸಂಪ್ರದಾಯವೂ ನಡೆಯುತ್ತಿತ್ತು. ಸುಮಾರು ಮೂರು ನಾಲ್ಕು ಮೈಲುಗಳ ಉದ್ದ ಹೊಲ ಗದ್ದೆಗಳಲ್ಲಿ ಎಲ್ಲಿ ನೋಡಿದರೂ ಜಾನುವಾರುಗಳ ಮೇಳವೆ. ಸಿಂಗರಿಸಿ ತಂದಿದ್ದ ಎತ್ತಿನ ಬಂಡಿಗಳು, ಮಿರಿಮಿರಿ ಮಿಂಚುವ ಎತ್ತುಗಳು ಹೀಗೆ ಒಂದು ಬಗೆಯ ಜಾನಪದ ಆಚರಣೆ ಅಪ್ಪಯ್ಯನ ಮನಸ್ಸನ್ನು ಸದಾ ಆಕರ್ಷಿಸಿತ್ತು.

ಬಹುಶಃ ಗ್ರಾಮೀಣ ಪರಿಸರದ, ಒಕ್ಕಲುತನ ಮಾಡುವ, ಶ್ರಮ ಜೀವನದ ನಡುವೆ ಬೆಳೆದ ಪ್ರತಿಯೊಬ್ಬರಿಗೂ ಇಂತಹ ಒಂದು ಆಕರ್ಷಣೆ ತಪ್ಪಿದ್ದಲ್ಲ. ಕುರುಬರ ಹಳ್ಳಿಯ ಪ್ರೀತಿಯ ಅಪ್ಪಯ್ಯ ಅಂದರೆ ದೊಡ್ಡರಂಗೇಗೌಡರಿಗೂ ಈ ಆಕರ್ಷಣೆಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ತಂದೆ ಹಾಡು, ಸಾಹಿತ್ಯದಿಂದ ದೂರ ಇಟ್ಟಷ್ಟೂ ಹಾಡು ಹಕ್ಕಿಯ ಪಯಣ ಪುಟ್ಟ ಮನಸ್ಸೊಳಗೆ ಸಾಗುತ್ತಲೇ ಇತ್ತು. ಒಂದು ರೀತಿಯಲ್ಲಿ ಜಾನಪದ ಕೊಟ್ಟ ಮಹತ್ವದ ಲಯಗಾರಿಕೆ ಹಕ್ಕಿಯ ಪಯಣದ ಹಿನ್ನೆಲೆಯಲ್ಲಿ ಸ್ವರವಾಗಿ ಹೊಮ್ಮುತ್ತಿತ್ತು.

## ತುಂಬು ಕುಟುಂಬದ ನಡುವೆ

ದೊಡ್ಡರಂಗೇಗೌಡರದು ಅವಿಭಕ್ತ ಕುಟುಂಬ. ಇಡೀ ಮನೆಯಲ್ಲಿ ಹತ್ತಾರು ಜನ. ತಾತ ಕರೇರಂಗೇಗೌಡ ಊರ ಪಟೇಲರು. ಯಾವ ಕಾರಣದಿಂದಲೋ ಏನೋ ತಂದೆ ಪಟೇಲರಾಗದೆ ಮಾಸ್ತರಿಕೆಗೆ ಒಗ್ಗಿಕೊಂಡಿದ್ದರು.

ಒಟ್ಟು ಎಂಟು ಜನ ಮಕ್ಕಳು. ನಾಲ್ಕು ಗಂಡು ನಾಲ್ಕು ಹೆಣ್ಣು. ಹಿರಿಯುವರೇ ದೊಡ್ಡರಂಗೇಗೌಡರು. ತುಮಕೂರು ಜಿಲ್ಲೆಯ ಕುರುಬರ ಹಳ್ಳಿ ಬಯಲು ಸೀಮೆಯ ಎಲ್ಲ ಸಾಮಾನ್ಯ ಹಳ್ಳಿಯಂತೆ ಪುಟ್ಟ ಊರು. ಐವತ್ತು, ಅರವತ್ತು ಮನೆಗಳು. ಎಲ್ಲವೂ ರೈತರ ಮನೆಗಳೆ. ಮನೆ ಒಳಗೆ ದೊಡ್ಡರಂಗೇಗೌಡರ ಅಜ್ಜಿಯರು ಅತ್ತೆಯರು. ಅಂದರೆ, ತಂದೆಯ ಸೋದರಿಯರು. ಐವತ್ತು, ಅರವತ್ತು ಮುದ್ದೆಗಳನ್ನು ಮಾಡುತ್ತಿದ್ದ ದೃಶ್ಯ, ರೊಟ್ಟಿಯ ಗೋಪುರವನ್ನು ಪೇರಿಸುತ್ತಿದ್ದ ದೃಶ್ಯ, ಹತ್ತಾರು ಜನರಿಗೆ ಚಟ್ನಿ ಅರೆಯುತ್ತಿದ್ದ ದೃಶ್ಯವೇ ಅವರ ನೆನಪಿನ ಬುತ್ತಿಯಲ್ಲಿ ಸದಾ ಹಸಿರಾಗಿರುವ ಸಂಗತಿ. 'ನನಗೆ ಬುದ್ಧಿ ತಿಳಿದಾಗ ಕಂಡ ದೃಶ್ಯಗಳಿವು, ಹಾಗಾಗಿ ನಾನು ಯಾವತ್ತೂ ಇದನ್ನು ಮರೆಯಲು ಸಾಧ್ಯವಿಲ್ಲ' ಎನ್ನುತ್ತಾರೆ ಗೌಡರು.

ಹಿರಿಯ ಮಗನಾದುದರಿಂದ ಎಲ್ಲರಿಂದಲೂ ಅಪಾರ ಅಕ್ಕರೆ ಪಡೆದ ಗೌಡರು ಅಜ್ಜನ ಕೆಲಸವನ್ನು ಅಚ್ಚರಿಯ ಕಣ್ಣುಗಳಿಂದಲೇ ನೋಡುತ್ತಿದ್ದರು. ಕಪ್ಪಗೆ ಕುಳ್ಳಗಿದ್ದ ಅಜ್ಜ ಚಾವಡಿಯ ಮೇಲೆ ಸದಾ ಒಂದು ಪುಟ್ಟ ಟ್ರಂಕನ್ನು ಇಟ್ಟುಕೊಂಡಿರುತ್ತಿದ್ದರು. ಅದರ ತುಂಬ ಪಟೇಲಗಾರಿಕೆಗೆ ಸಂಬಂಧಪಟ್ಟ ರಸೀತಿ ಪುಸ್ತಕಗಳು. ರೈತರಿಗೆ ರಸೀತಿ ಕೊಡುವುದು, ಕಂದಾಯ ವಸೂಲಿ ಇತ್ಯಾದಿ ಕೆಲಸಗಳು ಅವರ ಪಾಲಿನವು.

ಅಜ್ಜ ಕುಳ್ಳನೆಯ ಆಸಾಮಿಯಾದರೆ ಅಪ್ಪ ಎತ್ತರದ ಆಳು. ಸದಾ ಬಿಳಿಯ ಶರ್ಟು, ಕಚ್ಚೆ ಪಂಚೆ, ಹೆಗಲಮೇಲೊಂದು ಬಿಳಿಯ ವಲ್ಲಿ. ಅವರು ಮುಖಕ್ಷೌರ ಮಾಡದೆ ಎಂದೂ ಮನೆ ಹೊರಗೆ ಕಾಲಿಟ್ಟವರಲ್ಲ. ತಮ್ಮ ನಡವಳಿಕೆಯಲ್ಲಿ ಎಷ್ಟೊಂದು ಕಟ್ಟುನಿಟ್ಟು ಪಾಲಿಸುತ್ತಿದ್ದರೋ ಉಳಿದವರೂ ಅದೇ ಕಟ್ಟುನಿಟ್ಟನ್ನು ಪಾಲಿಸಬೇಕೆಂದು ಆಶಿಸುತ್ತಿದ್ದರು. ಮೊದಲೆ ಶಾಲಾ ಮಾಸ್ತರು. ಅದರಲ್ಲೂ ವಿದ್ಯೆ ಕಲಿಸುವುದರಲ್ಲಿ ಎತ್ತಿದ ಕೈ. ಸಾಹಿತ್ಯ, ಸಂಗೀತವನ್ನು ಆಳವಾಗಿ ತಿಳಿದವರು. ಹೀಗಾಗಿ ಅವರ ಕೈಯಲ್ಲಿ ಕಲಿತ ವಿದ್ಯಾರ್ಥಿಗಳೆಲ್ಲರೂ ಅವರ ಶಿಸ್ತಿನ ಕಟ್ಟುಪಾಡಿಗೆ ಒಳಗಾಗಲೇಬೇಕಿತ್ತು. ಮಗನಾದರೂ ಸರಿ, ಬೇರೆಯ ಹುಡುಗರಾದರೂ ಸರಿ. ಶಿಸ್ತಿನ ವಿಚಾರದಲ್ಲಿ ಯಾವತ್ತೂ ಭೇದ ಭಾವ ಇರಲಿಲ್ಲ. ಶಿಕ್ಷೆಯ ವಿಚಾರದಲ್ಲೂ ಅಷ್ಟೆ. ತಪ್ಪಿಗೆ ತಕ್ಕುದಾದ ಶಿಕ್ಷೆ ಎಲ್ಲರಿಗೂ ದಕ್ಕುತ್ತಿತ್ತು. ಕೊನೆಗೆ ಅಕ್ಷರಗಳನ್ನು ದುಂಡಗೆ ಬರೆಯುವವರೆಗೂ ಅವರ ಕಟ್ಟುನಿಟ್ಟು ತಪ್ಪುತ್ತಿರಲಿಲ್ಲ. ಪೆನ್ನು ಹಿಡಿಯುವುದರಿಂದ ಹಿಡಿದು ಅಕ್ಷರ ಬರೆಯುವವರೆಗೆ ಒಂದು ಬಗೆಯ ನಿಯಮವನ್ನೇ ಜಾರಿ ಮಾಡಿದ್ದರು.

ಹೀಗೆ ಅವಿಭಕ್ತ ಕುಟುಂಬದ ಕಟ್ಟುನಿಟ್ಟಿನ ಪರಿಸರ ಗೌಡರ ಬಾಲ್ಯದ್ದು. ಆದರೆ ಅದು ಎಂದೂ ಸಂಕೋಲೆ ಎನಿಸಲಿಲ್ಲ. ಅಥವಾ ತಮ್ಮ ಬೆಳವಣಿಗೆಗೆ ವಿರುದ್ಧವಾಗಿದೆ ಎಂದು, ಅದರ ವಿರುದ್ಧ ಬಂಡೇಳಬೇಕು ಎಂದು ಗೌಡರಿಗೆ ಅನಿಸಲಿಲ್ಲ. ಇವತ್ತಿಗೂ ಆ ಶಿಸ್ತು ತಮ್ಮ ಜೀವನವನ್ನು ರೂಪಿಸಲು ಎಷ್ಟರಮಟ್ಟಿಗೆ ಸಹಾಯಕವಾಗಿದೆ ಎಂದು ಅತ್ಯಂತ ಪ್ರಾಮಾಣಿಕವಾಗಿ ಗೌಡರು ನೆನೆಯುತ್ತಾರೆ.

ತಂದೆ ಎಷ್ಟೇ ಕಟ್ಟುನಿಟ್ಟಿನವರಾಗಿದ್ದರೂ ಮಗನ ಬಗ್ಗೆ ಅತ್ಯಂತ ಪ್ರೀತಿ ಹೊಂದಿದ್ದರು. ಕುರುಬರ ಹಳ್ಳಿಯಲ್ಲಿ ನಾಲ್ಕನೆ ತರಗತಿ ಮುಗಿಸಿ ಐದನೆ ತರಗತಿ ಓದಲು ಮೂರ್‍ನಾಲ್ಕು ಕಿಲೋ ಮೀಟರ್ ದೂರದ ಬಡವನಹಳ್ಳಿಗೆ ಹೋಗಬೇಕಾಗಿ ಬಂದಾಗ ತಂದೆ ತಮ್ಮ ಕೆಲಸವನ್ನು ಬಡವನಹಳ್ಳಿಗೆ ವರ್ಗಾಯಿಸಿಕೊಂಡರು. ಒಂದು ಸೈಕಲ್ಲು ಕೊಂಡುಕೊಂಡು ಮಗನನ್ನೂ ಕೂರಿಸಿಕೊಂಡು ಕರೆದುಕೊಂಡು ಹೋಗುತ್ತಿದ್ದರು. ಯಾಕೆಂದರೆ ಅಷ್ಟು ದೂರ ನಡೆಯಬೇಕು, ಜಯಮಂಗಲಿ ನದಿ ದಾಟಬೇಕು ಇವೆಲ್ಲ ಮಗನಿಗೆ ತುಂಬ ಕಷ್ಟ ಎಂದು ಯಾರ್‍ಯಾರನ್ನೋ ಹಿಡಿದು ವರ್ಗಾ ಮಾಡಿಸಿಕೊಂಡಿದ್ದರು. ಇಲ್ಲಿ ಮುಖ್ಯೋಪಾಧ್ಯಾಯರಾಗಿದ್ದವರು ಅಲ್ಲಿ ಬಡವನಹಳ್ಳಿಯಲ್ಲಿ ಕೇವಲ ಅಧ್ಯಾಪಕರಾದರೂ ಅದರ ಬಗ್ಗೆ ಯೋಚಿಸಲಿಲ್ಲ.

ಕುರುಬರಹಳ್ಳಿಯ ಇನ್ನೊಂದು ಸಂಗತಿ ಇದೆ. ದೊಡ್ಡ ಮನೆಯಲ್ಲಿ ಒಂದು ದೊಡ್ಡ ತೇಗದ ಮರದ ಪೆಟ್ಟಿಗೆ ಇತ್ತು. ಆ ಪೆಟ್ಟಿಗೆಯ ತುಂಬ ಪುಸ್ತಕಗಳು. ಅದನ್ನು ತರಿಸುತ್ತಿದ್ದವರು ಅಜ್ಜ. ಆದರೆ ಅವರು ಓದುತ್ತಿದ್ದರೋ ಇಲ್ಲವೋ ದಂಡಿಯಾಗಿ ಪುಸ್ತಕಗಳಂತೂ ಇದ್ದವು. ಗ್ರಾಮಾಭ್ಯುದಯ, ಭಗವದ್ಗೀತೆಯ ಸಾರ, ಸದ್ಬೋಧ ಚಂದ್ರಿಕೆ ಅಲ್ಲದೆ ಆ ಕಾಲದ ಪ್ರಸಿದ್ಧ ನಿಯತಕಾಲಿಕಗಳಾದ ಜಯಂತಿ, ಮಾಸ್ತಿಯವರ ಜೀವನ ಪತ್ರಿಕೆಗಳು ಇದ್ದವು.

'ಬಹುಶಃ ಈ ಪತ್ರಿಕೆಗಳನ್ನು ಹಾಗೂ ಪುಸ್ತಕಗಳನ್ನು ತರಿಸುವುದು ಅಜ್ಜನಿಗೆ ಪ್ರತಿಷ್ಠೆಯ ಸಂಗತಿಯಾಗಿದ್ದರೂ ಇರಬಹುದು. ಅವರಿಗೆ ಶಾನುಭೋಗರಾದ ಕೃಷ್ಣಪ್ಪನವರ ಪ್ರಭಾವ ಅಪಾರವಾಗಿತ್ತು. ಸಾಮಾನ್ಯವಾಗಿ ಆ ಕಾಲದಲ್ಲಿ ಒಕ್ಕಲಿಗರು ಬ್ರಾಹ್ಮಣರ ಸಂಸ್ಕೃತಿಯನ್ನು ಪಾಲಿಸುವುದು ಒಂದು ಪ್ರತಿಷ್ಠೆಯ ಕ್ರಮವೇ ಆಗಿತ್ತು. ಹಾಗಾಗಿ ಕೃಷ್ಣಪ್ಪನವರ ಕಾರಣದಿಂದಾಗಿ ಮನೆಗೆ ಈ ಎಲ್ಲಾ ಪತ್ರಿಕೆಗಳು ಬರುತ್ತಿದ್ದವು ಎಂದು ನನಗನ್ನಿಸುತ್ತದೆ. ಅದೇನೆ ಆಗಲಿ ಆ ಪುಸ್ತಕಗಳಿಂದ ನನಗೆ ಅಪಾರ ಲಾಭವಾಯಿತು. ನಾನು ಆ ಕಾಲದಲ್ಲೇ ಅರ್ಥವಾಗದಿದ್ದರೂ ಅವುಗಳನ್ನು ಓದುವ ಪರಿಪಾಠ ಬೆಳೆಸಿಕೊಂಡೆ' ಎನ್ನುತ್ತಾರೆ ಗೌಡರು.

## ಗುರು ಪರಂಪರೆ

'ನಿಜವಾಗಿ ಹೇಳಬೇಕೆಂದರೆ ನನಗೆ ಮೊದಲ ಗುರು ನನ್ನ ತಂದೆ. ಅವರು ಕಲಿಸಿದ ಪಾಠ ಇಂದಿಗೂ ಮರೆಯಲು ಸಾಧ್ಯವಿಲ್ಲ. ಕಾಗುಣಿತವಿರಲಿ, ಮಗ್ಗಿಯಿರಲಿ ಅವೆಲ್ಲ ಅಚ್ಚುಕಟ್ಟಾಗಿ ಬಾಯಿಗೆ ಹಳೆಯ ಬರುತ್ತಿರಬೇಕು. ಅವರೊಬ್ಬ ಅಸಾಮಾನ್ಯ ಕನ್ನಡಪ್ರೇಮಿ. ಎಲ್ಲ ಬಗೆಯ ಸಾಹಿತ್ಯವನ್ನು ತಿಳಿದುಕೊಂಡಿದ್ದವರು. ನನ್ನ ಅಕ್ಷರಗಳು ಇವತ್ತೇನಾದರೂ ದುಂಡಗಿದ್ದರೆ ಅದಕ್ಕೆ ಅವರೇ ಕಾರಣ' ಎನ್ನುವುದು ಗೌಡರ ಪ್ರಾಮಾಣಿಕ ನಂಬಿಕೆ.

ಮಾಧ್ಯಮಿಕ ಶಾಲೆಗೆ ಬಂದಾಗ ಅವರೆದುರು ಅತಿ ನಿಷ್ಣಾತರಾದ ಗುರುಗಳ ಸಂಗವೇ ಸಿಕ್ಕಂತಾಯಿತು. ವ್ಯಾಕರಣವನ್ನು ಅತ್ಯಂತ ಸುಲಲಿತವಾಗಿ ಹೇಳಿಕೊಡುತ್ತಿದ್ದ ರಂಗಸ್ವಾಮಯ್ಯ

ಅವರು, ಅವರೊಂದಿಗೆ ರಂಗಯ್ಯನವರು, ಕಾಟಪ್ಪ, ಕಂಬದ ರಂಗಯ್ಯ ಎಂಬ ಮಾಸ್ತರುಗಳು ಗೌಡರನ್ನು ಅಪಾರವಾಗಿ ಪ್ರಭಾವಿಸಿದ್ದಾರೆ. ಇವತ್ತಿಗೂ ಅವರು ಹಾಕಿಕೊಟ್ಟ ಮಾರ್ಗದರ್ಶನ ಗೌಡರಿಗೆ ಮರೆಯಲು ಸಾಧ್ಯವಾಗಲೇ ಇಲ್ಲ. ಬಹುಶಃ ಬಡವನಹಳ್ಳಿಯ ಮಾಧ್ಯಮಿಕ ಶಾಲೆಯ ಶಿಕ್ಷಕರು ನೀಡಿದ ಶಿಕ್ಷಣ ಗೌಡರ ಜೀವನದಲ್ಲಿ ಆರಂಭದ ವೇದಿಕೆಯಾಗಿ ಮಾರ್ಪಟ್ಟಿತು.

ಮಾಧ್ಯಮಿಕ ಶಾಲೆ ಮುಗಿಸಿ ಮುಂದೆ ಗೌಡರು ಬಂದಿದ್ದು ಮಧುಗಿರಿಯ ಪ್ರೌಢಶಾಲೆಗೆ. ಮಧುಗಿರಿಯ ಪ್ರೌಢಶಾಲೆ ಅವರ ಬೌದ್ಧಿಕ ವಿಕಾಸಕ್ಕೆ ಮೂಲ ಕಾರಣವಾಯಿತು ಎಂಬುದ ರಲ್ಲಿ ಎರಡು ಮಾತಿಲ್ಲ. ಮಧುಗಿರಿಯಲ್ಲಿ ಮಗ ಒಬ್ಬನೆ ಇರಬೇಕಾಗುತ್ತದೆ ಎಂದು ತಂದೆ ಮತ್ತೆ ಇಲ್ಲಿಗೂ ವರ್ಗಾ ಮಾಡಿಸಿಕೊಂಡರು. ಮಧುಗಿರಿಯ ಗುರು ಪರಂಪರೆ ಬಲು ದೊಡ್ಡದು. ಅಲ್ಲಿ ಅವರ ಆಪ್ತ ಗೆಳೆಯರ ಬಳಗವೆಂದರೆ (ಇನ್ಫೋಸಿಸ್ ಸಂಸ್ಥೆಯ) ಎನ್.ಆರ್. ನಾರಾಯಣ ಮೂರ್ತಿ ಹಾಗೂ ಈಗ ಯಲಹಂಕದಲ್ಲಿರುವ ಬಿಎಂಎಸ್ ಇಂಜಿನಿಯರಿಂಗ್ ಕಾಲೇಜಿನ ಪ್ರಾಂಶುಪಾಲರಾದ ಎಂ.ಎಲ್. ನರಸಿಂಹಮೂರ್ತಿ.

ನಾರಾಯಣಮೂರ್ತಿಯವರ ತಂದೆ ರಾಮರಾಯರು ಮೈಸೂರಿನವರು. ಅವರು ಮಧುಗಿರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು. ನರಸಿಂಹಮೂರ್ತಿಗಳ ತಂದೆ ದೊಡ್ಡ ವಕೀಲರು. ರಾಮರಾಯರು ಅತ್ಯಂತ ಕಟ್ಟುನಿಟ್ಟಿನ ಹಾಗೂ ಶಿಸ್ತಿನ ವಸ್ತ್ರ ತೊಡುವುದರಲ್ಲಿ ಹೆಸರುವಾಸಿ. ಸದಾ ಕೋಟು, ಬೋಟ್ಯೆ, ಹ್ಯಾಟು ಹಾಕಿಕೊಂಡು ಬರುತ್ತಿದ್ದವರು.

ಆದರೆ ಈ ಮೂವರು ಗೆಳೆಯರಿಗೆ ಬೇರಾವ ತಾರತಮ್ಯವೂ ಬಂದಿರಲಿಲ್ಲ. ಮೂವರೂ ಓದಿನಲ್ಲಿ ಪ್ರಥಮರಾಗಿ ಬರುತ್ತಿದ್ದುದರಿಂದ ಅವರವರಲ್ಲಿ ಒಂದು ಸ್ಪರ್ಧೆಯಂತೂ ಇದ್ದೇ ಇತ್ತು. ಒಮ್ಮೆ ಒಬ್ಬರು ಪ್ರಥಮ ಸ್ಥಾನ ಪಡೆದರೆ, ಇನ್ನೊಮ್ಮೆ ಅದು ಇನ್ನೊಬ್ಬರ ಪಾಲಾಗುತ್ತಿತ್ತು. ಆದರೂ ಮೂವರೂ ಒಟ್ಟಾಗಿ ಓದುತ್ತಾ ಹೊಸ ಹೊಸ ವಿಚಾರಗಳನ್ನು ಚರ್ಚಿಸುತ್ತಿದ್ದರು. ನಾರಾಯಣಮೂರ್ತಿಗೆ ಆಗಲೇ ಕ್ರಿಕೆಟ್ ಬಗ್ಗೆ ಅತ್ಯಂತ ವ್ಯಾಮೋಹ. ಗೆಳೆಯರಿಗೆಲ್ಲ ಕ್ರಿಕೆಟ್ ಕಲಿಸಿದ್ದೇ ನಾರಾಯಣಮೂರ್ತಿ!

ಈ ಶಾಲೆಯಲ್ಲಿ ಇದ್ದ ಇನ್ನೊಬ್ಬ ಮಾಸ್ತರರೆಂದರೆ ಕವಿಗಳಾದ ಎ.ಆರ್.ರಾಮಚಂದ್ರರಾಯರು. ದೊಡ್ಡರಂಗೇಗೌಡರ ಕಾವ್ಯದ ತುಡಿತವನ್ನು ಹೊರತೆಗೆದವರೆ ಈ ರಾಮಚಂದ್ರರಾಯರು. ಯಾವುದೇ ಸಭೆಯಾಗಲಿ, ಸ್ವಾತಂತ್ರ್ಯೋತ್ಸವವಾಗಲಿ ಗೌಡರನ್ನು ಕರೆಸಿ ಅವರಿಂದ ಹಾಡಿಸುತ್ತಿದ್ದರು. ಆ ಸಮಯದಲ್ಲಿ ಪದಗಳನ್ನು ಕೊಟ್ಟು ವಾಕ್ಯ ರಚನೆ ಮಾಡಿಸಿ ಕತೆ ಕಟ್ಟುವ ಕಲೆಯನ್ನು ರಾಮಚಂದ್ರರಾಯರು ಹೇಳಿಕೊಡುತ್ತಿದ್ದರು. ದೊಡ್ಡರಂಗೇಗೌಡರು ಆ ಕೆಲಸ ಮುಗಿಸಿ ಅದಕ್ಕೆ ತಕ್ಕಂತೆ ಪದ್ಯ ರೂಪದಲ್ಲಿ ಕೊಡುತ್ತಿದ್ದ ವಿವರಗಳು ರಾಯರನ್ನು ತುಂಬ

ಸಂತಸಪಡಿಸುತ್ತಿದ್ದವು. ಹಾಗಾಗಿ ಎಲ್ಲ ಸಂದರ್ಭದಲ್ಲೂ ರಾಯರು ಗೌಡರನ್ನು ಪದ್ಯ ಓದಲು ಕರೆಯುತ್ತಿದ್ದರು.

ಹೈಸ್ಕೂಲು ಮುಗಿಸಿ ತುಮಕೂರಿಗೆ ಕಾಲೇಜಿಗೆ ಸೇರಿದಾಗ ಗೌಡರ ಕಲ್ಪನೆಗಳಿಗೆಲ್ಲ ರೆಕ್ಕೆ ಮೂಡಹತ್ತಿದ್ದವು. ಆ ದೊಡ್ಡ ಕಾಲೇಜಿನಲ್ಲಿ ಗೌಡರಿಗೆ ಮನಸ್ಸಿನ ಆಸೆ ತೀರುವಷ್ಟು ತಿಳಿದುಕೊಳ್ಳುವ ವಿಚಾರಗಳು ದೊರೆಯಹತ್ತಿದವು. ಅಲ್ಲಿ ಇವರನ್ನು ಪ್ರಭಾವಿಸಿದ ಗುರುಗಳು ಐವರು–ಸಾಹಿತ್ಯಲೋಕದಲ್ಲಿ ಪ್ರಸಿದ್ಧರಾಗಿರುವ ಎಚ್.ಜಿ.ಸಣ್ಣಗುಡ್ಡಯ್ಯ, ಜಿ.ಎಸ್.ಸಿದ್ಧಲಿಂಗಯ್ಯ, ಕಾಶಿ ವಿಶ್ವನಾಥಶೆಟ್ಟಿ ಹಾಗೂ ಎ.ಪುಟ್ಟಮಾದಪ್ಪ, ಸಂಪತ್ ಅಯ್ಯಂಗಾರ್.

ಎಚ್.ಜಿ.ಸಣ್ಣಗುಡ್ಡಯ್ಯ ಬರೀ ಶಿಕ್ಷಕರು ಮಾತ್ರವಾಗಿರಲಿಲ್ಲ. ಇವರ ಎಲ್ಲ ಬಗೆಯ ಓದಿಗೆ ಪ್ರೇರಕಶಕ್ತಿಯಾಗಿ ನಿಂತಿದ್ದರು. ಅದಾಗಲೇ ಎಡಪಂಥೀಯ ಧೋರಣೆ, ಶೋಷಿತ ವರ್ಗಗಳ ಪರ ಧ್ವನಿ ಎತ್ತುವುದು ಇತ್ಯಾದಿಯಾಗಿ ತಮ್ಮನ್ನು ತಾವೇ ನಿರೂಪಿಸಿಕೊಂಡಿದ್ದ ಸಣ್ಣಗುಡ್ಡಯ್ಯ ತಮ್ಮ ಜೀವನವನ್ನು ಅದಕ್ಕೆ ಸರಿಯಾಗಿ ಅಳವಡಿಸಿಕೊಂಡಿದ್ದರು. ಅವರದು ನಿಷ್ಠುರ ಧೋರಣೆ. ಯಾವತ್ತೂ ಭಾವುಕತೆಗೆ ಅವಕಾಶವಿಲ್ಲ.

ಆದರೆ ಸಿದ್ಧಲಿಂಗಯ್ಯನವರದು ಅವರಿಗಿಂತ ಭಿನ್ನ ವ್ಯಕ್ತಿತ್ವ. ಅತ್ಯಂತ ಭಾವುಕರಾದ ಸಿದ್ಧಲಿಂಗಯ್ಯ ನವೋದಯ ಕಾವ್ಯಗಳಲ್ಲಿ ಭಾಷೆಯ ಬೆಡಗನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಿಂದ ನಿರೂಪಿಸುತ್ತಿದ್ದರು. ಅವರ ಪಾಠವೆಂದರೆ ಅದೊಂದು ಭಾವಗೀತಾತ್ಮಕ ಭಾಷೆಯ ವೈಭವ. ಆದರೆ ಕಾಶಿ ವಿಶ್ವನಾಥಶೆಟ್ಟರದೆ ಇನ್ನೊಂದು ಬಗೆ. ಅವರನ್ನು ನವೋದಯದ ಇನ್ನೊಂದು ರೂಪವೆಂದರೂ ಉತ್ಪ್ರೇಕ್ಷೆಯಾಗಲಾರದು.

ಪುಟ್ಟಮಾದಪ್ಪ ಗೌಡರ ಇಂಗ್ಲಿಷ್ ಮಾಸ್ತರು. ಆಧುನಿಕ ಇಂಗ್ಲಿಷ್ ಕಲಿಸುತ್ತಿದ್ದ ಅವರು ಆ ಕಾಲದ ಸಮಕಾಲೀನ ಸಾಹಿತ್ಯವನ್ನು ಬೋಧಿಸುತ್ತಿದ್ದರು. ಹಲವು ಇಂಗ್ಲಿಷ್ ಕವಿಗಳ ಕಾವ್ಯಗಳು ಪುಟ್ಟಮಾದಪ್ಪನವರು ಬೋಧಿಸಿದ ಫಲವಾಗಿ ಇವತ್ತಿಗೂ ಗೌಡರ ನೆನಪಲ್ಲಿ ಉಳಿದಿವೆ. ಹಾಗೆಯೇ ಇಂಗ್ಲಿಷ್ ವ್ಯಾಕರಣ, ಭಾಷೆ ಬಳಸುವ ಕ್ರಮ ಇತ್ಯಾದಿಗಳೆಲ್ಲ ಅವರಿಂದಲೇ ಕಲಿತದ್ದು. ರೊಮ್ಯಾಂಟಿಕ್ ಕಾವ್ಯ ಭೋಧಿಸಿದವರು ಸಂಪತ್ ಐಯ್ಯಂಗಾರರು.

ಇನ್ನು ಆನರ್ಸ್‌ನಲ್ಲಿ ಇವರನ್ನು ಪ್ರಭಾವಿಸಿದವರೆಂದರೆ ಜಿ.ಪಿ.ರಾಜರತ್ನಂ. ಎಂ.ಎ. ಓದುವಾಗ ಇನ್ನೂ ಹಲವರು. ಅಂದರೆ, ನವೋದಯದ ಜೊತೆ ಆಧುನಿಕ ಸಾಹಿತ್ಯವನ್ನು ಬೋಧಿಸಿದ ಜಿ.ಎಸ್.ಶಿವರುದ್ರಪ್ಪ, ರಂಗಭೂಮಿಯ ಪ್ರಜ್ಞೆ ಬೆಳೆಸಿದ ಕೆ.ಮರುಳಸಿದ್ದಪ್ಪ, ಭಾಷಾಶಾಸ್ತ್ರವನ್ನು ಬೇರು ಬಿಡುವಂತೆ ಬೋಧಿಸಿದ ಹಂಪಾ ನಾಗರಾಜಯ್ಯ, ಡಾ.ಎಂ.ಚಿದಾನಂದಮೂರ್ತಿ, ನವ್ಯ ಕಾವ್ಯವನ್ನು ಜೀವದನಿಯಂತೆ ಹೇಳಿಕೊಟ್ಟ ಕಿ.ರಂ.ನಾಗರಾಜ್, ಜಾನಪದದ ಸೊಗಡನ್ನು

ಅದರ ಎಲ್ಲ ಅಂದದೊಂದಿಗೆ ತಿಳಿಸಿದ ಚಂದ್ರಶೇಖರ ಕಂಬಾರ, ಭಾವಗೀತೆಗೆ ಲಾಲಿತ್ಯದ ಸೊಗಸನ್ನು ತುಂಬಿ ಅದರ ಅಗತ್ಯವನ್ನು ಹೇಳಿದ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ... ಇದೆ ಲ್ಲಕ್ಕೂ ಕಳಶವಿಟ್ಟಂತೆ ಕನ್ನಡ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಕಲಿಯುವುದನ್ನು ಹೇಳಿಕೊಟ್ಟ ಪ್ರೊಫೆಸರ್ ರಂ.ಶ್ರೀ.ಮುಗಳಿಯವರು. ವ್ಯಾಕರಣ ಶಬ್ದ ದರ್ಪಣ ಹೇಳಿಕೊಟ್ಟವರು ಎಸ್.ಆರ್. ಮಳಗಿಯವರು.

ಇಂತಹ ಬೃಹತ್ ಗುರು ಪರಂಪರೆಯೊಂದಿಗೆ ಬೆಳೆದುಬಂದ ದೊರಂಗೌ ಅವರ ಸಾಹಿತ್ಯ ನೆಲದಾಳದಲ್ಲಿ ಬೇರುಬಿಟ್ಟು ಆಗಸದ ಚುಕ್ಕಿಯವರೆಗೆ ಕೊಂಬೆಗಳನ್ನು ಚಾಚಿದ್ದು ಅಚ್ಚರಿಯ ಸಂಗತಿಯೇನಲ್ಲ.

## ಕನ್ನಡ ಎನೆ... ತುಮಕೂರು

ಹಳ್ಳಿಯ ಪರಿಸರ, ಪ್ರಕೃತಿಯೊಂದಿಗಿನ ಒಡನಾಟ, ಸಾಹಿತ್ಯದ ಅಭಿರುಚಿಯನ್ನೇ ಧಾರೆ ಎರೆದ ಗುರುವೃಂದ... ಇವೆಲ್ಲದರ ಜೊತೆಗೆ ಕಾಲೇಜಿಗೆ ತುಮಕೂರಿಗೆ ಬಂದ ದೊಡ್ಡರಂಗೇಗೌಡರಿಗೆ ಇಲ್ಲೊಂದು ವಿಸ್ಮಯದ ಲೋಕವೇ ತೆರೆದುಕೊಂಡಿತ್ತು. ಬೆಂಗಳೂರಿಗೆ ಹತ್ತಿರದ ಪಟ್ಟಣವಾದ ತುಮಕೂರಿಗೆ ರಾಜಧಾನಿಯ ಎಲ್ಲ ಪ್ರಭಾವಗಳೂ ಬೀರುವುದು ಸ್ವಾಭಾವಿಕ. ಇಲ್ಲಿನ ಚಳುವಳಿ, ಸಾಂಸ್ಕೃತಿಕ ಚಟುವಟಿಕೆಗಳು ತುಮಕೂರನ್ನು ವ್ಯಾಪಿಸುವುದು ಅಚ್ಚರಿಯೇನಲ್ಲ. ಅದರಲ್ಲೂ ಕನ್ನಡ ಪರ ಹೋರಾಟಗಳಂತೂ ಮರುಕ್ಷಣದಲ್ಲೇ ತುಮಕೂರಿನಲ್ಲಿ ಪ್ರತಿಧ್ವನಿಸುತ್ತಿದ್ದವು.

ಮಾಸ್ಟರ್ ಹಿರಣ್ಣಯ್ಯ ಅವರ ನಾಟಕಗಳು, ಕಾಳಿಂಗರಾಯರ ಹಾಡುಗಾರಿಕೆಯ ಕಾರ್ಯಕ್ರಮ, ಅನಕೃ ಅವರ ಭಾಷಣದ ವಾಗ್ಝರಿ ಇವೆಲ್ಲವನ್ನು ಗೌಡರು ಕಣ್ಣಾರೆ ಕಂಡದ್ದು ಆಸಕ್ತಿಯಿಂದ ಕೇಳಿದ್ದು ತುಮಕೂರಿನಲ್ಲಿ. ಅದಲ್ಲದೆ ಕನ್ನಡ ಸಾಹಿತ್ಯದ ದಿಗ್ಗಜರನ್ನು ಕಂಡದ್ದು ಇದೇ ತುಮಕೂರಿನಲ್ಲಿ.

ಅದಾಗ ಕನ್ನಡ ಚಳುವಳಿಯ ಉತ್ತುಂಗದ ಕಾಲ. ನಮ್ಮ ಭಾಷೆ, ಸಂಸ್ಕೃತಿ ಉಳಿಯಬೇಕೆಂದು ಬಹುದೊಡ್ಡ ಚಳುವಳಿಯೇ ಆರಂಭವಾಗಿತ್ತು. ಅನಕೃ, ಮ.ನ.ರಾಮ ಮೂರ್ತಿ ಮುಂತಾದವರ ನೇತೃತ್ವದಲ್ಲಿ ಕನ್ನಡದ ಉಳಿವಿಗಾಗಿ ಹೋರಾಟವೇ ಆರಂಭವಾಗಿತ್ತು. ಆಗತಾನೆ ಡಬ್ಬಿಂಗ್ ಚಿತ್ರಗಳ ವಿರುದ್ಧವಾಗಿ ಈ ನಾಯಕರುಗಳು ಬಹುದೊಡ್ಡ ಪ್ರತಿಭಟನೆಯನ್ನು ಹಮ್ಮಿಕೊಂಡಿದ್ದರು. ಅದರ ಸಲುವಾಗಿ ತುಮಕೂರಿಗೆ ಆಗಮಿಸಿದ್ದ ಬೃಹತ್ ಸಭೆಯನ್ನುದ್ದೇಶಿಸಿ ಎರಡು ಗಂಟೆಗಳ ಕಾಲ ನಿರರ್ಗಳವಾಗಿ ಮಾತನಾಡಿದ್ದರು. ಭಾಷಣ ಮಾಡಿದರೆ, ಅನಕೃ ತರಹ ಮಾಡಬೇಕು ಎಂದು ದೊರಂಗೌ ಅವರಿಗೆ ಅನಿಸಿದ್ದೇ ಆಗ. ಅವರ ಭಾಷಣ ಕನ್ನಡ ಚಳುವಳಿ ಇವೆಲ್ಲ ದೊರಂಗೌ ಬದುಕಿನಲ್ಲೂ ರೋಮಾಂಚನ ಮೂಡಿಸಿದ್ದು ಮಾತ್ರವಲ್ಲ, ಕನ್ನಡ ಪರ ನಿಲ್ಲಲು ಬಹುದೊಡ್ಡ ಬುನಾದಿ ಹಾಕಿದ್ದವು.

ಕನ್ನಡ ಚಿತ್ರರಂಗದ ಉಳಿವಿಗಾಗಿ ಹಾಗೂ ಕನ್ನಡದ ರಕ್ಷಣೆಗಾಗಿ ಅನಕೃ ಹಾಕಿಕೊಟ್ಟ ದಾರಿ ದೊರಂಗೌ ಅವರ ಪಾಲಿಗೆ ಹೆದ್ದಾರಿಯೇ ಆಯಿತು. ಅಂದಿನಿಂದ ಕನ್ನಡ ಚಿತ್ರ ಬಿಡುಗಡೆಯಾದ ಕೂಡಲೆ ಮೊದಲ ದಿನದ ಮೊದಲ ಪ್ರದರ್ಶನ ನೋಡುವುದು ಕಟ್ಟುನಿಟ್ಟಿನ ಪರಿಪಾಠವಾಯಿತು. ಆ ಕಾಲದಲ್ಲಿ ಬರುತ್ತಿದ್ದ ಕಾದಂಬರಿ ಆಧಾರಿತ ಚಿತ್ರಗಳು ಹಾಗೂ ಕನ್ನಡದ ಕವಿಗಳ ಹಾಡುಗಳನ್ನು ಬಳಸಿಕೊಂಡ ಚಿತ್ರಗಳು ಬಂದಾಗ ಸ್ವಾಭಾವಿಕವಾಗಿಯೇ ಕನ್ನಡದ ಬಗ್ಗೆ ಅಪಾರ ಪ್ರೀತಿ ಉಕ್ಕುತ್ತಿತ್ತು. ಗೌರಿ ಎಂಬ ಚಿತ್ರದಲ್ಲಿ ಐದೂ ಹಾಡುಗಳನ್ನು ಕವಿಗಳ ಕವಿತೆಗಳಿಂದ ಆಯ್ದುಕೊಂಡದ್ದು ಎಂದು ತಿಳಿದಾಗ ಅದೊಂದು ಬಗೆಯ ಸಾರ್ಥಕತೆಯ ಭಾವ ಮೂಡುತ್ತಿತ್ತು. ಕುವೆಂಪು, ಕೆಎಸ್‌ನ, ಬೇಂದ್ರೆ ಮುಂತಾದವರೆಲ್ಲ ಗೌಡರ ಮೇಲೆ ಇನ್ನೊಂದು ಬಗೆಯಲ್ಲಿ ಪ್ರಭಾವ ಬೀರಿದ್ದು ಹೀಗೆ. ಹಾಗೆಯೇ ಚಿತ್ರಗಳಿಗೆ ಗೀತೆಗಳನ್ನು ಬರೆಯಬಹುದಾದ ಸಾಧ್ಯತೆಗಳು ಅಲ್ಲೆ ಮೊಳಕೆ ಒಡೆದಿರಬಹುದು. ಅವರು "ಅನುಭವ" ಹೆಸರಿನ ಕಾದಂಬರಿ ಬರೆದದ್ದೂ ಆಗಲೇ!

ಅದೇ ಸಂದರ್ಭದಲ್ಲಿ ತುಮಕೂರಿನಲ್ಲಿ ಕಾಳಿಂಗರಾಯರ ಸಂಗೀತ ಸಂಜೆಯೂ ನಡೆದಿತ್ತು. ಜಾನಪದ ಹಾಡುಗಳು, ಕವಿಗಳ ಕವಿತೆಗಳು ಆ ಗಾಯಕನ ಕಂಠದಿಂದ ಹೊರಹೊಮ್ಮುತ್ತಿದ್ದ ಬಗೆ ಎಂಥವರನ್ನೂ ಮೈ ನವಿರೇಳಿಸುತ್ತಿತ್ತು. ಅದೇ ರೀತಿ ಒಮ್ಮೆ ವಿಜಯಭಾಸ್ಕರ್ ಅವರ ಸಂಗೀತ ಸಂಜೆಯೂ ಏರ್ಪಾಟಾಗಿತ್ತು. ಸಾವಿರಾರು ಜನರಲ್ಲಿ ಒಬ್ಬರಾಗಿ ದೊರಂಗೌ ಆ ರಸ ಸಂಜೆಯನ್ನು ಅನುಭವಿಸಿದ್ದರು.

ಅದೇ ರೀತಿ ಮಾಸ್ಟರ್ ಹಿರಣ್ಣಯ್ಯನವರ ನಾಟಕ. ನಾಟಕವೊಂದನ್ನು ಹೀಗೂ ಮಾಡಬಹುದು, ಅದೊಂದು ಅಭಿನಯದ ಕಲೆ ಮಾತ್ರವೇ ಅಲ್ಲ ಎಂಬುದು ದೊರಂಗೌ ಅವರಿಗೆ ಅತ್ಯಂತ ಪ್ರಭಾವಪೂರ್ಣವಾಗಿ ಮನವರಿಕೆ ಮಾಡಿದ್ದು ಹಿರಣ್ಣಯ್ಯನವರ ನಾಟಕಗಳಾದ ಲಂಚಾವತಾರ, ಭ್ರಷ್ಟಾಚಾರ ಇತ್ಯಾದಿಗಳು. ಮಹಾ ವಾಚಾಳಿ ಹಿರಣ್ಣಯ್ಯನ ವರು ಒಂದು ದಿನದಂತೆ ಇನ್ನೊಂದು ದಿನ ಸಂಭಾಷಣೆ ಹೇಳುತ್ತಿರಲಿಲ್ಲ. ಆದರೆ ನಾಟಕದ ಯಾವ ಪ್ರದರ್ಶನವೂ ರಂಜನೆಯಿಂದ ಹೊರತಾಗಿರಲಿಲ್ಲ. ಕನ್ನಡ ಭಾಷೆಯನ್ನು ಬಳಸುವ ಕ್ರಮ, ರಂಜಿಸುವ ವಿಧಾನ ಇವೆಲ್ಲ ಇಂತಹ ರಂಗಭೂಮಿಯಲ್ಲೂ ಸಾಧ್ಯವಾಗಬಹುದು ಎಂಬ ವಿಶಿಷ್ಟ ತಿಳಿವಳಿಕೆ ದೊರಂಗೌ ಅವರಿಗಾಯಿತು.

ಅದೇ ಸಂದರ್ಭದಲ್ಲಿ ಸಣ್ಣಗುಡ್ಡಯ್ಯ ಅವರ 'ಅಭೀಪ್ಸೆ' ಎಂಬ ಕವನ ಸಂಕಲನವೊಂದರ ಬಿಡುಗಡೆಗೆ ಬೇಂದ್ರೆ ತುಮಕೂರಿಗೆ ಆಗಮಿಸಿದ್ದರು. ಮಾತುಗಾರಿಕೆಯಲ್ಲಿ ಗಾರುಡಿಗರಾಗಿದ್ದ ಬೇಂದ್ರೆ ಅಂದು ನೆರೆದಿದ್ದ ಜನರನ್ನೆಲ್ಲ ತಮ್ಮ ಮಾತಿನ ಮೋಡಿಯಲ್ಲಿ ಮಂತ್ರಮುಗ್ಧರನ್ನಾಗಿಸಿ ದ್ದರು. 'ಸಣ್ಣಗುಡ್ಡಯ್ಯ ಈಗ ದೊಡ್ಡ ಗುಡ್ಡಯ್ಯ' ಎಂದು ಪನ್ ಮಾಡಿದ ಬೇಂದ್ರೆ ತಮ್ಮ ಮಾತಿನ ಚುಂಬಕ ಶಕ್ತಿಯನ್ನು ದೊರಂಗೌ ಅವರ ಮೇಲೂ ಬೀರಿದ್ದು ವಿಶೇಷವೇನಲ್ಲ.

ಇನ್ನೊಬ್ಬ ಮಹಾ ಕವಿ ಗೋಪಾಲಕೃಷ್ಣ ಅಡಿಗರನ್ನು ಭೇಟಿ ಮಾಡುವ, ಮಾತು ಕೇಳುವ ಅವಕಾಶವೂ ಆಗ ದೊರಂಗೌ ಅವರಿಗಾಯಿತು. ತುಮಕೂರಿನ ನವ್ಯ ಕವಿಗಳಲ್ಲೊಬ್ಬರಾದ ಎ.ಚಿಕ್ಕವೀರಯ್ಯನವರು ತಮ್ಮ 'ವಿಷಾದನಕ್ಷೆ' ಕವನಸಂಕಲನಕ್ಕೆ ಅಡಿಗರಿಂದ ಮುನ್ನುಡಿ ಬರೆಸಿ, ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಆಗಲೇ ದೊರಂಗೌ ಅವರಿಗೆ ಅಡಿಗರ ವೈಚಾರಿಕತೆ, ಅವರ ಸಾತ್ವಿಕ ಸಿಟ್ಟು ಸಮಕಾಲೀನ ವ್ಯವಸ್ಥೆ ಮೇಲಿನ ಅವರ ಆಕ್ರೋಶಗಳ ಪರಿಚಯವಾದದ್ದು.

ಇದೇ ಸಂದರ್ಭದಲ್ಲಿ ಬ್ರಹ್ಮಪುತ್ರ ನದಿಯ ನೆರೆ ಹಾವಳಿಯ ದೆಸೆಯಿಂದ ಇಡೀ ಬಿಹಾರ ರಾಜ್ಯದ ಜನತೆ ನಿರಾಶ್ರಿತರಾದದ್ದು ದೇಶ ಕಂಡ ಅತ್ಯಂತ ದಾರುಣ ನೈಸರ್ಗಿಕ ವಿಕೋಪಗಳಲ್ಲಿ ಒಂದು. ಆ ಸಂದರ್ಭದಲ್ಲಿ ಕನ್ನಡ ಚಿತ್ರರಂಗದ ಬಹುದೊಡ್ಡ ಕಲಾವಿದರೆಲ್ಲ ಮೆರವಣಿಗೆ ಬಂದು ಜನರ ಮುಂದೆ ಕೈವೊಡ್ಡಿ ನಿರಾಶ್ರಿತರಿಗೆ ಧನಸಹಾಯ ಮಾಡುವಂತೆ ಕೇಳಿಕೊಳ್ಳುವ ಮೆರವಣಿಗೆಯನ್ನು ಹಮ್ಮಿಕೊಂಡಿದ್ದರು. ರಾಜ್, ಉದಯ್, ಕಲ್ಯಾಣ್, ಪಂಡರೀಬಾಯಿ, ನರಸಿಂಹರಾಜು, ಬಾಲಕೃಷ್ಣ ಮೊದಲಾದ ದಿಗ್ಗಜರು ಬೀದಿ ಬೀದಿಯಲ್ಲಿ ಪರಿಹಾರ ನಿಧಿಯನ್ನು ಸಂಗ್ರಹಿಸುತ್ತಿದ್ದರು. ಯುವಕ ದೊಡ್ಡರಂಗೇಗೌಡರಿಗೆ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವ ಸಣ್ಣಪುಟ್ಟ ಅವಕಾಶಗಳು ದೊರಕಿದ್ದವು. ಚಿತ್ರರಂಗದವರ ಪರವಾಗಿ ಹಣ ಸಂಗ್ರಹಣೆ ಅದನ್ನು ಸಿನಿಮಾ ತಾರೆಯವರಿಗೆ ನೀಡುವ ಅವಕಾಶ, ಅವರ ಕೈ ಕುಲುಕುವ ಸಂದರ್ಭ ಇವೆಲ್ಲ ಚೇತೋಹಾರಿ ಸಂಗತಿಗಳಾಗಿದ್ದವು. ಬಹುಶಃ ಕನ್ನಡ ಮತ್ತು ಸಿನಿಮಾ ಆಕರ್ಷಣೆ ಇವೆಲ್ಲ ವಿಚಿತ್ರವಾಗಿ ದೊರಂಗೌ ಅವರಲ್ಲಿ ಹಾಸುಹೊಕ್ಕಾಗಿ ಬಂದಿರುವುದು ಹಾಗೂ ಅವೆರಡೂ ಒಂದಕ್ಕೊಂದು ಬೆಸೆದಿರುವುದು ವಿಚಿತ್ರ ಅಲ್ಲವೆ.

## ಅಕ್ಷರಲೋಕದ ಬೆನ್ನುಹತ್ತಿ

ಬರಹವೆಂಬ ಚುಂಬಕಶಕ್ತಿ ಎಂಥವರನ್ನೂ ಸಮ್ಮೋಹಿತಗೊಳಿಸುವಂಥಾದ್ದು. ಆದರೆ ಅದು ನಿರಂತರ ಓದುವಿಕೆ ಮತ್ತು ಬರೆಯುವಿಕೆಯಿಂದ ಮಾತ್ರ ಸಾಧ್ಯ. ಕಲ್ಪನೆಗಳೆಲ್ಲ ಗರಿಗೆದರಲು, ಮನದೊಳಗೆ ಗರಿಗೆದರಿದ ಭಾವಗಳೆಲ್ಲ ಅಕ್ಷರವಾಗಲು ವಿಶಿಷ್ಟವಾದ ಸಂಬಂಧಸೂತ್ರದ ಅಗತ್ಯವಿದೆ. ಬಹುಶಃ ಕಾವ್ಯ ಸರಸ್ವತಿಯ ಒಲಿಯುವಿಕೆ ಎಂಬ ಹಿರಿಯರ ಮಾತಿಗೆ ಇದೇ ಅರ್ಥ ಇರಬಹುದೋ ಏನೋ. ಯಾವುದೇ ಬರಹವಾಗಲಿ ಓದುಗರನ್ನು ಒಳಗೊಳ್ಳುವಷ್ಟು ಅರ್ಥವಂತಿಕೆ ಹೊಂದಿದಾಗ ಹಾಗೂ ಅವರ ಮನದಲ್ಲಿ ಅದು ಮೊದಲ ಓದಿಗೆ ಬೇರು ಬಿಟ್ಟಾಗ ಅದು ಉತ್ತಮ ಬರವಣಿಗೆ ಎನಿಸಿಕೊಳ್ಳಬಹುದು.

ದೊರಂಗೌ ಅವರಿಗೆ ಜಾನಪದದ ಜಾಡು, ಹಾಡುಗಾರಿಕೆಯ ಕಸುವು ಬಾಲ್ಯದಿಂದಲೇ ಅಂಟಿ ಬಂದದ್ದು. ಮುದ್ದೆ ಮಾಡುತ್ತಿದ್ದ ಮನೆಯ ಹೆಂಗಸರಿಂದ ಆರಂಭಗೊಂಡು

ನಾಟಿ ಮಾಡುತ್ತಾ ರಾಗವಾಗಿ ಹಾಡು ಹೇಳುತ್ತಾ ಕೆಲಸ ಸಾಗಿಸುತ್ತಿದ್ದ ಹೆಂಗಸರವರೆಗೆ;ಹಾಗೆಯೇ ಉಳುಮೆ ಮಾಡುವ ಆಳುಗಳಿಂದ ಹಿಡಿದು ಕಪಿಲೆ ಹೊಡೆಯುವ ಚಿಕ್ಕಪ್ಪಂದಿರವರೆಗೆ ಸಾಗಿಬಂದ ತಮ್ಮದೇ ಆದ ಹಾಡುಗಳು ದೊರಂಗೌ ಅವರಲ್ಲಿ ಪದ ಕಟ್ಟುವ, ಹಾಡು ಹೊಮ್ಮಿಸುವ ಕ್ರಿಯೆಗೆ ನಾಂದಿ ಹಾಡಿರಲೂಬಹುದು.

ಬೆಳವನ ಹಕ್ಕಿಯ ಕಂಡರೆ 'ಮುತ್ತಿನಶೆಟ್ಟಿ ತೊರೆ ತೊರೆ...' ಹಾಗೆಯೇ ಕಪಿಲೆ ಹೊಡೆಯುತ್ತಿದ್ದವರ 'ನೀರಿಗ್ಹೋಗೋ ಹೆಣ್ಣೆ....' ಹಾಗೆಯೇ ಹಳ್ಳಿಯ ಹಲವಾರು ಸಂಪ್ರದಾಯದ ಜಾನಪದ ಹಾಡುಗಳು, ಗಾದೆಗಳು, ಒಗಟುಗಳು ಹುಡುಗ ದೊರಂಗೌ ಅವರ ಮನದಲ್ಲಿ ನಿರಂತರವಾಗಿ ಅಚ್ಚೊತ್ತಿ ಅವರ ಅಕ್ಷರದ ರೂಪಕ್ಕೆ ದಾರಿ ಮಾಡಿಕೊಟ್ಟಿದ್ದು ಸಾಹಿತ್ಯ ಚರಿತ್ರೆಯ ಒಂದು ಭಾಗ.

ಆದರೆ ದೊರಂಗೌ ಅವರಿಗೆ ಅಪ್ಪನದೇ ಭಯ! ತನ್ನ ಮಗ ಸಾಹಿತ್ಯ, ಸಂಗೀತ, ನಾಟಕ ಇತ್ಯಾದಿಗಳ ಕಡೆಗೆ ಒಲಿಯಬಾರದು ಎಂಬುದು ಅಪ್ಪನ ಆಸೆ. ಆದರೆ ದೊರಂಗೌ ಪ್ರೌಢಶಾಲೆಗೆ ಬರುವಾಗಲೆ ಸಾಹಿತ್ಯದ ಬೀಜ ತಲೆಯೊಳಗೆ ಮೊಳಕೆ ಒಡೆದಾಗಿತ್ತು. ಶಾಲೆಯಲ್ಲಿ ರಾಮಚಂದ್ರರಾಯರಂತಹ ಅಧ್ಯಾಪಕರು ಇವರಿಂದ ಹೊಸ ಪದ್ಯ ಓದಿಸುತ್ತಿದ್ದರು. ಬೇರೆ ಬೇರೆ ಬಗೆಯ ಗೀತೆಗಳನ್ನು ಹಾಡಿಸುತ್ತಿದ್ದರು. ಆ ಸಂದರ್ಭದಲ್ಲಿ ಗೌಡರನ್ನು ಸೆಳೆದದ್ದು ಗೋಕುಲ ಎಂಬ ಪತ್ರಿಕೆ. ಮಕ್ಕಳಿಗಾಗಿ ವಿಶೇಷವಾಗಿ ರೂಪುಗೊಳ್ಳುತ್ತಿದ್ದ ಗೋಕುಲ ಪತ್ರಿಕೆ ಅಂದಿನ ಬಾಲಬರಹಗಾರರಿಗೆಲ್ಲ ಪ್ರೀತಿಯ ವೇದಿಕೆ. ಖಾದ್ರಿ ಶಾಮಣ್ಣ ಬಾ.ಸು.ಕೃಷ್ಣಮೂರ್ತಿ ಎಸ್ಸಾರ್ಕೆ ಈ ಪತ್ರಿಕೆಯ ಮೇಲ್ವಿಚಾರಕರು.

ಶಾಲೆಯಲ್ಲಿ ಬರೆಯುತ್ತಿದ್ದ ಪದ್ಯಗಳನ್ನು ಈ ಪತ್ರಿಕೆಗೆ ಕಳಿಸಬಾರದೇಕೆ ಎಂಬ ಯೋಚನೆ ಬಂದದ್ದೆ ತಡ ದೊರಂಗೌ ಪದ್ಯವೊಂದನ್ನು ಕಳಿಸಿಯೇಬಿಟ್ಟರು. ಆದರೆ ಅಪ್ಪನ ಭಯದಿಂದ ತಮ್ಮ ಹೆಸರನ್ನು ಮರೆಸಿ, ''ಮನುಜ'' ಎಂಬ ಕಾವ್ಯನಾಮವನ್ನು ಬಳಸಿದರು. ಮೊದಲು ಮನುಜನ ಕವನವನ್ನು ಅಚ್ಚು ಮಾಡಿದ ಗೋಕುಲ ಪತ್ರಿಕೆಯನ್ನು ನೋಡಿದ ಸಂಭ್ರಮ ಇಂದಿಗೂ ಅವರ ಮನದಿಂದ ಅಳಿಸಿಹೋಗಿಲ್ಲ. ತಾನು ಬರೆದ ಅಕ್ಷರವೊಂದು ಅಚ್ಚಾಗಿ ಬಂದುದೆ ಅವರ ಣಅಕ್ಷರಲೋಕದ ಪಯಣಕ್ಕೆ ನಾಂದಿಹಾಡಿತ್ತು.

ಕಾಲೇಜಿಗೆ ಬಂದಮೇಲೆ ಇದು ಇನ್ನಷ್ಟು ಪ್ರಬಲವಾಗಿ ಬೆಳೆಯತೊಡಗಿತು. ಸಣ್ಣಗುಡ್ಡಯ್ಯನವರಂತಹ ವಿಚಾರವಾದಿಗಳ ಒಡನಾಟ, ಸಿದ್ಧಲಿಂಗಯ್ಯನವರಂತಹ ಅಧ್ಯಾಪಕರ ಸಖ್ಯ ಅದರ ಜೊತೆಗೆ ತುಮಕೂರಿನಲ್ಲಿ ಎಲ್ಲೆಡೆ ಸಿಗುತ್ತಿದ್ದ ಸಾಹಿತ್ಯಾಸಕ್ತಿಯ ಸಂಗತಿಗಳು ಅವರ ಆಶಯಗಳನ್ನು ದ್ವಿಗುಣಗೊಳಿಸಿದವು. ಅವರ ಬದುಕಿನಲ್ಲಿ ಅತಿ ಮುಖ್ಯ ಪಾತ್ರ ವಹಿಸಿದ್ದೆಂದರೆ ತುಮಕೂರಿನ ಕೃಷ್ಣರಾಜೇಂದ್ರ ಗ್ರಂಥಾಲಯ. 'ಬಹುಶಃ ಈ ಉಚಿತ ಗ್ರಂಥಾಲಯವನ್ನು ನಾನು ಬಳಸಿಕೊಂಡಷ್ಟು ಯಾರೂ ಬಳಸಿಕೊಂಡಿಲ್ಲ ಎನಿಸುತ್ತದೆ. ಗ್ರಂಥಾಲಯಕ್ಕೆ ಭೇಟಿ ಕೊಡುವ

ಪ್ರತಿಯೊಬ್ಬರೂ ಹಾಕಬೇಕಾದ ಸಹಿ ಪುಸ್ತಕವನ್ನು ನೋಡಿದರೆ ಇವತ್ತಿಗೂ ನನ್ನದೇ ಹೆಚ್ಚು ಎನಿಸುತ್ತದೆ' ಎನ್ನುತ್ತಾರೆ ಗೌಡರು.

ಈ ಗ್ರಂಥಾಲಯದಲ್ಲಿ ಗೌಡರ ಜ್ಞಾನ ಮತ್ತು ವ್ಯಕ್ತಿತ್ವಗಳು ಬೇರೆ ಬೇರೆ ಬಗೆಯಲ್ಲಿ ವಿಕಸನಗೊಳ್ಳಲು ಕಾರಣವಾಯಿತು. ಇಲ್ಲಿ ಅವರು ಓದದ ಪುಸ್ತಕಗಳೇ ಇಲ್ಲ. ಅಭ್ಯಾಸ ಮಾಡದ ಸಾಹಿತಿಗಳೇ ಇಲ್ಲ. ಅನಕೃ, ಕುವೆಂಪು, ಬೇಂದ್ರೆ, ತರಾಸು, ಕೆಎಸ್‌ನ... ಕಾರಂತ ಹೀಗೆ ಎಲ್ಲ ಉದ್ದಾಮ ಕವಿಗಳು ಗೌಡರ ಜ್ಞಾನದಾಹಕ್ಕೆ ಗ್ರಾಸ ಒದಗಿಸಿದರು.

ಒಂದೆಡೆ ಓದಲು ಸಿಕ್ಕಿದ ಪ್ರೇರಣೆ, ಇನ್ನೊಂದೆಡೆ ಬರೆಯಲು ಸಿಗುವ ಅವಕಾಶ ಇವೆರಡು ಗೌಡರ ವ್ಯಕ್ತಿತ್ವವನ್ನೇ ಬದಲಾಯಿಸಿದವು. ತುಮಕೂರಿನ ಜನತಾ ಪುಸ್ತಕಾಲಯ, ವಿಜಯ ವಾಣಿ ಪತ್ರಿಕೆ ಗೌಡರ ನೆಚ್ಚಿನ ತಾಣಗಳಾಗಿದ್ದವು. ಅದಾಗಲೇ ತುಮಕೂರಿನಲ್ಲಿ ಆರಂಭವಾಗಿದ್ದ ಜಿಲ್ಲಾ ಬರಹಗಾರರ ಸಂಘ ಗೌಡರನ್ನು ನಿತ್ಯ ಚಟುವಟಿಕೆಯ ವ್ಯಕ್ತಿಯನ್ನಾಗಿ ರೂಪಿಸಿತ್ತು. ಅದೇ ಸಂದರ್ಭದಲ್ಲಿ ಬರುತ್ತಿದ್ದ 'ಗೋಕುಲ'ದ ಕಾವ್ಯಧಾರೆ ಎಂಬ ಸಾಹಿತ್ಯ ಪತ್ರಿಕೆಯ ಅಂಕಣದಲ್ಲಿ ಬರೆಯುವ ಹಲವು ಪ್ರಸಿದ್ಧ ವ್ಯಕ್ತಿಗಳ ಪೈಕಿ ಗೌಡರೂ ಒಬ್ಬರಾಗಿದ್ದರು.

ಆಗ ಬರೆಯುತ್ತಿದ್ದವರೆಂದರೆ ಕಾಳೇಗೌಡ ನಾಗವಾರ, ಚನ್ನಣ್ಣ ವಾಲೀಕಾರ, ಕೆ.ವಿ.ತಿರುಮಲೇಶ್, ವಿಷ್ಣುಮೂರ್ತಿ ಕಾರ್ಗಲ್, ಪೂರ್ಣಚಂದ್ರ ತೇಜಸ್ವಿ, ಜಯಸುದರ್ಶನ, ನಾ.ಮೊಗಸಾಲೆ, ಕಿರಣ ಹಾಗೂ "ಮನುಜ" ಕಾವ್ಯನಾಮದ ದೊರಂಗೌ. ಹೀಗೆ ಒಂದು ಯುವ ಕವಿಗಳ ಪಡೆಯೇ ಆಗ ಕಾವ್ಯಲೋಕದ ಮುಂಚೂಣಿಯಲ್ಲಿ ಕಾಣಿಸಿಕೊಳ್ಳತೊಡಗಿತ್ತು. ಆಗ ಖಾದ್ರಿ ಶಾಮಣ್ಣ ದೊರಂಗೌ ಅವರಿಗೆ ಗೋಕುಲ ಪತ್ರಿಕೆಗಾಗಿ ಒಂದು ವಿಶೇಷ ಅಂಕಣ ವನ್ನು ನೀಡಿದರು. ಕವಿಗಳ ಬಗ್ಗೆ ಕಾವ್ಯದ ಬಗ್ಗೆ ಅಪಾರ ಒಲವಿದ್ದ ದೊರಂಗೌ ಅವರಿಗೆ ಕನ್ನಡದ ಕಾವ್ಯ ಪರಂಪರೆ ಕುರಿತು ಪ್ರತಿವಾರವೂ ಬರೆಯುವಂತೆ ಪ್ರೇರೇಪಿಸಿದರು. ಅದರ ಪರಿಣಾಮವಾಗಿ ಮುಂದಿನ ಐವತ್ತೆರೆಡು ಸಂಚಿಕೆಗಳಲ್ಲಿ ದೊರಂಗೌ ಕನ್ನಡ ಕಾವ್ಯ ಚರಿತ್ರೆಯ ಕುರಿತು ವಿವರವಾದ ಲೇಖನಗಳನ್ನು ಬರೆಯತೊಡಗಿದರು. ಮುಂದೆ ಅಂದರೆ ಸುಮಾರು ಇಪ್ಪತ್ತು ವರ್ಷಗಳ ನಂತರ ಇವೆಲ್ಲ ಪುಸ್ತಕ ರೂಪದಲ್ಲಿ ಹೊರಬಂತು.

ದೊರಂಗೌ ಅವರ ಮೊದಲ ಕವನ ಸಂಕಲನ ಹೊರಬಂದದ್ದು ಒಂದು ವಿಚಿತ್ರ ಸನ್ನಿವೇಶ ದಲ್ಲಿ. ಆಗ ದೊರಂಗೌ ಕೆಲಸಕ್ಕೆ ಸೇರಿ ಓದುವುದನ್ನು ಮುಂದುವರೆಸಿದ್ದರು. ಇವರ ಜೊತೆಯೇ ಆರ್‌ಎಂಎಸ್‌ನಲ್ಲಿ ಕೆಲಸ ಮಾಡುತ್ತಿದ್ದ ಆತ್ಮೀಯ ಸ್ನೇಹಿತ ಗಂಗಾಧರಮೂರ್ತಿಯವರು ಒಂದು ದಿನ ದೊರಂಗೌ ಅವರ ಕವನಗಳನ್ನು ಕೊಡುವಂತೆ ಕೇಳಿಕೊಂಡರು. ಅವರು ಓದಲು ಕೇಳಿರಬಹುದೆಂದು ಒಂದಷ್ಟು ಕವನಗಳಿರುವ ಕಟ್ಟನ್ನು ದೊರಂಗೌ ಅವರಿಗೆ ನೀಡಿದರು. ಕೆಲವು ದಿನಗಳ ನಂತರ ಫೋನ್ ಮಾಡಿದ ಗಂಗಾಧರಮೂರ್ತಿ ಭೇಟಿಯಾಗುವುದಾಗಿ ಹೇಳಿ

ದೊರಂಗೌಗೆ ವಿಚಿತ್ರವಾದ ಅಚ್ಚರಿಯೊಂದನ್ನು ನೀಡಿದರು. ಅವರ ಕೈಯಲ್ಲಿ ದೊರಂಗೌ ಅವರ ಮೊದಲ ಕವನ ಸಂಕಲನ ಜಗಲಿ ಹತ್ತಿ ಹಿಡಿದು ಅಚ್ಚಾಗಿ ಪುಸ್ತಕ ರೂಪದಲ್ಲಿ ಬಂದಿತ್ತು. ದೊರಂಗೌ ಕೂಡ ಇದನ್ನು ನಿರೀಕ್ಷಿಸಿರಲಿಲ್ಲ. ಮುಂದೆ ಇದೇ ಕವನ ಸಂಕಲನಕ್ಕೆ ಒಳ್ಳೆಯ ರಕ್ಷಾಪುಟ ಮಾಡಿಸಿ ಲಿಪಿ ಮುದ್ರಣದ ಬಾಕಿನ ಅಚ್ಚು ಮಾಡಿದ್ದು ಇನ್ನೊಂದು ಕತೆ.

ಇದಾದ ನಂತರ ದೊರಂಗೌ ಕಾವ್ಯಲೋಕದಲ್ಲಿ ಹಿಂತಿರುಗಿ ನೋಡಲೇ ಇಲ್ಲ. ನಾಡಾಡಿ, ಕಣ್ಣುನಾಲಗೆ ಕಡಲು ಮುಂತಾಗಿ ಹಲವಾರು ಕವನ ಸಂಗ್ರಹಗಳನ್ನು ಹೊರತಂದರು. ನವ್ಯ, ನವೋದಯ, ಜಾನಪದ, ಬಂಡಾಯ ಹೀಗೆ ಎಲ್ಲ ಪ್ರಕಾರಗಳ ವಿವಿಧ ಬಗೆಯ ಕವನಗಳು ದೊರಂಗೌ ಮೂಲಕ ನಾಡಿನ ಸಾರಸ್ವತ ಲೋಕವನ್ನು ಸೇರಿದವು.

## ಉದ್ಯೋಗಪರ್ವ

ತುಮಕೂರಿನಲ್ಲಿ ಪಿಯುಸಿ ಮುಗಿಸಿ ಬಿಎಸ್ಸಿ ಸೇರಿಕೊಂಡಾಗಲೆ ದೊರಂಗೌ ಅವರಿಗೆ ತಮ್ಮ ಮನೆಯ ಆರ್ಥಿಕ ಪರಿಸ್ಥಿತಿ ಅರಿವಾಗತೊಡಗಿತ್ತು. ತಂದೆಯವರು ಎಂಟು ಮಕ್ಕಳ ವಿದ್ಯಾಭ್ಯಾಸ, ಮದುವೆ ಇತ್ಯಾದಿ ಸಂಸಾರ ನಿರ್ವಹಣೆಯ ವಿಚಾರವಾಗಿ ತೀರಾ ಹಣ್ಣಾಗಿದ್ದರು. ತಮ್ಮ ಓದಿಗೂ ತಂದೆ ಸಹಾಯ ಮಾಡಲು ಸಾಧ್ಯವಿಲ್ಲ ಎಂಬುದು ದೊರಂಗೌ ಅವರಿಗೆ ತಿಳಿಯತೊಡಗಿತು. ಹೇಗೋ ಪಿಯುಸಿ ಉತ್ತಮ ಮಟ್ಟದಲ್ಲಿ ಪಾಸು ಮಾಡಿದ್ದಾಗಿತ್ತು.

ಪಿಯುಸಿ ಓದುವಾಗಲೂ ದೊರಂಗೌ ತಂದೆಯವರಿಂದ ಹೆಚ್ಚು ಸಹಾಯ ಪಡೆದಿರಲಿಲ್ಲ. ಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳಿಗಾಗಿ ಭಾರತ ಸರ್ಕಾರ ನೀಡುವ ಸ್ಕಾಲರ್‌ಶಿಪ್ ದೊರಂಗೌ ಅವರಿಗೆ ಯೋಗ್ಯತಾನುಸಾರ ದೊರಕಿತ್ತು. ವರ್ಷಕ್ಕೆ 1,020 ರೂ.ಗಳ ಈ ವಿದ್ಯಾರ್ಥಿ ವೇತನ ದೊರಂಗೌ ಪಾಲಿಗೆ ಅತಿ ದೊಡ್ಡ ಮೊತ್ತವಾಗಿತ್ತು. ವರ್ಷವೆಲ್ಲ ಅದನ್ನು ಬಳಸಿಕೊಂಡು ಕೊನೆಗೆ ಅದರಲ್ಲೇ 120 ರೂ.ಗಳನ್ನು ಮಿಗಿಸಿ ತಂದೆಗೆ ನೀಡಿದ್ದರು.

ಹೀಗೆ ಕಷ್ಟಪಟ್ಟು ಪಿಯುಸಿ ಮುಗಿಸಿದರೂ ಬಿಎಸ್ಸಿ ಓದುವಾಗ ಈ ಕಷ್ಟ ದ್ವಿಗುಣವಾಗಲಿದೆ ಎಂಬುದು ತಂದೆಯ ಪರಿಸ್ಥಿತಿ ನೋಡಿ ದೊರಂಗೌ ಅವರಿಗೆ ಮನವರಿಕೆಯಾಯಿತು. ಮನೆಯ ಆರ್ಥಿಕ ಸ್ಥಿತಿಯನ್ನು ಸರಿದೂಗಿಸಿಕೊಳ್ಳುವ ಸಲುವಾಗಿ ತಂದೆ ಬೆಳಗಿನ ಟ್ಯೂಷನ್, ಸಂಜೆಯ ಟ್ಯೂಷನ್, ರಾತ್ರಿಯ ಟ್ಯೂಷನ್ ಹೀಗೆ ಒಂದು ನಿಮಿಷವೂ ವ್ಯಯ ಮಾಡದೆ ದುಡಿಮೆಗೆ ತಮ್ಮನ್ನು ಒಡ್ಡಿಕೊಂಡಿದ್ದರು. ಇದೊಂದು ಪ್ರತಿನಿತ್ಯ ಮನಸ್ಸು ಕೊರೆಯುವ ವಿಚಾರವಾಗಿತ್ತು.

ಆದರೆ ದೊರಂಗೌ ಅವರ ಬರಹದ ಕಾರ್ಯವಂತೂ ನಿಲ್ಲಲು ಸಾಧ್ಯವಿರಲಿಲ್ಲ. ಅದರ ಪಾಡಿಗದು ನಡೆದೇ ಇತ್ತು. ವಾರಕ್ಕೊಮ್ಮೆ ಅಂಚೆ ಕಚೇರಿಗೆ ಹೋಗಿ ಲೇಖನಗಳನ್ನು, ಕವನಗಳನ್ನು ಪತ್ರಿಕೆಗಳನ್ನು ಕಳುಹಿಸುತ್ತಿದ್ದರು. ಒಮ್ಮೆ ಅಂಚೆ ಕಚೇರಿಯಲ್ಲಿ ಒಂದಷ್ಟು ಅರ್ಜಿ

ಫಾರಂಗಳನ್ನು ನೀಡುತ್ತಿರುವ ಸಂಗತಿ ಇವರಿಗೆ ಗೊತ್ತಾಯಿತು. ಅದೇನೆಂದು ವಿಚಾರಿಸಿದರೆ ಅಂಚೆ ಕಚೇರಿಯಲ್ಲಿ ಆರ್‌ಎಂಎಸ್ ಕೆಲಸಕ್ಕಾಗಿ ಅರ್ಜಿ ಕರೆದಿದ್ದರು. ಎಸ್‌ಎಸ್‌ಎಲ್‌ಸಿಯಲ್ಲಿ ಉತ್ತಮ ಅಂಕ ಪಡೆದವರಿಗೆ ಆ ಕೆಲಸ ಮೀಸಲಾಗಿತ್ತು. ಹಿಂದೆ ಮುಂದೆ ಯೋಚಿಸದೆ ದೊರಂಗೌ ಅರ್ಜಿ ಗುಜರಾಯಿಸಿದರು. ಮೂರನೇ ಬಿಎಸ್ಸಿಯಲ್ಲಿ ಓದುತ್ತಿರುವಾಗ ಕೆಲಸದ ಪತ್ರ ಕೂಡ ಬಂತು. ಆದರೆ ದೊರಂಗೌ ಅಂಚೆ ಇಲಾಖೆಯ ಮುಖ್ಯಸ್ಥರನ್ನು ಕಂಡು ತಾವು ಓದುತ್ತಿರುವ ವಿಚಾರವನ್ನು ತಿಳಿಸಿ ಬಿಎಸ್ಸಿ ಮುಗಿದ ತಕ್ಷಣ ಸೇರಿಕೊಳ್ಳುವುದಾಗಿ ವಿನಂತಿಸಿ ಕೊಂಡರು. ಅದರಂತೆ 1964 ರಲ್ಲಿ ಬಿಎಸ್ಸಿ ಪರೀಕ್ಷೆ ಬರೆದ ಮರುದಿನವೇ ಆರ್‌ಎಂಎಸ್ ಕೆಲಸಕ್ಕೆ ಸೇರಿಕೊಳ್ಳಬೇಕಾಯಿತು.

ಮೊದಲ ಸ್ಥಳವೇ ಹುಬ್ಬಳ್ಳಿ. ಹುಬ್ಬಳ್ಳಿಯಲ್ಲಿ ದೊರಂಗೌ ಅವರ ಕಾವ್ಯ ಕಾಯಕ ಮುಂದುವರೆಯಲು ಸಾಕಷ್ಟು ಅವಕಾಶಗಳು ದೊರಕಿದವು. ಧಾರವಾಡ ಮೊದಲೇ ಸಾಹಿತಿಗಳ ತವರು. ಬೇಂದ್ರೆಯವರಂತಹ ಉದ್ದಾಮ ಕವಿಗಳು ಚನ್ನವೀರ ಕಣವಿ, ಚಂಪಾ, ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಡ್ಡಿ ಗೋವಿಂದರಾಜ ಮುಂತಾದ ಸಾಹಿತಿಗಳ ಸ್ನೇಹ ಲಭ್ಯವಾಯಿತು. ಅಲ್ಲದೆ ಸಂಯುಕ್ತ ಕರ್ನಾಟಕದಂತಹ ಕರ್ಮವೀರ, ಕಸ್ತೂರಿಯಂತಹ, ಪತ್ರಿಕೆ ಸಂಪರ್ಕವೂ ದೊರೆಯಿತು. ಕರ್ಮವೀರ, ಕಸ್ತೂರಿ ದೊರಂಗೌ ಬರಹಗಳ ನೆಲವಾಯಿತು. ಆಗಲೇ ಅವರಿಗೆ ಪಾವೆಂ ಆಚಾರ್ಯ, ಸುರೇಂದ್ರ ದಾನಿ ಪಾಟೀಲ ಪುಟ್ಟಪ್ಪ ಮುಂತಾದ ಪತ್ರಕರ್ತರ ಗೆಳೆತನ ಬೆಳೆದದ್ದು.

ಕಸ್ತೂರಿ, ಕರ್ಮವೀರಗಳಲ್ಲಂತೂ ನಿರಂತರವಾಗಿ ದೊರಂಗೌ ಕವನಗಳು ಅಚ್ಚಾಗತೊಡಗಿದವು. ಆ ಕಾಲದಲ್ಲೆ ಸಾಹಿತ್ಯಕ ಪತ್ರಿಕೆ ಸಂಕ್ರಮಣ ಆರಂಭವಾದದ್ದು. ಇದರ 7ನೇ ಸಂಚಿಕೆಯಿಂದಲೇ ದೊರಂಗೌ ಕವನ ಪ್ರಕಟವಾಗತೊಡಗಿತ್ತು. ಆ ಕಾಲದಲ್ಲಿ ಸಂಕ್ರಮಣದಲ್ಲಿ ಕವನ ಪ್ರಕಟವಾಗುವುದೆಂದರೆ ಅದೊಂದು ಪ್ರತಿಷ್ಠೆಯ ಸಂಗತಿಯೂ ಆಗಿತ್ತು. ಅಲ್ಲದೆ, ಸಾಹಿತ್ಯಾಸಕ್ತರು ಅದನ್ನು ಗಂಭೀರವಾಗಿ ಪರಿಗಣಿಸುತ್ತಲೂ ಇದ್ದರು. ಹೀಗೆ ಸುಮಾರು ಒಂಬತ್ತು ತಿಂಗಳ ಕಾಲ ಹುಬ್ಬಳ್ಳಿಯಲ್ಲಿ ಕೆಲಸ ಮಾಡಿಕೊಂಡು ಸಾಹಿತ್ಯದ ಸಾನ್ನಿಧ್ಯದಲ್ಲೂ ಓಡಾಡಿಕೊಂಡು ದೊರಂಗೌ ತಮ್ಮ ಬರಹಗಳ ಅಡಿಪಾಯವನ್ನು ಇನ್ನಷ್ಟು ಗಟ್ಟಿಗೊಳಿಸಿಕೊಂಡರು. ಬಹುಶಃ ಹುಬ್ಬಳ್ಳಿ ಇವರ ಯೋಚನೆಗಳಿಗೆ, ಕಲ್ಪನೆಗಳಿಗೆ ಮಹತ್ತರವಾದ ಬದಲಾವಣೆ ತಂದುಕೊಟ್ಟಿತು. ಅದಕ್ಕಿಂತಲೂ ಮುಖ್ಯವಾಗಿ ಸಾಹಿತ್ಯದ ಮುಖ್ಯವಾಹಿನಿಯಲ್ಲಿ ಸಾಗಲು ನೆರವಾಯಿತು.

ನಂತರ ಮೂರು ತಿಂಗಳು ಬೀರೂರಿನ ರೈಲ್ವೆ ನಿಲ್ದಾಣದಲ್ಲಿ ಕಳೆದು ಆಮೇಲೆ ಬೆಂಗಳೂರಿಗೆ ವರ್ಗವಾಯಿತು. ಬೆಂಗಳೂರು ರೈಲು ನಿಲ್ದಾಣ ಇವರ ಕಾರ್ಯಕ್ಷೇತ್ರವಾಯಿತು. ಪ್ರತಿದಿನ ರಾತ್ರಿ ಪಾಳಿಯ ಕೆಲಸ. ಬೆಳಗ್ಗೆ ನಿದ್ದೆ ಹಾಗೂ ಸಾಹಿತ್ಯದ ಕುರಿತಾದ ಚಿಂತನೆಗಳು, ಚರ್ಚೆಗಳು. ಆಗ ಇವರ ಜೊತೆ ಸಾಹಿತ್ಯ ಚರ್ಚೆಗೆ ಸಿಕ್ಕವರು ತರುಣ ಕವಿ ಜಯಸುದರ್ಶನ.

ದೊರಂಗೌ ಅವರ 20 ರೂಪಾಯಿ ಬಾಡಿಗೆಯ ರೂಮು, ಜಯಸುದರ್ಶನ ಅವರ ಮನೆ ಅಕ್ಕಪಕ್ಕದಲ್ಲಿ ಇದ್ದುದರಿಂದ ಇಬ್ಬರ ಕಾವ್ಯ ಸಮಾಲೋಚನೆ ನಿರರ್ಗಳವಾಗಿ ನಡೆದೇ ಇತ್ತು. ಗೆಳೆಯ ಈಶ್ವರ ಚಂದ್ರ ಅವರ ಜೊತೆ ಸೇರಿ "ಆಥರ್ಸ್ ವರ್ಕ್‌ಶಾಪ್" ಆರಂಭಿಸಿದರು. ಬೆರಳಚ್ಚಿನ ಪತ್ರಿಕೆ ಪ್ರಕಟಿಸಿದರು.

ಒಂದು ದಿನ ಅದೇಕೋ ಹಗಲಿನ ವೇಳೆ ವ್ಯರ್ಥವಾಗುತ್ತಿದೆಯಲ್ಲ ಎಂದು ಅನಿಸಿದ್ದೇ ತಡ ಏನಾದರೂ ಮಾಡಬೇಕೆಂಬ ತುಡಿತ ಆರಂಭವಾಯಿತು. ಅದೇ ವೇಳೆಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಆನರ್ಸ್‌ಗೆ ಮುಖ್ಯಸ್ಥರಾಗಿ ರಂ.ಶ್ರೀ.ಮುಗಳಿಯವರು ನೇಮಕವಾಗಿದ್ದರು. ಒಮ್ಮೆ ಮುಗಳಿಯವರನ್ನು ಭೇಟಿ ಮಾಡಿ ತಮ್ಮ ಇಂಗಿತ ವ್ಯಕ್ತಪಡಿಸಿದ ದೊರಂಗೌ ಏನಾದರೂ ಸಲಹೆ ನೀಡುವಂತೆ ಮುಗಳಿಯವರನ್ನು ಪ್ರಾರ್ಥಿಸಿಕೊಂಡರು. ಮುಗಳಿಯವರು ಆನರ್ಸ್ ಸೇರುವಂತೆ ಸಲಹೆಮಾಡಿದರು.

ಆನರ್ಸ್ ಮುಗಿಸಿ ಎಂ.ಎ. ಮಾಡಿದ್ದು ಇನ್ನೊಂದು ಕತೆ. ಅದನ್ನು ಮುಂದೆ ನೋಡೋಣ. ಎಂ.ಎ. ಮುಗಿಸಿದ ನಂತರ ತಮ್ಮ ಕೆಲಸವನ್ನು ಬದಲಿಸಿಕೊಳ್ಳಬೇಕೆಂಬ ಆಶಯ ಬಲವಾಗಿ ಕಾಡತೊಡಗಿತು. ಅದಕ್ಕಿಂತ ಮಿಗಿಲಾಗಿ ಕಾಲೇಜು ಶಿಕ್ಷಕನಾಗಬೇಕೆಂಬ ಆಸೆ ಅವರನ್ನು ಹೆಚ್ಚು ಹೆಚ್ಚು ಕಾಡತೊಡಗಿತು. ಆ ಕಾಲದಲ್ಲಿ ಕಾಲೇಜು ಶಿಕ್ಷಕರ ಕೆಲಸ ಎಂಬುದು ಅತ್ಯಂತ ಆದರ್ಶಮಯವಾಗಿ ಯುವಕರನ್ನು ಆಕರ್ಷಿಸಿತ್ತು. ಅದರಲ್ಲೂ ಕವಿಗಳು, ಬರಹಗಾರರಿಗೆ ನಾಡಿನ ಖ್ಯಾತ ಸಾಹಿತಿಗಳೆಲ್ಲ ಕಾಲೇಜು ಶಿಕ್ಷಕರೆಂಬುದು ಒಂದು ಕಾರಣವಾದರೆ, ಸಾಹಿತ್ಯ ಚಿಂತನೆಗೆ ಕಾಲೇಜು ಶಿಕ್ಷಕರಾಗುವುದು ಹೆಚ್ಚು ಸೂಕ್ತವಾದ ಕ್ಷೇತ್ರ ಎಂಬುದು ಜಗಜ್ಜಾಹೀರಾಗಿತ್ತು. ಹೀಗಾಗಿ ರಾಜ್ಯದ ಹಲವಾರು ಕಾಲೇಜುಗಳಿಗೆ ದೊರಂಗೌ ಅರ್ಜಿ ಗುಜರಾಯಿಸಿದರು.

ಹಾಗೆ ನೋಡಿದರೆ ಅವರು ಹಾಕಿದ ಅರ್ಜಿಗಳ ಸಂಖ್ಯೆ ಸುಮಾರು 70 ಕ್ಕೂ ಹೆಚ್ಚು. ಧರ್ಮಸ್ಥಳದ ಅಧೀನದಲ್ಲಿರುವ ಉಜಿರೆ ಕಾಲೇಜಿಗೆ ಆಗಲೇ ಕರೆ ಬಂದಿತ್ತು. ದೊರಂಗೌ ಅವರ ಪ್ರತಿಭೆ ಕಂಡು ಹಂಪನಾ ಅವರು ಆ ಕೆಲಸ ಸಿಗುವಂತೆ ಶಿಫಾರಸ್ಸು ಕೂಡ ಮಾಡಿದ್ದರು. ಆದರೆ ಬೆಂಗಳೂರು ಈಗ ದೊರಂಗೌ ಅವರ ಕಾವ್ಯಕ್ಷೇತ್ರವಾಗಿತ್ತು. ಹಾಗಾಗಿ ಹಂಪನಾ ಅವರನ್ನು ವಿನಂತಿಸಿಕೊಂಡು ತಾವು ಬೆಂಗಳೂರಿನಲ್ಲೇ ಕೆಲಸ ಹುಡುಕುವುದಾಗಿ ತಿಳಿಸಿದರು.

ನಂತರ ಬಂದ ಸಂದರ್ಶನವೇ ಎಸ್‌ಎಲ್‌ಎನ್ ಕಾಲೇಜಿನದು. ಸಂದರ್ಶಕರಾಗಿದ್ದವರು ಡಾ.ಜಿ.ಎಸ್.ಶಿವರುದ್ರಪ್ಪ ಜಿ.ಎಸ್.ಸಿದ್ಧಲಿಂಗಯ್ಯ ಹಾಗೂ ಬಿ.ಪಿ.ರೇವಣ್ಣ ಅವರುಗಳು. ಅಂದು ಸಂಜೆಯೇ ಅವರಿಗೆ ಕಾಲೇಜು ಶಿಕ್ಷಕರ ಕೆಲಸ ದೊರಕಿತ್ತು. ಆರ್‌ಎಂಎಸ್ ಕಚೇರಿಗೆ ತೆರಳಿದ ದೊರಂಗೌ ಅಲ್ಲಿಯ ಕೆಲಸವನ್ನು ಬಿಡಲು ನಿರ್ಧರಿಸಿದರು. ಆದರೆ ತಾಂತ್ರಿಕವಾಗಿ ತರಬೇತಿ ಇತ್ಯಾದಿಗಳಿಗಾಗಿ ಸರ್ಕಾರದ ಇಲಾಖೆಗೆ ಮೂರು ಸಾವಿರ ರೂ.ಗಳನ್ನು ಪಾವತಿ ಮಾಡಬೇಕಿತ್ತು. ಆ ಕಾಲದಲ್ಲಿ ಅದು ಬಹು ದೊಡ್ಡ ಮೊತ್ತ. ಅದನ್ನು ತುಂಬಿಸಲು ಪಟ್ಟ ಪಾಡು ಅಷ್ಟಿಷ್ಟಲ್ಲ. ಕೊನೆಗೆ

ಯಾರೊ ಬಡ್ಡಿಗೆ ಸಾಲ ನೀಡಿದ್ದನ್ನು ತೆಗೆದುಕೊಂಡು ಹೋಗಿ ಆರ್‌ಎಂಎಸ್ ಕಚೇರಿಗೆ ತುಂಬಿಸಿ ಅಲ್ಲಿಂದ ಬಿಡುಗಡೆ ಪಡೆದರು.

ಮುಂದಿನ ಹಲವಾರು ವರ್ಷ, ಅಂದರೆ, ನಿವೃತ್ತಿಯಾಗುವವರೆಗೂ ದೊರಂಗೌ ಮತ್ತು ಎಸ್‌ಎಲ್‌ಎನ್ ಕಾಲೇಜಿನ ಬಾಂಧವ್ಯ ಕಡಿಯಲಿಲ್ಲ. ನಿವೃತ್ತಿಯ ನಂತರವಷ್ಟೆ ಅವರು ಶೇಷಾದ್ರಿಪುರಂ ಕಾಲೇಜಿನ ಸ್ನಾತಕೋತ್ತರ ವಿಭಾಗಕ್ಕೆ ಸೇರಿಕೊಂಡದ್ದು. ದೊರಂಗೌ ಬೆಂಗಳೂರು ಬಿಟ್ಟು ಹೋಗದಿರಲು ಇನ್ನೂ ಒಂದು ಕಾರಣವಿತ್ತು. ಅದಾಗಲೇ ಅವರ ಮಗ ಭರತ್ ಹುಟ್ಟಿದ್ದ.

## ಗಳಿಕೆಯ ಜೊತೆ ಜೊತೆ ಕಲಿಕೆ

ಆರ್‌ಎಂಎಸ್ ಕೆಲಸದ ನಡುವೆ ಆನರ್ಸ್ ಸೇರಿದ ವಿಚಾರವನ್ನು ಈಗಾಗಲೇ ಹೇಳಲಾಗಿದೆ. ಆನರ್ಸ್‌ನಲ್ಲಿ ಇವರ ಮುಖ್ಯ ಶಿಕ್ಷಕರೆಂದರೆ ಜಿ.ಪಿ.ರಾಜರತ್ನಂ. ಇವರು ಎಂತಹ ಕಟ್ಟುನಿಟ್ಟಿನ ಶಿಕ್ಷಕರೆಂದರೆ, ಎಂದೂ ಹಾಜರಿ ಹಾಕಿದವರಲ್ಲ. ಅಂದರೆ ಮೊದಲ ದಿನ ಹಾಜರಿ ಹಾಕಿ ತರಗತಿ ತೆಗೆದುಕೊಂಡ ನಂತರ ಮರುದಿನ ಪ್ರತಿಯೊಬ್ಬರೂ ಅವರ ತರಗತಿ ಉಪನ್ಯಾಸ ಸಾರದ ಬಗ್ಗೆ ಲೇಖನ ಬರೆದು ತರಬೇಕು. ಯಾರು ಗೈರುಹಾಜರಾದರೂ ಇದನ್ನು ಮಾಡಲಾಗುತ್ತಿರಲಿಲ್ಲ. ಹಾಗಾಗಿ ಹಾಜರಿಗಿಂತಲೂ ಕಟ್ಟುನಿಟ್ಟಿನ ವ್ಯವಸ್ಥೆಯನ್ನು ಜಿ.ಪಿ.ಆರ್. ಜಾರಿಗೆ ತಂದಿದ್ದರು. ಅವರು ಹೇಳುತ್ತಿದ್ದುದು ಒಂದೇ ಮಾತು 'ನೀವೆಲ್ಲ ನಾಳೆ ಶಿಕ್ಷಕರಾಗುವಂಥವರು. ಇಂದು ಸರಿಯಾಗಿ ಕಲಿತರೇನೇ ನಾಳೆ ನಿಮಗೆ ಕೆಲಸ ಮಾಡಲು ಸಾಧ್ಯವಾಗುವುದು'.

ಹೀಗೆ ಕಟ್ಟುನಿಟ್ಟಿನಲ್ಲಿ ಬೋಧಿಸುತ್ತಿದ್ದ ಜಿ.ಪಿ.ಆರ್. ಕಂಚಿನ ಕಂಠದಲ್ಲಿ ಹೇಳುತ್ತಿದ್ದುದು ಇಡೀ ತರಗತಿಗೆ ಬಾಯಿಪಾಠವಾಗುತ್ತಿತ್ತು. ಪ್ರತಿಯೊಬ್ಬರನ್ನೂ ನಿಲ್ಲಿಸಿ ಕಂದಪದ್ಯವನ್ನು, ಅಭಿಜಾತ ಕಾವ್ಯಗಳನ್ನು ಅದರ ಏರಿಳಿತಗಳ ಉಚ್ಚಾರಕ್ಕನುಗುಣವಾಗಿ ಬಾಯಿಪಾಠ ಮಾಡಿಸುತ್ತಿದ್ದರು. ಕೊನೆಯ ವಿದ್ಯಾರ್ಥಿ ಹೇಳುವ ಹೊತ್ತಿಗೆ ಇಡೀ ತರಗತಿಗೇ ಬಾಯಿಪಾಠವಾಗಿರುತ್ತಿತ್ತು. ಬಿಎ ಆನರ್ಸ್ ದೊರಂಗೌ ಜೀವನದಲ್ಲಿ ಮಹತ್ತರವಾದ ಪಾತ್ರ ವಹಿಸಲು ಕಾರಣ, ಸೆಂಟ್ರಲ್ ಕಾಲೇಜಿನ ಆವರಣ. ಕನ್ನಡದ ಬಹುತೇಕ ಕವಿಗಳಿಗೆ ಸ್ಫೂರ್ತಿ ತಾಣವಾಗಿದ್ದ ಸೆಂಟ್ರಲ್ ಕಾಲೇಜ್ ಆ ಸಮಯದಲ್ಲಿ ಕಾವ್ಯದ ಮೂಲ ಕೇಂದ್ರವೇ ಆಗಿತ್ತು. ಪ್ರತಿ ಶನಿವಾರ ನಡೆಯುವ ವಿಚಾರ ಸಂಕಿರಣಗಳು ಪ್ರವರ್ಧಮಾನಕ್ಕೆ ಬರುತ್ತಿರುವ ಕವಿಗಳಿಗೆ ಸಾಕಷ್ಟು ಸಾಹಿತ್ಯಕ ದ್ರವ್ಯವನ್ನು ಒದಗಿಸುತ್ತಿದ್ದವು.

ಆ ಸಂದರ್ಭದಲ್ಲೇ ದೊರಂಗೌ ಅವರಿಗೆ ಕನ್ನಡ ರಂಗಭೂಮಿಯು ಹತ್ತಿರವಾದದ್ದು. ಪ್ರತಿಮಾ ನಾಟಕ ರಂಗದ ಸದಸ್ಯರೂ ಆಗಿದ್ದ ದೊರಂಗೌ ಹಾಗೂ ಆನರ್ಸ್‌ನಲ್ಲಿ ಓದುತ್ತಿದ್ದ ಇವರಂತೆಯೇ ಕೆಲಸ ಮಾಡಿ ಶಿಕ್ಷಣವನ್ನು ಮುಂದುವರೆಸುತ್ತಿದ್ದ ಕ.ನಂ. ನಾಗರಾಜ್, ಎಸ್.

ಎನ್.ಶ್ರೀಧರ್, ರುದ್ರಮೂರ್ತಿಶಾಸ್ತ್ರಿ ಮುಂತಾದವರಿಗೆ ಪ್ರೊ.ಬಿ.ಚಂದ್ರಶೇಖರ್ ನಾಟಕದ ಮೇಷ್ಟರೂ ಆಗಿದ್ದರು. ಆಗ ನಡೆಯುತ್ತಿದ್ದುದು ಬಹುತೇಕ ಏಕಾಂಕ ನಾಟಕಗಳ ಪ್ರದರ್ಶನ. ಪ್ರತಿಮಾ ನಾಟಕ ರಂಗದ ಸ್ಥಾಪಕರಲ್ಲಿ ಒಬ್ಬರಾದ ಪಿ.ಲಂಕೇಶ್‌ಅವರ ಏಕಾಂಕ ನಾಟಕಗಳೇ ಹೆಚ್ಚು ರಂಗವೇರುತ್ತಿದ್ದುದು. ಕ.ವೆಂ.ರಾಜಗೋಪಾಲ್ ಇವರಿಗೆಲ್ಲ ಮುಖ್ಯಸ್ಥರು. ಕೆ.ಎಂ.ಎಸ್. ಅವರದು ಮೌಲಿಕ ಸಲಹೆಗಳು.

ಆ ಕಾಲದಲ್ಲಿ ದೆಹಲಿಯಿಂದ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಕಲಿತು ಬಂದ ಬಿ.ವಿ. ಕಾರಂತ ಇಡೀ ರಂಗಭೂಮಿಯ ವರ್ಚಸ್ಸನ್ನೇ ಬದಲಿಸಿದರು. ಅದುವರೆಗೆ ಏಕಾಂಕ ನಾಟಕಗಳಿಗೆ ಸೀಮಿತವಾಗಿದ್ದ ರಂಗಭೂಮಿ ಈಗ ಪೂರ್ಣಪ್ರಮಾಣದ ಸಂಕ್ರಾಂತಿ, ದೊರೆ ಈಡಿಪಸ್ ಮೊದಲಾದ ನಾಟಕಗಳನ್ನು ಪ್ರಯೋಗಿಸುವಷ್ಟು ಬದಲಾಯಿತು. ಕಾರಂತರ ಅತೀವ ಶಕ್ತಿ ಮತ್ತು ಪ್ರತಿಭಾವಂತಿಕೆ ರಂಗಭೂಮಿಯ ಲಕ್ಷಣವನ್ನೇ ಬೇರೆ ಮಾಡಿತು.

ಆ ಸಂದರ್ಭದಲ್ಲಿ ರಂಗಭೂಮಿಗೇ ಸೀಮಿತವಾಗಿದ್ದ ಉಲ್ಲಾಳ್ ಶೀಲ್ಡ್ ಬಹು ಪ್ರತಿಷ್ಠೆಯದಾಗಿತ್ತು. ಸುಮಾರು ಇಪ್ಪತ್ತರಿಂದ ಮೂವತ್ತು ನಾಟಕಗಳು ಸ್ಪರ್ಧೆಗೆ ಬರುತ್ತಿದ್ದವು. ಎಲ್ಲ ನಾಟಕಗಳನ್ನೂ ನೋಡಿ ವಿಮರ್ಶಿಸಿದ್ದು ದೊರಂಗೌ ಅವರ ಆ ಸಂದರ್ಭದ ದೊಡ್ಡ ಕೆಲಸವಾಗಿತ್ತು. ಬಹುಶಃ ರಂಗಭೂಮಿಯ ಬಹು ವರ್ಣರಂಜಿತ ಆಯಾಮಗಳ ಪರಿಚಯವಾಗಿದ್ದೇ ಅಲ್ಲಿಂದ. ಅಲ್ಲದೆ ಜೋಸಕುಮಾರಸ್ವಾಮಿ ನಾಟಕದಲ್ಲಿ ಮೇಳದವರಲ್ಲಿ ಒಬ್ಬರಾಗಿ ಹಲವು ಪ್ರದರ್ಶನಗಳಲ್ಲಿ ಮೇಳದಲ್ಲಿ ಹಾಡುವ ಮೂಲಕ ದೊರಂಗೌ ಭಾಗವಹಿಸಿದ್ದರು.

ಅದೇ ಸಂದರ್ಭದಲ್ಲಿ ಒಮ್ಮೆ ಮೈಸೂರು ಬ್ಯಾಂಕ್ ಸರ್ಕಲ್ ಬಳಿ ದೊರಂಗೌ ಅವರಿಗೆ ಖ್ಯಾತ ನಾಟಕಕಾರ, ರಂಗಕರ್ಮಿ ಕೆ.ವಿ.ಸುಬ್ಬಣ್ಣ ಸಿಕ್ಕರು. ಆಗ ಗೋಪಾಲಕೃಷ್ಣ ಅಡಿಗರು ಸಂಪಾದಿಸುತ್ತಿದ್ದ ಸಾಕ್ಷಿ ಹಲವು ಕಾರಣಗಳಿಂದ ಸ್ಥಗಿತಗೊಂಡಿತ್ತು. ಗಂಭೀರ ಸಾಹಿತ್ಯದ ಅತ್ಯುತ್ತಮ ನಿಯತಕಾಲಿಕವಾಗಿದ್ದ ಸಾಕ್ಷಿಯನ್ನು ಮತ್ತೆ ಹೊರತರುವುದು ಸುಬ್ಬಣ್ಣನವರ ಅಪೇಕ್ಷೆಯಾಗಿತ್ತು. ದೊರಂಗೌ ಅವರನ್ನು ಕಂಡ ಸುಬ್ಬಣ್ಣ ತಮಗಾಗಿ ಸಾಕ್ಷಿಯ ಕೆಲಸ ಮಾಡಿಕೊಡಲು ಕೇಳಿಕೊಂಡರು. ಅಂದರೆ ಸಾಕ್ಷಿಯನ್ನು ಪುನಃ ತರುವುದಾಗಿಯೂ ಅಡಿಗರೇ ಅದರ ಸಂಪಾದಕೀಯ ಕೆಲಸ ನೋಡಿಕೊಳ್ಳುವುದಾಗಿಯೂ ಹೇಳಿದ ಸುಬ್ಬಣ್ಣ ಅದರ ಚಂದಾದಾರರನ್ನು ದೊರಂಗೌ ಥರದ ಉತ್ಸಾಹಿ ಯುವಕರು ಮಾಡಿಕೊಡಬೇಕೆಂದು ಕೇಳಿಕೊಂಡರು.

ವಾರ್ಷಿಕ ಚಂದಾ 12 ರೂ.ಗಳಲ್ಲಿ ಎರಡು ರೂಪಾಯಿಗಳನ್ನು ಇಟ್ಟುಕೊಂಡು ಉಳಿದದ್ದನ್ನು ಕಳಿಸಬೇಕೆಂದು ಸುಬ್ಬಣ್ಣ ಹೇಳಿದಾಗ ದೊರಂಗೌ ಅವರಿಗೆ ಹೊಸಬಗೆಯ ಆದಾಯದ ಸೂಚನೆಯೂ ಸಿಕ್ಕಂತಾಯಿತು. ಆ ಕಾಲದಲ್ಲಿ ಎರಡು ರೂಪಾಯಿಗೆ ಒಳ್ಳೆಯ ಬೆಲೆಯೂ ಇತ್ತು. ಅದರಲ್ಲೂ ಸಾಹಿತ್ಯದ ಸಂಚಿಕೆಯೊಂದಕ್ಕೆ ಚಂದಾದಾರರನ್ನಾಗಿಸುವುದು ಹಾಗೆಯೇ ಹಣ ಗಳಿಸುವುದು ಖುಷಿಯ ಸಂಗತಿಯೇ ಆಗಿತ್ತು. ಸಾಹಿತ್ಯದ ಸ್ನೇಹಿತರು, ಬ್ಯಾಂಕ್

ಉದ್ಯೋಗಿಗಳು, ಬೇರೆ ಬೇರೆ ಕಚೇರಿಗಳ ಸಾಹಿತ್ಯಾಸಕ್ತ ವರ್ಗವನ್ನು ಪ್ರತಿದಿನವೂ ಸಂಪರ್ಕಿಸಿ ಚಂದಾದಾರರನ್ನಾಗಿಸಿ ದೊರಂಗೌ ಸಾಕಷ್ಟು ದುಡಿಮೆಯನ್ನೂ ಮಾಡಿದರು. 'ನನ್ನ ಆ ಕಷ್ಟದ ದಿನಗಳಲ್ಲಿ ಸುಬ್ಬಣ್ಣ ನೀಡಿದ ಈ ಆಹ್ವಾನವನ್ನು ನಾನು ಮರೆಯುವಂತೆಯೇ ಇಲ್ಲ. ಬಹುಶಃ ನನ್ನ ಗಳಿಕೆಗೆ ಹಾಗೂ ನನಗಿದ್ದ ಅಪಾರ ಖರ್ಚಿಗೆ ಸುಬ್ಬಣ್ಣ ಕೊಟ್ಟ ಈ ಅವಕಾಶ ಬಹಳಷ್ಟು ನೆರವಾಯಿತು' ಎನ್ನುತ್ತಾರೆ ದೊರಂಗೌ.

ಹೀಗೆ ಕಲಿಯುತ್ತಲೇ ದುಡಿಮೆಯನ್ನು ರೂಢಿಸಿಕೊಂಡ ದೊರಂಗೌ ಬಿಎ ಆನರ್ಸ್ ಪ್ರಥಮದರ್ಜೆಯಲ್ಲಿ ಪಾಸು ಮಾಡಿದರು. ಮುಂದೆ ಓದಬೇಕೆಂಬ ಆಸೆ ಆದರೆ ಹಣದ ಮುಗ್ಗಟ್ಟು. ಈ ಸಮಯದಲ್ಲಿ ಅವರಿಗೆ ಸಿಕ್ಕವರು ನೆರವಾದರು ಕತೆಗಾರ ಈಶ್ವರಚಂದ್ರ.

ಈಶ್ವರಚಂದ್ರ ಸಾಕಷ್ಟು ಸ್ಥಿತಿವಂತ ಕುಟುಂಬದಿಂದಲೇ ಬಂದವರು. ಅಲ್ಲದೆ ಒಳ್ಳೆಯ ಉದ್ಯೋಗವೂ ಅವರಿಗಿತ್ತು. ಇಬ್ಬರೂ ಸಾಹಿತ್ಯದ ಮಾತಿನ ನಡುವೆ ಮುಂದಿನ ಓದಿನ ವಿಚಾರವೂ ಮಧ್ಯೆ ಬಂತು. ತಮಗೆ ಓದುವ ಆಸೆ ಇದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಸಾಧ್ಯವಾಗದ ಕಾರಣ ತಾವು ಮುಂದೆ ಓದುವುದಿಲ್ಲ, ಅಲ್ಲದೆ ತಮ್ಮ, ತಂಗಿಯರ ಓದು, ಮದುವೆ ಇತ್ಯಾದಿಗಳೆಲ್ಲ ಇರುವುದರಿಂದ ತಾವು ಓದುವುದು ಸಾಧ್ಯವಿಲ್ಲ ಎಂದು ನಿರಾಸೆಯ ಮಾತುಗಳನ್ನಾಡಿದರು. ಈಶ್ವರಚಂದ್ರ ಬಿಡಲಿಲ್ಲ. ದೊರಂಗೌ ಎದುರು ಒಂದು ಆಹ್ವಾನ ನೀಡಿದರು. ಅದರಂತೆ ತಾವು ಓದಿನ ಖರ್ಚು ನೀಡುವುದಾಗಿಯೂ ಉಳಿದ ವಿಚಾರಗಳಿಗೆ ಸಂಬಳವನ್ನು ಆಧರಿಸಬೇಕೆಂದು ಹೇಳಿದರು.

ದೊರಂಗೌ ಅವರಿಗೆ ಕತ್ತಲಲ್ಲಿ ಒಂದು ಬೆಳಕಿನ ಕಿರಣ ಗೋಚರವಾದಂತಾಯಿತು. ಅವರಿಗಿದ್ದುದು ಕಾಲೇಜಿನ ಶುಲ್ಕ, ಪಠ್ಯಪುಸ್ತಕಗಳು, ಕಾಲೇಜಿಗೆ ಹೋಗಿಬರುವ ಖರ್ಚುಗಳು. ಕೊನೆಗೂ ಈಶ್ವರಚಂದ್ರ ಈ ಒಪ್ಪಂದಕ್ಕೆ ಗೌಡರನ್ನು ಒಪ್ಪಿಸಿಯೇಬಿಟ್ಟರು. ಪ್ರತಿತಿಂಗಳು 25 ನೇ ತಾರೀಖಿನಿಂದ 30ರೊಳಗೆ ದೊರಂಗೌ ಹೆಸರಿಗೆ ಈಶ್ವರಚಂದ್ರರ ಚೆಕ್ ಬರುತ್ತಿತ್ತು. ಎಂಎ ಮುಗಿಸಿದ ನಂತರ ಈ ಹಣವನ್ನು ಪೂರ್ತಿಯಾಗಿ ದೊರಂಗೌ ಚುಕ್ತಾ ಮಾಡಿದರಾದರೂ ಆ ಸಂಕಷ್ಟದ ಸಮಯದಲ್ಲಿ ''ಅಣ್ಣ'' ಈಶ್ವರಚಂದ್ರ ಮಾಡಿದ ಮಹತ್ತರ ಉಪಕಾರಕ್ಕೆ ತಾವೆಂದೂ ಪ್ರತಿಯಾದ ಬೆಲೆ ಕಟ್ಟಲು ಸಾಧ್ಯವಿಲ್ಲ ಎಂದು ಈಗಲೂ ಹೇಳುತ್ತಾರೆ.

ಎಸ್‌ಎಲ್‌ಎನ್ ಕಾಲೇಜಿನಲ್ಲಿ ಉಪನ್ಯಾಸಕ ಕೆಲಸ ಸಿಕ್ಕಾಗ ಮೊದಲು ಹಗಲು ಕಾಲೇಜಿಗೆ ಅಧ್ಯಾಪಕರಾದರು. ನಂತರ ಅವರನ್ನು ಕಾಲೇಜಿಗೆ ಬದಲಿಸಲಾಯಿತು. ಮತ್ತೆ ದೊರಂಗೌ ಅವರಿಗೆ ಹಗಲು ಹೊತ್ತನ್ನು ನಷ್ಟ ಮಾಡಬಾರದು ಎಂಬ ಪ್ರಜ್ಞೆ ಕಾಡತೊಡಗಿತು. ಹಾಗಾಗಿ ಬಿಎಸ್ ಕಮ್ಯುನಿಕೇಷನ್ ಸೇರಿಕೊಂಡರು. ಪತ್ರಿಕೋದ್ಯಮದಲ್ಲಿ ಮೊದಲೇ ಆಸಕ್ತಿ ಇದ್ದ ಹಾಗೂ

ಹೈಸ್ಕೂಲು ಜೀವನದಿಂದ ಇಲ್ಲಿಯವರೆಗೂ ಪತ್ರಿಕೆಗಳಿಗೆ ನಿರಂತರವಾಗಿ ಬರೆಯುತ್ತಲೇ ಇದ್ದ ದೊರಂಗೌ ಪತ್ರಿಕೋದ್ಯಮದ ವಿದ್ಯಾರ್ಥಿಯಾದರು.

ಆ ಸಂದರ್ಭದಲ್ಲೆ ಅವರು ಬರೆದ "ಭಾರತೀಯರಿಗಲ್ಲ ಕ್ರಿಕೆಟ್" ಎಂಬ ಪ್ರಬಂಧ ಬಹು ಜನಪ್ರಿಯವಾಯಿತು. ಬಿಎಸ್ ಕಮ್ಯುನಿಕೇಷನ್ ಪದವಿ ಮುಗಿಸುವ ಸಂದರ್ಭದಲ್ಲಿ ಪ್ರಜಾವಾಣಿಯಲ್ಲಿ ಕೆಲ ಕಾಲ ಇಂಟರ್ನ್‌ಶಿಪ್ ಮಾಡಬೇಕಾಗಿ ಬಂತು. ಆಗ ಜೆಪಿ ಚಳುವಳಿಯ ಸಮಯ. ದೊರಂಗೌ ಅವರಿಗೆ ಪತ್ರಿಕೆಯ ಸಂಪಾದಕರು, ಬೆಂಗಳೂರಿಗೆ ಬಂದ ಜೆಪಿಯವರ ಭಾಷಣದ ವರದಿ ಮಾಡಲು ತಿಳಿಸಿದರು. ಉತ್ತಮ ವರದಿಗಾರನಾಗಿ ಕೆಲಸ ಮಾಡಿದ ಅನುಭವ ದೊರಂಗೌ ಅವರಿಗೆ ಆದದ್ದು ಹಾಗೆ.

ಅದಕ್ಕೂ ಮುಂಚೆ ತುಮಕೂರಿನಲ್ಲಿ ಗೆಳೆಯರ ಜೊತೆ ಸೇರಿ ಅವರು ಒಂದು ಪತ್ರಿಕೆ ನಡೆಸಿದ್ದುಂಟು. ಬೃಂದಾವನ ಎಂಬ ಪತ್ರಿಕೆಯನ್ನು ಅವರ ಗೆಳೆಯರೆಲ್ಲ ಸೇರಿ ಆರಂಭಿಸಿದರು. ಬರೀ ವಿದ್ಯಾರ್ಥಿಗಳೇ ನಿರ್ವಹಿಸುತ್ತಿದ್ದ ಆ ಪತ್ರಿಕೆಯನ್ನು ಆರಂಭಿಸಿದವರು ಸ್ವಾಮಿ ವಿವೇಕಾನಂದ ಎಂಬ ಸ್ನೇಹಿತರು. ತಂದೆ ನೀಡಿದ ಸ್ವಲ್ಪ ಹಣವನ್ನು ಪತ್ರಿಕೆಯ ಮೇಲೆ ಹಾಕಿದ ವಿವೇಕಾನಂದರ ಸಾಹಸಕ್ಕೆ ಹೆಗಲಾದವರು ದೊರಂಗೌ. ಜೊತೆಗಿದ್ದವರು ಲೋಹಿತಾಶ್ವ, ತಾನಂ ಕುಮಾರಸ್ವಾಮಿ, ಜಯದೇವಪ್ಪ ಇತ್ಯಾದಿ ಮಿತ್ರರು.

ಪತ್ರಿಕೆ ತುಂಬಾ ಚೆನ್ನಾಗಿ ಬಂತು. ಟ್ಯಾಬ್ಲಾಯ್ಡ್ ಆಕಾರದ ಬೃಂದಾವನದಲ್ಲಿ ದೊರಂಗೌ ಅವರೂ ಬಹುತೇಕ ಬರೆಯುತ್ತಿದ್ದರು. ಮನುಜ, ದೊರಂಗೌ, ಅಗಸ್ತ್ಯ ಇತ್ಯಾದಿ ಕಾವ್ಯನಾಮ ಗಳೆಲ್ಲ ರಾರಾಜಿಸಿದ್ದು ಆಗಲೇ. ಆದರೆ ಹಣ ಸಂಗ್ರಹದ ಕೊರತೆಯಿಂದಾಗಿ ಐದೇ ಸಂಚಿಕೆಗೆ ಇದ್ದ ಹಣವೆಲ್ಲ ಖಾಲಿಯಾಗಿ ಬೃಂದಾವನದ ಆರನೇ ಸಂಚಿಕೆ ಬರಲೇ ಇಲ್ಲ.

## ಮದುವೆಯ ಈ ಬಂಧ

ಆನರ್ಸ್ ಓದುವ ಈ ಸಮಯದಲ್ಲೇ ದೊರಂಗೌ ಪ್ರೇಮದ ಬಂಧನಕ್ಕೆ ಸಿಲುಕಿದ್ದು. ವಿಚಾರ ಸಂಕಿರಣದಲ್ಲಿ ಭಾಗವಹಿಸುತ್ತಿದ್ದ ದೊರಂಗೌ ಅವರಿಗೆ ಹಾಗೆಯೇ ಸಾಹಿತ್ಯದ ವಿದ್ಯಾರ್ಥಿನಿಯಾಗಿ ಪರಿಚಯವಾದವರು ರಾಜೇಶ್ವರಿ. ದೊರಂಗೌ ಅವರ ಲೇಖನಗಳು, ಕವನಗಳು, ಪ್ರಬಂಧಗಳು, ಕತೆಗಳು ಇವುಗಳನ್ನು ತಪ್ಪದೇ ಓದುತ್ತಿದ್ದ ರಾಜೇಶ್ವರಿ ಆ ಕುರಿತು ದೊರಂಗೌ ಸಿಕ್ಕಾಗಲೆಲ್ಲ ಪ್ರಸ್ತಾಪಿಸುತ್ತಿದ್ದರು. ಅವರಿಬ್ಬರ ನಡುವೆ ಸಾಹಿತ್ಯದ ಚರ್ಚೆಯೂ ನಡೆಯತೊಡಗಿತ್ತು. ಅಲ್ಲದೆ ದೊರಂಗೌ ಅವರ ಸಾಹಿತ್ಯದ ಕಟ್ಟಾ ಅಭಿಮಾನಿಯಾಗಿದ್ದರು ರಾಜೇಶ್ವರಿ. ಇಬ್ಬರೂ ಸಾಹಿತ್ಯಕವಾಗಿ ಮಾತನಾಡುವುದರಲ್ಲಿ ಚತುರರು. ಅಲ್ಲದೆ ಚರ್ಚಾ ಸ್ಪರ್ಧೆಯಲ್ಲಿ ದೊರಂಗೌ ಸೆಂಟ್ರಲ್ ಕಾಲೇಜನ್ನು ಪ್ರತಿನಿಧಿಸಿದರೆ, ರಾಜೇಶ್ವರಿ ಮಹಾರಾಣಿ ಕಾಲೇಜಿನ ಪ್ರತಿನಿಧಿಯಾಗಿದ್ದರು. ಹಾಗಾಗಿ ಯಾವುದೇ ಅಂತರ ಕಾಲೇಜು ಚರ್ಚಾಸ್ಪರ್ಧೆ

ನಡೆದರೂ ಇವರಿಬ್ಬರೂ ಪರಸ್ಪರರನ್ನು ಭೇಟಿಯಾಗುತ್ತಿದ್ದರು. ಇಬ್ಬರ ನಡುವೆಯೂ ಪರಸ್ಪರ ಪ್ರೀತಿ ಹಾಗೂ ಗೌರವವಿತ್ತು. ಆದರೆ ಸುಮಾರು ಹತ್ತಾರು ತಿಂಗಳು ಆ ಬಗ್ಗೆ ಇಬ್ಬರೂ ಪ್ರಸ್ತಾಪ ಮಾಡಿರಲಿಲ್ಲ. ಆದರೆ ಅವರಿಬ್ಬರಿಗೂ ಇದೊಂದು ಅವ್ಯಕ್ತವಾದ ಪ್ರೇಮಗಾಥೆ ಎಂಬುದು ಅರಿವಾಗಿತ್ತು.

ದೊರಂಗೌ ಅವರಿಗೆ ಒಂದು ಭಯವಿತ್ತು. ಇದು ಭಯ ಎನ್ನುವುದಕ್ಕಿಂತಲೂ ಒಂದು ಬಗೆಯ ಆತಂಕ. ರಾತ್ರಿಯೆಲ್ಲಾ ಆರ್‌ಎಂಎಸ್‌ನಲ್ಲಿ ಕೆಲಸ, ಬೆಳಗಾದರೆ ಕಾಲೇಜು. ಈ ಒತ್ತಡದಲ್ಲಿ ತಾವು ಪ್ರೇಮಿಸುವುದಾದರೆ ಆಕೆಗೆ ಸರಿಯಾಗಿ ನ್ಯಾಯ ಒದಗಿಸಲು ಸಾಧ್ಯವೇ? ಅಲ್ಲದೆ ಆಕೆಯ ಹಲವು ಆಸಕ್ತಿಗಳಿಗೆ ತಾವು ಪೂರಕವಾಗಿ ಪ್ರತಿಸ್ಪಂದಿಸುವುದು ಸಾಧ್ಯವೇ? ಇಂಥ ಹಲವು ಪ್ರಶ್ನೆಗಳು ಅವರನ್ನು ಕಾಡುತ್ತಿದ್ದವು. ಆದರೂ ಇಬ್ಬರ ನಡುವೆ ಬಿಡಿಸಲಾಗದ ಬಂಧನವೊಂದು ಭದ್ರವಾಗಿ ಬೆಸೆಯುತ್ತಲೇ ಇತ್ತು. ಒಮ್ಮೆ ರಾಜೇಶ್ವರಿಯವರು 'ನಾನೇನಾದರೂ ಈ ಜನ್ಮದಲ್ಲಿ ಮದುವೆಯಾಗುವುದಾದರೆ ಅದು ನಿಮ್ಮನ್ನೆ ಎಂದೂ ಹೇಳಿದ್ದರು.

ಆದರೆ ಈ ಮಾತುಗಳು ಗಂಭೀರವಾಗಿದ್ದರೂ ತಮ್ಮ ಆತಂಕವನ್ನು ದೊರಂಗೌ ಅವರೆದುರು ಮಂಡಿಸಿದ್ದರು. ತಮ್ಮ ಅಸಹಾಯಕ ಸ್ಥಿತಿಯನ್ನು ಬಣ್ಣಿಸಿದ್ದರು. ತಮ್ಮ ಕೆಲಸ, ಕಾಲೇಜು, ಬೇರೆ ಬೇರೆ ಒತ್ತಡಗಳ ನಡುವೆ ಮದುವೆಯ ಬಗ್ಗೆ ಯೋಚಿಸಲೂ ಪುರುಸೊತ್ತು ಸಿಗುತ್ತಿಲ್ಲ ಎಂಬ ನಿಜವಾದ ಸಮಸ್ಯೆಯನ್ನು ಹೇಳಿಕೊಂಡಿದ್ದರು. ಆದರೆ ಇವೆಲ್ಲ ಪ್ರೇಮವನ್ನು ದೂರ ಮಾಡಲು ಸಾಧ್ಯವಿಲ್ಲ ಎಂಬ ಕಟು ಸತ್ಯ ದೊರಂಗೌ ಅವರಿಗೂ ಸ್ಪಷ್ಟವಾಗಿ ತಿಳಿದಿತ್ತು.

ಒಂದು ರಾತ್ರಿ ಆರ್‌ಎಂಎಸ್ ಕಚೇರಿಯಲ್ಲಿ ಕೆಲಸ ಮಾಡುತ್ತಾ ಕುಳಿತಿದ್ದಾಗ ಕಚೇರಿಯ ಜವಾನ ಬಂದು ಯಾರೋ ಹೆಂಗಸರು ತಮ್ಮನ್ನು ನೋಡಲು ಬಂದಿದ್ದಾರೆ ಎಂದ. ಹೋಗಿ ನೋಡಿದರೆ ರಾಜೇಶ್ವರಿ! ಈ ಅಪರಾತ್ರಿಯಲ್ಲಿ ಬಂದ ಕಾರಣವಾದರೂ ಏನೆಂದು ಕೇಳಿದರೆ, ರಾಜೇಶ್ವರಿಯವರು, ಮನೆಯಲ್ಲಾದ ಅಲ್ಲೋಲ ಕಲ್ಲೋಲವನ್ನು ವಿವರಿಸಿದರು.

ರಾಜೇಶ್ವರಿಯವರ ಮಾವ ಡಾಕ್ಟರ್ ಕೃಷ್ಣಮೂರ್ತಿ. ಅವರಿಗೆ ಅದಾಗಲೇ ತಮ್ಮ ತಂಗಿಯ ಪುತ್ರಿ ಬೇರೆ ಜಾತಿಯ ಹುಡುಗನೊಬ್ಬನೊಂದಿಗೆ ಪ್ರೇಮ ಪ್ರಕರಣದಲ್ಲಿ ಸಿಲುಕಿದ್ದಾರೆ ಎಂಬ ಸುದ್ದಿ ತಿಳಿದಿತ್ತು. ಅತ್ಯಂತ ಕಟ್ಟುನಿಟ್ಟಿನ ಹಾಗೂ ಸಂಪ್ರದಾಯಸ್ಥರಾಗಿದ್ದ ಅವರು ಮರು ಮಾತಾಡದೆ ತಂಗಿಯ ಮಗಳನ್ನು ಈ ವಿಚಾರ ಕೇಳಿದರು. ರಾಜೇಶ್ವರಿ ಅವರು ಎಲ್ಲಾ ವಿವರಿಸುವ ಮುನ್ನವೇ ಅವರಿಗೆಲ್ಲಾ ಅರ್ಥವಾಗಿತ್ತು. ಸಂಬಂಧಗಳು ಪೆಡುಸಾದವು. ವಿಷಮ ಘಳಿಗೆಗಳು ಅವು!

ಬಹುದೊಡ್ಡ ಸಮಸ್ಯೆಯೊಂದು ಅಪರಾತ್ರಿಯಲ್ಲಿ ಎದುರಾದಂತಾಗಿತ್ತು. ಕಚೇರಿಯ

ಮುಖ್ಯಸ್ಥರಲ್ಲಿ ತಮ್ಮ ಕಷ್ಟವನ್ನು ತೋಡಿಕೊಂಡ ದೊರಂಗೌ ಅನಾರೋಗ್ಯದ ಕಾರಣ ನೀಡಿ ರಜೆ ಹಾಕಿ ರಾತ್ರೋರಾತ್ರಿ ಗೆಳೆಯರಾದ ಚಿ.ಶ್ರೀನಿವಾಸರಾಜು ಅವರ ಮನೆಗೆ ಹೋದರು. ಮೂವರೂ ಕೂಡಿ ಮುಂದೇನು ಮಾಡಬೇಕೆಂದು ಚರ್ಚೆ ಮಾಡಿದರು. ಶ್ರೀನಿವಾಸರಾಜು ಕೂಡಲೇ ಅವರಿಬ್ಬರನ್ನು ಕರೆದುಕೊಂಡು ಬಸವನಗುಡಿಯ ಒಬ್ಬರ ಮನೆಗೆ ಬಂದರು. ಅದು ಟಿ.ಎಸ್.ಸ್ವಾಮಿಯವರ ಮನೆ. 'ಈ ಮನೆಯಲ್ಲಿ ಸದ್ಯಕ್ಕೆ ನಿಮ್ಮ ರಾಜೇಶ್ವರಿಯವರು ಇರಲಿ. ನಿಮ್ಮ ಕಷ್ಟಗಳೆಲ್ಲ ಕರಗಿ ನೀವಿಬ್ಬರೂ ನಿರ್ಧಾರ ಮಾಡಿದಾಗ ಮದುವೆಯ ವಿಚಾರ ಯೋಚಿಸೋಣ. ಅಲ್ಲಿಯವರೆಗೆ ನೀವೂ ಅವರೂ ನಿಮ್ಮ ನಿಮ್ಮ ವಿದ್ಯಾಭ್ಯಾಸದ ಕಡೆ ಗಮನ ಕೊಡಿ. ಇನ್ನುಮುಂದೆ ರಾಜೇಶ್ವರಿ ಈ ಮನೆಯ ಸಾಕುಮಗಳು' ಎಂದರು ಶ್ರೀನಿವಾಸರಾಜು. ಬಹುದೊಡ್ಡ ಭಾರವನ್ನು ದೊರಂಗೌ ಹೆಗಲಿನಿಂದ ಇಳಿಸಿದ್ದರು.

ಹೆಚ್ಚುಕಡಿಮೆ ಒಂದು ತಿಂಗಳು ಕಳೆಯಿತು. ಕಡೆಯಪಕ್ಷ ದೊರಂಗೌ ಮನೆಯಲ್ಲಾದರೂ ಈ ಬಗ್ಗೆ ಮಾತನಾಡಿ ಒಂದು ನಿರ್ಧಾರಕ್ಕೆ ಬರಬಹುದೆಂದು ಗೆಳೆಯರೆಲ್ಲ ತೀರ್ಮಾನಿಸಿದರು. ಆದರೆ ದೊರಂಗೌ ಅವರಿಗೆ ಒಂದು ವಿಚಾರ ಖಾತ್ರಿ ಇತ್ತು. ತಮ್ಮ ತಂದೆ ಏನೇ ಆದರೂ ಈ ಅಂತರಜಾತಿಯ ಮದುವೆಗೆ ಖಂಡಿತ ಒಪ್ಪಲಾರರು ಎಂಬುದು. ಯಾಕೆಂದರೆ ದೊರಂಗೌ ಅವರ ತಂದೆ ಸಾಹಿತ್ಯ, ಸಂಗೀತ ಇತ್ಯಾದಿಗಳ ವಿಚಾರದಲ್ಲಿ ಎಷ್ಟೇ ಪ್ರಗತಿಪರರಾಗಿದ್ದರೂ ಮದುವೆಯ ವಿಚಾರದಲ್ಲಿ, ಜಾತಿಯ ವಿಚಾರದಲ್ಲಿ ವಿಶಾಲವಾಗಿ ಯೋಚಿಸುವವರಾಗಿರಲಿಲ್ಲ. ಬಹುಶಃ ಅವರು ಬೆಳೆದ ಪರಿಸರವೇ ಹಾಗಿತ್ತು.

ಆದರೂ ತಾವು ಪ್ರಯತ್ನಿಸದೆ ಬಿಡುವುದಿಲ್ಲವೆಂದು ಎಸ್.ಜಿ. ಸಿದ್ಧರಾಮಯ್ಯ ರಾಜಿಕಬೂಲಿಗಾಗಿ ದೊರಂಗೌ ತಂದೆಯ ಬಳಿ ತೆರಳಿದರು. ಆದರೆ ಈ ವಿಚಾರ ಎತ್ತುತ್ತಲೇ ದೊರಂಗೌ ಅವರ ತಂದೆ, ಎಸ್.ಜಿ. ಸಿದ್ಧರಾಮಯ್ಯನವರೇ ತಬ್ಬಿಬ್ಬಾಗುವಂತೆ ಬೈದು ಕಳಿಸಿದರು. ಆದರೆ ಎಸ್.ಜಿ. ಸಿದ್ಧರಾಮಯ್ಯ ಬರಿಗೈಯಲ್ಲಿ ವಾಪಾಸಾಗುತ್ತಿದ್ದ ಸಂದರ್ಭದಲ್ಲಿ ಹಿತ್ತಲಿನಿಂದ ಬಂದ ದೊರಂಗೌ ತಾಯಿ 'ಹೇಗಾದರೂ ಮಾಡಿ ನನ್ನ ಮಗನನ್ನು ಕಾಪಾಡಿ' ಎಂದು ಅಳಲ ತೋಡಿಕೊಂಡು ಆಶೀರ್ವಾದಮಾಡಿ ಕಳಿಸಿದರಂತೆ.

ಇನ್ನು ತಡ ಮಾಡುವುದರಲ್ಲಿ ಅರ್ಥವಿಲ್ಲ ಎಂದು ದೊರಂಗೌ ಅವರ ಗೆಳೆಯರ ಗುಂಪು ನಿರ್ಧರಿಸಿತು. ಅದಾಗಲೇ ದೊರಂಗೌ ಸಂಪ್ರದಾಯದ ವಿರುದ್ಧ, ವಿಚಾರವಾದದ ಪರವಾಗಿ ಭಾರೀ ಆದರ್ಶಗಳನ್ನು ಹೊತ್ತಿದ್ದ ಪ್ರಖರ ಮಾನವತಾವಾದಿ. ಬೆಂಗಳೂರಿನ ಆರ್ಯ ಸಮಾಜದಲ್ಲಿ ಯಾವ ದಿನ ಖಾಲಿ ಇದೆಯೋ ಆ ದಿನವೇ ಮದುವೆಯ ದಿನವೆಂದು ಎಲ್ಲರೂ ನಿರ್ಧರಿಸಿದರು. ಹಾಗಾಗಿ 1971 ರ ಅಕ್ಟೋಬರ್ 3 ನೇ ತಾರೀಖು ದೊರಂಗೌ ಅವರ ಮದುವೆ ಆರ್ಯ ಸಮಾಜದಲ್ಲಿ ನಡೆಯಿತು.

ಮದುವೆಗೆ ಬಂದವರೆಲ್ಲ ಬೆಂಗಳೂರಿನ ವಿಶ್ವವಿದ್ಯಾಲಯದ ಕಾಲೇಜು ಮೇಷ್ಟರುಗಳು. ಬಹುತೇಕ ಎಲ್ಲರೂ ಕನ್ನಡ ಮೇಷ್ಟರುಗಳೇ. ಒಬ್ಬರೇ ಒಬ್ಬ ಇಂಗ್ಲಿಷ್ ಮೇಷ್ಟರೆಂದರೆ ಪಿ.ಲಂಕೇಶ್. ಮದುವೆ ಕೂಡ ವಿಚಿತ್ರವಾಗೇ ಜರುಗಿತು. ಜಿ.ಶ್ರೀನಿವಾಸರಾಜು ಹಾಗೂ ಎಚ್.ಎಸ್. ರಾಘವೇಂದ್ರರಾವ್ ತಾಳಿಯನ್ನು ತಂದುಕೊಟ್ಟರೆ, ಗೆಳೆಯ ಎಸ್.ಜಿ. ಸಿದ್ಧರಾಮಯ್ಯನವರು ಹೊಸ ಬಟ್ಟೆ ಬರೆ ತಂದಿದ್ದರು. ಹೀಗೆ ಕನ್ನಡ ಸಾಹಿತ್ಯಲೋಕದ ವಿಶೇಷ ಮದುವೆಯಾಗಿ ದೊರಂಗೌ ಮದುವೆ ನಡೆದೇಹೋಯಿತು. ಆಗ ಪಿ.ಲಂಕೇಶ್ ಅಚ್ಚ ಹೊಸ ಪಾರ್ಕರ್ ಪೆನ್ನೊಂದನ್ನು ಶಿಷ್ಯನಿಗೆ ಕೊಡುಗೆಯಾಗಿ ನೀಡಿದರು. 'ಎಲ್ಲ ಒಳ್ಳೆದಾಗುತ್ತೆ ಕಣಯ್ಯ. ನೀನು ದೊಡ್ಡ ರೈಟರ್ ಆಗ್ತೀಯಾ. ಬರಹಗಾರನಿಗೆ ಪೆನ್ನಲ್ಲದೆ ಇನ್ನೇನು ಕೊಡ್ಲಿ' ಎಂದು ಹಾರೈಸಿ ಉಡುಗೊರೆ ನೀಡಿದರು.

ಒಂದು ಕಡೆ ಅಪ್ಪನಿಗೂ ಮಿಗಿಲಾದ ತಂದೆ ಸಮಾನರಾದ ಮಾವ ಹಾಗೂ ಅವರ ಮಗಳು ಇನ್ನೊಂದೆಡೆ ಅಪ್ಪ-ಮಗ ಸಂಪೂರ್ಣವಾಗಿ ಬೇರೆ ಬೇರೆಯಾದಂತಾಯಿತು. ಬಹಳ ವರ್ಷಗಳ ತನಕ ಈ ಬೃಹತ್ ಗೋಡೆ ಹಾಗೆಯೇ ಸ್ಥಿರವಾಗಿ ನಿಂತಿತ್ತು. ದೊರಂಗೌ ಅವರಿಗೆ ಭರತ್ ಹುಟ್ಟಿದ ಕೆಲವು ದಿನಗಳಲ್ಲಿ ಈ ಗೋಡೆಯನ್ನು ಕೆಡವಬೇಕೆಂದು ದೊರಂಗೌ ಅವರ ತಮ್ಮ ನಾಗರಾಜ್ ಬಹಳಷ್ಟು ಯತ್ನಿಸಿದರು. ಕಡೆಗೆ ಮೊಮ್ಮಗನ ಮುಖವನ್ನು ನೋಡಿಯಾದರೂ ತಂದೆ ಬದಲಾಗಬಹುದೆಂದು ನಿರ್ಧರಿಸಿ ಎರಡು ಕುಟುಂಬಗಳ ನಡುವೆ ಸೇತುವೆ ಬೆಸೆಯಲು ಭರತ್‌ನನ್ನು ಕರೆದುಕೊಂಡು ತಂದೆಯವರ ಬಳಿ ಹೋದರು.

ಆದರೆ ಬೆಳಗ್ಗೆ ಬೆಂಗಳೂರು ಬಿಟ್ಟವರು ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆಲ್ಲ ವಾಪಸ್ಸಾಗಿದ್ದರು. ಏನೆಂದು ಕೇಳಿದರೆ ತಂದೆ ಮೊಮ್ಮಗನನ್ನು ಮನೆಯ ಹೊಸ್ತಿಲು ದಾಟಲೂ ಬಿಟ್ಟಿರಲಿಲ್ಲ, ಮಗುವಿನ ಮುಖ ನೋಡಿದರೂ ಅವರ ಸಿಟ್ಟು ಕರಗಿರಲಿಲ್ಲ. ಬಹುಶಃ ದೊರಂಗೌ ಅವರಿಗೆ ಅತಿಯಾಗಿ ಘಾಸಿಗೊಳಿಸಿದ್ದು ಇದೇ ಸಂಗತಿ. ನೋವು, ಹತಾಶೆ, ಸಿಟ್ಟು ಅವಮಾನ ಇವೆಲ್ಲವನ್ನೂ ಹಾಡಾಗಿ, ಕವಿತೆಯಾಗಿ ಹೊರಹಾಕುವುದು ದೊರಂಗೌ ಜಾಯಮಾನ. ಈ ನೋವುಗಳೆಲ್ಲ 'ಪ್ರೀತಿ ಪ್ರಗಾಥ'ವಾಗಿ ಹರಿದಿತ್ತು. ಕನ್ನಡದಲ್ಲಿ ಛಂದೋಬದ್ಧವಾದ ಈ ಬಗೆಯ ನೀಳ್ಗವಿತೆಗಳು ನವೋದಯದ ನಂತರ ಅಪರೂಪವೆಂದೇ ಹೇಳಬೇಕು.

ನಂತರ ಅಪ್ಪ ಮಗನ ಭೇಟಿಯಾದದು ದೊರಂಗೌ ''ಪರಸಂಗದ ಗೆಂಡೆತಿಮ್ಮ'' ಚಿತ್ರದ ಅದ್ಭುತ ಹಾಡುಗಳು ಅತ್ಯಂತ ಜನಪ್ರಿಯತೆಯ ಶಿಖರವೇರಿ ಜನರ ಬಾಯಲ್ಲಿ ದೊರಂಗೌ ಬಗ್ಗೆ ಅಪಾರ ಮೆಚ್ಚುಗೆಯ ಮಾತುಗಳು ಪ್ರಕಟವಾದಾಗ. ಒಂದು ದಿನ ತಂದೆಯವರೆ ಹೇಳಿ ಕಳಿಸಿದರಂತೆ. 'ನೀನು ಬರೆದ ಹಾಡುಗಳು ತುಂಬಾ ಮೆಚ್ಚುಗೆಯಾಗಿವೆ. ಜನರೆಲ್ಲ ಮೆಚ್ಚುತ್ತಿದ್ದಾರೆ. ನನಗೊಮ್ಮೆ ಆ ಚಿತ್ರ ತೋರಿಸು' ಎಂದು ಹೇಳಿದಾಗ ದೊರಂಗೌ ದಂಪತಿಗಳು

ತಾವಾಗಿ ಹೋಗಿ ಅವರನ್ನು ಕರೆತಂದು ಅಲಂಕಾರ್ ಚಿತ್ರಮಂದಿರದಲ್ಲಿ ಚಿತ್ರವನ್ನು ತೋರಿಸಿದರಂತೆ. ಒಂದು ದಿನ ಮಗ ಸೊಸೆ ಮೊಮ್ಮಗನೊಂದಿಗೆ ಕಳೆದ ತಂದೆ ವಾಪಾಸು ಹೊರಟುಹೋದರು.

ಆದರೆ ತಂದೆ ಮಗನಿಗಾಗಿ ಹಲವು ಬಾರಿ ಮಮ್ಮಲ ಮರುಗಿದ್ದರಂತೆ. ಅದರಲ್ಲೂ ದೊರಂಗೌ ಅವರ ಪ್ರೀತಿ ಪ್ರಗಾಥ ಕವನ ಸಂಕಲನದ ಒಂದೊಂದು ಕವನವನ್ನೂ ಓದಿ 'ಅಯ್ಯೋ ನನ್ನ ಮಗ ಈ ಬಗೆಯ ಪಡಿಪಾಟಲು ಪಟ್ಟನೆ? ನಾನೆ ಇದಕ್ಕೆಲ್ಲ ಕಾರಣನಾದೆನೆ?' ಎಂದು ಹಲವರೆದುರು ಕಣ್ಣೀರಿಟ್ಟಿದ್ದರಂತೆ. ಆದರೆ ಅವರಿಗೆ ಈ ಜಾತಿಯ ಬಂಧನದ ವ್ಯಾಮೋಹವನ್ನು ಕಡೆಗೂ ತೊರೆಯಲಾಗಿರಲಿಲ್ಲ.

ಇತ್ತೀಚೆಗಷ್ಟೇ ದೊರಂಗೌ ವಿದೇಶಯಾತ್ರೆ ಹೊರಟಾಗ ತಮ್ಮ ಮದುವೆಯ ನೋಂದಾವಣಿ ಪತ್ರವನ್ನು ತೆಗೆದು ನೋಡಿದರೆ, ಅದರಲ್ಲಿ ಇದ್ದ ಸಾಕ್ಷಿಯ ಸಹಿಗಳು-ಜಿ.ಎಸ್.ಶಿವರುದ್ರಪ್ಪ ಹಂಪನಾ ಹಾಗೂ ಜಯದೇವ್ ಅವರದು!

## ಹೋರಾಟದ ಬದುಕು

ಒಂದು ಕಾಲದಲ್ಲಿ ಅಂದರೆ 70 ರ ದಶಕದಲ್ಲಿ ಎಡಪಂಥೀಯ ಧೋರಣೆಗೆ ಆಕರ್ಷಿತರಾಗದ ಯುವಕರೇ ಕಡಿಮೆ ಎನ್ನಬೇಕು. ಅದರಲ್ಲೂ ಸಾಹಿತ್ಯದ ವಿದ್ಯಾರ್ಥಿಗಳಂತೂ ಕಮ್ಯುನಿಸ್ಟ್ ಸಿದ್ಧಾಂತಗಳಿಗೆ ತಮ್ಮನ್ನು ತೆರೆದುಕೊಂಡಿದ್ದರು. ದೊರಂಗೌ ಅವರಿಗೂ ಕಮ್ಯುನಿಸ್ಟ್ ಸಿದ್ಧಾಂತ ಬದುಕಿನ ಅತ್ಯಂತ ಅಗತ್ಯದ ಸಿದ್ಧಾಂತದಂತೆ ಕಂಗೊಳಿಸಿತ್ತು.

ಆ ಕಾಲದಲ್ಲಿ ರಂಗಭೂಮಿ, ಸಾಹಿತ್ಯ, ಸಿನಿಮಾ ಮುಂತಾದ ಎಲ್ಲ ಕ್ಷೇತ್ರಗಳಲ್ಲೂ ಎಡಪಂಥೀಯ ವಿಚಾರವಾದವೇ ಬಹುಮನ್ನಣೆ ಪಡೆದಿತ್ತು. ಉತ್ತರ ಭಾರತದಿಂದ ಬಂದಿದ್ದ ಬಹುದೊಡ್ಡ ಮಾರ್ಕ್ಸ್‌ವಾದಿ ಭರತ್ ಜುಂಜನ್‌ವಾಲ ಅವರ ಪ್ರಭಾವ ಇಡೀ ಬೆಂಗಳೂರಿನ ಬಹಳಷ್ಟು ಕ್ಷೇತ್ರಗಳನ್ನು ವ್ಯಾಪಿಸಿತ್ತು. ಭರತ್ ಜುಂಜನ್‌ವಾಲ ಸ್ವತಃ ಕೈಗಾರಿಕೋದ್ಯಮಿಯ ಪುತ್ರನಾಗಿದ್ದರೂ ಸ್ಲಂಗಳ ಜನರ ಶೋಷಿತ ಬದುಕನ್ನು ಹಸನುಗೊಳಿಸಲು ಬದ್ಧ ಕಂಕಣರಾಗಿ ದುಡಿಯುತ್ತಿದ್ದರು.

ಅವರ ವಾಸ್ತವ್ಯ ಕೂಡ ಕೊಳೆಗೇರಿಗಳಲ್ಲೆ. ಅಲ್ಲಲ್ಲಿ ನಡೆಯುತ್ತಿದ್ದ ಎಡಪಂಥೀಯ ವಿಚಾರ ಸಂಕಿರಣಗಳಲ್ಲಿ ಭರತ್ ಜುಂಜನ್‌ವಾಲ ಅವರ ಭಾಷಣಗಳು ವಾಸ್ತವದ ನಗ್ನಸತ್ಯಗಳನ್ನು ತೆರೆದಿಡುತ್ತಿದ್ದವು. ಅಂದಿನ ಯುವಕರಿಗೆ ಆತ ತೀವ್ರವಾದಿ. ಫಯರ್‌ಬ್ರಾಂಡ್ ಎಂದೇ ಕರೆಸಿಕೊಳ್ಳುತ್ತಿದ್ದ ಭರತ್ ಜುಂಜನ್‌ವಾಲರ ಕೆಲಸಗಳೂ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದವು.

ಲಕ್ಕಸಂದ್ರದ ಸ್ಲಂವೊಂದರಲ್ಲಿ ಭರತ್ ವಾಸವಾಗಿದ್ದರು. 'ಕೊಳೆಗೇರಿಯ ಜನ ಕೂಡ ಈ ದೇಶದ ಪ್ರಜೆಗಳೇ. ಅವರಿಗೂ ಎಲ್ಲರಂತೆ ಸಾರ್ವಜನಿಕ ಸವಲತ್ತು ಪಡೆಯುವ ಹಕ್ಕಿದೆ. ಅವರಿಗೂ ಬೇರೆಯವರಂತೆ ದುಡಿಯುವ, ಗಳಿಸುವ ಅವಕಾಶವಿದೆ. ಆದರೆ ಈ ಸರ್ಕಾರದ ನಿರ್ಲಕ್ಷ್ಯದ ಧೋರಣೆಯಿಂದಾಗಿ ಕೊಳೆಗೇರಿಯ ಜನ ಶೋಷಿತರಾಗಿಯೇ ಉಳಿದಿದ್ದಾರೆ....' ಹೀಗೆ ಬೆಂಕಿಯ ಉಂಡೆಯಂತೆ ಮಾತುಗಳನ್ನು ಸ್ಫುರಿಸುತ್ತಿದ್ದ ಭರತ್ ನಿಜಕ್ಕೂ ವಾಸ್ತವದ ಚಿತ್ರಣವನ್ನು ತೆರೆದಿಡುತ್ತಿದ್ದರು.

ದೊರಂಗೌ ಕೂಡ ಅವರ ಮಾತುಗಳಿಗೆ, ಕಾರ್ಯವೈಖರಿಗೆ ಮರುಳಾಗಿದ್ದುದರಲ್ಲಿ ಅಚ್ಚರಿಯೇನಿಲ್ಲ. ಶೂದ್ರ ಶ್ರೀನಿವಾಸ್, ದೊರಂಗೌ, ಡಿ.ವಿ.ರಾಜಶೇಖರ್ ಮುಂತಾದವರು ಭರತ್ ಅವರ ಅಪ್ಪಟ ಅನುಯಾಯಿಯೇ ಆಗಿದ್ದರು. ಆಗ ದೊರಂಗೌ ಅವರಿಗೆ ಭರತ್ ವಹಿಸಿದ ಕೆಲಸವೆಂದರೆ ಕೊಳಗೇರಿಯ ಜನರನ್ನು ಸುಶಿಕ್ಷಿತರನ್ನಾಗಿ ಮಾಡುವುದು.

ಅದಾಗಲೇ ಸಂಸಾರ ಕಟ್ಟಿಕೊಂಡಿದ್ದ ದೊರಂಗೌ ಪಾಲಿಗೆ ಇನ್ನೊಂದು ಸಾಮಾಜಿಕ ಹೊರೆ ಬಿದ್ದಂತಾಯಿತು. ಕೆಲಸ ಮುಗಿಸಿದ ತಕ್ಷಣ ಕೊಳೆಗೇರಿಗಳಿಗೆ ಹೋಗಿ ಸಂಜೆ ಐದರಿಂದ ಎಂಟರವರೆಗೆ ಅಲ್ಲಿಯ ಮಕ್ಕಳಿಗೆ ಪಾಠ ಮಾಡುವುದು, ತಡವಾದರೆ ಅಲ್ಲಿಯೇ ಸಿಕ್ಕಿದ್ದನ್ನು ತಿಂದು ಮಲಗುವುದು.... ಇದು ದೊರಂಗೌ ದಿನಚರಿಯಾಯಿತು. ಹಲವು ಸಾರಿ ಪತ್ನಿ ರಾಜೇಶ್ವರಿಯವರು ಈ ಕುರಿತು ದೊರಂಗೌ ಅವರನ್ನು ಛೇಡಿಸಿದ್ದೂ ಇದೆ. ಆದರೆ ತಾವು ಈ ಸಮಾಜಕ್ಕೆ ಸೇರಿದ ಮೇಲೆ ಈ ಸಮಾಜದಿಂದ ಶೋಷಣೆಗೆ ಒಳಗಾದವರನ್ನು ಮೇಲೆತ್ತುವುದು, ಅವರಿಗೆ ಸಾಮಾಜಿಕ ನ್ಯಾಯ ಒದಗಿಸುವುದು ತಮ್ಮ ಕರ್ತವ್ಯ ಎಂದು ದೊರಂಗೌ ಆದರ್ಶದ ಮಾತುಗಳನ್ನು ಹೇಳಿ ಅವರ ಬಾಯಿ ಮುಚ್ಚಿಸಿದ್ದರು. ಆದರೆ ಕಾಲಕ್ರಮೇಣ ಸಮಾಜವನ್ನು ತಿದ್ದುವುದು ತಮ್ಮೊಬ್ಬರಿಂದ ಸಾಧ್ಯವೇ ಇಲ್ಲ ಎಂಬ ಸತ್ಯವು ದೊರಂಗೌ ಅರಿವಾಯಿತು. ಭರತ್ ಮತ್ತೆ ವಾಪಾಸ್ ಉತ್ತರ ಪ್ರದೇಶಕ್ಕೆ ಹೋಗಿ ತಮ್ಮ ತಂದೆಯ ಕಾರ್ಖಾನೆಯನ್ನು ನೋಡಿಕೊಳ್ಳತೊಡಗಿದರು.

## ಸಾಹಿತ್ಯಲೋಕದ ವಿವಾದ

ದೊರಂಗೌ ಕವಿತೆ ಕಟ್ಟುವುದೆಂದರೆ ಅದು ಹಾಡಿನ ಮೂಲಕವೇ. ಹಾಡಿಲ್ಲದೆ ಕವಿತೆಯಿಲ್ಲ ಎಂಬುದು ಅವರ ತರ್ಕ. ಹಾಡು ಎನ್ನುವುದು ಭೂಮಿಯ ಜೊತೆ ಸಂಬಂಧವಿರುವ ಕೆಲಸದ ಜೊತೆ ಒಡನಾಟವಿರುವ ಒಂದು ಜಾನಪದ ಕ್ರಿಯೆ. ಕವಿತೆ ಹುಟ್ಟುವುದೇ ಜಾನಪದದ ಮೂಲಕ ಎಂಬುದು ದೊರಂಗೌ ಅವರಿಗೆ ಬಾಲ್ಯದಿಂದಲೂ ತಿಳಿದುಬಂದ ಒಂದು ಸತ್ಯ. ಯಾಕೆಂದರೆ ಬೇಸಾಯದ ದಿನಗಳಲ್ಲಿ ನಾಟಿ ಕಾರ್ಯದ ಮಧ್ಯೆ ಹೆಂಗಸರು ಹಾಡುವ ಹಾಡು, ಕೂಲಿ ಕೆಲಸಕಾರರು ತಮ್ಮ ಶ್ರಮಜೀವನದ ನಡುವೆ ಉಲಿಯುವ ಸ್ವರ, ಕೆಲಸದ ಬೇಸರವನ್ನು

ನೀಗಿಸಲು ಶ್ರಮಿಕರು ಹಾಡಿಕೊಳ್ಳುವ ಕ್ರಮ ಇವೆಲ್ಲವೂ ಕವಿತೆಯ ಮೂಲಸ್ವರೂಪಗಳು. ಹಾಗಾಗಿ ಕವಿತೆಗೆ ಹಾಡಿನ ಗುಣವಿದ್ದರೆ ಅದರಲ್ಲಿ ತಪ್ಪೇನು?

ಆದರೆ ಆಗ ನವ್ಯದ ಪ್ರಖರ ಕಾಲ. ಹಾಡಿಸಿಕೊಂಡು ಹೋಗುವುದು ಕವಿತೆಯ ಗುಣವಲ್ಲ, ಕವಿತೆಗಿರಬೇಕಾದದ್ದು ಸಾಮಾಜಿಕ ಬದ್ಧತೆ ಮಾತ್ರ ಎಂಬ ಕಠೋರ ನಿಲುವು ನವ್ಯರದು. ಹಾಗಾಗಿ ಕಂಬಾರ, ದೊಡ್ಡರಂಗೇಗೌಡ ಮುಂತಾದ ಹಾಡುವ ಕವಿಗಳನ್ನು ಕಂಡರೆ ನವ್ಯರಿಗೆ ತುಸು ಅಲರ್ಜಿ. ಬಹಳಷ್ಟು ಕವಿಗೋಷ್ಠಿಗಳಲ್ಲಿ ಕಂಬಾರ ಮತ್ತು ದೊರಂಗೌ ಹಾಡಿಕೊಂಡೇ ಕವನ ವಾಚನ ಮಾಡುತ್ತಿದ್ದರು. ನವ್ಯರ ಕಠೋರ ನಿಯಮಾವಳಿಯನ್ನು ಪ್ರತಿಭಟಿಸುವ ಸಲುವಾಗಿಯೇ ತಾವು ಹಾಡುತ್ತೇವೆ ಎಂದೂ ಬಣ್ಣಿಸುತ್ತಿದ್ದರು.

'ಜಾನಪದ ಎನ್ನುವುದು ನನ್ನ ರಕ್ತದಿಂದ ಬಂದದ್ದು. ನನ್ನ ಹುಟ್ಟಿನ ನೆಲದಿಂದ, ಬೇಸಾಯದ ಮಣ್ಣಿನಿಂದ, ಕುರುಬರಹಳ್ಳಿಯ ಪರಿಸರದಿಂದ, ಅಲ್ಲಿನ ಶ್ರಮಿಕರ ಕೊರಳಿಂದ ನನಗೆ ಹಾಡುಗಾರಿಕೆ ಬಂದದ್ದು. ನನ್ನ ಬರವಣಿಗೆಯೂ ಹಾಡಿನ ಮುಖಾಂತರವೇ ಆರಂಭವಾದದ್ದು. ಇವತ್ತಿಗೂ ನಾನು ಹಾಡಿಕೊಂಡೇ ಬರೆಯುವುದು. ಅದರ ಲಯದಲ್ಲೇ ನನ್ನ ಪದಪುಂಜಗಳ ಜೋಡಣೆ ಆಗುವುದು. ಹಾಗಾಗಿ ನವ್ಯರು ಹಾಡುವ ಕವಿಗಳನ್ನು ಕವಿಗಳಲ್ಲ ಎಂದರೆ ನಾವು ಪ್ರತಿಭಟನೆಗಾಗಿಯಾದರೂ ಹಾಡುತ್ತಿದ್ದೆವು. ಸಾಹಿತ್ಯ ಸಮ್ಮೇಳನಗಳಲ್ಲಾಗಲಿ ಅಥವಾ ಬೇರಾವುದೇ ಕವಿಗೋಷ್ಠಿಗಳಲ್ಲಾಗಲಿ ನಾವು ಹಾಡದೆ ಪದ್ಯ ಓದುತ್ತಿರಲಿಲ್ಲ.' – ಇದು ಗೌಡರು ನಂಬಿರುವ ಸತ್ಯ.

ಒಮ್ಮೆ ಹೀಗಾಯಿತು. ಹಾಡುವ ಸ್ವರಗಳಿಗಾಗಿ ಪದ್ಯ ಬರೆಯುವ ಸುಗಮ ಸಂಗೀತ ಕವಿಗಳನ್ನು ಕವಿ ರಾಮಚಂದ್ರಶರ್ಮ ತುಸು ತೀಕ್ಷ್ಣವಾಗಿ ಹೀಗಳೆದರು. ನವ್ಯ ಪ್ರತಿನಿಧಿಯಂತಿದ್ದ ಶರ್ಮರಿಗೆ ಅಂದು ಕುವೆಂಪು ಕೂಡ ಕವಿಯಲ್ಲ ಎಂಬ ಧೋರಣೆ ತಳೆಯುವಷ್ಟು ಅವರ ವಾದ ಮುಂದುವರಿದಿತ್ತು. ಸಭೆಯಲ್ಲಿ ಕೂತಿದ್ದ ಹಲವರಿಗೆ ಈ ಕುರಿತು ಪ್ರತಿಭಟಿಸುವ ಮಾನಸಿಕ ಸ್ಥಿತಿ ಉಂಟಾಯಿತು. ಮುಖ್ಯವಾಗಿ ಸುಗಮ ಸಂಗೀತ ಅಥವಾ ಭಾವಗೀತೆ ಬರೆಯುವ ಕವಿಗಳು ಕವಿಗಳೇ ಅಲ್ಲ ಎಂದು ಶರ್ಮ ಠರಾವು ಪಾಸು ಮಾಡಿದರು.

ಅದಕ್ಕಿಂತ ಮುಖ್ಯವಾಗಿ ಕುವೆಂಪು ಅವರ ಬಗ್ಗೆ ಶರ್ಮರು ಹಗುರವಾಗಿ ಮಾತಾಡಿದ್ದು ದೊರಂಗೌ ಅವರನ್ನು ಬಲವಾಗಿ ಕೆರಳಿಸಿತ್ತು. 'ನನಗೆ ಅವಮಾನವಾದಾಗ, ಪ್ರತಿಭಟನೆಯ ದನಿ ನನ್ನೊಳಗೆ ಎದ್ದಾಗ ಅದು ಹಾಡಾಗಿ ಹೊರಡುತ್ತದೆ. ನಾನು ಹಳ್ಳಿಯ ಹುಡುಗ, ಹಾಡುವುದು, ಹಾಡುತ್ತಲೇ ಕವನ ಕಟ್ಟುವುದು ನನ್ನ ಜಾಯಮಾನ. ಹಾಗೆಂದ ಮಾತ್ರಕ್ಕೆ ಯಾವುದೋ ಸ್ವರಕ್ಕೆ ಹಾಡು ಕಟ್ಟುವ ಮನುಷ್ಯ ನಾನಲ್ಲ. ನಮ್ಮಲ್ಲೂ ಕೆಲವು ಸಂಸ್ಕಾರಗಳಿವೆ.

ಒಂದು ಪದ್ಯವೆಂದರೆ, ಅದಕ್ಕೊಂದು ಪ್ರತಿಮಾಬಂಧವಾದ ರಚನೆ ಇರಲೇಬೇಕು. ಅದಕ್ಕೆ ಕಾವ್ಯದ ಸಂಸರ್ಗ ಇರುವ ಪದಗಳು ಇರಲೇಬೇಕು. ಅಲ್ಲದೆ ನಾವು ಕಾವ್ಯವನ್ನು ಆಳವಾಗಿ ಅಭ್ಯಾಸ ಮಾಡಿರುವವರಾದ್ದರಿಂದ ಅದು ನಮ್ಮ ಎಚ್ಚರದ ಮಿತಿಯಲ್ಲಿ ರಚಿತವಾಗಿರುತ್ತದೆ. ಹಾಗಾಗಿ ಒಂದು ಧ್ವನಿಪೂರ್ಣವಾದ ಕವಿತೆಯನ್ನು ನಿರ್ಮಾಣ ಮಾಡಲು ತಕ್ಕ ಮನಸ್ಥಿತಿ ಬೇಕು, ಜಾಣ್ಮೆ ಬೇಕು' ಎಂಬುದು ದೊರಂಗೌ ಅನಿಸಿಕೆ. ಆದರೆ ಶರ್ಮ ಅವರಿಗೆಲ್ಲ ಜಾಟಿ ಏಟು ಕೊಡುವವರಂತೆಮಾತನಾಡಿದರು.

ಅವರ ಮಾತಿನಂತೆ ಕನ್ನಡದಲ್ಲಿ ಐವರು ದಾಸರಿದ್ದಾರೆ. ಅಂದರೆ ಇವರೆಲ್ಲ ಹರಿಕಥೆ ದಾಸರು ಎಂಬರ್ಥದಲ್ಲಿ ಶರ್ಮ ಛೇಡಿಸಿದ್ದರು. ಈ ದಾಸರು ಯಾರೆಂದರೆ ಲಕ್ಷ್ಮಿನಾರಾಯಣದಾಸ (ಭಟ್ಟ), ವೆಂಕಟೇಶದಾಸ (ಮೂರ್ತಿ), ರಂಗದಾಸ(ದೊರಂಗೌ), ವ್ಯಾಸದಾಸ (ರಾವ್), ಲಕ್ಷ್ಮಣದಾಸ (ರಾವ್). ಹೀಗೆ ಛೇಡಿಸಿದ ಶರ್ಮರ ಅಣಕು ಮಾತಿಗೆ ಅಂದು ದೊರಂಗೌ ತಮ್ಮ ಕವನ ವಾಚನದ ಸಂದರ್ಭದಲ್ಲಿ ಹೊಸ ಕವಿತೆಯೊಂದನ್ನು ರಚಿಸಿ ಶರ್ಮರಿಗೆ ಪ್ರತಿ ಏಟು ನೀಡಿದರು. ದೊರಂಗೌ ಅವರ ಪ್ರತಿ ವಾಕ್ಯಕ್ಕೂ ಅಂದು ಚಪ್ಪಾಳೆಯ ಸುರಿಮಳೆಯಾಯಿತು.

ಹಾಡು ನಿನ್ನೆಯದಲ್ಲ, ಹಾಡು ಇಂದಿನದಲ್ಲ
ಹಾಡು ಎಂದಿನಿಂದಲೂ ನಡೆದು ಬಂದದ್ದೊ
ಕವಿ ಭಾವ ಗಂಗೆ ಹೊತ್ತು ತಂದದ್ದೊ
ಶತಮಾನದಿಂದ ಶೋಷಣೆಯ ಕಂಡ
ದಲಿತರುಲಿದ ಹಾಡು....

ಹೀಗೆ ಚಿಂದಿ ಆಯುವ ಮಂದಿಯ ಹಾಡು, ದೀನದಲಿತರ ಹಾಡು, ಶೋಷಿತ ವರ್ಗಗಳ ಹಾಡು ಎಂಬ ಹಾಡನ್ನು ಹಾಡುತ್ತಲೇ ಹೋದರು. ಚಪ್ಪಾಳೆಗಳು ಬೀಳುತ್ತಲೇ ಹೋದವು. ಅವತ್ತಿನ ಮಟ್ಟಿಗೆ ದೊರಂಗೌ ಇಡೀ ಸಮಾರಂಭದ ಹೀರೋ ಎನಿಸಿದರು.

## ಬಣ್ಣದ ಬದುಕಿನ ಸೆಳೆತ

ದೊರಂಗೌ ಅವರಿಗೆ ಸಿನಿಮಾ ಹಾಡುಗಳನ್ನು ಬರೆಯುವ ವಿಚಾರವಾಗಲಿ ಆ ಕ್ಷೇತ್ರದಲ್ಲಿ ತಾವು ಕಾಲಿಡುವ ಸಂಗತಿಯಾಗಲಿ ಯಾವ ಸೂಚನೆಯೂ ಸಿಕ್ಕಿರಲಿಲ್ಲ. ಅವರೂ ಆ ಬಗ್ಗೆ ಯೋಚಿಸಿರಲಿಲ್ಲ. ಯಾಕೆಂದರೆ ಕೆಲಸ ಹಾಗೂ ಸಾಹಿತ್ಯದ ನಡುವೆ ಅವರ ಬದುಕು ಸಾಗಿತ್ತು. ಒಮ್ಮೆ ಸೆಂಟ್ರಲ್ ಕಾಲೇಜ್ ಆವರಣದಲ್ಲಿ ಒಂದು ವಿಚಾರ ಸಂಕಿರಣ ನಡೆದಿತ್ತು. ಬೇಂದ್ರೆ ಕಾವ್ಯದ ವಿಕಾಸದ ಹಂತಗಳು ಎಂಬ ಬಗ್ಗೆ ದೊರಂಗೌ ತಮ್ಮ ಪ್ರಬಂಧವನ್ನು ಮಂಡಿಸುವವರಿದ್ದರು.

ಬೇಂದ್ರೆಯವರ ಸಮಗ್ರ ಕವಿತೆಗಳನ್ನು ಅಭ್ಯಾಸ ಮಾಡಿದ ದೊರಂಗೌ ಅದನ್ನು ಹಂತ ಹಂತವಾಗಿ ವಿವರಿಸುತ್ತಾ ಬೇಂದ್ರೆ ಏರಿದ ಎತ್ತರವನ್ನು ವಿಚಾರಪೂರ್ಣವಾಗಿ ಮಂಡಿಸಿದ್ದರು. ಈ ಪ್ರಬಂಧ ಬಹುಶಃ ಆ ಸಂದರ್ಭದ ಹಾಗೂ ಬೇಂದ್ರೆಯ ಬಗ್ಗೆ ಇತ್ತೀಚಿನ ದಿನಗಳವರೆಗೂ ಕೇಳಿಬಂದಿರುವ ಅತ್ಯುತ್ತಮ ಪ್ರಂಬಂಧ.

ದೊರಂಗೌ ಅವರ ಭಾಷಣ ಮುಗಿದ ನಂತರ ನೆರೆದವರ ಚಪ್ಪಾಳೆಯ ಜೊತೆಗೆ ಬಹಳಷ್ಟು ಪ್ರಶಂಸೆಯ ಮಾತುಗಳು ಕೇಳಿಬಂದವು. ಅವರ ನಡುವೆ ಒಬ್ಬ ವ್ಯಕ್ತಿ ದೊರಂಗೌ ಅವರ ಕೈ ಕುಲುಕಿ ಮೆಚ್ಚುಗೆಯ ಮಾತುಗಳನ್ನಾಡಿ ಯಾವಾಗಲಾದರೂ ನಿಮ್ಮನ್ನು ನೋಡಬೇಕು ಎಂದ ರಂತೆ. ಇವರಿಗೆ ಆ ವ್ಯಕ್ತಿಯ ಪರಿಚಯವಿಲ್ಲ. ತಾವು ಯಾರೆಂದು ಕೇಳಿದಾಗ, ಆತ ತಾನು ಸಿನಿಮಾ ನಿರ್ದೇಶಕ ರವಿ ಎಂದು ಪರಿಚಯ ಮಾಡಿಕೊಂಡರು. 'ಆರು ಮೂರು ಒಂಬತ್ತು ತೂಗುದೀಪ ಚಿತ್ರ ನೋಡಿಲ್ವ ಅದೇ ಸಿನಿಮಾದ ನಿರ್ದೇಶಕ ರವಿ ನಾನು' ಎಂದರು. ಹಾಗೆಯೇ ತಮ್ಮ ಮುಂದಿನ ಸಿನಿಮಾಗೆ ಹಾಡುಗಳನ್ನು ಬರೆಯಲು ಕರೆಸುವುದಾಗಿಯೂ ಹೇಳಿದರು.

ದೊರಂಗೌ ಅವರಿಗೆ ಇದೊಂದು ಹೊಸ ಕ್ಷೇತ್ರ ಅನ್ನಿಸತೊಡಗಿತು. ಆದರೆ ತಿಂಗಳಾದರೂ ರವಿಯವರ ಫೋನ್ ಬರದಿದ್ದುದರಿಂದ ಅದನ್ನು ಹಾಗೆಯೇ ಮರೆತರು. ಒಂದು ದಿನ ಕಾಲೇಜಿನಲ್ಲಿ ಪಾಠ ಮಾಡುತ್ತಿದ್ದಾಗ ಜವಾನ ಬಂದು ಫೋನ್ ಬಂದಿರುವುದಾಗಿಯೂ, ಯಾರೋ ಸಿನಿಮಾ ನಿರ್ದೇಶಕ ರವಿ ಎಂಬುವರು ಫೋನ್ ಮಾಡುತ್ತಿರುವುದಾಗಿಯೂ ಹೇಳಿದರು. ನೋಡಿದರೆ ಅದೇ ರವಿ.

ಅವತ್ತೇ ಮಾತನಾಡಿದ ರವಿ ತಮ್ಮ ಮುಂದಿನ ಚಿತ್ರ ಮಾಗಿಯ ಕನಸಿಗಾಗಿ ಹಾಡು ಬರೆಯಬೇಕೆಂದು ಅದಕ್ಕಾಗಿ ಮದ್ರಾಸ್‌ಗೆ ಬರಬೇಕೆಂದು ಕೇಳಿಕೊಂಡರು. ಮುಂದೆ ಮದ್ರಾಸ್ ಪಯಣದಲ್ಲಿ ದೊರಂಗೌ ಜೊತೆಗೆ ವ್ಯಾಸರಾವ್, ಕಂಬಾರ ಕೂಡ ಇದ್ದರು.

ಮದರಾಸಿನ ಸ್ಟುಡಿಯೋ ಒಂದರಲ್ಲಿ ಅಂದು ಬೆಳಿಗ್ಗೆ ವಿಜಯಭಾಸ್ಕರ್ ಹಾಡುಗಳ ಕಂಪೋಸಿಂಗ್ ಕಾರ್ಯಕ್ಕಾಗಿ ನಿಗದಿತ ಸಮಯಕ್ಕೆ ಸರಿಯಾಗಿ ಬಂದರು. ಬಂದವರೆ ಹೊಸ ಗೀತ ರಚನೆಕಾರರನ್ನು ಪರಿಚಯಿಸಿಕೊಂಡರು. ದೊರಂಗೌ ಅವರ ಕೈ ಕುಲುಕಿ 'ಸಾರ್, ನಾನು ನಿಮ್ಮ ಎಲ್ಲಾ ಹಾಡುಗಳನ್ನೂ ಕೇಳಿದ್ದೀನಿ, ನನಗೆ ತುಂಬಾ ಇಷ್ಟವಾಗಿರುವ ಸಂಗೀತ ನಿರ್ದೇಶಕರಲ್ಲಿ ನೀವೂ ಒಬ್ಬರು. ಕೆಲವು ವರ್ಷಗಳ ಹಿಂದೆ ನೀವು ತುಮಕೂರಿನಲ್ಲಿ ಸಂಗೀತ ಸಂಜೆ ಮಾಡಿದ್ದಿರಿ. ನಾನು ಸಾವಿರಾರು ಪ್ರೇಕ್ಷಕರ ಜೊತೆ ಕೇಳಿ ಆನಂದಿಸಿದ್ದೆ. ಇವತ್ತು ನಿಮ್ಮೊಂದಿಗೆ ಕೂತು ಹಾಡು ಬರೆಯುವ ಭಾಗ್ಯ ನನ್ನದಾಗಿದೆ ನೋಡಿ' ಎಂದು ಹೇಳಿದಾಗ,

'ಅದೇ ಕಣ್ರೀ ಕನ್ನಡದ ಭಾಷೆಯ ಜಾಯಮಾನ. ನನಗಂತೂ ನಿಮ್ಮಂಥ ಯುವ ಗೀತ ರಚನೆಕಾರರನ್ನು ಕಂಡು ಸಂತೋಷವಾಗಿದೆ. ನನ್ನ ಸಂಗೀತ ನಿರ್ದೇಶನದಲ್ಲಿ ಮೊದಲು ಹಾಡು

ಬರೆದ ಎಲ್ಲರೂ ಯಶಸ್ವಿಯಾಗಿದ್ದಾರೆ. ನೀವೂ ಕೂಡ ಆಗುತ್ತೀರಿ, ನೋಡ್ತಾ ಇರಿ. ಏನಿಲ್ಲ, ನಿರ್ದೇಶಕರು ಹೇಳಿದ ಕತೆಯನ್ನು ಮನಸಾರೆ ಕೇಳಿಕೊಂಡು ಆ ದೃಶ್ಯವನ್ನು ಕಲ್ಪಿಸಿಕೊಳ್ಳಿ, ಆನಂತರ ಆ ಪಾತ್ರದ ಒಳನೋಟವನ್ನು ಅರಿತುಕೊಂಡು ಬರೆಯಿರಿ, ಖಂಡಿತ ನಿಮಗೆ ಗೆಲುವಾಗುತ್ತದೆ' ಎಂದರು ವಿಜಯಭಾಸ್ಕರ್.

ರವಿಯವರಿಂದ ಆಗಲೇ ಕತೆ ಕೇಳಿದ್ದ ದೊರಂಗೌ ತಮ್ಮ ಪಾಲಿಗೆ ಬಂದ ಸನ್ನಿವೇಶದ ಹಾಡನ್ನು ಬರೆಯತೊಡಗಿದರು. ಆ ಹಾಡು, ಬಂದಿದೆ ಬದುಕಿನ ಬಂಗಾರದಾದಿನ....

ವಿಶೇಷವೆಂದರೆ ಅಂದು ದೊರಂಗೌ ಅವರ ಮದುವೆಯ ವಾರ್ಷಿಕೋತ್ಸವದ ದಿನ!

ಆ ಹಾಡು ಬಹಳಷ್ಟು ಜನಪ್ರಿಯವಾಯಿತು. ಹೊಸ ಗೀತ ರಚನೆಕಾರನೊಬ್ಬ ಕನ್ನಡ ಚಿತ್ರರಂಗಕ್ಕೆ ಸೇರ್ಪಡೆಯಾದಂತಾಯಿತು ಎಂಬ ಮಾತುಗಳು ಹಬ್ಬತೊಡಗಿದವು. ಆದಾಗಲೇ ದೊರಂಗೌ ಅವರ ಎರಡನೆ ಕವನ ಸಂಕಲನ 'ಕಣ್ಣು ನಾಲಗೆ ಕಡಲು' ಸಾಹಿತ್ಯ ಅಕಾಡೆಮಿಯ ಬಹುಮಾನಕ್ಕೆ ಪಾತ್ರವಾಗಿತ್ತು. ಮೂರನೇ ಕವನ ಸಂಕಲನ 'ನಾಡಾಡಿ' ಪ್ರಕಟವಾಗಿತ್ತು. ಈ 'ನಾಡಾಡಿ' ಪ್ರಕಟವಾಗಿದ್ದು ಖ್ಯಾತ ಅಕ್ಷರ ಪ್ರಕಾಶನದಿಂದ. ಆ ಕಾಲದಲ್ಲಿ ಅಕ್ಷರ ಪ್ರಕಾಶನದಲ್ಲಿ ಹೊರಬಂದ ಪುಸ್ತಕಗಳಿಗೆ ಪ್ರತಿಷ್ಠೆಯೂ ಇತ್ತು.

ಒಂದು ದಿನ ಖ್ಯಾತ ನಿರ್ದೇಶಕ ಪುಟ್ಟಣ್ಣ ಕಣಗಾಲ್ ಅವರು ತಮ್ಮನ್ನು ಕಾವೇರಿ ಕಾಂಟಿನೆಂಟಲ್ ಹೋಟೆಲ್‌ಗೆ ಬಂದು ನೋಡಲು ಹೇಳಿದ್ದಾರೆ ಎಂಬ ಸುದ್ದಿ ಸಿಕ್ಕಿತ್ತು. ಅಲ್ಲಿಗೆ ಹೋದಾಗ ಆರತಿ, ಪುಟ್ಟಣ್ಣ ಒಂದು ದೊಡ್ಡ ಕಾಟೇಜ್‌ನಲ್ಲಿ ವಾಸ್ತವ್ಯ ಹೂಡಿದ್ದರು. ಪುಟ್ಟಣ್ಣ ಬಂದವರೆ ತಾವೊಂದು ಹೊಸ ಚಿತ್ರ ಮಾಡುತ್ತಿರುವುದಾಗಿಯೂ ಅದಕ್ಕೆ ತಮ್ಮ ಕವಿತೆಯೊಂದನ್ನೇ ಆಧರಿಸಿಕೊಂಡು ಕತೆ ಮಾಡಿಕೊಳ್ಳುವುದಾಗಿಯೂ ಹೇಳಿದಾಗ ದೊರಂಗೌ ಅವರಿಗೆ ಅಚ್ಚರಿಯಾಯಿತು.

'ನಿಮ್ಮ ಧಣಿ ಪುರಾಣ ನೀಳ್ಗವಿತೆಯನ್ನು ಓದಿದ್ದೀನಿ. ನನಗೆ ತುಂಬಾ ಪ್ರಭಾವ ಬೀರಿದ ಕವಿತೆಯದು. ನಿಜಕ್ಕೂ ಆ ರೀತಿಯ ಜಮೀನ್ದಾರರು ಇದ್ದಾರೇನ್ರಿ? ಅದನ್ನು ಓದಿದಾಗ ನಿಜಕ್ಕೂ ಹಳ್ಳಿಯ ಆ ದಟ್ಟ ಪ್ರಭಾವ ನನ್ನನ್ನು ಆವರಿಸಿಕೊಂಡುಬಿಡ್ತು' ಎಂದರು ಪುಟ್ಟಣ್ಣ.

'ಹೌದು ಸಾರ್, ನಾನು ಬರೆದದ್ದೆಲ್ಲ ನಿಜಜೀವನದಲ್ಲಿ ಕಂಡ ಘಟನೆಗಳೇ. ನಮ್ಮೂರಲ್ಲಿ ಇರುವ ಶ್ರೀಮಂತರ ಕತೆಯನ್ನೆ ನಾನು ಹಾಡಾಗಿಸಿದ್ದೇನೆ' ಎಂದರು ದೊರಂಗೌ.

'ನನಗೆ ಆ ಬಗೆಯ ಶಕ್ತಿಪೂರ್ಣ ಹಳ್ಳಿಯ ನುಡಿಗಟ್ಟು ಬೇಕು. ಆ ತಾಖತ್ತು ನಿಮ್ಮ ಪದಗಳಲ್ಲಿದೆ. ನನಗೆ ಅದೇ ಪದಗಳು, ಅದೇ ವಾತಾವರಣ ಸೃಷ್ಟಿಯಾಗುವ ನಿಮ್ಮ ಹಾಡುಗಳೂ

ಬೇಕು. ಹಾಗೆಯೇ ನಿಮ್ಮ ಧಣಿ ಪುರಾಣದ ಎಳೆಯೂ ಬೇಕು' ಎಂದ ಪುಟ್ಟಣ್ಣ, 'ನೋಡಿ ನನ್ನ ಚಿತ್ರಗಳಿಗೆಲ್ಲ ಹಾಡು ಬರೆಯೋದು ವಿಜಯಣ್ಣ (ವಿಜಯ ನಾರಸಿಂಹ). ಆದರೆ ಈ ಚಿತ್ರಕ್ಕೆ ಅವನಿಂದ ಬರೆಸುತ್ತಿಲ್ಲ. ಯಾಕೆಂದರೆ ನನಗೆ ನಿಮ್ಮ ಅನುಭವದ ಹಳ್ಳಿಯ ಗಟ್ಟಿ ಪದಪುಂಜಗಳು ಬೇಕು' ಎಂದರು.

ನಂತರ ಧಣಿ ಪುರಾಣದ ಕತೆಯನ್ನು ವಿಸ್ತರಿಸುವ ಕಾರ್ಯ ಆರಂಭವಾಯಿತು. ರಾವ್ ಬಹದ್ದೂರ್ ಬಂದರು. ಒಂದು ಕತೆ ಮಾಡಿಕೊಟ್ಟರು. ಪುಟ್ಟಣ್ಣನವರಿಗೆ ಪೂರ್ತಿ ಇಷ್ಟವಾಗಲಿಲ್ಲ. ನಂತರ ಸೋರಟ್ ಅಶ್ವಥ್ ಕೈಗೆ ಈ ಚಿತ್ರಕತೆ ರವಾನೆಯಾಯಿತು. ಅವರು ಒಂದಷ್ಟು ತಿರುವುಗಳನ್ನು ನೀಡಿ ಕತೆ ಮಾಡಿದರು. ಆದರೂ ಪುಟ್ಟಣ್ಣನವರಿಗೆ ಸಮಾಧಾನವಾಗಲಿಲ್ಲ. ಎಲ್ಲೋ ಏನೋ ಸೇರಿಕೊಳ್ಳುತ್ತಿಲ್ಲ ಎಂದೇ ಅವರ ಭಾವನೆ. ಕೊನೆಗೆ ಅವರೇ ಒಂದು ತಿರುವು ಕೊಟ್ಟು ಹಳ್ಳಿಯ ಜಮೀನ್ದಾರನ ಶೋಷಣೆಯನ್ನು ವರದಿ ಮಾಡಲು ಒಬ್ಬಳು ಪತ್ರಕರ್ತೆ ಬರುತ್ತಾಳೆ, ಅವಳೆ ಆರತಿ, ಎಂದು ಚಿತ್ರಕತೆಗೆ ಕೊನೆಗೂ ಒಂದು ಅಂತಿಮ ರೂಪ ನೀಡಿದರು.

ಹಾಡಿನ ಧ್ವನಿಮುದ್ರಣಕ್ಕೆ ಮೊದಲು ಕಂಪೋಸಿಂಗ್ ಕೆಲಸ ಆರಂಭವಾಯಿತು. ಬೆಂಗಳೂರಿನಲ್ಲೆ ಕಂಪೋಸಿಂಗ್ ಮಾಡಬೇಕೆಂದು ಪುಟ್ಟಣ್ಣ ತಾಕೀತು ಮಾಡಿದರು. 'ಪುಟ್ಟಣ್ಣನವರ ಕಂಪೋಸಿಂಗ್ ಎಂದರೆ ಅದೊಂದು ಅದ್ಭುತ ದೃಶ್ಯ ವೈಭವವೇ. ಯಾಕೆಂದರೆ ದೊಡ್ಡದಾದ ಹಾಲ್‌ನಲ್ಲಿ ಪೂರ್ತಿಯಾಗಿ ಬಿಳಿ ಬಟ್ಟೆ ಹಾಸಿರಬೇಕು. ಮಧ್ಯದಲ್ಲಿ ದೊಡ್ಡ ಹರಿವಾಣದಲ್ಲಿ ದಾಸವಾಳದ ಹೂಗಳನ್ನು ತುಂಬಿರಬೇಕು. ಸುತ್ತಲೂ ಸುಗಂಧದ್ರವ್ಯಗಳ ವಾಸನೆ ಹರಡಿರಬೇಕು. ಅಲ್ಲದೆ ಊದಿನ ಕಡ್ಡಿಗಳು ಅಲ್ಲಲ್ಲಿ ಹೊಗೆ ಚುಮ್ಮುತ್ತಿರಬೇಕು. ಒಟ್ಟಿನಲ್ಲಿ ಒಂದು ವಿಶಿಷ್ಟ ವಾತಾವರಣವನ್ನು ಪುಟ್ಟಣ್ಣ ಸೃಷ್ಟಿಮಾಡುತ್ತಿದ್ದರು. ಆದರೆ ಆ ದೊಡ್ಡ ಹಾಲ್‌ನಲ್ಲಿ ಇರುತ್ತಿದ್ದವರು ನಿರ್ದೇಶಕ ಪುಟ್ಟಣ್ಣ, ಸಂಗೀತ ನಿರ್ದೇಶಕ ಹಾಗೂ ಗೀತ ರಚನೆಕಾರ ಮೂವರೇ' ಎನ್ನುತ್ತಾರೆ ದೊರಂಗೌ.

ಮೊದಲ ಹಾಡು.... ಜನುಮ ನೀಡಿದ ಭೂತಾಯಿಗೆ.... ಹಾಡು ಬರೆದಾಗ ಪುಟ್ಟಣ್ಣ 'ನನಗಿದೇ ಬೇಕಿತ್ತು. ಈ ಹಳ್ಳಿಯ ಪದಗಳು ಬೇಕು, ಈ ಭೂಮಿಯ ಸಂಬಂಧ ಬೇಕು' ಎಂದು ಮಾತಾಡತೊಡಗಿದರು.

ಎರಡನೆಯ ಹಾಡು... ಏಸುವರ್ಸ ಆಯ್ತೆ ನಿಂಗೆ.... ಹಾಡು ಬರೆದಾಗಲಂತೂ ಪುಟ್ಟಣ್ಣ ಕೇಳಿ ಓಡಿ ಬಂದು ದೊರಂಗೌ ಅವರನ್ನು ಎತ್ತಿಕೊಂಡರು. ತಮ್ಮ ಭಾವಮೈದ ದತ್ತುವನ್ನು ಕರೆದು ಕೂಡಲೆ ಫೋಟೋ ತೆಗೆಯುವಂತೆ ಆಜ್ಞಾಪಿಸಿದರು. 'ಕನ್ನಡದಲ್ಲಿ ಹೊಸ ಗೀತೆ ರಚನೆಕಾ

ರನೊಬ್ಬನ ಉದಯವಾಗಿದೆ' ಎಂದು ಈ ವಾರ ಎಲ್ಲ ಪತ್ರಿಕೆಗಳು ಬರೆಯುವಂತಾಗಲಿ ಎಂದು ತಮ್ಮ ಸಂತಸವನ್ನು ಮತ್ತಷ್ಟು ಏರುದನಿಯಲ್ಲಿ ಹೇಳತೊಡಗಿದರು.

ಮರುವಾರದ ಪತ್ರಿಕೆಗಳಲ್ಲೆಲ್ಲ ಇದೇ ಸುದ್ದಿ. ಕನ್ನಡಕ್ಕೊಬ್ಬ ಹೊಸ ಗೀತ ರಚನೆಕಾರ ಉದಯಿಸಿದ್ದಾನೆ ಎಂಬುದೇ ಎಲ್ಲೆಡೆಯ ಮಾತು. ದೊರಂಗೌ ರಾತ್ರೋರಾತ್ರಿ ಬೆಳಕಿಗೆ ಬಂದಷ್ಟೇ ಜನಪ್ರಿಯತೆಯ ತುತ್ತತುದಿಗೇರಿದರು. ಆ ಚಿತ್ರವೇ ಪಡುವಾರಳ್ಳಿ ಪಾಂಡವರು. ಆ ಚಿತ್ರದಲ್ಲಿ ದೊರಂಗೌ ಬರೆದ ಮೂರೂ ಹಾಡುಗಳು ಅತ್ಯಂತ ಜನಪ್ರಿಯ ಗೀತೆಗಳಾದವು.

ಇದೇ ರೀತಿ ಆದ ಇನ್ನೊಂದು ಸಂಗತಿ ಎಂದರೆ, ಒಂದು ದಿನ ಊಟ ಮಾಡುತ್ತಿರುವಾಗ ಹಾಸ್ಯ ನಟ ಡಿಂಗ್ರಿ ನಾಗರಾಜ್ ಮನೆಗೆ ಬಂದು ಮಾರುತಿ ಶಿವರಾಂ ಎನ್ನುವವರು ಹೊಸ ಚಿತ್ರವೊಂದನ್ನು ನಿರ್ಮಿಸುತ್ತಿದ್ದಾರೆ. ಹಾಡು ಬರೆಯಲು ಬರಬೇಕೆಂದು ಸುದ್ದಿ ಕೊಟ್ಟರು. ಮಿನರ್ವ ಸರ್ಕಲ್ ಬಳಿಯ ರೂಮೊಂದಕ್ಕೆ ಹೋದಾಗ ಮಾರುತಿ ಶಿವರಾಂ ತಾವು ಪರಸಂಗದ ಗೆಂಡೆತಿಮ್ಮ ಚಿತ್ರ ನಿರ್ಮಿಸುತ್ತಿರುವ ವಿಚಾರ ಹೇಳಿದರು. ಅದಾಗಲೇ ಕೃಷ್ಣ ಆಲನಹಳ್ಳಿ ಅವರ ಆ ಕತೆಯನ್ನು ಓದಿದ್ದರಿಂದ ಮನದಲ್ಲೆ ಹಾಡುಗಳ ವಿಚಾರ ದೊರಂಗೌ ಅವರಿಗೆ ಮನವರಿಕೆ ಯಾಗತೊಡಗಿತ್ತು. ಮೂರು ಹಾಡುಗಳನ್ನು ಬರೆದರು. ಹಾಡಿನ ಧ್ವನಿಮುದ್ರಣ ಮದರಾಸಿನ ಸ್ಟುಡಿಯೋವೊಂದರಲ್ಲಿ ನಡೆಯುತ್ತಿರುವಾಗ ಅದನ್ನು ಕೇಳಿ ಒಳಬಂದ ಆರ್.ಎನ್. ಜಯಗೋಪಾಲ್ ದೊರಂಗೌ ಕೈ ಕುಲುಕಿ "You have opened new vestas in lyric writing' ಎಂದರು.

vestas ಎಂದರೆ ಏನಿರಬಹುದು ಎಂದು ಪದಕೋಶಗಳನ್ನು ಹುಡುಕಿದಾಗ ಹೊಸ ದಾರಿ ಎಂಬುದು ಅರಿವಿಗೆ ಬಂತು. ಅವರು ಹೇಳಿದ್ದು ನಿಜವೂ ಆಗಿತ್ತು. ಯಾಕೆಂದರೆ ಕನ್ನಡದ ಚಿತ್ರಂಗದಲ್ಲಿ ಅದುವರೆಗೂ ಇದ್ದ ಒಂದು ಬಗೆಯ ವಾತಾವರಣ, ಗೀತ ರಚನೆಯಲ್ಲಿ ಇದ್ದ ಸಾಮಾನ್ಯ ಪದಪುಂಜಗಳ ವ್ಯವಸ್ಥೆ ಮುರಿದುಬಿದ್ದಂತಾಗಿತ್ತು. ಕನ್ನಡ ಚಿತ್ರಗೀತೆಗಳಿಗೆ ಹೊಸ ನುಡಿಗಟ್ಟು, ಹೊಸ ಅನುಭವದ ಕೆನೆ ಆವರಿಸಿಕೊಳ್ಳತೊಡಗಿತು.

ಆದರೆ ಚಿತ್ರ ಆರಂಭವಾದುದ್ದೇನೊ ನಿಜ. ಎರಡು ವರ್ಷವಾದರೂ ಅದು ಹೊರ ಬರಲೇ ಇಲ್ಲ. ದೊರಂಗೌ ಗೀತೆಗಳ ಬಗ್ಗೆ ಅಲ್ಲಲ್ಲಿ ಮಾತುಗಳು ಕೇಳಿಬರುತ್ತಿತ್ತಾದರೂ ಅದು ಚಿತ್ರವೊಂದು ಬಿಡುಗಡೆಯಾದಾಗ ಸಿಗುವಷ್ಟು ಪರಿಣಾಮಕಾರಿ ಆದುದಲ್ಲ. ಒಮ್ಮೆ ಆ ಚಿತ್ರದಲ್ಲಿ ನಟಿಸಿದ ನಟ ಮಾನು ಕಾಮತ್ ಹೋಟೆಲ್‌ನಲ್ಲಿ ಕಾಫಿ ಕುಡಿಯುತ್ತಿದ್ದಾಗ ಕೃಷ್ಣ ಎನ್ನುವ ಚಾರ್ಟರ್ಡ್ ಅಕೌಂಟೆಂಟ್ ಬಂದರು. ಸಿನಿಮಾಗಳ ಬಗ್ಗೆ ವಿಚಾರಿಸಿದಾಗ ಮಾನು, ನಿರುತ್ಸಾಹದ ಧ್ವನಿಯಲ್ಲಿ ಹೇಳಿದರು.

‘ಸಿಗೋದೆ ಅಲ್ಲೊಂದು ಇಲ್ಲೊಂದು ಸಿನಿಮಾ, ಅದರಲ್ಲೂ ಹೊಸ ಅಲೆಯ ಚಿತ್ರಗಳಲ್ಲಿ ಮಾಡಿದರೆ ಯಾವ ಪ್ರಯೋಜನವೂ ಆಗುವುದಿಲ್ಲ. ಈಗ ಕೃಷ್ಣ ಆಲನಹಳ್ಳಿ ಅವರ ಕತೆಯನ್ನು ಆಧರಿಸಿದ ಚಿತ್ರವೊಂದರಲ್ಲಿ ಮಾಡುತ್ತಿದ್ದೇನೆ, ಆದರೆ ನಿರ್ಮಾಪಕರಿಗೆ ಹಣದ ಸಮಸ್ಯೆ. ಹಣ ಸಿಗುವಂತಿಲ್ಲ, ಚಿತ್ರ ಮುಗಿಯುವಂತಿಲ್ಲ, ಆದರೆ ಒಂದು ವಿಚಾರ, ಆ ಚಿತ್ರದ ಹಾಡುಗಳನ್ನು ಮಾತ್ರ ನೀನು ಕೇಳಲೇಬೇಕು. ನನಗಂತೂ ತುಂಬಾ ಖುಷಿಕೊಟ್ಟಿವೆ’ ಎಂದು ಅಂದೇ ಸಂಜೆ ಹಾಡುಗಳನ್ನು ಕೇಳಿಸಿದರು.

ಅಚ್ಚರಿ ಎಂದರೆ ಹಾಡುಗಳನ್ನು ಕೇಳಿದ ಕೃಷ್ಣ ಎಂಬ ಆ ವ್ಯಕ್ತಿ ಮಾನುಗೆ ಒಂದು ಅಭಯ ನೀಡಿದರು. ಅದೇನೆಂದರೆ, ‘ಚಿತ್ರ ಪೂರ್ಣವಾಗಲು ಬೇಕಾದ ಹಣ ಸಹಾಯವನ್ನು ನಾನು ಮಾಡುತ್ತೇನೆ ಸಂಬಂಧಪಟ್ಟವರಿಗೆ ತಿಳಿಸು’ ಎಂದರು. ಅದರ ಪ್ರಕಾರ ಹಣದ ಸಹಾಯವನ್ನು ಮಾಡಿದರು. ಉಳಿದದ್ದು ಇತಿಹಾಸವಾಯಿತು. ಚಿತ್ರ ಬೆಂಗಳೂರಿನಲ್ಲಿ ನೂರಿಪ್ಪತ್ತು ದಿನಗಳ ಕಾಲ ಓಡಿ ಯಶಸ್ವಿ ಚಿತ್ರಗಳಲ್ಲೊಂದಾಯಿತು. ಆ ಕಾಲದಲ್ಲಿ ಡಾ. ರಾಜ್ ಚಿತ್ರಗಳು ಪಡೆಯುತ್ತಿದ್ದ ಜನಪ್ರಿಯತೆ ಪರಸಂಗದ ಗೆಂಡೆತಿಮ್ಮನ ಪಾಲಾಯಿತು. ರಾಜ್‌ರ ಆಪರೇಷನ್ ಡೈಮಂಡ್ ರಾಕೆಟ್ ಎಂಬ ಬಾಂಡ್ ಚಿತ್ರ ಕೂಡ ಜನರ ಮನಸ್ಸನ್ನು ಗೆಲ್ಲಲಾಗಲಿಲ್ಲ.

ಪರಸಂಗದ ನಂತರ ದೊರಂಗೌ ಹಿಂದಿರುಗಿ ನೋಡಿದ್ದೇ ಇಲ್ಲ. ಕನ್ನಡದಲ್ಲಿ ಒಂದು ಸನ್ನಿವೇಶಕ್ಕೆ ಅತಿ ಹೆಚ್ಚು ಪಲ್ಲವಿಗಳನ್ನು ನೀಡುವ ಗೀತ ರಚನೆಕಾರ ಎಂಬ ಖ್ಯಾತಿ ಇವರದ್ದು. ಒಂದು ಹಾಡಿನ ಸನ್ನಿವೇಶಕ್ಕೆ ಕಡಿಮೆ ಎಂದರೂ ಹದಿನೈದರಿಂದ ಇಪ್ಪತ್ತು ಪಲ್ಲವಿಗಳನ್ನು ನೀಡುತ್ತಿದ್ದರು. ಯಾವುದು ಆಯ್ಕೆಯಾಗುತ್ತಿತ್ತೋ ನಂತರ ಅದರ ಚರಣಗಳು ರಚಿತವಾಗುತ್ತಿದ್ದವು.

ಹೀಗೆ ಸುಮಾರು 70 ರಿಂದ 80 ಸಂಗೀತ ನಿರ್ದೇಶಕರ ಜೊತೆ ಕೆಲಸ ಮಾಡಿದ ಅನುಭವ ದೊರಂಗೌ ಅವರದ್ದು. ಆದರೆ ಆರೇಳು ಸಂಗೀತ ನಿರ್ದೇಶಕರು ಮಾತ್ರ ದೊರಂಗೌ ಅವರ ನ್ನು ಅತ್ಯುತ್ತಮವಾಗಿ ಬಳಸಿಕೊಂಡದ್ದು. ವಿಜಯಭಾಸ್ಕರ್, ಅಶ್ವಥ್, ರಾಜನ್ ನಾಗೇಂದ್ರ, ಜಿ.ಕೆ.ವೆಂಕಟೇಶ್,ಮಹದೇವನ್, ವಿ. ಮನೋಹರ್, ಸತ್ಯಂ ಹೀಗೆ ಕೆಲವರು ಮಾತ್ರ ದೊರಂಗೌ ಅವರ ಸತ್ವಯುತ ಹಾಡುಗಳನ್ನು ಅತ್ಯಂತ ಜನಪ್ರಿಯಗೊಳಿಸಿದರು.

ಇಲ್ಲಿ ಇನ್ನೊಂದು ವಿಚಾರ ಹೇಳಬೇಕು. ಪರಸಂಗದ ಗೆಂಡೆತಿಮ್ಮ ಚಿತ್ರದ ಹಾಡು ಎಷ್ಟು ಜನಪ್ರಿಯವಾಯಿತೆಂದರೆ, ತೇರಾ ಏರಿ ಅಂಬರದಾಗೆ.... ಪದ್ಯವನ್ನು ಏಳನೆ ತರಗತಿಯ ಪಠ್ಯಕ್ಕೆ ಸೇರಿಸಲಾಯಿತು. ಮಹಾರಾಷ್ಟ್ರ ಜಿಲ್ಲೆಗೆ ಸೇರಿದ ಸೊಲ್ಲಾಪುರದ ಬಳಿಯಲ್ಲಿನ ಗಡಿ ಪ್ರದೇಶದ ಶಾಲೆಗಳಲ್ಲಿ ತೇರಾ ಏರಿ... ಪಠ್ಯ ಪುಸ್ತಕವನ್ನೂ ಸೇರಿದೆ. ಬಹುಶಃ ಇದೊಂದು ದಾಖಲೆ. ಹಾಗೆಯೇ ಜನುಮದ ಜೋಡಿಯ ಕೋಲುಮಂಡೆ ಜಂಗಮ ಹಾಡನ್ನು ಪ್ರೇಕ್ಷಕರು ಒತ್ತಾಯದ ಮೇಲೆ ಮತ್ತೊಮ್ಮೆ ಹಾಕಿಸಿ ಕೇಳಿದ್ದು ಇನ್ನೊಂದು ದಾಖಲೆ. ಸುಮಾರು ಐನೂರು

ಹಾಡುಗಳನ್ನು ಕನ್ನಡ ಚಿತ್ರರಂಗಕ್ಕೆ ನೀಡಿದ ದೊರಂಗೌ ಬಹುಶಃ ಕನ್ನಡದ ಚಿತ್ರಗೀತೆಗಳ ನುಡಿಗಟ್ಟನ್ನು ಸಂಪೂರ್ಣವಾಗಿ ಬದಲಿಸಿದರು. ಹಂಸಲೇಖಾ ಬರುವವರೆಗೆ ಜನಪದವನ್ನು ಅತ್ಯಂತ ಸತ್ವಯುತವಾಗಿ ಚಿತ್ರರಂಗಕ್ಕೆ ತಂದದ್ದು ದೊರಂಗೌ ಅವರೊಬ್ಬರೆ. ಬಹುಶಃ ಅದನ್ನು ಇನ್ನೊಂದು ರೀತಿಯಲ್ಲಿ ಹಂಸಲೇಖ ಮುಂದುವರಿಸಿದರೆಂದು ಹೇಳಬಹುದು.

ಇನ್ನೊಮ್ಮೆ ಯಾವುದೋ ಚಿತ್ರದ ಹಾಡಿನ ರೆಕಾರ್ಡಿಂಗ್ ನಡೆಯುತ್ತಿತ್ತು. ಇದ್ದಕ್ಕಿದ್ದಂತೆ ಪಕ್ಕದ ಸ್ಟುಡಿಯೋದಿಂದ ಕರೆ ಬಂತು. ಕೂಡಲೆ ಒಂದು ಹಾಡು ಬರೆದುಕೊಡಬೇಕೆಂದು ಒತ್ತಾಯಿಸಿದ್ದರು. ಅದಾಗಲೇ ಹಾಡಿನ ಹಿನ್ನೆಲೆ ಸಂಗೀತವೆಲ್ಲ ಸಿದ್ಧವಾಗಿತ್ತು. ಜೇಸುದಾಸ್ ಮತ್ತು ವಾಣಿ ಜಯರಾಂ ಹಾಡಲು ರೆಡಿಯಾಗಿದ್ದರೂ ಹಾಡೇ ಇರಲಿಲ್ಲ. ಕೂಡಲೇ ಹಾಡು ಬೇಕೆಂದು ರಂಗರಾವ್ ಹೇಳಿದರು. ಏನು ಬರೆಯಲಿ ಎಂದು ಯೋಚಿಸುತ್ತಲೇ 'ಹೇಳಲಾರೆನು, ತಾಳಲಾರೆನು ನನ್ನ ಮನಸ್ಸಿನ ಭಾವನೆ' ಎಂದು ಬರೆದುಕೊಡುತ್ತಲೇ ಅದು ರೆಕಾರ್ಡ್ ಆಗುತ್ತಾ ಹೋಯಿತು. ತಮ್ಮ ಮನಸ್ಥಿತಿಯನ್ನೇ ದೊರಂಗೌ ಹಾಡಾಗಿ ಪರಿವರ್ತಿಸಿದ್ದರು. ಈ ಸಂಗತಿಯನ್ನು ಯಾಕೆ ಹೇಳಬೇಕಾಯಿತೆಂದರೆ, ಚಲನಚಿತ್ರ ಗೀತೆ ರಚನೆ ಎಂದರೆ ಸ್ಥಳದಲ್ಲೇ ಸಿದ್ಧಪಡಿಸಬೇಕಾದ ತುರ್ತು ಅಲ್ಲಿರುತ್ತದೆ. ಹಾಗಾಗಿ ಗೀತರಚನೆಕಾರ ಎಂತಹ ಇಕ್ಕಟ್ಟಿನ ಸನ್ನಿವೇಶದಲ್ಲೂ ತನ್ನ ಬರವಣಿಗೆಯ ಬನಿಯನ್ನು ಕಳೆದುಕೊಳ್ಳಬಾರದು.

ಖ್ಯಾತ ಸಂಗೀತ ನಿರ್ದೇಶಕ ಜಿ.ಕೆ.ವೆಂಕಟೇಶ್ ಯಾವಾಗಲೂ ಹೇಳುತ್ತಿದ್ದರಂತೆ, 'ನೋಡು ರಂಗಾ ಇಲ್ಲಿ ಒಂದು ಹಾಡೆಂದರೆ ಅದು ಗಂಡು ಹೆಣ್ಣಿನ ಮಿಲನದಂತೆ, ಅಂದರೆ, ಸಂಗೀತ ನಿರ್ದೇಶಕ ಮತ್ತು ಗೀತ ರಚನೆಕಾರ ಅಷ್ಟು ತಲ್ಲೀನರಾಗಿ ಈ ಕೆಲಸವನ್ನು ಮಾಡಬೇಕಾಗುತ್ತದೆ. ಇಲ್ಲಿ ಯಾರೂ ಹೆಚ್ಚಲ್ಲ, ಯಾರೂ ಕಡಿಮೆಯಲ್ಲ. ಒಂದೇ ಮನಸ್ಥಿತಿಯಲ್ಲಿ ಇಬ್ಬರೂ ಕೆಲಸ ಮಾಡಬೇಕಾಗುತ್ತದೆ.'

## ಅಧ್ಯಾತ್ಮದೆಡೆಗೆ...

ಜೀವನದಲ್ಲಿ ಇಷ್ಟೆಲ್ಲಾ ಏರಿಳಿತಗಳು, ಜನಪರ ಕಾಳಜಿ, ಎಡಪಂಥೀಯ ಧೋರಣೆಯತ್ತ ಒಲವು, ಶೋಷಿತ ವರ್ಗಗಳ ಬಗ್ಗೆ ಸ್ಪಂದನ ಇಟ್ಟುಕೊಂಡ ದೊರಂಗೌ ಇತ್ತೀಚಿನ ದಿನಗಳಲ್ಲಿ ಅಧ್ಯಾತ್ಮದತ್ತ ಏಕೆ ವಾಲುತ್ತಿದ್ದಾರೆ ಎಂಬ ಸೋಜಿಗ ಹಲವರನ್ನು ಕಾಡುತ್ತಿತ್ತು. ರೈತರ ಪರ ಧೋರಣೆ, ದಲಿತರ ಪರ ಕಾಳಜಿ ಇವೆಲ್ಲ ದೊರಂಗೌ ಪದ್ಯಗಳಲ್ಲಿ ಢಾಳಾಗಿ ಕಂಡುಬರುತ್ತದೆ. ಅದರಲ್ಲೂ ಮಣ್ಣಿನ ಮಗ ಕಾವ್ಯನಾಮದಿಂದ ಅವರು ಬರೆದಿರುವ ಚೌಪದಿಗಳು ಅಥವಾ ಚುಟುಕುಗಳು ಬಹುತೇಕ ಈ ಜನಸಮುದಾಯದ ಪರವಾಗಿ ಧ್ವನಿ ಎತ್ತುವ ಸಾಲುಗಳು. ಅದರಲ್ಲಿ ಭೂಮಿ ಉಳುವವರ ನೋವಿನ ದನಿಯಿದೆ. ಕೂಲಿಕಾರ್ಮಿಕರ ಹಾಡುಗಳಿವೆ. ಅಧಿ

ಕಾರಶಾಹಿಯ ಅಟ್ಟಹಾಸದ ವಿರುದ್ಧ ಅಂಕುಶವಿಕ್ಕುವ ನುಡಿಗಳಿವೆ. ಅಲ್ಲದೆ ಜಾಗತೀಕರಣ ದಂತಹ ಮಹಾ ಪೆಡಂಭೂತದ ಎದುರು ಸಿಂಹಘರ್ಜನೆಯಿದೆ.

ಅದೇ ರೀತಿ ಅವರ ಚಿತ್ರಗೀತೆಗಳಲ್ಲೂ ಇದೇ ಬಗೆಯ ನುಡಿಗಟ್ಟುಗಳನ್ನು ಕಾಣಬಹುದು. ಭೂಮಿತಾಯಿಯ ಬಗ್ಗೆ ಭರಣಿ ಮಳೆಯ ಬಗ್ಗೆ ರೈತರ ನೋವು-ನಲಿವಿನ ಬಗ್ಗೆ ಹಲವು ಗೀತೆಗಳಲ್ಲಿ ಎದ್ದು ಕಾಣುವ ಸಂಗತಿಗಳೂ ಇವೆ. ಹಾಗೆಯೇ ಪ್ರೇಮ ಗೀತೆಗಳಲ್ಲೂ ಅವರೇ ಹೇಳುವಂತೆ ಪ್ರೀತಿಯ ಕೆನೆಗಟ್ಟಿದ ಸಾರವೂ ಇದೆ. ಇಷ್ಟೆಲ್ಲದರ ನಡುವೆ ಅವರಿಗೆ ಅಧ್ಯಾತ್ಮದ ಹಾಗೆ ದೇವರ ಇರುವಿನ ಬಗ್ಗೆ ನಂಬಿಕೆ ಬಂದದ್ದಾದರೂ ಹೇಗೆ?

ಒಂದು ಸಂಗತಿಯನ್ನು ಅವರೇ ನೆನಪಿಸಿಕೊಳ್ಳುತ್ತಾರೆ. ಒಮ್ಮೆ ಅಂದರೆ ಅವರು ಅವಿನ್ಯೂ ರಸ್ತೆಯಲ್ಲಿ ಮನೆ ಮಾಡಿದ್ದ ಸಂದರ್ಭದಲ್ಲಿ ಸಿಟಿ ಮಾರ್ಕೆಟ್ ಮೂಲಕ ಎಸ್‌ಎಲ್‌ಎನ್ ಕಾಲೇಜಿಗೆ ಬರುತ್ತಿದ್ದರು. ಕಾಲೇಜಿಗೆ ತಡವಾಗಬಾರದೆಂದು ಸ್ವಲ್ಪ ಬಿರುಸಿನಲ್ಲೇ ನಡೆದು ಬರುತ್ತಿದ್ದರು. ಹಿಂದಿನಿಂದ ಸರಕು ತುಂಬಿದ ಲಾರಿಯೊಂದು ತುಂಬಾ ವೇಗವಾಗಿ ಬಂತು. ಇವರಿಗರಿವಿಲ್ಲದಂತೆ ಬದಿಗೆ ಹೋಗಲು ಯೋಚಿಸುವಷ್ಟರಲ್ಲಿ ಬಾಳೆಹಣ್ಣಿನ ಸಿಪ್ಪೆಯ ಮೇಲೆ ಜಾರಿ ಅಲ್ಲೇ ಕುಸಿದು ಬಿದ್ದರು. ಅರೆಕ್ಷಣದಲ್ಲಿ ಸುತ್ತಮುತ್ತಲಿನ ಜನರೆಲ್ಲ ದಂಗಾಗಿ ಈ ದೃಶ್ಯವನ್ನು ನೋಡುತ್ತಲೇ ಇದ್ದರು. ಯಾರಿಗೂ ಮಾತು ಹೊರಡಲಿಲ್ಲ. ಅದೇನಾಯಿತೋ ಏನೋ ಇವರು ಬಿದ್ದ ಜಾಗದಿಂದ ಒಂದೆರಡು ಇಂಚಿನಷ್ಟು ದೂರದಲ್ಲಿ ಲಾರಿ ನಿಂತಿತ್ತು.

ಯಾವ ಮಾಯದಲ್ಲಿ ಚಾಲಕ ಬ್ರೇಕು ಹಾಕಿದ್ದನೋ ಏನೋ ಗೌಡರು ಬಿದ್ದ ಜಾಗದ ಸಮೀಪದಲ್ಲೆ ಲಾರಿ ಗಕ್ಕನೆ ನಿಂತಿತ್ತು. ಗೌಡರು ತಮ್ಮ ಕತೆ ಮುಗಿದೇಹೋಯಿತೆಂದು ಅಂದು ಕೊಂಡರೆ ಲಾರಿ ಚಾಲಕ ತನ್ನ ಕೈಯಿಂದ ಒಂದು ಸಾವು ನಡೆದೇಹೋಯಿತಲ್ಲ ಎಂದು ಗಾಬರಿಯಿಂದ ಕಣ್ಣುಮುಚ್ಚಿದ. ಆದರೆ ನಡೆಯಬೇಕಿದ್ದ ಬಹುದೊಡ್ಡ ಅಪಘಾತ ತಪ್ಪಿಹೋಗಿತ್ತು.

ಆ ಚಾಲಕ ಗೌಡರನ್ನು ಎತ್ತಿ ಸೀದಾ ಕೋಟೆ ಆಂಜನೇಯ ದೇವಸ್ಥಾನಕ್ಕೆ ಕರೆದುಕೊಂಡು ಹೋದ. ಇಬ್ಬರೂ ದೇವರೆದುರು ತಮ್ಮನ್ನು ಉಳಿಸಿದ ಉಪಕಾರಕ್ಕಾಗಿ ನಮಿಸಿದರು. ಸುಮಾರು ಮೂವತ್ತು ವರ್ಷಗಳ ಕಾಲ ದೇವರನ್ನು ತಿರಸ್ಕರಿಸಿ ಬದುಕಿದ್ದ ಗೌಡರಿಗೆ ಈ ಘಟನೆ ವಿಚಿತ್ರ ಸಂಗತಿಯಾಗಿ ಕಂಡಿತು. ಯಾವುದೋ ಒಂದು ಶಕ್ತಿ ತನ್ನನ್ನು ಕಾಪಾಡಿರಬಹುದೆ ಎಂಬ ನಂಬಿಕೆ ಬಲವಾಗತೊಡಗಿತು.

ಈ ನಂಬಿಕೆಗೆ ಇಂಬು ಕೊಡುವಂತೆ ಅವರ ಮನಸ್ಸಿಗೆ ನಾಟಿದ್ದು ಖ್ಯಾತ ವಿಜ್ಞಾನಿ ರಾಜಾ ರಾಮಣ್ಣ ಅವರ ಮಾತುಗಳು. ರಾಜಾರಾಮಣ್ಣ ದೇವರ ಇರುವಿನ ಬಗ್ಗೆ ಇಡೀ ಜಗತ್ತನ್ನೇ ನಿಯಂತ್ರಿಸುವ ಶಕ್ತಿಯೊಂದರ ಬಗ್ಗೆ ಮುಕ್ತವಾಗಿ ಮಾತಾಡಿದ್ದರು. ಅವರ ಮಾತಿನಂತೆ 'ಈ

ವಿಶ್ವದಲ್ಲಿ ಭೂಮಿಯಂತೆ ಸಾವಿರಾರು ಭೂಮಿಗಳಿರಬಹುದು, ಅಲ್ಲೂ ಇಲ್ಲಿಯಂತೆ ಬೇರೆ ಬೇರೆ ರೀತಿಯ ಜೀವಿಗಳಿರಬಹುದು, ಮನುಷ್ಯರೂ ಇರಬಹುದು. ಒಟ್ಟಿನಲ್ಲಿ ಇಡೀ ವಿಶ್ವದ ವ್ಯಾಪಾರವನ್ನು ಯಾವುದೋ ಒಂದು ಬಹುದೊಡ್ಡ ಶಕ್ತಿ ನಿಯಂತ್ರಿಸುತ್ತಿದೆ. ಅದನ್ನು ಕೈನೆಟಿಕ್ ಎನರ್ಜಿ ಎಂದಾದರೂ ಕರೆಯಿರಿ ಅಥವಾ ದೇವರು ಎಂದಾದರೂ ಕರೆಯಿರಿ. ಆದರೆ ಒಂದು ಶಕ್ತಿಯಂತೂ ಎಲ್ಲವನ್ನೂ ನಿಯಂತ್ರಿಸುವಷ್ಟು ಪ್ರಬಲವಾಗಿದೆ' ಎಂದು ಹೇಳಿದ್ದರು.

ಅಪಘಾತದ ಘಟನೆಯ ನಂತರ ಗೌಡರಿಗೆ ರಾಜಾರಾಮಣ್ಣರ ಮಾತುಗಳು ಹೆಚ್ಚು ಸರಿ ಎನಿಸತೊಡಗಿದ್ದವು. ಈ ವಿಶ್ವ, ಅದರ ಆಗುಹೋಗುಗಳು, ವಿಜ್ಞಾನವನ್ನೂ ಮೀರಿದ ನಮ್ಮ ಅರಿವಿಗೂ ಸಿಗದ ಕೆಲವು ವಿದ್ಯಮಾನಗಳು ಇವುಗಳನ್ನೆಲ್ಲ ಗಮನಿಸಿದಾಗ ಇದು ನಿಜವಿದ್ದರೂ ಇರಬಹುದು ಎಂದು ಅನಿಸತೊಡಗಿತು. ನಿಧಾನವಾಗಿ ಅವರ ಯೋಚನೆಗಳೆಲ್ಲ ಅಧ್ಯಾತ್ಮದ ಕಡೆಗೆ ವಾಲತೊಡಗಿದ್ದವು.

ಹಾಗಾಗಿ ಇದುವರೆಗೆ ಬರೆದಿದ್ದ ಕಾವ್ಯ, ಗದ್ಯ, ಪ್ರಬಂಧ ಎಲ್ಲಕ್ಕೂ ಭಿನ್ನವಾಗಿ ವಚನಗಳನ್ನು ಬರೆಯತೊಡಗಿದರು. ಈಗಾಗಲೇ ನೂರಾರು ವಚನಗಳು ಅಚ್ಚಾಗಲು ಸಿದ್ಧವಾಗಿವೆ. ಬಹುಶಃ ಈ ಅಭಿನಂದನಾ ಗ್ರಂಥ ಬಿಡುಗಡೆಯ ವೇಳೆಗೆ ನೂರಾರು ವಚನಗಳ ಪುಸ್ತಕವೂ ಅಚ್ಚಾಗಿ ಓದುಗರ ಕೈ ಸೇರಿದರೂ ಅಚ್ಚರಿಯೇನಿಲ್ಲ.

ಹಾಗೆಯೇ ಗೌಡರು ಇತ್ತೀಚೆಗೆ ಆದಿಚುಂಚನಗಿರಿ ಮಠದ ಕಾರ್ಯಗಳ ಜೊತೆಗೆ ತಮ್ಮನ್ನು ಹೆಚ್ಚು ತೊಡಗಿಸಿಕೊಂಡಿದ್ದಾರೆ. ಅದಕ್ಕೆ ಅವರೇ ಹೇಳುವ ಮಾತುಗಳು ಹೀಗಿವೆ,

'ಆದಿಚುಂಚನಗಿರಿ ಮಠದಿಂದ ಬೇರೆ ಬೇರೆ ಸಂದರ್ಭಗಳಲ್ಲಿ ನನಗೆ ತುಂಬಾ ಸಾರಿ ಕರೆ ಬಂದಿತ್ತು. ಆದರೆ ಆಗ ಯಾವತ್ತೂ ಅಲ್ಲಿ ಹೋಗಬೇಕೆನಿಸಿರಲಿಲ್ಲ. ಕಾರಣ ನಾನು ನಂಬಿದ್ದ ಸಿದ್ಧಾಂತಗಳು. ಜೊತೆಗೆ ನನ್ನ ಕೆಲಸದ ಒತ್ತಡಗಳು. ಆದರೆ ಒಮ್ಮೆ ನಮ್ಮ ಕಾಲೇಜಿಗೆ ಒಂದುಸಾರಿ ಸ್ವಾಮೀಜಿಯವರನ್ನು ಕರೆಸಬೇಕಾದ ಪ್ರಸಂಗ ಬಂದಿದ್ದರಿಂದ ನಾನು ಮಠಕ್ಕೆ ಹೋದೆ. ಆದರೂ ನನಗೆ ಅಲ್ಲಿ ಭಕ್ತಿಯಾಗಲಿ ಬೇರೆ ಯಾವ ಭಾವವಾಗಲಿ ಮೊದ ಮೊದಲು ಇರಲಿಲ್ಲ.'

ಸ್ವಾಮೀಜಿಯವರನ್ನು ಆಹ್ವಾನಿಸಿದ ನಂತರ ಸ್ವಾಮೀಜಿಯವರೇ ತಮ್ಮ ಮಠದ ಹಲವು ಶಾಖೆಗಳನ್ನು ಹಾಗೂ ಕೆಲವು ಶಾಲೆಗಳನ್ನು ನೋಡುವಂತೆ ವ್ಯವಸ್ಥೆ ಮಾಡಿದರು. ಅದರಲ್ಲಿ ದೊರಂಗೌ ಅವರ ಮನಸ್ಸಿಗೆ ನಾಟುವಂತೆ ಮಾಡಿದ ಶಾಲೆಯೆಂದರೆ ಅಂಧರ ಶಾಲೆ. ಬಹಳಷ್ಟು ಅಂಧರು, ವಿಕಲಾಂಗರು ಇದ್ದ ಆ ಶಾಲೆಯಲ್ಲಿ ಎಷ್ಟು ಶಿಸ್ತು ಮತ್ತು ಶಿಕ್ಷಣದ ಔನ್ನತ್ಯವಿತ್ತೆಂದರೆ ಬಹುಶಃ ಯಾವುದೇ ಸರ್ಕಾರಿ ಸಂಸ್ಥೆಯೂ ಮಾಡದಂತಹ ವ್ಯವಸ್ಥೆ ಅಲ್ಲಿತ್ತು. ವಿದ್ಯಾರ್ಥಿಗಳು ಸ್ವತಃ ಸಂಸ್ಕೃತದಿಂದ ಆರಂಭಗೊಂಡು ಬೇರೆ ಬೇರೆ ಭಾಷೆಗಳನ್ನು ಎಷ್ಟೊಂದು ಶಾಸ್ತ್ರೀಯವಾಗಿ ಕಲಿತಿದ್ದರೆಂದರೆ, ಅದು ವರ್ಣಿಸಲು ಅಸಾಧ್ಯವಾಗಿತ್ತು. ಅಲ್ಲಿದ್ದ ಗ್ರಂಥಾಲಯದಲ್ಲಿ

ಬ್ರೇಲ್ ಲಿಪಿಯ ಅತ್ಯಂತ ಆಧುನಿಕ ಗ್ರಂಥಗಳೆಲ್ಲ ಇದ್ದವು. ವಿದ್ಯಾರ್ಥಿಗಳಿಗೆ ಸ್ವತಃ ಸ್ವಾಮೀಜಿಯವರೆ ಸಂಸ್ಕೃತ ಪಾಠ ಹೇಳಿಕೊಡುತ್ತಿದ್ದರು.

ಇನ್ನೊಂದು ಶಾಲೆ ಅನಾಥರದ್ದು. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬಂದ ಬಡ ಅನಾಥ ಮಕ್ಕಳು ಅತ್ಯಂತ ಶುದ್ಧವಾಗಿ ಸಂಸ್ಕೃತದಲ್ಲಿ ಗ್ರಂಥದ ಭಾಗಗಳನ್ನು ಚಾಚೂತಪ್ಪದಂತೆ ಹೇಳುತ್ತಿದ್ದರು. ಅವರೆಲ್ಲರಿಗೂ ಸ್ವತಃ ಬಾಲಗಂಗಾಧರನಾಥ ಸ್ವಾಮಿಗಳೇ ಸಂಸ್ಕೃತ ಕಲಿಸುತ್ತಿದ್ದರು. ಇಲ್ಲಿ ಮುಸ್ಲಿಮರೂ ಇದ್ದರು. ದಲಿತರೂ ಇದ್ದರು. ಹಾಗೆಯೇ ಬೇರೆ ಬೇರೆ ಜನಾಂಗಗಳ ಮಕ್ಕಳೂ ಇದ್ದರು. ಶಿಕ್ಷಣ ಸಂಸ್ಥೆಯೊಂದು ಜನಾಂಗಭೇದ ಮರೆತು ನಾಳೆಯ ಪ್ರಜೆಗಳಿಗೆ ಈ ಬಗೆಯಲ್ಲಿ ಯಾವುದೇ ಫಲಾಪೇಕ್ಷೆಯಿಲ್ಲದೆ ಶಿಕ್ಷಣ ನೀಡುವ ವಿಚಾರದಿಂದ ದೊರಂಗೌ ನಿಜಕ್ಕೂ ಪ್ರಭಾವಿತರಾದರು. ಗ್ರಾಮೀಣ ಪ್ರದೇಶಗಳಲ್ಲಿ ಅತ್ಯಾಧುನಿಕ ಶಾಲೆಗಳನ್ನೂ, ಸುವ್ಯವಸ್ಥಿತ ಆಸ್ಪತ್ರೆಯನ್ನು ತೆರೆದು ಜನಪರವಾಗಿಯೇ ತಮ್ಮ ಜೀವನವನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಸ್ವಾಮೀಜಿ ಬಗ್ಗೆ ಗೌರವಭಾವ ಮೂಡಿತ್ತು. ಅವರಿಗೆ ಮಠದಿಂದ ಏನೂ ಆಗಬೇಕಿರಲಿಲ್ಲ. ಮಠದ ಕೆಲಸದಲ್ಲಿ ತಾವೂ ಒಂದು ಕೈ ಜೋಡಿಸಿ ಏಕೆ ಸೇವೆ ಮಾಡಬಾರದು ಎಂಬುದಷ್ಟೇ ಮನಸ್ಸಿಗೆ ಬಂದದ್ದು.

ಆದರೆ ಅದರ ಹಿಂದೆಯೇ ಅವರಿಗೆ ಕಾಡಿದ್ದು ಈ ಮಠಗಳೆಲ್ಲ ಜನರಿಂದ ಹಣ ಪಡೆಯುತ್ತಿವೆಯಲ್ಲ ಎಂಬ ಭಾವನೆ. ಸ್ವಾಮೀಜಿ ಒಂದೇ ಮಾತು ಹೇಳಿದರು. ನಾನು ಕಾವಿ ಹಾಕಿಕೊಂಡು ಜೋಳಿಗೆ ಹಿಡಿಯದೆ ಹೋದರೆ ಇಷ್ಟೊಂದು ಹಸಿದ ಹೊಟ್ಟೆಗಳಿಗೆ ಅನ್ನ ಕೊಡುವವರಾರು? ಇಲ್ಲಿ ಎಲ್ಲ ಬಗೆಯ ಜನರೂ ಬರುತ್ತಾರೆ. ಮೊದಲೆಲ್ಲ ಸ್ವಾಮೀಜಿಗಳೆಂದರೆ ಸನ್ಯಾಸ, ಆಶ್ರಮ, ಪ್ರವಚನ ಇಷ್ಟಕ್ಕೇ ಸೀಮಿತವಾಗುತ್ತಿತ್ತು. ಆದರೆ ನಾನು ಹಾಗೆ ಮಾಡಲು ಸಾಧ್ಯವಿಲ್ಲ. ನನಗೆ ಜನಗಳ ನೋವನ್ನು ಅರಿಯುವುದು ಮುಖ್ಯ. ಹಾಗೆಯೇ ಅದನ್ನು ನನ್ನ ಕೈಲಾದ ಮಟ್ಟಿಗೆ ಶಮನ ಮಾಡುವುದೂ ಮೊದಲ ಕರ್ತವ್ಯ ಎಂದು ಭಾವಿಸಿದ್ದೇನೆ. ಹಾಗಾಗಿ ಉಳ್ಳವರಿಂದ ದಾನ ಪಡೆಯುತ್ತೇನೆ ಇಲ್ಲದವರಿಗೆ ಅದನ್ನು ವಿನಿಯೋಗ ಮಾಡುತ್ತೇನೆ' ''ಸ್ವಾಮೀಜಿ ಅವರನ್ನು ಭೇಟಿಯಾದ ಮೊದಲ ಸಂದರ್ಭದಲ್ಲೇ ಅವರ ಕಂಗಳಲ್ಲಿ ತಾಯಿಯ ವಾತ್ಸಲ್ಯವನ್ನು ಕಂಡೆ; ಅಕ್ಕರೆಯ ನೋಟವನ್ನು ಕಂಡೆ. ಆ ಪ್ರಶಾಂತ ಭಾವನೆಗಳು ನನ್ನ ಬಾಳಿನ ದಿಕ್ಕನ್ನೇ ಬದಲಾಯಿಸಿದವು. ಅವರ ಸಂಸರ್ಗದಲ್ಲಿ ನನಗೆ ಅರಿವಿಲ್ಲದಂತೆಯೇ ಆಧ್ಯಾತ್ಮ ಜಗತ್ತಿನತ್ತ ಆಕರ್ಷಿತನಾಗಿದ್ದೆ'' ಎಂದು ದೊಡ್ಡರಂಗೇಗೌಡರು ಆ ಸನ್ನಿವೇಶವನ್ನು ಬಣ್ಣಿಸುತ್ತಾರೆ.

ಈ ಮಾತುಗಳು ದೊರಂಗೌ ಅವರನ್ನು ಗಾಢವಾಗಿ ತಟ್ಟಿತು. ಸ್ವಾಮೀಜಿಯವರು ಮಾಡುವ ಕೆಲಸದಲ್ಲಿ ತಾವೂ ಕೈ ಜೋಡಿಸುವ ನಿರ್ಧಾರ ಮಾಡಿದರು. ಆದಾಗಲೇ ಅವರ ಮನಸ್ಸು ಸಾಮಾಜಿಕ ಕಾರ್ಯಗಳತ್ತ ಹೊರಳಿತ್ತು. ಅದಕ್ಕೆ ವೇದಿಕೆಯೆಂಬಂತೆ ಆದಿಚುಂಚನಗಿರಿ ಮಠದ ಬೆಂಬಲ ದೊರೆಯಿತು. ಅಂತರಜಾತಿಯ ವಿವಾಹ, ಸರಳ ವಿವಾಹ, ದೀನ ದಲಿತರ

ಸಂಕಷ್ಟಗಳಿಗೆ ಸಾಧ್ಯವಾದಷ್ಟೂ ಸ್ಪಂದನ, ಇಲ್ಲದವರ ನೋವಿಗೆ ತುಡಿತ ಹೀಗೆ ತಮ್ಮ ಮಟ್ಟಿಗೆ ತಾವು ಕೈಲಾದ ಸೇವೆಗಾಗಿ ಹಮ್ಮಿಕೊಂಡರು. ಇವತ್ತು ಗೌಡರ ಕೆಲಸಗಳು ಹತ್ತು ಹಲವಾದರೂ ಮಠದ ಕೆಲಸಗಳ ಜೊತೆಗೆ ಈ ಕೆಲಸಗಳನ್ನು ನಿಷ್ಠೆಯಿಂದ ಮಾಡುತ್ತಾರೆ.

ಹಾಗಾಗಿ ಗೌಡರ ದೃಷ್ಟಿಯಲ್ಲಿ ಅಧ್ಯಾತ್ಮವೆಂದರೆ ಕೇವಲ ದೇವರು ಧರ್ಮವನ್ನು ನಂಬಿ ಅರ್ಥವಿಲ್ಲದ ಸಿದ್ಧಾಂತ ಹೇಳುವುದಲ್ಲ, ಬದಲಿಗೆ ಸಾಮಾಜಿಕವಾಗಿ ನೊಂದವರ ದನಿಗೆ ತಮ್ಮ ದನಿ ಕೂಡಿಸುವುದು. ಹಾಗೆಯೇ ಅವರ ಕಷ್ಟಗಳನ್ನು ತಮ್ಮ ಕೈಲಾದ ಮಟ್ಟಿಗೆ ಶಮನ ಮಾಡಲು ಸಹಕರಿಸುವುದು.



ಒಬ್ಬ ಕವಿಯ ಅರವತ್ತು ವಸಂತಗಳೆಂದರೆ ಅದೊಂದು ಸಾಹಿತ್ಯ ಚರಿತ್ರೆಯ ದಾಖಲೆ ಎಂದೇ ಅರ್ಥ. ಅಂದರೆ ಕವಿಯೊಬ್ಬ ತನ್ನ ಸಮಕಾಲೀನ ಬದುಕನ್ನು ಚಿಂತಿಸುತ್ತಲೇ ತನ್ನ ಸಮಯದ ಆಗು-ಹೋಗುಗಳನ್ನು ದಾಖಲಿಸುತ್ತಾ ಇತಿಹಾಸವನ್ನು ರಚಿಸುತ್ತಲೇ ಸಾಗುತ್ತಿರುತ್ತಾನೆ.

ಹೀಗೆ ಕಾವ್ಯದ ಜಾಡು ಹಿಡಿದು ಇತಿಹಾಸವನ್ನು ಜನಸಾಮಾನ್ಯರ ತೆಕ್ಕೆಗೆ ಒದಗಿಸಿಕೊಟ್ಟ ಸಾರಸ್ವತ ಲೋಕದ ಹಲವು ಗಣ್ಯರ ನಡುವೆ ನಮ್ಮೆಲ್ಲರ ಹೆಮ್ಮೆಯ ಕವಿ ಡಾ|| ದೊಡ್ಡರಂಗೇಗೌಡರು ಪ್ರಮುಖವಾಗಿ ನಿಲ್ಲುತ್ತಾರೆ. ಪದಗಳನ್ನು ಪದಗಳಿಗೆ ಜೋಡಿಸಿ ಕಾವ್ಯ ಕಟ್ಟುವಿಕೆ ಒಂದು ಬಗೆಯಾದರೆ ನೆಲದ ಒಡಲಿಂದ ಮಣ್ಣಿಯ ಧ್ವನಿಯನ್ನು ಹಿಡಿದು ಹಾಡಾಗಿ ಕಾವ್ಯಕಟ್ಟುವ ಬಗೆಯೇ ವಿಶಿಷ್ಟವಾದುದು. ಅಂದರೆ ಶ್ರಮಿಕರ, ಕೃಷಿಕರ, ಕೂಲಿಕಾರರ ಶ್ರಮ ಜೀವನದ ನಡುವೆ ಹುಟ್ಟಿದ ಕಾವ್ಯ ಗೌಡರದು. ಹಾಗಾಗಿ ಗೌಡರು ಜಾನಪದ ಜಂಗಮ ಮಾತ್ರವಲ್ಲ ಜನಸಾಮಾನ್ಯರ ಒಳದನಿಯನ್ನು ನಾಡಿನ ಉದ್ದಗಲಕ್ಕೆ ಹಂಚಿದ ಕವಿ.

ಈ ಮಣ್ಣಿನ ಸೊಗಡು; ರಾಗಿತೆನೆಯ ಕಂಪು; ಗುಡಿಸಲ ಬದುಕು; ಅಂಬರದೆಡೆಗೆ ಕಣ್ಣಿಟ್ಟು ಸಾಗುವ ಅಪಾರ ನಿರೀಕ್ಷೆ; ಪ್ರಕೃತಿಯ ಸೊಬಗನ್ನೆಲ್ಲಾ ಬೊಗಸೆಯಲ್ಲೇ ತುಂಬಿಕೊಳ್ಳುವ ಜೀವನ ಪ್ರೀತಿ-ಗೌಡರ ಕಾವ್ಯದಲ್ಲಿ ಕಾಣುವ ವಿಶೇಷ ಸೊಗಸು ಇದು. ಹಾಗೆಯೇ ಬೆವರ ಬದುಕಲ್ಲಿ ಹುಟ್ಟಿದ ಲಯಬದ್ಧ ಕವಿತೆ, ನೋವಿನ ಮಡುವಲ್ಲಿ ಕಟ್ಟಿದ ಹೃದಯ ಗೀತೆ.... ಹೀಗೆ ಬದುಕಿನ ಅನುಭವವೆಲ್ಲಾ ಹಾಡಾಗಿ ಹರಿದಿರುವುದು ಗೌಡರ ಕಾವ್ಯದ ಅತ್ಯಂತ ಅಮೂಲ್ಯ ಸಂಗತಿಗಳಲ್ಲೊಂದು.





# ಸರಳ ಸಜ್ಜನಿಕೆಯ ವ್ಯಕ್ತಿ

● ಜಿ. ನಾರಾಯಣ್

ಸರಳ ಸಜ್ಜನಿಕೆಗೆ ಮತ್ತೊಂದು ಹೆಸರು ಕವಿ ದೊಡ್ಡರಂಗೇಗೌಡರು. ನಿರಾಡಂಬರದ ನಿಗರ್ವತೆ ವ್ಯಕ್ತಿತ್ವದ ಗೌಡರಿಗೆ ಈಗ 60 ಎಂದರೆ ನಿಜಕ್ಕೂ ನಂಬಲು ಸಾಧ್ಯವಿಲ್ಲ. ಸದಾ ಹಸನ್ಮುಖಿ. ಸಿಕ್ಕಾಗ ಬಾಯಿತುಂಬ ಮಾತನಾಡಿಸುತ್ತಾರೆ. ಹೊರಗೊಂದು ಒಳಗೊಂದು ಎನ್ನುವ ಮನೋಭಾವದವರಲ್ಲ. ಹಿಂದುಳಿದ ಹಳ್ಳಿಗಾಡಿನಲ್ಲಿ ಹುಟ್ಟಿ ಬಡತನವನ್ನು ಬೆನ್ನಿಗೆ ಕಟ್ಟಿಕೊಂಡು ಬೆಂಗಳೂರಿಗೆ ಬಂದವರು. ತೀವ್ರ ಆರ್ಥಿಕ ಮುಗ್ಗಟ್ಟಿನಿಂದ ಓದಿಗೆ ತೊಂದರೆಯಾದರೂ ಸಹ ಓದಲೇಬೇಕೆಂಬ ಹಠ. ಅಂಚೆ ಕಛೇರಿಯಲ್ಲಿ ತಾತ್ಕಾಲಿಕ ಹುದ್ದೆಗೆ ಸೇರಿ ಅಲ್ಲಿ ಹಗಲೂ-ರಾತ್ರಿ ಕೆಲಸದಲ್ಲಿದ್ದು ಶ್ರಮದಿಂದ ಉನ್ನತಮಟ್ಟದ ವಿದ್ಯಾಭ್ಯಾಸವನ್ನು ಮುಗಿಸಿದರು. ಬಡ ಕಾರಕೂನನಿಂದ ಕಾಲೇಜು ಪ್ರಾಚಾರ್ಯರವರೆಗೆ ಏರಿದ ದೊಡ್ಡ ರಂಗೇಗೌಡರು ನಡೆದು ಬಂದ ದಾರಿ ನಿಜಕ್ಕೂ ದುರ್ಗಮವಾದದ್ದು ಹಾಗೂ ಆಶ್ಚರ್ಯ ತರುವಂತಾದ್ದು.

ಆಡುಮುಟ್ಟದ ಸೊಪ್ಪಿಲ್ಲ ಎಂಬುದು ನಮ್ಮಲ್ಲಿನ ಗಾದೆ ಮಾತು. ಈ ಗಾದೆಗೆ ಹೊಂದಿಕೊಂಡಂತೆ ದೊಡ್ಡರಂಗೇಗೌಡರು ಮುಟ್ಟದ ವಸ್ತುವಿಲ್ಲ ಎಂದೆ ಹೇಳಬೇಕು. ಬಹುಶಃ ರಾಜಕೀಯ ಕ್ಷೇತ್ರವನ್ನು ಬಿಟ್ಟು ಸಾಹಿತ್ಯಕ ಕ್ಷೇತ್ರದ, ನಾಟಕ ಹಾಗೂ ಸಿನಿಮಾರಂಗದ ಎಲ್ಲ ಮಜಲುಗಳಲ್ಲೂ ಕೈಯಾಡಿಸಿ ಹೆಸರು ಗಳಿಸಿರುವಂತಹವರು. ಆದರೆ ಅಷ್ಟೆಲ್ಲಾ ಕ್ಷೇತ್ರದಲ್ಲಿ ಶ್ರೀಯುತ ಗೌಡರು ಹೆಸರು ಮಾಡಿದರೆ ವಿನಃ ಹಣ ಮಾಡಲಿಲ್ಲ ಎಂಬುದು ಅಷ್ಟೇ ಸತ್ಯ.

ಇಂದು ದೃಶ್ಯಮಾಧ್ಯಮ ಅಗಾಧವಾಗಿ ಬೆಳೆಯುತ್ತಿದೆ. ಜನಸಾಮಾನ್ಯರು ಈ ಮಾಧ್ಯಮದ ಮೂಲಕ ಒಳ್ಳೆಯದನ್ನು ಪಡೆಯುತ್ತಾರೊ ಅದರ ಎರಡುಪಟ್ಟು ಕೆಟ್ಟದ್ದನ್ನು ಕಲಿಯುತ್ತಿದ್ದಾರೆ ಎಂದು ದುಃಖದಿಂದ ಹೇಳಲೇಬೇಕಾಗುತ್ತದೆ. ಸಿನಿಮಾ ಹಾಗೂ ಟಿ.ವಿ.ಗಳಲ್ಲಿ ಇಂತಹ ಮಂದಿಗೆಂದೇ ಕ್ರೌರ್ಯ, ಹಿಂಸೆ, ಅಶ್ಲೀಲ ಮಾತು ಹಾಗೂ ಚಿತ್ರಗಳನ್ನು ತೋರಿಸುತ್ತಾ ಅದರಲ್ಲೂ ಯುವಜನಾಂಗದವರಿಗೆ ದಾರಿ ತಪ್ಪಿಸುತ್ತಿದ್ದಾರೆ. ಕವಿ ನೇಮಿಚಂದ್ರ ಹೇಳುವ ಕಾವ್ಯ

ಪ್ರಯೋಜನಗಳು ಕೇವಲ ಕಾವ್ಯಕ್ಕೆ ಮಾತ್ರ ಎಂದು ಯಾರೂ ಭಾವಿಸಬಾರದು. ಮೇಲಿನ ಈ ಎರಡು ಮಾಧ್ಯಮಗಳಿಗೂ ಈ ಮಾತು ಅನ್ವಯವಾಗುತ್ತದೆ. ಸದಭಿರುಚಿಯು ಎಲ್ಲಿ ಮನೆಮಂದಿಯೆಲ್ಲ ನೋಡುವಂತಹ ಅರ್ಥ ಮಾಡಿಕೊಳ್ಳುವಂತಹ ಕೆಲವೇ ಕೆಲವು ಕಪಿ ತಂತ್ರಜ್ಞರಲ್ಲಿ ದೊಡ್ಡರಂಗೇಗೌಡರು ಒಬ್ಬರು. ಸಾಹಿತ್ಯ ರಚನೆ, ಸಂಭಾಷಣೆ ವಿಮರ್ಶಾ ಲೇಖನಗಳು, ವ್ಯಕ್ತಿ ಪರಿಚಯ, ಪ್ರವಾಸ ಸಾಹಿತ್ಯ ಮುಂತಾದ ನಾನಾ ಪ್ರಕಾರದ ಸಾಹಿತ್ಯ ಲೇಖನಗಳನ್ನು ಬರೆದಿರುವ ಗೌಡರು ನಿಜಕ್ಕೂ ಪ್ರಶಂಸಾರ್ಹರು. ಇವರ ಬಹುಪಾಲು ಕವಿತೆಗಳಲ್ಲಿ ಜಾನಪದದ ಹಳ್ಳಿಯಮಣ್ಣಿನ ಸೊಗಡನ್ನು ಕಾಣಬಹುದು. ಹೀಗಾಗಿ ಬಹುತೇಕ ಕವನಗಳು ಇಂದಿಗೂ ಅಚ್ಚ ಹಸಿರಾಗಿ ಜನಮನದ ಹೃದಯದಲ್ಲಿ ಗಟ್ಟಿಯಾಗಿ ನಿಂತಿವೆ. ಆದ್ದರಿಂದಲೇ ದೊಡ್ಡರಂಗೇಗೌಡರನ್ನು ಅನೇಕರು **"ಜನಮನದ ಕವಿ"** ಎಂದೇ ಗುರ್ತಿಸುವುದು.

ಗೌಡರು ತುಂಬ ಶಿಸ್ತುಬದ್ಧ ನಡತೆಯುಳ್ಳ ವ್ಯಕ್ತಿ. ಮಾತನಾಡಬೇಕಾದರೆ ಮತ್ತೊಬ್ಬರಿಗೆ ಎಲ್ಲಿ ನೋವಾಗುತ್ತದೋ ಎಂದು ಭಾವಿಸುತ್ತಾರೆ. ಯಾವುದೇ ಕೆಲಸ ಮಾಡಬೇಕಾದರೂ ಒಪ್ಪ ಓರಣ. ಎಲ್ಲದರಲ್ಲೂ ಅಚ್ಚುಕಟ್ಟುತನ ಎದ್ದು ಕಾಣುವಂತದ್ದು. ಅದೇ ರೀತಿ ಅವರ ಸಂಸಾರವು ಸಹ.

ಸರ್ಕಾರದ ಘೋಷಣೆಯಂತೆ ಶ್ರೀಯುತರಿಗೆ ಆರತಿಗೊಬ್ಬ ಮಗಳು, ಕೀರ್ತಿಗೊಬ್ಬ ಮಗ. ಕೈಹಿಡಿದ ಧರ್ಮಪತ್ನಿ ಕಾಲೇಜಿನ ಪ್ರೊಫೆಸರು. ಜೊತೆಗೆ ಆದಿಚುಂಚನಗಿರಿಯಂತಹ ಆಧ್ಯಾತ್ಮಿಕ ಕ್ಷೇತ್ರದ ಬಗ್ಗೆ ಪಿಹೆಚ್.ಡಿ. ಪಡೆದವರು. ಪತಿಯಂತೆ ವಿದ್ಯಾರ್ಥಿಗಳಿಗೆ ನಿಷ್ಠೆ ಹಾಗೂ ಪ್ರಾಮಾಣಿಕತೆಯಿಂದ ಪಾಠಗಳನ್ನು ಹೇಳಿದವರು. ಇವರ ಇಬ್ಬರು ಮಕ್ಕಳು ಸಹ ಕನ್ನಡ ಎಂ.ಎ. ಪದವೀಧರರು. ಒಟ್ಟಾರೆ ಮನೆ ಮಂದಿಯೆಲ್ಲ ಕನ್ನಡ ಎಂ.ಎ., ಪದವಿ ಪಡೆದು ಎಲ್ಲರು ಪಿಹೆಚ್.ಡಿ. ಪಡೆದಿರುವುದು ಬಹುಶಃ ನಮ್ಮ ನಾಡಿನ ವಿಶಿಷ್ಟ ದಾಖಲೆಯೆಂದೇ ಹೇಳಬೇಕು.

ವಿನೋದ ಮಾಸಪತ್ರಿಕೆ ಹಾಗೂ ದೊಡ್ಡರಂಗೇಗೌಡರ ಸಂಬಂಧ ತುಂಬ ಆಳವಾದದ್ದು. ಇವರ ''ಮಣ್ಣಿನ ಮಾತುಗಳು'' ಶೀರ್ಷಿಕೆಯ ಚೌಪದಿ ಪದ್ಯಗಳು ವಿನೋದ ಪತ್ರಿಕೆಯಲ್ಲಿ ನಾಲ್ಕೈದು ವರ್ಷ ನಿರಂತರವಾಗಿ ಪ್ರಕಟವಾಗಿವೆ. ತಾವು ಕಂಡುಂಡ ಜೀವನದ ವೈಚಿತ್ರ್ಯ, ಸಮಾಜದ ನೋವು ನಲಿವುಗಳನ್ನು ಈ ಮಣ್ಣಿನ ಮಾತುಗಳಲ್ಲಿ ಕಾಣಬಹುದಾಗಿದೆ. ತಮಗೆ ಆದ ನೋವುಗಳನ್ನು ನುಂಗಿ ಓದುಗರಿಗೆ ಮಣ್ಣಿನ ಮಾತಿನ ಮೂಲಕ ಸಿಹಿಯನ್ನು ಹಂಚಿದ್ದಾರೆ. ಬಹುಶಃ ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗದಂತೆ ಮಣ್ಣಿನ ಮಾತುಗಳು ಸಹ. ವಿನೋದದಲ್ಲಿ ಇವು ಪ್ರಕವಾಗುವ ವೇಳೆಯಲ್ಲಿ ಶ್ರೀಯುತ ಗೌಡರು ಕೈಬರವಣಿಗೆಯಲ್ಲಿ ಬರೆದು ತಾವೇ ಸ್ವತಃ ಬಂದು ವಿನೋದ ಕಾರ್ಯಾಲಯಕ್ಕೆ ಮುಂಚಿತವಾಗಿ ತಲುಪಿಸುತ್ತಿದ್ದರು. ವಿನೋದ ಬಳಗ ಇವರನ್ನು ಸದಾ ಸ್ಮರಿಸುತ್ತವೆ.

ಸಾಮಾನ್ಯವಾಗಿ ಒಳ್ಳೆಯ ನಡೆನುಡಿಯುಳ್ಳವರು ಆಧ್ಯಾತ್ಮಿಕದ ಕಡೆಗೆ ಹೋಗುವುದೇ ಹೆಚ್ಚು. ಆದರೂ ಆಧ್ಯಾತ್ಮಿಕತೆಯುಳ್ಳವರಲ್ಲ. ಇಂತಹ ಉತ್ತಮ ವ್ಯಕ್ತಿತ್ವವುಳ್ಳ ವಿರಳ ವ್ಯಕ್ತಿಗಳಲ್ಲಿ ದೊಡ್ಡ ರಂಗೇಗೌಡರು ಒಬ್ಬರು. ಮನುಷ್ಯ ಜನ್ಮ ತುಂಬ ವಿರಳವಾದದ್ದು. ಅಂತಹ ಜನ್ಮವನ್ನು ನೀಡಿ ಪ್ರೋತ್ಸಾಹಿಸಿದ ಈ ಸಮಾಜಕ್ಕೆ ಆತ ಋಣಿಯಾಗಿರಬೇಕು. ತನ್ನ ಕೈಲಾದಮಟ್ಟಿಗೆ ತಂದೆತಾಯಿಗೆ, ಹುಟ್ಟಿದ ಊರಿಗೆ, ಆತನ ಸಮಾಜಕ್ಕೆ ಸ್ವಲ್ಪವಾದರೂ ತನ್ನ ಕಾಣಿಕೆಯನ್ನು ಸೇವೆಯ ಮೂಲಕ ನೀಡಬೇಕಾಗುತ್ತದೆ. ನಿವೃತ್ತಿಯ ನಂತರ ಬಹುಪಾಲು ವೇಳೆಯನ್ನು ದೊಡ್ಡರಂಗೇಗೌಡರು ಈಗ ಶ್ರೀಕ್ಷೇತ್ರ ಆದಿಚುಂಚನಗಿರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಈ ದಂಪತಿಗಳಿಗೆ ಪೂಜ್ಯಶ್ರೀ ಶ್ರೀ ಶ್ರೀಯವರ ಮೂರ್‍ನಾಲ್ಕು ಬಾರಿ ವಿದೇಶಿ ಯಾತ್ರೆಯನ್ನು ಕೈಗೊಂಡು ಅಲ್ಲಿನ ಜನಕ್ಕೆ ಭಾರತದ ಹಿಂದೂ ಧರ್ಮದ ಆಧ್ಯಾತ್ಮಿಕತೆಯ ಹಿರಿಮೆ ಗರಿಮೆಗಳನ್ನು ಪರಿಚಯಿಸುವುದರ ಮೂಲಕ ಈ ನಾಡಿನ ಋಣವನ್ನು ತೀರಿಸಿದ್ದಾರೆ. **"ಆದಿಚುಂಚನಗಿರಿ"** ಪತ್ರಿಕೆಗೆ ಈಗ ಸಂಪಾದಕರಾಗಿ ತಮ್ಮ ಸಾಹಿತ್ಯದ ಅನುಭವವನ್ನು ಧಾರೆ ಎರೆಯುತ್ತಿದ್ದಾರೆ.

ಕೊನೆಯಲ್ಲಿ ಒಂದು ಮಾತು. ಇದು ನನ್ನ ವೈಯಕ್ತಿಕ ಅಭಿಪ್ರಾಯ ಸಹ. ದೊಡ್ಡರಂಗೇಗೌಡರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿ ಮಾಡಿ ಹೆಸರು ಪಡೆದಿದ್ದರೂ ಸಹ ಇಂದಿನ ವಿಮರ್ಶಕರು ಇವರನ್ನು ಸರಿಯಾಗಿ ಗುರುತಿಸಿಲ್ಲ ಎಂದು ಅನ್ನಿಸುತ್ತದೆ. ಆದರೂ ಒಂದು ಸಮಾಧಾನದ ಸಂಗತಿ ಎಂದರೆ ವಿಮರ್ಶಕರ ಕಣ್ಣಿಗೆ ಎತ್ತರವಾಗಿ ಬೆಳೆಯದಿದ್ದರೂ ಜನಸಾಮಾನ್ಯರ ಕಣ್ಣಿಗೆ ಹಿರಿಯ-ಆದರ್ಶವ್ಯಕ್ತಿಯಾಗಿ ಬೆಳೆದಿದ್ದಾರೆ. ಹೆಸರಿಗೆ ತಕ್ಕ ಹಾಗೆ ರಂಗೇಗೌಡ ದೊಡ್ಡರಂಗೇಗೌಡರಾಗಿ ಬದುಕಿ ತೋರಿಸಿದ್ದಾರೆ. ಇವರಂತಹ ವ್ಯಕ್ತಿಗಳು ಸಮಾಜದಲ್ಲಿ ಇದ್ದರೆ ಅದು ಈ ಜನಾಂಗದ ಪುಣ್ಯವೆಂದೇ ಭಾವಿಸಬೇಕು. ನಮ್ಮೆಲ್ಲರ ನಡುವೆ ಬಹುಕಾಲ ಬಾಳಲಿ ಎಂದು ಹಾರೈಸುತ್ತೇನೆ.

❑



# ಸಮಾಜದ ಒಳಿತಿಗೆ ಜೀವನ ಮುಡಿಪಾಗಿಟ್ಟ ಸಾಹಿತಿ

● ಸಿ. ರಂಗಸ್ವಾಮಯ್ಯ

ಕನ್ನಡ ನಾಡಿನ ತುಮಕೂರು ಜಿಲ್ಲೆಯಲ್ಲಿ ಬಹುಮಂದಿ ಉಪನ್ಯಾಸಕರು ಶಿಕ್ಷಣ ತಜ್ಞರು, ಸಾಹಿತಿಗಳು, ಕವಿಗಳು, ವಿಮರ್ಶಕರು, ಹಾಗೂ ಗೀತರಚನಕಾರರು ಇದ್ದಾರೆ. ಆದರೆ ಈ ಮೇಲ್ಕಂಡ ಎಲ್ಲಾ ಕ್ಷೇತ್ರಗಳಲ್ಲಿ ಪ್ರತಿಭೆಯುಳ್ಳವರು ಡಾ॥ ದೊಡ್ಡರಂಗೇಗೌಡರೆ ಮೊದಲಿಗರೆಂದು ನಾನು ಭಾವಿಸಿದ್ದೇನೆ. ಇದು ಅವರ ಗುರುವಾದ ನನಗೆ ಹರ್ಷದಾಯಕವಾದದ್ದು.

ಡಾ॥ ದೊಡ್ಡರಂಗೇಗೌಡರು ಮಧುಗಿರಿ ತಾಲ್ಲೂಕು ಕುರುಬರಹಳ್ಳಿಯಲ್ಲಿ ಜನಿಸಿದವರು. ಇವರ ತಂದೆ ದಿ.ಕೆ. ರಂಗೇಗೌಡರು ಪಟೇಲ್ ಮನೆತನದವರು. ಇವರು ವೃತ್ತಿಯಲ್ಲಿ ಶಿಕ್ಷಕರು. ತಾಯಿ ಶ್ರೀಮತಿ ಅಕ್ಕಮ್ಮನವರು. ಸಿರಾ ತಾಲ್ಲೂಕು ಬರಗೂರು ಗ್ರಾಮದ ಪೂಜಾರ್ ಮನೆತನದವರು. ಇವರು ಗೃಹಿಣಿ, ಸರಳ ಜೀವಿಗಳು.

ದಿ. ರಂಗೇಗೌಡರಿಗೆ ನಾಲ್ಕು ಮಂದಿ ಗಂಡು ಮಕ್ಕಳು ಹಾಗೂ ನಾಲ್ಕು ಹೆಣ್ಣು ಮಕ್ಕಳು, ಡಾ॥ ಗೌಡರು ಜ್ಯೇಷ್ಠ ಪುತ್ರರು. ಎರಡನೆಯವರು ಶ್ರೀ ಪುಟ್ಟಯ್ಯನವರು. ಇವರು ಸಿದ್ಧಾರ್ಥ ಡಿ. ಇಡಿ ಕಾಲೇಜಿನಲ್ಲಿ ಪ್ರಿನ್ಸಿಪಾಲರು. ಮೂರನೇ ಪುತ್ರ ಶ್ರೀ ನಾಗರಾಜು ಪ್ರೌಢ ಶಾಲಾ ಶಿಕ್ಷಕರು. ನಾಲ್ಕನೆಯ ಪುತ್ರ ರಾಮಕೃಷ್ಣ ಐ.ಟಿ.ಐ. ನಲ್ಲಿ ಶಿಕ್ಷಕರು.

ನಾನು ಮಧುಗಿರಿ ತಾಲ್ಲೂಕು ಬಡವನಹಳ್ಳಿ ಎನ್.ಟಿ.ಎಂ. ಶಾಲೆಯಲ್ಲಿ 1952ರಿಂದ 1958ರವರೆಗೆ ಇಂಗ್ಲೀಷ್ ಭಾಷಾ ಶಿಕ್ಷಕನಾಗಿದ್ದೆನು. ಇದೇ ಶಾಲೆಯಲ್ಲಿ ದಿ.ಕೆ. ರಂಗೇಗೌಡರೂ ಶಿಕ್ಷಕರಾಗಿದ್ದರು. ದಿ.ಕೆ. ರಂಗೇಗೌಡರ ಇರಾದೆಯಂತೆ ಡಾ॥ ಗೌಡರನ್ನು ನನ್ನ ಮನೆಯಲ್ಲೇ ಇರಿಸಿಕೊಂಡು ಶಾಲೆಗೆ ಕಳುಹಿಸುತ್ತಿದ್ದೆನಲ್ಲದೆ ಮನೆಯಲ್ಲೂ ಎಲ್ಲಾ ವಿಷಯಗಳ ಬೋಧನೆ ಮಾಡುತ್ತಿದ್ದೆನು. ಇವರನ್ನು ನನ್ನ ಶ್ರೀಮತಿಯವರು ಮಗನಂತೆ ಪ್ರೀತಿಸುತ್ತಿದ್ದರು.

ಡಾ॥ ಗೌಡರು ಏಕಾಗ್ರಚಿತ್ತರು, ಸೂಕ್ಷ್ಮಮತಿಯವರು, ಶ್ರದ್ಧಾ ಭಕ್ತಿವುಳ್ಳವರು. ಇವರ ಜ್ಞಾಪಕ ಶಕ್ತಿ ಶ್ಲಾಘನೀಯವಾದದ್ದು. ನನಗೆ ಡಾ॥ ಗೌಡರು, ನಿಮ್ಮಿಂದ ನಾನು ಇಂಗ್ಲಿಷ್ ಭಾಷೆಯಲ್ಲಿ ಪ್ರವೀಣನಾದೆ ಎಂದು ಸಂತೋಷದಿಂದ ಹೇಳುತ್ತಿರುತ್ತಾರೆ.

ಡಾ॥ ಗೌಡರ ಅದ್ವಿತೀಯ ಪ್ರತಿಭೆಯನ್ನು ವರ್ತಮಾನ ಪತ್ರಿಕೆ, ಟಿ.ವಿ. ಮಾಧ್ಯಮಗಳಲ್ಲಿ ವೀಕ್ಷಿಸಿ ಹರ್ಷಭರಿತನಾಗುತ್ತಿದ್ದೇನೆ. ಶ್ರೀಯುತರು ನಾನಾ ಕ್ಷೇತ್ರಗಳಲ್ಲಿ ಕೆಲಸ ಮಾಡಿ ರಾಜ್ಯ ಪ್ರಶಸ್ತಿ ವಿಜೇತರು, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಪುರಸ್ಕೃತರಾಗಿರುವುದು ಹೆಮ್ಮೆಯ ಸಂಗತಿ. ಶಿಷ್ಯರೊಬ್ಬರು ನಾಡಿನ ಕಣ್ಮಣಿಯಾಗಿರುವುದು ನನಗೆ ಅತ್ಯಂತ ಆನಂದದಾಯಕ.

ತಮ್ಮ ಅರವತ್ತು ವರ್ಷಗಳಲ್ಲಿ ಹಲವು ರಂಗಗಳಲ್ಲಿ ಸಾಧಕರಾಗಿ ಸಮಾಜದ ಒಳಿತಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿರುವ ಡಾ॥ ದೊಡ್ಡರಂಗೇಗೌಡರಿಗೆ ನನ್ನ ಹಾರ್ಧಿಕ ಅಭಿನಂದನೆಗಳು. ದೇಶ ವಿದೇಶಗಳಲ್ಲೂ ಕನ್ನಡನಾಡಿನ ಸಂಸ್ಕೃತಿ ಸಾಹಿತ್ಯವನ್ನೇ ಬೆಳಗಿಸಿ ಸಾರ್ಥಕ ಜೀವನವನ್ನು ಸಾಗಿಸುತ್ತಿರುವ ಡಾ॥ ಗೌಡರಿಗೆ ತುಂಬು ಹೃದಯದ ಅಭಿನಂದನೆಯನ್ನೇ ಅರ್ಪಿಸುತ್ತೇನೆ.

ದಯಾಮಯನಾದ ಭಗವಂತನು ಡಾ॥ ದೊಡ್ಡರಂಗೇಗೌಡರಿಗೆ ಹಾಗೂ ಅವರ ಕುಟುಂಬ ವರ್ಗದವರಿಗೆ ಹೆಚ್ಚಿನ ಶ್ರೇಯಸ್ಸು ನೀಡಲೆಂದು ಪ್ರಾರ್ಥಿಸುತ್ತೇನೆ.





# ಉನ್ನತ ಆಕಾಂಕ್ಷಿ

• ಪ್ರೊ|| ಜಿ. ವೆಂಕಟಸುಬ್ಬಯ್ಯ

ನನ್ನ ತರುಣ ಮಿತ್ರರಾದ ಡಾ|| ದೊಡ್ಡರಂಗೇಗೌಡರನ್ನು ಅವರ ವಿದ್ಯಾರ್ಥಿದೆಸೆಯಿಂದಲೇ ಬಲ್ಲೆ. ತುಂಬ ನಿಷ್ಠಾವಂತ ವಿದ್ಯಾರ್ಥಿಯಾದ ಅವರು ತುಂಬ ಸ್ವಾಭಿಮಾನಿ. ಅಲ್ಲದೆ ಉನ್ನತ ಆಕಾಂಕ್ಷೆಗಳನ್ನು ಹೊಂದಿದ್ದರು. ವಿದ್ಯಾಭ್ಯಾಸವನ್ನು ಪೂರೈಸಿದ ಮೇಲೆ ಸೃಷ್ಟಿಶೀಲ ಸಾಹಿತ್ಯದಲ್ಲಿ ತೊಡಗಿ ಸಾಕಷ್ಟು ಕೀರ್ತಿಯನ್ನು ಗಳಿಸಿದ್ದಾರೆ. ಸಿನಿಮಾ ಪ್ರಪಂಚದಲ್ಲಿ ಮುಳುಗಿ ಅನೇಕ ಚಲನಚಿತ್ರಗಳಿಗೆ ಸೊಗಸಾದ ಗೀತೆಗಳನ್ನು ರಚಿಸಿಕೊಟ್ಟು ಪ್ರಸಿದ್ಧರಾಗಿದ್ದಾರೆ. ಅಧ್ಯಾಪಕರಾಗಿ ವಿದ್ಯಾರ್ಥಿಗಳಲ್ಲೂ ಬಹಳ ಜನಪ್ರಿಯತೆಯನ್ನೂ ಗಳಿಸಿದ್ದಾರೆ. ಅವರ ಕಾರ್ಯದಿಂದ ಅವರ ಕಾಲೇಜಿಗೆ ಹೆಸರು ಬಂದಿದೆ. ಅಂಥವರ ಅರವತ್ತನೆಯ ಹುಟ್ಟುಹಬ್ಬವನ್ನು ಆಚರಿಸುವುದು ಸ್ತುತ್ಯಕಾರ್ಯ. ಈ ಕಾರ್ಯಕ್ರಮವು ವಿಜೃಂಭಣೆಯಿಂದ ನೆರವೇರಿ ದೊಡ್ಡರಂಗೇಗೌಡರಿಗೆ ಮತ್ತು ಅವರ ಕುಟುಂಬದವರಿಗೆ, ಮಿತ್ರಗಣಕ್ಕೆ ಆನಂದ ಉಂಟಾಗಲಿ. ಅವರು ನೂರ್ಕಾಲ ಆರೋಗ್ಯ ದೃಢಕಾಯರಾಗಿ ಬಾಳಿ ಬೆಳಗಲಿ.

❑



# ಸಿಹಿ ಕಾವ್ಯದ ಸಂತಸ

• ಪ್ರೊ॥ ಎಲ್.ಎಸ್. ಶೇಷಗಿರಿರಾವ್

ಕವಿ, ವಿದ್ವಾಂಸ, ಪ್ರಾಧ್ಯಾಪಕ ಡಾ॥ ದೊಡ್ಡರಂಗೇಗೌಡರಿಗೆ ಅರವತ್ತು ತುಂಬುವ ಸಂದರ್ಭದಲ್ಲಿ ಅಭಿನಂದನಾ ಗ್ರಂಥವನ್ನು ಅವರ ಆತ್ಮೀಯರೂ ಶಿಷ್ಯವರ್ಗದವರೂ ಅರ್ಪಿಸುತ್ತಿರುವುದು ಸಂತೋಷದ ಸಂಗತಿ.

'ಕಾವ್ಯ' ಎನ್ನುವ ಶಬ್ದ ಕೇಳಿದೊಡನೆಯೇ ಮನಸ್ಸು 'ಸಂತೋಷ' ಎನ್ನುವ ಶಬ್ದವನ್ನು ಅದರೊಂದಿಗೆ ಜೋಡಿಸುತ್ತದೆ. ದೊಡ್ಡರಂಗೇಗೌಡರು ಸಾವಿರಾರು ಮನಗಳಿಗೆ, ಹಳ್ಳಿಯಲ್ಲಿರುವ ಮನೆಗಳಿಗೆ ಸಿಹಿ ಕಾವ್ಯದ ಸಂತೋಷವನ್ನು ಕೊಂಡೊಯ್ದವರು, ಅಂತಃಕರಣವನ್ನು ಮುಟ್ಟುವ ಈ ಕವಿ ಭಾಷೆಯ ನಾದ ಭಾಗ್ಯವನ್ನು ಬಳಸಿಕೊಂಡವರು, ಪ್ರಯೋಗಶೀಲರು. ಒಳ್ಳೆಯ ಪ್ರಾಧ್ಯಾಪಕರು, ಶಿಕ್ಷಕರಾಗಿ ಸಾವಿರಾರು ಮಂದಿ ವಿದ್ಯಾರ್ಥಿಗಳ ಗೌರವವನ್ನು ಪಡೆದ ಡಾ॥ ದೊಡ್ಡರಂಗೇಗೌಡರು ಕನ್ನಡ ಕವನಗಳನ್ನು ಗೀತೆಗಳನ್ನು ಪ್ರೀತಿಸುವವರ ಕೃತಜ್ಞತೆಯನ್ನು ಪಡೆದವರು. ಚಿಂತನೆಗೆ ಪ್ರಚೋದನೆ ನೀಡುವ ಡಾಕ್ಟರೇಟ್ ಪ್ರಬಂಧವನ್ನು ಬರೆದಿದ್ದಾರೆ.

ಡಾ॥ ದೊಡ್ಡರಂಗೇಗೌಡರು, ಅವರ ಶ್ರೀಮತಿಯವರು ಇಬ್ಬರನ್ನು ನಾನು ಬಲ್ಲೆ. ಸೌಜನ್ಯಶೀಲರು, ಸ್ನೇಹಶೀಲರು. ಅವರಿಗೆ, ಅವರ ಕುಟುಂಬಕ್ಕೆ ಎಲ್ಲ ಶುಭವಾಗಲಿ, ಈ ದಂಪತಿಗಳು ಬಹುಕಾಲ ಕನ್ನಡದ ಸೇವೆಯನ್ನು ನಡೆಸುವಂತೆ ಭಗವಂತನು ಅನುಗ್ರಹಿಸಲಿ.

❑





# ಒಂದು ಆಪ್ತ ಸಮಾಲೋಚನೆ

• ಪ್ರೊ|| ಎಚ್.ಸಿ. ಸಣ್ಣಗುಡ್ಡಯ್ಯ

ಕವಿ ದೊಡ್ಡರಂಗೇಗೌಡರ ಹೆಸರಿನಲ್ಲಿ ಎರಡು 'ಡ' ಕಾರಗಳೂ ಒಂದು 'ಡಿ' ಒತ್ತೂ ಇದ್ದುವು. ಇತ್ತೀಚೆಗೆ ಅವರು ಡಾಕ್ಟರೇಟ್ ಪಡೆದದ್ದರಿಂದ ಇನ್ನು ಒಂದು ಡ ಅವರ ಹೆಸರಿನ ಮೊದಲಿಗೆ ಸೇರಿದೆ. ಅವರ ಸಾಧನೆಗಳ ಯಾದಿಯನ್ನು ನೋಡಿದರೆ ಅವರು ದೊಡ್ಡವರು ಎಂಬ ವಿಷಯದಲ್ಲಿ ಸಂಶಯ ಬಾರದು. ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡರಂಗೇಗೌಡರು ಮಹತ್ವ ಪಡೆದಿದ್ದಾರೆ. ಇವರಿಗೆ ಈಗಿನ್ನೂ ಅರವತ್ತು ತುಂಬಲಿದೆ. ಆದರೆ ಇವರು ಪ್ರಕಟಿಸಿರುವ ಕೃತಿಗಳ ಸಂಖ್ಯೆ ಐವತ್ತಾರು! ಬರೆದ ಚಿತ್ರಗೀತೆಗಳು ಐನೂರಕ್ಕೂ ಮಿಕ್ಕಿವೆ. ಬಹಳ ಗಂಭೀರವಾಗಿ ಸಾಹಿತ್ಯವನ್ನು ಓದಿ, ಬೋಧಿಸಿದ ಇಂಗ್ಲೀಷ್ ಪ್ರೊಫೆಸರುಗಳ ಕನ್ನಡಿಗ ಮಡದಿಯರು 'ನಾನೊಂದು ತೀರ... ನೀನೊಂದು ತೀರ' ಎಂದೋ 'ತೇರ ಏರಿ ಅಂಬರದಾಗೆ ನೇಸರ ನಗುತಾನೆ' ಎಂದೋ ಇವರ ಗೀತೆಗಳ ಮೊದಲ ಪಂಕ್ತಿಗಳನ್ನು ಗುನುಗುನಿಸುವುದನ್ನು ನಾನು ಕೇಳಿದ್ದೇನೆ.

ಚಲನಚಿತ್ರ ಮತ್ತು ಕ್ರಿಕೆಟ್ ಆಟಗಳಿಗೆ ಯಾವ ದೇಶದಲ್ಲಿ ವಿಶೇಷ ಮನ್ನಣೆ ಇರುತ್ತದೆಯೋ ಅಂತಹ ದೇಶ ಎಂದೂ ವಿಶ್ವದ ಅಗ್ರಮಾನ್ಯ ರಾಷ್ಟ್ರವೆನಿಸದು ಎಂಬುದು ನನ್ನ ನಂಬಿಕೆಯಾದರೂ ಚಲನಚಿತ್ರಗಳ ಮೂಲಕವಲ್ಲದೆ ಒಬ್ಬಳು ನಟಿಯಾಗಲೀ, ಒಬ್ಬ ಕವಿಯಾಗಲೀ ಅತ್ಯಂತ ಹೆಚ್ಚು ಜನರಿಗೆ ಪರಿಚಿತವಾಗಲಾರರು; ಜನಪ್ರಿಯರೂ ಆಗಲಾರರು ಎಂದೂ ನಾನು ನಂಬುತ್ತೇನೆ. ಆದ್ದರಿಂದಲೇ ಡಾ|| ದೊಡ್ಡರಂಗೇಗೌಡರು ಕರ್ನಾಟಕದಲ್ಲಿ ಮನೆಮಾತಾಗಿದ್ದಾರೆ.

ಅವರ ಭಾವಗೀತೆಗಳ ಸಂಕಲನಗಳು ಕುತೂಹಲವನ್ನು ಕೆರಳಿಸಿ ನೆನಪಿನಲ್ಲಿ ಉಳಿಯಬಲ್ಲ ಹೆಸರುಗಳನ್ನು ಪಡೆದಿವೆ. ಗೀತಗಾರುಡಿ, ಹೋಳಿ ಹುಣ್ಣಿಮೆ, ತೀರದ ತುಡಿತ, ಮಾವು ಬೇವು, ಹೂವು ಹಣ್ಣು, ರಾಗ ತರಂಗಿಣಿ ಭಾವ ಭಾಗೀರಥಿ ಇತ್ಯಾದಿ! ರಸಿಕತೆಯನ್ನೂ ಸದಭಿರುಚಿಯನ್ನೂ ಬಿಂಬಿಸುವ ಮಾತುಗಳು. ಮಾವು-ಬೇವು ಅಮೆರಿಕದ ಕನ್ನಡಿಗರು ಬಹು ಮೆಚ್ಚಿದ ಕೃತಿಯಾಗಿದೆ.

'ಜಗಲಿ ಹತ್ತಿ ಇಳಿದು', 'ಕಣ್ಣು ನಾಲಿಗೆ ಕಡಲು', 'ಏಳು ಬೀಳಿನ ಹಾದಿ', 'ಚದುರಂಗದ

ಕುದುರೆಗಳು' ಮುಂತಾದ ಅವರ ಕವನ ಸಂಕಲನಗಳು ನವ್ಯಕಾವ್ಯದ ಪ್ರಭಾವ ದಟ್ಟವಾಗಿದ್ದ ಕಾಲದಲ್ಲಿ ಬಂದಂಥವು. ಇಂಥ ಹನ್ನೆರಡು ಸಂಕಲನಗಳೂ ಅದಕ್ಕಿಂತ ಹೆಚ್ಚಿನ ಸಂಖ್ಯೆಯ ಭಾವಗೀತೆಗಳ ಸಂಕಲನಗಳೂ ಪ್ರಕಟವಾಗಿವೆ. ಪ್ರಗಾಥ ಮುಕ್ತಕ, ಭಕ್ತಿ ಗೀತೆ ಮುಂತಾದ ಕೃತಿಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದ್ದಾರೆ. ಸಿನಿಮಾಗಳನ್ನು ಇಷ್ಟಪಡುವ ಜನ ಹೆಚ್ಚಾಗಿರುವುದರಿಂದ ಚಲನಚಿತ್ರಗೀತೆಗಳ ಮೂಲಕ ಜನಪ್ರಿಯರಾದ ಗೌಡರ ಇತರ ಭಾವಗೀತೆಗಳೂ ಜನಪ್ರಿಯವಾಗಿವೆ? ಸಿನಿಮಾಗಳಲ್ಲಿ ಗೀತೆಗಳನ್ನು ಮೆಚ್ಚಿಕೊಂಡವರು ಕೃತಿ ರೂಪದಲ್ಲಿ ಪ್ರಕಟವಾದ ಸಂಕಲನಗಳನ್ನು ಕೊಂಡು ಓದುತ್ತಾರೆಯೇ ಇಂಥ ಪ್ರಶ್ನೆಗಳೂ ಏಳಬಹುದು ಆದರೆ ಭಾವಗೀತೆಗಳೆಂದು ಕರೆಯದ ನವ್ಯ ಮಾರ್ಗದ ಹನ್ನೆರಡು ಸಂಕಲನಗಳನ್ನೂ ಅವರು ಪ್ರಕಟಿಸಿದ್ದಾರೆ! ಇವೆಲ್ಲ ದೊಡ್ಡ ಸೋಜಿಗವೇ ಸರಿ.

ಗೌಡರು ಕೇವಲ ಚಲನಚಿತ್ರಗಳಿಗೆ ಗೀತೆಗಳನ್ನು ಬರೆದು ತೃಪ್ತರಾದವರಲ್ಲ. ಸಿನಿಮಾ ರಂಗದಲ್ಲಿ ಮೇಲೆ ಬಂದ ಹಲವರಂತೆ ಇವರು ನಾಟಕ ಸಿನಿಮಾಗಳನ್ನು ನೋಡುತ್ತಾ ರಂಗಗೀತೆಗಳನ್ನು ಚಿತ್ರಗೀತೆಗಳನ್ನು ಕೇಳುತ್ತಾ ಸ್ಫೂರ್ತಿ ಹೊಂದಿ, ಪಟ್ಟು ಹಿಡಿದು, ಅಭ್ಯಾಸದಿಂದ ಗೀತರಚನೆ, ಪರಿಣತಿ ಪಡೆದವರಲ್ಲ. ಕಾಲೇಜಿನಲ್ಲಿ ಓದಿ ಪದವಿ ಪಡೆದು ಕಾಲೇಜೊಂದರಲ್ಲಿ ಉಪನ್ಯಾಸಕನಾಗಿ ಪರಿಶ್ರಮಿಸಿ ಬೆಂಗಳೂರು ವಿಶ್ವವಿದ್ಯಾಲಯದ ಆನರ್ಸ್ ಮತ್ತು ಎಂ.ಎ. ಪದವಿಗಳಿಗಾಗಿಯೂ ಅಧ್ಯಯನ ಮಾಡಿದವರು. ದೊಡ್ಡ ದೊಡ್ಡ ವಿದ್ವಾಂಸರ ಪ್ರತಿಭಾವಂತ ಅಧ್ಯಾಪಕರ ಸನ್ನಿಧಿ ಯಲ್ಲಿ ಕುಳಿತು ಪಾಠ ಕೇಳಿ ಅವರಿಂದ ಪ್ರಭಾವಿತರಾದವರು. ಆದ್ದರಿಂದಲೇ ಇವರು ಚಿತ್ರಗೀತೆಗಳ ರಚನೆಯಿಂದ ಉಂಟಾದ ಜನಪ್ರಿಯತೆಯ ಮತ್ತಿಗೆ ಒಳಗಾಗಿ ಸುಮ್ಮನಾಗದೆ ನವ್ಯ ಮಾರ್ಗದಲ್ಲಿಯೂ ಪ್ರಯೋಗಗಳನ್ನು ಮಾಡಿದ್ದಾರೆ. ವಿಮರ್ಶಾ ಕ್ಷೇತ್ರದಲ್ಲೂ ಅವಿರತ ಆಸಕ್ತಿಯನ್ನು ಇರಿಸಿಕೊಂಡು ಆ ಪ್ರಕಾರದಲ್ಲೂ ಹದಿನಾಲ್ಕು ಕೃತಿಗಳನ್ನು ಪ್ರಕಟಿಸಿದ್ದಾರೆ.

ಪ್ರತಿಯೊಂದು ಪ್ರಕಾರದಲ್ಲೂ ಇವರ ಎಷ್ಟು ಕೃತಿಗಳು ಪ್ರಕಟವಾಗಿವೆ, ಎಷ್ಟು ಧ್ವನಿಸುರುಳಿಗಳು ಹೊರಬಂದಿವೆ, ಎಷ್ಟು ಚಲನಚಿತ್ರಗಳಲ್ಲಿ ಇವರ ಗೀತೆಗಳು ಸೇರಿಕೊಂಡಿವೆ, ಕರ್ನಾಟಕದ ವಿವಿಧ ವೇದಿಕೆ ಸಂಘ ಸಂಸ್ಥೆಗಳಿಂದ ಇವರು ಎಷ್ಟು ಪ್ರಶಸ್ತಿಗಳನ್ನು ಗಳಿಸಿದ್ದಾರೆ ಎಂಬುದರ ಲೆಕ್ಕ ಯಾವ ಒಬ್ಬ ಅಭಿಮಾನಿಗೂ ದಕ್ಕುವುದು ಸಾಧ್ಯವಿಲ್ಲ. ದೊಡ್ಡರಂಗೇಗೌಡರ ಆಪ್ತ ಶಿಷ್ಯರೋ ಅವರನ್ನು ಕುರಿತು ಸಂಶೋಧನೆ ನಡೆಸಿ ಡಾಕ್ಟರೇಟ್ ಪಡೆಯುವವರೋ ಇದನ್ನು ನಿಖರವಾಗಿ ದಾಖಲಿಸಬಹುದು.

'ವರ್ತಮಾನದ ವ್ಯಂಗ್ಯದಲ್ಲಿ', 'ವಿಚಾರವಾಹಿನಿ' ಎಂಬ ಕೃತಿಗಳಲ್ಲದೆ ಇತರ ವಿವಿಧ ಬಗೆಯ ಹದಿನಾಲ್ಕು ಗದ್ಯ ಕೃತಿಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಕೆಲವು ''ಜೀವಂತ ಜಾನಪದ', 'ನವ್ಯ ನಿಕಷ,' 'ಅಭಿಮುಖ', 'ರಮ್ಯವಾದ', 'ಅಭ್ಯುದಯ' ಮುಂತಾದ ಕುತೂಹಲಕರ ಶೀರ್ಷಿಕೆಗಳ ಮೂಲಕ ಕೃತಿ ರೂಪ ತಾಳಿವೆ. ಅಭಿಮಾನಿಗಳ ಬಳಗದಿಂದ ಈ ಮೊದಲೇ ದೊಡ್ಡರಂಗೇಗೌಡರಿಗೆ

ಮೂರು ಸಂಭಾವನಗ್ರಂಥಗಳು ಅರ್ಪಿತವಾಗಿದ್ದವು. ಅವರ ನಲವತ್ತೇಳು ಕವಿತೆಗಳು ಅನುವಾದಗೊಂಡು ಹಿಂದಿಯಲ್ಲಿ 'ಗೀತ್ ವೈಭವ್' ಎಂದು ಪ್ರಕಟಗೊಂಡಿವೆ. ಹನ್ನೊಂದು ಜನ ಆಂಗ್ಲ ಪ್ರಾಧ್ಯಾಪಕರುಗಳು ಗೌಡರ ಅರವತ್ತೈದು ಕನ್ನಡ ಕವಿತೆಗಳನ್ನು "The Wheel of Time...." ಎಂಬ ಹೆಸರಿನಲ್ಲಿ ಇಂಗ್ಲೀಷಿಗೆ ರೂಪಾಂತರಿಸಿದ್ದಾರೆಂದು ತಿಳಿದು ಬಂದಿದೆ. ಕನ್ನಡ ಗೀತೆಗಳನ್ನು ಇಂಗ್ಲಿಷ್‌ಗೆ ತರ್ಜುಮೆ ಮಾಡುವ ಆಸಕ್ತಿ ಉಳ್ಳ ಹನ್ನೊಂದು ಜನ ಪ್ರಾಧ್ಯಾಪಕರು ಸಿಕ್ಕಿದುದು ದೊಡ್ಡರಂಗೇಗೌಡರ ಅಥವಾ ಕನ್ನಡ ಕಾವ್ಯದ ಭಾಗ್ಯ ವಿಶೇಷ! ಇತರ ಕೆಲವು ಭಾರತೀಯ ಭಾಷೆಗಳಿಗೂ ಇವರ ಕವಿತೆಗಳು ಅನುವಾದಗೊಂಡು ಜನಪ್ರಿಯವಾಗಿವೆ. ಹೀಗಿದ್ದೂ ತಾವು ಕೇವಲ ಚಲನಚಿತ್ರಗಳಿಗಾಗಿ ಸಾಹಿತ್ಯರಚನೆ ಮಾಡಿದವರು ಎಂದು ನಾಡಿನ ಜನ ಅಲಕ್ಷ್ಯ ಮಾಡಿಯಾರು ಎಂಬ ಕೊರಗು ಗೌಡರನ್ನು ಕಾಡಿರುವುದು ಸಾಧ್ಯ. ಆದ್ದರಿಂದಲೇ ಅವರು ತಮ್ಮ ಪ್ರಾಧ್ಯಾಪಕ ವೃತ್ತಿ ಕೊನೆಗೊಳ್ಳುವ ಹೊತ್ತಿನಲ್ಲೂ ಕನ್ನಡ ನವೋದಯ ಕಾವ್ಯದ ಮರು ಮೌಲ್ಯಮಾಪನ ಮಾಡಿ ಥೀಸೀಸ್ ಬರೆದು ಡಾಕ್ಟರೇಟ್ ಪಡೆದರು. 17109

ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಗೌಡರ ''ಕಣ್ಣು-ನಾಲಗೆ-ಕಡಲು'' ಪುಸ್ತಕಕ್ಕೆ ಬಹುಮಾನ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಗಣ್ಯವಾದವು. ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರಗಳ ಸದಸ್ಯರಾಗಿದ್ದರು, ಅಕಾಡೆಮಿಯ ಪ್ರಕಟಣೆಯಾದ 'ಅನಿಕೇತನ' ತ್ರೈಮಾಸಿಕದ ಗೌರವ ಸಂಪಾದಕರಾದದ್ದು ಅವರಿಗಿರುವ ಶೈಕ್ಷಣಿಕ ಅರ್ಹತೆಗಳಿಂದಾಗಿಯೇ ಎಂದು ಧಾರಾಳವಾಗಿ ಹೇಳಬಹುದು.

ಒಟ್ಟಿನಲ್ಲಿ ಷಷ್ಟ್ಯಬ್ದ ಸನ್ನಿಹಿತವಾಗುವುದರಲ್ಲಿ ಇಷ್ಟೊಂದು ಸಾಧನೆ ಮಾಡಿ ಸಾಕೆಂಬಷ್ಟು ಗೌರವ ಪ್ರಶಸ್ತಿಗಳನ್ನು ದೊಡ್ಡರಂಗೇಗೌಡರು ಗಳಿಸಲು ಶಕ್ಯರಾದದ್ದು ಅವರ ಸಮವಯಸ್ಸಿನ ಸಮಕಾಲೀನ ಕಲಾವಿದ ಲೇಖಕರಲ್ಲಿ ಅಸೂಯೆಯನ್ನು ತರುವಂಥ ಸಂಗತಿ. ಆದರೆ ಗೌಡರು ಅಸೂಯೆಗೆ ಅವಕಾಶ ತರಬಲ್ಲ ನಡವಳಿಕೆಯುವರಲ್ಲ; ಯಶಸ್ಸಿಗಾಗಿ ಕುಟಿಲೋಪಾಯಗಳನ್ನು ಹೂಡಿದವರಲ್ಲ; ಯಾರೊಡನೆಯೂ ದ್ವೇಷ ಕಟ್ಟಿಕೊಂಡವರಲ್ಲ; ತಾನು ಒಬ್ಬ ದೊಡ್ಡ ಲೇಖಕನೆಂದಾಗಲೀ ಕಲಾವಿದನೆಂದಾಗಲೀ ಬೀಗುತ್ತ ನಡೆದವರಲ್ಲ. ಅವರು ತಮ್ಮ ಕುಗ್ರಾಮವನ್ನೂ ಬಾಲ್ಯದ ಒಡನಾಡಿಗಳನ್ನೂ ಮರೆತವರಲ್ಲ. ತಮ್ಮ ಬಾಲ್ಯ, ಆಗ ಅನುಭವಿಸಿದ ನಿಕೃಷ್ಟ ಜೀವನ ಮಟ್ಟ ಮತ್ತು ತಮ್ಮೊಡನೆ ಬೆಳೆದು ಓದಿದ ಒಡನಾಡಿಗಳು ಇವು ಯಾವನ್ನೂ ಅವರು ಮರೆತಿಲ್ಲ. ಬದಲಾಗಿ, ಅವುಗಳನ್ನು ಅಭಿಮಾನದಿಂದಲೇ ನೆನೆಯುತ್ತಾರೆ. ತಮಗೆ ಮಾರ್ಗದರ್ಶನ ಮಾಡಿದ ಗುರುಗಳ ಬಗೆಗೆ ಅವರಿಗೆ ಅಪಾರ ಗೌರವ ವಿನಯ ಪ್ರಧಾನವಾದ ಅವರ ಸದ್ಗುಣಗಳಿಗೆ ಸಿಕ್ಕಿದ ಪ್ರತಿಫಲವೆಂಬಂತೆ ಕನ್ನಡದ ಜನ ಮತ್ತು ಸಂಘ ಸಂಸ್ಥೆಗಳು ತಮ್ಮ ಪ್ರೀತಿಯನ್ನು ಸಮೃದ್ಧವಾಗಿಯೇ ತೋರಿಸಿವೆ. ಮಠ ಮಾನ್ಯಗಳು ಅವರ ಸೇವೆಯನ್ನು ಪರಿಗಣಿಸಿ ಹಲವು ವಿಧದಲ್ಲಿ ಸತ್ಕರಿಸಿವೆ. ಎರಡು ಮೂರು ಸಲ ವಿದೇಶ ಪ್ರವಾಸಮಾಡಿ ಬರಲು ಸಹಕರಿಸಿವೆ. ಜನರ ಅಭಿಮಾನವನ್ನು

ಬಳಸಿಕೊಂಡು ಶ್ರೀಮಂತಿಕೆಯನ್ನಾಗಲೀ ಸ್ಥಾನಮಾನವನ್ನಾಗಲೀ ಸಂಪಾದಿಸಲು ಅವರು ಎಂದೂ ರಾಜಕಾರಣಿಗಳ ಬೆನ್ನು ಬಿದ್ದಿಲ್ಲ.

ಗ್ರಾಮೀಣ ಜೀವನದ ಬಗೆಗೆ ಅವರಿಗಿರುವ ಒಲವು, ಅವರ ಪರಿಸರ ಪ್ರೇಮ ಅವರು ಬರೆದ ಗೀತೆಗಳಲ್ಲಿ ನಿಚ್ಚಳವಾಗಿ ಕಾಣುತ್ತವೆ. ಬಾಲ್ಯದಿಂದ ಆರಂಭಿಸಿ ಅರ್ಧ ಶತಮಾನಕ್ಕೂ ಮಿಕ್ಕು ಅವರು ಕನ್ನಡ ಮಾತು ಗೀತೆ ಸಾಹಿತ್ಯಗಳ ಉಪಾಸನೆಯನ್ನು ಕಳೆದಿದ್ದಾರೆ. ಕನ್ನಡ ನುಡಿಯೊಡನೆ ಆಡಿ, ಬದುಕಿ, ನುಡಿ ಜಾಣರೆನಿಸಿದ್ದಾರೆ. ಇಂಥವರಿಗೆ ದೀರ್ಘಾಯುಷ್ಯವನ್ನು ಆರೋಗ್ಯವನ್ನು ಯಶಸ್ಸನ್ನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ದೊಡ್ಡರಂಗೇಗೌಡರಿಗೆ ಮತ್ತೊಮ್ಮೆ ಅಭಿನಂದನೆಯನ್ನು ಏರ್ಪಡಿಸುವ ಮೂಲಕ ನನಗೆ ಈ ಅವಕಾಶವನ್ನು ದೊರಕಿಸಿಕೊಟ್ಟ ಬೆಂಗಳೂರಿನ ಪ್ರಸ್ತುತ ಪ್ರಕಾಶನದವರಿಗೆ ನನ್ನ ಕೃತಜ್ಞತೆಗಳು.





# ಶತಮಾನದ ಶ್ರೇಯಸ್ಸು ಲಭಿಸಲಿ

• ಡಾ|| ಕಯ್ಯಾರ ಕಿಞ್ಞಣ್ಣರೈ

ಆತ್ಮೀಯರಾದ ಡಾ|| ದೊಡ್ಡರಂಗೇಗೌಡರಿಗೆ, ಬದುಕಿನ ಅರವತ್ತು ವರ್ಷದ ಮಹತ್ಸಾಧನೆಯ ಸಂದರ್ಭದಲ್ಲಿ ಅವರ ಅಭಿಮಾನಿಗಳು, ಒಂದು ಅಭಿನಂದನ ಗ್ರಂಥವನ್ನು ಪ್ರಕಟಿಸುವ ಸದಾಶಯವುಳ್ಳವರಾಗಿ ಕಾರ್ಯ ಪ್ರವೃತ್ತರಾಗಿರುವುದು ಅತ್ಯಂತ ಯೋಗ್ಯವಾಗಿದೆ. ತುಮಕೂರು ಜಿಲ್ಲೆಯ ಒಂದು ಗ್ರಾಮೀಣ ಪ್ರದೇಶದಲ್ಲಿ ಜನ್ಮವೆತ್ತಿದ ಅವರು, ತನ್ನ ಸಾಹಸದ ಶಿಕ್ಷಣ ಕ್ಷೇತ್ರದ ದುಡಿಮೆಯಿಂದ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಪದವೀಧರರಾದುದಲ್ಲದೆ ಮುಂದೆ ಹೆಚ್ಚಿನ ಸಾಧನೆಯಿಂದ ಅವರು ಪಿಹೆಚ್.ಡಿ ಪದವಿಯನ್ನೂ ಗಳಿಸಿಕೊಂಡರು. ಅವರಂತೆ ವಿದ್ಯಾಭ್ಯಾಸದಲ್ಲಿ ಉತ್ತಮ ಅಭ್ಯಾಸ ಪೂರೈಸಿದ ಶ್ರೀಮತಿ ಡಾ. ಕೆ. ರಾಜೇಶ್ವರಿ ಗೌಡರ ಜತೆ ವಿವಾಹವಾಗಿ ಸುಖಸಂಸಾರಿಕ ಜೀವನವನ್ನೂ ನಡೆಸುತ್ತಿರುವುದೇ ಶ್ರೇಯಸ್ಕರ. ಕಾಲೇಜಿನ ಪ್ರಾಚಾರ್ಯ ವೃತ್ತಿಯಲ್ಲಿದ್ದುಕೊಂಡು, ಆ ಕ್ಷೇತ್ರದಲ್ಲಿ ಉತ್ತಮಿಕೆಯನ್ನು ಸಾಧಿಸಿ ಪ್ರಾಂಶುಪಾಲರಾಗಿಯೂ ಹೆಸರುಗಳಿಸಿರುವರು. ಬೆಂಗಳೂರಲ್ಲಿ ನೆಲೆಸಿ ಶಿಕ್ಷಣಕ್ಷೇತ್ರದ ಶ್ರೇಷ್ಠ ಸ್ಥಾನಮಾನಗಳನ್ನು ಪಡೆದುದರ ಜತೆಯಲ್ಲಿ ಕನ್ನಡ ಹಿಂದಿ ಆಂಗ್ಲಭಾಷೆಗಳಲ್ಲಿಯೂ ಕೃತಿಗಳನ್ನು ರಚಿಸಿದ ಪ್ರಶಂಸಾರ್ಹರು ಹಾಗು ಹಲವಾರು ಪ್ರಶಸ್ತಿ ಸನ್ಮಾನಗಳ ಪುರಸ್ಕೃತರು.

ತನ್ನ ನಿರಂತರವಾದ ವಿದ್ಯಾಕ್ಷೇತ್ರದ ಸೇವಾ ಕಾರ್ಯದ ಜೊತೆಗೆ ಸಾಹಿತ್ಯದಲ್ಲಿ ಮಾತ್ರವಲ್ಲ ಚಲನಚಿತ್ರದ ಉತ್ತಮ ಗೀತರಚನಾಕಾರರೆಂದು ಪ್ರಶಸ್ತಿ ಪಡೆದಿದ್ದಾರೆ, ಅಂತಹ ಪ್ರಶಸ್ತಿಗಳು ಅವರಿಗೆ ಚಲನಚಿತ್ರ ಗೀತೆರಚನೆಯಲ್ಲಿ ಹಲವು ಬಾರಿ ಲಭಿಸಿದೆ ಎನ್ನುವುದು ಗಮನೀಯ. ಅವರ ಲೇಖನಗಳು ನಾಡಿನ ಖ್ಯಾತ ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗಿ ಓದುಗರ ಮೆಚ್ಚುಗೆ ಗಳಿಸಿವೆ; ಸ್ವತಃ ಅವರು ಪತ್ರಿಕೋದ್ಯಮದಲ್ಲಿಯೂ ನಿರತರಾಗಿರುವ ವಿಷಯ ಉಲ್ಲೇಖನೀಯವಾಗಿದೆ. ಕರ್ನಾಟಕ ರಾಜ್ಯದಲ್ಲಿ, ಬೆಂಗಳೂರು ಮೊದಲಾದ ಪ್ರದೇಶಗಳಲ್ಲಿ ಡಾ|| ದೊಡ್ಡರಂಗೇಗೌಡರು ಶಿಕ್ಷಣ ಸಾಹಿತ್ಯ ಸಂಸ್ಕೃತಿ ಕಲಾ ಚಾತುರ್ಯವಾದ ಸತ್ಕಾರ್ಯ ಮಾಡಿದ್ದು ಮಾತ್ರ ಸಾಲದೆ ಅಮೇರಿಕಾ, ಇಂಗ್ಲೆಂಡ್, ಜರ್ಮನ್ ರಾಜ್ಯಗಳಿಗೂ ಪ್ರವಾಸಮಾಡಿ

ಅಲ್ಲಿ ಸುಮಾರು ಎರಡು ತಿಂಗಳವರೆಗೆ ನೆಲೆಸಿದ್ದು ಸುಮಾರು ನಲವತ್ತು ಉಪನ್ಯಾಸಗಳನ್ನು ಅಲ್ಲಿ ಖ್ಯಾತ ಸಂಸ್ಥೆಗಳಲ್ಲಿ ನೀಡಿದ್ದು ವಿಶೇಷ ಯೋಗ್ಯತೆಯ ಸೂಚಕವಾಗಿದೆ. ಅದಾಗಿ, ಅಮೆರಿಕಾದ ಮಿಚಿಗನ್ ರಾಜ್ಯದ ಫ್ಲಿಂಟಿನಿಂದ ರೆಕಗ್ನಿಶನ್ ಎವಾರ್ಡ್ ಎಂಬ ಅಂತರಾಷ್ಟ್ರೀಯ ಪ್ರಶಸ್ತಿಯನ್ನು ಗಳಿಸಿರುವುದು ಅಭಿನಂದನೀಯ ಮಹತ್ಸಾಧನೆಯಾಗಿದೆ. ಕರ್ನಾಟಕ ರಾಜ್ಯ ಸರ್ಕಾರದ ಸಾಹಿತ್ಯ ಅಕ್ಯಾಡಮಿ ಬಹುಮಾನವನ್ನು ಪಡೆದಿರುವರು. ಅದು ಮಾತ್ರ ಅಲ್ಲದೆ ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಕೂಡ ಪಡೆದಿರುವರು. ಬೆಂಗಳೂರು ಮಹಾನಗರ ಪಾಲಿಕೆಯಿಂದ ಕೆಂಪೇಗೌಡ ಪ್ರಶಸ್ತಿ ಕೂಡ ಅವರಿಗೆ ಸಿಕ್ಕಿದೆ.

ಡಾ॥ ದೊಡ್ಡರಂಗೇಗೌಡರು ಕನ್ನಡ ಸಾಹಿತ್ಯದಲ್ಲಿ ಭಾವಗೀತೆಗಳನ್ನು ನವ್ಯ ಕವನಗಳಲ್ಲಿ ಮುಕ್ತಕಗಳನ್ನು ರಚಿಸಿದಲ್ಲದೆ ಅವರ ವಿಮರ್ಶಾ ಕೃತಿಗಳು – ಪ್ರಗಾಥಗಳು, ಚಲನಚಿತ್ರಗೀತೆಗಳು ರಸಿಕರ ಮನವೊಲಿಸಿವೆ, ನನ್ನನ್ನು ನನ್ನ ಕನ್ನಡದ ಅಳಿಲ ಸೇವೆಯನ್ನು ಮಹತ್ತಾಗಿ ಪರಿಗಣಿಸಿ ಉದಾರ ಹೃದಯದಿಂದ ಬೆಂಗಳೂರಲ್ಲಿ ದೊಡ್ಡರಂಗೇಗೌಡರೂ ಅವರ ಸಹೃದಯ ಮಿತ್ರರೂ ಗೌರವಿಸಿದುದನ್ನು ನಾನು ಕೃತಜ್ಞತಾ ಪೂರ್ವ ಸ್ಮರಿಸುತ್ತಿದ್ದೇನೆ; ಈ ಸಂದರ್ಭದಲ್ಲಿ ಅವರನ್ನು ಜನತೆ ಉತ್ಸಾಹ, ಸ್ಫೂರ್ತಿಯಿಂದ, ಸಾಹಿತ್ಯಕ ಸಜ್ಜನಿಕೆಯ ಸತ್ಕಾರ್ಯಗಳಲ್ಲಿ ನೆರವು ನೀಡುತ್ತಿದ್ದ ಮಾತ್ರವಲ್ಲ, ಕಥಾ ಸಂಕಲನ, ಕಾದಂಬರಿ, ಜೀವನ ಚರಿತ್ರೆ, ಪ್ರವಾಸ ಕಥನ ಇತ್ಯಾದಿ ವಿವಿಧ ವಿಷಯ ವಿಚಾರಗಳಲ್ಲಿ ಅವರ ಸಹ ಧರ್ಮಿಣಿ ಡಾ॥ ರಾಜೇಶ್ವರಿಗೌಡರೂ ದುಡಿಯುತ್ತಿರುವುದನ್ನು ಕಂಡು ನಾನು ಮುದಗೊಂಡಿದ್ದೇನೆ, ಇಷ್ಟೊಂದು ವಿಶೇಷ ವಿದ್ಯಾ ಸಾಹಿತ್ಯ ಸಂಸ್ಕೃತಿಗಳ ಅರ್ಹತೆಯ ಸೌಭಾಗ್ಯವತಿ ಡಾ॥ ರಾಜೇಶ್ವರಿ ಗೌಡರನ್ನು ಪತ್ನಿಯಾಗಿ ಪಡೆದ ಭಾಗ್ಯವೂ ಡಾ॥ ದೊಡ್ಡರಂಗೇಗೌಡರ ಶ್ರೇಯಸ್ಸಿನ ಪೂರಕವಾಗಿರಲೇಬೇಕೆಂದು ತಿಳಿದುಕೊಳ್ಳಬೇಕು. ಶ್ರೀಮತಿ ಡಾ॥ ರಾಜೇಶ್ವರಿ ಗೌಡರೂ ಅವರ ಪೂಜ್ಯ ಪತಿ ಡಾ॥ ದೊಡ್ಡರಂಗೇಗೌಡರ ಜತೆಯಲ್ಲಿ ಅಮೇರಿಕಾ ಮತ್ತು ಇತರ ರಾಷ್ಟ್ರಗಳಲ್ಲಿ ಮಾಡಿದ ಪ್ರವಾಸಾನುಭವದ ಕುರಿತು ಸದ್ಗ್ರಂಥ ಬರೆದು ಪ್ರಕಟಿಸಿರುದು ಅಭಿನಂದನೀಯವಾದುದು. ಖ್ಯಾತ ಕನ್ನಡ ಧುರೀಣ ಗೋವಿಂದೇ ಗೌಡರ ಜತೆಯಲ್ಲಿ ಡಾ॥ ದೊಡ್ಡರಂಗೇಗೌಡರು ಪ್ರಖ್ಯಾತ ಪತ್ರಿಕಾ ಸಂಪಾದಕರಾಗಿಯೂ ದೇಶ ಭಾಷೆ, ನೀತಿಗಳನ್ನು ನಡೆಸುವ ನಿರ್ಧಾರಮಾಡಿದ್ದು ತುಂಬಾ ಯೋಗ್ಯವಾಗಿದೆ. ನಾನು ಸ್ವಾತಂತ್ರ್ಯ ಪೂರ್ವದಲ್ಲಿ ಹತ್ತಾರುವರ್ಷಗಳ ನಂತರ ಮಂಗಳೂರಲ್ಲಿ ಪತ್ರಿಕೋದ್ಯಮಿಯಾಗಿ, ಸಂಪಾದಕ ಮಂಡಳಿಯಲ್ಲಿಯೂ ದುಡಿದಿರುವೆನು, ಸ್ವಾತಂತ್ರ್ಯ – ನಂತರ, ಅದಕ್ಕಾಗಿ ದುಡಿದವರು ಗ್ರಾಮೀಣ ರಾಜ್ಯ ಸಾಧನೆಗಾಗಿ ಹಳ್ಳಿಗಳಿಗೆ ಹೋಗಬೇಕೆಂಬ ಗಾಂಧೀಜಿ ಸಂದೇಶವನ್ನು ಗೌರವಿಸಿ ಹಳ್ಳಿಯಲ್ಲಿ ಬಂದು ನೆಲಸಿರುವೆನು. ಹೀಗಿದ್ದರೂ ನನ್ನ ಅಂದಿನ ಆ ದಿನಗಳ ಹೋರಾಟದ ಕಾರ್ಯವ್ಯಾಪ್ತಿಯ ನೆನಪು ಸದಾ ಇದ್ದೇ ಇದೆ; ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿತು; ರಾಜ್ಯಗಳ ಭಾಷಾವಾರು ಪ್ರಾಂತೀಕರಣವೂ ಆಯಿತು; ಆದರೆ ಹೀಗಾದ ಮೇಲೂ ನಮ್ಮ ರಾಷ್ಟ್ರ, ನಮ್ಮ ನಾಡು, ನಮ್ಮ ನುಡಿ ಇನ್ನು ಸಾಕಷ್ಟು

ಮುನ್ನಡೆದಿಲ್ಲ; ಜನತೆ ದೇಶಾಭಿಮಾನದ, ಭಾಷಾಭಿಮಾನದ ಪುಣ್ಯ ಸ್ಫೂರ್ತಿಯಿಂದ ನಿಸ್ವಾರ್ಥವಾಗಿ ದುಡಿದರೆ - ಲಭಿಸಿದ ಸ್ವಾತಂತ್ರ್ಯ, ನಾವು ಜನಿಸಿದ ಭೂಮಿ - ಪ್ರಾಂತ್ಯಗಳು ಇವೆಲ್ಲವೂ ನಮ್ಮ ಜೀವನದ ಉದ್ಧಾರಕ್ಕೆ ಸಹಾಯವಾಗಬಹುದೆಂಬ ಕಲ್ಪನೆ ಇಂದೂ ನನಗಿದೆ; ಇಂತಹ ಕಲ್ಪನೆಗೆ ಸಾಧಕವಾಗಿ ಡಾ॥ ದೊಡ್ಡರಂಗೇಗೌಡರು, ನನ್ನನ್ನು ಗೋವಿಂದೇಗೌಡರ ಸಹಕಾರದಿಂದ ಪತ್ರಿಕಾ ವ್ಯವಸಾಯವನ್ನು ಕೈಗೆತ್ತಿಕೊಂಡುದು ಯೋಗ್ಯವೆನ್ನಲೇ ಬೇಕು. ಅದರಿಂದ ನಾಡಿನ ಜನತೆಗೆ ಭಾಷಾ ಸಾಹಿತ್ಯಗಳಿಗೆ ಖಂಡಿತವಾಗಿಯೂ ಶ್ರೇಯಸ್ಸು ಲಭಿಸುವುದು.

ಗೌಡ ಸಮಾಜ ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಹೆಸರು ಪಡೆದ ಧೀರ ಜನಾಂಗ. ಕೃಷಿಯಲ್ಲಿ ನಿರತರಾಗಿಯೇ ಬಹಳ ಮಂದಿ ದೇಶದ ಜನತೆಗೆ ಅನ್ನಬ್ರಹ್ಮವನ್ನು ನೀಡುವ ಸತ್ಕಾರ್ಯವನ್ನು ಹೆಚ್ಚಾಗಿ ಅಂದಿನಿಂದ ಇಂದಿನವರೆಗೂ ಮಾಡುತ್ತಿದ್ದರೂ ಇಂದಿನ ಸಕಲಜನಾಂಗಗಳ ಪ್ರಗತಿಯ ಮಾರ್ಗದಲ್ಲಿ ಅವರೂ ಮೇಲೆ ದುಡಿದು ದೇಶಸೇವೆಯನ್ನು ಮಾಡುತ್ತಿರುವುದು. ದೇಶ ಸಂಸ್ಕೃತಿಯನ್ನು ಬೆಳೆಸುತ್ತಿರುವುದು ತುಂಬಾ ಪ್ರಶಂಸನೀಯ. ಕೀ.ಶೇ. - ರಂತಹ ಪ್ರಧಾನಮಂತ್ರಿಗಳಾಗಿ ರಾರಾಜಿಸಿದ ಮಹನೀಯರು, ಕುವೆಂಪುರವರಂತಹ ವಿಶ್ವಕವಿಗಳು, ಆದಿಚುಂಚನಗಿರಿ ಸ್ವಾಮೀಜಿಯವರಂತಹ ಆಧ್ಯಾತ್ಮ ಸಾಧಕರು ಇಂದು ಆ ಜನಾಂಗಕ್ಕೆ ಮಾರ್ಗದರ್ಶಕರಾಗಿ ಗೌಡ ಜನಾಂಗವನ್ನು ಮೇಲೆತ್ತಲು ಸಹಾಯ ಮಾಡಿದ್ದಾರೆ.

ಇಂತಹ ದಿಗ್ದರ್ಶನದಲ್ಲಿ ಡಾ॥ ದೊಡ್ಡರಂಗೇಗೌಡರು ಇಂದು ಷಷ್ಟ್ಯಬ್ದ ಪೂರ್ತಿಯನ್ನು ಆಚರಿಸಿದಂತೆ, ಶತಮಾನೋತ್ಸವವನ್ನು ಅತ್ಯಂತ ಆನಂದದಿಂದ ಆಚರಿಸುವಂತಾಗಲಿ. ಅವರ ಯಶಸ್ಸು ನಾಡಿನಾದ್ಯಂತ ಇನ್ನಷ್ಟು ವಿಶಾಲತೆಯಲ್ಲಿ ಹಬ್ಬಿ ಅವರ ಜೀವನಕ್ಕೆ ಭಗವಂತ ಸರ್ವಶಕ್ತಿಯನ್ನು ದಯಪಾಲಿಸಲಿ.

❑



# ಅತ್ಯುತ್ತಮ ವ್ಯಕ್ತಿ

• ವೀ. ಚಿಕ್ಕವೀರಯ್ಯ (ವೀಚಿ)

ನಾನು ದೊಡ್ಡರಂಗೇಗೌಡರನ್ನು ವಿದ್ಯಾರ್ಥಿ ದೆಸೆಯಿಂದಲೂ ಬಲ್ಲೆ. ಅವರು ತುಮಕೂರು ಜಿಲ್ಲೆಯವರು; ಮಧುಗಿರಿ ತಾಲ್ಲೂಕಿನವರು ಎಂಬ ಹೆಮ್ಮೆ ನನಗಿದೆ. ಬಹಳ ಸೌಜನ್ಯದ ವ್ಯಕ್ತಿ. ತುಂಬ ಸುಸಂಸ್ಕೃತರು. ಸಾಹಿತ್ಯದಲ್ಲಿ ಕಾವ್ಯ ಅವರಿಗೆ ಇಷ್ಟವಾದ ಪ್ರಕಾರ. ಎಲ್ಲ ವಿಷಯದ ಬಗೆಗೂ ನಿರರ್ಗಳವಾಗಿ ಬರೆದು ಬಿಡುತ್ತಾರೆ. ಭಾಷಣ ಮಾಡುವುದಕ್ಕೆ ನಿಂತಾಗಲೂ ಅಷ್ಟೆ ಸರಾಗವಾಗಿ ಅವರ ಮಾತುಗಾರಿಕೆ ಇರುತ್ತದೆ. ಮೈಸೂರಿನಲ್ಲಿ ವಿಶ್ವ ಕನ್ನಡ ಸಮ್ಮೇಳನ ನಡೆದಾಗ ಅವರೂ ಕವಿತೆ ಓದಿದರು. ನಾನೂ ಕೂಡ. ಸಮ್ಮೇಳನದ ಅಧ್ಯಕ್ಷತೆಯನ್ನು ಸುದೈವದಿಂದ ಕುವೆಂಪು ವಹಿಸಿದ್ದರು. ಅವರನ್ನು ಅಷ್ಟು ಸಮೀಪದಿಂದ ನೋಡುವ ಭಾಗ್ಯ ನಮ್ಮದಾಗಿತ್ತು. ಮಾರನೆ ದಿವಸ ದೊಡ್ಡರಂಗೇಗೌಡರ ಭಾವಚಿತ್ರ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಅದನ್ನು ನೋಡಿ ನಾನು ಸಂತೋಷಪಟ್ಟೆ. ದೊಡ್ಡರಂಗೇಗೌಡರು ತುಂಬ ಅದೃಷ್ಟವಂತರು ಎಂದೂ ಅನ್ನಿಸಿತು.

ತುಮಕೂರಿನಲ್ಲಿ ಸೃಜನವೇದಿಕೆಯವರು ಕವಿಗೋಷ್ಠಿ ಮತ್ತು ಸಾಹಿತ್ಯ ಕಾರ್ಯಕ್ರಮ ಏರ್ಪಡಿಸಿದ್ದರು. ಅದಕ್ಕೆ ಗೌಡರು ಮಡದಿಯೊಡನೆ ಬಂದು ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು. ಅವರ ಮಾತು ಚೆನ್ನಾಗಿತ್ತು. ಮೊನ್ನೆ ಅವರ ಮಗನ ಮದುವೆಯಾಯಿತು. ನಮಗೆಲ್ಲ ಮನೆಗೇ ಬಂದು ಆಹ್ವಾನ ಪತ್ರಿಕೆ ಕೊಟ್ಟುಹೋದರು. ನಾನು ಪ್ರೊ॥ ಸಣ್ಣಗುಡಯ್ಯ, ಸಿ.ಬಿ. ಚಂದ್ರಶೇಖರ್ ಮದುವೆಗೆ ಹೋಗಿದ್ದೆವು. ನಮ್ಮನ್ನು ಅತ್ಯಂತ ಅಭಿಮಾನಗಳಿಂದ ಅವರ ಕುಟುಂಬದ ಸದಸ್ಯರು ಸ್ವಾಗತಿಸಿ ಊಟ ಉಪಚಾರ ಮಾಡಿ ಸೊಗಸಾಗಿ ನೋಡಿಕೊಂಡರು. ಇನ್ನೊಮ್ಮೆ ಅವರ ವ್ಯಕ್ತಿತ್ವದ ಸುಸಂಸ್ಕೃತ ನಡವಳಿಕೆಯನ್ನು ಮನಸಾರ ಸವಿದ ಅನುಭವವಾಯಿತು. ಎಲ್ಲಿಯೇ ಸಿಕ್ಕಲಿ ಎಲ್ಲಿಯೇ ಕಾಣಲಿ ಅವರು ಮನಸ್ಸಿಗೆ ಸಂತೋಷವಾಗುವಂತೆ ನಡೆದುಕೊಳ್ಳುವುದು ಅವರ ರೀತಿಯಾಗಿದೆ, ಇದರಿಂದ ದೊಡ್ಡರಂಗೇಗೌಡರಷ್ಟು ಒಳ್ಳೆಯ ವ್ಯಕ್ತಿ

ಇನ್ನೊಬ್ಬರಿಲ್ಲ ಎನ್ನಿಸಿಬಿಟ್ಟಿದೆ. ಅವರ ಸ್ನೇಹಿತರುಗಳಾದ ಟಿ.ಎಸ್. ಲೋಹಿತಾಶ್ವ, ಬರಗೂರು ರಾಮಚಂದ್ರಪ್ಪನವರ ಅಭಿಪ್ರಾಯ ಕೂಡ ಇದೇ ಆಗಿದೆ. ಅವರು ತಮ್ಮ ಸಂಸಾರ ಸಮೇತರಾಗಿ ಪ್ರಪಂಚದ ಬಹುಭಾಗವನ್ನು ಸುತ್ತಿ ಬಂದಿದ್ದಾರೆ. ಹೀಗೆ ತಮ್ಮ ಸಮೃದ್ಧವಾದ ಓದಿನಿಂದ ಪ್ರವಾಸದಿಂದ ತಮ್ಮ ಅನುಭವವನ್ನು ಶ್ರೀಮಂತಗೊಳಿಸಿಕೊಂಡಿದ್ದಾರೆ. ತಮ್ಮ ಘನವಾದ ಸೃಜನಶೀಲ ವ್ಯಕ್ತಿತ್ವದಿಂದ ಎಲ್ಲರ ಮೇಲೂ ಪ್ರಭಾವ ಬೀರಬಲ್ಲವರಾಗಿದ್ದಾರೆ.

ದೊಡ್ಡರಂಗೇಗೌಡರಿಗೆ ಅವರ ಗೆಳೆಯರು ವಿದ್ಯಾರ್ಥಿಮಿತ್ರರು ಸೇರಿ ದೊಡ್ಡ ಪ್ರಮಾಣದ ಅಭಿನಂದನ ಗ್ರಂಥ ಹೊರತರುವ ಈ ಹೊತ್ತಿನಲ್ಲಿ ನಾನು ಅವರಿಗೆ ಅವರ - ವರ್ಗದವರಿಗೆ ಎಲ್ಲ ಬಗೆಯ ಶುಭ ಹಾರೈಕೆಗಳನ್ನು ಅರ್ಪಿಸುತ್ತೇನೆ. ಅವರಿಗೆ ಒಳ್ಳೆಯದಾಗಲಿ.





# ಜಾನಪದ ತಜ್ಞ

**• ಪ್ರೊ॥ ಎನ್. ಬಸವಾರಾಧ್ಯ**

ನನ್ನ ಪ್ರಿಯಮಿತ್ರರಾದ ಡಾ॥ ದೊಡ್ಡರಂಗೇಗೌಡ ಅವರಿಗೆ ಅರವತ್ತು ವರ್ಷಗಳು ತುಂಬುವ ಈ ಸುಸಂದರ್ಭದಲ್ಲಿ ಅವರಿಗೆ ಅಭಿನಂದನೆ ಸಲ್ಲಿಸುವ ಸಮಾರಂಭ ನಡೆಯಲಿರುವುದೂ ನನಗೆ ತುಂಬ ಸಂತೋಷವನ್ನುಂಟು ಮಾಡಿದೆ. ಶ್ರೀಯುತರನ್ನು ಬಹಳ ವರ್ಷಗಳಿಂದ ಬಲ್ಲವನಾಗಿದ್ದೇನೆ. ಅವರ ನಡೆ ನುಡಿ ಆಚಾರ ವಿಚಾರಗಳು ಎಲ್ಲಕ್ಕಿಂತ ಮಿಗಿಲಾಗಿ ಅವರ ನಯ ವಿನಯ ಸಜ್ಜನಿಕೆಗಳು ಅವರ ಬಗೆಗೆ ಅಪಾರ ಪ್ರೀತಿ ಗೌರವಗಳನ್ನುಂಟುಮಾಡಿವೆ. ಸದಾ ಹರ್ಷಮುಖಿ, ಮೃದುಭಾಷಿ ಹಿರಿಯರ ಬಗೆಗೆ ಗೌರವಭಾವನೆ ಅವರ ವ್ಯಕ್ತಿತ್ವಕ್ಕೆ ಘನತೆಯನ್ನು ತಂದುಕೊಟ್ಟಿವೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡರಂಗೇಗೌಡರ ಹೆಸರು ಹಲವಾರು ದೃಷ್ಟಿಗಳಿಂದ ಸ್ಥಿರವಾಗಿ ಉಳಿಯತಕ್ಕದ್ದಾಗಿದೆ. ಶ್ರೇಷ್ಠ ಅಧ್ಯಾಪಕರಾಗಿ ಪ್ರಾಧ್ಯಾಪಕರಾಗಿ ಅಸಂಖ್ಯಾತ ವಿದ್ಯಾರ್ಥಿಗಳ ಮನೋಮಂದಿರದಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ. ಇಡೀ ಜೀವಮಾನವನ್ನೇ ಶಿಕ್ಷಣ ಕ್ಷೇತ್ರಕ್ಕೆ ಮುಡುಪಾಗಿರಿಸಿದ ಕರ್ಮಯೋಗಿ. ವೃತ್ತಿಯಿಂದ ನಿವೃತ್ತರಾದ ಮೇಲೂ ತಮ್ಮ ದೀರ್ಘಕಾಲದ ಬೋಧನಾನುಭವವನ್ನು ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಧಾರೆಯೆರೆಯುವ ಕಾಯಕದಲ್ಲಿ ನಿರತರಾಗಿದ್ದಾರೆ. ಇದು ಶ್ರೀಯುತರ ಶಿಕ್ಷಣ ಕ್ಷೇತ್ರದ ಕರ್ತವ್ಯನಿಷ್ಠೆಗೆ ಹಿಡಿದ ಕೈಗನ್ನಡಿಯಾಗಿದೆ.

ನಾನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷನಾಗಿದ್ದಾಗ ದೊಡ್ಡರಂಗೇಗೌಡರು ನೀಡಿದ ಸಹಕಾರ ಮನನೀಯವಾದದ್ದು. ಪ್ರತಿಷ್ಠಾನದ ವತಿಯಿಂದ ಕಾಲಕಾಲಕ್ಕೆ ಗತಿಸಿದ ಹಿರಿಯ ಸಾಹಿತಿಗಳ ಸಂಸ್ಮರಣೋಪನ್ಯಾಸಗಳನ್ನು ಒಂದು ವರ್ಷದವರೆಗೆ ಪ್ರತಿ ತಿಂಗಳೂ ಬೆಂಗಳೂರಿನ ವಿವಿಧ ಭಾಗಗಳಲ್ಲಿ ಏರ್ಪಡಿಸುತ್ತಿದ್ದೆವು. ರಾಷ್ಟ್ರಕವಿ ಕುವೆಂಪು, ದ.ರಾ.ಬೇಂದ್ರೆ, ಶಂಬಾ ಜೋಶಿ, ಇವರೇ ಮೊದಲಾದವರ ಬಗೆಗೆ ಮೌಲಿಕ ಉಪನ್ಯಾಸಗಳನ್ನು ನೀಡಿದ್ದಾರೆ.

ಡಾ॥ ದೊಡ್ಡರಂಗೇಗೌಡರು ಬಹುಮುಖ ಪ್ರತಿಭೆಯ ವಿದ್ವನ್ಮಣಿಗಳು. ವೃತ್ತಿಯಿಂದ ಅಧ್ಯಾಪಕರಾದರೂ ಪ್ರವೃತ್ತಿಯಿಂದ ಕವಿಯಾಗಿ, ಲೇಖಕರಾಗಿ, ವಿಮರ್ಶಕರಾಗಿ, ಚಿತ್ರಗೀತೆಗಳ ರಚನಕಾರರಾಗಿ, ಸ್ವರ ಸಂಯೋಜಕರಾಗಿ, ಗಾಯಕರಾಗಿ, ಪತ್ರಿಕಾ ಅಂಕಣಕಾರರಾಗಿ, ಜಾನಪದ ತಜ್ಞರಾಗಿ ಅಪಾರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಡಾ॥ ದೊಡ್ಡರಂಗೇಗೌಡರು ಗುರು ಕೃಪೆಗೆ ವಿಶೇಷವಾಗಿ ಪಾತ್ರರಾಗಿದ್ದಾರೆ. ಆದಿಚುಂಚನಗಿರಿ ಮಠಾಧ್ಯಕ್ಷರಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಗಳವರಿಗೆ ದೊಡ್ಡರಂಗೇಗೌಡ ದಂಪತಿಗಳ ಮೇಲೆ ವಿಶೇಷ ಅಭಿಮಾನ. ಶ್ರೀ ಮಠದ ಕಾರ್ಯಕ್ರಮಗಳಿಗೆ ಈ ದಂಪತಿಗಳನ್ನು ಆಹ್ವಾನಿಸಿ ಉಪನ್ಯಾಸ ಏರ್ಪಡಿಸಿ ಸತ್ಕರಿಸಿ ಸನ್ಮಾನಿಸಿದ್ದಾರೆ. ನಾನೂ ಸಹ ಒಮ್ಮೆ ಈ ದಂಪತಿಗಳ ಜೊತೆ ಶ್ರೀಮಠಕ್ಕೆ ಹೋಗಿ ಗುರುರಕ್ಷೆಯನ್ನೂ ಪಡೆದು ಬಂದಿದ್ದೇನೆ.

ಜಾನಪದ ಕ್ಷೇತ್ರಕ್ಕೆ ದೊಡ್ಡರಂಗೇಗೌಡರ ಕೊಡುಗೆ ವಿಶಿಷ್ಟವಾದುದು, ಗ್ರಾಮಾಂತರ ಪ್ರದೇಶದಿಂದ ಬಂದ ಶ್ರೀಯುತರು ಜಾನಪದ ಸೊಗಡನ್ನು ತಮ್ಮ ಎಲ್ಲ ಗೀತೆಗಳಲ್ಲೂ ಉಳಿಸಿಕೊಂಡು ಬಂದಿರುವುದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ದೊಡ್ಡ ರಂಗೇಗೌಡರಿಗೆ ಅಪಾರ ಕೀರ್ತಿ ಯಶಸ್ಸನ್ನು ತಂದುಕೊಟ್ಟಿರುವುದು ಸಿನಿಮಾರಂಗಕ್ಕೆ ಅವರು ರಚಿಸಿರುವ ಹಾಡುಗಳಿಂದ. ಸುಮಾರು ಮೂವತ್ತು ವರ್ಷಗಳು ಅವರು ಹಾಡಿದ ಚಿತ್ರರಂಗದ ಗೀತೆಗಳು ಮನವನ್ನು ಸೂರೆಗೊಂಡಿವೆ. ಅವರಿಗೆ ಶಾಶ್ವತ ಕೀರ್ತಿಯನ್ನು ಪ್ರತಿಷ್ಠೆಯನ್ನು ತಂದುಕೊಟ್ಟಿವೆ. ಜನತೆಯ ನಾಲಗೆಯ ಮೇಲೆ ಚಿರಂತನವಾಗಿ ನಲಿದಾಡುತ್ತಿವೆ.

ಮಾನವನ ಜೀವನದಲ್ಲಿ ಅರವತ್ತು ವರ್ಷಗಳು ಬದುಕುವುದು ಒಂದು ಪುಣ್ಯ ವಿಶೇಷವೆಂದು ಭಾವಿಸಲಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಇದನ್ನು ಷಷ್ಠಿಪೂರ್ತಿ ಎಂದು ಕರೆಯಲಾಗುತ್ತದೆ. ಈ ಅವರತ್ತು ವರ್ಷಗಳು ತಾನು ಮಾಡಿದ ಕಾರ್ಯಗಳ ಪರಿವೀಕ್ಷಣೆ ಮಾಡಲಾಗುತ್ತದೆ. ಈ ಅವಧಿಯಲ್ಲಿ ಅಜ್ಞಾನದಿಂದಲೋ, ಆನಂದದಿಂದಲೋ ಸಂಭ್ರಮಿಸಬಹುದಾದ ಆ ಕಾರ್ಯಗಳನ್ನು ಬರಲಿರುವ ಅವಧಿಯಲ್ಲಿ ಸಕಾರ್ಯಗಳನ್ನಾಗಿ ಪರಿವರ್ತಿಸುವ ಮಾರ್ಗವನ್ನು ಕಂಡುಕೊಳ್ಳಬಹುದಾಗಿದೆ. ಜೊತೆಗೆ ಬದುಕಿರುವಷ್ಟು ಕಾಲ ಮಾಡಬೇಕಾದ ಮಹತ್ತರ ಕಾರ್ಯಗಳನ್ನು ಯೋಚಿಸಬಹುದಾಗಿದೆ. ಹಳೆಯದನ್ನು ತಿದ್ದಿಕೊಳ್ಳುವ ಹೊಸದನ್ನು ರೂಪಿಸಿಕೊಳ್ಳುವ ಮಹತ್ವದ -ಕಾಲವಾಗಿದೆ. ನಯ ವಿನಯ ಸಜ್ಜನಿಕೆ ಸಾಕಾರ ಮೂರ್ತಿಯಾಗಿರುವ ದೊಡ್ಡರಂಗೇಗೌಡರು ಸಾರ್ಥಕ ಅರವತ್ತು ವರ್ಷಗಳನ್ನು ಕ್ರಮಿಸಿದ್ದಾರೆ. ಸದಾ ಚಿಂತನಶೀಲರಾದ ಶ್ರೀಯುತರು ನೂರಾರು ವರ್ಷಗಳ ತುಂಬು ಜೀವನವನ್ನು ನಡೆಸಿ ನಾಡು ನುಡಿಗಳಿಗೆ ಮಹೋನ್ನತ ಸೇವೆಯನ್ನು ಸಲ್ಲಿಸಿ ಕೃತಾರ್ಥರಾಗಲಿ ಎಂದು ಹರಸಿ ಹಾರೈಸುತ್ತೇನೆ. ಇಂತಹ ಒಬ್ಬ ಶ್ರೇಷ್ಠ ಸುಸಂಸ್ಕೃತ ವ್ಯಕ್ತಿಯನ್ನು ಗುರುತಿಸಿ ಗೌರವಿಸಿ ಸತ್ಕರಿಸಲಿರುವ ಅವರ ಶಿಷ್ಯರು, ಮಿತ್ರರು, ಅಭಿಮಾನಿಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.





# ಗೀತ ಗಾರುಡಿಗ

● ಬಾಕಿನಿ

ನನ್ನ ಮತ್ತು ದೊಡ್ಡರಂಗೇಗೌಡರ ಪರಿಚಯ ಸುಮಾರು ಮೂವ್ವತ್ತೈದು ವರ್ಷಗಳ ಹಿಂದಿನದ್ದು. ಅವರು ಕವಿಯಾಗಿ ಕಾವ್ಯಲೋಕಕ್ಕೆ ಪಾದಾರ್ಪಣ ಮಾಡಿದ ಕವಿ ಸಮಯ ಎನ್ನಬಹುದು. ನಗುಮೊಗದ ಗೌಡರು ಒಂದು ದಿನ ಮುದ್ರಣಾಲಯಕ್ಕೆ ಬಂದರು. ಅವರ ಬಗಲಲ್ಲಿ ಒಂದು ಚೀಲ. ಕಿಸೆಯಲ್ಲಿ ಎರಡು ಲೇಖನಿಗಳು. ಅವರೇ ತಮ್ಮ ಪರಿಚಯ ಮಾಡಿಕೊಂಡರು. ಅವರ ಕವನವನ್ನು 'ಕವಿತಾ' ಪತ್ರಿಕೆಯಲ್ಲಿ ಪ್ರಕಟಿಸಿದ ನೆನಪು ಮಾಡಿಕೊಂಡರು. ಅವರ ಮೆಲುದನಿಯ ಸೌಜನ್ಯಪೂರ್ಣ ಮಾತುಗಾರಿಕೆ ಸಂಭಾಷಣೆ ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಗುರುತನ್ನು ಮೂಡಿಸಿತು.

ದೊಡ್ಡರಂಗೇಗೌಡರು ತಮ್ಮ ಚೀಲದಿಂದ ಹಸ್ತಪ್ರತಿಯ ಕಟ್ಟೊಂದನ್ನು ಎತ್ತಿಕೊಂಡರು. ತಾವು ಬರೆದ ಕವನಗಳನ್ನು ನನ್ನ ಮುಂದೆ ಬಿಚ್ಚಿದರು. ತಮ್ಮ ಪ್ರಥಮ ಕವನ ಸಂಕಲನವನ್ನು ತಾವೇ ಪ್ರಕಟಿಸುವ ನಿರ್ಧಾರ ಮಾಡಿದ ಬಗ್ಗೆ ತಿಳಿಸಿದರು. ಈ ಸಂಕಲನವನ್ನು ನಮ್ಮ ಮುದ್ರಣಾಲಯದಲ್ಲಿ ಮುದ್ರಿಸಿಕೊಡಬೇಕೆಂದು ತಮ್ಮ ಬೇಡಿಕೆಯನ್ನು ಮುಂದಿಟ್ಟರು. ನಾನು ಸಂತೋಷದಿಂದ ಒಪ್ಪಿಕೊಂಡೆ.

'ನೀವೇ ಪುಸ್ತಕದ ಅಂದಚಂದ ನೋಡಿಕೊಂಡು ಒಂದು ಅರ್ಥಪೂರ್ಣವಾದ ಮುಖಚಿತ್ರವನ್ನೂ ಬಿಡಿಸಿಕೊಟ್ಟು ಸಹಕರಿಸಬೇಕೆಂದು' ತಮ್ಮ ಕೋರಿಕೆಯನ್ನು ನನ್ನ ಮುಂದಿಟ್ಟರು.

'ಕವಿಗಳಿಗೆ ಆದಷ್ಟು ಸಹಾಯ ಮಾಡುವುದು ನನ್ನ ಜಾಯಮಾನ. ನೀವು ಏನೂ ಚಿಂತಿಸಬೇಡಿ. ನಾನು ಎಲ್ಲವನ್ನೂ ಅಚ್ಚುಕಟ್ಟಾಗಿ ಮಾಡಿಕೊಡುತ್ತೇನೆ' ಎಂದು ಭರವಸೆಯನ್ನು ಕೊಟ್ಟ ಮೇಲೆ ತಮ್ಮ ಜೇಬಿನಿಂದ ನಿಧಾನವಾಗಿ ಸ್ವಲ್ಪ ರೊಕ್ಕವನ್ನು ಮುಂಗಡವಾಗಿ ಕೊಟ್ಟು ಮತ್ತೆ ಬರುತ್ತೇನೆಂದು ಹೊರಟರು.

ಅವರ ವಿನಯ ತುಂಬಿದ ಮಾತುಗಾರಿಕೆ, ಅಚ್ಚ ಕನ್ನಡದಲ್ಲೇ ಸರಳವಾಗಿ ಮಾತಾಡುವ ಕೌಶಲ್ಯ ನನಗೆ ತುಂಬಾ ಹಿಡಿಸಿತು. ಅವರ ಪ್ರಥಮ ಕವನ ಸಂಕಲನ ''ಜಗಲಿ ಹತ್ತಿ ಇಳಿದು'' ನಮ್ಮ ಮುದ್ರಣಾಲಯದಲ್ಲಿ ಅಚ್ಚಾಗಿ ಲೋಕಾರ್ಪಣವಾಯಿತು. ಅದಕ್ಕಾಗಿ ಒಂದು ಕಲಾತ್ಮಕವಾದ ಮುಖಚಿತ್ರವನ್ನೂ ಮಾಡಿ ಮುದ್ರಿಸಿ ಕೊಟ್ಟಿದ್ದೆ. ಗೌಡರಿಗೆ ಆ ಚಿತ್ರ ಹಿಡಿಸಿತು. ಕಾವ್ಯಲೋಕದಲ್ಲಿ ಅವರ ಕೃತಿ ಹೆಸರುಗಳಿಸಿತು.

ದೊಡ್ಡರಂಗೇಗೌಡರು ಕಳೆದ ಮೂವತ್ತು ವರ್ಷಗಳಿಂದ ಕವನಗಳನ್ನು ಬರೆಯುತ್ತ ಎತ್ತರಕ್ಕೆ ಬೆಳೆದಿದ್ದಾರೆ. ಅವರ ಗೀತೆಗಳು ಸಾವಿರಾರು ಜನರ ಮನಸ್ಸುಗಳನ್ನು ಸೂರೆಗೊಂಡಿದೆ. ಅವರ ಗೀತೆಗಳ ಪದಗುಚ್ಛಗಳು ಹಳ್ಳಿಗಾಡಿನ ಮಣ್ಣಿನ ವಾಸನೆಯಿಂದ ತುಂಬಿಕೊಂಡು ವಿಭಿನ್ನವಾಗಿರುತ್ತದೆ. ಅವರು ಸಹಜ ಕವಿ. ಅವರ ಗೀತೆಗಳು ಪದ ಲಾಲಿತ್ಯದ ಸಂರಚನೆಯಿಂದ ಗೇಯಗುಣಗಳ ಗುಣವಿಶೇಷಣಗಳಿಂದ ಕೂಡಿದೆ. ಚಿತ್ರಗೀತೆಗಳಾಗಲಿ, ಭಾವಗೀತೆಗಳಾಗಲಿ ಇದು ಗೌಡರ ರಚನೆಯೆಂದು ಗುರುತಿಸುವ ಛಾಪು ಹಾಕಿದ ಕವಿ ದೊಡ್ಡರಂಗೇಗೌಡರು ಅಭಿವಂದನೀಯರು.

ಲಿ.ಸ. ಕಲೆ ವಾಣಿಜ್ಯ ವಿಜ್ಞಾನ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಗೌಡರನ್ನು ಹಲವಾರು ಬಾರಿ ಭೇಟಿಯಾಗಿದ್ದೇನೆ. ಆಗಾಗ ನಮ್ಮ 'ಗಾಂಧಿ ಬಜಾರ್' ಪತ್ರಿಕಾಲಯಕ್ಕೆ ಬರುತ್ತಿದ್ದರು. ಆಗ ಸಾಹಿತ್ಯದ ಆಗುಹೋಗುಗಳ ಬಗ್ಗೆ ಒಂದರ್ಧಗಂಟೆ ಹರಟುತ್ತಿದ್ದೆವು. ಪತ್ರಿಕೆಗೆ ಪ್ರತಿಸಲವೂ ಒಂದು ಕವನವನ್ನು ಕೊಟ್ಟು ಹೋಗುವ ಪದ್ಧತಿ ಅವರದು. ಅವರು ಲೋಕಖ್ಯಾತರಾದರೂ ಸರಳ ಸಜ್ಜನಿಕೆಯ ವ್ಯಕ್ತಿತ್ವದಿಂದ ಜನಸಾಮಾನ್ಯರೊಂದಿಗೆ ಬೆರೆಯುತ್ತಿದ್ದ ಪರಿ ಗಮನೀಯವಾದದ್ದು.

ಸಾಹಿತ್ಯ, ಸಂಸ್ಕೃತಿಯ ಪರಿಚಾರಕರಾಗಿ ದೊಡ್ಡರಂಗೇಗೌಡರು ಅಮೆರಿಕಾ, ಇಂಗ್ಲೆಂಡ್, ಜರ್ಮನಿ ದೇಶಗಳಲ್ಲಿ ಪ್ರವಾಸ ಮಾಡಿ ಅಲ್ಲಿನ ಕನ್ನಡ ಸಂಘ ಸಂಸ್ಥೆಗಳಲ್ಲಿ ಕವನಗಳನ್ನೂ, ಪ್ರವಚನಗಳನ್ನೂ ಕೊಡುತ್ತ ಕನ್ನಡದ ಕಸ್ತೂರಿಯನ್ನು ಬೀರಿದ್ದಾರೆಂದು ತಿಳಿದು ಅತ್ಯಂತ ಸಂತೋಷವಾಯಿತು.

ಗೌಡರ ಜೊತೆಗಾರ್ತಿ ಶ್ರೀಮತಿ ರಾಜೇಶ್ವರಿ ಗೌಡರು ಸಹ ಲೇಖಕಿ ಮತ್ತು ಕತೆಗಾರ್ತಿ. ಅವರ ಒಂದು ಕಥಾ ಸಂಕಲನವನ್ನೂ ಅಚ್ಚು ಮಾಡಿಕೊಟ್ಟು ಅವರ ಮೆಚ್ಚುಗೆಯನ್ನೂ ಗಳಿಸಿಕೊಂಡಿದ್ದೇನೆ. ಅವರಿಬ್ಬರ ದಾಂಪತ್ಯದ ಜೀವನ ಒಂದು ಅಪರೂಪವಾದ ಸಮರಸದ ಸಹಬಾಳ್ವೆ ಎನ್ನಬೇಕು. ಅವರದು ಒಂದು ಆದರ್ಶಮಯ ದಾಂಪತ್ಯ; ಎರಡು ಕವಿ ಮನಸುಗಳ ಸಮ್ಮಿಲನ.

ದೊಡ್ಡರಂಗೇಗೌಡರಿಗೆ ಈಗ ಅರವತ್ತರ ಐಸಿರಿ. ಅವರನ್ನು ನೋಡಿದರೆ ಮೂವತ್ತರ ತರುಣತನ ಕಾಣುತ್ತದೆ. ಅದೇ ಪುಟಿಯುತ್ತಿರುವ ಉತ್ಸಾಹ, ಭಾವನಾತ್ಮಕ ಮಾತುಗಾರಿಕೆ, ಮುಗುಳು ನಗುವಿನ ಮುಖಭಾವ ಎಲ್ಲವೂ ಅವರನ್ನು ಸದಾ ಚಟುವಟಿಕೆಯಿಂದ ಕೂಡಿರುವಂತೆ ಮಾಡುತ್ತದೆ. ಗೌಡರು ಎಂದೂ ಹೀಗೆಯೇ ಇರಲಿ. ಅವರ ಕವಿ ಹೃದಯದಿಂದ ಇನ್ನಷ್ಟು ಕವನಗಳೂ, ಹಾಡುಗಬ್ಬಗಳೂ ಸ್ಫುರಿಸಲಿ ಎಂದು ತಾಯಿ ಭುವನೇಶ್ವರಿಯಲ್ಲಿ ನನ್ನ ಪ್ರಾರ್ಥನೆ.

ಗೌಡರ ಸೃಜನಶೀಲತೆ ನಾಡು ನುಡಿಯ ಸೇವೆಯಲ್ಲಿ ಅನುಪಮ ಕೊಡುಗೆಯಾಗಿ ವಿಜೃಂಭಿಸಲೆಂದು ನನ್ನ ಹಾರೈಕೆ.





# ಮಿತ ಮೃದುಭಾಷಿ

● ಡಾ॥ ಹೊ. ಶ್ರೀನಿವಾಸಯ್ಯ

ಹಿರಿಯ ಸಾಹಿತಿಗಳೂ, ಜನಪ್ರಿಯ ಕವಿಗಳೂ ಆದ ಡಾ॥ ಪ್ರೊ. ದೊಡ್ಡರಂಗೇಗೌಡರ ಮಿತ್ರರು, ಶಿಷ್ಯಂದಿರೂ ಅಭಿನಂದನಾ ಗ್ರಂಥವನ್ನು ಬರೆಯಲು ಯೋಚಿಸಿರುವುದು ಬಹಳ ಸೂಕ್ತವಾಗಿದೆ. ಅವರನ್ನು ಪರಿಚಯಿಸುವುದರ ಜೊತೆಗೆ ಅವರು ಸಾಹಿತ್ಯ ಲೋಕಕ್ಕೆ ಸಲ್ಲಿಸಿರುವ ಸೇವೆಯನ್ನು ಗುರುತಿಸಿದಂತೆ ಆಗುತ್ತದೆ. ಮೊದಲನೆಯದಾಗಿ ಈ ಕಾರ್ಯದಲ್ಲಿ ಭಾಗವಹಿಸುತ್ತಿರುವ ಎಲ್ಲರಿಗೂ ವಂದನೆಗಳು.

ಶ್ರೀ ದೊಡ್ಡರಂಗೇಗೌಡರು ನನ್ನ ಹಳೆಯ ಮಿತ್ರರು. ಕೇಂದ್ರ ಸರ್ಕಾರದ ಅಂಚೆ ಕಛೇರಿಯಲ್ಲಿ ಸೇವೆಯಲ್ಲಿದ್ದಾಗ ಗಾಂಧೀ ಸಾಹಿತ್ಯ ಈಗಲೂ ಜ್ಞಾಪಕಕ್ಕೆ ಬರುತ್ತದೆ. ಜಿ.ಪಿ. ರಾಜರತ್ನಂ, ಸಿದ್ಧವನಹಳ್ಳಿ ಕೃಷ್ಣಶರ್ಮ ಇವರುಗಳ ಭಾಷಣಕ್ಕೆ ತಪ್ಪದೇ ಅವರ ಹಾಜರಿ ಇರುತ್ತಿತ್ತು. ಕಛೇರಿಯಲ್ಲಿ ಕೆಲಸವನ್ನು ಮಾಡುತ್ತಾ ಕವಿಗಳಾಗಿ, ಸಾಹಿತಿಗಳಾಗಿಯೂ ಮೆರೆದರು. ಜಾನಪದ ಅಧ್ಯಯನ ಮಾಡಿ ಎಂ.ಎ. ಪದವೀಧರರಾದರು. ನೂರಾರು ಕನ್ನಡ ಚಿತ್ರಗೀತೆಗಳನ್ನು ಬರೆದರು; ಸುಪ್ರಸಿದ್ಧರಾದರು. ಒಂದು ಕಾಲದಲ್ಲಿ ಇವರ ಗೀತೆಗಳಿಲ್ಲದೆ ಚಲನಚಿತ್ರಗಳಿರಲಿಲ್ಲ. ನಿವೃತ್ತರಾದ ಮೇಲೆ 'ಡಾಕ್ಟರೇಟ್' ಪಡೆದರು.

ಮಿತ ಮೃದುಭಾಷಿ, ಸರಳ ಸಜ್ಜನ ಸಂಸ್ಕೃತರೂ, ನಯ ವಿನಯಗಳ ಸಂಗಮಗೊಂಡ ಸಹೃದಯರು, ದೇಶಪ್ರೇಮಿ, ಸದಾ ಖಾದಿಧಾರಿ ಉತ್ತಮ ಕನ್ನಡ ಅಧ್ಯಾಪಕನಾಗಿ ಖ್ಯಾತ ಕವಿ, ಸಾಹಿತಿಯೂ ಆಗಿ ಚಲನಚಿತ್ರಗಳ ಗೀತರಚನೆಕಾರರಾಗಿ ಎಲ್ಲರ ಮನೆ ಮಾತಾಗಿರುವ ಶ್ರೀ ಗೌಡರು ಕನ್ನಡ ನಾಡಿನ ಕಣ್ಮಣಿ ಎಂದು ಹೆಸರು ಪಡೆದಿರುವುದು ಆನಂದವನ್ನುಂಟು ಮಾಡುತ್ತದೆ. ಇವರ ಲೇಖನಗಳೂ, ಗ್ರಂಥಗಳೂ, ಧ್ವನಿ ಸುರುಳಿಯ ಭಾವಗೀತೆಗಳು ಅವರ ಪ್ರತಿಭೆಯನ್ನು ಹೊರಹೊಮ್ಮಿಸುತ್ತಿವೆ. ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಈಗ ಆದಿಚುಂಚನಗಿರಿ ಪ್ರತಿಕೆಯ ಸಂಪಾದಕರು, ಪ್ರಕಾಶಕರೂ ಆಗಿರುವುದು ಹೆಮ್ಮೆಯ ವಿಷಯ. ಪತ್ರಿಕೆಯನ್ನು

ಸುಂದರವಾಗಿಯೂ ಅಂದವಾಗಿಯೂ, ವಿಚಾರಪೂರಿತವಾಗಿಯೂ ತರುತ್ತಿರುವುದನ್ನು ನೋಡಿ ಸಂತೋಷ ಪಡುತ್ತಿರುವವರಲ್ಲಿ ನಾನೂ ಒಬ್ಬ.

ಹಗಲೂ ರಾತ್ರಿ ಸಾಹಿತ್ಯ ಸೇವೆಯೇ ನಾಡಿನ ಸೇವೆಯೆಂಬ ಭಾವನೆಯಿಂದ ಸೇವೆಯನ್ನು ಮಾಡುತ್ತಿದ್ದಾರೆ.

ಶ್ರೀ ಕಾಲಭೈರವೇಶ್ವರನ ಕೃಪೆ ಮತ್ತು ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಆಶೀರ್ವಾದದಿಂದ ಕನ್ನಡ ನಾಡಿಗೆ ಇನ್ನೂ ಹೆಚ್ಚಿನ ಸೇವೆಯನ್ನು ಸಲ್ಲಿಸಲೆಂಬುದು ನನ್ನ ಹಿರಿಯಾಸೆ.





# ತುಂಬಿದ ಕೊಡ ತುಳುಕುವುದಿಲ್ಲ

● ಸಿ. ಲಿಂಗಪ್ಪ

ನಾನು "ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈಸೂರು" ಪುಸ್ತಕದ ಲೇಖಕ ಮತ್ತು ಪ್ರಕಾಶಕ. ನನ್ನ ಊರು ಈಸೂರು. ವಿದ್ಯಾರ್ಥಿಯಾಗಿದ್ದಾಗ 1942ರ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಯಾಗಿ ಜೀವಾವಧಿ ಶಿಕ್ಷೆಗೆ ಗುರಿಯಾಗಿ ಮೂರು ವರ್ಷ ಶಿಕ್ಷೆ ಅನುಭವಿಸಿದವನು. 1942ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ "ಈಸೂರು" ತನ್ನನ್ನು ಅರ್ಪಿಸಿಕೊಂಡು ಹೇಗೆ ತ್ಯಾಗ, ಬಲಿದಾನಗಳಿಗೆ ಉಜ್ವಲ ಉದಾಹರಣೆಯಾಯಿತು ಎಂಬುದನ್ನು ನಾನು 75ರ ವಯಸ್ಸಿನಲ್ಲಿ ಪುಸ್ತಕ ಹೊರತರಲು ಪ್ರಯತ್ನಿಸಿದಾಗ ಪುಸ್ತಕ ಪ್ರಕಟವಾಗುವ ಮುನ್ನ ವಿಮರ್ಶೆಗಾಗಿ ಸಾಹಿತಿಗಳ ಅಧ್ಯಯನ ಬೇಕಾಗಿತ್ತು. ನಾನು ಸಾಹಿತಿಯೂ ಅಲ್ಲ, ಬರಹಗಾರನೂ ಅಲ್ಲ, ಆದುದರಿಂದ ಯಾವ ಸಾಹಿತಿಗಳನ್ನು ಸಂಪರ್ಕಿಸಬೇಕೆಂಬ ಆಲೋಚನೆ ಮಾಡುತ್ತಿದ್ದಾಗ, ನನಗೆ ಮಾರ್ಗದರ್ಶನವಿತ್ತವರು ಮಾನ್ಯ ಶ್ರೀ ಎಲ್. ರಂಗೇಗೌಡರು (ನಿವೃತ್ತ ಅಸಿಸ್ಟೆಂಟ್ ಕಮೀಷನರ್). ಅವರು ನನ್ನನ್ನು ಶ್ರೀ ದೊಡ್ಡರಂಗೇಗೌಡರು ಮುಖ್ಯಸ್ಥರು, ಕನ್ನಡ ವಿಭಾಗ, ಎಸ್.ಎಲ್.ಎನ್. ಕಾಲೇಜು, ಕೋಟೆ ಬೆಂಗಳೂರು ಇವರಲ್ಲಿಗೆ ಕರೆದುಕೊಂಡು ಹೋದರು. ಪರಿಚಯವಾಯಿತು. ಇದು ಪ್ರಥಮ ಪರಿಚಯ. ನಾನು ಒಬ್ಬ ಸ್ವಾತಂತ್ರ್ಯ ಯೋಧನೆಂದು ತಿಳಿದು, ಅತ್ಯಂತ ಆನಂದದಿಂದ, ಗೌರವದಿಂದ ಮಾತನಾಡಿಸಿ, ಹಸ್ತ ಲಾಘವವನ್ನಿತ್ತರು.

ನಾನು ಪುಸ್ತಕದ ವಿಮರ್ಶೆಯ ವಿಷಯವನ್ನು ಪ್ರಸ್ತಾಪಿಸಿದಾಗ ಅವರಿಗೆ ಬಿಡುವಿಲ್ಲದ ಕೆಲಸದಲ್ಲಿ ನಿರತರಾಗಿದ್ದರೂ ಕಾಲಾವಕಾಶ ಮಾಡಿಕೊಂಡು ವಿಮರ್ಶೆಮಾಡಿ ಕೊಡುವುದಾಗಿ ಒಪ್ಪಿಗೆ ತಿಳಿಸಿದರು. ಅವರ ಮಂದಹಾಸ ಮಾತಿನ ಶೈಲಿ, ಅವರ ಒಪ್ಪಿಗೆ, ನನಗೆ ಅತ್ಯಂತ ಸಂತೋಷ ತಂದಿತು. ಇದು ಅವರ ವ್ಯಕ್ತಿತ್ವದ 'ದ್ಯೋತಕ". ನನ್ನ ಬರವಣಿಗೆಯ ಕರಡು ಪ್ರತಿಯಲ್ಲಿ ಕೆಲವನ್ನು ತಿದ್ದಿ, ನನಗೆ ಮಾರ್ಗದರ್ಶನವನ್ನು ಮಾಡಿದರು. ಕೇವಲ ಎರಡು ತಿಂಗಳ ಅವಧಿಯಲ್ಲಿ ವಿಮರ್ಶೆಯನ್ನು ಮಾಡಿ ಕೊಟ್ಟಿದ್ದಲ್ಲದೆ, ಒಂದು ಲಾವಣಿಯನ್ನೂ ಬರೆದು

ಕೊಟ್ಟರು. ಇದರ ಪರಿಣಾಮವಾಗಿ ಅಪೂರ್ಣವಾಗಿದ್ದ ನನ್ನ ನೆನಪಿನ ''ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈಸೂರು'' ಪುಸ್ತಕ 2000ದ ಇಸವಿ ಅಕ್ಟೋಬರ್‌ನಲ್ಲಿ ಬಿಡುಗಡೆಯಾಗಲು ಅವಕಾಶವಾಯಿತು. ಶಿವಮೊಗ್ಗದಲ್ಲಿ ಪುಸ್ತಕ ಬಿಡುಗಡೆಯ ಸಂದರ್ಭದಲ್ಲಿ ನಮ್ಮ ಆಹ್ವಾನವನ್ನು ಸ್ವೀಕರಿಸಿ ಮುಖ್ಯ ಅತಿಥಿಯಾಗಿಯೂ ಬಂದು ಅವರು ಆಡಿದ ಮಾತುಗಳು, ವಿಮರ್ಶೆಯ ಪ್ರಸ್ತಾಪ, ಸಭಿಕರ ಶ್ಲಾಘನೆಗೆ ಪಾತ್ರವಾದುವು.

ಪುಸ್ತಕದ ಬಿಡುಗಡೆಯ ನಂತರ ಕೋಟೆ ಕಾಲೇಜಿನ ಗ್ರಂಥಾಲಯಕ್ಕೆ ನನ್ನ ಹತ್ತು ಪುಸ್ತಕಗಳನ್ನು ಸೇರಿಸಿದರು, ಮತ್ತು ಕಾಲೇಜಿನ ಮುಖ್ಯಸ್ಥರಾದಿಯಾಗಿ ಸರ್ವರ ಪರಿಚಯ ಮಾಡಿಸಿ ಅವರಿಂದ ಗೌರವ ಕೊಡಿಸಿದರು. **''ತುಂಬಿದ ಕೊಡ ತುಳುಕುವುದಿಲ್ಲ''** ಎಂಬುದಕ್ಕೆ ಇದು ನಿದರ್ಶನ.

❑



# ಚಿರಂಜೀವಿಯಾಗಲಿ

● ಪೆರುಮಾಳ್

ಡಾ॥ ದೊಡ್ಡರಂಗೇಗೌಡರು ದೊಡ್ಡ ಕವಿಗಳು. ಇವರು ಕನ್ನಡ ನಾಡಿಗೆ ಮತ್ತು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅನನ್ಯ ಸೇವೆ ಸಲ್ಲಿಸಿದ್ದಾರೆ. ಇವರು ತಮ್ಮ ಜೀವನವನ್ನು ಪ್ರಾಧ್ಯಾಪಕರಾಗಿ ಪ್ರಾರಂಭಿಸಿ, ಇಂದು ಕನ್ನಡ ಚಲನಚಿತ್ರ ಕ್ಷೇತ್ರದಲ್ಲಿ ಹಲವಾರು ಜನಪ್ರಿಯ ಕನ್ನಡ ಗೀತೆಗಳನ್ನು ರಚಿಸಿರುವುದರ ಮೂಲಕ ನಮ್ಮೆಲ್ಲರ ಮನಸ್ಸಿನಲ್ಲಿ ನಿಂತಿದ್ದಾರೆ. ಒಂದೊಂದು ಹಾಡನ್ನು ಕೇಳುವಾಗಲೆಲ್ಲ ಅವರ ಕಾವ್ಯ ಪ್ರತಿಭೆ ನಮ್ಮ ಮುಂದೆ ಬಂದು ನಿಲ್ಲುವ ರೀತಿಯಲ್ಲಿ ಈ ನಾಡಿನ ಸಂಸ್ಕೃತಿ, ಇತಿಹಾಸ ಮುಂತಾದವುಗಳನ್ನು ಎತ್ತಿತೋರಿಸುವ, ಗೀತೆಗಳನ್ನು ತಂದಿರುವುದನ್ನು ನಾವು ಮೆಚ್ಚಲೇಬೇಕು. ಇವರು ಹಿಮಾಲಯ ಪರ್ವತದೆತ್ತರಕ್ಕೆ ಬೆಳೆದು ನಿಂತಿದ್ದಾರೆ. ಆದರೆ ಇವರಲ್ಲಿ ಅಹಂ ಇಲ್ಲ, ಇವರು ಸರಳ ಜೀವಿಗಳು. ಎಲ್ಲರನ್ನು ಸಮಭಾವದಿಂದ ನೋಡುವ ಮನಸ್ಸನ್ನು ಪಡೆದಿದ್ದಾರೆ. ಇದು ಒಂದೇ ಇವರು ಇನ್ನೂ ಉನ್ನತ ಮಟ್ಟಕ್ಕೆ ಬೆಳೆಯಲು ದಾರಿ ದೀಪವಾಗಿದೆ...

ಇವರು ನನಗೆ ಪರಿಚಯವಾದದ್ದು ನಾನು ನನ್ನ ಜೀವನದಲ್ಲಿ ಮಾಡಿದ ಒಂದು ಪುಣ್ಯವೆಂದೇ ಭಾವಿಸುತ್ತೇನೆ. ಇವರು ಒಬ್ಬ ಶಿವ ಭಕ್ತರು, ನಮ್ಮ ಕನ್ನಡ ನಾಡಿನಲ್ಲಿರುವ ಹೆಸರಾಂತ ಮಠಾಧಿ ಪತಿಗಳ ಆಶೀರ್ವಾದ ಪಡೆದವರು. ಮಠದಲ್ಲಿ ಕೂಡ ತಮ್ಮ ಸೇವೆಯನ್ನು ತೊಡಗಿಸಿ ಅವರ ಮುಖಾಂತರ ಭಕ್ತಿ ಮತ್ತು ಸಾರ್ವಜನಿಕ ಸೇವೆಯನ್ನು ಸಲ್ಲಿಸುತ್ತಾ ಬರುತ್ತಿದ್ದಾರೆ. ಇಂತಹ, ವ್ಯಕ್ತಿಯನ್ನು ನಾನು ಹಲವಾರು ಕಡೆ ಮಠಾಲಯದಲ್ಲಿ ನೋಡಿ ಇವರ ವಿದ್ವತ್ ಪೂರ್ಣ ಭಾಷಣಗಳ ಮುಖಾಂತರ ನಾವು ಪರಿಚಯವಾಗಿದ್ದೇವೆ.

ಒಮ್ಮೆ ನಾನು ರಾಯಚೂರು ಜಿಲ್ಲೆಯಲ್ಲಿ ನಡೆದ ಸಾಂಸ್ಕೃತಿಕ ಮೇಳಕ್ಕೆ ಬರಮಾಡಿಕೊಂಡು ಕವಿಗೋಷ್ಠಿಯಲ್ಲಿ ಇವರನ್ನು ಅಧ್ಯಕ್ಷರನ್ನಾಗಿ ಮಾಡಿ, ಕವಿಗೋಷ್ಠಿ ನಡೆದದ್ದು ಹಸಿರಾಗಿ ನಿಂತಿದೆ.. ಮತ್ತೆ ನನ್ನ ಪ್ರೀತಿಯ ಕವನ ಸಂಕಲನದಲ್ಲಿ ಇವರ ಕವನ ಕೂಡ ಬಹಳ ಅದ್ಭುತವಾಗಿ ಬಂದಿದೆ. ಇವರು ನನ್ನ ಕವನ ಸಂಕಲನಗಳಾದ ''ಹಸಿವಿನ ಲೋಕ, ಹಿಡಿ ಶಾಪ'' ಮುಂತಾದವುಗಳನ್ನು

ಓದಿ ತಮ್ಮ ಅಭಿನಂದನೆಗಳನ್ನು ನನಗೆ ಸಲ್ಲಿಸಿರುವುದು ನಾನು ಕನ್ನಡವನ್ನು ಮುಂದುವರೆಸಲು ಒಂದು ಆಶೀರ್ವಾದವೆಂದೇ ಭಾವಿಸುತ್ತೇನೆ.

ಇವರ ಮನೆಯವರಾದ ಡಾ॥ ಕೆ. ರಾಜೇಶ್ವರಿಯವರು ಕೂಡ ಶಿಕ್ಷಣ ಕ್ಷೇತ್ರದಲ್ಲಿ ಇವರಿಗೆ ಒಡನಾಡಿಯಾಗಿ ಇದ್ದು ಇವರ ಚಲನಚಿತ್ರ ಕ್ಷೇತ್ರದಲ್ಲಿ ಪತಿಯ ಹುಮ್ಮಸ್ಸಿಗೆ ಕಾರಣವಾಗಿರುವುದು ಮೆಚ್ಚುವ ಸಂಗತಿಯಾಗಿದೆ. ಶ್ರೀಮತಿ ರಾಜೇಶ್ವರಿಯವರು ಶ್ರೀ ಶ್ರೀ ಶ್ರೀ ಜಗದ್ಗುರು ಬಾಲಗಂಗಾಧರನಾಥ ಸ್ವಾಮೀಜಿಯವರ ಆದಿಚುಂಚನಗಿರಿ ಮಠದ ಬಗ್ಗೆ ಸಂಶೋಧನಾ ಕೃತಿ ಹೊರತಂದಿದ್ದಾರೆ. ಇದು ಹಲವಾರು ತಿರುವುಗಳನ್ನು ಕೊಟ್ಟಿದೆ. ಇವರ ಮನೆಗೆ ನಾನು ನನ್ನ ಪತ್ನಿಯವರು ಹೋಗಿ ಶ್ಲಾಘಿಸಿದ್ದೇವೆ. ಈ ರೀತಿಯಲ್ಲಿ ಒಂದು ಕುಟುಂಬವಾಗಿ ನಾವು ಬೆಳೆಯಲು ಸನ್ಮಾನ್ಯ ಡಾ॥ ದೊಡ್ಡರಂಗೇಗೌಡರವರು ಅನುವು ಮಾಡಿಕೊಟ್ಟಿರುವುದು ದಂಪತಿಗಳಾದ ನಮಗೆ ಸಂತೋಷ ಉಂಟುಮಾಡಿದೆ.

ಶ್ರೀಯುತರು ಇನ್ನೂ ಉನ್ನತ ಸ್ಥಾನಮಾನವನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಂದ ಪಡೆಯಬೇಕಾಗುತ್ತದೆ. ಮತ್ತು ಜ್ಞಾನಪೀಠ ಪ್ರಶಸ್ತಿ ಕೂಡ ಇವರಿಗೆ ಸಲ್ಲಬೇಕಾಗುತ್ತದೆ. ಭಗವಂತನು ಇವರಿಗೆ ಉನ್ನತ ಸ್ಥಾನ ಗೌರವಗಳನ್ನು ಕರುಣಿಸಿ ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇನೆ.

❑



# ಸಾಧನೆಯ ಗೌರೀಶಂಕರ

• ಗುರು ಶ್ಯಾಮಲಾ ಜಿ.ಭಾವೆ

ಸಪ್ತ ಸ್ವರದ ಮಧುರ ಮಿಲನ
ರಾಗರಾಗಿಣಿ ಜನನ
ಆರೋಹಣ ಅವರೋಹಣ
ಸಂಗೀತದ ಸಂಚಾರ ಸ್ಪಂದನ

ಇಂತಹ ಸಾಲುಗಳನ್ನು ಕೊಟ್ಟ ದೊಡ್ಡರಂಗೇಗೌಡರ ಜಾಣ್ಮೆಯನ್ನು ನಾನು ಅವತ್ತೇ ಮೆಚ್ಚಿಕೊಂಡು ಬಿಟ್ಟೆ. ಏಕೆಂದರೆ ಯಾವುದೇ ಕವಿ ಕವನ ಬರೆಯುವಾಗ ತನ್ನ ಭಾವನೆಗಳನ್ನಷ್ಟೇ ಅಲ್ಲಿ ಅಭಿವ್ಯಕ್ತಿಸಲು ಪ್ರಯತ್ನಿಸುತ್ತಾನೆ. ಕಾವ್ಯದ ವ್ಯಾಕರಣದ ವಿಷಯದಲ್ಲಿ ಹೊಂದಾಣಿಕೆಗೆ ಆ ಕವಿ ಸಿದ್ಧವಿರುವುದಿಲ್ಲ. ಹೀಗಾಗಿ ಹೆಚ್ಚಿನ ಸಂದರ್ಭದಲ್ಲಿ ಈ ರೀತಿಯ ಕವಿತೆಗಳು ಸಂಗೀತದ ವ್ಯಾಕರಣಕ್ಕೆ ಹೊಂದಿಕೊಳ್ಳುವುದಿಲ್ಲ. ಹಾಗಾಗಿ ಸ್ವರ ಸಂಯೋಜನೆಯಲ್ಲಿ ಲಯಕ್ಕೆ ಸಾಲುಗಳನ್ನು ಬಲವಂತವಾಗಿ ಹೊಂದಿಸಲು ಹೊರಟು ಸಾಹಿತ್ಯದ ಮೂಲಾರ್ಥ ಆಭಾಸಗಳಿಗೆ ಒಳಗಾಗಿಬಿಡುವ ಅಪಾಯವನ್ನು ನಾವು ಎದುರಿಸಬೇಕಾಗುತ್ತದೆ.

ಆದರೆ ದೊಡ್ಡರಂಗೇಗೌಡರ ಭಾವಗೀತೆಗಳನ್ನು ರಚಿಸುವಾಗ ಸಂಗೀತದ ವ್ಯಾಕರಣವನ್ನು ಗಮನದಲ್ಲಿರಿಸಿಕೊಂಡು ಕಾವ್ಯದ ವ್ಯಾಕರಣವನ್ನು ದುಡಿಸಿಕೊಳ್ಳುವ ಪ್ರತಿಭಾವಂತರು ಅನ್ನುವುದನ್ನು ಹಲವು ಸಂದರ್ಭಗಳಲ್ಲಿ ಸಾಬೀತು ಪಡಿಸಿದ್ದಾರೆ. ಜೊತೆಗೆ ತಾನು ಯಾರಿಗೆ ಮತ್ತು ಯಾವ ಸಂದರ್ಭಕ್ಕೆ ಕವಿತೆ ರಚಿಸುತ್ತೇನೆ ಅನ್ನುವ ಪ್ರಜ್ಞೆ ಅವರಲ್ಲಿ ಎಲ್ಲ ಕಾಲದಲ್ಲೂ ಜಾಗೃತವಾಗಿರುತ್ತದೆ ಅನ್ನುವುದನ್ನು ನಾನು ಗಮನಿಸಿದ್ದೇನೆ. ಉದಾಹರಣೆಗೆ ನನ್ನಂತಹ ಸಂಗೀತ ಕಲಾವಿದೆಗೆ ಗೌಡರು ರಚಿಸಿಕೊಟ್ಟ ಮೇಲಿನ ಸಾಲುಗಳನ್ನು ಗಮನಿಸಿ.

ದೊಡ್ಡರಂಗೇಗೌಡರಲ್ಲಿ ಯಾವಾಗಲೂ ಒಬ್ಬ ಹಾಡುಗಾರ ಕುಳಿತು ಕಾದುತ್ತಿರುತ್ತಾನೆ

ಅನ್ನುವುದನ್ನು ನಾನು ಗುರುತಿಸಿದ್ದೆ. ಆ ಹಾಡುಗಾರ ನಿಜವಾಗಿಯೂ ಹಾಡಬಲ್ಲ ಅನ್ನುವುದು ಆಮೇಲೆ ನನ್ನ ಗಮನಕ್ಕೆ ಬಂತು. ಜಾನಪದದ ಮಟ್ಟುಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಬಲ್ಲ ಅದ್ಭುತ ಕಂಠಸಿರಿ ಗೌಡರದು. ಅವರ ಗುನುಗುನುವಿಕೆಯನ್ನು ಕೆಲವು ಸಂದರ್ಭಗಳಲ್ಲಿ ಕೇಳುವ ಅವಕಾಶ ಬಂದಾಗ, ಈ ಸ್ವರಶುದ್ಧತೆಯನ್ನು ಈತ ಒಂದಿಷ್ಟು ಕಲಿಕೆಗೆ ಒಡ್ಡಿಕೊಳ್ಳಬಾರದೇ ಅನ್ನಿಸಿದ್ದೂ ಉಂಟು.

ದೊಡ್ಡರಂಗೇಗೌಡರ ಕಾವ್ಯಕೃಷಿಯನ್ನು ನಾನು ಅಷ್ಟಾಗಿ ಅರಿತಿಲ್ಲ. ಏಕೆಂದರೆ ಆ ಮಾಧ್ಯಮದಿಂದ ಹೊರತಾದವಳು ನಾನು. ಆದರೆ ಅವರ ಸಿನಿಮಾ ಗೀತೆಗಳನ್ನು ಕೇಳಿ ಮೆಚ್ಚಿಕೊಂಡಿದ್ದೇನೆ. ಪರಸಂಗದ ಗೆಂಡೆತಿಮ್ಮ ಚಿತ್ರದ ಅವರ ಗೀತೆಗಳು ಕನ್ನಡ ಸಿನಿಮಾ ಮಾಧ್ಯಮಕ್ಕೆ ಒಂದು ಹೊಸ ದಿಶೆಯನ್ನೇ ತೆರೆದವು ಅನ್ನುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಎಷ್ಟೋ ಸಿನಿಮಾಗಳು ಗೌಡರ ಗೀತೆಗಳಿಂದ ಜನಪ್ರಿಯವಾದವು ಅನ್ನುವುದೂ ನಮ್ಮೆದುರಿಗಿರುವ ಸತ್ಯ.

ತೆಂಗಿನ ತುದಿಯಲಿ ಕಾಯಿಗಳಿದ್ದವು
ತಾಯಿ ಮಕ್ಕಳಂತೆ
ಬಾನಿನ ಮೈಯಲಿ ರವಿ ಶಶಿಯಿಹವು
ತಂದೆ ತಾಯಿಗಳಂತೆ

ಗೌಡರ ಈ ಸಾಲುಗಳನ್ನು ಓದಿದಾಗ ನಮಗೆ ತಕ್ಷಣ ಪ್ರೈಮರಿ ಶಾಲೆಯ 'ರೈಮ್ಸ್'ಗಳು ನೆನಪಿಗೆ ಬರುತ್ತವೆ. ಅಷ್ಟೊಂದು ಸರಳ ಮತ್ತು ಮನಸ್ಸನ್ನು ಸೆಳೆಯುವ ಧಾಟಿ ಅಲ್ಲಿದೆ. ಹಾಗೇ ಆ ಸರಳ ಸಾಲುಗಳು ಕೊಡುವ ವಿಶಾಲ ಅರ್ಥವನ್ನೂ ನಾವು ಗಮನಿಸಬೇಕಾಗುತ್ತದೆ. ತೆಂಗಿನ ಮರವನ್ನು ತಾಯಿಗೂ, ತೆಂಗಿನ ಕಾಯಿಗಳನ್ನು ಮಕ್ಕಳಿಗೂ ಹೋಲಿಸುತ್ತಾ, ಮನುಷ್ಯ ಕುಲದ ಅಸ್ತಿತ್ವಕ್ಕೆ ಕಾರಣವಾದ ರವಿ ಶಶಿಯರನ್ನು ತಂದೆ ತಾಯಿಗಳಿಗೆ ಹೋಲಿಸಲಾಗಿದೆ. ಸರಳತೆಯಲ್ಲೂ ಗಹನವನ್ನು ತುಂಬುವ ಗೌಡರ ಈ ಜಾಣ್ಮೆ ಬಹಳ ಅಪರೂಪವಾದದ್ದು.

ಹುಡುಕುತ್ತಲೇ ಇದ್ದೇನೆ ನಾನು
ಈ ಭೂಮಿ, ಆ ಭಾನು.. .. ..
ನಿತ್ಯ ನಿತ್ಯ ನೀಡಿದೆ ಬೆರಗನ್ನು
ಊಹೆಗೆಟುಕದ ನಿಲುವನ್ನು

ಮೇಲಿನ ಸಾಲುಗಳ ಮೂಲಕ ನಿಸರ್ಗದಲ್ಲಿನ ಸೃಷ್ಟಿಯ ಸೋಜಿಗವನ್ನು ಗೌಡರು ಮಾತುಗಳಲ್ಲಿ ಹಿಡಿದಿರುವ ಪರಿ ಅನನ್ಯವಾದುದು.

ಹೀಗೆ ಒಬ್ಬ ಸಂಗೀತ ಸಂಯೋಜಕಿ ಮತ್ತು ಗಾಯಕಿಯಾಗಿ ದೊಡ್ಡರಂಗೇಗೌಡರ ಪದ್ಯಗಳಲ್ಲಿ ಸಾಹಿತ್ಯದಲ್ಲಿ ವಿಮರ್ಶಕ ಹುಡುಕುವ ಅರ್ಥಗಳಿಗಿಂತ ಭಿನ್ನವಾದ ವಿವರಣೆಗಳನ್ನು ಕಾಣಲು ನನಗೆ ಸಾಧ್ಯವಾಗಿದೆ. ಅಥವಾ ಆ ಸಾಧ್ಯತೆಯನ್ನು ಗೌಡರ ಪದ್ಯಗಳು ನನಗೆ ತೋರಿಸಿಕೊಟ್ಟಿವೆ. ವಾಸ್ತವವಾಗಿ ದೊಡ್ಡರಂಗೇಗೌಡರ ಕವನಗಳಿಗೆ ಸಂಗೀತ ಸಂಯೋಜಿಸಲು ಮತ್ತು ಹಾಡಲು ಬೇರೆ ಸಂಗೀತ ಕಲಾವಿದರಿಗೆ ಸಿಕ್ಕಷ್ಟು ಅವಕಾಶಗಳು ನನಗೆ ಸಿಕ್ಕಿಲ್ಲ. ಹಾಗಾಗಿ ಅವರ ಪದ್ಯಗಳ ಬಗ್ಗೆ ಹೆಚ್ಚಿಗೆ ಬರೆಯಲು ನನಗೆ ಸಾಧ್ಯವಾಗುತ್ತಿಲ್ಲ. ಬಹುಶಃ ಮುಂದೆ ಆ ನಿಟ್ಟಿನಲ್ಲಿ ನನಗೆ ಅವಕಾಶಗಳು ಮತ್ತು ಆ ಮೂಲಕ ಗೌಡರ ಬಗ್ಗೆ ಬರೆಯಲು ನನಗೆ ಇನ್ನೂ ಹೆಚ್ಚಿನ ವಿಷಯಗಳು ದೊರೆಯುವುವು ಅನ್ನುವ ನಿರೀಕ್ಷೆಯಲ್ಲಿದ್ದೇನೆ.

ಪುಟ್ಟ ಆಕಾರದ ಈ ದೊಡ್ಡ ಕವಿ ಇನ್ನೂ ನೂರ್ಕಾಲ ಬಾಳಬೇಕು. ಅವರು ಈಗಾಗಲೇ ಏರಿರುವ ಸಾಧನೆಯ ಗೌರೀಶಂಕರ, 'ಗೌರೀಶಂಕರಗಳಾಗಬೇಕು' ಅನ್ನುವುದು ನನ್ನ ಆಶಯ.





# ಗೌಡರ ಕನ್ನಡ ಪರ ಕೆಲಸಗಳು

● ಡಾ|| ಎ.ವಿ. ಪ್ರಸನ್ನ

ಕವಿಯಾಗಿ, ಚಿತ್ರ ಸಾಹಿತಿಯಾಗಿ ನಾಡಿಗೆ ಸುಪರಿಚಿತರಾಗಿರುವ, ನನ್ನ ಆತ್ಮೀಯ ಒಡನಾಡಿಯಾಗಿರುವ ಡಾ|| ದೊಡ್ಡರಂಗೇಗೌಡರ ಕನ್ನಡಪರ ಕೆಲಸಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಈ ಲೇಖನದ ಉದ್ದೇಶ.

ಸರ್ಕಾರವು ಹೊರಡಿಸುವ ಸುತ್ತೋಲೆ, ಆದೇಶಗಳನ್ನು, ಅಲ್ಪ ಸಂಖ್ಯಾತರು ವಾಸಿಸುವ ಪ್ರದೇಶಗಳಲ್ಲಿ ಅವರ ಭಾಷೆಗಳಲ್ಲಿಯೂ ಹೊರಡಿಸಬೇಕೆಂದು ಕೇಂದ್ರ ರಾಜ್ಯ ಭಾಷಾ ಆಯೋಗದ ಒತ್ತಾಯದಂತೆ, ಕಳೆದ ವರ್ಷ ಸರ್ಕಾರವು ಆದೇಶ ನೀಡಿತ್ತು. ಈ ಆದೇಶದಿಂದ ಕನ್ನಡಪರ ಚಿಂತಕರು ವಿಚಲಿತರಾದರು. ಇದು ಕನ್ನಡದ ಹಿತಾಸಕ್ತಿಗೆ ಮಾರಕವಾಗುವ ದೂರಗಾಮಿ ಪರಿಣಾಮಗಳನ್ನು ಬೀರುತ್ತದೆಂಬುದನ್ನು ಸರ್ಕಾರದ ಗಮನಕ್ಕೆ ತರುವ ಅವಶ್ಯಕತೆ ಇತ್ತು. ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ, ಈ ವಿಚಾರದಲ್ಲಿ ಸೂಕ್ತ ಮಾಹಿತಿ ನೀಡಿದ ಮೊದಲಿಗರಲ್ಲಿ ಡಾ. ದೊಡ್ಡರಂಗೇಗೌಡರು ಒಬ್ಬರು. ಈ ವಿಚಾರವನ್ನು ಚರ್ಚಿಸುವುದಕ್ಕಾಗಿಯೇ ಪ್ರಾಧಿಕಾರವು ಕರೆದ ಸಭೆಯಲ್ಲಿ ಸರ್ಕಾರದ ಹಿರಿಯ ಅಧಿಕಾರಿಗಳು ಭಾಗವಹಿಸಿದ್ದರು. ತಮ್ಮ ವಿಚಾರವನ್ನು ಸಭೆಯಲ್ಲಿ ಅತ್ಯಂತ ಸ್ಪಷ್ಟ ನುಡಿಗಳಲ್ಲಿ ಮಂಡಿಸಿ, ಕನ್ನಡದ ಹಿತಾಸಕ್ತಿಗೆ ವಿರೋಧವಾಗಿರುವ ಈ ಆದೇಶವನ್ನು ಕೂಡಲೇ ಹಿಂದೆ ಪಡೆಯಬೇಕೆಂದು ಹಾಜರಿದ್ದ ಹಿರಿಯ ಅಧಿಕಾರಿಗಳಿಗೆ, ಪ್ರಾಧಿಕಾರದ ಇತರೆಲ್ಲಾ ಸದಸ್ಯರುಗಳೊಂದಿಗೆ ಶ್ರೀ ದೊಡ್ಡರಂಗೇಗೌಡರವರು ಒತ್ತಾಯವನ್ನು ಹಾಕಿದ ಪರಿ ಅತ್ಯಂತ ಪ್ರಭಾವಶಾಲಿಯಾಗಿತ್ತು. ಈ ಕೂಡಲೇ ಒಂದು ನಿರ್ಣಯವನ್ನು ಕೈಗೊಂಡು ಅದೇ ದಿನ ಅದನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಖುದ್ದಾಗಿ ತಲುಪಿಸಲು ತೀರ್ಮಾನಿಸಲಾಯಿತು. ಅದರಂತೆ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಬಿ.ಎಂ. ಇದಿನಬ್ಬ ಅವರ ನೇತೃತ್ವದಲ್ಲಿ ಮುಖ್ಯ ಮಂತ್ರಿಗಳ ಮನೆಗೆ ಹೋದೆವು. ನಿಯೋಗವನ್ನು ಭೇಟಿ ಮಾಡಲು ಬಂದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ''ಓಹೋ, ಪ್ರೊ|| ದೊಡ್ಡರಂಗೇಗೌಡರು ಬಂದುಬಿಟ್ಟಿದ್ದಾರೆ! ಏನು ವಿಶೇಷ?'' ಎಂದು ಅವರಿಗೆ ಮೊದಲು

ಹಸ್ತಲಾಘವ ನೀಡಿದರು. ಪ್ರಾಧಿಕಾರದ ಅಧ್ಯಕ್ಷರು ಉದ್ದೇಶವನ್ನು ವಿವರಿಸಿದರು. ಆಗ ಮುಖ್ಯಮಂತ್ರಿಗಳು ''ಇಂತಹ ಹಿರಿಯ ಸಾಹಿತಿಗಳೆಲ್ಲಾ ಬಂದು ಕೇಳುವಾಗ, ಅವರ ಅಭಿಪ್ರಾಯದ ಬಗ್ಗೆ ನಾನು ಮರು ಚಿಂತನೆ ನಡೆಸಬೇಕಾಗಿಲ್ಲ. ಇಂದಿನ ಸೂರ್ಯಾಸ್ತದ ಒಳಗಾಗಿ ಈ ವಿವಾದಾಸ್ಪದ ಆದೇಶವನ್ನು ಹಿಂದೆ ಪಡೆಯುತ್ತೇನೆ'' ಎಂದು ಆಶ್ವಾಸನೆ ನೀಡಿದರು. ಮಾತಿನಂತೆ, ಅವರು ಆ ಆದೇಶವನ್ನು ಹಿಂದೆ ಪಡೆದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯನಾಗಿ ಡಾ॥ ದೊಡ್ಡರಂಗೇಗೌಡರು ಕನ್ನಡದ ಹಿತಾಸಕ್ತಿಯ ಬಗ್ಗೆ ಉಪಯುಕ್ತವಾದ ಅನೇಕ ಕೆಲಸಗಳನ್ನು ಮಾಡುತ್ತಿರುವುದು, ಮಾರ್ಗದರ್ಶನ ನೀಡುತ್ತಿರುವುದು, ಕನ್ನಡ ಭಾಷೆಯ ಬೆಳವಣಿಗೆಗೆ ಅತ್ಯುಪಯುಕ್ತವಾಗಿದೆ.

ಇಂತಹ ಕನ್ನಡಪರ ಕೆಲಸಗಳಲ್ಲಿ ಶ್ರೀ ದೊಡ್ಡರಂಗೇಗೌಡರ ವರ್ಚಸ್ಸು ಕೆಲಸ ಮಾಡಿದ ರೀತಿ ಮೆಚ್ಚುವಂತಹದ್ದು. ಹಿರಿಯರಾದ ಅವರು ತಮ್ಮ ಹಿರಿತನವನ್ನು ಎಂದೂ ಮರೆಯಲು ಅವಕಾಶ ಕೊಡುವುದಿಲ್ಲ. ಎಲ್ಲರೊಳಗೊಂದಾಗಿ ಬೆರೆಯುತ್ತಾ, ಆತ್ಮೀಯತೆಯಿಂದ ಮಾತನಾಡುತ್ತಾ, ವಾತಾವರಣವನ್ನು ಸಾಹಿತ್ಯಮಯವಾಗಿ ಮಾಡುವ ಕಲೆ ಗೌಡರಿಗೆ ಒಲಿದಿದೆ. ಅದರಿಂದಾಗಿ ಅವರ ಹಿಂದೆ ಕನ್ನಡಕ್ಕಾಗಿ ಕೆಲಸ ಮಾಡುವ ಒಂದು ಪಡೆಯೇ ಅವರಿಗೆ ಅರಿವಿಲ್ಲದೇ ಸಿದ್ಧಗೊಂಡಿದೆ. ಇಂತಹ ಅಪರೂಪದ, ಸರಳ ಸಜ್ಜನಿಕೆಯ ಕವಿಹೃದಯದ ಸಾಹಿತಿಗಳಾದ ಪ್ರೊ. ದೊಡ್ಡರಂಗೇಗೌಡರಿಂದ ಕನ್ನಡ ಸಾಹಿತ್ಯ-ನಾಡು-ನುಡಿಗೆ ಚಿರಕಾಲ ಸೇವೆ ಸಲ್ಲಲಿ ಎಂದು ಹಾರೈಸುತ್ತಾ ಅವರಿಗೆ 60 ವರ್ಷಗಳು ತುಂಬಿದ ಈ ಸಂದರ್ಭದಲ್ಲಿ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

❑



# ಬಹುಮುಖ ವ್ಯಕ್ತಿತ್ವ

● **ಟಿ. ವೆಂಕಟೇಶ್**

ವಿದ್ಯಾ ದಧಾತಿ ವಿನಯಂ ಎಂಬ ವೇದವಾಣಿಯು ಪ್ರೊ॥ ದೊಡ್ಡರಂಗೇಗೌಡರಿಗೆ ಅಚ್ಚುಕಟ್ಟಾಗಿ ಹೊಂದಿಕೊಳ್ಳುತ್ತದೆ. ದೊಡ್ಡರಂಗೇಗೌಡರ ಪರಿಚಯ ನನಗಿದ್ದರೂ, ಅವರನ್ನು ತೀರಾ ಸಮೀಪದಿಂದ ನೋಡಿದವನಲ್ಲ ನಾನು. ಆದರೇನಂತೆ, ಮೊದಲ ಭೇಟಿಯಲ್ಲಿ ಗೌಡರ ಸರಳತೆ, ವಿನಯವಂತಿಕೆ ರಾರಾಜಿಸಿತು, ಗೌಡರು ವಿದ್ಯೆಯ ಗಣಿ; ವಿನಯದ ಖನಿ.

ಉನ್ನತ ಧ್ಯೇಯಗಳನ್ನು ಅಳವಡಿಸಿಕೊಂಡು ಜ್ಞಾನದ ಭಂಡಾರವಾಗಿರುವ ದೊಡ್ಡರಂಗೇಗೌಡರ ನಡೆ-ನುಡಿ ತೀರಾ ಸರಳ. ಅಗಲ ಗಾಜಿನ ಕನ್ನಡಕ, ಸಾಧಾರಣವಾದ ಷರ್ಟು-ಪ್ಯಾಂಟು, ಆಡಂಬರ ರಹಿತ ಚಪ್ಪಲಿ, ಹೆಗಲಿಗೊಂದು ಚೀಲ ವರ್ಷಗಳ ಹಿಂದೆ ನಾನು ಕಂಡ ದೊಡ್ಡರಂಗೇಗೌಡರ ಬಾಹ್ಯಸ್ವರೂಪ ಇದು. ವರ್ಷಗಳು ಉರುಳಿದಂತೆ, ಜ್ಞಾನ ಭಂಡಾರ ವಿಸ್ತರಿಸಿಕೊಂಡು, ಜನಪ್ರಿಯತೆ ಹೆಚ್ಚಿಸಿಕೊಂಡು ದೊಡ್ಡರಂಗೇಗೌಡರು ಅನುಭವದಿಂದ ಪಕ್ವರಾದರು, ಆದರೂ ಅವರ ಬಾಹ್ಯಸ್ವರೂಪ ಮಾತ್ರ ಬದಲಾಗಿಲ್ಲ. ಅಂತರಂಗದ ಆತ್ಮೀಯತೆಯನ್ನು ಹೊರಸೂಸುವ ಅವರ ಆ ನಗು ಮಾಸಿಲ್ಲ.

ದೊಡ್ಡರಂಗೇಗೌಡರು ಪ್ರಾಧ್ಯಾಪಕರಾಗಿದ್ದವರು. ಅವರನ್ನು ತುಂಬಾ ಇಷ್ಟಪಡುವ ಅಭಿಮಾನಿಗಳ ದೊಡ್ಡ ಗುಂಪೇ ಇದೆ. ಗೌಡರು ಪಾಠ ಮಾಡುತ್ತಿದ್ದರೆ ಅದು ಬರೀ ಶುಷ್ಕ ಪ್ರವಚನವಲ್ಲ, ಅದು ಸ್ಫುಟವಾದ ಸರಳವಾದ ಭಾಷೆಯ ಲಹರಿ. ವಿದ್ಯಾರ್ಥಿಗಳ ಯಾವುದೇ ಸಮಸ್ಯೆಯನ್ನೂ ನಗು ಮುಖದಿಂದಲೇ ನಿವಾರಿಸುತ್ತಿದ್ದ ದೊಡ್ಡರಂಗೇಗೌಡರು ಎಲ್ಲರ ಅಚ್ಚುಮೆಚ್ಚಿನ ಪ್ರೊಫೆಸರ್.

ಗದ್ಯ-ಪದ್ಯ, ಕಾವ್ಯ-ಕವನ-ಕಥನ ಹೀಗೆ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೈ ಆಡಿಸಿರುವ ದೊಡ್ಡರಂಗೇಗೌಡರು ಅಲ್ಲೆಲ್ಲ ತಮ್ಮ ಅಚ್ಚಳಿಯದ ಛಾಪು ಮೂಡಿಸಿದ್ದಾರೆ.

ಕಾಲೇಜಿನ ನಾಲ್ಕು ಗೋಡೆಗಳಿಗೇ ಸೀಮಿತವಾಗಿರದ ಈ ಪ್ರೊಫೆಸರ್, ಸಮಾಜದ ಹಲವು ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳುತ್ತಿರುವವರು. ಇಲ್ಲಿ ಮುಖ್ಯವಾಗಿ ಗಮನಿಸತಕ್ಕ ಸಂಗತಿಯೆಂದರೆ, ಗೌಡರು ಎಂದೂ ಪ್ರದೂಷಣೆಗೆ ಒಳಗಾಗದೆ ತಮ್ಮ ಸ್ವಂತಿಕೆ ಉಳಿಸಿಕೊಂಡಿರುವವರು.

ಮಡಿವಂತಿಕೆ ತೊರೆದು ಸಿನಿಮಾ ಕ್ಷೇತ್ರಕ್ಕೆ ಬಂದ ದೊಡ್ಡರಂಗೇಗೌಡರು ಅಲ್ಲೂ ಕೂಡ ಕನ್ನಡದ ಮಣ್ಣಿನ ವಾಸನೆ ಹರಡಿದರೇ ವಿನಃ ಟ್ಯೂನ್‌ಗೆ ಹೊಂದುವ ಪದ ಜೋಡಿಸು ಎಂಬ ಕಾಟಾಚಾರದ ಪ್ರಕ್ರಿಯೆಗೆ ಒಳಗಾಗಲಿಲ್ಲ. ಸಿನಿಮಾದವರ ವಿಭಿನ್ನ ಮನೋಭಾವ-ವರ್ತನೆಗಳನ್ನು ನಗುನಗುತ್ತಲೇ ಸೈರಿಸಿಕೊಂಡ ದೊಡ್ಡರಂಗೇಗೌಡರು ಸಿನಿಮಾ ಸಾಹಿತ್ಯಕ್ಕೆ ಘನತೆ ತಂದ ದೊಡ್ಡವ್ಯಕ್ತಿ. ಗೌಡರು ಬರೆದ ಹಾಡಿನ ಸಾಲುಗಳಲ್ಲಿ ರಿಂಗಣಿಸುವ ಅಚ್ಚ ಕನ್ನಡದ ಪದಗಳಿಗೆ ಮಾರುಹೋದ ಖ್ಯಾತ ಗಾಯಕ ಎಸ್.ಪಿ. ಬಾಲಸುಬ್ರಮಣ್ಯಂ ಅವರು ಇಂಥ ಅರ್ಥಪೂರ್ಣ ಗೀತೆಗಳನ್ನು ಹಾಡುವುದೇ ಸೌಭಾಗ್ಯ ಅಂದಿದ್ದಾರೆ. ಕನ್ನಡೇತರ ವ್ಯಕ್ತಿಯೊಬ್ಬರು ಆಡಿದ ಹೃದಯತುಂಬಿದ ಮಾತುಗಳಿವು.

ಆಡಂಬರ-ದವಲತ್ತು-ಡಾಂಬಾಚಾರಗಳ ಬೆನ್ನುಹತ್ತಿ, ಗೌಡರು ಎಂದೂ ಹೋಗಲಿಲ್ಲ. ಹಣ, ಹೆಸರು ಪ್ರತಿಷ್ಠೆಗಳು ಅವರನ್ನು ಹುಡುಕಿಕೊಂಡು ಬಂದಾಗಲೂ ವಿನಮ್ರತೆಯಿಂದ ಸ್ವೀಕರಿಸಿದ್ದಾರೆಯೇ ವಿನಃ ಹಮ್ಮಿನಿಂದ ಬೀಗಿಲ್ಲ.

ಡಾ॥ ದೊಡ್ಡರಂಗೇಗೌಡರು ಕನ್ನಡನಾಡಿನ ಹೆಮ್ಮೆಯ ಕುವರರಲ್ಲಿ ಒಬ್ಬರು. ಜಾನಪದ ಸೊಗಡಿನ ಗಾರುಡಿಗ. ಅವರೀಗೀಗ ಅರವತ್ತು ತಂಬುತ್ತಿದೆ. ಅವರ ಸಾಹಿತ್ಯ ಚಿಲುಮೆ ಇನ್ನಷ್ಟು ಜೋರಾಗಿ ಚಿಮ್ಮುವ ಕಾಲ.

ಸಾಹಿತಿಯಾಗಿ-ಕವಿಯಾಗಿ-ಲೇಖಕರಾಗಿ-ಅಧ್ಯಾಪಕರಾಗಿ ಮಾದರಿ ಜೀವನ ಸಾಗಿಸುತ ಬಂದಿರುವ ದೊಡ್ಡರಂಗೇಗೌಡರಿಗೆ ಜನ್ಮದಿನದ ಶುಭಾಶಯ ಹೇಳುತ್ತ, ಅವರು ಸಾಹಿತ್ಯ ಸರಸ್ವತಿಯ ಸೇವೆಯನ್ನು ಇನ್ನೂ ನೂರ್ಕಾಲ ಮಾಡುವ ಸಾಮರ್ಥ್ಯ ಪಡೆಯಲಿ ಎಂದು ಹಾರೈಸುತ್ತೇನೆ.





# ಚೆಲುವನರಸಿ

● ಕಾ.ತ. ಚಿಕ್ಕಣ್ಣ

"ಹಸುಳೆಯೊಂದು ತನ್ನ ಅವ್ವನ ಹೃದಯ ಬಡಿತವನ್ನು ಪ್ರೀತಿಸುವಂತೆ; ಅವಳ ಎದೆ ಕಾವಿಗೆ ಮನವೊಡ್ಡುವಂತೆ ಈ ಭೂತಾಯ ಕಂಪನಕ್ಕೆ ಮನುಷ್ಯ ವಾಲಬೇಕು; ಅವಳನ್ನು ಪ್ರೀತಿಸಬೇಕು" ಅನ್ನುತ್ತಾನೆ ಒಬ್ಬ ಬುಡಕಟ್ಟು ಜನಾಂಗದ ನಾಯಕ.

ನೋಡುತ್ತಾ ನೋಡುತ್ತಾ ನೋಡಿದಷ್ಟೂ ತನ್ನ ಅಗಾಧ ಶಕ್ತಿಸಂಪತ್ತಿನೊಳಗೆ ಕರೆದೊಯ್ಯುವ ಪ್ರಕೃತಿ ನಮಗೆ ಎರಡು ಬಗೆಯುವುದಿಲ್ಲ. ಅವಳು ಮುದ ನೀಡುತ್ತಾಳೆ. ವಿನಯ ಕಲಿಸುತ್ತಾಳೆ. ಧರ್ಮದ ಪಾಠ ಹೇಳುತ್ತಾಳೆ. ಇವಳ ಅಗಾಂತರದ ಹೊದಿಕೆ ಮೇಲೆ ಅಂತ್ಯವಿಲ್ಲದ ಉಬ್ಬುತಗ್ಗುಗಳ ಬಳಕು ಬಾಹುಗಳ ಅಸಂಖ್ಯೆ ರೇಖೆ; ಕಣಿವೆ ಕೊತ್ತಲು ಕಾಡು ಮೇಡುಗಳ ಅಪರಿಮಿತ ಸಾಲು ಸಾಲು; ಹರಿಯುವ ಜರಿ ನದಿ ತೊರೆ ಸಾಗರಗಳ ನಾದ ನಿನಾದ; ಧುಮ್ಮಿಕ್ಕುವ ಜಲಪಾತಗಳ ನರ್ತನ; ಕೆರೆ ಹಳ್ಳ ಕೊಳ್ಳ ಕೊಳಗಳ ರಮಣೀಯ ದೃಶ್ಯರಾಶಿ; ಗುಡ್ಡ ಬೆಟ್ಟ ಪರ್ವತ ಪ್ರಪಾತಗಳ ವೈಭವದ ವಿನ್ಯಾಸ; ಮುಗಿಲೆತ್ತರ ತಲೆ ಎತ್ತಿ ನಿಂತ – ನಾಡು ಬಗ್ಗಿಸಿಕೊಂಡ – ಬುಡಹಾಸಿಕೊಂಡ ಮರಗಳ ಹಲವು ಹತ್ತು ಬಗೆಗಳ ಸಹಸ್ರಾರು ಜಾತಿ; ನೆಲಹಾಸುವಾದ ಗಿಡಪೊದೆ ಹುಲ್ಲು ಹಸಲೆ ಬಳ್ಳಿ ಬೇಲಿಗಳ ಚಿತ್ತಾರ ಸೀಮೆ; ಪಶು ಪಕ್ಷಿ ಹಾವು ದುಂಬಿ ಚಿಟ್ಟೆ ಮೀನು ಮಿಡತೆಗಳ ಕಲರವದ ನಿನಾದ; ಜೀವ ಜಂತುಗಳ ಕೊಳೆ ಹೀರಿಕೊಂಡ ನಿರ್ಮಲ ಮಣ್ಣುಹಾಸು; ದಟ್ಟ ಮೌನದೊಡಲೊಳಗೆ ತೆರೆದುಕೊಳ್ಳುವ ಪ್ರಶಾಂತ ಸುವ್ವಾಲೆ ನಾದ; ಸದ್ದು ಸೌಮ್ಯ ಶಾಂತತೆಯ ವಿಭಿನ್ನ ತಾಣ – ಎಲ್ಲವೂ ಪ್ರಕೃತಿಯ ಜೀವಂತ ಕ್ರಿಯೆಗಳ ಅದ್ಭುತ ಶಕ್ತಿ ಸಂಚಯನದ ಅಭಿವ್ಯಕ್ತಿಗಳು.

ದಿಟ ಈ ಭೂಮಿ ಮೇಲಿನ ಗಾಳಿ ನೀರು ಬೆಳಕಿನಂತೆ ಮನುಷ್ಯನೂ ಒಬ್ಬ. ಇವನು ಈ ಭೂಮಿಯ ಮಾಲೀಕನಲ್ಲ, ಇವಳಿಗವನು ಅಧೀನ, ಮಗು, ಈ ಮಗು ತನ್ನ ಅವ್ವನ ಎದೆ ಕಂಪನ ಕೇಳಲಾರದ ಕಿವುಡನಾದರೆ ಅದರಿಂದಾಗುವ ಅನಾಹುತ ಏನಾಗಬೇಕಿತ್ತೊ ಅದಿವತ್ತು ಆಗಿದೆ. ಭೂಮಿ ಗಾಳಿ ನೀರು ಬೆಳಕುಗಳನ್ನು ಆಳುವ ತನ್ನ ಹುಂಬತನದಲ್ಲಿ ಕುರುಡನಾಗಿದ್ದಾನೆ.

ಗರ್ವ ಆಗಿದ್ದಾನೆ. ಮದಗೊಂಡಿದ್ದಾನೆ. ಹಂಗಾಗಿ ಅವನಲ್ಲಿ ಕ್ರಿಯಾಶೀಲತೆ ಎಂಬುವುದೆಲ್ಲ ಸ್ವಾರ್ಥ ಸಾಧನೆಗೆ ಬಸಿದು ಹೋಗುತ್ತಿದೆ. ಮಮಕಾರ ರಾಕ್ಷಸೀರೂಪ ತಾಳಿದೆ.

ಈ ಹಿನ್ನಲೆಯಲ್ಲಿ ಆ ನೆಲಸ್ನೇಹಿ ನಾಯಕ ಹೇಳಿದ ಮಾತುಗಳತ್ತ ನಾವು ತೀವ್ರ ನಿಗಾವಹಿಸಬೇಕು. ಆ ಮಾತುಗಳಲ್ಲಿರುವ ಅಂತಃಕರಣದ ಅರ್ಥ ವ್ಯಾಪ್ತಿಯನ್ನು ಅರಿಯಬೇಕು. 'ಈ ಭೂಮಿ ಪ್ರತಿಯೊಬ್ಬ ಮನುಷ್ಯನ ಅವಶ್ಯಕತೆಗಳನ್ನು ಪೂರೈಸುವ ಶಕ್ತಿಯನ್ನು ಹೊಂದಿದೆ. ಆದರೆ ಅವನ ದುರಾಸೆಯನ್ನಲ್ಲ, ನಮ್ಮ ಎಲ್ಲ ದುರಾಸೆಪ್ರೇರಿತ ಅವಶ್ಯಕತೆಗಳನ್ನು ಪೂರೈಸಲು ಈ ಭೂಮಿ ಎಂದೂ ಬತ್ತದ ಅಕ್ಷಯ ಪಾತ್ರೆಯೇನೂ ಅಲ್ಲ' ಅನ್ನುತ್ತಾರೆ ಗಾಂಧೀಜಿ.

ಈ ಗಾಂಧೀಜಿಯವರಾಗಲೀ ಆ ಬುಡಕಟ್ಟು ನಾಯಕನಾಗಲೀ ಅವರು ನಿರೀಕ್ಷಿಸುತ್ತಾರೆ: ಭೂಮಿಯ ಕಂಪನವನ್ನು ಕೇಳುವ ಕವಿಗಳನ್ನು ರೂಪಿಸಬೇಕು. ಭೂಮಿಯ ಅಂತರಾಳದ ದಟ್ಟ ಮೌನವನ್ನು ಪ್ರೀತಿಸುವ ದಿವ್ಯ ಮನಸ್ಸುಗಳನ್ನು ಸೃಷ್ಟಿಸಬೇಕು. ನಿಸರ್ಗದ ವಿಸ್ಮಯಕ್ಕೆ ಎದೆಯಾಳದ ಕದ ತೆರೆಯಬೇಕು. ಅಂತಃಕರಣಗಳ ನಡುವೆ ಸೇತುವೆ ಕಟ್ಟಬೇಕು.

ಪ್ರೊ॥ ದೊಡ್ಡರಂಗೇಗೌಡರ ''ದೇಸೀಗೀತೆ''ಗಳನ್ನು ಓದುವಾಗ ನನ್ನ ಮನಸ್ಸಿಗೆ ಬಂದ ಈ ಮೇಲಿನ ಕೆಲವು ಸಂಗತಿಗಳು ಅಪ್ರಸ್ತುತವಲ್ಲ ಅಂದುಕೊಂಡಿದ್ದೇನೆ. ಈ ನಿಸರ್ಗದ ಸಿರಿಗೆ, ಇದರ ಚೆಲುವಿಗೆ, ಇದರ ಕಂಪನಕ್ಕೆ ಬೆನ್ನು ಹಾಕಿ ಸಾಗುತ್ತಿರುವ ನಾವು ಹೋಗುವುದಾದರು ಎಲ್ಲಿಗೆ? ಕವಿಯ ದೇಸೀ ಗೀತೆಗಳು ಈ ಪ್ರಶ್ನೆಗಳನ್ನು ಎತ್ತುತ್ತವೆ. ಇದೇ ಇವುಗಳಿಗಿರುವ ಮಹತ್ವ. ಕೆಲವಿಲ್ಲಿ ಚೆಲುವು ಮತ್ತು ನಷ್ಟ ಎರಡನ್ನೂ ಸಮಾನಾಂತರವಾಗಿ ತೋರುತ್ತಾ ಸಾಗುವ ಮರ್ಮದತ್ತ ಸೈತ ಬೆರಳಿಟ್ಟಿವೆ. ಬಾಲ್ಯತನ ಕಟ್ಟಿಕೊಟ್ಟ ಚೆಲುವು ದಟ್ಟವಾಗಿ ಕ್ರಿಯಾಶೀಲ ಮನಸ್ಸಿನಲ್ಲಿ ಒಂದು ಕಡೆ ಉಳಿದಿದ್ದರೆ; ಇವತ್ತಿನ ವಾಸ್ತವದಲ್ಲಿ ಆ ನಷ್ಟ ಸೈತ ರಾಚುವಂತೆ ಇನ್ನೊಂದು ಕಡೆ ಎದುರಿದೆ. ಈ ಚೆಲುವು ಮತ್ತು ನಷ್ಟ ಎರಡನ್ನೂ ಏಕಕಾಲಕ್ಕೆ ಹುಟ್ಟುಹಾಕುವುದು ಈ ದೇಸೀ ಗೀತೆಗಳ ವಿಶೇಷತೆ. ಮುಖ್ಯವಾಗಿ ಪ್ರೊ॥ ದೊಡ್ಡರಂಗೇಗೌಡರು ಒಬ್ಬ ಕವಿ. ಈ ಕವಿಯನ್ನು ರೂಪಿಸಿದ್ದು ಅವರ ಬಾಲ್ಯದ ವಿಸ್ಮಯಪೂರಿತ ಗ್ರಹಿಕೆ. ಆ ಮುಗ್ಧತನ ಕಲಿಸಿಕೊಟ್ಟ ವಿಸ್ಮಯಭರಿತ ಕಂಪನವನ್ನು ಅವರು ಜೀವಂತವಾಗಿ ಇರಿಸಿಕೊಂಡಿರುವ ಕಾರಣಕ್ಕೆ ನನ್ನಂಥ ಹಳ್ಳಿ ಹೈಕಳಿಗೆ ನಮ್ಮೊಳಗಿರುವ ನೆನಪುಗಳನ್ನು ಕೆದಕುತ್ತಾರೆ. ಆ ಬುಡಕಟ್ಟು ನಾಯಕನ ಆಶಯಕ್ಕೆ ಕಾವ್ಯಾಭಿವ್ಯಕ್ತಿ ನೀಡುತ್ತಾರೆ.'' ತೇರ ಏರಿ ಅಂಬರದಾಗೆ ನೇಸರು ನಗುತಾನೆ' ಅನ್ನುವ ಅವರ ಮಾತು ನನ್ನಲ್ಲಿ ಆಗಾಗ ಪಿಸುಗುಟ್ಟುತ್ತಲೇ ಇರುತ್ತದೆ. ಯಾಕೆಂದರೆ ಆ ಹಳ್ಳಿ, ಆ ಹಳ್ಳಿತನ, ಆ ಹಳ್ಳಿಜನ, ಆ ಹಳ್ಳಿ ಪರಿಸರ ಈ ಎಲ್ಲವೂ ನನ್ನೊಳಗೆ ಬತ್ತದ ಚಿಲುಮೆ.

ಬೇಲಿ ಮ್ಯಾಗೆ ಬಣ್ಣ ಬಣ್ಣದ ಹೂವು ಅರಳ್ಯಾವೆ
ಆ ಹೂವಿನ ತುಂಬ ಸಣ್ಣ ಚಿಟ್ಟೆ ಕುಂತಾವೆ

ಬಾಗಿ ಬೀಗಿ ಅತ್ತ ಇತ್ತ ಬಾಳೆ ಬಳುಕ್ಯಾವೆ
ಈ ಬಾಳೆ ವನವೇ ನಕ್ಕು ಹಣ್ಣು ತಂದಾವೆ
ಕುಂತರೆ ಸೆಳೆವಾ
ಸಂತಸ ತರುವಾ
ಟೊಂಗೆ ಹೊಂಗೆ ತೂಗಿ ಬಾಗಿ ಗಾಳಿ ಬೀಸ್ಯಾವೆ

ಆಗ ನಮಗೆ ದೀಪಾವಳಿ ಹಬ್ಬ ಬಂತೆಂದರೆ ಸುಗ್ಗಿ. ಈ ಗದ್ದಲದ ಸೀಮೆಯ ಮಧ್ಯೆ ಒಮ್ಮೆ ಕಣ್ಮುಚ್ಚಿ ಕುಂತರೆ ಸಾಕು ಮತ್ತದೇ ಚಿತ್ರ ಇಡೀ ಅಗಾಂತರದ ತುಂಬೆಲ್ಲ ಹಚ್ಚ ಹಸಿರು ಹುಲ್ಲಿನ ಹಾಸರ. ಹೊಲಗಳ ತುಂಬೆಲ್ಲ ಚೆಂಡು ಹೂ, ಕುಂಬಳದ ಹೂ, ಹುಚ್ಚೆಳ್ಳು ಹೂ, ಅವರೆ-ತೊಗರಿ ಹೂ, ಉತ್ರಾಣಿ ಹೂಗಳ ಬಣ್ಣ ಬಣ್ಣಗಳ ರಂಗೋಲಿ. ಕೆರೆ ಕಟ್ಟೆ ಹಳ್ಳ ಕೊಳ್ಳಗಳು ನೀರು ತುಂಬಿ ಮದವಾಗಿ ನಿಂತ ಕಡು ಮೌನ. ಭೂಮಿ ಹಸಿರು ಬಸರಾಗಿ ಅರಳಿ ನಳನಳಿಸುವಳು. ಆ ಬಲಿ ಚಕ್ರವರ್ತಿ ಅದಕ್ಕಾಗಿಯೇ ಈ ನಿಸರ್ಗ ಸಿರಿಯನ್ನು ವರ್ಷಕ್ಕೊಮ್ಮೆ ನೋಡುವ ವರ ಕೇಳಿಕೊಂಡಿರಬೇಕು, ಇರಲಿ,

ಕವಿ ವರ್ಣಿಸುತ್ತಾ ಆ ನೆನಪು ಕೆದಕುತ್ತಾರೆ;

ಏನು ಬೆಡಗಿದೊ ಇಳೆಗೆ ಏನು ಬೆಡಗಿದೊ
ಕೋಟಿ ಬಗೆಯ ವೃಕ್ಷರಾಶಿ
ಕರೆಯುತ್ತಿಹವು ಕಂಪು ಸೂಸಿ
ಅಗಣಿತ ಪರಿ ಸುಮವರಳಿ
ಭವ್ಯ ನೋಟ ವರ್ಣ ಚೆಲ್ಲಿ
ಭೂದೇವಿ ಕೂಗಿ... ಬಾನಂಚು ಬಾಗಿ
ಬೆಡಗನ್ನು ತಂತು... ಸೌಂದರ್ಯ ತೂಗಿ
ತಂಗಾಳಿ ತೀಡಿ... ತರುಲಾಸ್ಯವಾಡಿ
ಜಲಧಾರೆ ಕೂಡಿ... ಸ್ವರಮೇಳ ಮೂಡಿ
ಚಲುವಾಗಿದೆ ಇಳೆಯು ಕೈ ಬೀಸಿದೆ

ಬಾಲ್ಯವೆಂಬುದು ಬೆಳದಿಂಗಳ ಒಂದು ಆಟದಂಗಳ. ಆ ಬಾಲ್ಯದ ಒಳಮನಸ್ಸಿನ ಎಲ್ಲ ಲಯಗಳೂ ಸೈತ ಬಯಲಾಗಿರುತ್ತವೆ. ಮುಕ್ತವಾಗಿರುತ್ತವೆ. ಕನಸುಗಾರಿಕೆಯ ಅಂತರ್ಜಲ ಸದಾ ಜಿನುಗುತ್ತಿರುತ್ತವೆ. ಎಲ್ಲವನ್ನೂ ಮುಗ್ಧವಾಗಿ ಬೆರಗಿನಿಂದ ನೋಡುತ್ತಾ ಅನುಭವಿಸುತ್ತಾ ಹೊಸ ಹೊಸದಾಗಿ ಜಗತ್ತನ್ನು ವಿಸ್ಮಯದಿಂದ ತಂತಾನೆ ಕೂಡಿಕೊಳ್ಳುತ್ತ ಅರಿಯುವ ರೋಮಾಂಚನದ ಸಂಗತಿಗಳು ಆ ವಯಸ್ಸಿನವು. ಅವುಗಳು ಸಾವಿನಾಚೆಯ ಗಡಿ ದಾಟಿ

ಹೋದ ಕಾಲಕೋಶದ ಭಾವ ಸ್ಫೂರ್ತಿಗಳು. ವಯಸ್ಕ ಬದುಕಿನ ಅಂಗಣದಲ್ಲಿ ಸದಾ ಚಿಮುಗುಡುವ ಮಿಣುಕು ಹುಳಗಳು

''ತುಂಟಾಟ ಚೆಲ್ಲಾಟ ಹುಡುಗಾಟ ನೆನೆಪಿಸುವ
ನಮ್ಮ ಬಾಲ್ಯದನುಭವದ ನೆನಪೊಂದೆ ಸಾಕು''

ಇದಿಷ್ಟೆ ಅಲ್ಲ, ಆ ಬಾಲ್ಯದ ಬದುಕಿನಲ್ಲಿ ಇದು ಕಸ, ಅದು ರಸ, ಇದು ಬೇಕು, ಅದು ಬೇಡ ಎಂಬ ತಾರತಮ್ಯವೇ ಇರದು. ಎಲ್ಲವೂ ಬೇಕು, ಎಲ್ಲರದರಲ್ಲೂ ರಂಗಿನ ಲೋಕವೇ ಗೋಚರವಾಗುತ್ತದೆ.

ಕವಿ ಹೇಳುವುದು ಇದನ್ನೆ;

ಊರ ಹಾದಿಯ ಬದಿಗೆ
ಸಾಲು ನಂದಾದೀಪ
ಹಚ್ಚೊ ಹೈಕಳ ಕಂಡು ಮೂಗು ಮುಚ್ಚಿ...
ಮನೆ ಮನೆಯ ಮುಂದೆ ನಿಂತ
ಬಚ್ಚಲ ಕೊಚ್ಚೆ ನೀರ
ತುಳಿದೂ ತುಳಿಯದ ಹಾಗೆ ಹೆಜ್ಜೆ ಹಾಕಿ...

ಯಾಕೆಂದರೆ ಬಾಲ್ಯಕ್ಕೆ ಆಯ್ಕೆ ಎಂಬುದಿಲ್ಲ. ಅಲ್ಲಿ ಕುತೂಹಲ, ಕೌತುಕ, ಮುಗ್ಧತೆ ಮತ್ತು ಮುಕ್ತತೆ ಮಾತ್ರವಿರುತ್ತದೆ. ಹಂಗಾಗಿಯೇ ಆ ಬಚ್ಚಲ ಕೊಚ್ಚೆ ಸೈತ ಒಂದು ಸಂಗತಿ ಆಗುತ್ತದೆ. ಇಂಥ ಕಾರಣಕ್ಕೆ ಗೌಡರು ನನಗೆ ಪ್ರಿಯ ಆಗುತ್ತಿರುವುದು. ಅವರ ಗೀತೆಗಳು ಮೆಲುಕು ಹಾಕಲು ನಂಜಾಕು ಆಗುವುದು. ಇವು ನನ್ನ ಭಾವುಕತನದ ಪ್ರತಿಕ್ರಿಯೆ ಎಂದರೂ ಚಿಂತೆ ಇಲ್ಲ. ತಮ್ಮ ದೇಸೀಗೀತೆಗಳನ್ನು ಓದಿಸುವ ಮೂಲಕ ನನ್ನನ್ನು ರಿಫ್ರೆಷ್ ಮಾಡಿದ ಪ್ರೊ॥ ದೊಡ್ಡರಂಗೇಗೌಡರಿಗೆ ನಾನು ಕೃತಜ್ಞತೆ ಹೇಳಲೇಬೇಕು. ಈ ಜಂಜಾಟದ ನಡುವೆ ನನ್ನೂರಿಗೆ ಕರೆದೊಯ್ದು ಸಂತೋಷ ಒದಗಿಸಿಕೊಟ್ಟಿದ್ದಾರೆ. ಈ ಗೀತೆಗಳಿಗಿರುವ ಸತ್ವವೇ ಇದು! ಅದಕ್ಕಾಗಿ ಪ್ರಿಯರಾದ ದೊಡ್ಡರಂಗೇಗೌಡರಿಗೆ ನಾನು ಅಭಿನಂದಿಸುತ್ತೇನೆ. ಚೆಲುವನ್ನರಸಿ ಹೊರಟ ಅವರ ಗೀತೆಗಳಿಗೆ ಶುಭ ಹಾರೈಸುತ್ತೇನೆ.

''ಪ್ರೀತಿ ಹೂವಾಗಿದೆ
ಅರಳಿ ಕಣ್ತುಂಬಿದೆ
ಒಲಿದು ಒಡನಾಡಿದೆ... ನಲಿದಾಡಿದೆ
ಸಂತೋಷ ಭಾವವೇ
ಮೈದುಂಬಿ ಬಂದಿದೆ... ಓಲಾಡಿದೆ!''





# ಸಹಜ

• ನರಹಳ್ಳಿ ಬಾಲಸುಬ್ರಹ್ಮಣ್ಯ

ನಮ್ಮ ಗೆಳೆತನಕೀಗ ಮೂವತ್ತು ವರುಷಗಳು
ನೆನಪಿದೆಯೆ ಗೌಡರೆ ಮೊದಲ ಭೇಟಿ
ಅಧ್ಯಯನ ಕೇಂದ್ರದ ಹುಲ್ಲುಹಾಸಿನ ಮೇಲೆ
ಹೊಂಬಿಸಿಲು ತಂಬೆಲರು ಮಂದಹಾಸ

ರಾತ್ರಿ ಕೆಲಸದ ಪಾಳಿ ಹಗಲು ಓದುವ ಚಾಳಿ
ಬಿಡುವು ಗೆಳೆಯರ ಬಳಗ ಒಡನಾಟದಲ್ಲಿ
ಪಟ್ಟ ಪಾಡೆಲ್ಲವನು ಹಾಡಾಗಿ ರೂಪಿಸುತ
ನೋವ ಮರೆಯುವ ಬಗೆಯು ಸಹಜ ಕವಿ ರೀತಿ

ಈ ಮೂರು ದಶಕಗಳು ಏನೆಲ್ಲ ಆಗಿಲ್ಲ
ಆದರೂ ಮಾಸಿಲ್ಲ ಆ ಮಂದಹಾಸ
ನೀವು ಬಂದರೆ ಬಳಿಗೆ ಬೆಚ್ಚನೆಯ ಪ್ರೀತಿಸುಖ
ಹಂಚಿಕೊಂಡಿರಿ ಸದಾ ಅಂತರಂಗದ ದನಿಯ

ಸ್ನೇಹಕ್ಕೆ ಪ್ರೀತಿಗೆ ಶೋಷಣೆಯನೆದುರಿಸಲು
ನಿಮಗಿಲ್ಲ ಎಲ್ಲಿಯೂ ಕಟ್ಟುಪಾಡು
ಯಾವ ಪಂಥವು ಇಲ್ಲ ಜನರ ನಾಡಿಯ ಮಿಡಿತ
ಹಿಡಿದು ಸಾಗಿದೆ ನಿಮ್ಮ ಬದುಕು ಹಾಡು

ನಿಮಗೀಗ ಅರವತ್ತು ನಂಬಬಹುದೇ ಗೆಳೆಯ
ಅದೇ ರೀತಿ ಅದೆ ನೀತಿ ಮುಗುಳುನಗೆ ಬೆಳಕು
ನಿಮ್ಮ ಜೀವನಪ್ರೀತಿ ಕಿರಿಯರಿಗೆ ಆದರ್ಶ
ಶುಭವ ಕೋರುವೆನಿಂದು ಈ ನೆಲಕೆ ನಮಿಸಿ





# ಸಹಪಾಠಿ ದೊಡ್ಡರಂಗೇಗೌಡ

**• ಆನಂದೂರು ಶೋಭ**

1965-66ರಲ್ಲಿ ಮೊಟ್ಟಮೊದಲಬಾರಿಗೆ ಬೆಂಗಳೂರು ವಿಶ್ವವಿದ್ಯಾಲಯ ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ಕೋರ್ಸನ್ನು ಆರಂಭಿಸಿತ್ತು. ಆಗ ಬಿ.ಎ., ಬಿಎಸ್ಸಿ ಆನರ್ಸ್ ಕೋರ್ಸಿಗೆ ಅಂಕಗಳನ್ನು ಆಧರಿಸಿ ಕೇವಲ 20-25 ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶಕ್ಕೆ ಅವಕಾಶವಿತ್ತು. ನಾನು ಬಿ.ಎ. ಆನರ್ಸ್ (ಕನ್ನಡ) ಸೇರಿದಾಗ ನಮ್ಮದು 4ನೇ ಬ್ಯಾಚ್. ಆಗ ಮೊಟ್ಟಮೊದಲ ಬಾರಿಗೆ ಕನ್ನಡಕ್ಕೆ 39 ವಿದ್ಯಾರ್ಥಿಗಳು ಪ್ರವೇಶ ಪಡೆದು ದಾಖಲೆ ನಿರ್ಮಿಸಿದ್ದು, ಅದಕ್ಕಿಂತ ಮುಂಚೆ 15-20 ವಿದ್ಯಾರ್ಥಿಗಳು ಮಾತ್ರ ಇದ್ದರು.

ನಮ್ಮ ಬ್ಯಾಚಿನಲ್ಲಿ 39 ವಿದ್ಯಾರ್ಥಿಗಳಿದ್ದರೂ ಸಹ ಬಹಳ ಅನ್ಯೋನ್ಯವಾಗಿದ್ದೆವು. ಒಂದೇ ಮನೆಯವರಂತಿದ್ದೆವು. ಆಗ ಸೆಂಟ್ರಲ್ ಕಾಲೇಜು ಆಕರ್ಷಣೀಯ ಸ್ಥಳವಾಗಿತ್ತು. ಹೆಚ್ಚು ಪಾಂಡಿತ್ಯ ಪಡೆದ ವಿದ್ವಾಂಸರು, ಪ್ರಾಧ್ಯಾಪಕರನ್ನು ಸೆಂಟ್ರಲ್ ಕಾಲೇಜು ಹೊಂದಿತ್ತು. ಸುಸಜ್ಜಿತವಾದ, ಬಹಳ ಒಳ್ಳೆಯ ಗ್ರಂಥಾಲಯವಿದ್ದಿತು. ಒಮ್ಮೊಮ್ಮೆ ಗ್ರಂಥಾಲಯದಲ್ಲಿ ಕುಳಿತು ಓದಲು ಸ್ಥಳ ಸಿಗುತ್ತಿರಲಿಲ್ಲ. ಹಾಗೆಯೇ ರಾತ್ರಿ 8-9ರವರೆಗೂ ವಿಜ್ಞಾನದ ವಿಭಾಗಗಳಲ್ಲಿ ಸಂಶೋಧನೆಯಲ್ಲಿ ನಿರತರಾದ ವಿದ್ಯಾರ್ಥಿಗಳಿರುತ್ತಿದ್ದರು.

ಇಂತಹ ಪರಿಸರದಲ್ಲಿ ನಮ್ಮ ಕಲಿಕೆ ಆರಂಭವಾಯಿತು. ಆಗ ಪ್ರೊ॥ ರಂ.ಶ್ರೀ ಮುಗಳಿ ಅವರು ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿದ್ದರು. ಡಾ॥ ಜಿ.ಎಸ್. ಶಿವರುದ್ರಪ್ಪ ಅವರು, ಪ್ರೊ. ಎಂ.ವಿ. ಸೀತಾರಾಮಯ್ಯ ಅವರು, ಪ್ರೊ॥ ಕೃಷ್ಣರಾವ್ ಅವರು, ಪ್ರೊ॥ ಮುಳಗಿ ಅವರು, ಪ್ರೊ. ಜಿ.ಪಿ. ರಾಜರತ್ನಂ ಅವರು, ಪ್ರೊ॥ ಚಿದಾನಂದಮೂರ್ತಿ ಅವರು, ಹಂಪ ನಾಗರಾಜಯ್ಯ ಅವರು, ಡಾ॥ ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ ಅವರು, ಡಾ॥ ಕೆ. ಮರುಳಸಿದ್ಧಪ್ಪ ಅವರು, ಡಾ॥ ಚಂದ್ರಶೇಖರ ಕಂಬಾರ ಅವರುಗಳು ವಿದ್ಯಾಗುರುಗಳಾಗಿದ್ದುದು ನಮ್ಮ ಸೌಭಾಗ್ಯ. ಆಗ ನನ್ನ ಸಹಪಾಠಿಗಳಲ್ಲಿ ದೊಡ್ಡರಂಗೇಗೌಡರು ಸಹ ಒಬ್ಬರಾಗಿದ್ದರು.

ಸರಳತೆ, ಸಜ್ಜನಿಕೆ, ಹೃದಯ ವೈಶಾಲ್ಯತೆಗೆ ಮತ್ತೊಂದು ಹೆಸರೇ ದೊಡ್ಡರಂಗೇಗೌಡ. ಕವಿಯಾಗಿ, ಸಾಹಿತಿಯಾಗಿ, ಜನಪದ ತಜ್ಞರಾಗಿ, ವಿಮರ್ಶಕರಾಗಿ, ಕನ್ನಡಪರ ಹೋರಾಟಗಾರರಾಗಿ, ಚಿತ್ರ ಗೀತೆಯ ರಚನಕಾರರಾಗಿ, ಹೀಗೆ ಬಹುಮುಖ ಪ್ರತಿಭೆಯ ಗೌಡರು, ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಅಪಾರ ಜನಮನ್ನಣೆ, ಜನಪ್ರಿಯತೆಗಳಿಸಿದ್ದರೂ ಸಹ ಸರಳತೆಯ ಸಾಕಾರಮೂರ್ತಿ. ನಾನು ಗೌಡರನ್ನು ಕಳೆದ 37 ವರ್ಷಗಳಿಂದ ಬಲ್ಲೆ, ನಾವು ಒಟ್ಟಾಗಿಯೇ ಬಿ.ಎ. (ಆನರ್ಸ್) ಹಾಗೂ ಎಂ.ಎ. ಓದಿದ್ದು.

ಅಂದಿನ ದಿನದಿಂದ ಇಂದಿಗೂ ಎಲ್ಲರನ್ನೂ ಅವರು ಪ್ರೀತಿಯಿಂದ, ಆದರದಿಂದ ಮಾತನಾಡಿಸುತ್ತಾರೆ. ಯಾರೊಬ್ಬರ ಬಗೆಗೂ ಕಹಿಯಾಗಿ, ನಿಷ್ಠುರವಾಗಿ ನುಡಿದದ್ದನ್ನು ಕೇಳಿಯೇ ಇಲ್ಲ, ಮೃದು ಸ್ವಭಾವ, ಸ್ನೇಹಜೀವಿ.

ಅವರು ಆನರ್ಸ್ 'ಓದಲು ಸೇರಿದಾಗ, ಅಂಚೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಬಹಳ ಕಷ್ಟಜೀವಿ, ನೋವನ್ನುಂಡು ನಗೆಯ ಚೆಲ್ಲುತ್ತಿದ್ದರು. ಗೌಡರ ಒಳಗಿದ್ದ ಸೃಜನಶೀಲತೆ ಕವಿಚೇತನ ಗರಿಗೆದರಿ ಎಲ್ಲೆಡೆಯೂ ತನ್ನ ಕಂಪನ್ನು ಹರಿಸಿದ್ದು ವಿದ್ಯಾರ್ಥಿಯಾಗಿದ್ದಾಗಲೇ. ಇದೇ ಸಮಯದಲ್ಲಿ (1970) ಅವರ ಮೊಟ್ಟಮೊದಲ ಕವನ ಸಂಕಲನ 'ಜಗುಲಿ ಹತ್ತಿ ಇಳಿದು' ಕೃತಿ ಪ್ರಕಟವಾಗಿದ್ದು. ಅವರ ಈ ಕೃತಿ ಪ್ರಕಟವಾದಾಗ ನಮಗೆಲ್ಲರಿಗೂ ಎಲ್ಲಿಲ್ಲದ ಸಂತೋಷ, ಸಂಭ್ರಮ. ಈ ದಿನಗಳಲ್ಲಿ ಪ್ರತಿದಿನವೂ ಪುಸ್ತಕಗಳ ಬಿಡುಗಡೆಯ ಸಮಾರಂಭಗಳಿರುತ್ತವೆ. ಆದರೆ, ಆ ದಿನಗಳಲ್ಲಿ, ಅದು ವಿದ್ಯಾರ್ಥಿಯೊಬ್ಬ ತನ್ನ ಪುಸ್ತಕ ಬಿಡುಗಡೆ ಮಾಡುವುದೆಂದರೇನು? ಗೌಡರು ಸಹ, ತಮ್ಮ ಸಂತೋಷವನ್ನು ತರಗತಿಯಲ್ಲಿ ಎಲ್ಲರೊಂದಿಗೆ ಹಂಚಿಕೊಂಡಾಗ ಎಲ್ಲಾ ಸಹಪಾಠಿಗಳು ಪ್ರತಿಕ್ರಿಯಿಸಿದ್ದು, ಇನ್ನು ನನ್ನ ಮನಃಪಟಲದಲ್ಲಿ ಸ್ಥಿರವಾಗಿ ನಿಂತಿದೆ. ಹಾಗೆಯೇ ನಾವು ಹಮ್ಮಿಕೊಳ್ಳುತ್ತಿದ್ದ ವಾರ್ಷಿಕ ಕಾರ್ಯಕ್ರಮಗಳಲ್ಲಿ ಗೌಡರೇ ಆಶುಭಾಷಣ ಸ್ಪರ್ಧೆಗೆ ವಿಷಯಗಳನ್ನು ಆಯ್ಕೆ ಮಾಡುತ್ತಿದ್ದರು. ಆಶುಕವಿತಾ ರಚನೆ ಇರುತ್ತಿತ್ತು. ಹೀಗೆ ಪರೋಕ್ಷವಾಗಿ ಕೆಲವರಲ್ಲಿ ಹುದುಗಿದ್ದ ಸೃಜನಶೀಲತೆ ಹೊರಹೊಮ್ಮಲು ಅವಕಾಶ ಸೃಷ್ಟಿಸಿದರು; ನಮ್ಮಲ್ಲಿ ಅನೇಕರಿಗೆ ಕವಿತೆಯ ವಾಚನ, ವಿಮರ್ಶೆ ಹೇಗೆ ಮಾಡಬೇಕೆಂಬುದರ ಬಗೆಗೂ ಹಿರಿಯಣ್ಣನಂತೆ ಹೇಳಿಕೊಡುತ್ತಿದ್ದುದುಂಟು. ಅವರು ಕೆಲಸ ಮಾಡಿಕೊಂಡು ಕಾಲೇಜಿಗೆ ಬರುತ್ತಿದ್ದರಿಂದ ಒಮ್ಮೊಮ್ಮೆ ತೊಂದರೆಯಾಗುತ್ತಿತ್ತು. ಬಹಳ ಕಷ್ಟಪಟ್ಟು ವಿದ್ಯಾರ್ಥಿ ಜೀವನವನ್ನು ಆರಂಭಿಸಿದರು. ಆಗಲೇ ಇವರ ನೆರವಿಗೆ ನಿಂತವರು, ನಮಗೆಲ್ಲರಿಗೂ ತಂದೆಯ ಸಮಾನರಾಗಿದ್ದ ನೆಚ್ಚಿನ ಡಾ॥ ಜಿ.ಎಸ್. ಶಿವರುದ್ರಪ್ಪನವರು. ಶೈಕ್ಷಣಿಕವಾಗಿ ಬಹಳ ಕ್ರಿಯಾಶೀಲರಾಗಿದ್ದೆವು. ಶನಿವಾರದಂದು ನಡೆಯುತ್ತಿದ್ದ ಸೆಮಿನಾರುಗಳು, ಅಲ್ಲಿ ನಡೆಯುತ್ತಿದ್ದ ಚರ್ಚೆಗಳು, ಬಹಳ ಉಪಯುಕ್ತವಾಗಿದ್ದವು. ಆ ಸೆಮಿನಾರಿನಲ್ಲಿ ಮಂಡಿಸಿದ ಎಲ್ಲಾ ಪತ್ರಿಕೆಗಳನ್ನು ರಟ್ಟುಕಟ್ಟಿಸಿ, ಸೆಂಟ್ರಲ್ ಕಾಲೇಜಿನ ಗ್ರಂಥಾಲಯಕ್ಕೆ ಕೊಟ್ಟಿದ್ದೆವು.

ಮೊಟ್ಟಮೊದಲ ಬಾರಿಗೆ ಕಲಾ ವಿಭಾಗದ ವಿದ್ಯಾರ್ಥಿಗಳಿಗೆ 'ಶೈಕ್ಷಣಿಕ ಪ್ರವಾಸ'ಕ್ಕೆ ಅವಕಾಶ ಮಾಡಿಕೊಡಬೇಕೆಂದು ದೊಡ್ಡರಂಗೇಗೌಡ ಅವರ ನೇತೃತ್ವದಲ್ಲಿ ಉಪಕುಲಪತಿಯವರನ್ನು ಭೇಟಿ ಮಾಡಿ, ಒಪ್ಪಿಗೆ ಪಡೆದುಕೊಂಡು ಬಂದೆವು. ಇದರಿಂದ ಇತರೆ ವಿಷಯದ ವಿದ್ಯಾರ್ಥಿಗಳಿಗೂ ಅನುಕೂಲವಾಯಿತು. ಗೌಡರಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ನಾಯಕತ್ವದ ಗುಣವಿತ್ತು. ಅಂದು ಆರಂಭಗೊಳಿಸಿದ್ದ ಶೈಕ್ಷಣಿಕ ಪ್ರವಾಸವನ್ನು ವಿಶ್ವವಿದ್ಯಾಲಯ ಇಂದಿಗೂ ಮುಂದುವರಿಸಿಕೊಂಡು ಬಂದಿದೆ.

ನಮ್ಮ ಶೈಕ್ಷಣಿಕ ಪ್ರವಾಸದಲ್ಲಿ ಬಿ.ಎ. ಆನರ್ಸ್ ಓದುತ್ತಿದ್ದಾಗ, ಡಾ॥ ಜಿ.ಎಸ್. ಶಿವರುದ್ರಪ್ಪ ಹಾಗೂ ಡಾ॥ ಕೆ. ಮರುಳಸಿದ್ದಪ್ಪನವರು ಹಾಗೂ ಎಂ.ಎ. ಓದುತ್ತಿದ್ದಾಗ ಪ್ರೊ॥ ಹಂಪ ನಾಗರಾಜಯ್ಯ ಹಾಗೂ ಪ್ರೊ॥ ತಂಗೀರಾಲ ಸುಬ್ಬರಾವ್ ಅವರು ಬಂದಿದ್ದರು. ಡಾ॥ ಜಿ.ಎಸ್. ಶಿವರುದ್ರಪ್ಪನವರು ನಮ್ಮಲ್ಲಿ ಅನೇಕರಿಗೆ ಖರ್ಚಿಗೆ ಹಣವನ್ನು ಸಹ ಕೊಟ್ಟದ್ದುಂಟು. ಈ ಶೈಕ್ಷಣಿಕ ಪ್ರವಾಸದಲ್ಲಿ ಐಹೊಳೆ, ಪಟ್ಟದ ಕಲ್ಲು, ಬಾದಾಮಿ, ಹಳೇಬೀಡು, ಶ್ರವಣಬೆಳಗೊಳ, ಬೇಲೂರು, ಗದಗ, ಲಕ್ಕುಂಡಿ, ಬಿಜಾಪುರ, ಹಂಪಿ, ಹರಿಹರ, ಮೊಳಕಾಲ್ಮೂರು, ಕಾರವಾರ, ಚಿತ್ರದುರ್ಗ, ಧರ್ಮಸ್ಥಳ, ಮೈಸೂರು ಹೀಗೆ ಹಲವಾರು ಸಾಂಸ್ಕೃತಿಕ, ಐತಿಹಾಸಿಕ ಮಹತ್ವವುಳ್ಳ ಚಾರಿತ್ರಿಕ ಸ್ಥಳಗಳನ್ನು ನೋಡಲು ಅಧ್ಯಯನ ನಡೆಸಲು ಅನುಕೂಲವಾಗಿತ್ತು. ನಮ್ಮೊಂದಿಗೆ ಬಂದಿದ್ದ ವಿದ್ಯಾಗುರುಗಳು ಈ ಸ್ಥಳಗಳ ಬಗೆಗೆ ಐತಿಹಾಸಿಕ ಸಾಂಸ್ಕೃತಿಕ ಮಹತ್ವದೊಂದಿಗೆ ವಾಸ್ತುಶಿಲ್ಪದ ಬಗೆಗೂ ಮಾಹಿತಿಯನ್ನು ಒದಗಿಸಿದ್ದರು. ಈ ತರಬೇತಿ ನಮ್ಮಲ್ಲಿ ಅನೇಕರಿಗೆ ಮುಂದಿನ ಜೀವನದಲ್ಲಿ ಬಹಳ ಉಪಯೋಗವಾಗಿದೆ. ಪ್ರವಾಸ ಸಮಯದಲ್ಲಿ ಕವಿತಾವಾಚನ, ಆಶುಕವಿತೆ, ಚರ್ಚೆಗಳು ನಡೆಯುತ್ತಿದ್ದವು. ದೊಡ್ಡರಂಗೇಗೌಡರು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು, ಇವರು ಕವಿತೆಯನ್ನು ವಾಚಿಸುವ ಶೈಲಿಯೇ ವಿಭಿನ್ನವಾಗಿರುತ್ತಿತ್ತು. ಎಲ್ಲರನ್ನು ಆಕರ್ಷಿಸುತ್ತಿತ್ತು. ಡಾ॥ ಜಿ.ಎಸ್. ಶಿವರುದ್ರಪ್ಪ ಅವರು ಸಹ ಉಡುಗಣವೇಷ್ಟಿತವನ್ನು ಹಾಡಿದ್ದರು. ಇಂದು ಹೆಸರಾಂತ ಕವಿಗಳಾದ ಸು. ರುದ್ರಮೂರ್ತಿಶಾಸ್ತ್ರಿ ದೊಡ್ಡರಂಗೇಗೌಡರು, ಎಸ್.ಜಿ. ಸಿದ್ದರಾಮಯ್ಯ ಅವರುಗಳ ಮೇಲೆ ಅಂದಿನ ಚರ್ಚೆಗಳು ವಿಶೇಷ ಪ್ರಭಾವ ಬೀರಿವೆ.

ಡಾ॥ ಜಿ.ಎಸ್. ಶಿವರುದ್ರಪ್ಪ ಅವರು ವಿಶ್ವವಿದ್ಯಾಲಯ ಪ್ರಕಟಿಸುತ್ತಿದ್ದ 'ಸಾಧನೆ' ಪತ್ರಿಕೆಗೆ ಎಲ್ಲಾ ವಿದ್ಯಾರ್ಥಿಗಳನ್ನು ಚಂದಾದಾರರನ್ನಾಗಿ ಮಾಡಿಸಿದ್ದರು. ಪಠ್ಯ ಪುಸ್ತಕದ ಜೊತೆಗೆ ಇತರೆ ಪುಸ್ತಕಗಳನ್ನು ಓದುವ ಹವ್ಯಾಸವನ್ನು ಎಲ್ಲರಲ್ಲೂ ರೂಢಿಸಿದರು. ನನಗೆ, ದೊಡ್ಡರಂಗೇಗೌಡರು ದೊಡ್ಡಣ್ಣನ ರೀತಿಯಲ್ಲಿದ್ದರು. ನಮ್ಮ ಮನೆಗೆ ಸಾಕಷ್ಟು ಬಾರಿ ಬಂದಿದ್ದಾರೆ. ನಮ್ಮ ತಂದೆ-ತಾಯಿಯರಿಗೆ ಅಚ್ಚುಮೆಚ್ಚಿನ ಮಗನಂತಿದ್ದರು. ನಮ್ಮ ತಾಯಿ, ತಾನು ಮಾಡಿದ್ದ ಅಡುಗೆಯನ್ನು ಎಲ್ಲರಿಗೂ ಊಟ ಬಡಿಸುತ್ತಿದ್ದರು. ಇಂದಿಗೂ ಸಹ ಆ ದಿನಗಳನ್ನು ಮರೆತಿಲ್ಲ.

ನಾವು ಎಂ.ಎ. ಓದುತ್ತಿದ್ದಾಗ, ಜಾನಪದವನ್ನು ಐಚ್ಛಿಕ ವಿಷಯವಾಗಿ ಆರಂಭಿಸಿದರು. ನಾವುಗಳು ಜಾನಪದ ವಿಷಯ ಕುರಿತು ಬೋಧನೆಯೊಂದಿಗೆ, ಗ್ರಾಮೀಣ ಪ್ರದೇಶಗಳಿಗೆ ಭೇಟಿ ನೀಡಿ, ಹಾಡುಗಳನ್ನು ಸಂಗ್ರಹಿಸುತ್ತಿದ್ದೆವು. ಒಮ್ಮೆ ನನ್ನ ಮತ್ತೊಬ್ಬ ಸಹಪಾಠಿ, ಕವಿ, ಜಾನಪದತಜ್ಞ, ನಾಟಕಕಾರ, ವಿಮರ್ಶಕ ಹಾಗೂ ಇದೀಗ ಕರ್ನಾಟಕ ಸರ್ಕಾರದ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿರುವ ಪ್ರೊ. ಎಸ್.ಜಿ. ಸಿದ್ಧರಾಮಯ್ಯ ಅವರು ಹುಲಿಯೂರುದುರ್ಗದಲ್ಲಿ ಸೋಮನ ಕುಣಿತವನ್ನು ಅಧ್ಯಯನ ಮಾಡಲು ಏರ್ಪಡಿಸಿದ್ದರು. ದೊಡ್ಡರಂಗೇಗೌಡರು ಸೋಮನ ಕುಣಿತದೊಂದಿಗೆ ಇತರೆ ವಿಷಯಗಳನ್ನು ಎಲ್ಲರಿಗೂ ತಿಳಿಯಪಡಿಸಿದರು. ತಮ್ಮಲ್ಲಿದ್ದ ಜ್ಞಾನವನ್ನು ಎಲ್ಲರೊಂದಿಗೂ ಹಂಚಿಕೊಳ್ಳುತ್ತಿದ್ದ ನಿಸ್ವಾರ್ಥಿ. ಇದೇ ಸಮಯದಲ್ಲಿ ಹಳ್ಳಿಯೊಂದಕ್ಕೆ ಭೇಟಿ ನೀಡಲು ಎತ್ತಿನ ಗಾಡಿಯಲ್ಲಿ ಪ್ರಯಾಣಿಸುತ್ತಿದ್ದಾಗ, 'ತೇರಾನೇರಿ ಅಂಬರದಾಗೆ' ಅನ್ನುವ ಹಾಗೆ ದೊಡ್ಡರಂಗೇಗೌಡರು, ಜನಪದ ಗೀತೆಯನ್ನು ಹಾಡುತ್ತಾ, ಗಾಡಿಯ ನೇತೃತ್ವವನ್ನು ವಹಿಸಿದ್ದರು. ಅವರ ಹಾಡಿನ ಸೊಗಡಿಗೆ ಗಾಡಿಯ ಕುಲುಕಾಟ ಎಲ್ಲರನ್ನು ಮರೆಸಿತ್ತು. ನಂತರ ತಿಲೋತ್ತಮೆ ಎಂಬ ಮತ್ತೊಬ್ಬ ಗೆಳತಿ (ಈಗ ಜಗತ್ತನ್ನು ಬಿಟ್ಟು ದೂರ ಹೋಗಿದ್ದಾಳೆ) ಗೌಡರನ್ನು ಪಕ್ಕದಲ್ಲಿ ಕುಳ್ಳಿರಿಸಿ, ತಾನೇ ಗಾಡಿಯನ್ನು ಓಡಿಸುತ್ತೇನೆಂದು ನೊಗ ಹಿಡಿದುಕೊಂಡಳು. ಸ್ವಲ್ಪ ದೂರ ಹೋಗಿದ್ದೆವಷ್ಟೇ! ನಂತರ ಎಲ್ಲರೂ ಒಂದು ಹಳ್ಳದಲ್ಲಿ ಜಾರಿದ್ದೆವು. ಹೀಗೆ ನಮ್ಮ ಜನಪದ ಅಧ್ಯಯನದ ಮರೆಯಲಾಗದಂತಹ ನೆನಪುಗಳು, ನೆನಪಿನಂಗಳದಲ್ಲಿ ಸಿಹಿಬುತ್ತಿಯನ್ನೇ ಉಂಡಿದ್ದೇವೆ. ಬಿಜಾಪುರದಲ್ಲಿ ರಾಷ್ಟ್ರೀಯ ಜಾನಪದ ನಾಟಕೋತ್ಸವವನ್ನು ಏರ್ಪಡಿಸಿದ್ದರು. ಈ ನಾಟಕೋತ್ಸವದಿಂದ ಕಲಿಯುವುದು ಅಪಾರವಿದೆಯೆಂದು ಗೌಡರು ಎಲ್ಲರನ್ನು ಹುರಿದುಂಬಿಸಿ ಹೊರಡಲು ಪ್ರೇರೇಪಿಸಿದರು. ರಾತ್ರಿಯೆಲ್ಲ ದೊಡ್ಡಾಟ, ಸಣ್ಣಾಟಗಳನ್ನು ನೋಡುತ್ತಿದ್ದೆವು. ಆಗ ನಮ್ಮೊಂದಿಗೆ ಡಾ|| ಚಂದ್ರಶೇಖರ ಕಂಬಾರ, ಶ್ರೀ ಬಿ.ವಿ. ಕಾರಂತರು ಬಂದಿದ್ದರು. ನಾಟಕಗಳನ್ನು ಓದಿ ಕಲಿಯುವುದಕ್ಕಿಂತ ನೋಡಿ ಕಲಿಯುವುದೇ ಹೆಚ್ಚು ಸೂಕ್ತ. ನಾವೆಲ್ಲರೂ ಈ ರೀತಿಯ ಸದವಕಾಶಗಳನ್ನು ಪಡೆದುಕೊಂಡಿದ್ದೆವು. ಇದಕ್ಕೆಲ್ಲ ಪರೋಕ್ಷವಾಗಿ ಗೌಡರು ಸಹ ಕಾರಣ. ಈ ರೀತಿಯ ಉಪಕಾರವನ್ನು ಸಾಕಷ್ಟು ಮಾಡಿದ್ದಾರೆ.

ಬಿಡುವಿನ ಸಮಯದಲ್ಲಿ 'ಫ್ಯಾನ್ಸಿ ಡ್ರೆಸ್' ಸಹ ಇರುತ್ತಿತ್ತು. ಅವರ ಉಡುಗೆ ಇವರಿಗೆ ತೊಡಿಸಿ ನೋಡಿ ಆನಂದಿಸುತ್ತಿದ್ದೆವು. ನಾವೆಲ್ಲರೂ ಬಿಜಾಪುರದಲ್ಲಿ ಖಾನಾವಳಿಯಲ್ಲಿ ಜೋಳದ ರೊಟ್ಟಿ ಸಜ್ಜೆ ರೊಟ್ಟಿ ಮುಳುಗಾಯಿ, ಎಣಗಾಯಿ, ಪುಂಡೀ ಪಲ್ಯ, ಖಾರದ ಚಟ್ನಿ ತಿಂದು ಖಾರ ತಡೆಯಲಾರದೆ ನೀರನ್ನು ಕುಡಿದದ್ದೇ ಕುಡಿದದ್ದು. ನಮ್ಮ ಪ್ರವಾಸದಲ್ಲಿ ಬೇಸರದ ಸೊಲ್ಲೆ ಇರುತ್ತಿರಲಿಲ್ಲ. ನಮ್ಮ ಮತ್ತೊಬ್ಬ ಸಂಗಾತಿ ಭಾರತಿ ತುಂಬಾ ಚೆನ್ನಾಗಿ ಹಾಡುತ್ತಿದ್ದಳು. ಅವಳು ಕೂಡ ಈಗ ಈ ಲೋಕದಲ್ಲಿಲ್ಲ. ಅವಳು ಹಾಡನ್ನು ಹಾಡುತ್ತಿದ್ದರೆ ಗೌಡರು ಸಹ ದನಿಗೂಡಿಸುತ್ತಿದ್ದರು. ಹಾಡಿನ ಸೊಲ್ಲನ್ನು ಕೇಳಿದಾಕ್ಷಣ ಕಂಬಾರರ ಮುಖ ಅರಳುತ್ತಿತ್ತು; ತುಂಬಾ ಪ್ರೋತ್ಸಾಹಿಸುತ್ತಿದ್ದರು. ನಂತರದ ದಿನಗಳಲ್ಲಿ ಕಂಬಾರರ ಜೋಕುಮಾರಸ್ವಾಮಿ ಇತ್ಯಾದಿ ನಾಟಕಗಳಲ್ಲಿ ಭಾರತಿ, ದೊಡ್ಡರಂಗೇಗೌಡ ಅವರು ಸಹ ಹಾಡಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಗೌರವ, ಪ್ರಶಸ್ತಿ, ಹೆಸರು ಬಂದರೆ, ಕೆಲವರಿಗೆ ತಾವು ನಿಂತ ಭೂಮಿಯೇ ಕಾಣುವುದಿಲ್ಲ. ಆಕಾಶದಲ್ಲೇ ತೇಲುತ್ತಿರುತ್ತಾರೆ. ಇತರರನ್ನು ನಿಕೃಷ್ಟವಾಗಿ ಕಾಣುವುದು ಸಾಮಾನ್ಯವಾಗಿದೆ. ಅಂಥವರ ಬದುಕು ಬರಹಕ್ಕೂ ಬಹಳ ಅಂತರವಿರುತ್ತದೆ. ಆದರೆ ದೊಡ್ಡರಂಗೇಗೌಡರು, ಆ ರೀತಿಯ ಗಾಳಿಗೆ ಸಿಲುಕಿಲ್ಲ. ಅವರ ಪಾದಗಳು ಇನ್ನು ಕನ್ನಡದ ನೆಲದಲ್ಲೇ ಊರಿವೆ. ಈ ಮಣ್ಣಿನ ಮಗನಾಗಿ ಕನ್ನಡದ ಕಂಪನ್ನು ಎಲ್ಲೆಡೆಯೂ ಪಸರಿಸುತ್ತಿರುವ ಸಹೃದಯಿ ಗೌಡ ಅವರು ಎಲ್ಲರೊಂದಿಗೂ ಸ್ನೇಹಜೀವಿಯಾಗಿದ್ದಾರೆ, ಅವರ ನಡೆನುಡಿಯಲ್ಲಿ ಕಂದಕವಿಲ್ಲದ ಜೀವನಶೈಲಿ.

ಇಂದು ಆಧುನಿಕ ವಿದ್ಯಮಾನಗಳು ಮನುಷ್ಯ ಸಂಬಂಧಗಳನ್ನು ತುಂಬಾ ಕೆಡಿಸಿವೆ. ಅಂತಃಕರಣದ ಆರ್ದ್ರತೆ ಬತ್ತಿ ಹೋಗಿವೆ. ಆದರೂ ಇಂದು ನಿಜವಾದ ಸ್ನೇಹಕ್ಕೆ ಬೆಲೆ ಕೊಡುವವರು ಇದ್ದಾರೆ. ಅಂತವರಲ್ಲಿ ಗೌಡರು ಒಬ್ಬರು. ಈಗಲೂ ಸಹ ತನ್ನೊಂದಿಗೆ ಓದಿದ ಸಹಪಾಠಿಗಳನ್ನು ಮರೆತಿಲ್ಲ. ಇದು ಅವರ ದೊಡ್ಡತನವನ್ನು ತೋರಿಸುತ್ತದೆ. ದೊಡ್ಡರಂಗೇಗೌಡ ಅವರ ಜೀವನ ಧ್ಯೇಯ, ಅವರೇ ರಚಿಸಿರುವ ಕೆಳಗಿನ ಗೀತೆಯಂತಿದೆ.

**ಮರೆಯಬೇಡವೊ ಮನುಜ**

ಮರೆಯಬೇಡವೋ ಮನುಜ
ಅಂತರಾಳದ ಅಂಕೆ ಬೀರಿ, ಕೊಂಕು ಬೀಗದೆ
ಸುಂಕ ಕಾದಿದೆ
ನೀತಿ ಮೀರಿದೆ ನೀನು ಭ್ರಾಂತಿ ಕಾಣದೆ
ಹಾದಿ ಸಾಗಯ್ಯ ಮುಂದೆ ಬಿಂಕ ಮಾಡದೆ
ಡಂಭಚಾರ ಏಕೋ ಏನೋ
ಸಹಜವಾಗಿ ಬಾಳಿ ಬದುಕಯ್ಯ
ಡೌಲು ತೋರದೆ, ಎಂದೂ ಕೋಪ ಹಂಚದೆ
ಪ್ರೀತಿ ಕಾಣಯ್ಯ ಎಂದೂ, ದ್ವೇಷ ಕಾರದೆ
ಪೊಳ್ಳು ಜಂಬ ಸಾಕು ಮಾಡೋ
ಸುಳ್ಳು ವಂಚನೆ ಸಾಕು ಸಾಕು
ಸ್ನೇಹದಿಂದ ಲೋಕ ಕಾಣಯ್ಯ

ಈ ಮೇಲಿನ ಗೀತೆ ದೊಡ್ಡರಂಗೇಗೌಡ ಅವರ ಜೀವನದ ಕನ್ನಡಿಯಾಗಿದೆ.





# ಡಾಕ್ಟರ್... ಪ್ರೊಫೆಸರ್.... ಗೌಡರು

• ಡಾ|| ಏಜಾಸುದ್ದೀನ್ ಫೈರೋಜ್

43 ವರ್ಷಗಳ ಹಿಂದೆ ನಾನು, ಡಾ|| ದೊಡ್ಡರಂಗೇಗೌಡರು ತುಮಕೂರಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದೆವು. ಬೇರೆ ಬೇರೆ ತರಗತಿಗಳಲ್ಲಿ ಬೇರೆ ಬೇರೆ ವಿಷಯಗಳು ನಮ್ಮದಾಗಿದ್ದವು, ಹೀಗಾಗಿ ಪರಸ್ಪರ ಭೇಟಿ ಅಲ್ಲಿ ಸಾಧ್ಯವಿರಲಿಲ್ಲ. ಇಂದಿನ ಎಂ.ಜಿ. ರೋಡು, ಅಂದಿನ ಕೃಷ್ಣಾ ಸಿನಿಮಾ ರೋಡಿನಲ್ಲಿ ಸನ್ಮಾನ್ಯ ಶ್ರೀ ಟಿ.ಆರ್. ರೇವಣ್ಣನವರ ಪುಸ್ತಕದ ಅಂಗಡಿ ಇತ್ತು. ಜನತಾ ಬುಕ್ ಹೌಸ್ ಅದರ ಹೆಸರು, ಅಲ್ಲಿ ಶಾಂತ ಸ್ವಭಾವದ, ಮಂದಸ್ಮಿತ ವ್ಯಕ್ತಿಯೊಬ್ಬರನ್ನು ನೋಡುತ್ತಿದ್ದೆ, ಅವರು ಪುಸ್ತಕಗಳನ್ನು ಗಂಭೀರವಾಗಿ ನೋಡುತ್ತಿದ್ದರು, ಎಷ್ಟು ಬೇಕೋ ಅಷ್ಟನ್ನು ಮಾತ್ರ ಮಾತನಾಡುತ್ತಿದ್ದರು, ಒಂದು ದಿನ ಸಾಯಂಕಾಲ ಹೆಚ್ಚು ಜನರಿರಲಿಲ್ಲ, ಶ್ರೀಯುತ ರೇವಣ್ಣ, ನಾನು ಹಾಗೂ ಡಾ|| ದೊಡ್ಡರಂಗೇಗೌಡರು ಮಾತ್ರ ಇದ್ದೆವು, ಅಲ್ಲಿದ್ದ ಪುಸ್ತಕ' ಹೆವೆನ್ ನೋಸ್ ಮಿಸ್ಟರ್ ಆಲಿಸನ್'' ಓದಲು ನನಗೆ ಸೂಚಿಸಿದರು, ಆ ಪುಸ್ತಕ ತೆಗೆದುಕೊಂಡು ಹೋಗಿ ಓದಿದೆ, ಮುಂದೊಂದು ದಿನ ಭೇಟಿಯಾದಾಗ ಈ ಪುಸ್ತಕದ ಬಗ್ಗೆ ನನ್ನ ಅಭಿಪ್ರಾಯ ಕೇಳಿದರು, ನನಗೆ ತೋಚಿದ್ದನ್ನು ಹೇಳಿದೆ, ಆದರೆ ಡಾ|| ದೊಡ್ಡರಂಗೇಗೌಡರು ಅಲ್ಲಿ ಬರುವ ಪಾತ್ರಗಳ ಬಗ್ಗೆ ಹಾಗೂ ಸನ್ನಿವೇಶಗಳ ಬಗ್ಗೆ ವಿವರಿಸಿದರು. ಇವರು ಹೋದ ಮೇಲೆ ಶ್ರೀ ರೇವಣ್ಣನವರು ಹೇಳಿದರು, ಇವರು ಒಳ್ಳೆಯ ಕವಿತೆ ಬರೆಯುತ್ತಾರೆ ಎಂದು, ಹೀಗೆ ಆದ ನಮ್ಮಿಬ್ಬರ ಪರಿಚಯ, ಸಾಹಿತ್ಯ ಎಂದಾದರೊಂದು ಸಲ ಕಮ್ಯುನಿಸ್ಟ್ ಪಕ್ಷದ ಬಗ್ಗೆ ಮಾತನಾಡುವವರೆಗೆ ಸೀಮಿತವಾಗಿತ್ತು.

1964ರಲ್ಲಿ ನಾನು ಬಿ.ಎ. ಮುಗಿಸಿ, ಮಾನಸ ಗಂಗೋತ್ರಿಗೆ ಹಿಂದಿ ಎಂ.ಎ., ಓದಲು ಹೋದೆ, ರಜೆಯಲ್ಲಿ ತುಮಕೂರಿಗೆ ಬಂದಾಗ ಅದೇ ಜನತಾ ಬುಕ್ ಹೌಸಿನಲ್ಲಿ ನಮ್ಮಿಬ್ಬರ ಭೇಟಿ. ವಿದ್ಯಾರ್ಥಿದೆಶೆಯಲ್ಲೇ ಇವರಲ್ಲಿದ್ದ ಕವಿ ಜಾಗೃತನಾಗಿದ್ದ, ವಿಮರ್ಶಕ ಸಹೃದಯತೆಯಿಂದ ಚಿಂತನೆಯಲ್ಲಿ ತೊಡಗಿದ್ದ.

ಮುಂದೆ 1967ರಲ್ಲಿ ನಾನು ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು ಬೆಂಗಳೂರಿಗೆ ಹಿಂದಿ ಉಪನ್ಯಾಸಕನಾಗಿ ಬಂದೆ, ಮತ್ತೆ ನಾವಿಬ್ಬರು ಭೇಟಿ ಮಾಡುವ ಹೊತ್ತಿಗೆ ಡಾ॥ ದೊಡ್ಡರಂಗೇಗೌಡರು ಕನ್ನಡದಲ್ಲಿ ಎಂ.ಎ. ಮುಗಿಸಿ, ಎಸ್.ಎಲ್.ಎನ್. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಈ ವೇಳೆಗಾಗಲೇ ಅವರ ಕೃತಿಗಳು ಪ್ರಕಟಗೊಂಡಿದ್ದವು, ಒಬ್ಬ ಕವಿಯಾಗಿ, ಲೇಖಕನಾಗಿ, ವಿಮರ್ಶಕನಾಗಿ ಅನುವಾದಕನಾಗಿ, ಹಾಗೂ ಸಂಶೋಧಕನಾಗಿ ಇವರು ಪ್ರಸಿದ್ಧಿ ಪಡೆಯಲಾರಂಭಿಸಿದರು. ಸಾಹಿತ್ಯ ಸೇವೆ ನಿರಂತರವಾಗಿ ನಡೆಯುತ್ತಿತ್ತು, ಒಳ್ಳೆಯ ಅಧ್ಯಾಪಕರಾಗಿ, ಶಿಷ್ಯರಲ್ಲಿ ಸಾಹಿತ್ಯಾಸಕ್ತಿ ಮೂಡಿಸಿದರು. ಇವರ ಬೆಳವಣಿಗೆ ನೋಡಿದಾಗ ನನಗೆ ತುಂಬಾ ಸಂತೋಷವಾಗುತ್ತಿತ್ತು.

ಮುಂದೆ ನಮ್ಮ ಭೇಟಿ, ಕಾರ್ಯಕ್ರಮಗಳಲ್ಲಿ, ಒಳ್ಳೆಯ ಭಾಷಣಕಾರರಾಗಿ ಡಾ॥ ಗೌಡರು ತುಂಬಾ ಜನಪ್ರಿಯ ಭಾಷಣಕಾರರು, ಎಂದೂ ವಿಷಯಬಿಟ್ಟು ಅತ್ತಿತ್ತ ಹೋಗುತ್ತಿರಲಿಲ್ಲ, ಕೊಟ್ಟ ಸಮಯದಲ್ಲಿ ಚೊಕ್ಕವಾಗಿ ವಿಷಯ ಪ್ರತಿಪಾದನೆ ಮಾಡುತ್ತಿದ್ದರು. ಶ್ರೋತೃಗಳಿಗೆ ಇವರ ಮಾತು ಕೇಳುವ ಆಸಕ್ತಿ ಇರುತ್ತಿತ್ತು, ಅಷ್ಟರಲ್ಲಿ ಭಾಷಣ ಮುಗಿಸುತ್ತಿದ್ದರು.

ಒಂದು ಸಲ ಚಿತ್ರದುರ್ಗದಲ್ಲಿ ಒಂದು ಸರ್ವಧರ್ಮ ಸಮ್ಮೇಳನಕ್ಕೆ ಭಾಷಣಕಾರನಾಗಿ ಹೋಗಿದ್ದೆ, ಕಾರ್ಯಕ್ರಮಕ್ಕೆ ಮೊದಲು ಅಲ್ಲಿ ಕೆಲವು ಸಿನಿಮಾ ಹಾಡುಗಳು ಕೇಳಿಬರುತ್ತಿದ್ದವು, ಅದರಲ್ಲಿ ಹಾಡೊಂದರ ಬಗ್ಗೆ ನನ್ನ ಆತ್ಮೀಯರು ಮೆಚ್ಚುಗೆ ವ್ಯಕ್ತಪಡಿಸಿದರು. ಇದರ ಕವಿ, ನನ್ನ ಗೆಳೆಯರು ಎಂದು ಹೇಳಿದೆ. ದೊಡ್ಡರಂಗೇಗೌಡರು ನಿಮ್ಮ ಗೆಳೆಯರೇ ಎಂದು ಆಶ್ಚರ್ಯಪಟ್ಟರು. ನಾನು ಇವರ ಸ್ನೇಹಿತ ಎಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ.

ಕೆಲವೊಮ್ಮೆ ನನ್ನ ಬರವಣಿಗೆಯ ಬಗ್ಗೆ ವಿಚಾರಿಸುತ್ತಿದ್ದರು. ನಾನು ಭಾಷಣಕಾರ ಸಮಯವಿಲ್ಲವೆಂದಾಗ, ಸಮಯಮಾಡಿಕೊಂಡು ನೀವು ಏನು ಮಾತನಾಡುತ್ತೀರೋ ಅದನ್ನಾದರೂ ಬರೆಯಿರಿ ಎಂದು ಹೇಳುತ್ತಿದ್ದರು. ನನ್ನ ಕನ್ನಡದ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸುತ್ತಿದ್ದರು. ಇಲ್ಲೊಂದು ಮಾತು ಹೇಳಬೇಕಾಗಿದೆ, ಬಹಳ ಜನ ಕನ್ನಡದ ಬಗ್ಗೆ ಮಾತನಾಡುತ್ತಾರೆ, ತಮ್ಮ ಮಕ್ಕಳನ್ನು ಆಂಗ್ಲಶಾಲೆಗೆ ಸೇರಿಸುತ್ತಾರೆ, ಆದರೆ ನುಡಿದಂತೆ ನಡೆಯುವ ನಮ್ಮ ದೊಡ್ಡರಂಗೇಗೌಡರು, ಕನ್ನಡ ಅಧ್ಯಾಪರಾದರು, ಕನ್ನಡ ಅಧ್ಯಾಪಕಿಯನ್ನೇ ಧರ್ಮ ಪತ್ನಿಯಾಗಿ ಆಯ್ಕೆ ಮಾಡಿಕೊಂಡರು, ತಮ್ಮ ಮಕ್ಕಳಿಬ್ಬರನ್ನು ಕನ್ನಡದಲ್ಲಿ ಬೆಳೆಸಿದರು, ಕನ್ನಡದ ಲೇಖಕರನ್ನಾಗಿ ಮಾಡಿದರು. ಈ ರೀತಿ ಇಡೀ ಮನೆಯಲ್ಲಿ ಕನ್ನಡತನವನ್ನು ಬೆಳೆಸಿದರು. ಇದೊಂದು ಅಪರೂಪವಾದ ಸಂಗತಿ.

ನಾನು ವಿಧಾನ ಪರಿಷತ್ತಿನ ಸದಸ್ಯನಾಗಿದ್ದಾಗ, ನನ್ನ ಕೊಠಡಿಗೆ ಯಾವಾಗಲಾದರೊಮ್ಮೆ

ಬರುತ್ತಿದ್ದರು, ಅದೇ ಮುಗ್ಧ ಸ್ವಭಾವ, ಮುಗುಳ್ನಗೆಯುಕ್ತ ಸಂಭಾಷಣೆ. ಯಾರ ಬಗ್ಗೆ ಅಹಿತವಾದ ಮಾತಾಗಲಿ, ವಿಚಾರವಾಗಲಿ ಅವರ ಬಾಯಿಯಿಂದ ಬರುತ್ತಿರಲಿಲ್ಲ.

ಪ್ರಾಧ್ಯಾಪಕರಾಗಿ ನಿವೃತ್ತರಾದ ಮೇಲೆ ಆದಿಚುಂಚನಗಿರಿ ಮಾಸ ಪತ್ರಿಕೆಯ ಸಂಪಾದಕರಾದರು, ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು, ಇವರ ಭಕ್ತಿ ಹಾಗೂ ಸೃಜನ ಶಕ್ತಿಯನ್ನು ಎಷ್ಟೋ ವರ್ಷಗಳ ಹಿಂದೆ ಗುರುತಿಸಿದ್ದರು, ಈ ಜವಾಬ್ದಾರಿ ಇವರು ವಹಿಸಿಕೊಂಡ ಮೇಲೆ ಪತ್ರಿಕೆ ಶುದ್ಧ ಅಭಿರುಚಿಗೆ ಒಂದು ಸೃಜನಶೀಲ ಸಿರಿಯಾಗಿ ರೂಪತಾಳಿದೆ. ಎಂದಾದರೂ ಅವರು ದೂರವಾಣಿಯ ಮೂಲಕ ಮಾತನಾಡಿದರೆ ಲೇಖನ ಕಳುಹಿಸಲು ಹೇಳುತ್ತಾರೆ, ಅವರ ಮಾತಿಗೆ ಒಪ್ಪಿ ಅಲ್ಲೊಂದು ಇಲ್ಲೊಂದು ಲೇಖನ ಕಳುಹಿಸುತ್ತೇನೆ.

ನನ್ನ ಮಿತ್ರರಿಗೆ 60 ವರ್ಷ ತುಂಬಿತು ಎಂದು ಕೇಳಿ ಆಶ್ಚರ್ಯವೂ ಆಯಿತು, ಸಂತೋಷವೂ ಆಯಿತು. ಕೆಲವರ್ಷಗಳ ಹಿಂದೆ ಜನತಾ ಬುಕ್ ಹೌಸ್‌ನಲ್ಲಿ ಭೇಟಿಯಾದ ಹಾಗೆ ಕಾಣುತ್ತದೆ. ಸ್ವಲ್ಪ ಕೂದಲು ಬಣ್ಣ ಬದಲಾಗಿರುವುದು ಬಿಟ್ಟರೆ ಡಾ॥ ದೊಡ್ಡರಂಗೇಗೌಡರು 43 ವರ್ಷಗಳ ಹಿಂದೆ ಹೇಗಿದ್ದರೋ ಈಗಲೂ ಹಾಗೆ ಇದ್ದಾರೆ, ಪರಿಶುದ್ಧವಾದ ಜೀವನ, ಮಾನವೀಯ ಮೌಲ್ಯಗಳ ಪಾಲನೆ, ಎಲ್ಲಕ್ಕಿಂತ ಹೆಚ್ಚಾಗಿ, ಕೋಪತಾಪವಿಲ್ಲದ, ಸಹಜವಾದ ನಮ್ರತೆಯ ಬದುಕು, ತಾವು ನಡೆದು ಬಂದ ದಾರಿಯನ್ನು ಡಾ॥ ದೊಡ್ಡರಂಗೇಗೌಡರು ಮರೆತಿಲ್ಲ, ಇವರ ಆತ್ಮೀಯರ ಪ್ರೋತ್ಸಾಹವನ್ನು ಹೆಜ್ಜೆಹೆಜ್ಜೆಗೂ ನೆನೆಯುತ್ತಾರೆ, ಇವರ ಪುಸ್ತಕ ಪ್ರೇಮದ ಬಗ್ಗೆ ನಾನು ಬಹಳ ಸಲ ಉದಾಹರಣೆಯಾಗಿ ಬಂಧುಗಳ ಮುಂದೆ ಹೇಳುತ್ತಿರುತ್ತೇನೆ. ಅವರು ವಿದ್ಯಾರ್ಥಿದೆಶೆಯಲ್ಲಿ ಕೇವಲ ಐವತ್ತು ಪೈಸೆಗೆ ಕೊಂಡುಕೊಂಡ 'ಕನ್ನಡ ಸಾಹಿತ್ಯ ಇತಿಹಾಸ' ಪುಸ್ತಕವನ್ನು, ಇವರೂ ಓದಿ, ಇವರ ಮಕ್ಕಳೂ ಓದಿ ಅದರಿಂದ ಪ್ರಯೋಜನ ಪಡೆದ ಸಂಗತಿ ಒಂದು ಸಲ ಅವರು ಹೇಳಿದ್ದರು.

ನಾನು ಡಾ॥ ದೊಡ್ಡರಂಗೇಗೌಡರ ಸಾಹಿತ್ಯ ಕೃತಿಗಳ ಬಗ್ಗೆ, ಅವರು ಡಾಕ್ಟರೇಟ್ ಪದವಿ ಪಡೆದ ಸಂಶೋಧನೆಯ ಬಗ್ಗೆ, ಇಲ್ಲಿ ಮಾತನಾಡಿಲ್ಲ, ಕಾರಣ ಬೇರೆ ಬೇರೆ ವಿದ್ವಾಂಸ-ಅಭಿಮಾನಿಗಳು ಅದರ ಬಗ್ಗೆ ನನಗಿಂತ ಸಮರ್ಥವಾಗಿ ಬರೆದಿರುತ್ತಾರೆ. ಒಬ್ಬ ಮನುಷ್ಯ 'ಮನುಜ'ನಾಗ ಬೇಕಾದರೆ ಯಾವಯಾವ ಗುಣಗಳಿರಬೇಕು, ಎಂಬುದನ್ನು ಇವರಿಂದ ನಾನು ಕಲಿತೆ.

ಎಷ್ಟೋ ಪ್ರಶಸ್ತಿಗಳು, ಎಷ್ಟೋ ಸನ್ಮಾನಗಳು, ವಿವಿಧ ಕ್ಷೇತ್ರಗಳಲ್ಲಿ ವೈವಿಧ್ಯಮಯ ಗೌರವ ಮನ್ನಣೆಗಳು ದೊರೆತಿವೆ. ಆದರೆ ಡಾ॥ ದೊಡ್ಡರಂಗೇಗೌಡರು ಮಾತ್ರ ಅದೇ ನಿರ್ಲಿಪ್ತ ತೃಪ್ತ ಜೀವಿ, ಆದರೆ ಕರ್ಮಯೋಗಿ, ಸರಸ್ವತಿಯ ಮಡಿಲಿಗೆ, ವಿವಿಧ ಬಣ್ಣದ ಸಾಕಷ್ಟು ಪುಷ್ಪಗಳು,

ಸಾಹಿತ್ಯದ ಪ್ರಮುಖ ಪ್ರಕಾರಗಳೆಲ್ಲವುಗಳ ಬಗ್ಗೆ ಕೃತಿಗಳನ್ನು ರಚಿಸಿದ್ದಾರೆ. ನನ್ನ ಮಿತ್ರರಿಗೆ 60 ವರ್ಷಗಳು ತುಂಬಿವೆ, ಇವರ ನಿರಂತರ ಸಾಧನೆ ಇವರನ್ನು ಹಿಮಾಲಯದಷ್ಟು ಎತ್ತರಕ್ಕೆ ಬೆಳೆಸಿದೆ. ಇವರು ಮಾತ್ರ 43 ವರ್ಷಗಳ ಹಿಂದೆ ಹೇಗಿದ್ದರೋ ಈಗಲೂ ಹಾಗೇ ಇದ್ದಾರೆ.

'ಭಗವಂತನು ಇವರಿಗೆ ಆಯುರಾರೋಗ್ಯ ಅಷ್ಟಸಿದ್ಧಿ ಸನ್ಮಂಗಳವನ್ನು ದಯಪಾಲಿಸಲಿ' ಎಂದು ಪ್ರಾರ್ಥಿಸುತ್ತಾ, ಈ ಅಭಿನಂದನಾ ಗ್ರಂಥ ತರುತ್ತಿರುವ ಅಭಿಮಾನಿಗಳಿಗೆ ಅಭಿನಂದನೆ ಸಲ್ಲಿಸುತ್ತೇನೆ.

❑



# 'ಜಗಲಿ ಹತ್ತಿ ಇಳಿದು' ಬೆಳೆದ ಕವಿ

● ಶೂದ್ರ ಶ್ರೀನಿವಾಸ್

ಗ್ರಾಮಾಂತರ ಪ್ರದೇಶಗಳಿಂದ ನಮ್ಮಂಥವರಿಗೆ 'ಜಗಲಿ' ಎಂಬುದು ಬದುಕಿನ ಸಂಕೇತವಾಗಿರುತ್ತದೆ. ಹಾಗೆಯೇ ಕಲಿಯುವ ಸಂಕೇತವಾಗಿರುತ್ತದೆ ಅಷ್ಟೇ ಏಕೆ ಸಣ್ಣಪುಟ್ಟ ವ್ಯವಹಾರಗಳನ್ನು ತೀರ್ಮಾನಿಸುವ ನ್ಯಾಯದ ಕಟ್ಟೆಯೂ ಆಗಿರುತ್ತದೆ. ಈ ದೃಷ್ಟಿಯಿಂದ ಹಳ್ಳಿಗಳಲ್ಲಿ ಬಹುಪಾಲು ಮನೆಗಳಿಗೆ ಸಣ್ಣ ಪ್ರಮಾಣದಲ್ಲಿಯೋ, ದೊಡ್ಡ ಪ್ರಮಾಣದಲ್ಲಿಯೋ 'ಜಗಲಿ' ಎಂಬುದು ಜೀವಂತವಾಗಿರುತ್ತದೆ. ತಮ್ಮ ಮನೆಯ ಮಕ್ಕಳಿಗೆ ಪ್ರಾರಂಭದಲ್ಲಿ ಹತ್ತಿ ಇಳಿಯುವುದನ್ನು ಕಲಿಸುವುದಕ್ಕೂ ಈ 'ಜಗಲಿ' ಮಕ್ಕಳಿಗೆ ಭವಿಷ್ಯತ್ತಿನ ನಡಿಗೆಯ ವೇದಿಕೆಯಾಗಿಯೂ ರೂಪುಗೊಂಡಿರುತ್ತದೆ.

ದೊಡ್ಡರಂಗೇಗೌಡರು ಮೊದಲು ನನಗೆ ಪ್ರಿಯರಾಗಿದ್ದು ಈ 'ಜಗಲಿ ಹತ್ತಿ ಇಳಿದು' ಎಂಬ ನುಡಿಗಟ್ಟಿನಿಂದ, ಇದು ಅವರ ಕವನ ಸಂಕಲನದ ಶೀರ್ಷಿಕೆ. ನನಗೆ ಪ್ರಿಯವಾದ ಸಂಕಲನ. ಈಗಲೂ ನಾನು ಅವರ ಒಟ್ಟು ಬರವಣಿಗೆಯನ್ನು ಹಾಗೂ ವ್ಯಕ್ತಿತ್ವವನ್ನು ಈ ಸಂಕಲನದಿಂದಲೇ ನನಗೆ ಗೊತ್ತಿಲ್ಲದಂತೆಯೇ ನೋಡಲು ಪ್ರಯತ್ನಿಸುವೆ. ದೊಡ್ಡರಂಗೇಗೌಡರು ಸೆಂಟ್ರಲ್ ಕಾಲೇಜಿನ ಆನರ್ಸ್ ದಿನಗಳಲ್ಲಿ ಒಂದು ವರ್ಷ ನನಗಿಂತ ಹಿರಿಯ ವಿದ್ಯಾರ್ಥಿ. ಕಾವ್ಯವೆಂದರೆ ಎಲ್ಲಿಲ್ಲದ ಉತ್ಸಾಹ. ಆಗಿನ ಕಾಲಕ್ಕೆ ಇವರು 'ಜಗಲಿ ಹತ್ತಿ ಇಳಿದು' ಎಂಬ ಕವನ ಸಂಕಲನವನ್ನು ತಂದಾಗ ಕಾವ್ಯಾಸಕ್ತರ ಗಮನವನ್ನು ಸೆಳೆದವರು. ನವ್ಯ ಸಾಹಿತ್ಯದ ಚರ್ಚೆ ಉತ್ತುಂಗದಲ್ಲಿದ್ದಾಗ ಬಂದ ಸಂಕಲನ. ನಾವೆಲ್ಲ ಯಾರಾದರೂ ಹೊಸದಾಗಿ 'ನವ್ಯ ಸಾಹಿತ್ಯ'ದ ಚೌಕಟ್ಟಿನಲ್ಲಿ ಬರೆಯುತ್ತಾರೆಂದರೆ ಅವರ ಬಗ್ಗೆ ಸ್ವಲ್ಪ ಅತಿಯಾಗಿಯೇ ಕುತೂಹಲವನ್ನು ಬೆಳೆಸಿಕೊಳ್ಳುತ್ತಿದ್ದೆವು. ಅದರ ಬಗ್ಗೆ ವಿವಿಧ ಹಂತಗಳಲ್ಲಿ ಚರ್ಚೆ ಮತ್ತು ಸಂವಾದಕ್ಕಿಳಿಯುತ್ತಿದ್ದೆವು. ಈ ದೃಷ್ಟಿಯಿಂದ ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ಭಾನುವಾರ ಕವನ ಬಂದರೆ ಸ್ವಾಭಾವಿಕವಾಗಿ ಮುಂದಿನ ಭಾನುವಾರದವರೆವಿಗೂ ಅದು ಚರ್ಚೆಯಾಗುತ್ತಿತ್ತು. ಈ ರೀತಿಯ ಚರ್ಚೆಯ

ವೇದಿಕೆಯಲ್ಲಿ ದೊಡ್ಡರಂಗೇಗೌಡರು ಸಕ್ರಿಯರಾಗಿದ್ದುದರಿಂದ ಹೆಚ್ಚು ಆತ್ಮೀಯರಾದರು. ಇವರ ಸಹಪಾಠಿಯಾದ ಕೋದಂಡರಾಮಶೆಟ್ಟರಂತೂ ಈ ವೇದಿಕೆಯ ಸಂಚಾಲಕರಂತೆ ಎದ್ದು ಕಾಣುತ್ತಿದ್ದರು. ಕೋದಂಡರಾಮ ಶೆಟ್ಟರು ಈಗ ನ್ಯಾಷನಲ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ನಾನು ಆನರ್ಸ್‌ನ ದಿನಗಳಲ್ಲಿ ಮೂರು ವರ್ಷವೂ ಕ್ಲಾಸ್ ಸೆಮಿನಾರ್‌ಗಳ ಸಂಚಾಲಕನಾಗಿದ್ದೆ. ನನ್ನ ಜೊತೆಯಲ್ಲಿ ಕೆ. ವಿಜಯ ಎಂಬ ಕ್ರಿಯಾಶೀಲ ವಿದ್ಯಾರ್ಥಿನಿ ಸಹ ಸಂಚಾಲಕಿಯಾಗಿದ್ದರು. ನಮ್ಮನ್ನು ಪ್ರೋತ್ಸಾಹಿಸಲು ಡಾ॥ ಮರುಳಸಿದ್ಧಪ್ಪ, ಪ್ರೊ॥ ಕ.ರಂ. ನಾಗರಾಜ್, ಡಾ॥ ಲಕ್ಷ್ಮೀ ನಾರಾಯಣ ಭಟ್ಟರಂಥವರಿದ್ದರು. ಇವರಿಂದ ಲಂಕೇಶರವರು ನಮಗೆ ತುಂಬ ಹತ್ತಿರವಾದರು. ಇದರಿಂದ ನಾವು ಎಂತೆಂಥ ವಾಗ್ವಾದಗಳಿಗೆ ತೊಡಗಿಸಿಕೊಂಡಿದ್ದೆವೆಂದರೆ, ಈಗ ನೆನಪು ಮಾಡಿಕೊಳ್ಳಲು ಥ್ರಿಲ್ ಆಗುತ್ತದೆ.

ದೊಡ್ಡರಂಗೇಗೌಡರು ತುಂಬ ಕಷ್ಟಪಟ್ಟು ಮೇಲಕ್ಕೆ ಬಂದವರು. ಆರ್.ಎಂ.ಎಸ್.ನಂಥ ಪೋಸ್ಟಲ್ ಇಲಾಖೆಯಲ್ಲಿ ರಾತ್ರಿ ಪಾಳಿಯಲ್ಲಿ ಕೆಲಸಮಾಡಿ ಕಾಲೇಜಿಗೆ ಬರುತ್ತಿದ್ದವರು. ಇವರ ತಮ್ಮ ನಾಗರಾಜ್ ನನ್ನ ಸಹಪಾಠಿಯಾಗಿದ್ದ. ತುಂಬ ತುಂಟ ಮತ್ತು ಬುದ್ಧಿವಂತ. ಇಂಥವನನ್ನು ತಮ್ಮ ಜೊತೆ ಇಟ್ಟುಕೊಂಡು ಅನ್ನ ಬೇಯಿಸಿಕೊಂಡು ಮುಂದೆ ಬಂದವರು. ನಾನು ಒಂದೆರಡು ಬಾರಿ ಅವರ ಎಣ್ಣೆಸ್ಟೌವ್‌ನಲ್ಲಿ ಬೇಯಿಸಿದ ಅಡಿಗೆಯ ರುಚಿಯನ್ನು ಕಂಡಿದ್ದೇನೆ. ಹಾಗೆ ನೋಡಿದರೆ ನಾನೂ ಕೂಡ ಸ್ಟೌವ್ ಗಿರಾಕಿಯಾಗಿದ್ದೆ. ದೊಡ್ಡರಂಗೇಗೌಡರ ರೀತಿಯಲ್ಲಿ ದುಡಿದು ಓದಲು ಬರುತ್ತಿದ್ದ ಮತ್ತೊಬ್ಬ ಪ್ರತಿಭಾವಂತ ಎಂದರೆ ಕ.ನಂ. ನಾಗರಾಜ್‌ರವರು. ಇವರು ದುಡಿದು ಬರುತ್ತಿದ್ದುದರಿಂದ ನಮಗೆ ವಾರದಲ್ಲಿ ಬಹಳಷ್ಟು ಬಾರಿ ಕಾಫೀ-ತಿಂಡಿ ದೊರಕುತ್ತಿತ್ತು. ಇವರು ಇಂಡಿಯನ್ ಟೆಲಿಫೋನ್ ಕಾರ್ಖಾನೆಯಲ್ಲಿ ಕೆಲಸಮಾಡುತ್ತಿದ್ದರು. ಅದರ ಜೊತೆಗೆ ಸ್ವಲ್ಪ ಹಿರಿಯರಾಗಿ ಗಂಭೀರ ವ್ಯಕ್ತಿಯಾದ್ದರಿಂದ ನಮ್ಮ ತುಂಟತನಗಳಿಗೆ ಒಂದು ರೀತಿಯ ಕಡಿವಾಣವೂ ಇರುತ್ತಿತ್ತು. ಹಾಗೆ ನೋಡಿದರೆ ನಮ್ಮ ತರಗತಿಯ ಹುಡುಗರು ಸಾಹಿತ್ಯಕ ತುಂಟತನಗಳಿಗೆ ಹೆಸರುವಾಸಿಯಾಗಿದ್ದರು. ಆಗಿನ ಕಾಲಕ್ಕೆ ದೊಡ್ಡರಂಗೇಗೌಡರ ಜೊತೆಗೆ ಪದ್ಯ ಚೆನ್ನಾಗಿ ಬರೆಯುತ್ತಿದ್ದ ಡಿ.ವಿ. ರಾಜಶೇಖರ್ ಈಗ ಪ್ರಜಾವಾಣಿಯ ಹಿರಿಯ ಸಂಪಾದಕ ವರ್ಗದಲ್ಲಿದ್ದಾರೆ.

ಸೆಂಟ್ರಲ್ ಕಾಲೇಜಿನ ದಿನಗಳಲ್ಲಿ ಮತ್ತೊಂದು ಅದ್ಭುತ ಸಂಗತಿಯೆಂದರೆ ಮೊದಲನೆಯ ಬಿ.ಎ. ಆನರ್ಸ್ ವಿದ್ಯಾರ್ಥಿಗಳಿಂದ ಮೊದಲ್ಗೊಂಡು ಎಂ.ಎ. ವಿದ್ಯಾರ್ಥಿಗಳವರೆವಿಗೆ ಎಲ್ಲರೂ ಒಟ್ಟಾಗಿ ಅಧ್ಯಯನ ಮಾಡುತ್ತಿದ್ದೇವೆ ಎಂಬ ವಾತಾವರಣ ನಿರ್ಮಾಣವಾಗಿತ್ತು. ಯಾಕೆಂದರೆ ಪ್ರತಿವಾರ ವಿಚಾರ ಸಂಕಿರಣಗಳಲ್ಲಿ ಭಾಗಿಯಾಗುತ್ತಿದ್ದೆವು. ಇದು ಜಿ.ಎಸ್. ಶಿವರುದ್ರಪ್ಪನವರು ಕನ್ನಡ ವಿಭಾಗಕ್ಕೆ ಬಂದ ಮೇಲಂತೂ ಮತ್ತಷ್ಟು ಕ್ರಿಯಾಶೀಲವಾಯಿತು. ಇಲ್ಲಿ ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ಸಿ. ವೀರಣ್ಣ, ಶ್ರೀನಿವಾಸ ರಾಜು, ಚಂದ್ರಮೋಹನ್‌ರವರಂಥ

ಹಿರಿಯ ವಿದ್ಯಾರ್ಥಿಗಳಿದ್ದರು. ಹಾಗೆಯೇ ವಿಜಯಲಕ್ಷ್ಮಿಯಂಥವರು, (ವಿಜಯಲಕ್ಷ್ಮಿಯವರು ಕಿರಂರವರನ್ನು ಇನ್ನೂ ಪ್ರೀತಿಸಿ ಮದುವೆಯಾಗಿರಲಿಲ್ಲ) ಹಾಗೆ ನೋಡಿದರೆ ಸೆಂಟ್ರಲ್ ಕಾಲೇಜಿನ ಪ್ರಸನ್ನ ಕುಮಾರ್ ಬ್ಲಾಕ್ಸ್ ಕನ್ನಡ ವಿಭಾಗವಂತೂ ಯಾವಾಗಲೂ ಲವಲವಿಕೆಯನ್ನು ತುಂಬಿಕೊಂಡಿರುತ್ತಿತ್ತು. ಪ್ರೀತಿ-ಪ್ರೇಮದಿಂದ ಮೊದಲ್ಗೊಂಡು ನಾನಾ ರೀತಿಯ ಸಾಹಿತ್ಯಕ ಚರ್ಚೆಗಳವರೆವಿಗೆ. ಕನ್ನಡ ವಿಭಾಗದ ಮೇಲೆಯೇ ಅರ್ಥಶಾಸ್ತ್ರ ವಿಭಾಗವಿದ್ದುದರಿಂದ, ಅದರ ಮುಖ್ಯಸ್ಥರಾಗಿದ್ದ ಪ್ರೊ॥ ವೆಂಕಟಗಿರಿಗೌಡರು ಮತ್ತೊಂದು ರೀತಿಯಲ್ಲಿ ಚೇತೋಹಾರಿಯಾಗಿದ್ದರು. ಎಷ್ಟೋ ಜನ ವಿದ್ಯಾರ್ಥಿಗಳು ಕವನವನ್ನು ಅತ್ಯಂತ ಚೆನ್ನಾಗಿ ಓದುವುದರ ಮೂಲಕ, ಬರೆಯುವುದರ ಮೂಲಕ, ಚರ್ಚಿಸುವುದರ ಮೂಲಕ ಹುಡುಗಿಯರ ಮುಂದೆ ಕೇಂದ್ರಬಿಂದುವಾಗಿ ನಿಲ್ಲುತ್ತಿದ್ದರು. ಅಥವಾ ಭಾವನಾತ್ಮಕ ಹಾಗೂ ಸಂಬಂಧಗಳು ಕೊಂಡಿಗಳನ್ನು ಬೆಳೆಸಿಕೊಳ್ಳುವುದು ಇದೇ ರೀತಿಯಲ್ಲಿರಬಹುದು. ಈ ದೃಷ್ಟಿಯಿಂದ ದೊಡ್ಡರಂಗೇಗೌಡರು ರಾಜೇಶ್ವರಿಯವರನ್ನು ಪದ್ಯವನ್ನು ಓದಿಯೇ ಪ್ರೀತಿ ಪ್ರೇಮವೆಂಬ ಬುಟ್ಟಿಗೆ ಹಾಕಿಕೊಂಡಿರಬಹುದು. ಕನ್ನಡ ವಿಭಾಗದಲ್ಲಿ ಎಷ್ಟೊಂದು ಅಂತರ್ಜಾತೀಯ ಮದುವೆಗಳಾಗಿವೆ. ಅವುಗಳ ಸಾಂಸ್ಕೃತಿಕ ಸಂಬಂಧಗಳನ್ನು ಬರೆದರೆ ನಿಜವಾಗಿಯೂ ರೋಚಕ ಹಾಗೂ ಅರ್ಥಪೂರ್ಣವಾಗಿರಬಹುದು. ಯಾಕೆಂದರೆ ಎಲ್ಲ ಅಂತರ್ಜಾತಿಯ ಮದುವೆಯ ಸಂಬಂಧದಲ್ಲಿ ದಟ್ಟವಾಗಿ ಕೆಲಸಮಾಡುವುದು ವಿಷಾದ ಮತ್ತು ಒಂಟಿತನ. ಈ ಒಂಟಿತನ ಕುರಿತಂತೆ ದೊಡ್ಡರಂಗೇಗೌಡರು ಕೆಲಸಮಾಡುತ್ತಿದ್ದ ಸಿಟಿ ಮಾರ್ಕೆಟ್ ಬಳಿಯ ಎಸ್.ಎಲ್.ಎನ್. ಕಾಲೇಜಿನಲ್ಲಿ ಗೋಪಾಲಕೃಷ್ಣ ಅಡಿಗರು ಅದ್ಭುತ ಉಪನ್ಯಾಸವನ್ನು ಕೊಟ್ಟಿದ್ದರು. ಅಲ್ಲಿಗೆ ಅಂದು ನಾವೆಲ್ಲ ಹೋಗಿದ್ದೆವು. ನನ್ನ ಮೇಲೆ ತುಂಬ ಪ್ರಭಾವ ಬೀರಿದ ಉಪನ್ಯಾಸ. ಸೆಂಟ್ರಲ್ ಕಾಲೇಜಿನಲ್ಲಿ ಕರ್ನಾಟಕ ಸಂಘದ ಸುವರ್ಣ ಮಹೋತ್ಸವದ ಕಾರ್ಯಕ್ರಮ ನಮ್ಮ ಪಾಲಿಗೆ ಸ್ಮರಣೀಯ ಸಂಭ್ರಮವಾಗಿತ್ತು. ಸಂಚಾಲಕರಾಗಿ ದೊಡ್ಡರಂಗೇಗೌಡರು ಕ್ರಿಯಾಶೀಲರಾಗಿ ಓಡಾಡಿದ್ದರು. ಇಲ್ಲಿ ಎಂತೆಂಥ ಚರ್ಚೆ ನಡೆಯಿತು!

ದೊಡ್ಡರಂಗೇಗೌಡರು ತಮ್ಮ ಹಿಂದಿನ ಕೆಲಸವನ್ನು ಬಿಟ್ಟು ಎಸ್.ಎಲ್.ಎನ್. ಕಾಲೇಜಿನಲ್ಲಿ ಉಪನ್ಯಾಸಕರಾದರು. ಆಗ ಅಲ್ಲಿಗೆ ಹೋದಾಗಲೆಲ್ಲ ಪದ್ಯವನ್ನೋ, ಲೇಖನವನ್ನೋ ಓದಲು ಅಥವಾ ಶೂದ್ರಕ್ಕೆ ಕೊಡುತ್ತಿದ್ದರು. ಅಲ್ಲೆಲ್ಲ ನಾನು ಹುಡುಕುತ್ತಿದ್ದುದು 'ಜಗಲಿ ಹತ್ತಿ ಇಳಿದು' ಕವನ ಸಂಕಲನದ ಅನುಭವ ನುಡಿಗಟ್ಟುಗಳನ್ನು ಹಾಗೂ ಕಾವ್ಯದ ಸಾಂದ್ರತೆಯನ್ನು. ಆದರೆ ಇವರು ಈ ಮೂರು ನಾಲ್ಕು ದಶಕಗಳಲ್ಲಿ ಕಾವ್ಯಕ್ಕೆ ಸಂಬಂಧಿಸಿದಂತೆ ನಾನಾ ರೀತಿಯ ಪ್ರಯೋಗಗಳನ್ನು ನಡೆಸುತ್ತ ಬಂದಿದ್ದಾರೆ. ಅಲ್ಲೆಲ್ಲ ತಮ್ಮ ಅನುಭವಗಳನ್ನು ಕಾವ್ಯದಲ್ಲಿ ಬೇರು ಬಿಡಿಸಲು ಹುಡುಕಾಟ ನಡೆಸಿದ್ದಾರೆ. ಇಲ್ಲೆಲ್ಲ ಅವರು ಕಾವ್ಯವನ್ನು ತೆಗೆದುಕೊಂಡ ತೀವ್ರತೆಯನ್ನು ಗುರುತಿಸಬಹುದು. ಆದರೆ ತಮ್ಮ ಅನುಭವದ ಚೌಕಟ್ಟಿಗೆ ಬರದ ಪ್ರಗತಿಪರವೆಂದು ಆರೋಪಿಸಿಕೊಳ್ಳುವ ಕವನಗಳಲ್ಲಿ ಕಾವ್ಯದ ಗೇಯತೆ ಸಾಯುತ್ತದೆ. ಯಾಕೆಂದರೆ ಕಾವ್ಯಕ್ಕೆ

ಬೇಕಾದ ಧ್ವನಿ ಮತ್ತು ಅನುಭಾವದ ನಿಗೂಢತೆಗಳು ಘೋಷಣಾರೂಪದ ಕಾವ್ಯದಲ್ಲಿ ತುಂಬಿಡಲು ಸಾಧ್ಯವಿಲ್ಲ, ನಿಜವಾಗಿಯೂ ಅದನ್ನು ಅನುಭವಿಸಿ; ಅದರಿಂದ ತಲ್ಲಣಗೊಂಡಿದ್ದರೆ ಮಾತ್ರ ಆ ನುಡಿಗಟ್ಟಿನ ನಾದಮಯತೆ ಸಂಬಂಧಪಟ್ಟ ಕವಿಯಲ್ಲಿ ಆವಿರ್ಭವಿಸಲು ಸಾಧ್ಯ.

ಇದೆಲ್ಲ ಏನೇ ಆಗಿರಲಿ ದೊಡ್ಡರಂಗೇಗೌಡರು ಕಾವ್ಯದ ಹುಡುಕಾಟದಲ್ಲಿ ತಮ್ಮನ್ನು ಆರೋಗ್ಯಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆಂಬುದೇ ಮಹತ್ವಪೂರ್ಣವಾದದ್ದು. ಯಾಕೆಂದರೆ ಇವರು ಚಲನಚಿತ್ರಗಳಿಗೆ ಹಾಡುಬರೆದು ಅಲ್ಲಿ ಜನಪ್ರಿಯಗೊಂಡು ಅದರ ನಿಬ್ಬೆರಗಿನಲ್ಲಿ ಕರಗಿಹೋಗದೆ ಹೊರಗೆ ಉಳಿದಿರುವುದು ಅವರ ಕಾವ್ಯದ ಪ್ರೀತಿಯನ್ನು ತೋರಿಸುತ್ತದೆ. ಆದರೆ ಒಮ್ಮೊಮ್ಮೆ ತಮ್ಮ ಕವನಗಳನ್ನು ಓದುವ ಬದಲು ಹಾಡಲು ತೊಡಗಿದಾಗ ಗಾಬರಿಯಾಗುತ್ತದೆ. ಯಾಕೆಂದರೆ ಕಾವ್ಯಕ್ಕೆ ಗೇಯತೆಯನ್ನು ತಂದುಕೊಡುವುದು-ಎಂದರೆ, ಅದರ ಅರ್ಥದ ಗಾಂಭೀರ್ಯತೆಯನ್ನು ಬೆಳೆಸಿದಂತೆ. ಮತ್ತೊಂದು ಮುಖ್ಯ ವಿಷಯ; ಕವಿಯೊಬ್ಬನು ತನ್ನ ಕಾವ್ಯದ ಶಬ್ದಗಳನ್ನು ಎಂದೆಂದಿಗೂ ವ್ಯಾಮೋಹಿಸಲು ಹೋಗಬಾರದು, ಹಾಡುವಿಕೆ ಈ ರೀತಿಯ ದುರಂತಕ್ಕೆ ಪಕ್ಕಾಗಿಸುತ್ತದೆಂಬುದನ್ನು ಪ್ರತಿಯೊಬ್ಬ ಗಂಭೀರ ಕಾವ್ಯರಚನಕಾರ ತಿಳಿದಿರಬೇಕಾಗುತ್ತದೆ. ಇದು ದೊಡ್ಡರಂಗೇಗೌಡರಿಗೆ ಗೊತ್ತಿಲ್ಲದ ವಿಷಯವಲ್ಲ. ಆದರೆ ಆ 'ಗೊತ್ತು' ಎಂಬುದು ಸದಾ ಗೆಳೆಯನಂತೆ ನಮ್ಮೊಡನೆ ಇರಬೇಕಾಗುತ್ತದೆ.

❑



# ಆಕಾಶವಾಣಿ ಕವಿಸಮ್ಮೇಳನದಲ್ಲಿ

● ಡಾ॥ ಎಲ್.ಜಿ. ಸುಮಿತ್ರ

1969ರ ಒಂದು ದಿನ, ಬೆಂಗಳೂರು ಆಕಾಶವಾಣಿಯಲ್ಲಿ ಅಸಿಸ್ಟಂಟ್ ಸ್ಟೇಷನ್ ಡೈರೆಕ್ಟರ್ ಆಗಿದ್ದ ಶ್ರೀಮತಿ ರಾಜಮ್ಮ ಕಲ್ಲೋಳಿಮಠರಿಂದ ಕರೆ ಬಂದಿತು. ನಾನು ಬೆಂಗಳೂರು ಆಕಾಶವಾಣಿಯಲ್ಲಿ ಪ್ರೋಗ್ರಾಂ ಎಕ್ಸಿಕ್ಯೂಟಿವ್ ಆಗಿ ಕೆಲಸ ಮಾಡುತ್ತಿದ್ದ ದಿನಗಳ ಮಾತು. ಅಂದಿನ ದಿನಗಳಲ್ಲಿ ನಾವುಗಳು ಕಾರ್ಯಕ್ರಮಗಳನ್ನು ರೂಪಿಸಿ, ಅವುಗಳಿಗೆ ಸಂಬಂಧಪಟ್ಟ ಆಡಳಿತಾತ್ಮಕ ಕಾರ್ಯಗಳನ್ನು ನೋಡಿಕೊಳ್ಳುವುದೇ ಅಲ್ಲದೆ ಸ್ವತಃ ಕಾರ್ಯಕ್ರಮಗಳನ್ನು ರಚಿಸಿ, ನಿರ್ದೇಶಿಸಿ ಪ್ರಸಾರ ಮಾಡುತ್ತಲೂ ಇದ್ದೆವು-ಇಂದಿನ ಪ್ರೊಡ್ಯೂಸರರುಗಳಂತೆ. ನನ್ನ ವಿದ್ಯಾರ್ಥಿ ದೆಸೆಯಿಂದಲೂ ಕಲಾವಿದಳಾಗಿ, ಅನಂತರ 1958ರಿಂದ ಯು.ಪಿ.ಎಸ್.ಸಿ.ಯಿಂದ ಆಯ್ದು ಬಂದ ಪ್ರೋಗ್ರಾಂ ಎಕ್ಸಿಕ್ಯೂಟಿವ್ ಆಗಿ ಕಾರ್ಯನಿರ್ವಹಿಸಿದ್ದರಿಂದ ಆಕಾಶವಾಣಿಯ ಎಲ್ಲರಿಗೂ ನನ್ನ ಹಾಗೂ ನನ್ನ ಕಾರ್ಯಕ್ಷೇತ್ರದ ಪರಿಚಯ ಸಾಕಷ್ಟಿತ್ತು. ರಾಜಮ್ಮನವರಿಂದ ಕರೆಬಂದ ಸಮಯದಲ್ಲಿ ವಾಣಿಜ್ಯ ವಿಭಾಗದಲ್ಲಿ ಕಾರ್ಯನಿರ್ವಾಹಕಿಯಾಗಿದ್ದರೂ, ಮುಖ್ಯವಾಹಿನಿಯಲ್ಲಿ ಸಂಗೀತರೂಪಕ ಇತ್ಯಾದಿಗಳನ್ನು ಆಗಾಗ ಪ್ರಸಾರ ಮಾಡುತ್ತಿದ್ದದ್ದರಿಂದ, ಅಂತಹ ಯಾವುದೇ ಕಾರ್ಯಕ್ಕಾಗಿ ಕರೆದಿದ್ದಾರೆ ಎಂದುಕೊಂಡಿದ್ದೆ. ಆದರೆ ಸಂದರ್ಭ ಬೇರೆ ಆಗಿತ್ತು.

ಆಹ್ವಾನಿತ ಶ್ರೋತೃಗಳ ಸಮ್ಮುಖದಲ್ಲಿ ಪ್ರಸಾರವಾಗಬೇಕಾಗಿದ್ದ ಕವಿಸಮ್ಮೇಳನಕ್ಕೆ ಊಹಿಸದಿದ್ದ ಒಂದು ತೊಡಕು ಬಂದಿತ್ತು. ಈ ಕವಿ ಸಮ್ಮೇಳನದಲ್ಲಿ ಅಂದಿನ ಪ್ರಮುಖ ಕವಿಗಳು ಭಾಗವಹಿಸುವವರಿದ್ದರು. ಇಂತಹ ಸಮ್ಮೇಳನಗಳನ್ನು ಪ್ರಸಾರಕ್ಕಾಗಿ ಮೊದಲೇ ಧ್ವನಿಮುದ್ರಿಸಿಕೊಳ್ಳುವುದು ವಾಡಿಕೆಯಾಗಿತ್ತು. ಒಬ್ಬ ಮುಖ್ಯಕವಿ, ತನ್ನನ್ನು ಅಧ್ಯಕ್ಷನನ್ನಾಗಿ ಮಾಡದೆ ಬೇರೊಬ್ಬರನ್ನು ಮಾಡಿದ್ದಕ್ಕಾಗಿ ಮುನಿಸಿಕೊಂಡು ಹೊರ ನಡೆದಿದ್ದರು. ಸಾಹಿತ್ಯಕ್ಷೇತ್ರದಲ್ಲೂ ಇನ್ನಿತರ ಕ್ಷೇತ್ರಗಳಂತೆಯೇ ಇಂತಹ ಅಸಂಗತಗಳು ಅನಿವಾರ್ಯ. ಇಲ್ಲಿ ಪ್ರಾಯಶಃ ಭಾವ ಸೂಕ್ಷ್ಮತೆಗಳು ಅಗಾಧವೇ. ಆತನ ಮನಸ್ಸು ಒಲಿಸಿ ಕರೆತರುವುದು ಸಾಧ್ಯವಾಗಿರಲಿಲ್ಲ, ನನಗೆ ಬೆಂಗಳೂರಿನ ಸಾಹಿತಿಗಳ ಪರಿಚಯ ಸಾಕಷ್ಟಿತ್ತು, ಅಲ್ಲದೆ ಇಂತಹ

ಕಾರ್ಯಕ್ರಮಗಳ ನಿರ್ವಹಣೆಯ ಅನುಭವವೂ ಸಾಕಷ್ಟಿತ್ತು ಎಂಬ ಕಾರಣದಿಂದ ರಾಜಮ್ಮನವರು ಪರ್ಯಾಯ ವ್ಯವಸ್ಥೆ ಮಾಡಲು ನನ್ನನ್ನು ಕರೆಸಿದ್ದರು.

ತಕ್ಷಣವೇ ನನ್ನ ಮನಸ್ಸಿಗೆ ಬಂದದ್ದು ಯುವ ಕವಿ ದೊಡ್ಡರಂಗೇಗೌಡರು. ಸುಮಾರು 23ವಯಸ್ಸಿನ ತರುಣಕವಿ. ಮೊದಲನೆಯ ಆನರ್ಸ್‌ನಲ್ಲಿ ಓದುತ್ತಿದ್ದವರು. ನಾನು ಸುಮಾರು ಸಮಯ ''ಯುವವಾಣಿ''ಯನ್ನು ವ್ಯವಸ್ಥೆಮಾಡಿ ನಡೆಸುತ್ತಿದ್ದಾಗ ಕಂಡುಕೊಂಡ ಅನೇಕ ಯುವ ಕಲಾವಿದರಲ್ಲಿ ಬಹು ಪ್ರತಿಭಾವಂತರೆಂದು ಕಂಡು ಬಂದ ಕವಿ. ''ಈ ಯುವಕವಿ ತನ್ನ ಕವಿತಾ ವಾಚನದಿಂದ ಕವಿ ಸಮ್ಮೇಳನವನ್ನು ತುಂಬಬಲ್ಲರು'' ಎಂದು ಸೂಚಿಸಿದೆ. ಹಿರಿಯ ಕವಿಗಳ ನಡುವೆ ಯುವಕವಿಯೆ? ಸಂದೇಹ ಸಹಜವೆ. ಆದರೆ ಕವಿತೆಗೆ ವಯಸ್ಸೇನು? ಪ್ರತಿಭೆಗೆ ಯೌವನೋತ್ಸಾಹವಿದ್ದು ಆಳವೂ ಇದ್ದರೆ ಯಾಕಾಗಬಾರದು? ರಾಜಮ್ಮನವರೂ ಯುವಪ್ರತಿಭೆಗಳನ್ನು ಬೆನ್ನುತಟ್ಟಿ ಪ್ರೋತ್ಸಾಹಿಸುವವರೇ. ಅವರೂ ಒಪ್ಪಿದರು. 23ರ ಯುವಕ ಯಾವ ಅಳುಕೂ ಇಲ್ಲದೆ, ಹಿರಿಯ ಕವಿಗಳ ನಡುವೆ ಕುಳಿತು ಕವಿಸಮ್ಮೇಳನದಲ್ಲಿ ಭಾಗವಹಿಸಲು ಒಪ್ಪಿದರು. ಅಷ್ಟು ಕಮ್ಮಿ ಸಮಯದಲ್ಲಿ ತಮ್ಮ ಒಳ್ಳೆಯ ಕವಿತೆಗಳನ್ನು ಆರಿಸಿಕೊಂಡು ಬಂದರು. ಆ ದಿನ ಈ ಯುವಕವಿ ಮಿಕ್ಕೆಲ್ಲ ಹಿರಿಯರ ನಡುವೆ ತಮ್ಮ ಕವಿತೆಯನ್ನು ಪ್ರಸಾರ ಮಾಡಿದರು. ಸಾಹಿತ್ಯ ಪ್ರಪಂಚದಲ್ಲಿ ತಮ್ಮ ಸ್ಥಾನ ಭದ್ರ ಮಾಡಿಕೊಂಡರು. ಆಹ್ವಾನಿತರೂ, ಪ್ರಸಾರವನ್ನು ಕೇಳಿ ಶ್ರೋತೃಗಳೂ ಯುವಕವಿ ದೊಡ್ಡರಂಗೇಗೌಡರ ಕವಿತೆಗಳನ್ನು ಮೆಚ್ಚಿಕೊಂಡರು.

ಈ ಮುಂಚೆ ಯುವವಾಣಿಯಲ್ಲಿ 15 ನಿಮಿಷಗಳ ಪ್ರಸಾರದಲ್ಲಿ 10 ಪದ್ಯಗಳನ್ನು ಪ್ರಸಾರಮಾಡಿದ್ದರು ದೊಡ್ಡರಂಗೇಗೌಡರು. ಅಂದು ಅವರ ಪ್ರತಿಭೆಯನ್ನು ಕಂಡು ಈ ಪ್ರಸಾರಕ್ಕೆ ಅವರನ್ನು ಆಹ್ವಾನಿಸಿದ್ದು ನನಗೆ ನನ್ನ ವೃತ್ತಿಜೀವನದಲ್ಲಿ ತೃಪ್ತಿತಂದುಕೊಟ್ಟ ಅನುಭವ ಆಯಿತು.

ಆಹ್ವಾನಿತರ ಮುಂದೆ ನಡೆದ ಕವಿಗೋಷ್ಠಿ ಪ್ರಾರಂಭವಾಗುವ ಮುಂಚೆಯೇ ವಾಣಿಜ್ಯ ವಿಭಾಗಕ್ಕೆ ನಾನು ಓಡಿಬರಬೇಕಾದದ್ದು ಬೇರೊಂದು ಸ್ವಾರಸ್ಯಕರ ಪ್ರಸಂಗ. ಧ್ವನಿ ಮುದ್ರಿತ ಪ್ರಸಾರವನ್ನು ಕೇಳಿದೆ. ಈ ಯುವಕ ಕವಿ ಬಹು ಎತ್ತರವನ್ನು ಮುಟ್ಟುತ್ತಾರೆ ಎಂಬ ಭರವಸೆ ಗರಿಗೆದರಿತು. ಆ ಭರವಸೆಯನ್ನು ನಿಜ ಮಾಡಿದ್ದಾರೆ ಶ್ರೀ ದೊಡ್ಡರಂಗೇಗೌಡರು ಅಲ್ಲದೆ, ಅಂದಿನ ದಿನವನ್ನು ಅವರು ಇಂದೂ ನೆನೆಸಿಕೊಳ್ಳುತ್ತಿರುವುದು ಅವರ ದೊಡ್ಡತನ.

❑



# ‘ದೊಡ್ಡ’ ಕವಿಭಾವಗಳ ‘ರಂಗೇಗೌಡರು’

• ಭಾರತೀ ಕಾಸರಗೋಡು

ಇವರು ಗೌಡರು
ಬರೇ ಗೌಡರಲ್ಲ.... ರಂಗೇಗೌಡರು.
ಅಷ್ಟು ಮಾತ್ರವೇ ಅಲ್ಲ; ದೊಡ್ಡರಂಗೇಗೌಡರು!

ಈ ಮಾತಾದರೆ ಸತ್ಯ. ಸಾಹಿತ್ಯ ಸಾಧನೆಯಲ್ಲಿ, ಕವಿಮನಸ್ಸಿನ ಹೂ ಭಾವನೆಗಳಲ್ಲಿ ಸುಮಸುಂದರ ಅಭಿವ್ಯಕ್ತಿ ಶಕ್ತಿಗಳಲ್ಲಿ ಈ ವ್ಯಕ್ತಿ ದೊಡ್ಡವರೇ ಹೌದು.

ಸೌಮ್ಯ ಚಹರೆಗಳ ಮೆಲುಮಾತುಗಳ ‘ದೊರಂಗೌ’ ನನಗೆ ಪರಿಚಯವಾದದ್ದು ನನ್ನ ತಂದೆ ಸಮೇತನಹಳ್ಳಿ ರಾಮರಾಯರಿಗೆ ಎಂಭತ್ತು ತುಂಬಿದಾಗ ಅವರಿಗೊಂದು ಅಭಿನಂದನ ಗ್ರಂಥವನ್ನು ಪ್ರಕಟಿಸಿದ ಸಂದರ್ಭದಲ್ಲಿ. ಈ ಪುಸ್ತಕಕ್ಕೆ ಅವರಿಂದ ಒಂದು ಲೇಖನವನ್ನು ಬರೆಸಲೇಬೇಕೆಂಬುದು ನಮ್ಮ ಅಭಿಲಾಷೆ. ಹೀಗಂತ ಅವರಿಗೊಂದು ಪತ್ರವನ್ನು ಬರೆದೆ. ಕೂಡಲೇ ಸಕಾರಾತ್ಮಕ ಪ್ರತ್ಯುತ್ತರ ಬಂತು ಸಹೃದಯವೂ ಸವಿನಯವೂ ಆದ ಮಾತುಗಳಲ್ಲಿ! ಜತೆಗೆ ಆಗ ಯುಗಾದಿಯ ಸಂದರ್ಭ. ಹೊಸ ವರುಷಕ್ಕೆ ನಲ್ಮೆಯ ಶುಭಾಶಯವನ್ನು ಕೋರುವ ಪುಟ್ಟದೊಂದು ಪದ್ಯ ಬೇರೆ! ಇಂಥ ನೆನಪುಗಳು ಮನಸ್ಸನ್ನು ತುಂಬುತ್ತವೆ.

ನನ್ನ ತಂದೆಗೆ ಈ ತರುಣ ಕವಿಯಲ್ಲಿ ಅಪಾರ ಮೆಚ್ಚುಗೆ. ‘‘ಏನೆಷ್ಟು ಚೆನ್ನಾಗಿ ಬರೀತಾನೆ ಈ ಹುಡುಗ!’’ ಉದ್ಗರಿಸುತ್ತಿದ್ದರು. ತಮ್ಮ ಪ್ರೀತಿ ಹಾಗೂ ಅಭಿಮಾನವನ್ನು ಅವರು ಈ ಯುವ ಕವಿಗೆ ತಿಳಿಸಿದ್ದಿರಲೂಬಹುದು. ‘ದೊರಂಗೌ’ಗೆ ನನ್ನ ತಂದೆಯಲ್ಲಿ ಅಷ್ಟೇ ಅಭಿಮಾನ, ಗೌರವ. ಅವರದನ್ನು ಕೃತಿ ರೂಪದಲ್ಲಿಯೂ ತೋರಿಸಿಕೊಟ್ಟರು. ‘ರಾಸದರ್ಶನ’ಕ್ಕೆ ಅವರು ತಮ್ಮ ಕುಟುಂಬದಿಂದ ಒಟ್ಟು ಮೂರು ಲೇಖನಗಳನ್ನು ಕಳಿಸಿಕೊಟ್ಟರು. ‘ದೊರಂಗೌ’ ಅವರದೊಂದು: ಲೇಖಕಿಯೂ ಪ್ರಾಧ್ಯಾಪಕಿಯೂ ಆಗಿರುವ ಮಡದಿ ರಾಜೇಶ್ವರಿಗೌಡ ಅವರದೊಂದು;

ಮತ್ತೊಂದು, ತಾಯಿ-ತಂದೆಯರ ಹಾದಿಯಲ್ಲಿಯೇ ಯಶಸ್ವಿಯಾಗಿ ಹೆಜ್ಜೆ ಹಾಕುತ್ತಿರುವ ಜಾಣಮಗ ಡಿ. ಭರತ್ ಅವರದು. ಈ ಮೂರೂ ಲೇಖನಗಳು ಒಟ್ಟಿಗೇ ಕೈ ಸೇರಿದಾಗ ನನ್ನ ಸಂತೋಷ-ಕೃತಜ್ಞತೆ ಹೇಳತೀರದು.

ಕೃಪಣತನವಿಲ್ಲದ 'ದೊರಂಗೌ' ಅಪಾರ ಸಾರಗ್ರಾಹಿತನ ಮತ್ತು ಅದನ್ನು ಎತ್ತಿ ಹಿಡಿಯುವ ಅವರ ಗುಣವಂತ ಭಾಷೆ ನನಗೆ ಮೆಚ್ಚುಗೆ. 'ರಾಸಲೀಲೆ : ಒಂದು ಅವಲೋಕನ' ಅನ್ನುವ ಅವರ ಲೇಖನದಲ್ಲಿ ನನ್ನ ತಂದೆಯ ಬಗ್ಗೆ ಹೇಳುತ್ತಾರೆ.

''ಸಮೇತನ ಹಳ್ಳಿ ರಾಮರಾಯರ ಬರವಣಿಗೆ ಓದುವುದೆಂದರೆ ಸೀಕರಣೆ ಸವಿದಂತೆ... ಅವರು ರಮ್ಯಮಾರ್ಗದಲ್ಲಿ ಯಶಸ್ವಿಯಾಗಿ ಕೃತಿಗಳನ್ನು ರಚಿಸಿದವರು. ಅಭಿಜಾತ ಶೈಲಿಯಲ್ಲಿ ಮುನ್ನಡೆದು ಔನ್ನತ್ಯ ಸಾಧಿಸಿದವರು. ಮೌಲ್ಯಗಳ ಬಗ್ಗೆ ಅಪಾರ ಕಾಳಜಿ ತೋರಿದವರು. ಸಾಹಿತ್ಯ ಕೃತಿ ಮೂಲತಃ ಕಲಾಕೃತಿಯೂ ಆಗಿರಬೇಕೆಂದು ಜಾಗೃತಿ ವಹಿಸಿದವರು.''

ಈ ಕಡೆಯ ವಾಕ್ಯ ಇದೆಯಲ್ಲ, ಅದು ಬಹು ಸಮರ್ಪಕವಾಗಿ 'ದೊರಂಗೌ' ಅವರಿಗೂ ಅನ್ವಯಿಸುತ್ತದೆ. ತಾವು ಸ್ವತಃ ಕಲಾಕೃತಿ ನಿರ್ಮಾಣದಲ್ಲಿ ಪಳಗಿರುವುದರಿಂದ ಮತ್ತು ಅದರ ಶ್ರಮವನ್ನು ಬಲ್ಲವರಾದ್ದರಿಂದ ಇತರರ ಕಲಾಕೃತಿಗಳನ್ನು ನಿರ್ಮಲವಾಗಿ ಆನಂದಿಸುತ್ತಾರೆ.

ಇದೇ ಲೇಖನದಲ್ಲಿ ಅವರು ಕೃಷ್ಣನನ್ನು ವರ್ಣಿಸುವ ಪ್ರಸಂಗವೊಂದನ್ನು ಗಮನಿಸಬೇಕು. ಸಾಮಾನ್ಯವಾಗಿ ಕೃಷ್ಣನ ವಿಷಯದಲ್ಲಿ ಯಾರೂ ಬರೇ 'ಕೃಷ್ಣ' ಅಂದು ಒಂದು ಪದದಲ್ಲಿ ಮುಗಿಸಿಬಿಡುವುದಿಲ್ಲ. ಅವನ ಹಿಂದೆ ಗುಚ್ಛಗುಚ್ಛ ಗುಣವಾಚಕಗಳು ಇದ್ದೇತೀರಬೇಕು. ದೊರಂಗೌ ಅವರ ಬಣ್ಣನೆಯನ್ನು ಗಮನಿಸಿ ''ನೀಲ ವರ್ಣದ ಕಿಂಕಿಣಿ ಕಿರುಗೆಜ್ಜೆ ಪೋಣಿಸಿದ ಸುಂದರ ಸುಕೋಮಲ ಒಡ್ಯಾಣದ ಬೆಣ್ಣೆ ಕದಿವ... ಕೃಷ್ಣ'' ಸಾಹಿತ್ಯ ಸಂಸ್ಕಾರದಿಂದ ಸಂಪನ್ನವಾದ ಅಂತಃಕರಣ ಲೇಖಕರದು. ಇಂಥ ಮನೋಹರ ವರ್ಣನೆಗಳಿಂದ ವ್ಯಕ್ತಿಗಳನ್ನು ಚಿತ್ರಗಳನ್ನು ಕಣ್ಮುಂದೆ ಕಡೆದು ನಿಲ್ಲಿಸುತ್ತಾರೆ.

ಶಿಕ್ಷಣ ಕ್ಷೇತ್ರದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಹೇಗೋ ಹಾಗೆ ಸಿನಿಮಾ ಜಗತ್ತಿನಲ್ಲಿ ಕೂಡ 'ದೊಡ್ಡ' ಹೆಸರು ದೊಡ್ಡರಂಗೇಗೌಡ ಅವರದು. ಚಿತ್ರಗೀತೆಗಳಿಗೆ ಒಂದು ಸುಂದರ ಆಯಾಮವನ್ನು, ಕವಿಸ್ಪರ್ಶವನ್ನು ಕೊಟ್ಟವರು ದೊಡ್ಡರಂಗೇಗೌಡರು. ಪ್ರೇಮವೇ ಆಗಲಿ, ವಿರಹವಾಗಲಿ, ಪ್ರಕೃತಿವರ್ಣವಾಗಲಿ, ಅವರ ಮನಸ್ಸು ಎಷ್ಟು ಆರ್ದ್ರವಾಗಿ ಆಲೋಚಿಸುತ್ತಾರೆ! ಸುಂದರ ಪದಗುಚ್ಛಗಳಲ್ಲಿ ಮಧುರವಾಗಿ ಉಲಿಯುತ್ತದೆ! ತಮ್ಮ ಮನೋಹರ ಮಾತುಗಳಿಂದ ಸುಸಂಸ್ಕೃತ ಮನಸ್ಸುಗಳನ್ನು ಗೆದ್ದವರು ಗೌಡರು. ದಶಕಗಳ ಹಿಂದಿನ ಅವರ ಅನೇಕ ಹಾಡುಗಳು ಇಂದಿಗೂ ನನ್ನ ನಾಲಿಗೆಯ ಮೇಲಿವೆ. ಅವರು ರಚಿಸುವ ಚಿತ್ರಗೀತೆಗಳು ಸಿನಿಮಾಕ್ಕಷ್ಟೇ ಸೀಮಿತವಾದ

ಸಾಮಾನ್ಯ ರಚನೆಗಳಲ್ಲ; ರಸಿಕರ ಮನಸ್ಸುಗಳಲ್ಲಿ ಬಹುಕಾಲ ಉಳಿಯುವ ಮಧುರ ಗೀತೆಗಳು ಅವು! ''ತೇರ ಏರಿ ಅಂಬರದಾಗೆ ನೇಸರು ನಗುತಾನೆ', 'ನಮ್ಮೂರ ಮಂದಾರ ಹೂವೇ', 'ನೋಟದಾಗೆ ನಗೆಯ ಮೀಟಿ...' ಮುಂತಾದವುಗಳ ಕಾವ್ಯಸೌಂದರ್ಯವನ್ನು ಆಸ್ವಾದಿಸಿಯೇ ತಿಳಿಯಬೇಕು.

ಸಮಕಾಲೀನ ಕಾವ್ಯ ಸಂದರ್ಭದಲ್ಲಿ 'ದೊರಂಗೌ' ಅವರು ಸಲ್ಲಿಸಿರುವ ಕೊಡುಗೆ ವಿಶಿಷ್ಟವಾದದ್ದು ''ಪದ್ಯವೆಂದರೆ ಹೀಗಿರಬೇಕು'' ಯಾರಾದರೂ ಧೈರ್ಯವಾಗಿ ಉದಹರಿಸಬಲ್ಲಷ್ಟು ಸೊಗಸಾಗಿವೆ ಅವರ ಕವನಗಳು. ಅವು ಮಧುರವಾಗಿವೆ ಮಾರ್ಮಿಕವಾಗಿವೆ. ದೊಡ್ಡರಂಗೇಗೌಡರ ಕಾವ್ಯದ ಪ್ರಮುಖ ಲಕ್ಷಣವೆಂದರೆ ಕವಿಮನಸ್ಸಿನ ಸುಸಂಸ್ಕೃತ ಲಹರಿಗಳು. ಅವು ಶುದ್ಧ ಮುಗ್ಧ ಮತ್ತು ಪ್ರಬುದ್ಧ! ಅವರು ಜನಮನಕ್ಕೆ ಪ್ರಿಯರಾಗಿರುವುದು ತಮ್ಮ ಈ ಪರಿಶುದ್ಧ ಸಾಹಿತ್ಯ ಸ್ವಭಾವದಿಂದ: ಅಸೀಮವಾದ ಜೀವನ ಪ್ರೀತಿಯಿಂದ. ''ವಿರಹ ಬೇಸಗೆಯಲ್ಲಿ ನೆನಪುಗಳ ಮಳೆಗಾಲ!'' ಎಂದು ತಾಪವನ್ನೂ ತಂಪಾಗಿ ವ್ಯಾಖ್ಯಾನಿಸಬಲ್ಲವರು ಅವರು! ''ಬಂಗಾರದ ಬಣ್ಣವೆಲ್ಲ ಬಾನಲ್ಲಿ ತೇಲಿದೆ। ಸಾಲಾಗಿ ಹಕ್ಕಿ ಹಿಂಡು ಒಮ್ಮೆಲೆ ಹಾರಿದೆ। ಸಂಜೆ ಚೆಲುವಾಗಿ ಹೊತ್ತು ತಂಪಾಗಿ। ಇರುಳು ಇಣುಕಿದೆ'' ಎಂಬಂಥ ಸಂಭ್ರಮದ ಕವಿಭಾವಗಳಲ್ಲಿ ಪರವಶರಾಗಬಲ್ಲವರು.

''ಮಳೆಯು ಬಂದ ಮಾರನೇದಿನ
ಮಿಂಚ ಹಂಚಿದೆ ಹೂಬನ
ಕಣ್ಣ ಕವಣೆಗೆ ಮಣ್ಣ ಹೊಸತನ
ಕಂಡು ಹಿಗ್ಗಿದೆ ಮೈಮನ''

ಎಂದು ಮಳೆ ತರುವ ಪುಳಕಗಳನ್ನೂ ತಲ್ಲಣಗಳನ್ನೂ ರಮಣೀಯವಾಗಿ ಅಕ್ಷರಕ್ಕಿಳಿಸಬಲ್ಲವರು. ಕಾವ್ಯದ ಇಂಥ ಚೆಲುವಲ್ಲಿ ಮಿಂದು ನಮ್ಮ ಮನಸ್ಸು ಕೂಡ ತಂಪಾಗಿ ಬಿಡುವುದು ಕವನದ ಸಾರ್ಥಕತೆ. ಮೌಲ್ಯಗಳನ್ನು ಬದುಕಿನ ಸವಿಗಳನ್ನು 'ದೊರಂಗೌ' ಮನತುಂಬಿ ಆಸ್ವಾದಿಸಬಲ್ಲರು. ಅದಕ್ಕೊಂದು ಚೆಲುವಾದ ಉದಾಹರಣೆ ಇಲ್ಲಿದೆ ನೋಡಿ:

''ಎಲ್ಲೋ ಹೊರಟಿದ್ದವನು ನಗೆ ಮಲ್ಲಿಗೆಗೆ ಎದುರಾದೆ
ಮಲ್ಲಿಗೆಯ ಜೊತೆಯಲ್ಲಿ ಪ್ರೀತಿ ಪೌರ್ಣಮಿ ಕಂಡೆ''
ಬದುಕಿನ ಚಂದಕ್ಕೆ ಇನ್ನೇನು ಬೇಕು?

ಬದುಕಿನ ಬವಣೆಗಳನ್ನೆಲ್ಲ ಅಲ್ಲಿಂದಲ್ಲೆ ಎದುರಿಸುತ್ತ ಜತೆಜತೆಗೆ ಬದುಕಿನ ಬಣ್ಣಗಳನ್ನು

ಮುಕ್ತವಾಗಿ ಆಸ್ವಾದಿಸುತ್ತ ಆ ನಿರ್ಮಲ ಸಂತೋಷವನ್ನು ಸುತ್ತಮುತ್ತ ಹಂಚುತ್ತಾ ಮೇಲೇರಿ ಬಂದವರು ದೊಡ್ಡರಂಗೇಗೌಡರು.

"ಹಾಡು ಬರೆಯುವ ಮುನ್ನ ಪಾಡುಪಟ್ಟವನು ನಾನು
ಹಾಡು ಬರೆದ ಮೇಲೂ ಗೋಳು ಕಂಡವನು"

ಎಂಬ ವಿಷಾದ ಇದ್ದರೂ,

"ಸಾವಿಲ್ಲ ಭೂಮಿಗೀತಕ್ಕೆ
ಕೊನೆಯಿಲ್ಲ ಕವಿಯ ಕಾವ್ಯಕ್ಕೆ"
ಅನ್ನುವುದು ಅವರಿಗೆ ಗೊತ್ತು. ಅವರ ಈ ಭರವಸೆ
ಕನ್ನಡದ ಭಾಗ್ಯ.



ಒಲವಿನ ಕವಿ, ಸಮರ್ಥಗೀತರಚನಕಾರ ಎಲ್ಲಕ್ಕಿಂತ ಮಿಗಿಲಾಗಿ ವಿದ್ಯಾರ್ಥಿಗಳ ಪ್ರೀತಿಯ ಮೇಷ್ಟ್ರು 'ದೊರಂಗೌ' ಅವರಿಗೆ ಹತ್ತು ಹಲವು ಪ್ರತಿಷ್ಠಿತ ಪ್ರಶಸ್ತಿಗಳು ಸಂದಿವೆ. ಆದರೆ ಪ್ರಶಸ್ತಿಗಳ ಯೋಗ್ಯತೆಯನ್ನು ಮೀರಿ ಅವರು ಬೆಳೆಯಬೇಕು. ತಂಗಾಳಿಯಂತೆ, ಸುಗಂಧದಂತೆ ಆಪ್ಯಾಯಮಾನವಾಗಿರುವ ತಮ್ಮ ಚೆಲುಮಾತುಗಳಿಂದ ಹೆಚ್ಚು ಹೆಚ್ಚು ಸಹೃದಯರನ್ನು ತಲುಪಬೇಕು. ಇದೇ ನಿಜವಾದ ಸಾರ್ಥಕ ಭಾವ.





# ಒಂದೇ ಭಾವ, ಎರಡು ಜೀವ!

**• ಗೋವಿಂದಳ್ಳಿ ದೇವೇಗೌಡ**

ನನ್ನ ಕನ್ನಡಮ್ಮನ ಸೇವೆಗೆ ಪ್ರಪ್ರಥಮವಾಗಿ ಅಭಿರುಚಿ, ಆಸಕ್ತಿ, ಸ್ಫೂರ್ತಿ ಸ್ವಾಭಿಮಾನ ಮೂಡಿಸಿದವರೆಂದರೆ ರಾಷ್ಟ್ರಕವಿ ಕುವೆಂಪು, ಡಾ|| ರಾಜ್‌ಕುಮಾರ್, ಡಾ|| ದೇ.ಜ.ಗೌ. ಮುಂತಾದ ಹಿರಿಯ ಚೇತನಗಳ ಪೈಕಿ ಡಾ|| ದೊಡ್ಡರಂಗೇಗೌಡರು ಒಬ್ಬರು. ಗೌಡರು ನನ್ನ ಹತ್ತಿರದ ಪರಿಚಯ. ಮೂರು ದಶಕಗಳಾದರೂ ಅವರ ಭಾವಗೀತೆಗಳನ್ನು ಆಕಾಶವಾಣಿಯಲ್ಲಿ ಕೇಳಿ ಭಾವಪರವಶನಾಗಿ ಆಶ್ಚರ್ಯಪಟ್ಟಿದ್ದೇನೆ. ಆನಂದಿಸಿದ್ದೇನೆ. ಅಭಿನಂದಿಸಿದ್ದೇನೆ. ಆ ಗೀತೆಗಳ ಭಾವನೆಯನ್ನು ಒಂದು ಕಿವಿಯಲ್ಲಿ ಕೇಳಿ ಮತ್ತೊಂದು ಕಿವಿಯಲ್ಲಿ ಬಿಡುವ ಡಾಂಭಿಕ ನಾನಾಗದೆ ಹೃದಯದಲ್ಲಿ ಅಡಗಿಸಿಕೊಂಡು, ಮನಸ್ಸಿನಲ್ಲಿ ಆಗಾಗ್ಗೆ ಚಿಂತಿಸುತ್ತಾ ಆತ್ಮಕ್ಕೆ ಒಪ್ಪಿಸುತ್ತಾ ಅವರಂತೆ ನಾನು ಒಬ್ಬ ಜನಪರ ಕವಿಯಾಗಬೇಕು, ಅವರ ಆದರ್ಶಗಳನ್ನು ಅನುಸರಿಸಬೇಕೆಂಬ ಹಂಬಲ ಸದಾ ನನ್ನಲ್ಲಿ ಮೈಮನ ತುಂಬಿಕೊಂಡಿತ್ತು.

ಏಕೆಂದರೆ ನಾವಿಬ್ಬರೂ ಹಳ್ಳಿಗಾಡಿನಲ್ಲಿ ಮಣ್ಣಿನ ರೈತ ಕುಟುಂಬದಲ್ಲಿ ಜನಿಸಿ ಮಣ್ಣಿನ ವಾಸನೆಯನ್ನು ಚೆನ್ನಾಗಿ ಸವಿದವರು. ಮೈಕೈಗಳನ್ನು ಕೆಸರಿನಲ್ಲಿ ನೆನೆಸಿದವರು. ದನಗಳನ್ನು ಮೇಯಿಸುತ್ತಾ ಸಗಣಿಯನ್ನು ತಲೆ ಮೇಲೆ ಹೊತ್ತವರು. ಹೊಲಗದ್ದೆ ಉತ್ತವರು, ಈ ರೀತಿ ಒಂದೇ ಕುಲದಲ್ಲಿ, ಒಂದೇ ನೆಲದಲ್ಲಿ, ಒಂದೇ ನಾಡಿನಲ್ಲಿ ಒಂದೇ ಗಾಳಿ, ಒಂದೇ ನೀರು, ಒಂದೇ ಆಹಾರ ಸೇವಿಸಿ, ಒಂದೇ ಭಾವನೆಯನ್ನು ಹೃದಯದಲ್ಲಿ ತುಂಬಿಕೊಂಡವರು. ಇದು ಕೇವಲ ಭಾವನೆಯಾಗಿ ಉಳಿದುಕೊಂಡಿಲ್ಲ, ಈ ಭಾವನೆಯೆಲ್ಲಾ ಆವಾಹನೆಯಾಗಿ, ಆವಾಹನೆಯಿಂದ ಆತ್ಮೀಯರಾಗಿ, ಹತ್ತಿರದಿಂದ ಕೂಡಿ ಬಾಳಲು ಗೋಕಾಕ ಚಳವಳಿಯ ಸಂದರ್ಭ ನೆರವಾಯಿತು. ತಾಯಿ ಭುವನೇಶ್ವರಿ ಆಶೀರ್ವಾದದಿಂದ ನಾವಿಬ್ಬರೂ ಒಂದಾಗಿ ಪರಸ್ಪರ ಮುಖಾಮುಖಿ ಸಂದರ್ಶಿಸಲು ಅವಕಾಶ ಮಾಡಿಕೊಟ್ಟ ತಾಯಿ ಕನ್ನಡಾಂಬೆಗೆ ಸಾಸಿರ, ಸಾಸಿರ ವಂದನೆಗಳು.

ನಾನು ಜೀವನದಲ್ಲಿ ನಿರಾಶೆ, ಹತಾಶೆ, ನಿರುತ್ಸಾಹ, ಬೇಸರವನ್ನೇ ತುಂಬಿಕೊಂಡಿದ್ದ

ಸಂದರ್ಭದಲ್ಲಿ ಉತ್ಸಾಹ, ಸ್ವಾಭಿಮಾನ, ಚೇತನ ತುಂಬಿದ ಆತ್ಮೀಯ ಬಂಧು. ಡಾ॥ ದೊಡ್ಡರಂಗೇಗೌಡರು. ಅಂದರೆ ಅವರ ಕವಿತ್ವ. ಅವರ ಕವಿತ್ವದ ಭಾವನೆಗಳನ್ನು ಚಿತ್ರಗೀತೆಗಳ ಮೂಲಕ, ಧ್ವನಿಸುರಳಿಗಳ ಮೂಲಕ, ಪುಸ್ತಕದ ಮೂಲಕ ಕೇಳಿ, ಓದಿ, ಹಗಲಿರುಳು ಚಿಂತಿಸುತ್ತಾ ಅವರ ಭಾವನೆಗಳಂತೆಯೇ ನನ್ನ ಕವನ, ಕೃತಿಗಳೂ ಸಹ ರಚಿತವಾದುವು. ಜೊತೆಜೊತೆಗೆ ಅವರ ನನ್ನ ಸ್ನೇಹ, ಕಾವ್ಯ ರಚನೆಗೆ ಮೀಸಲಾಗಲಿಲ್ಲ. ಜನ್ಮ ಜನ್ಮದ ನಂಟು, ಬ್ರಹ್ಮನು ಬರೆದ ಗಂಟು ಎಂದು ಹೆಣ್ಣು ಗಂಡಿಗೆ ಮದುವೆ ವಿಚಾರವಾಗಿ ಗಾದೆಯನ್ನು ಹೇಳುತ್ತಾರೆ. ಆದರೆ ಜನ್ಮ ಜನ್ಮದ ಮೈತ್ರಿ ಸ್ನೇಹದ ಗಂಟು ಎಂದು ನಮ್ಮಿಬ್ಬರ ಪವಿತ್ರವಾದ ಸ್ನೇಹದ ನಂಟು. ಒಂದೇ ಆತ್ಮದ ಎರಡು ದೇಹ, ಒಂದೇ ಭಾವನೆಯ ಎರಡು ಜೀವ ಎಂದು ಹೇಳಿಕೊಳ್ಳಲು ನನಗೆ ಹೆಮ್ಮೆ ಎನಿಸುತ್ತದೆ. ಈ ದೃಷ್ಟಿಯಿಂದ ನನ್ನಿಂದ ರಚಿಸಿಕೊಂಡ ''ಶ್ರೀ ಕೃಷ್ಣ ಸುಧಾಮರ ಸ್ನೇಹ ಅಮರ'' ಎಂಬ ಒಂದು ಪುಟ್ಟ ಕೃತಿಯನ್ನು ಗೌಡರಿಗೆ ಅರ್ಪಿಸಿದ್ದೇನೆ.

ಡಾ॥ ದೊಡ್ಡರಂಗೇಗೌಡರು ಕೇವಲ ಪ್ರಾಧ್ಯಾಪಕರು, ಸಾಹಿತಿಗಳು, ಕವಿಗಳಷ್ಟೇ ಅಲ್ಲದೆ ಅವರೊಬ್ಬ ಮಾನವೀಯ ಮೌಲ್ಯಗಳಿಗೆ ಮನಸೋತವರು. ತಾವು ಬಾಲ್ಯದಿಂದ ಬಡತನದಲ್ಲಿ ಬೆಂದು ನೊಂದು, ಶ್ರಮ ಶ್ರದ್ಧೆಯಿಂದ ಬೆಳೆದು ಬಂದವರು. ಆ ದೃಷ್ಟಿಯಿಂದ ತಮ್ಮ ಶಿಷ್ಯರನೇಕರಿಗೆ ತಮ್ಮ ಸಂಬಳದಲ್ಲಿ ಶಾಲಾ ಶುಲ್ಕವನ್ನು ಕೊಟ್ಟು ವಿದ್ಯಾರ್ಥಿಗಳಿಗೆ ಸಹಾಯ ಮಾಡಿದವರು. ತಾವು ಊಟ ಮಾಡಬೇಕೆಂದು ಮನೆಯಿಂದ ತಂದ ಅನ್ನವನ್ನು ಒಪ್ಪತ್ತು ಊಟಕ್ಕೂ ಶಕ್ತಿಯಿಲ್ಲದ ತಮ್ಮ ಶಿಷ್ಯರಿಗೆ ಕೊಟ್ಟು ತಾವು ಒನ್ ಬೈಟು ಕಾಫಿ ಕುಡಿದು ತೃಪ್ತಿ ಹೊಂದಿದವರು.

ಕಾಲೇಜಿನಲ್ಲಿ ಪಾಠ ಮಾಡುವಾಗ ಕೇವಲ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕದಲ್ಲಿರುವ ವಿಷಯಕ್ಕೆ ಮಾತ್ರ ಮೀಸಲಾದವರಲ್ಲ. ಸಾಹಿತ್ಯ, ಸಂಸ್ಕೃತಿ, ಮಾನವೀಯ ಮೌಲ್ಯಗಳು, ಸಮಾಜದ ಅಸಮಾನತೆ ಬಗ್ಗೆ, ಮೇಲು ಕೀಳು, ಜಾತಿ, ಮತ, ಧರ್ಮದ ಬಗ್ಗೆ ಬೋಧಿಸುವ ಮೂಲಕ ಸಾವಿರಾರು ಶಿಷ್ಯರನ್ನು ಹೊಸ ಹೊಸ ಕವಿ, ಸಾಹಿತಿಗಳನ್ನಾಗಿ ಸೃಷ್ಟಿ ಮಾಡಿದ್ದಾರೆ. ಗುರುಗಳನ್ನು ನೆನೆಸಿಕೊಳ್ಳುವಂತಹ ಅವರ ಶಿಷ್ಯ ವೃಂದ ಅಪಾರ.

ಕಾವ್ಯ ರಚಿಸುವುದು ಕೇವಲ ಹೊಟ್ಟೆ ಪಾಡಿಗಲ್ಲ, ಕೀರ್ತಿ ಪ್ರಶಸ್ತಿಗಳ ಗಳಿಕೆಗಾಗಿ ಅಲ್ಲ, ಅಧಿಕಾರ, ಅಂತಸ್ತುಗಳಿಗಾಗಿ ಅಲ್ಲ. ಕಾವ್ಯ ಮಾನವನ ಬುದ್ಧಿ ವಿಕಾಸವನ್ನು ಮಾಡುತ್ತದೆ. ಜ್ಞಾನ ವೃದ್ಧಿಯಾಗುತ್ತದೆ. ಮಾನವ ಧರ್ಮ ಏನು ಎಂದು ತಿಳಿಸುವುದೇ ಕಾವ್ಯದ ಧರ್ಮ. ಅಂತಹ ಕಾವ್ಯದ ಧರ್ಮವನ್ನು ಬಿಡದೆ ಪಾಲಿಸಿಕೊಂಡು ಬಂದವರು ಡಾ॥ ದೊಡ್ಡರಂಗೇಗೌಡರು. ಯಾವುದೇ ಅಧಿಕಾರ ಸ್ಥಾನಗಳನ್ನು ಬಯಸಿದವರಲ್ಲ. ಅವರನ್ನು ವಿಶ್ವ ಮಟ್ಟದಲ್ಲಿ ಸಂಘ ಸಂಸ್ಥೆಗಳು ಗುರುತಿಸಿ, ಬಿರುದು, ಬಾವಲಿಗಳನ್ನು ನೀಡಿದ್ದಾರೆ. ಆದರೆ ಒಬ್ಬ ಕನ್ನಡದ ಜನಪರ ಶ್ರೇಷ್ಠ ಕವಿಗೆ ನಮ್ಮ ಕರ್ನಾಟಕದ ಘನ ಸರ್ಕಾರ ಒಂದು ಸರಿಯಾದ ಸ್ಥಾನಮಾನ ನೀಡಿ ಅವರ

ಕನ್ನಡದ ಸೇವೆಯನ್ನು ಪಡೆಯಲಾಗದೆ ತನ್ನ ಘನತೆಗೆ ತಾನೇ ಕುಂದು ತಂದು ಕೊಂಡಿದೆಯೇ ಹೊರತು, ಗೌಡರ ಘನತೆ ಗೌರವಕ್ಕೆ ಯಾವುದೇ ಕುಂದಿಲ್ಲ. ಇಂತಹ ಶ್ರೇಷ್ಠ ಕವಿಯ ಸ್ನೇಹ, ಸಂಪರ್ಕ, ನನಗೆ ಲಭಿಸಿದ್ದು ಜನ್ಮ ಜನ್ಮಾಂತರದ ಅನುಬಂಧ. ಈ ಸ್ನೇಹ ಸಂಬಂಧ ಚಿರಾಯುವಾಗಿರಲಿ ಎಂಬುದೇ ನನ್ನ ಆಶಯ.

ಡಾ|| ದೊಡ್ಡರಂಗೇಗೌಡರ ಕಾವ್ಯ, ಕವಿತೆಗಳ ಸದಭಿರುಚಿಯನ್ನು ಸವಿಯದ ಕನ್ನಡಿಗನೇ ಇಲ್ಲವೆಂದರೆ ತಪ್ಪಾಗಲಾರದು. ಅವರ ಸರಳತೆ, ಸಭ್ಯತೆ, ಸೌಜನ್ಯ, ಸವಿಮಾತುಗಳು ಎಂತಹ ಕಠಿಣ ಹೃದಯುದವರನ್ನು ಕರಗಿಸುವಂತಹ ಅವರ ನಡೆನುಡಿಗಳು ಅವರ ಕಾವ್ಯಕ್ಕಿಂತ ಹೆಚ್ಚು ಪರಿಣಾಮವನ್ನುಂಟು ಮಾಡುತ್ತವೆ.

ಅವರ ಗೀತೆಗಳನ್ನು ಕೇಳಿದಾಗ, ಕೃತಿಗಳನ್ನು ಓದಿದಾಗ ಎಂತಹ ಜ್ಞಾನವಂತ, ಮಹಾತ್ಮ ಎಂಬ ಭಾವನೆ ಬರುತ್ತದೆ. ಆದರೆ ಅವರನ್ನು ನೇರವಾಗಿ ಹತ್ತಿರದಿಂದ ನೋಡಿದಾಗ ಅವರ ಸರಳವಾದ ಉಡುಗೆ ತೊಡುಗೆಗಳನ್ನು ನೋಡಿದಾಗ ಇವರೇನಾ ದೊಡ್ಡರಂಗೇಗೌಡರು ಎಂಬ ಭಾವನೆ ಇಂದಿನ ಆಡಂಬರದ ಮನುಸ್ಸುಗಳಿಗೆ ಬರದೇ ಇರಲಾರದು. ಏಕೆಂದರೆ, ಈಗಿನ ಕಾಲದಲ್ಲಿ ಕೇವಲ ಉಡುಗೆ, ತೊಡುಗೆ, ಹಣ, ಅಧಿಕಾರ ಆಸ್ತಿಗೆ ಮಾನ್ಯತೆ ನೀಡುವ ಸಮಾಜದಲ್ಲಿ ಇದು ಸರ್ವೆ ಸಾಮಾನ್ಯ. ಆದರೆ ಅಂತರಂಗ ಭಕ್ತರಿಗೆ ದೇವರು ಕಾಣಿಸುವ ಹಾಗೆ ಆಡಂಬರದ ಭಕ್ತರಿಗೆ ಗೋಚರವಾಗುವುದಿಲ್ಲ.

ಇಂತಹ ಒಬ್ಬ ಮೇಧಾವಿ ಸಾಹಿತಿಯ ಸಂಗ ಸಹವಾಸ ನನಗೆ ದೊರಕಿದ್ದು ನನ್ನ ಪೂರ್ವ ಜನ್ಮದ ಪುಣ್ಯ. ಜೊತೆಗೆ ಅವರ ಹತ್ತಾರು ಕೃತಿಗಳನ್ನು ಪ್ರಕಟಿಸಿ, ಅವರ ಹಾಡುಗಳನ್ನು ಧ್ವನಿಸುರಳಿ ಮೂಲಕ ಕನ್ನಡಾಂಬೆಯ ಮಡಿಲಿಗೆ ಅರ್ಪಿಸುವ ಸೌಭಾಗ್ಯ ನನ್ನದಾಯಿತು. ಹೂವಿನ ಜೊತೆಗೆ ನಾರು ಸ್ವರ್ಗ ಸೇರಿತು ಎಂಬಂತೆ. ತಾಯಿ ಕನ್ನಡಾಂಬೆಯ ಸೇವೆಗೆ ಮತ್ತಷ್ಟು ಒತ್ತುಕೊಟ್ಟ ಡಾ|| ದೊಡ್ಡರಂಗೇಗೌಡರಿಗೆ ಈ ಒಂದು ಪುಟ್ಟ ಲೇಖನದ ಮೂಲಕ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಡಾ|| ದೊಡ್ಡರಂಗೇಗೌಡರ 60ನೇ ವರ್ಷದ ಹುಟ್ಟ ಹಬ್ಬದ ಸಂದರ್ಭದಲ್ಲಿ ''ಪ್ರಸ್ತುತ ಪ್ರಕಾಶನ' ಸಂಸ್ಥೆಯವರು ಒಂದು ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ತುಂಬಾ ಸಂತೋಷ - ತಾಯಿ ಭುವನೇಶ್ವರಿಯು ಡಾ|| ದೊಡ್ಡರಂಗೇಗೌಡರಿಗೆ ಹಾಗೂ ಅವರ ಕುಟುಂಬದವರಿಗೆ ನೂರಾರು ವರ್ಷ ಆಯುಷ್ಯ ಆರೋಗ್ಯ ನೀಡಿ ಅವರಿಂದ ಸಾಕಷ್ಟು ಇನ್ನೂ ಹೆಚ್ಚಿನ ಕೃತಿಗಳು ಹೊರಬರಲಿ ಎಂಬುದೇ ತಾಯಿ ಭುವನೇಶ್ವರಿಯಲ್ಲಿ ನನ್ನ ಸವಿನಯ ಪ್ರಾರ್ಥನೆ.

❑



# ಕಾವ್ಯಾಕಾಶದಲ್ಲಿ ಹೊಳೆಯುವ ಬೆಳ್ಳಿ ಚುಕ್ಕೆ

● ಸಿ. ಜಯಣ್ಣ

2006ನೇ ಇಸವಿ ಫೆಬ್ರವರಿ 6ಕ್ಕೆ ನನ್ನ ಬಾಲ್ಯ ಸ್ನೇಹಿತ ಡಾ॥ ದೊಡ್ಡರಂಗೇಗೌಡರಿಗೆ 60 ವಸಂತಗಳು ತುಂಬಲಿದ್ದು ಆ ಸಂಬಂಧ ಶ್ರೀಯುತರಿಗೆ ಒಂದು ವತಾಲಿಕ ಗ್ರಂಥವನ್ನು ಅದ್ದೂರಿ ಸಮಾರಂಭವನ್ನೇರ್ಪಡಿಸಿ ಉಡುಗೊರೆಯಾಗಿ ಅರ್ಪಿಸಿ ಆನಂದಿಸಲು ಅವರ ಗೆಳೆಯರು ಹಾಗೂ ಹಿತೈಷಿಗಳ ಬಳಗ ಸದ್ದುಗದ್ದಲವಿಲ್ಲದೆ ಸಕಲ ಸಿದ್ಧತೆಗಳನ್ನು ಮಾಡಿಕೊಂಡಿದೆ. ಈ ಬಗ್ಗೆ ಅವರ ಹಿರಿ-ಕಿರಿಯರ ಗೆಳೆಯರಿಂದ, ಹಿತೈಷಿಗಳಿಂದ, ಗುರು ಹಿರಿಯರಿಂದ, ಖ್ಯಾತ ನಾಮರಿಂದ ಅವರನ್ನು ಕುರಿತಾದ ಲೇಖಗಳನ್ನು ಆಮಂತ್ರಿಸಿ. ನನ್ನ ಬಾಲ್ಯದ ಗೆಳೆಯರ ಬಗ್ಗೆ ಅರ್ಥಾತ್ ನನ್ನ 'ಚಡ್ಡಿ ದೋಸ್ತ್' ಬಗ್ಗೆ ನಾನು ಉತ್ಸುಕನಾಗಿ ಬರೆಯು ತೊಡಗಿದ್ದೇನೆ. ಅದೇ ನನ್ನ ಭಾಗ್ಯ.

ನಮ್ಮ ಗೆಳೆತನ ನೆನ್ನೆ-ಮೊನ್ನೆಯದಲ್ಲ, ಸುಮಾರು ಐದು ದಶಕಗಳಷ್ಟು ಹಳೆಯದು.

ಈ ಲೇಖನದ ಪ್ರಧಾನ ನಾಯಕರಾದ ಶ್ರೀ ದೊಡ್ಡರಂಗೇಗೌಡರು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಕುರುಬರಹಳ್ಳಿ ಎಂಬ ಕುಗ್ರಾಮದಲ್ಲಿ 1946ರ ಫೆಬ್ರವರಿ ಏಳರಂದು ಪುಣ್ಯದಂಪತಿಗಳಾದ ಶ್ರೀ ಕೆ. ರಂಗೇಗೌಡರ ಹಾಗೂ ಶ್ರೀಮತಿ ಅಕ್ಕಮ್ಮನವರ ಗರ್ಭಾಂಬುಧಿ ಯಲ್ಲಿ ಅರಳಿ ಪರಿಮಳಿಸುತ್ತಿರುವ ಅರವಿಂದ ಪುಷ್ಪ.

ಆದರ್ಶ ಶಿಕ್ಷಕರೆಂಬ ಅಭಿದಾನಕ್ಕೆ ಪಾತ್ರರಾಗಿದ್ದ ಶ್ರೀ ಕೆ. ರಂಗೇಗೌಡರದು ಸಂಪ್ರದಾಯದ ಹಾಗೂ ಶಿಷ್ಟಾಚಾರದ ಮನೆತನ; ತುಂಬಿದ ಕುಟುಂಬ. ಆ ದಂಪತಿಗಳಿಗೆ ಒಟ್ಟು ಆರು ಮಂದಿ ಮಕ್ಕಳು, ಅವರಲ್ಲಿ ನಾಲ್ಕು ಗಂಡು; ಎರಡು ಹೆಣ್ಣು.

ಗಂಡು ಮಕ್ಕಳಲ್ಲಿ ಮೂವರು ಪದವಿ ಸ್ನಾತಕೋತ್ತರ ಪದವಿಗಳನ್ನು ಪಡೆದವರಾಗಿದ್ದು ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರುಗಳಾಗಿ, ಸಂಸ್ಥೆಯ ಮುಖ್ಯಸ್ಥರಾಗಿ ಸೇವೆ

ಮಾಡುತ್ತಿದ್ದಾರೆ. ಕೊನೆಯ ಮಗ ಡಿಪ್ಲೊಮಾ ಪಡೆದು ಖಾಸಗಿ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಹೆಣ್ಣುಮಕ್ಕಳು ಕೊಟ್ಟ ಮನೆಗಳಲ್ಲಿ ಸಂಸಾರ ಮಾಡಿಕೊಂಡಿದ್ದಾರೆ.

ಶ್ರೀ ದೊಡ್ಡರಂಗೇಗೌಡರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಾದ ಕುರುಬರಹಳ್ಳಿ (ಬರಗೂರು ಶ್ರೀಯುತರ ತಾಯಿ ತೌರು) ಮುಗಿಸಿ ಮಾಧ್ಯಮಿಕ ಶಿಕ್ಷಣಕ್ಕೆ ಬಡವನ ಹಳ್ಳಿಯ ಹೊಸಮಾದರಿ ಮಾಧ್ಯಮಿಕ ಶಾಲೆಗೆ (ಈಗ ಅದು ಸರ್ಕಾರಿ ಮಾದರಿ ಉನ್ನತ ಮಾಧ್ಯಮಿಕ ಶಾಲೆ) 5ನೇ ತರಗತಿಗೆ ಸೇರಿದರು. ಅವರ ಪರಿಚಯ ನನಗಾದುದು ಅಲ್ಲೇ.

ಶ್ರೀ ಕೆ. ರಂಗೇಗೌಡರು ನಮ್ಮ ಶಾಲೆಗೆ ಮಾತ್ರವಲ್ಲ ನಮಗೂ ಶಿಕ್ಷಕರಾಗಿದ್ದುದರಿಂದ ಅವರ ಸುಪುತ್ರ ದೊಡ್ಡರಂಗೇಗೌಡರನ್ನು ಮಾತನಾಡಿಸಲು, ಮುಟ್ಟಲು, ಅವರೊಂದಿಗೆ ಸಲುಗೆಯಿಂದ ಬೆರೆಯಲು ನಮ್ಮೆಲ್ಲರಿಗೂ ಮೊದಮೊದಲು ಹೆದರಿಕೆ, ಹಿಂಜರಿಕೆ, ಬರುಬರುತ್ತಾ ಪರಿಚಯ ಸ್ನೇಹವಾಗಿ ಆತ್ಮೀಯತೆ ಸಲುಗೆ ಮೊಳೆತು ಸಲೀಸಾಗಿ ಬಲಿಯಿತು.

ನಾವಿಬ್ಬರೂ ಸಹಪಾಠಿಗಳಾಗಿದ್ದು ತರಗತಿಯಲ್ಲಿ ಒಂದೇ ಬೆಂಚಿನ ಮೇಲಿ ಅಕ್ಕಪಕ್ಕ ಕುಳಿತು ಓದಿ ಬರೆದವರು; ಹರಟೆ ಹೊಡೆದವರು. ಪರಸ್ಪರ ಹೆಗಲ ಮೇಲೆ ಕೈ ಹಾಕಿ ಕೊಂಡು ತಿರುಗಾಡಿದವರು.

'ಬೆಳೆಯುವ ಪೈರು ಮೊಳಕೆಯಲ್ಲಿಯೇ' ಎಂಬಂತೆ ಶ್ರೀಯುತರು ಮಾಧ್ಯಮಿಕ ಶಾಲಾ ಬಾಲಕರಾಗಿದ್ದಾಗಲೇ ತೀಕ್ಷ್ಣಮತಿಗಳಾಗಿದ್ದು ಮನಸ್ಸಿಗೆ ಮೀರಿದ ಅದ್ಭುತ ಸಾಧನೆಗಳನ್ನು ದಾಖಲೆಗಳನ್ನು ದಾಖಲಿಸಿದವರು.

ಬಾಲಕ ದೊಡ್ಡರಂಗೇಗೌಡರದು ಬಾಲ್ಯ ಸಹಜವಾಗಿ ಸಾಧಾರಣವಾದ ಎತ್ತರ, ನಸುಗೆಂಪು ಬಣ್ಣ ದುಂಡು ಮುಖ, ಹೊಳೆವ ತೀಕ್ಷ್ಣನಯನಗಳು, ತಲೆಗೆ ಎಣ್ಣೆ ಹಚ್ಚಿ ಎಡಕ್ಕೆ ಬೈತಲೆ ತೆಗೆದು ಬಾಚಿದರೆ ಅಲ್ಲಾಡದೆ. ಹಾರಾಡದೆ ಸ್ವಸ್ಥಾನದಲ್ಲಿ ಕುಳಿತಿರುತ್ತಿದ್ದ ದಟ್ಟ ಕಪ್ಪು ಕೂದಲು. ಶುಭ್ರವಾಗಿ ಒಗೆದು ಇಸ್ತ್ರಿ ಮಾಡಿರುತ್ತಿದ್ದ, ಗೆರೆಬರೆಗಳಿರದ ಅರೆತೋಳಿನ ಬಿಳಿ ಅಂಗಿ ಹಾಗೂ ಮಾಸಲು ಬಣ್ಣದ ಬೆಲ್ಟ್ ಚಲ್ಲಣ ಅಳತೆ ಮೀರದ, ಬಣ್ಣ ಮಾಸದ ಪಾದರಕ್ಷೆಗಳನ್ನು ಬಗಲಲ್ಲಿ ನೇತಾಡುತ್ತಿದ್ದ ಪುಸ್ತಕದ ಚೀಲ ನಮ್ಮನ್ನು ಅಣಕಿಸಿ ಬೆರಗುಗೊಳಿಸುತ್ತಿದ್ದುವು.

ಅವರು ಧರಿಸುತ್ತಿದ್ದ ಉಡುಪುಗಳು ಮಾತ್ರವಲ್ಲದೆ ಓದು ಬರಹಕ್ಕೆ ಬಳಸುತ್ತಿದ್ದ ಎಲ್ಲ ಪಠ್ಯ ಪುಸ್ತಕ ಲೇಖನ ಸಾಮಗ್ರಿಗಳು ಅಷ್ಟೇ ಒಪ್ಪ ಓರಣವಾಗಿರುತ್ತಿದ್ದುವು.

ಓದು-ಬರಹಗಳಲ್ಲಿ ತರಗತಿಯ ಇತರೆ ಮಕ್ಕಳಿಗಿಂತ ಅವರು ಮುಂದಿರುತ್ತಿದ್ದುದು ನಿಜ. ಶಿಕ್ಷಕರು ಬೋಧಿಸುತ್ತಿದ್ದ ಪಾಠಗಳನ್ನು ಶ್ರದ್ಧೆಯಿಂದ ಆಲಿಸಿ ಅರ್ಥ ಮಾಡಿಕೊಳ್ಳುವಲ್ಲಿ, ಕೇಳಿದ

ಪ್ರಶ್ನೆಗಳಿಗೆ ತಪ್ಪಿಲ್ಲದೇ 'ಫಟ್' ಅಂತ ಉತ್ತರಿಸುವಲ್ಲಿ ಅವರೇ ಮೊದಲಿಗರು. ಕನ್ನಡ ಇಂಗ್ಲಿಷ್ ಪದ್ಯಗಳನ್ನು ಕಂಠಪಾಠ ಮಾಡಿಕೊಂಡು ಬಂದು ತಪ್ಪಿಲ್ಲದೇ ತಡವರಿಸದೆ ಇಂಪಾಗಿ ಹಾಡಿ ಒಪ್ಪಿಸುತ್ತಿದ್ದವರೂ ಅವರೇ, ಶಿಕ್ಷಕರು ಬೋರ್ಡ್ ಮೇಲೆ ಬರೆಯುತ್ತಿದ್ದ ಲೆಕ್ಕದ ಸಮಸ್ಯೆಗಳನ್ನು ತಮ್ಮ ನೋಟ್ ಪುಸ್ತಕದಲ್ಲಿ ನಮಗಿಂತ ಮುಂಚಿತವಾಗಿಯೇ ಬಿಡಿಸಿ ಗುರುಗಳಿಗೆ ತೋರಿಸಿ 'ಶಹಭಾಸ್' ಗಿರಿ ಗಿಟ್ಟಿಸುತ್ತಿದ್ದವರೂ ಅವರೇ ಗುರುಗಳ ಅಣತಿ ಮೇರೆಗೆ ತೆರಳಿ ಬೋರ್ಡ್ ಮೇಲೆ ಆ ಲೆಕ್ಕದ ಸಮಸ್ಯೆಗಳನ್ನು ಬಿಡಿಸಿ ಬೆನ್ನೂ ತಟ್ಟಿಸಿಕೊಂಡು ನಮ್ಮನ್ನು ಸಿಟ್ಟಿನಿಂದ ತಲೆ ತಗ್ಗಿಸುವಂತೆ ಮಾಡುತ್ತಿದ್ದವರೂ ಅವರೇ. ಹೀಗಾಗಿ ಅವರು ಶಾಲೆಯ ಶಿಕ್ಷಕ ಸಮುದಾಯಕ್ಕೆ 'ಕಣ್ಮಣಿ'ಯಾಗಿದ್ದರೆ ನಮ್ಮ ಪಾಲಿಗೆ 'ಸರ್ವಜ್ಞ', 'ಅಪೂರ್ವ ಜಾಣ'ರಾಗಿದ್ದದು ಸಹಜವೇ ಸರಿ.

ಶ್ರೀ ದೊಡ್ಡರಂಗೇಗೌಡರ ತಮ್ಮ ಬಾಲ್ಯದ ದಿನಗಳಲ್ಲಿ ಕೇವಲ ಪಠ್ಯಚಟುವಟಿಕೆಗಳ ಕಡೆಗೆ ಮಾತ್ರ ತಮ್ಮ ಗಮನ ಶ್ರದ್ಧೆಗಳನ್ನು ಕೇಂದ್ರೀಕರಿಸಿದವರಾಗಿರಲಿಲ್ಲ. ಪಠ್ಯ ವಿಷಯಗಳಂತೆ ಪಠ್ಯೇತರ ಚಟುವಟಿಕೆಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ತಮ್ಮ ಛಾತಿ ಮೆರೆದು ಛಾಪು ಮೂಡಿಸಿದ್ದಾರೆ.

ಶ್ರೀಯುತರು ಶಾಲೆಯಲ್ಲಿ ಹಮ್ಮಿಕೊಳ್ಳಲಾಗುತ್ತಿದ್ದ ಸಭೆ, ಸಮಾರಂಭ, ನಾಡಹಬ್ಬ ಜಯಂತ್ಯೋತ್ಸವ, ರಾಷ್ಟ್ರೀಯ, ಹಬ್ಬ ಹರಿದಿನಗಳ ಆಚರಣೆ ಸಂದರ್ಭಗಳಲ್ಲಿ ವೇದಿಕೆಯೇರಿ ಆ ದಿನದ ವಿಶೇಷತೆ ಕುರಿತು ಚಿಕ್ಕದಾಗಿ, ಚೊಕ್ಕವಾಗಿ ಸಭಾಕಂಪವಿಲ್ಲದೆ ನಿರರ್ಗಳನಾಗಿ ಮಾತಾಡುವುದನ್ನು ಕಂಡಿದ್ದರು.

ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಲೀಲಾಜಾಲವಾಗಿ ಯಾವುದಾದರೊಂದು ನಾಟಕದ ಮಟ್ಟವನ್ನು ಹಾಡಿಯೇ, ಅಥವಾ ನಾಟಕದ ಯಾವುದಾದರೊಂದು ಸನ್ನಿವೇಶವನ್ನು ಏಕಪಾತ್ರಾಭಿನಯದ ಮೂಲಕ ಅನುಕರಿಸಿಯೋ ಸಭಿಕರನ್ನು ರಂಜಿಸುತ್ತಿದ್ದರು; ದಂಗುಬಡಿಸುತ್ತಿದ್ದರು.

ಸಾಹಿತ್ಯ ಚಟುವಟಿಕೆಗಳಲ್ಲದೆ ಸಂಬಂಧಿಸಿದಂತೆ ಚುಟುಕಾಗಿ, ಪ್ರಾಸ ಬದ್ಧವಾಗಿ ಪದ್ಯಗಳನ್ನು ಬರೆದು ವೇದಿಕೆಯೇರಿ ತಮ್ಮದೇ ಆದ ಧಾಟಿಯಲ್ಲಿ ಹಾಡಿ ಮೋಡಿ ಮಾಡುತ್ತಿದ್ದರು.

ಆ ಕಾಲಕ್ಕೆ ಶಾಲಾ ಮಟ್ಟದಲ್ಲಿ ಏರ್ಪಡಿಸಲಾಗುತ್ತಿದ್ದ ಪ್ರಬಂಧ ರಚನೆ ಕಂಠಪಾಠ ಸ್ಪರ್ಧೆ, ಹಾಡುಗಾರಿಕೆ, ಆಶುಭಾಷಣ ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಬಾಚಿಕೊಂಡಿದ್ದಾರೆ.

ಶ್ರೀಯುತರು ವಿದ್ಯಾರ್ಥಿ ದೆಸೆಯಲ್ಲಿಯೇ ಶಿಸ್ತಿನ ಸಿಪಾಯಿಯಾಗಿ ರೂಪುಗೊಂಡವರು. ನಡೆ-ನುಡಿ, ಆಚಾರ-ವಿಚಾರ, ನಯ-ನಾಜೂಕುಗಳು ಅವರಿಗೆ ತಮ್ಮ ತಂದೆಯವರಿಂದ ಬಾಲ್ಯದಿಂದಲೇ ರಕ್ತಗತವಾಗಿ ಬಂದ ಬಳುವಳಿಗಳು.

ತರಗತಿಯಲ್ಲಿ ನಮಗಿಂತ ಓದು-ಬರಹಗಳಲ್ಲಿ ಮುಂದಿದ್ದ ಅವರು ನಮ್ಮ ತರಗತಿಗೆ ಹೀರೇಮಣಿ-ಮಾನೀಟರ್ ಆಗಿದ್ದರು.

ಶಾಲೆಯಲ್ಲಿ ಕಲಿಯಬೇಕಾಗಿದ್ದ ಪಾಠ ಪ್ರವಚನಗಳನ್ನು ಶಾಲೆಗೆ ಬರುವ ಮೊದಲೇ ಕಲಿತು ಬರುತ್ತಿದ್ದರು.

ಅವರ ಬರವಣಿಗೆಯೇ ತುಂಬಾ ಆಕರ್ಷಕ; ಮನ ಮೋಹಕ, ಇಂಗ್ಲಿಷ್ ಕನ್ನಡ-ಎರಡೂ ಭಾಷೆಗಳ ಕಾಪಿ ಬರವಣಿಗೆ ಅಥವಾ ಟಿಪ್ಪಣಿಗಳನ್ನು ಗಮನಿಸಿದಾಗ ಅಕ್ಷರಗಳು, ಪದಗಳು, ವಾಕ್ಯಗಳು ಒಬ್ಬ ಕಸುಬುದಾರ ಅಕ್ಕಸಾಲಿ ಮುತ್ತು ಹವಳಗಳನ್ನು ಪೋಣಿಸಿದಂತೆ ನಿರ್ಧಿಷ್ಟ ಪ್ರಮಾಣದಲ್ಲಿರುತ್ತಿದ್ದು ಕಣ್ಮನಗಳಿಗೆ ಆನಂದ ನೀಡುತ್ತಿದ್ದುವು.

ಶಿಕ್ಷಕರು ಕೊಡುತ್ತಿದ್ದ ಗೃಹಪಾಠ, ಟಿಪ್ಪಣಿ, ಕಾಪಿಬರಹ, ಮನೆ ಲೆಕ್ಕಗಳನ್ನು ತಪ್ಪದೇ ಒಪ್ಪ ಓರಣವಾಗಿ ಮಾಡಿತಂದು ಗುರುಗಳಿಗೆ ಒಪ್ಪಿಸುತ್ತಿದ್ದರು. ಶ್ರೀಯುತರು ಎಂದೂ ಶಾಲೆಗೆ ತಪ್ಪಿಸಿಕೊಂಡು ಇಲ್ಲವೇ ತಡವಾಗಿ ಬಂದ ನೆನಪಿಲ್ಲ.

ನಾನು ಮಾಧ್ಯಮಿಕ ಶಾಲೆಯ 8ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಧೀರ್ಘಕಾಲ ಅನಾರೋಗ್ಯಕ್ಕೆ ತುತ್ತಾಗಿ ಆ ವರ್ಷ ವ್ಯಾಸಂಗವನ್ನು ಅರ್ಧಕ್ಕೆ ಮೊಟಕುಗೊಳಿಸಬೇಕಾಯಿತು. ಹೀಗಾಗಿ ಅವರು ನನಗಿಂತ ಒಂದು ವರ್ಷ ಶಾಲಾ ಕಾಲೇಜುಗಳಲ್ಲಿ ಮುಂದಾದರು. ಶ್ರೀಯುತರು ಬಡವನಹಳ್ಳಿ ಮಾಧ್ಯಮಿಕ ಶಿಕ್ಷಣ ಮುಗಿಸಿಕೊಂಡು ಮಧುಗಿರಿ ಸರ್ಕಾರಿ ಪ್ರೌಢಶಾಲೆಯಲ್ಲಿ ಪ್ರೌಢ ಶಿಕ್ಷಣವನ್ನು ಗಣಿತ ಹಾಗೂ ವಿಜ್ಞಾನ ವಿಷಯಗಳನ್ನು ಐಚ್ಛಿಕವಾಗಿ ಆಯ್ಕೆ ಮಾಡಿಕೊಂಡು ತುಮಕೂರಿನ ಪ್ರಥಮದರ್ಜೆ ಕಾಲೇಜಿನಲ್ಲಿ (ಈಗಿನ ಸರ್ಕಾರಿ ಕಾಲೇಜು) ಪದವಿಪೂರ್ವ ಶಿಕ್ಷಣ ಹಾಗೂ ಪದವಿ ಶಿಕ್ಷಣ ಮುಂದುವರಿಸಿದರು.

ಈ ಮಧ್ಯೆ ಅವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಅಂಚೆ ಇಲಾಖೆಗೆ ಅನಾಯಾಸವಾಗಿ ಆಯ್ಕೆಯಾಗಿ ಹುಬ್ಬಳ್ಳಿ, ಬೀರೂರು ರೈಲ್ವೇ ಸ್ಟೇಷನ್‌ಗಳ ಅಂಚೆ ಕಛೇರಿಗಳಲ್ಲಿ ಪತ್ರಗಳನ್ನು ವಿಂಗಡಿಸುವ ಕಾಯಕದಲ್ಲಿ ತೊಡಗಿದ್ದರು. ಆ ದಿನಗಳಲ್ಲಿಯೂ ಅವರು ಕನ್ನಡ ನಾಡು-ನುಡಿಗಳ ಬಗ್ಗೆ ಅಭಿಮಾನವಿಟ್ಟ ಬರವಣಿಗೆಗಳು ಬೆಳಕು ಚೆಲ್ಲುತ್ತಿದ್ದದು ಅವರನ್ನು ಹತ್ತಿರದಿಂದ ಬಲ್ಲವರಿಗೆ, ಕೆಲವು ನಿಯತಕಾಲಿಕೆಗಳಲ್ಲಿ, ದಿನ ಪತ್ರಿಕೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟವಾಗುತ್ತಿದ್ದ ಅವರ ಕವಿತೆಗಳನ್ನು ಓದಿದವರಿಗೆ ಗೋಚರವಾಗಿತ್ತು.

ಪದವಿಪೂರ್ವ ಶಿಕ್ಷಣದ ನಂತರ ನಾನು ಅದೇ ವರ್ಷ ಬೆಂಗಳೂರು ವಿಶ್ವವಿದ್ಯಾನಿಲಯವು

ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಹೊಸದಾಗಿ ಪ್ರಾರಂಭಿಸಿದ 'ಆನರ್ಸ್' ತರಗತಿಗೆ 'ಕನ್ನಡ'ವನ್ನು ಐಚ್ಛಿಕ ವಿಷಯವನ್ನಾಗಿ ಆಯ್ಕೆಮಾಡಿಕೊಂಡು ಅಭ್ಯಾಸ ಮಾಡುತ್ತಿದ್ದೆನು. ನಾನು ಅಂತಿಮ ವರ್ಷದ ಆನರ್ಸ್ ತರಗತಿಯಲ್ಲಿದ್ದಾಗ ಶ್ರೀ ದೊಡ್ಡರಂಗೇಗೌಡ ಕೂಡ ಕನ್ನಡವನ್ನೇ ಐಚ್ಛಿಕ ವಿಷಯವಾಗಿ ಆಯ್ದುಕೊಂಡು ಪ್ರಥಮ ವರ್ಷದ ಆನರ್ಸ್‌ಗೆ ಸೇರಿಕೊಂಡು ಮತ್ತೆ ವಿದ್ಯಾಭ್ಯಾಸ ಮುಂದುವರೆಸಿದರು; ನಮ್ಮ ಗಾಢ ಸ್ನೇಹ ಕೆನೆಗಟ್ಟುವಂತಾದುದು ಅದೇ ವೇಳೆಯಲ್ಲೇ.

ಶ್ರೀಯುತರು 'ಕನ್ನಡ'ವನ್ನು ಆಯ್ಕೆಮಾಡಿಕೊಂಡು ವ್ಯಾಸಂಗಕ್ಕೆ ತೊಡಗಿದ್ದು ಪಂಜರದಲ್ಲಿದ್ದ ಪಕ್ಷಿಯನ್ನು ಮಲೆನಾಡಿನ ಪ್ರಕೃತಿ ಮಡಿಲಲ್ಲಿ ಸ್ವಚ್ಛಂದ ಹಾರಾಡಲು ಬಿಟ್ಟಂತಾಯಿತು. ತಮಗೆ ಪ್ರಿಯವಾಗಿದ್ದ, ಆನಂದದಾಯಕವಾಗಿದ್ದ ಸಾಹಿತ್ಯ ಕೃತಿಗಳನ್ನು ಆಳವಾಗಿ ಅಭ್ಯಸಿಸುತ್ತ ಸಂಬಂಧಪಟ್ಟ ವಿಷಯಗಳ ಬಗ್ಗೆ ಪ್ರಾಧ್ಯಾಪಕರು, ವಿದ್ವಾಂಸರು, ಸಾಹಿತ್ಯ ದಿಗ್ಗಜಗಳೊಂದಿಗೆ ಮುಕ್ತವಾಗಿ ಬೆರೆತು ಚರ್ಚಿಸುತ್ತ ತಮ್ಮ ಜ್ಞಾನದಾಹವನ್ನು ತಣಿಸತೊಡಗಿದರು ಅದೇ ಸಂದರ್ಭದಲ್ಲಿ ಕವಿತೆಗಳನ್ನು ಬರೆಯುತ್ತ ರಚನಾ ಕೌಶಲ್ಯವನ್ನು ಅನುಭವಗಳನ್ನು ಹೆಚ್ಚಿಸಿಕೊಳ್ಳತೊಡಗಿದರು.

ಬಿಡುವಿನ ಅವಧಿಗಳಲ್ಲಿ ಭೇಟಿಯಾಗುತ್ತಿದ್ದ ನಾವು ಕುಶಲ ಪ್ರಶ್ನೆಗಳ ಜೊತೆಜೊತೆಯಲ್ಲಿಯೇ ವ್ಯಾಸಂಗ, ಕವಿತಾ ರಚನೆಗಳ ಬಗ್ಗೆ ಪ್ರಾಸಂಗಿಕವಾಗಿ ಮಾತಾಡುತ್ತಿದ್ದೆವು. ವಿದ್ಯಾರ್ಥಿ ದೆಸೆಯಲ್ಲಿ ಬರೆಯಲಾಗುತ್ತಿದ್ದ ಕವಿತೆಗಳನ್ನು ಅದಲು ಬದಲು ಮಾಡಿಕೊಂಡು ಓದಿ ಆನಂದಿಸುತ್ತಿದ್ದೆವು.

ಅವರ ಕವಿತೆಗಳನ್ನು ಓದಿ, ಕೇಳಿ ಆನಂದಿಸುತ್ತಿದ್ದ ನನಗೆ ಹೆಚ್ಚು ಹೆಚ್ಚಾಗಿ ಬರೆಯಬೇಕೆಂಬ ಗೀಳು ನನಗರಿವಿಲ್ಲದೆಯೇ ಅಂಟಿಕೊಂಡಿತು. ಅವುಗಳ ಮೇಲೆ ಕಣ್ಣಾಡಿಸಿ ಮೆಚ್ಚುಗೆಯನ್ನು, ಕೆಲವೆಡೆ ಕವಿತೆಯ ಕೆಲವು ಪದಗಳನ್ನು ಇಲ್ಲವೇ ಸಾಲುಗಳನ್ನು ಸ್ಥಾನಪಲ್ಲಟ ಮಾಡಿಯೋ, ಇಲ್ಲವೇ ಪೂರ್ಣ ಬದಲಾವಣೆ ಮಾಡುವಂತೆಯೋ ಅಲ್ಲೇ ಆಗಲೇ ಅದೇ ಕರಡು ಪ್ರತಿಗಳ ಮೇಲೆ ಲಿಖಿತ ರೂಪದಲ್ಲಿ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಹೀಗಾಗಿ ಅವರು ನನಗೆ ಗುರುವೂ ಮಾರ್ಗದರ್ಶಿಯೂ ಆಗಿದ್ದಾರೆ. ಮಾತ್ರವಲ್ಲ ನನ್ನಂಥ ನೂರಾರು ಯುವ ಕವಿಗಳಿಗೆ ದಾರಿದೀಪವಾಗಿದ್ದಾರೆ.

ಶ್ರೀಯುತರು ನನ್ನ ಚೊಚ್ಚಲ ಕೃತಿ 'ಬಳ್ಳಿಯ ಹೂವು' ಕವನ ಸಂಕಲನದ ಬಿಡುಗಡೆ ಸಮಾರಂಭದಲ್ಲಿ ಪಾಲ್ಗೊಂಡು ಕೃತಿಯ ಬಗ್ಗೆ ಮುಕ್ತವಾಗಿ, ವಿಮರ್ಶಾತ್ಮಕವಾಗಿ ಮಾತಾಡಿ ಪರಿಚಯಿಸಿದ್ದಾರೆ. ನನ್ನ ಎರಡನೇ ಕೃತಿ 'ಉದುರುವ ಹನಿಗಳು' ಕವನ ಸಂಕಲನಕ್ಕೆ ಮುನ್ನುಡಿ ಬರೆದು ಬೆನ್ನು ತಟ್ಟಿದ್ದಾರೆ. ಮಾತ್ರವಲ್ಲ ನನ್ನ ಭಾವಗೀತೆಗಳ 'ಗುಂಗು' ಧ್ವನಿಸುರಳಿಯಲ್ಲಿ ಕವಿತೆಗಳ ಬಗ್ಗೆ ಪ್ರಾಸ್ತಾವಿಕವಾಗಿ ಅಕ್ಕರೆಯಿಂದ ನಾಲ್ಕು ಮಾತಾಡಿದ್ದಾರೆ.

ಅವರ ನನ್ನ ಸ್ನೇಹ ಪ್ರೀತಿ ವಿಶ್ವಾಸ ಅಭಿಮಾನಗಳು ಘನತೆಗೆ ಕುಂದು ಬಾರದಂತೆ ಆರಕ್ಕೇರದೆ ಮೂರಕ್ಕಿಳಿಯದೆ. ಸಮಸ್ಥಿತಿಯನ್ನು ಕಾಯ್ದುಕೊಳ್ಳುತ್ತ ಗುಪ್ತಗಾಮಿಯಾಗಿ ಹರಿಯುತ್ತಿದೆ ಬತ್ತದ ತೊರೆಯಾಗಿ.

ಶ್ರೀಯುತರು ಬಿ.ಎ. (ಆನರ್ಸ್) ಪದವಿ ನಂತರ ನಮ್ಮ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿಯನ್ನು ಪಡೆದು ಕೋಟೆ ಶ್ರೀ ಲ.ನ. ಪದವಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿಕೊಂಡು ಪ್ರವಾಚಕರಾಗಿ, ಪ್ರಾಚಾರ್ಯರಾಗಿ ಬಡ್ತಿ ಪಡೆಯುತ್ತಾ ಅದೇ ಪದವಿ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿಯೂ ದಕ್ಷತೆಯಿಂದ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸಿ ಶಿಕ್ಷಣ ಸಂಸ್ಥೆಯ ಪುರೋಭಿವೃದ್ಧಿಗೆ ಶ್ರಮಿಸಿದ್ದಾರೆ. ಸಹಸ್ರಾರು ಮಂದಿ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯದ ಸವಿಯುಣಿಸಿ ಎಲ್ಲರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದಾರೆ.

ಕನ್ನಡದ ಕೈಂಕರ್ಯವನ್ನೇ ವೃತ್ತಿ (ಪ್ರವೃತ್ತಿಗಳನ್ನಾಗಿಸಿಕೊಂಡು) ಅಹರ್ನಿಶಿ ದುಡಿಯುತ್ತಿರುವ ಶ್ರೀ ದೊಡ್ಡರಂಗೇಗೌಡ ಶ್ರೀ ಲ.ನ. ಕಾಲೇಜಿನಿಂದ. ನಿವೃತ್ತರಾಗಿದ್ದರೂ ಪ್ರಸ್ತುತ ಶೇಷಾದ್ರಿಪುರಂ ಕಾಲೇಜಿನ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ಆಂಗ್ಲ ಭಾಷೆಗಳ 'ಡೈರೆಕ್ಟರ್' ಆಗಿ ಹಗಲು ವೇಳೆ ಶ್ರೀ ಆದಿಚುಂಚನಗಿರಿ ಸಂಸ್ಥಾನ ಮಠದವತಿಯಿಂದ 'ಆದಿ ಚುಂಚನಗಿರಿ' ಹಾಗೂ 'ಶ್ರೀ ಕ್ಷೇತ್ರ ಆದಿಚುಂಚನಗಿರಿ' ಕನ್ನಡ ಹಾಗೂ ಆಂಗ್ಲ ಭಾಷಾ ಮಾಸ ಪತ್ರಿಕೆಯ ಸಂಪಾದಕರಾಗಿ ಸಂಜೆ ವೇಳೆ ದುಡಿಯುತ್ತಿದ್ದಾರೆ.

ಶ್ರೀ ದೊಡ್ಡರಂಗೇಗೌಡರು ಇಂದಿನ ಕನ್ನಡ ಸಾರಸ್ವತ ಲೋಕದಲ್ಲಿ ಮೇರು ಸದೃಶ ವ್ಯಕ್ತಿ; ಮಾತ್ರವಲ್ಲ ಶಕ್ತಿಯೂ ಹೌದು. ಶ್ರೀಯುತರು ಬಹುಶ್ರುತರಾಗಿದ್ದು ವಿದ್ಯೆ-ವಿನಯಗಳು ಅವರ ಜೀವನದಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿವೆ ಅವರ ಬದುಕು-ಬರಹಗಳಲ್ಲಿ ಆಡಂಬರವಿಲ್ಲದ ಗ್ರಾಮೀಣಸೊಗಡು ಮುಂಗಾರು ಮಳೆಗೆ ಘಮ್ಮೆಂದು ಹೊಮ್ಮುವ ನೆಲದ ವಾಸನೆ, ಜಾನಪದೀಯ ಶೈಲಿಯಲ್ಲಿ ಕವಿತೆಗಳನ್ನು ಕಟ್ಟಿಕೊಡುವ ಕೌಶಲ್ಯ ಗಟ್ಟಿಗೊಂಡಿದೆ.

ಅವರದು ಭೂಮಿ ತೂಕದ ಹಿಮಾಲಯ ಸದೃಶ ವ್ಯಕ್ತಿತ್ವ, ಬಹುಮುಖವಾದ ಪ್ರತಿಭೆ. ಶ್ರೀಯುತರ ನಡೆ-ನುಡಿಗಳಲ್ಲಿ, ಬದುಕು-ಬರಹಗಳಲ್ಲಿ ಇಬ್ಬಂದಿತನವೆಂಬುದಿಲ್ಲ. ಎಂದಿಗೂ ಅವರು ಪಲಾಯನವಾದಿಯೆನಿಸಿಕೊಂಡವರಲ್ಲ. ಅವರಿವರ ನೋವು ನಲಿವುಗಳಿಗೆ ಸಹಜವಾಗಿ ಸ್ಪಂದಿಸುತ್ತಾ ಜಾತಿ-ಮತ-ಪಂಥಗಳ ಉಪಾಧಿಯಿಂದ ಗಾವುದ ದೂರ ಸರಿದ ಮಾನವತಾವಾದಿ; ಸಮಾಜಮುಖಿ.

ವರಕವಿ ಬೇಂದ್ರೆಯವರು ಹೇಳಿರುವಂತೆ ಜೀವನದಲ್ಲಿ ತಾನು ಪಟ್ಟ ಪಾಡು-ಕಷ್ಟ ನಷ್ಟಗಳನ್ನು ಹಾಡುಗಳನ್ನಾಗಿಸಿಕೊಂಡು ಗುನುಗುನಿಸುತ್ತ ತಮ್ಮ ಪವಿತ್ರ ಪ್ರೀತಿಯನ್ನು ಪ್ರಗಾಥವನ್ನಾಗಿ

ಅರ್ಥೈಸಿದವರು. ಎಂಥವೇ ಸಮಸ್ಯೆಗಳೆದುರಾದಾಗಲೂ ಅವುಗಳನ್ನು ಕೆಚ್ಚೆದೆಯಿಂದ ನಿಭಾಯಿಸುವ, ಎದುರಿಸುವ, ಪರಿಹರಿಸಿಕೊಳ್ಳುವ ಛಾತಿಯನ್ನು ರೂಪಿಸಿಕೊಂಡವರು, ರೂಢಿಸಿಕೊಂಡವರು.

ಶ್ರೀ ದೊಡ್ಡರಂಗೇಗೌಡರು ತಾವು ನಡೆದಾಡಿದ ಸಾಹಿತ್ಯ ಕ್ಷೇತ್ರದಲ್ಲಿ ಸದ್ದು-ಗದ್ದಲವಿಲ್ಲದೆ ಸಾಗಿ ಬಂದು ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ. ಅವರು ತಮ್ಮ ಬದುಕನ್ನು ತಾವೇ ಕಂಡು ಕೊಂಡವರು; ಬದುಕಿನ ಪ್ರೀತಿಯನ್ನು ಕಟ್ಟಿಕೊಂಡವರು.

ಶ್ರೀಯುತರ ಮಾತು-ಬರವಣಿಗೆಗಳಲ್ಲಿ ಸಹಜವಾಗಿ ಒಡಮೂಡುವ ಚಿತ್ರಕ ಚಿತ್ತಾರಗಳು ಶ್ರೋತೃಗಳನ್ನು, ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸುತ್ತದೆ.

ಗೆಳೆಯ ಶ್ರೀ ದೊಡ್ಡರಂಗೇಗೌಡರು ತಾವು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಇತರರ ಹಾಡು ಲಾವಣಿಗಳನ್ನು ಕೇಳುವುದನ್ನೇ ಗೀಳಾಗಿಸಿಕೊಂಡವರಾಗಿದ್ದು ಮುಕ್ತವಾಗಿ, ನಿರ್ಭಿಡೆಯಿಂದ ಬರೆಯತೊಡಗಿ ಆ ಹುಟ್ಟಿನಿಂದ ಮೌಲಿಕ ಸಹೃದಯ ಸಾಹಿತ್ಯ ಪ್ರಿಯರಿಗೆ ಅಂಥ ಹುಚ್ಚು ಹಿಡಿಸಿದ್ದಾರೆ. ವಿಚಾರಪೂರ್ಣ, ವಿದ್ವತ್ಪೂರ್ಣ ತತ್ಕಾಲಿಕ ಕೃತಿಗಳನ್ನು ರಚಿಸುತ್ತಾ ಉಪನ್ಯಾಸಗಳನ್ನು ನೀಡುತ್ತ ನಾಡು-ನುಡಿಗಳ ಸೇವೆಗೆ ತಮ್ಮನ್ನು ತಾವು ಸಮರ್ಪಿಸಿಕೊಂಡಿದ್ದಾರೆ. ಆಳವಾಗಿ, ಗಾಢವಾಗಿ ಅಧ್ಯಯನ ಮಾಡಿರುವ ಶ್ರೀಯುತರು ತಮ್ಮ ತುಮುಲ ತುಡಿತಗಳನ್ನು ಅಭಿವ್ಯಕ್ತಗೊಳಿಸುತ್ತ ಅನಿಸಿಕೆಗಳನ್ನು ಹಂಚಿಕೊಂಡಿದ್ದಾರೆ.

ಶ್ರೀಯುತರು ರಚಿಸಿರುವ ಅಸಂಖ್ಯಾತ ಭಾವಗೀತೆಗಳು, ಭಕ್ತಿ ಗೀತೆಗಳು, ಚಿತ್ರಗೀತೆಗಳು, ಪ್ರಕೃತಿ ಗೀತೆಗಳು ಪಂಡಿತ-ಪಾಮರ ಎಲ್ಲರ ಹೃನ್ಮನಗಳನ್ನೂ ಸೂರೆಗೊಂಡಿವೆ. ಅವರ ಪ್ರೇಮ ಗೀತೆಗಳು ಒಡಲಾಳದಿಂದ ಹೊಮ್ಮಿ ಹೊನಲಾಗಿ ಹರಿದ ರಸಗಂಗೆಯಾದರೆ, ಜಾನಪದೀಯ ಶೈಲಿಯ ಪ್ರಕೃತಿಗೀತೆಗಳು ಧಾರೆಧಾರೆಯಾಗಿ ಧುಮ್ಮಿಕ್ಕುತ್ತಿರುವ ಕಾವ್ಯಕಾವೇರಿ. ಶ್ರೀಯುತರು ಕಾವ್ಯಾಕಾಶದಲ್ಲಿ ಗರುಡನಂತೆ ವಿಹಂಗಮ ನೋಟ ಬೀರಿ ಸ್ವಚ್ಛಂದವಾಗಿ ಹಾರಾಡುತ್ತಾ ಅದರ ಎತ್ತರ ಬಿತ್ತರಗಳನ್ನು ಅರಿತವರು; ಸಾಹಿತ್ಯ ಸರೋವರದಲ್ಲಿ ಈಜುತ್ತಾ ಅದರ ಆಳ ಅಗಲಗಳನ್ನು ಚೆನ್ನಾಗಿ ಬಲ್ಲವರು.

ಅವರು ಸುಮಾರು 500ಕ್ಕೂ ಮಿಗಿಲಾಗಿ ಹೆಚ್ಚು ಗೀತೆಗಳನ್ನು ಚಲನಚಿತ್ರಗಳಿಗೆ ರಚಿಸಿದ್ದಾರಾದರೂ ಸಮಯ ಸನ್ನಿವೇಶಗಳಿಗೆ ತಕ್ಕಂತೆ ರೂಪುಗೊಂಡ 'ಭಾವಗೀತೆ'ಗಳೇ ಹೊರತು ಅಪ್ಪಿ ತಪ್ಪಿ ಎಲ್ಲಿಯೂ ಅಶ್ಲೀಲತೆ ಎಂಬುದು ಅವರ ಸಾಹಿತ್ಯದಲ್ಲಿ ಇಣುಕಿಲ್ಲ. ಅಕ್ಷರಮಟ್ಟಿಗೆ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದವರಾಗಿದ್ದಾರೆ, ಜನಮನ ಗೆದ್ದವರಾಗಿದ್ದಾರೆ. ಹಾಗಾಗಿಯೇ ಅವರ ಕಾವ್ಯಾತ್ಮಕ ಗೀತ ರಚನೆಗಳಿಗೆ ಹೆಚ್ಚು ಪುರಸ್ಕಾರಗಳು ಶ್ರೀಯುತರ ಕೊರಳಿಗೆ ಮಾಲೆಮಾಲೆಯಾಗಿ ಅರ್ಪಿತವಾಗಿವೆ.

ತಿಳಿಗೇಡಿಗಳ, ಸ್ವಾರ್ಥಿಗಳ ಮಸಲತ್ತಿನಿಂದ ಸ್ವಾರ್ಥ ರಾಜಕಾರಣಿಗಳು ಸರಕಾರದ ಪರವಾಗಿ 'ನಾಡುನುಡಿ'ಗಳಿಗೆ ಮಾರಕವಾಗುವ ನಿರ್ಧಾರಗಳನ್ನು ವೇದಿಕೆಗಳಲ್ಲಿ, ಸಭೆ ಸಮಾರಂಭಗಳಲ್ಲಿ ತರಾಟೆಗೆ ತೆಗೆದುಕೊಂಡು ಅಂಥ ನಿರ್ಧಾರಗಳನ್ನು ವೇದಿಕೆಗಳಲ್ಲಿ, ಹಿಂದಕ್ಕೆ ಪಡೆಯುವಂತೆ ಆಗ್ರಹಿಸಿ ತಮ್ಮ ಸಾತ್ವಿಕ ಕೋಪವನ್ನು ವ್ಯಕ್ತಪಡಿಸಿದ್ದಾರೆ. ನಾಡು-ನುಡಿಗಳ ಬಗ್ಗೆ ತಮಗಿರುವ ಪ್ರೀತ್ಯಾದರ, ಜವಾಬ್ದಾರಿಗಳನ್ನು ಸಾದರ ಪಡಿಸಿದ್ದಾರೆ.

ಡಾ॥ ದೊಡ್ಡರಂಗೇಗೌಡರರದು ಚಿಕ್ಕ ಹಾಗೂ ಚೊಕ್ಕ ಕುಟುಂಬ. ಒಂದರ್ಥದಲ್ಲಿ 'ಓಜ' ಕುಟುಂಬ. ಅವರ ಮಡದಿ ಡಾ॥ ಕೆ. ರಾಜೇಶ್ವರಿಗೌಡರ ಮಗ ಡಿ. ಭರತ್, ಮಗಳು ಕುಮಾರಿ ಸ್ಮಿತ, ಸೊಸೆ ಸಿ. ಪ್ರತಿಮಾ ಎಲ್ಲರೂ ಅಧ್ಯಾಪಕರು!

ಮನೆಮಂದಿ ಎಲ್ಲರೂ ಸ್ನಾತಕೋತ್ತರ ಪದವೀಧರರು. ಡಾ॥ ದೊಡ್ಡರಂಗೇಗೌಡರ ದಂಪತಿಗಳು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿ ಪ್ರೌಢ ಪ್ರಬಂಧಗಳನ್ನು ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಪಿ.ಹೆಚ್.ಡಿ. ಮಾಡಿ ಡಾಕ್ಟರೇಟ್ ಪದವಿಗಳನ್ನು ಪಡೆದವರು; ಪ್ರಾಧ್ಯಾಪಕರಾಗಿರುವವರು. ಬೆಂಗಳೂರಿನ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಇಬ್ಬರು ಮಕ್ಕಳೂ ಕನ್ನಡ ಅಧ್ಯಾಪಕರಾಗಿ ಕಾಯಕ ಮಾಡುತ್ತಿದ್ದಾರೆ. ಸೊಸೆ ಪ್ರಾಣಿ ಶಾಸ್ತ್ರ ಅಧ್ಯಾಪಕಿ.

ಸಂಜೆ ಊಟಕ್ಕೆ ಮೊದಲು ಅಥವಾ ಊಟವಾದ ಮೇಲೆ ಐದೂ ಮಂದಿ ಒಂಡೆದೆ ಸೇರಿದರೆಂದರೆ ಅದೊಂದು 'ಅಧ್ಯಾಪಕರ ಸಮಾವೇಶ'ವಾಗುತ್ತದೆ. ಸೊಸೆಯನ್ನುಳಿದು ಉಳಿದವರು ಕಲೆತಾಗ ಸಾಹಿತಿಗಳ ಪರಿಷತ್ ಸಭೆ ಆಗುತ್ತದೆ.

ಈ ಹಿಂದೆ ಇದೇ ಲೇಖನದಲ್ಲಿ ಪ್ರಸ್ತಾಪಿಸಿರುವಂತೆ ಒಂದು ವೇಳೆ ದೊಡ್ಡರಂಗೇಗೌಡರ ಕನ್ನಡ ಸಾರಸ್ವತ ಲೋಕಕ್ಕೆ ವಿಮುಖವಾಗಿ 'ವಿಜ್ಞಾನ-ತಂತ್ರಜ್ಞಾನ' ಕ್ಷೇತ್ರದಲ್ಲೇ ಮುಂದುವರಿದಿದ್ದರೆ ಆ ಕ್ಷೇತ್ರದಲ್ಲಿ ಅವರು ಅಂಥ ಸಾಧನೆ ಮಾಡುತ್ತಿದ್ದರೋ, ಎಷ್ಟರ ಮಟ್ಟಿಗೆ ಯಶಸ್ಸು ಪಡೆಯುತ್ತಿದ್ದರೋ ಗೊತ್ತಿಲ್ಲ. ಆದರೆ ಇಷ್ಟಂತೂ ನಿಜ. ಅವರು ವಿಜ್ಞಾನ ಕ್ಷೇತ್ರದೆಡೆಗೆ ಬೆನ್ನುಮಾಡಿ ಕನ್ನಡ ಸಾರಸ್ವತ ಜಗತ್ತಿಗೆ ಪ್ರವೇಶಿಸಿ ಸಾಹಿತ್ಯ ಕ್ಷೇತ್ರವನ್ನು ತಮ್ಮ ಆಡುಂಬೊಲವಾಗಿಸಿಕೊಂಡು ಅಧ್ಯಯನ ಮಾಡುತ್ತಾ ವೃತ್ತಿ ಪ್ರವೃತ್ತಿಗಳೆರಡಲ್ಲಿಯೂ ತಮ್ಮನ್ನು ತಾವು ತೊಡಗಿಸಿಕೊಂಡು ಸಾಹಿತ್ಯ ಕೃಷಿ ಮಾಡುತ್ತ ಹುಲುಸು ಬೆಳೆ ತೆಗೆದರು. ಶ್ರೀಯುತರು ತಮ್ಮ ಅಧ್ಯಾಪನ, ಪ್ರವಚನ, ಕೃತಿರಚನೆಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಶ್ರೀಯುತರು ಸಾಹಿತ್ಯ ಕಲಾರಾಧಕ, ಕಾವ್ಯ ತಪಸ್ವಿ ಮಿಗಿಲಾಗಿ ಮಾನವತಾವಾದಿ.

ಶ್ರೀ ದೊಡ್ಡರಂಗೇಗೌಡರು ತಮ್ಮ ಮಡದಿಯೊಂದಿಗೆ ಪಾಶ್ಚಿಮಾತ್ಯ ಪೌರ್ವಾತ್ಯ ರಾಷ್ಟ್ರಗಳಲ್ಲಿ ಪ್ರವಾಸ ಕೈಗೊಂಡು ಹೋದಲ್ಲಿ ಅಲ್ಲಿನ ಜನರ ಜೀವನ, ಆಚಾರ-ವಿಚಾರ, ಆಹಾರ-ವಿಹಾರ,

ಶಿಕ್ಷಣ-ಉದ್ಯಮ, ಇತ್ಯಾದಿಗಳನ್ನು ಕಣ್ಣಟ್ಟು ನೋಡಿದವರಾಗಿದ್ದಾರೆ, ಅರಿತವರಾಗಿದ್ದಾರೆ. ಇದೇ ಸಂದರ್ಭಗಳಲ್ಲಿ ಅಲ್ಲಿನ ಕನ್ನಡ ಸಂಘ-ಸಂಸ್ಥೆಗಳು ಆಯೋಜಿಸುತ್ತಿದ್ದ ಸಭೆ, ಸಮಾರಂಭಗಳಲ್ಲಿ ಭಾಗವಹಿಸಿ ತಾಯ್ನೆಲದ ಧರ್ಮ, ಕಲೆ, ಸಾಹಿತ್ಯ, ಸಂಸ್ಕೃತಿ ವಿಶ್ವ ಭ್ರಾತೃತ್ವ, ವಿಶ್ವ ಮಾನವ ತತ್ವ ಸಂದೇಶಗಳನ್ನು ಪ್ರಚುರಪಡಿಸಿ ಕರುನಾಡಿನ ಹಿರಿಮೆ-ಗರಿಮೆಗಳನ್ನು ಸಾಂಸ್ಕೃತಿಕ ಘನತೆಯನ್ನು ವಿಶ್ವಕ್ಕೆ ಸಾರಿದ್ದಾರೆ.

ಸ್ವಸ್ಥಾನಕ್ಕೆ ಮರಳಿದ ಮೇಲೆ ತಾವು ಕಂಡುಂಡ ಸತ್ಯ, ತತ್ವಾದರ್ಶಗಳನ್ನು ತಮ್ಮ ಬರವಣಿಗೆಗಳಲ್ಲಿ ದಾಖಲಿಸಿದ್ದಾರೆ. ಮಾತ್ರವಲ್ಲ, ತಾವು ಪಾಲ್ಗೊಳ್ಳುತ್ತಿದ್ದ ಶಾಲಾ-ಕಾಲೇಜುಗಳ ಸಭೆ-ಸಮಾರಂಭಗಳಲ್ಲಿ ಅಲ್ಲಿನ ಜನರ ತತ್ವ ಸಿದ್ಧಾಂತಗಳನ್ನು, ಅವರ ಪ್ರಾಮಾಣಿಕತೆ, ಸ್ವಾವಲಂಬನೆ ಕಷ್ಟ ಸಹಿಷ್ಣುತೆಗಳ ಬಗ್ಗೆ ಮನವರಿಕೆ ಮಾಡಿಕೊಡುತ್ತ ನಮ್ಮ ಯುವಜನಾಂಗ ಉತ್ತಮ ನಾಗರೀಕರಾಗಿ ಬಾಳುವಂತೆ ಕರೆನೀಡಿ ಸಮಾಜ ಸುಧಾರಕರೆನಿಸಿದ್ದಾರೆ. ಇಷ್ಟಾದರೂ ಹಮ್ಮು-ಬಿಮ್ಮುಗಳಿಂದ ಎಳ್ಳಷ್ಟು ಬೀಗುತ್ತಿಲ್ಲ.

ಖ್ಯಾತ ಸಂಗೀತ ವಿದ್ವಾಂಸರು ಆಲಾಪದ ನಡುವೆ ಆಕಸ್ಮಿಕವಾಗಿ ಕೆಮ್ಮಿದರೆ ಅದೂ ಸಂಗೀತದ ಒಂದು ಧಾಟಿ ಎನಿಸುವಂತೆ, ಹೆಸರಾಂತ ಚಿತ್ರ ಕಲಾವಿದ ಕುಂಚದಿಂದ ಅಚಾನಕವಾಗಿ ಮೂಡುವ ಗೆರೆ-ಬರೆಗಳೂ ಅರ್ಥವತ್ತಾದ ಮಹಾನ್ ಚಿತ್ರಗಳೆನಿಸಿಕೊಳ್ಳುವಂತೆ ಶ್ರೀಯುತರು ಏನನ್ನೇ ಗೀಚಲಿ, ಏನನ್ನೇ ಉಲಿಯಲಿ ಅವುಗಳಲ್ಲಿ ಕಾವ್ಯದ ಸೊಗಡು, ಪದಲಾಲಿತ್ಯ ತಂತಾನೆ ಅಡಕವಾಗಿರುತ್ತವೆ. ಹೀಗಾಗಿ ಸಾಹಿತ್ಯ ಕ್ಷೇತ್ರದಲ್ಲಿ ಅವರೊಬ್ಬ ಸ್ವೋಪಜ್ಞ, ಗಾರುಡಿಗ.

ಶ್ರೀಯುತರು ಯಾರ ಮೇಲೂ ಯಾವ ಸಂದರ್ಭದಲ್ಲೂ ಕೋಪ ಮಾಡಿಕೊಂಡವರಲ್ಲ; ಕಾಷ್ಠ ವ್ಯಸನ ಕಟ್ಟಿಕೊಂಡವರಲ್ಲ. ಇತರರ ಏಳಿಗೆಯನ್ನು ಕಂಡು ಕಾಲೆಳೆದವರೂ ಅಲ್ಲ. ಎಂಥ ಕ್ಲಿಷ್ಟ ಸಂದರ್ಭದಲ್ಲೂ ಸಮಚಿತ್ತವನ್ನು ಕಾಪಾಡಿಕೊಂಡು ಬಂದವರು. ಸಮಾಜದ ಎಲ್ಲ ವರ್ಗದ ಜನರ ಹೃನ್ಮನಗಳನ್ನು ಗೆದ್ದು 'ಅಜಾತ ಶತ್ರು'ವಾದವರು.

ಇಂದಿನ ಮಾಲಿನ್ಯದ ದಿನಗಳಲ್ಲಿ ಕಲುಷಿತ ವಾತಾವರಣ ನಿರ್ಮಾಣಗೊಂಡು ಎಲ್ಲಿಲ್ಲದ, ಹಿಂದೆಂದೂ ಇರದಿದ್ದ ರಾಜಕೀಯ, ಶಿಕ್ಷಣ ಹಾಗೂ ಸಾಹಿತ್ಯಕ ಕ್ಷೇತ್ರದಲ್ಲಿ ಕಬ್ಬೊಗೆಯಾಗಿ ದಟ್ಟೈಸಿದೆ. ಜಾತಿ ರಾಜಕೀಯ ವ್ಯಕ್ತಿಗಳನ್ನು ಒಡೆದು ಆಳುತ್ತಿರುವ ಇಂದಿನ ವಿಷಮಯ ವಾತಾವರಣದಲ್ಲಿ ಎಲ್ಲ ಗೌಜು ಗದ್ದಲದಿಂದ, ಪಾಪ ಲೇಪದಿಂದ ಹರಿದಾರಿಗಳಷ್ಟು ದೂರವಿದ್ದು 'ಅಲಕ್ ನಿರಂಜನ್' ಆಗಿದ್ದಾರೆ.

ಶ್ರೀಯುತರು ಸರ್ಕಾರ, ಸಂಘ-ಸಂಸ್ಥೆಗಳು ಕೊಡಮಾಡುವ ಯಾವುದೇ, ಪದವಿ ಪ್ರಶಸ್ತಿಗಳಿಗೆ ಹಂಬಲಿಸಿದವರಲ್ಲ, ಅಂಗಲಾಚಿದವರಲ್ಲ, ಅವರೆಂದೂ ಯಾರ ಬಳಿಯೂ ಅತ್ತೂ ಕರೆದು

ಔತಣವುಂಡವರಲ್ಲ, ಇತರರ ಏಳ್ಗೆಯನ್ನು ಕಂಡು ಕರುಬಿದವರೂ ಅಲ್ಲ. ಅಧಿಕಾರಕ್ಕಾಗಿ ಹಲುಬಿ ಸಂಬಂಧಪಟ್ಟ ಅಧಿಕಾರಿಗಳ ಮನೆಗಳಿಗೆ ಸಚಿವರುಗಳ ಬಂಗಲೆಗಳಿಗೆ ಶಿಫಾರಸು ಪತ್ರಗಳನ್ನು ಹಿಡಿದುಕೊಂಡು ದಂಡಿನೊಂದಿಗೆ ದಾಳಿಯಿಟ್ಟು ಹಾರತುರಾಯಿ ಕೊಟ್ಟು ಅಡ್ಡ-ಬಿದ್ದವರಲ್ಲ. ಅವರಿವರನ್ನು ಭಟ್ಟಂಗಿಗಳಾಗಿ ಹೊಗಳಿ ಕೋಡಂಗಿತನ ಪ್ರದರ್ಶಿಸಿ ಕುಬ್ಜರಾದವರೂ ಅಲ್ಲ. ನಿಜ ಹೇಳಬೇಕೆಂದರೆ ಅವರು ಪದವಿ-ಪದಕ ಪ್ರಶಸ್ತಿಗಳಿಗೆ ಆಸೆ ಪಟ್ಟು ವಶೀಲಿ ಮಾಡದೆ ತಾನಾಗಿ ಅರಸಿಬಂದುದನ್ನು ಉದ್ಧಟತನದಿಂದ ನಿರಾಕರಿಸದೆ ಸ್ವೀಕರಿಸುತ್ತಾ ಎಲ್ಲವನ್ನು ಮೌನಿಯಾಗಿ ನೋಡುತ್ತ ಸ್ಥಿರ ಪ್ರಜ್ಞರಾಗಿದ್ದಾರೆ, ಪ್ರಾಜ್ಞತೆ ತುಂಬಿದ್ದಾರೆ.

ಶ್ರೀಯುತರ ಕರ್ತವ್ಯ ಶಕ್ತಿಯನ್ನು ಬಹುಮುಖ ಪ್ರತಿಭೆಯನ್ನು ಗುರುತಿಸಿದ ರಾಜ್ಯ ಸರ್ಕಾರ ಹಾಗೂ ಸಂಘ-ಸಂಸ್ಥೆಗಳು ಅವರನ್ನು ಜವಾಬ್ದಾರಿಯುತ ಕುರ್ಚಿಯಲ್ಲಿ ಕುಳ್ಳಿರಿಸಿ ಅವರಲ್ಲಿದ್ದ ಕರ್ತವ್ಯ ಶಕ್ತಿಯನ್ನು ನಾಡಿಗೆ ವಿನಿಯೋಗವಾಗುವಂತೆ ಮಾಡಬೇಕಾಗಿದೆ.

ಶ್ರೀಯುತರು ನಿಕಟ ಪೂರ್ವದಲ್ಲಿ 'ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಸದಸ್ಯ'ರಾಗಿ 2 ಅವಧಿಗಳಿಗೆ ನಾಮಕರಣಗೊಂಡವರಾಗಿ ಅದು ಪ್ರಕಟಿಸುತ್ತಿರುವ 'ಅನಿಕೇತನ' ತ್ರೈಮಾಸಿಕದ ಗೌರವ ಸಂಪಾದಕ'ರಾಗಿ ಕಾರ್ಯನಿರ್ವಹಿಸಿ ಪ್ರಸ್ತುತ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ದ ಗೌರವಾನ್ವಿತ ಸದಸ್ಯರಾಗಿ ಸರ್ಕಾರದಿಂದ ನಿಯೋಜಿತರಾಗಿದ್ದಾರೆ. ಈ ಹಿಂದೆ ಇವರು 1999-2000 ಅವಧಿಯಲ್ಲಿ 'ಕರ್ನಾಟಕ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿ'ಯ ಗೌರವ ತೀರ್ಪುಗಾರರಾಗಿ ಕಾರ್ಯನಿರ್ವಹಿಸಿದ್ದಾರೆ. ಕರ್ನಾಟಕ ರಾಜ್ಯದ 'ರನ್ನ ಪ್ರಶಸ್ತಿ ಆಯ್ಕೆ ಸಮಿತಿ'ಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಮಿತ್ರರಾದ ಶ್ರೀ ದೊಡ್ಡರಂಗೇಗೌಡರು ಈವರೆಗೆ ಭಾವಗೀತೆಗಳು, ಭಕ್ತಿಗೀತೆಗಳು, ನವ್ಯ ಕಾವ್ಯ ಸಂಗ್ರಹಗಳು, ಪ್ರಗಾಥಗಳು, ಗದ್ಯ ಸಾಹಿತ್ಯ ವೈಚಾರಿಕ ಲೇಖನಗಳ ಸಂಗ್ರಹ, ನೃತ್ಯ ರೂಪಕಗಳು - ಹೀಗೆ ಒಟ್ಟು 56ಕ್ಕೂ ಮಿಕ್ಕು ಕೃತಿಗಳನ್ನು ಪ್ರಕಟಿಸಿ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಅದ್ವಿತೀಯವಾದ ಛಾಪು ಮೂಡಿಸಿದ್ದಾರೆ. ಸುಮಾರು 500ಕ್ಕಿಂತ ಹೆಚ್ಚಾಗಿ ಭಾವನಾತ್ಮಕ, ಕಲಾತ್ಮಕ ಗೀತೆಗಳು, 10 ಚಲನಚಿತ್ರಗಳಿಗೆ ಸಂಭಾಷಣೆ, ಹತ್ತು-ಹಲವು ಧಾರಾವಾಹಿಗಳಿಗೆ ಶೀರ್ಷಿಕಾ ಸಾಹಿತ್ಯ. 50ಕ್ಕೂ ಹೆಚ್ಚು ಧ್ವನಿಸುರುಳಿಗಳು ಅವರ ಲೇಖನಿಯಿಂದ ಮೂಡಿ ಬಂದಿವೆ. ಅವರ ಕೆಲವು ಭಾವಗೀತೆಗಳು ಆಂಗ್ಲಭಾಷೆ ಹಾಗೂ ಹಿಂದಿ ಭಾಷೆಗೆ ಅನುವಾದಗೊಂಡಿರುವುದು ಹೆಗ್ಗಳಿಕೆ ವಿಚಾರವಾಗಿದೆ.

ಶ್ರೀಯುತರ ಕಾರ್ಯ ಸಾಧನೆ, ಸೃಜನ ಸಂಪನ್ನತೆಯನ್ನು ಮನಗಂಡು ಈವರೆಗೆ ಕರ್ನಾಟಕ ಸರ್ಕಾರದ, ಸಂಘ-ಸಂಸ್ಥೆಗಳು, ಚಲನಚಿತ್ರ ಮಂಡಳಿಗಳು ಸಮಾರಂಭಗಳನ್ನೇರ್ಪಡಿಸಿ ಅಭಿನಂದಿಸಿ ಪದಕ-ಪ್ರಶಸ್ತಿಗಳನ್ನು ನೀಡಿದ್ದಾರೆ. 1) ರಾಜ್ಯೋತ್ಸವ ಪ್ರಶಸ್ತಿ 2) ವಿಶ್ವಮಾನವ

ಪ್ರಶಸ್ತಿ 3) ಸಾಹಿತ್ಯ ಶ್ರೀ ಪ್ರಶಸ್ತಿ 4) ಕೆಂಪೇಗೌಡ ಪ್ರಶಸ್ತಿ 5) ವರ್ಧಮಾನ ಮಹಾವೀರ ಪ್ರಶಸ್ತಿ ಇತ್ಯಾದಿಗಳು. ಇದೇ ಅಲ್ಲದೆ ರಾಷ್ಟ್ರೀಯ, ಅಂತರಾಷ್ಟ್ರೀಯ ಪುರಸ್ಕಾರಗಳಿಗೂ ಶ್ರೀಯುತರು ಭಾಜನರಾಗಿದ್ದಾರೆ.

ಈವರೆಗೆ ಅವರ ಅಭಿಮಾನಿ ಬಳಗದವರು, ಹಿತೈಷಿಗಳು, ಸಹಪಾಠಿಗಳು, ವಿದ್ಯಾರ್ಥಿ ವೃಂದ, ಪ್ರಾಧ್ಯಾಪಕರು ಅಭಿಮಾನ ಅಕ್ಕರೆಗಳಿಂದ ಲೇಖನಗಳನ್ನು ಬರೆದುಕೊಟ್ಟದ್ದನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಹೊರತಂದು 1) ಸೃಜನಸಂಪನ್ನ 2) ಸಮಾಜಮುಖಿ ಹಾಗೂ ) ಸಾಹಿತ್ಯ ಸಂಪದ ಎಂಬ ಅರ್ಥಗರ್ಭಿತ ಹೆಸರುಗಳಲ್ಲಿ ಶ್ರೀಯುತರಿಗೆ ಸಂಭಾವನೆಯಾಗಿ ಅರ್ಪಿಸಿ ಅಭಿನಂದಿಸಿ ತಮ್ಮ ಪ್ರೀತ್ಯಾದರಗಳನ್ನು ವ್ಯಕ್ತಪಡಿಸಿದ್ದಾರೆ. ತಮ್ಮನ್ನು ತಾವು ಗೌರವಿಸಿಕೊಂಡಿದ್ದಾರೆ.

ಈ ಉದ್ಗ್ರಂಥವು ಶ್ರೀಯುತರಿಗೆ ಅರ್ಪಿತವಾಗುತ್ತಿರುವ ನಾಲ್ಕನೇ ಗ್ರಂಥ ಕುಸುಮ ಮಾಲಿಕೆ.

ಇಂಥ ಪರಂಪರೆ ಸತ್ಸಂಪ್ರದಾಯ ಇಷ್ಟಕ್ಕೇ ಕೊನೆಗೊಳ್ಳದೆ ಮುಂದಿನ ವರ್ಷಗಳಲ್ಲೂ ಮುಂದುವರಿದು ಇನ್ನೂ ಹತ್ತಾರು ಉದ್ಗ್ರಂಥಗಳು ಅವರಿಗೆ ಅರ್ಪಿತವಾಗಲೆಂಬುದು ನನ್ನ ಹಾರೈಕೆ.

ಶ್ರೀ ದೊಡ್ಡರಂಗೇಗೌಡರು ಕನ್ನಡ ಕಾವ್ಯಾಕಾಶದಲ್ಲಿ ಪ್ರಕಾಶಮಾನವಾಗಿ ಮಿನುಗುತ್ತಿರುವ ಬೆಳ್ಳಿ ಚುಕ್ಕೆ; ಸಾಹಿತ್ಯ ಸರೋವರದಲ್ಲಿ ನಳನಳಿಸುತ್ತಿರುವ ಅರವಿಂದ ಪುಷ್ಪ.

❑





# ವಿನಯ ಸಂಪನ್ನತೆ

• ಬಿ.ಆರ್. ಶ್ರೀನಿವಾಸಮೂರ್ತಿ

ಡಾ॥ ದೊಡ್ಡರಂಗೇಗೌಡರು ನಾ ಕಂಡಂತೆ :- ಡಾ॥ ದೊಡ್ಡರಂಗೇಗೌಡರ ಬಗ್ಗೆ ನಾನು ಕಳೆದ ಸುಮಾರು ಇಪ್ಪತ್ತೈದು ವರ್ಷಗಳಿಗೂ ಹೆಚ್ಚು ಕಾಲದಿಂದ ಕೇಳುತ್ತಿದ್ದರೂ ಅವರ ಕೆಲವು ಕವನಗಳನ್ನು ಆಗಾಗ್ಗೆ ಓದುತ್ತಿದ್ದರೂ ಅವರು ರಚಿಸಿದ ಕನ್ನಡ ಚಿತ್ರಗೀತೆಗಳನ್ನು ದಿನವೂ ಎನ್ನುವ ಹಾಗೆ ಕೇಳಿ ಆನಂದಿಸುತ್ತಿದ್ದರೂ, ಅವರನ್ನು ಮುಖತಃ ಭೇಟಿಯಾಗುವ, ಅವರ ಸ್ನೇಹಕ್ಕೆ ಪಾತ್ರನಾಗುವ ಅವಕಾಶ ಪ್ರಾಪ್ತವಾದದ್ದು ನಾವಿಬ್ಬರೂ ಎರಡೂವರೆ ವರ್ಷಗಳ ಹಿಂದೆ, ಕರ್ನಾಟಕ ರಾಜ್ಯ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರಾಗಿ ನೇಮಕಗೊಂಡ ನಂತರವೆ.

ಆಗಸ್ಟ್ 9 ಮತ್ತು 15 ರಾಷ್ಟ್ರೀಯ ಮಹತ್ವದ ದಿನಗಳಾದರೆ, ನಾನು ಮೊದಲ ಬಾರಿಗೆ ಮದ್ದೂರು ಪುರಸಭಾಧ್ಯಕ್ಷನಾದ ಆಗಸ್ಟ್ 28 ಮತ್ತು ಡಾ॥ ದೊಡ್ಡರಂಗೇಗೌಡರನ್ನು ಪ್ರಥಮಬಾರಿ ಭೇಟಿಯಾದ ಆಗಸ್ಟ್ 2, ನನ್ನ ವೈಯಕ್ತಿಕ ಜೀವನದ ಮಹತ್ವಪೂರ್ಣ ದಿನಗಳಾಗಿವೆ.

2003ರ ಆಗಸ್ಟ್ 2, ನನ್ನ ಜೀವನದ ಅವಿಸ್ಮರಣೀಯ ದಿನಗಳಲ್ಲೊಂದು ಎನ್ನಬಹುದು. ಆ ದಿನ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಥಮ ಸಭೆಯನ್ನು ವಿಧಾನ ಸೌಧದಲ್ಲಿ ಕರೆದಿದ್ದರು. ಸಭೆ ಆರಂಭವಾಗುವ ಮುನ್ನ ಸದಸ್ಯರು ಮತ್ತು ಅಧಿಕಾರಿಗಳು, ಅಧ್ಯಕ್ಷರ ಕೊಠಡಿಯಲ್ಲಿ ಆಸೀನರಾಗಿದ್ದರು. ಅಲ್ಲೇ ಪರಸ್ಪರ ಪರಿಚಯವಾಯಿತು.

ಅದೇ ಡಾ॥ ದೊಡ್ಡರಂಗೇಗೌಡರ ಮತ್ತು ನನ್ನ ಮೊದಲಭೇಟಿ. ಮೊದಲ ಭೇಟಿಯಲ್ಲಿಯೇ, ನಾನು ಅವರ ನಯವಾದ ನಡವಳಿಕೆ, ವಿನಯ ಸಂಪನ್ನತೆ, ಸಜ್ಜನಿಕೆ, ಹಿತವೆನಿಸುವ ಮಿತವಾದ ಮೃದುಮಾತು, ಮುಖದಲ್ಲಿ ಸ್ನೇಹವನ್ನು ಸೂಸುವ ಮಂದಹಾಸ, ಈ ಗುಣವಿಶೇಷಗಳಿಂದ ಪ್ರಭಾವಿತನಾದೆ.

ಷೇಕ್ಸ್‌ಫಿಯರ್ ತನ್ನ ಹ್ಯಾಮ್ಲೆಟ್ ನಾಟಕದ ಪಾತ್ರವೊಂದರ ಬಾಯಲ್ಲಿ

"Some have greatness in born
Some have greatness Thrust Upon There
Some have greatness Acquired."

ಎನ್ನುವ ಮಾತುಗಳನ್ನು ಆಡಿಸಿದ್ದಾನೆ.

ಡಾ|| ದೊಡ್ಡರಂಗೇಗೌಡರಲ್ಲಿ ಅನುವಂಶಿಕವಾಗಿ ಅವರ ಹಿರಿಯರಿಂದ ಬಂದ ದೊಡ್ಡತನ ಸ್ವಲ್ಪಮಟ್ಟಿಗೆ ಇರಬಹುದು. ಆದರೆ ಅವರ ಮೇಲೆ ಹೊರಿಸಲ್ಪಟ್ಟ ದೊಡ್ಡತನವಂತೂ ಇಲ್ಲವೇ ಇಲ್ಲ. ಅಂತಹ ಹೇರಲ್ಪಟ್ಟ ದೊಡ್ಡತನದಿಂದ ಅವರು ದೊಡ್ಡವರು ಎನಿಸಿಕೊಂಡವರೂ ಅಲ್ಲ. ಪ್ರಸಿದ್ಧಿಗೆ ಬಂದವರೂ ಅಲ್ಲ.

ದೊಡ್ಡತನವನ್ನು ಸ್ವಶಕ್ತಿಯಿಂದ, ಸ್ವಪ್ರತಿಭೆಯಿಂದ ಗಳಿಸಿಕೊಂಡವರು, ಬೆಳೆಸಿಕೊಂಡವರು.

ತಮ್ಮ 13ನೇ ವಯಸ್ಸಿನಲ್ಲಿಯೇ ಆಗಷ್ಟೇ ಪ್ರೌಢಶಾಲೆ ಪ್ರವೇಶಿಸಿದ್ದ ಡಾ|| ದೊಡ್ಡರಂಗೇಗೌಡರು, ಕವನ ಬರೆಯಲಾರಂಭಿಸಿದ್ದು, ಅವರನ್ನು ಶ್ರೀ ಶಾರದಾಂಬೆಯವರ ಪುತ್ರ ಎಂದೇ ಹೇಳಬಹುದು.

ಸುಮಾರು 48 ವರ್ಷಗಳ ಹಿಂದೆ, ತಮ್ಮ ಬಾಲ್ಯದಲ್ಲಿಯೇ, ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಅವರು ಆರಂಭಿಸಿದ, ಕಾವ್ಯ ರಚನಾಕೃಷಿ ಹಂತ ಹಂತವಾಗಿ ಬೆಳೆದು, ಇಂದು ಹೆಮ್ಮರವಾಗಿ ಮಹತ್ತರ ಫಲ ನೀಡುವಷ್ಟು ಸಮೃದ್ಧವಾಗಿದೆ.

ಡಾ|| ದೊಡ್ಡರಂಗೇಗೌಡರನ್ನು ನೋಡದವರು, ಅಸಂಖ್ಯಾತ ಮಂದಿ ಇರಬಹುದು. ಅವರ ಕವನಗಳನ್ನು ಓದದವರು ಸಹ ಅತಿ ಹೆಚ್ಚಿನ ಸಂಖ್ಯೆಯಲ್ಲಿರಬಹುದು. ಆದರೆ ಅವರು ರಚಿಸಿದ ಕನ್ನಡ ಚಿತ್ರಗೀತೆಗಳನ್ನು ಕೇಳದವರು ಬೆರಳೆಣಿಕೆಯಷ್ಟು ಮಂದಿ ಮಾತ್ರ ಇದ್ದಾರು!

ತಾವು ರಚಿಸಿದ ಮರೆಯಲಾಗದ ಮಾಧುರ್ಯ ಪೂರ್ಣ ಚಿತ್ರಗೀತೆಗಳ ಮೂಲಕ ಇಂದು ಅವರು ದೇಶ, ವಿದೇಶಗಳಲ್ಲಿ, ಕನ್ನಡಿಗರು ಇರುವ ಸ್ಥಳಗಳಲ್ಲೆಲ್ಲಾ ಮನೆಮಾತಾಗಿದ್ದಾರೆ.

ತಮ್ಮ ನಡೆ, ನುಡಿ, ವೇಷ ಭಾಷಣಗಳಲ್ಲೆಲ್ಲಾ ಡಾ|| ದೊಡ್ಡರಂಗೇಗೌಡರು, ಸರಳತೆಯ ಸಾಕಾರ ಮೂರ್ತಿ ಎನಿಸಿದ್ದಾರೆ. ಅವರ ತಂದೆ ತಾಯಿಗಳು ಶೈಷವಸ್ಥೆಯಲ್ಲಿ ಇಟ್ಟು ಹೆಸರನ್ನು ತಮ್ಮ ಸಾಧನೆಗಳ ಮೂಲಕ ಅನ್ವರ್ಥಗೊಳಿಸಿಕೊಂಡವರು ಡಾ|| ದೊಡ್ಡರಂಗೇಗೌಡರು.

ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಕುಗ್ರಾಮ... ವನ್ನು, ತಮ್ಮ ಸಾಧನೆಗಳ ಮೂಲಕ ಸುಗ್ರಾಮವೆಂದು ಕರ್ನಾಟಕದ ಭೂಪಟದಲ್ಲಿ ಗುರುತಿಸಲ್ಪಡುವಂತೆ ಮಾಡಿ, ಹುಟ್ಟೂರಿನ ಋಣ ತೀರಿಸಿ, ಕೃತಾರ್ಥರಾದವರು ಡಾ|| ಗೌಡರು.

ವಿದ್ಯಾಗುರುಗಳ ಬಗ್ಗೆ ಲೇವಡಿ ಮಾಡುವವರನ್ನು ಏಕವಚನದಲ್ಲಿ ಅವರ ಬಗ್ಗೆ ಮಾತನಾಡುವವರನ್ನು ನಾನು ನೋಡಿದ್ದೇನೆ. ಆದರೆ, ಡಾ|| ದೊಡ್ಡರಂಗೇಗೌಡರಂತೆ, ತಮ್ಮ ವಿದ್ಯಾಗುರುಗಳ ಬಗ್ಗೆ ಒಂದು ಕವನವನ್ನೇ ರಚಿಸಿ ಅವರ ಅಡಿದಾವರೆಗಿರಿಸಿ, ತಮ್ಮ ಭಕ್ತಿ ಪುಷ್ಪವನ್ನು ಪೂಜ್ಯ ಭಾವನೆಯಿಂದ ಅರ್ಪಿಸಿದವರು ಅತಿವಿರಳ. ವಿದ್ಯಾದಾನ ಮಾಡಿದ ಗುರುಗಳ ಬಗ್ಗೆ ಇದಕ್ಕಿಂತಲೂ ಉತ್ತಮ ರೀತಿಯಲ್ಲಿ ಕೃತಜ್ಞತೆ ಅರ್ಪಿಸಲು ಹೇಗೆ ಸಾಧ್ಯ?

ಸುಮಾರು 35 ವರ್ಷಗಳ ಹಿಂದೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ದಿನಗಳವು. ಒಮ್ಮೊಮ್ಮೆ ಊಟವಿಲ್ಲದೆ ಹಸಿದುಕೊಂಡಿದ್ದಾಗ, ತಮ್ಮ ಮನೆಗೆ ಕರೆದೊಯ್ದು ಪ್ರೀತಿಯಿಂದ ಅನ್ನವಿಕ್ಕಿದ ಆತ್ಮೀಯ ಸಹಪಾಠಿಯೊಬ್ಬರ ಔದಾರ್ಯವನ್ನು, ಆ ಸಹಪಾಠಿಯ ಕೃತಿಯೊಂದಕ್ಕೆ ಬರೆದ ಮುನ್ನುಡಿಯಲ್ಲಿ ಡಾ|| ದೊಡ್ಡರಂಗೇಗೌಡರು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಪಡೆದ ಉಪಕಾರವನ್ನು ಆ ಕ್ಷಣದಲ್ಲಿಯೇ ಮರೆಯುವ ಕೃತಘ್ನರೇ ಹೆಚ್ಚಿರುವ, ಈ ದಿನಗಳಲ್ಲಿ ಎಂದೋ ಪಡೆದ ಸಹಕಾರದ ಸ್ಮರಣೆ ಮಾಡುವವರು ಎಷ್ಟು ಜನ ಇದ್ದಾರೆ?

ಸಮಾಜದಲ್ಲಿ ಉನ್ನತ ಸ್ಥಾನಕ್ಕೇರಿ ಗೌರವರೆನಿಸಿಕೊಂಡಾಗ ಅಥವಾ ತಾವೇ ಸ್ವಯಂ ಗೌರವಸ್ಥರೆಂದುಕೊಂಡಾಗ, ಕಷ್ಟದ ಕತೆ ಜೀವನದ ನೆನಪು ಎಷ್ಟು ಜನಕ್ಕೆ ಹಿತವೆನಿಸೀತು?

ಡಾ|| ದೊಡ್ಡರಂಗೇಗೌಡರು ಕನ್ನಡ ಪ್ರಾಧ್ಯಾಪಕರಾದರೆ, ಅವರ ಸಹ ಧರ್ಮಿಣಿಯೂ ಕನ್ನಡ ಪ್ರಾಧ್ಯಾಪಕಿ, ಸುಪುತ್ರ, ಪುತ್ರಿಯರು ಸಹ ಕನ್ನಡ ಉಪನ್ಯಾಸಕರೇ.

ಕನ್ನಡ, ಕನ್ನಡ ಎಂದು ಬಹಿರಂಗದಲ್ಲಿ ಅರಚುತ್ತಾ, ಅಂತರಂಗದಲ್ಲಿ ತಮ್ಮ ಮಕ್ಕಳು, ಮೊಮ್ಮಕ್ಕಳನ್ನು ಆಂಗ್ಲಭಾಷೆಯಲ್ಲಿ ಶಿಕ್ಷಣ ನೀಡುವ, ಪದದ ಅರ್ಥ ತಿಳಿಯದೆ 'ಕಾನ್ವೆಂಟ್' ಎಂದು ಕರೆಯುವ, ಶಾಲೆಗಳಿಗೆ ಕಳುಹಿಸುವ, ಸೋಗಿನ ಕನ್ನಡದ ಮಾನ್ಯ ರಕ್ಷಕರೇ, ಎಲ್ಲೆಲ್ಲೂ ತುಂಬಿರುವಾಗ ಡಾ|| ದೊಡ್ಡರಂಗೇಗೌಡರಂತಹ ನೈಜ ಕನ್ನಡಾಭಿಮಾನಿಗಳು ಎಷ್ಟು ಮಂದಿ ಸಿಕ್ಕಿಯಾರು?

ಬಹುಶಃ ಹೀಗೆ ಕರ್ನಾಟಕ ಭುವನೇಶ್ವರಿಯ ಸೇವೆಗೆ ತಮ್ಮ ಇಡೀ ಕುಟುಂಬವನ್ನೇ ತೊಡಗಿಸಿಕೊಂಡ ನಿದರ್ಶನ ಇನ್ನೊಂದಿರಬಹುದೇ?

ಡಾ|| ದೊಡ್ಡರಂಗೇಗೌಡರು ಸಾಮಾಜಿಕ ಕಳಕಳಿಯನ್ನು ವಿಶೇಷವಾಗಿ ಹೊಂದಿ ಲೌಕಿಕ ಚಿಂತನೆ ಮಾಡುವವರೇ ಆದರೂ, ಆಧ್ಯಾತ್ಮಿಕ ಚಿಂತನೆಗಳಿಂದ ವಿಮುಕ್ತರಾಗಿಲ್ಲ. ಧಾರ್ಮಿಕ ಚಿಂತನೆಯ ತಳಹದಿಯ ಮೇಲೆ ಲೌಕಿಕ ಹಿತವನ್ನು ಸಾಧಿಸ ಬಯಸಿದವರು.

ಹೀಗಾಗಿ ಅವರ ಚಿಂತನೆಗಳು ಸಂಯಮಶೀಲತೆಯ ಸೀಮಾರೇಖೆಯನ್ನು ದಾಟದೆ,

ಎಲ್ಲರಿಗೂ ಪ್ರಿಯವೆನಿಸಿದೆ. ಹೆಸರಿನ ಆದಿಯಲ್ಲಿ ಅವರ ಹಿರಿಮೆಯ ದ್ಯೋತಕವಾದ 'ದೊಡ್ಡ' ಎನ್ನುವ ಗುಣವಾಚಕ, ಅಂತ್ಯದಲ್ಲಿ ಮನೆತನದ ಹಿರಿಮೆಯ ಸಂಕೇತವಾದ 'ಗೌಡ' ಎನ್ನುವ ಪದ ಈ ಎರಡರ ನಡುವೆ ಶ್ರೀ'ರಂಗ'ನಿರುವುದು ಡಾ|| ಗೌಡರಿಗೆ ಶ್ರೀರಕ್ಷೆಯಾಗಿದೆ.

ಡಾ|| ದೊಡ್ಡರಂಗೇಗೌಡರು ತಮ್ಮ ಜೀವನದ ಸಾರ್ಥಕವೆನ್ನಬಹುದಾದ ಅರವತ್ತು ಸಂವತ್ಸರಗಳನ್ನು ಪೂರೈಸಿ, ಅರವತ್ತೊಂದನೇ ಸಂವತ್ಸರಕ್ಕೆ ಪಾದಾರ್ಪಣೆ ಮಾಡುತ್ತಿರುವ ಶುಭ ಸಂದರ್ಭದಲ್ಲಿ, ಶ್ರೀ ಹರಿವಾಯು ಗುರುಗಳು, ಶ್ರೀ ಉಮಾ ಮಹೇಶ್ವರರು ಅವರಿಗೆ ಉತ್ತಮ ಆರೋಗ್ಯ, ಧೀರ್ಘಾಯುಷ್ಯ. ಸಂಪದಭಿವೃದ್ಧಿಗಳನ್ನು ಕರುಣಿಸಿ, ಉತ್ತರೋತ್ತರ ಶ್ರೀಯುತರಿಂದ ಶ್ರೀ ಕರ್ನಾಟಕ ಭುವನೇಶ್ವರಿಯ ಸೇವೆ ಉತ್ತಮರೀತಿಯಲ್ಲಿ ಬಹುಕಾಲ ನಡೆಯುವಂತಾಗಲಿ ಎಂದು ಹಾರೈಸುತ್ತೇನೆ.

❑



# ಅಂಬರದ ಕವಿ

● ಡಾ॥ ಸಿದ್ಧಲಿಂಗಯ್ಯ ಹೊಲತಾಳ್

ದೊಡ್ಡರಂಗೇಗೌಡರು ಅಂಬರದ ಕವಿ. ಅಂಬರ ಎಂದರೆ ಶಬ್ದಗುಣವುಳ್ಳದ್ದೂ ಆಗುತ್ತದೆ, ಶಬ್ದಕ್ಕೆ ಆಶ್ರಯವಾದ ಆಕಾಶವೂ ಆಗುತ್ತದೆ. ಅಂಬರಕ್ಕೆ ಹಲವಾರು ಅರ್ಥಗಳುಂಟು; ಅರಿವೆ, ಸಮೀಪ, ಹಾಸಿಗೆ, ಸೊನ್ನೆ ಸೂಚಿಸುವ ಸಂಕೇತ ಇತ್ಯಾದಿ ಮಾತ್ರವಲ್ಲದೆ ಎಲ್ಲೆಡೆ ಪ್ರಸರಿಸಬಹುದಾದ ಸುಗಂಧದ್ರವ್ಯವೂ ಹೌದು, ಅಡಗುದಾಣವೂ ಹೌದು. ಅದೊಂದು ಅಸ್ತ್ರಕೂಡ. ಈ ಎಲ್ಲ ಅರ್ಥಸಂಕೇತ ಸಾಧ್ಯತೆಗಳನ್ನೊಳಗೊಂಡಂತೆ ಕಾವ್ಯ ರಚಿಸುವ ದೊಡ್ಡರಂಗೇಗೌಡರವರನ್ನು ಅಂಬರದ ಕವಿ ಎಂದು ಕರೆಯ ಬಯಸುತ್ತೇನೆ.

ನಾನು ದೊಡ್ಡರಂಗೇಗೌಡರವರ ಕಾವ್ಯವನ್ನು ಮೊದಲು ಓದಿ ತಿಳಿದವನಲ್ಲ, ಕೇಳಿ ಖುಷಿಗೊಂಡವನು. ಉತ್ಸಾಹ, ಹುಮ್ಮಸ್ಸು, ಸ್ಫೂರ್ತಿ, ಚೆಲುವು, ನಾದ, ಲಯ, ಸಂಗೀತ, ಪ್ರೀತಿ-ಪ್ರೇಮ, ತತ್ವ, ನೀತಿಬೋಧೆ ಎಲ್ಲ ಒಟ್ಟೊಟ್ಟಿಗೆ ಸ್ಫುರಿಸುತ್ತವೆ. ಭಾಷೆಯ ಓಘ, ಹಂದರ ಗಾಂಧರ್ವ ಲೋಕವನ್ನು ಸೃಷ್ಟಿಸುತ್ತದೆ. ನೆಲ, ಮುಗಿಲು, ಮಳೆ, ಬೆಳೆ, ಸಸ್ಯಸಂಪತ್ತು, ಸೂರ್ಯ-ಚಂದ್ರ, ಮರಗಿಡ, ಪ್ರಾಣಿ-ಪಕ್ಷಿ ಸಂಕುಲ, ನೇಗಿಲು, ನೇಗಿಲ ಯೋಗಿ ಇತ್ಯಾದಿ ದೊಡ್ಡರಂಗೇಗೌಡರವರ ಕಾವ್ಯದ ವಸ್ತುದ್ರವ್ಯ. ಜಾಗತೀಕರಣದ ಸಂದರ್ಭದಲ್ಲಿ ಜನ ತಮ್ಮ ಭೌತಿಕ ಸೌಲಭ್ಯಗಳಿಗಾಗಿ ನಗರಕ್ಕೆ, ವಿದೇಶಕ್ಕೆ, ಡಾಲರಿಗೆ ದೌಡಾಯಿಸುತ್ತಿದ್ದರೆ, ದೊಡ್ಡರಂಗೇಗೌಡ ಮತ್ತೆ ಮತ್ತೆ ತಮ್ಮ ಕಾವ್ಯದ ಮೂಲಕ ಹುಟ್ಟೂರಿಗೆ ಹೋಗುತ್ತಾರೆ. ಪ್ರಾದೇಶಿಕ ಜಾನಪದ ದೇಸೀ ನುಡಿಗಟ್ಟು, ಅನುಭವ ಈ ದೇಸೀಗೀತೆಗಳ ಮೂಲಸೆಲೆ. ದೊಡ್ಡರಂಗೇಗೌಡ ಮತ್ತೆ ಮತ್ತೆ ತಮ್ಮ ಕಾವ್ಯದ ಮೂಲಕ ಹುಟ್ಟೂರಿಗೆ ಹೋಗುತ್ತಾರೆ. ಪ್ರಾದೇಶಿಕ ಜಾನಪದ ದೇಸೀ ನುಡಿಗಟ್ಟು, ಅನುಭವ ಈ ದೇಸೀಗೀತೆಗಳ ಮೂಲ ಸೆಲೆ. ದೊಡ್ಡರಂಗೇಗೌಡ ಸೊಗಸಾಗಿ ಶಬ್ದ ಚಿತ್ರ ಬಿಡಿಸುತ್ತಾರೆ. ಇವರು ಯಾವೊಂದು ಕಾವ್ಯ ಪಂಥದಲ್ಲೂ ಅಷ್ಟಾಗಿ ಗುರುತಿಸಿಕೊಂಡಿಲ್ಲದೆ ತಮ್ಮ ಪಾಡಿಗೆ ತಾವು ಕಾವ್ಯರಚಿಸಿದರೂ, ಇವರ ಕಾವ್ಯದಲ್ಲಿ ನವೋದಯದ ಹುರುಪು-ಹುಮ್ಮಸ್ಸಿದೆ.

ಇವರಿಗೆ ನಿಸರ್ಗದ ವೈವಿಧ್ಯಮಯುವಾದ ರೂಪವನ್ನು ಶಬ್ದಚಿತ್ರದಲ್ಲಿ ಸೆರೆಹಿಡಿಯುವಲ್ಲಿ ಎಲ್ಲಿಲ್ಲದ ಭಾವುಕತೆ, ಉತ್ಸಾಹ, ಇವರೇ ಒಂದು ಕಡೆ 'ನಾನು ಭಾವುಕ ಕವಿ' ಎಂದು ಹೇಳಿಕೊಂಡಿದ್ದಾರೆ.

ತಟ್ಟನೆ ಮಿಂಚಿನ ಹೊಳಪನ್ನುಂಟು ಮಾಡುವ, ಮೋಡಿ ಹಾಕಿ ಕಿಂದರಜೋಗಿಯಂತೆ ಜಾನಪದ ಜಾದುಗಾರನಾಗಿ ಅಗೋಚರ ಲೋಕದೊಳಕ್ಕೆ ಸೆಳೆಯುವ ಶಕ್ತಿ ದೊಡ್ಡರಂಗೇಗೌಡರವರ ಗೀತೆಗಳಿಗಿರುವುದರಿಂದಲೇ 'ಪರಸಂಗದ ಗೆಂಡೆತಿಮ್ಮ' ಚಲನಚಿತ್ರ ತುಂಬಾ ಯಶಸ್ಸು ಕಾಣಲು ಸಾಧ್ಯವಾಯಿತು. ಆ ಗೀತೆಗಳು ಈ ಸಂಕಲನದಲ್ಲಿವೆ. ಹಾಗೆಯೇ ಈ ಸಂಕಲನದಲ್ಲಿರುವ ಬಹುತೇಕ ಗೀತೆಗಳು ಸಿನಿಮಾ ಮತ್ತು ಕ್ಯಾಸೆಟ್ ಮೂಲಕ ಸಹೃದಯರಿಗೆ ಚಿರಪರಿಚಿತ. ಗ್ರಾಮೀಣ ಪ್ರಾದೇಶಿಕ ದೇಸೀ ನೆಲೆಯಲ್ಲಿ ವಿವಿಧ ಸಂದರ್ಭಗಳಲ್ಲಿ ರಚಿಸಿದ ಗೀತೆಗಳನ್ನು ಒಂದು ಕಡೆ ಸೇರಿಸಿ, 'ದೇಸೀಗೀತೆಗಳು' ಶೀರ್ಷಿಕೆಯಲ್ಲಿ ಪ್ರಕಟಿಸುತ್ತಿರುವುದು ಗಮನಾರ್ಹ.

ಪ್ರೀತಿ-ಪ್ರೇಮ, ದಾಂಪತ್ಯಗೀತೆಗಳ 'ಮೈಸೂರು ಮಲ್ಲಿಗೆ' ಮೂಲಕ ಕೆ.ಎಸ್. ನರಸಿಂಹಸ್ವಾಮಿಯವರು ಕನ್ನಡಿಗರ ಮನೆಮಾತಾದಂತೆ, ಸೌಂದರ್ಯವನ್ನು ಮೆಚ್ಚುವ, ಆರಾಧಿಸುವ, ವಾಸ್ತವ ಹಾಗೂ ತಾತ್ವಿಕ ನೆಲೆಯಲ್ಲಿ ಬದುಕನ್ನು ನೋಡುವ ದೊಡ್ಡರಂಗೇಗೌಡ 'ದೇಸೀಗೀತೆ'ಗಳ ಮೂಲಕ ಮನೆಮಾತಾಗಿದ್ದಾರೆ. ಜನಪ್ರಿಯ ಕವಿಯಾಗಿದ್ದಾರೆ. ಸಿನಿಮಾದಂಥ ಜನಪ್ರಿಯ ಮಾಧ್ಯಮದಲ್ಲಿ ಹಾಡು ಬಳಕೆಯಾಗಿ ಜನಪ್ರಿಯವಾದಾಗ ಮಡಿವಂತ ಸಾಹಿತ್ಯ ವಿಮರ್ಶೆಯ ವಯಲದಲ್ಲಿ ಅದನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಸಿನಿಮಾ ಹಾಡೆಂದು ಕಡೆಗಣಿಸುವವರೇ ಹೆಚ್ಚು. ನಮ್ಮಲ್ಲಿ ಮುಖ್ಯವಾಗಿ ಸಿನಿಮಾ ಹಾಡುಗಳು ರೂಪತಾಳಿದ್ದು ಎರಡು ವಿಧದಲ್ಲಿ: 1) ಕವಿ ತನ್ನ ಪಾಡಿಗೆ ತಾನು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಕವಿತೆಗಳನ್ನು ಸಿನಿಮಾಗಳಲ್ಲಿ, ಸಿನಿಮಾದ ಸಂದರ್ಭಕ್ಕೆ ತಕ್ಕಂತೆ ಹಾಡಾಗಿ ಬಳಸಿಕೊಂಡಿದ್ದು ಮತ್ತು 2) ಸಿನಿಮಾ ಸಂದರ್ಭಗಳಿಗಾಗಿಯೇ ಹಾಡುಗಳನ್ನು ರಚಿಸಿದ್ದು. ಕವಿತೆಯೊಂದು ಹಾಡಾಗಿ ಸಂಯೋಜನೆಗೊಂಡಾಗ ಸಂವಹನಗೊಳ್ಳುವ ಮಜವೇ ಬೇರೆ. ಮೂಲಕ್ಕಿಂತ ಹೆಚ್ಚು ಆಕರ್ಷಕವಾಗಿ, ಮಹತ್ತಾಗಿ ಕಾಣಬಹುದು / ಕೇಳಿಸಬಹುದು ಇಲ್ಲವೇ ಮೂಲದ ಅರ್ಥದಲ್ಲಿ ಮೂಡದಿರಬಹುದು. ಅದಿರಲಿ, ಸಿನಿಮಾಕ್ಕಾಗಿಯೇ ಬರೆಯುವ ಸಂದರ್ಭದಲ್ಲಿ ಅನಿವಾರ್ಯವಾಗಿ ಕವಿ ನಿಬಂಧಕ್ಕೆ ಒಳಗಾಗುತ್ತಾನೆ. ಇಂಥ ಒತ್ತಡದಿಂದ ಕಾವ್ಯ ರಚನೆಯಲ್ಲಿ ಮಿತಿಯನ್ನು ಕವಿ ಅನುಭವಿಸಬೇಕಾಗುತ್ತದೆ. ಆದರೆ, ದೊಡ್ಡರಂಗೇಗೌಡರು ಎರಡೂ ಸಂದರ್ಭಗಳನ್ನು ಸಮರ್ಥವಾಗಿ ನಿಭಾಯಿಸಿ ಯಶಸ್ಸು ಪಡೆದಿದ್ದಾರೆಂದು ನನ್ನ ಭಾವನೆ. ಸಿನಿಮಾ ಹಾಡುಗಳನ್ನೇ ಸಂಶೋಧನೆಗೆ ಒಳಪಡಿಸುವಷ್ಟು ಬೆಳೆ ವಿಫುಲವಾಗಿದೆ. ಶೋಧಿಸುವ, ಮೌಲಿಕವಾದುದನ್ನು ಗುರುತಿಸುವ ಕಾರ್ಯವಾಗಬೇಕಿದೆ.

ಇಂದಿನ ಜಾಗತೀಕರಣದ ಸಂದರ್ಭದ ಓಟದಲ್ಲಿ ಸ್ಥಳೀಯ ಕೋಮಲತೆ, ಸೊಗಡು, ವೈವಿಧ್ಯತೆ ಕಣ್ಮರೆಯಾಗುತ್ತಿದೆ. ಕಾವ್ಯಕ್ಕೆ ಪ್ರಾದೇಶಿಕ ದೇಸೀ ಸೊಗಡಿನಿಂದ ಒಂದು ಅನನ್ಯತೆ ಪ್ರಾಪ್ತವಾಗುತ್ತದೆ. ಇಂಥ ಪ್ರಾದೇಶಿಕ ದೇಸೀ ಜಾನಪದ ಸೊಗಡಿನ ಸಂವೇದನೆಯನ್ನು ಆಧುನಿಕ ಕನ್ನಡ ಕಾವ್ಯಕ್ಕೆ ತಂದುಕೊಟ್ಟವರು ದ.ರಾ. ಬೇಂದ್ರೆ. ಧಾರವಾಡದ ಅಪ್ಪಟ ದೇಸೀತನ ಅವರ ಕಾವ್ಯದಲ್ಲಿ ಮೈದಾಳಿದೆ. ಚಂದ್ರಶೇಖರ ಕಂಬಾರರು ಉತ್ತರ ಕನ್ನಡದ ಜಾನಪದ ದೇಸೀಯನ್ನು ಶಿವಪುರದ ಮೂಲಕಕೊಟ್ಟಂತೆ, ಆಧುನಿಕ ಕನ್ನಡ ಕಾವ್ಯದಲ್ಲಿ ದೇಸೀ ಪರಂಪರೆಯನ್ನು ಗುರುತಿಸುತ್ತಾ ಹೋಗಬಹುದು.

ತುಮಕೂರು ಪ್ರಾಂತ್ಯದ, ಕಲ್ಪತರುನಾಡಿನ ಗ್ರಾಮೀಣ ಸೊಗಡನ್ನು ವೀಚಿ, ಎಸ್.ಜಿ. ಸಿದ್ಧರಾಮಯ್ಯ ಮುಂತಾದವರು ಕಟ್ಟಿಕೊಟ್ಟಂತೆ, ಮಧುಗಿರಿ-ಶಿರಾದ ಏರಿಯಾದ ಸೊಗಡನ್ನು ಗದ್ಯದಲ್ಲಿ ಬರಗೂರು ರಾಮಚಂದ್ರಪ್ಪ ಮತ್ತು ಕಾವ್ಯದಲ್ಲಿ ದೊಡ್ಡರಂಗೇಗೌಡರವರು ಕಟ್ಟಿಕೊಡುತ್ತಾರೆ.

ದೊಡ್ಡರಂಗೇಗೌಡರವರ ಕಾವ್ಯದ ಮತ್ತೊಂದು ಮುಖ್ಯ ಲಕ್ಷಣವೆಂದರೆ ಸಂವಹನ ಶೀಲತೆ-ಅರ್ಥದ, ಗೇಯತೆಯ, ಸಂಗೀತದ, ಲಯದ ನೆಲೆಯಲ್ಲಿ, ಗ್ರಾಮೀಣ ಸೊಗಡು ಹಾಗೂ ಗ್ರಾಂಥಿಕ ಭಾಷೆಯ ಹದವಾದ ಹೊಂದಿಗೆ ಇವರ ಕಾವ್ಯಭಾಷೆಯ ವಿಶಿಷ್ಟತೆ. ಆದುದರಿಂದಲೇ ಇವರ ಕಾವ್ಯ ಏಕಕಾಲಕ್ಕೆ ಸುಲಭವಾಗಿಯೂ, ಕ್ಲಿಷ್ಟವಾಗಿಯೂ ಕಾಣುತ್ತದೆ. ಪೂರಾ (ಅದು ಸಾಧ್ಯವಿದ್ದರೆ!) ಅರ್ಥವಾಗುವ ಮೊದಲೇ ಕವಿತೆಯ ಮಾಧುರ್ಯ ಸಹೃದಯವನ್ನು ಆವರಿಸಿಬಿಡುತ್ತದೆ. ಅವನನ್ನು ಆಕಾಶದಲ್ಲಿ ತೇಲಿಸುತ್ತದೆ. ಒಂದು ರೀತಿಯಲ್ಲಿ ಪ್ರಕೃತಿಯ ಆರಾಧನೆ ಮತ್ತೊಂದು ರೀತಿಯಲ್ಲಿ ಅನುಭಾವದ ಅನುಭವ ಅಂಬರ ಕವಿ ದೊಡ್ಡರಂಗೇಗೌಡರವರ ಕಾವ್ಯ ಶಕ್ತಿಯೂ, ಯುಕ್ತಿಯೂ, ಮಿತಿಯೂ ಆಗಬಹುದು. ಏನೇ ಆಗಲಿ ದೊಡ್ಡರಂಗೇಗೌಡತನ ಮೈದಾಳುತ್ತದೆ. ಓದುಗ/ಕೇಳುಗ ಕಾವ್ಯದ ಗುಂಗಿಗೆ ಒಳಗಾಗುತ್ತಾನೆ. ಅದು ಕಾವ್ಯದ ಮಾಂತ್ರಿಕ ಶಕ್ತಿ. ಇವರ ಕಾವ್ಯದಲ್ಲಿ ಭಾವಲಹರಿ ಓತಪ್ರೋತವಾಗಿ ಪ್ರವಹಿಸುತ್ತದೆ.

ಬಾಲ್ಯವನ್ನು ನಾಸ್ಟಲ್ಜಿಕ್ಕಾಗಿ ನೇಯುವ, ಗ್ರಾಮೀಣ ಬದುಕನ್ನು - ಪರಿಸರವನ್ನು ವೈಭವೀಕರಿಸುವ ಕವಿ ಗುಲಾಬಿ ಹೂವಿನ ಚೆಲುವು ನೋಡುತ್ತಾ, ಸೊಬಗನ್ನು ಆಸ್ವಾದಿಸುತ್ತಾ, ಪಕ್ಕದಲ್ಲೇ ಇರುವ ಮುಳ್ಳಿನ ವಾಸ್ತವತೆಯನ್ನು ಮರೆತಿಲ್ಲ. ದಲಿತರ, ಕೂಲಿಕಾರರ, ಅಂಗನವಾಡಿ ತಾಯಿಯರ, ಬಡರೈತರ ಬವಣೆಯನ್ನು ಮನಮುಟ್ಟುವಂತೆ ಚಿತ್ರಿಸುತ್ತಾರೆ. ಗ್ರಾಮೀಣ ಪರಿಸರದ ಸುಂದರ ಚಿತ್ರಣವಿರುವಂತೆ, ಅವು ಇತ್ತೀಚೆಗೆ ಕೆಟ್ಟಿರುವ ವಾಸ್ತವ ಚಿತ್ರಣವೂ ಉಂಟು. ನೇರವಾದ ಸಂದೇಶವನ್ನೊತ್ತ ಸದಾಶಯದಿಂದ ಎಚ್ಚರಿಸುವ ಕವಿತೆಗಳೂ ಉಂಟು.

ತತ್ವಪದಕಾರರ, ಸಂತರ ಪ್ರಭಾವದಿಂದ ರಚಿತವಾದ ತಾತ್ವಿಕ ಚಿಂತನೆಯ, ಅನುಭಾವದ ನೆಲೆಯ ಕವಿತೆಗಳು, ಗೀತೆಗಳು ಈ ಸಂಕಲನದಲ್ಲಿವೆ. ಸಂತನಂತೆ ಸಂತೈಸುವ ಗುಣ ಈ ತತ್ವಪದಗಳಿಗಿದೆ. ಸಹೃದಯರನ್ನು ತಾತ್ವಿಕ ನೆಲೆಯಿಂದ ಬದುಕಿನ ಸವಾಲುಗಳನ್ನು ಎದುರಿಸುವ ನೆಲೆಗೆ ತೆಗೆದುಕೊಂಡೋಗುತ್ತವೆ. ಇಲ್ಲಿ ಜೀವನ ವಿಮುಖತೆಯಾಗಲಿ ಸಿನಿಕತೆಯಾಗಲಿ ಅಥವಾ ವೈರಾಗ್ಯವಾಗಲಿ ಇಲ್ಲ. ಬದಲಾಗಿ ಬದುಕನ್ನು ನಿಭಾಯಿಸುವ ಛಲ-ಛಾತಿ ಉಂಟು; ಬೇವು-ಬೆಲ್ಲ ಜೀವನದ ಇತಿ-ಮಿತಿ, ಯಾರ್‍ಯಾರ ಬಾಳು ಎಲ್ಲಿ ಬರದೈತೋ, ಹುಟ್ಟಿದ ಮ್ಯಾಗೆ ಏಳು-ಜೀಳು ಇತ್ಯಾದಿ.

ನನಗೆ ತಿಳಿದ ಮಟ್ಟಿಗೆ ನೇಗಿಲ ಯೋಗಿಯ ಕುರಿತು ಹೆಚ್ಚು ಸತ್ವಯುತವಾದ ಕವಿತೆಗಳನ್ನು ರಚಿಸಿದವರು ಕುವೆಂಪು. ಕುವೆಂಪು ಮಲೆನಾಡಿನ ರೈತನ ಅನುಭವದಿಂದ ಕವಿತೆ ರಚಿಸುವುದಕ್ಕೂ, ದೊಡ್ಡರಂಗೇಗೌಡರ ಬಯಲು ಸೀಮೆಯ ರೈತನ ಅನುಭವದಿಂದ ಕವಿತೆ ರಚಿಸುವುದಕ್ಕೂ ಸಹಜವಾಗಿ ವ್ಯತ್ಯಾಸಗಳಿವೆ. ಆದರೆ ಮನೋಧರ್ಮ ಒಂದೇ.

ಒಂದು ಭಾಷೆಯಲ್ಲಿ ಕೆಲವು ನುಡಿಗಟ್ಟುಗಳು, ಉಪಮಾನ-ಉಪಮೇಯಗಳು, ರೂಪಕಗಳು, ಪ್ರತಿಮೆಗಳು, ಸಂಕೇತಗಳು ಅತಿಯಾಗಿ ಬಳಕೆಯಾಗುವುದರಿಂದ ಕ್ಲೀಷೆಯಾಗುತ್ತವೆ. ಅತಿಬಳಕೆಯಿಂದ ಸವಕಲಾಗಿ ಹೊಳಪುಕಳೆದುಕೊಳ್ಳುತ್ತವೆ. ಇಂಥ ಬಳಕೆಯನ್ನು ಜರೆಯುವ ಅರ್ಥದಲ್ಲಿ ಬಳಸಲಾಗುವುದು; ತೊಂಡೆ ಹಣ್ಣಿನಂಥ ತುಟಿಯ, ಸಂಪಿಗೆ ಎಸಳಿನಾಂಗೆ ಮೂಗು, ದಾಳಿಂಬೆ ಹಲ್ಲುಸಾಲು, ಹಾಲು ಜೇನು ಸೇರೋಹಾಗೆ ಇತ್ಯಾದಿ. ದೊಡ್ಡರಂಗೇಗೌಡರು ಇಂಥವನ್ನು ಧಾರಾಳವಾಗಿ ಬಳಸುತ್ತಾರೆ. ಕೆಲವು ಸಲ ಕ್ಲೀಷೆಯಾದರೂ ಅನಿವಾರ್ಯವಾಗುತ್ತದೆ. ಅಲ್ಲದೆ ಅಂಥ ಅಭಿವ್ಯಕ್ತಿಯಿಂದ ಸಂವಹನ ಸಲೀಸಾಗುತ್ತದೆ. "Poetry is Memorable Leterances' ಎಂಬ ಮಾತಿನಂತೆ ದೊಡ್ಡರಂಗೇಗೌಡರವರ ಕವಿತೆಗಳ, ಗೀತೆಗಳ ಹಲವಾರು ಸಾಲುಗಳನ್ನು ನೆನಪಿನಲ್ಲಿಟ್ಟುಕೊಂಡು ಉಕ್ತಿಗಳಾಗಿ ಕೂಡ ಉಚ್ಚರಿಸಬಹುದು. ಜಗಲಿ ಹತ್ತಿ ಇಳಿದು, ಕಣ್ಣು ನಾಲಿಗೆ ಕಡಲು, ನಾಡಾಡಿ, ಮೌನಸ್ಪಂದನ, ಏಳು ಬೀಳಿನ ಹಾದಿ, ಕುದಿಯುವ ಕುಲುವೆ, ನೆಲವಿಲ್ಲದೆ ಬೇರಿಲ್ಲ, ಚದುರಂಗದ ಕುದುರೆಗಳು, ಪ್ರೀತಿ ಪ್ರಗಾಥ, ಹಳ್ಳಿ ಹುಡುಗಿ ಹಾಡು ಪಾಡು, ಮಣ್ಣಿನ ಮಾತುಗಳು ಮುಂತಾದ ಕವನ ಸಂಕಲನಗಳನ್ನು ಹೊರತಂದಿರುವ ದೊಡ್ಡರಂಗೇಗೌಡರು ಕಳೆದ ನಾಲ್ಕು ದಶಕಗಳಿಂದ ನಿರಂತರವಾಗಿ ಕಾವ್ಯಾನುಸಂಧಾನ ಉಳ್ಳವರು. ಇವರ ಈ 'ದೇಸೀಗೀತೆಗಳು' ಅಕ್ಷರ ಮಾಧ್ಯಮದ ಮೂಲಕ ಸಹೃದಯರ ಕೈಸೇರುತ್ತಿರುವ ಹೊತ್ತಿನಲ್ಲಿ ಟಿಪ್ಪಣಿ ಬರೆಯಲು ಮತ್ತು ಇನ್ನಿತರ ಸಂಕಲಗಳನ್ನು ಓದಲು ಅನುವುಮಾಡಿಕೊಟ್ಟ ಕೆ. ಪುಟ್ಟಯ್ಯನವರನ್ನು ನೆನೆಯುತ್ತೇನೆ.

ಕೊರಟಗೆರೆ ಸಮೀಪದ ಸಿದ್ಧರಬೆಟ್ಟ ಗಿಡಮೂಲಿಕೆಗಳಿಗೆ, ಅವಧೂತರಿಗೆ, ಗವಿಗೆ, ಗಂಗೆಗೆ

ಹೆಸರುವಾಸಿ, ಈ ಬೆಟ್ಟದ ದಕ್ಷಿಣ ತಪ್ಪಲಿನಲ್ಲಿ ನನ್ನೂರು - ಹೊಲತಾಳ್, ದೊಡ್ಡರಂಗೇಗೌಡರವರು ಈ ಬೆಟ್ಟದ ಉತ್ತರ ದಿಕ್ಕಿನಲ್ಲಿ ಸುಮಾರು ಹದಿನೈದು ಮೈಲಿ ದೂರದ ಮಧುಗಿರಿ ಸಮೀಪದ ಕುರುಬರಹಳ್ಳಿಯವರು, ಹೀಗಾಗಿ ನಾವು ಒಂದೇ ಪರಿಸರದ ಕುಡಿಗಳು,

ಈ 'ದೇಸೀಗೀತೆಗಳು' ದೊಡ್ಡರಂಗೇಗೌಡರವರಿಗೆ ಅರವತ್ತು ತುಂಬುತ್ತಿರುವ ಹೊತ್ತಿನಲ್ಲಿ ಪ್ರಕಟವಾಗುತ್ತಿದೆ. ಜೀವನೋತ್ಸಾಹದ ಅರವತ್ತರ ಹರಯದ ದೊಡ್ಡರಂಗೇಗೌಡರವರಿಗೆ, ಕಾವ್ಯವಾಹಿನಿಗೆ ನಮಸ್ಕಾರ.





# ಸದ್ಭಾವನೆಯ ಸರಳ ಜೀವಿ

• ವೈ.ಜಿ. ಗಿರಿಶಾಸ್ತ್ರಿ

ಪ್ರೊ|| ದೊಡ್ಡರಂಗೇಗೌಡರನ್ನು ಕಾಲು ಶತಮಾನದಿಂದ ಬಲ್ಲೆ. ಒಳ್ಳೆಯತನಕ್ಕೆ ಬಳಸಬಹುದಾದ ಎಲ್ಲ ವಿಶೇಷಣಗಳನ್ನು ಅವರಿಗೆ ಧಾರಾಳವಾಗಿ ಬಳಸಬಹುದು. ಗೌಡರನ್ನು ಯಾರಿಗೂ ಹೋಲಿಸುವಂತಿಲ್ಲ, ಅವರದೇ ವಿಶಿಷ್ಟ ವ್ಯಕ್ತಿತ್ವ. ಹತ್ತರಲ್ಲಿ ಹನ್ನೊಂದನೆಯವರಾಗದೆ ಪ್ರತ್ಯೇಕವಾಗಿ ನಿಲ್ಲುವ ವ್ಯಕ್ತಿ ಇವರು. ಗೌಡರದು ಬಹುಮುಖ ವ್ಯಕ್ತಿತ್ವ, ಬಹುಮುಖ ಪ್ರತಿಭೆ. ಈ ಮಾತು ಉತ್ಪ್ರೇಕ್ಷೆಯಲ್ಲ, ವಾಸ್ತವ. ಆದರೆ ಅವರೆಂದೂ 'ನಾನು ಬಹುಮುಖ ಪ್ರತಿಭಾವಂತ' ಎಂದು ಪೋಸ್ ಕೊಟ್ಟವರಲ್ಲ. ಆದರ್ಶ ಶಿಕ್ಷಕರಾಗಿ ವಿದ್ಯಾರ್ಥಿಗಳ ಪ್ರೀತಿಗಳಿಸಿದ್ದಾರೆ; ಅನುಪಮ ಕವಿಯಾಗಿ ಸಮಕಾಲೀನರ, ಕಾವ್ಯಾಸಕ್ತರ ಗೌರವಕ್ಕೆ ಪಾತ್ರರಾಗಿದ್ದಾರೆ; ಗದ್ಯಲೇಖಕರಾಗಿ ಪ್ರಬುದ್ಧರ ಮೆಚ್ಚುಗೆಗೆ ಸಂಪನ್ನರಾಗಿದ್ದಾರೆ; ಆಧ್ಯಾತ್ಮಿಕ ಚಿಂತನ ಬರಹಗಳಿಂದ ಗುರು-ಮಠಗಳ ವಿಶ್ವಾಸಕ್ಕೆ ಅರ್ಹರಾಗಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಸಹೃದಯತೆಯಿಂದ ಸಕಲರ ಮನಗೆದ್ದಿದ್ದಾರೆ. ಸ್ಮಿತ ವದನದ ಗೌಡರು ಎಂದೂ ಗಡಸಾದವರಲ್ಲ, ನಾನು ಕಂಡಂತೆ. ಅವರ ಬಗ್ಗೆ, ಅವರ ಕೃತಿಯಬಗ್ಗೆ ಬರುವ ತೀಕ್ಷ್ಣ ಪ್ರತಿಕ್ರಿಯೆಗಳನ್ನು ಸ್ಥಿತ ಪ್ರಜ್ಞರಂತೆ ಸ್ವೀಕರಿಸುವ ಮನೋಭಾವ ಅವರದು 'ಇದಿರ ಹಳಿಯಲು ಬೇಡ' ಎನ್ನುವ ಬಸವವಚನದಂತೆ ಯಾರ ಬಗ್ಗೆಯೂ ಅವರು ಆಕ್ಷೇಪಾರ್ಹ ಮಾತುಗಳನ್ನಾಡುವುದಿಲ್ಲ. ಅವರು ಪತ್ರಿಕೆಗಳಿಗೆ, ಅದರಲ್ಲೂ ನಿಯತಕಾಲಿಕಗಳಿಗೆ ಕವನ, ಹನಿಗವನಗಳನ್ನು ಕಳುಹಿಸುತ್ತಾರೆ. ಹಾಗೆ ಹಳುಹಿಸಿದ ಕವನ ಪ್ರಕಟಿಸಬೇಕೆಂದು ಎಂದೂ ಅವರು ಕೇಳುವುದಿಲ್ಲ. ಪತ್ರಕರ್ತನಾಗಿ ನಾನಿದನ್ನು ಅವರಲ್ಲಿ ಕಂಡ ಸೌಜನ್ಯ. ನಾನೇ ಎಲ್ಲಾದರೊಮ್ಮೆ ಸಿಕ್ಕಾಗ 'ನಿಮ್ಮ ಕವನ ತಲುಪಿದೆ' ಎಂದರೆ, 'ಸೇರಿತೆ?'ಎಂದಷ್ಟೇ ಅನ್ನುವರೇ ಹೊರತು 'ಪ್ರಕಟಿಸಿ' ಎಂದು ಒತ್ತಾಯಿಸುವುದಿಲ್ಲ. ವಿಶೇಷ ಸಂಚಿಕೆಗಾಗಿ ಅವರಿಂದ ಕವನವನ್ನು ಆಹ್ವಾನಿಸಿದಾಗ ತಕ್ಷಣವೇ ಸಂದರ್ಭಕ್ಕೆ ಹೊಂದುವಂಥ ಸೊಗಸಾದ, ಅರ್ಥಗರ್ಭಿತವಾದ ಕವನ ಬರೆದು ಕಳುಹಿಸುತ್ತಿದ್ದರು. ಗೌಡರೊಡನೆ ಸ್ವಲ್ಪ ಹೊತ್ತು ಕಳೆದರೆ ಒಂದು ಹೊಸ ಅನುಭವ ಉಂಟಾಗುತ್ತದೆ. ಅವರ ಮಾತಿನಲ್ಲೂ ಕಾವ್ಯದ ಸೊಗಡಿರುತ್ತದೆ, ಚಿಂತನಾರ್ಹ

ಸಂಗತಿಗಳಿರುತ್ತವೆ. ಅವರೊಂದು ಪುಟ್ಟಕವನ ಬರೆಯಲಿ, ದೊಡ್ಡ ಕವನ ಬರೆಯಲಿ ಅದು ಗಂಭೀರವಾಗಿರುತ್ತದೆ. ಚಿಂತನಾರ್ಹವಾಗಿರುತ್ತದೆ.

ಗೌಡರು ಸ್ನೇಹಜೀವಿ. ಎಲ್ಲವಯೋಮಾನದವರೊಡನೆಯೂ ಸಮಾನವಾಗಿ ಬೆರೆಯುವ ಮನೋಭಾವ ಅವರದು. ಹಿರಿಯ ಕವಿ ಸಂಗದಲ್ಲಿ ಹೇಗವರು ವರ್ತಿಸುವರೋ ಅದೇ ವರ್ತನೆ ಕಿರಿಯ, ಉದಯೋನ್ಮುಖ ಕವಿಗಳೊಡನಿರುವಾಗಲೂ ಇರುತ್ತದೆ. ಇದು ಅವರ ದೊಡ್ಡಗುಣ. ಕವಿ ಸಮ್ಮೇಳನಗಳಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಅವರು ವಾಚಿಸುವ ಕವಿತೆಗಳು ಕೇಳುಗರ ಮನಸ್ಸಿಗೆ ಪ್ರಫುಲ್ಲತೆ ನೀಡುತ್ತವೆ. ಅವರ ಕಾವ್ಯವಾಚನದ ಶೈಲಿ ಮಾಧುರ್ಯದಿಂದ ಕೂಡಿರುತ್ತದೆ. ಇವರ ಇನ್ನೊಂದು ದೊಡ್ಡಗುಣ ಸಮಯಪಾಲನೆ. ಯಾವುದೇ ಕಾರ್ಯಕ್ರಮಕ್ಕಾಗಲಿ ನಿಗದಿತವೇಳೆಗೆ ಹಾಜರಾಗುತ್ತಾರೆ. ಇವರ ಸಮಯಪಾಲನೆ ಕೆಲವು ಸಂದರ್ಭಗಳಲ್ಲಿ ಕಾರ್ಯಕ್ರಮ ನಿಯೋಜಕರಿಗೆ ತಬ್ಬಿಬ್ಬಾದ ಸನ್ನಿವೇಶಗಳೂ ಘಟಿಸಿವೆ. ಅಂಥ ಸಮಯದಲ್ಲಿ ಬೇಸರಪಟ್ಟುಕೊಳ್ಳದೆ, ಸಿಕ್ಕ ಗೆಳೆಯರೊಡನೆ ಕಾರ್ಯಕ್ರಮ ಆರಂಭವಾಗುವವರೆಗೂ ಮಾತನಾಡುತ್ತಿದ್ದರು. ಕರ್ತವ್ಯ, ಸಮಯಪಾಲನೆಗೆ ಗೌಡರು ಮಾದರಿ.

ದೊಡ್ಡರಂಗೇಗೌಡರು ಕವಿಯಷ್ಟೇ ಅಲ್ಲ ಚಿಂತನಶೀಲ ಗದ್ಯ ಲೇಖಕರೂ ಹೌದು, ಕನ್ನಡ ನವೋದಯ ಕಾವ್ಯ - ಒಂದು ಪುನರ್ ಮೌಲ್ಯಮಾಪನ-ಮಹಾಪ್ರಬಂಧಕ್ಕೆ ಡಾಕ್ಟರೇಟ್ ಪಡೆದ ಗೌಡರು ತೌಲನಿಕ ಅಧ್ಯಯನದಲ್ಲಿ ಆಸಕ್ತರು. ಅವರ ವಿಚಾರ-ವಾಹಿನಿ, ವರ್ತಮಾನದ ವ್ಯಂಗ್ಯದಲ್ಲಿ ಹಾಗೂ ಚಿಕಿತ್ಸಕ ದೃಷ್ಟಿಯಿಂದ ಬರೆದ ಸಾಹಿತ್ಯ ಸರಸ್ವತಿ, ಜೀವಂತ ಜಾನಪದ, ಪ್ರಾಚೀನ ಸಾಹಿತ್ಯ, ನವ್ಯ ನಿಕಷ, ಅಭಿರುಚಿ, ಅಭ್ಯುದಯ, ಅಭಿಮುಖಿ, ರಮ್ಯವಾದ ವಿಮರ್ಶಾತ್ಮಕ ಕೃತಿಗಳಲ್ಲಿ ಗೌಡರ ಅಧ್ಯಯನದ ಆಳ, ಚಿಂತನೆಯ ಹದಕ್ಕೆ ಅಭಿವ್ಯಕ್ತಗೊಳ್ಳುತ್ತದೆ. ಇವರು ಬರೆದ ಮಣ್ಣಿನ ಮಾತುಗಳು, ಮಿಂಚಿನಗೊಂಚಲು ಮುಕ್ತಕಗಳಲ್ಲಿ ಡಿವಿಜಿಯವರ 'ಮಂಕುತಿಮ್ಮನ ಕಗ್ಗ'ದ ಪ್ರಭಾವ ಕಾಣಬಹುದು. 'ಮನುಜ' ಕಾವ್ಯನಾಮದಿಂದ ಆಧ್ಯಾತ್ಮಿಕ ಬೆಳಕನ್ನು ಚೆಲ್ಲುವ ಇವರ ಕಿರುಕವನಗಳೆ ಸಾರ್ವಕಾಲಿಕ ಸತ್ಯವನ್ನು ಸಾರುತ್ತವೆ.

ಗೌಡರು ಕವನ ಸಂಕಲನಗಳನ್ನು ಹೊರತಂದಿರುವಂತೆಯೇ ಭಾವ, ಭಕ್ತಿ ಗೀತೆಗಳ ಸಂಕಲನವನ್ನೂ ಹೊರ ತಂದಿದ್ದಾರೆ. ಗಂಭೀರ ಕವನಗಳನ್ನು ಬರೆಯುವ ಗೌಡರು ಹಾಡುಗಬ್ಬನ್ನೂ ಸಲೀಸಾಗಿ ಬರೆಯಬಲ್ಲ ಸಮರ್ಥರಾಗಿದ್ದಾರೆ. 'ಅಸೀಮರೂಪ ಅಂಬರದಲ್ಲಿ...'ಯಂಥ ಗೇಯಗೀತೆಗಳು, ಕನ್ನಡ ನಾಡು, ನುಡಿಗೆ ಸಂಬಂಧಿಸಿದಂಥ ಗೀತೆಗಳು ಸದಾ ಅನೇಕ ಸಮಾರಂಭಗಳಲ್ಲಿ ಕೇಳಿಬರುತ್ತಿರುತ್ತವೆ. ನಾಡಿನ ಪ್ರತಿಷ್ಠಿತ ಗಾಯಕರು ಇವರ ಗೀತೆಗಳನ್ನು ಹಾಡಿದ್ದಾರೆ, ಅವು ಮಾವು-ಬೇವು, ಗೀತವೈಭವ, ಕಾವ್ಯ ಕಾವೇರಿ, ತಂಗಾಳಿ, ಹೃದಯದ ಹಕ್ಕಿ, ಮಾವು-ಮಲ್ಲಿಗೆ ಮುಂತಾದ ಧ್ವನಿಸುರಳಿಗಳಲ್ಲಿದ್ದು ಜನಪ್ರಿಯವಾಗಿವೆ. ಭಕ್ತಿಗೀತೆಗಳ ಧ್ವನಿಸುರುಳಿಗಳು ಹೊರಬಂದಿವೆ.

ದೊಡ್ಡರಂಗೇಗೌಡರು ಚಿತ್ರಗೀತೆ ರಚನಕಾರರಾಗಿ ಕನ್ನಡ ಚಿತ್ರರಂಗದಲ್ಲಿ ಪ್ರತ್ಯೇಕ ಸ್ಥಾನ ಪಡೆದಿದ್ದಾರೆ. ಸುಮಾರು 500ಕ್ಕೂ ಹೆಚ್ಚು ಗೀತೆಗಳನ್ನು ಬರೆದ ಅವರು ಆ ಗೀತೆಗಳಲ್ಲಿ ಕವಿಯ ಸಹಜಭಾವನೆಗಳನ್ನು ಅಭಿವ್ಯಕ್ತಿಸಿದ್ದಾರೆ. ಸನ್ನಿವೇಶಕ್ಕೆ ಅನುಗುಣವಾಗಿ ಗೀತೆಬರೆದರೂ ಅದರಲ್ಲಿ ಕಾವ್ಯ ಗುಣದ ಅಂತಃ ಸತ್ವವನ್ನು ಕಾಣಬಹುದು. ರಾಗಕ್ಕೆ ತಕ್ಕಂತೆ ಬರೆದರೂ ಅದರಲ್ಲಿ ಅರ್ಥವಿರುತ್ತದೆ, ಕಾವ್ಯದ ಸೊಗಡಿರುತ್ತದೆ. ಗೌಡರಿಗೆ ಪ್ರಕೃತಿ ಸೌಂದರ್ಯ ಅಚ್ಚುಮೆಚ್ಚು. 'ಪರಸಂಗದ ಗೆಂಡೆತಿಮ್ಮ' ಚಿತ್ರದ ಜಾನಪದೀಯ ಧಾಟಿಯ 'ತೇರಾನೇರಿ ಅಂಬರದಾಗೆ ನೇಸರು ನಗುತಾನೆ... ಮರಗಿಡ ತೂಗ್ಯಾವೇ... ಹಕ್ಕಿ ಹಾಡ್ಯಾವೇ.... ಜೀರ‍್ಯಾವೇ ಚೆಲುವ ಜೀರ‍್ಯಾವೆ' ಸೂರ್ಯೋದಯದ ಸುಂದರವರ್ಣನೆ ಎಷ್ಟು ಸೊಗಸಾಗಿದೆ. ಇದು ಕವಿ ಹೃದಯಿಗೆ ಮಾತ್ರ ಬರೆಯಲು ಸಾಧ್ಯ. 'ಮುಂಜಾನೆ ಸೊಬಗನ್ನು ಬಿಂಬಿಸಿದಂತೆ, ದೇಸಿ ನುಡಿಗಟ್ಟುಗಳನ್ನು ಬಳಸಿ ಹಾಡನ್ನು ಹೆಣೆದಿದ್ದೇನೆ' ಎನ್ನುವ ಗೌಡರು ಸೂರ್ಯನ ಸರ್ವಸಮಭಾವವನ್ನು ಗೀತೆಯಲ್ಲಿ ದಾಖಲಿಸಿದ್ದಾರೆ ಅವರ ಪ್ರೇಮ ಗೀತೆ, ಪ್ರಕೃತಿ ಗೀತೆ, ನಾಡಪ್ರೇಮ ಗೀತೆ- ಹೀಗೆ ಗೀತೆಯಾವುದನ್ನೇ ಕುರಿತಾಗಿರಲಿ ಅದನ್ನು ಸಮರ್ಥವಾಗಿ, ಕಾವ್ಯಗುಣ ಮೇಳೈಸಿ ಬರೆಯುವ ಚೈತನ್ಯ ಗೌಡರಲ್ಲಿದೆ. ಅವರು ಪ್ರೇಮಕವಿಯೂ ಹೌದು, ಭಾವುಕ ಕವಿಯೂ ಹೌದು; ಚಿಂತನ ಶೀಲ ಕವಿಯೂ ಹೌದು. ಅವರ ಎಲ್ಲ ಪ್ರಕಾರಗಳ ಗೀತೆಗಳಲ್ಲಿ ಸೃಜನಶೀಲತೆ ಎದ್ದು ಕಾಣುತ್ತದೆ. 'ತೇರಾನೇರಿ... ಚಿತ್ರಗೀತೆ ಮಹಾರಾಷ್ಟ್ರ ಸರ್ಕಾರದ 7ನೆಯ ತರಗತಿಯ ಕನ್ನಡ ಪುಸ್ತಕದಲ್ಲಿ ಎರಡು ಅವಧಿಗೆ ಪಠ್ಯವಾಗಿ ಆಯ್ಕೆಯಾಗಿತ್ತು. ಇದರಿಂದ ಅರ್ಥವಾಗುತ್ತದೆ, ಆ ಗೀತೆಯ ಮಹತ್ವ. 'ಜನುಮದ ಜೋಡಿ' ಚಿತ್ರದ 'ಕೋಲು ಮಂಡೆ ಜಂಗಮ ದೇವರು' ಗೀತೆಯು ಕೂಡ ಜಾನಪದ ಧಾಟಿಯಲ್ಲಿ ಸೊಗಸಾಗಿ ಮೂಡಿ ಬಂದಿದೆ.

ಪ್ರೊ॥ ದೊಡ್ಡರಂಗೇಗೌಡರು ಆದಿಚುಂಚನಗಿರಿಯ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಸಾನ್ನಿಧ್ಯಕ್ಕೆ ಬಂದ ನಂತರ ಅವರ ಜೀವನದ ಹಾದಿಯೇ ಬದಲಾಯಿತೆನ್ನಬಹುದು. ಅವರ ನಡೆನುಡಿಯಲ್ಲಿ, ಬರವಣಿಗೆಯಲ್ಲಿ ಆಧ್ಯಾತ್ಮಿಕ ಚಿಂತನೆ ರೂಢಿಸಿಕೊಂಡರು. ಗುರು ಕರುಣೆ ಪಡೆದ ಗೌಡರು ವಿದೇಶಗಳಲ್ಲೂ ಭಾರತದ ಸಂಸ್ಕೃತಿ ರಾಯಭಾರಿಯಾಗಿ ಮೌಲ್ಯಭರಿತ ಉಪನ್ಯಾಸಗಳಿಂದ ಈ ನೆಲದ ಧಾರ್ಮಿಕ, ಆಧ್ಯಾತ್ಮಿಕ ಸತ್ವವನ್ನು ಪ್ರಚಾರ ಮಾಡಿ ಬಂದಿದ್ದಾರೆ. ಈಗವರು ಪತ್ರಕರ್ತರಾಗಿಯೂ ಕಾರ್ಯನಿರತರಾಗಿದ್ದಾರೆ. ಆದಿಚುಂಚನಗಿರಿ ಶ್ರೀಮಠದಿಂದ ಪ್ರಕಟವಾಗುತ್ತಿರುವ 'ಆದಿಚುಂಚನಗಿರಿ' ಕನ್ನಡ-ಇಂಗ್ಲಿಷ್ ಮಾಸಪತ್ರಿಕೆಯ ಸಂಪಾದಕರಾಗಿ, ಪತ್ರಿಕೆಯ ಹೊಣೆ ಹೊತ್ತಿದ್ದಾರೆ, ಪತ್ರಿಕೆಯ ಒಳ ಮುದ್ರಣವನ್ನು ಮೌಲ್ಯಯುತವಾಗಿರಿಸಲು ಶ್ರಮಿಸುತ್ತಿದ್ದಾರೆ. ಅವರ ಅನನ್ಯ ಅನುಭವ ಪತ್ರಿಕೆಯಲ್ಲಿ ಬಿಂಬಿತವಾಗುತ್ತಿದೆ.

ಪ್ರೊ॥ ದೊಡ್ಡರಂಗೇಗೌಡರು ಸಮಷ್ಟಿ ವ್ಯಕ್ತಿತ್ವಕ್ಕೆ ಮಾದರಿಯಾಗಿದ್ದಾರೆ. ನಾಡು-ನುಡಿಗೆ ಅವರ ಕೊಡುಗೆ ಅಪಾರವಾಗಿದೆ.





# ಸಾಂಸ್ಕೃತಿಕ ಹರಿಕಾರ

● ಡಾ. ಕೆ.ವಿ. ಚಂದ್ರಣ್ಣಗೌಡ

ಪ್ಲೇಟೋ ಹೇಳುವಂತೆ 'ಬುದ್ಧಿ ಶಕ್ತಿ, ಧೈರ್ಯ ಮತ್ತು ಪರಿಪಕ್ವತೆ ಮನುಷ್ಯನಲ್ಲಿರಬೇಕಾದ ಮೂರು ಮುಖ್ಯ ಗುಣಗಳ್'. ವಿವೇಚನಾ ಶಕ್ತಿಯುಳ್ಳವರೇ ನೈಜ ಬುದ್ಧಿವಂತರು. ವಿವೇಕ ಬುದ್ಧಿಯನ್ನು ಗೌರವಿಸುವವನೇ ಧೈರ್ಯಶಾಲಿ. ವಿವೇಕದ ಮೂಲಕ ಭಾವನೆಗಳನ್ನು ನಿಯಂತ್ರಿಸಲು, ಲೌಕಿಕ ಸುಖಗಳ ಪೈಕಿ ಕೆಲವನ್ನಾದರೂ ತ್ಯಜಿಸಲು ಸಾಧ್ಯವಾಗುವಾಗ ಮನುಷ್ಯನಿಗೆ ಪರಿಪಕ್ವತೆ ಪ್ರಾಪ್ತವಾಗುತ್ತದೆ. ಈ ಮೂರು ಗುಣಗಳು ಒಟ್ಟುಗೂಡಿದಾಗ ನ್ಯಾಯವಂತ ಮನುಷ್ಯ ಮೂಡಿಬರುತ್ತಾನೆ. ಮೇಲಿನ ಮೂರು ಗುಣಗಳನ್ನು ಮೈಗೂಡಿಸಿಕೊಂಡಿರುವ ನಮ್ಮ ನಡುವಿನ ಸಾಹಿತ್ಯ-ಸಾಂಸ್ಕೃತಿಕ ಹರಿಕಾರರೇ ನಮ್ಮ ಡಾ॥ ದೊಡ್ಡರಂಗೇಗೌಡರು.

ನಿತ್ಯ ನವ-ನವೋನ್ಮೇಶ ಸಾಲಿನಿಯಾದ ಗೌಡರು ವಿವೇಚನಾ ಶಕ್ತಿಯನ್ನು ತಮ್ಮ ಬದುಕಿನುದ್ದಕ್ಕೂ ಬೆಳೆಸಿಕೊಂಡಿದ್ದಾರೆ. ಅವರಿಗೆ ದೊರೆತ ಅನುಭವಗಳೇ ಅವರನ್ನು ಗಟ್ಟಿಗರನ್ನಾಗಿ ಮಾಡಿದೆ. ಸಮಾಜಮುಖಿಯಾದ ಶ್ರೀಯುತರು ಪ್ರಸ್ತುತ ಸಾಮಾಜಿಕ ಚಿಂತನೆಗಳ ಬಗೆಗೆ ತುಂಬು ಮುತುವರ್ಜಿವಹಿಸುವುದು ಅವರ ವಿವೇಚನಾ ಶಕ್ತಿಗೆ ಹಿಡಿದ ದರ್ಪಣವೆ ಸರಿ. ತಮ್ಮ ಬದುಕಿನ ಕರಿಯ ಕತ್ತಲೆಯನ್ನು ಧೈರ್ಯವಾಗಿ ಸರಿಸಿ, ಅಂತರಂಗದ ಜೀವಸೆಲೆ ಬತ್ತದಂತೆ ಕಾವ್ಯ ರಮಣಿಯನ್ನು ನಿತ್ಯ ಒಲೈಸಿರುವುದು ಸನ್ಮಾನ್ಯರ ಧೈರ್ಯಶಾಲಿತನವನ್ನು ವ್ಯಕ್ತಗೊಳಿಸುವುದಾಗಿದೆ. ಕವಿತೆಯನ್ನು ಮೈಗೂಡಿಸಿಕೊಂಡ ಇವರು ಕಾವ್ಯವನ್ನು ಶ್ರೀ ಸಾಮಾನ್ಯರ ಎಡೆಗೆ ತರುವಲ್ಲಿ ತಮ್ಮದೆ ಆದ ಪರಿಪಕ್ವತೆಯನ್ನು ಪಡೆದಿದ್ದಾರೆ.

ಹೈಟೆಕ್ ಯುಗದ ಜಾಗತೀಕರಣಗೊಳ್ಳುತ್ತಿರುವ ಜೀವನ ಕ್ರಮದ ನಡು-ನಡುವೆ ತಮ್ಮ ಕಾವ್ಯದ ಮೂಲಕ ಜೀವನ ಪ್ರೀತಿಯ ಕಡೆಗೆ ಮನುಷ್ಯರನ್ನು ಕರೆ ತರುತ್ತಾ; ಮಾನವ-ಮಾನವನನ್ನು ಪ್ರೀತಿಸುವ ನೈಜತೆಯನ್ನು ಅಡಿಗಡಿಗೆ ಕರೆ ತರುವ ಪ್ರಾಮಾಣಿಕ ಪ್ರಯತ್ನ ನಡೆಸುತ್ತಲೇ ಸಾಗಿದ್ದಾರೆ.

ಸುಲಭ ಭಾಷೆಯ ಮೂಲಕ ತಮ್ಮ ಕವನಗಳನ್ನು ಹೆಣೆದು, ಸಹೃದಯರ ಎದೆ ಮುಟ್ಟಿಸಿರುವ ಕೆಲಸ ನಮ್ಮೀ ಕವಿ ದೊಡ್ಡರಂಗೇಗೌಡ ಅವರದು. ಸ್ವಂತ ಅನುಭವದ ಆಧಾರದ ಮೇಲೆ ಸಾರ್ವತ್ರಿಕ ಮೌಲ್ಯಗಳನ್ನು ಕುರಿತು ಸದಾ ಚಿಂತಿಸುತ್ತಾ ಮಣ್ಣಿನ ಮಕ್ಕಳ ಕ್ರಿಯಾಶೀಲತೆಗೆ ಕನ್ನಡಿ ಹಿಡಿಯುತ್ತಾರೆ. ಶೂದ್ರರ ಮತ್ತು ದಲಿತರ ಬದುಕಿನ ಸಾಮಾಜಿಕ ಸಂವೇದನೆಗಳು ಗೌಡರ ಕಾವ್ಯದಲ್ಲಿ ಗುಡುಗು ಮಿಂಚಾಗಿವೆ.

ಗೌಡರ ಜೀವನ ಚರಿತ್ರೆಯ ಅಧ್ಯಾಯಗಳಲ್ಲಿ ವ್ಯಕ್ತಗೊಂಡಿರುವ ರೀತಿ-ನೀತಿ, ಪ್ರೀತಿ-ವಿಶ್ವಾಸ, ದುಗುಡ, ನೋವು-ನಲಿವು, ವಿಷಾದ, ಹರ್ಷ-ಸಂತೋಷ, ಆಧ್ಯಾತ್ಮ, ಭಕ್ತಿ, ಅಧ್ಯಯನ-ಅಧ್ಯಾಪನ ಇವೆಲ್ಲವು ಪರಿಪಕ್ವಗೊಂಡಿದ್ದು; ಅದರ ಚಿಂತನ-ಮಂಥನದಿಂದ ನವನೀತ-ತಪ್ಪುಗಳನ್ನು ನಾಡಿನ ಜನತೆ ಉಣಬಡಿಸಿದ್ದಾರೆ. ತಮ್ಮ ಭಾವಗೀತೆಗಳಾದ ಗೀತಗಾರುಡಿ, ಪ್ರೇಮಾಂಜಲಿ, ತೀರದ ತುಡಿತ, ಹೋಳಿ ಹುಣ್ಣಿಮೆ, ಕಾವ್ಯ ಕಲ್ಯಾಣ, ತಾಳ-ಮೇಳ, ಮಾವು-ಬೇವು, ಸಪ್ತಶೃಂಗ, ಗೀತ ಗಂಗೋತ್ರಿ, ರಾಗ ತರಂಗಿಣಿಯ ಮೂಲಕ ಜನ-ಮನಸಕ್ಕೆ ಒಂದಲ್ಲಾ ಒಂದು ರೀತಿಯಲ್ಲಿ ವಿವೇಕದ ಬುದ್ಧಿಯನ್ನು ಹಾಗೂ ಪರಿಪಕ್ವತೆ ಕಡೆಗೆ ಸಾಗುವ ಕಿಡಿ ಎಬ್ಬಿಸಿದ್ದಾರೆ. ಹೀಗೆ ಕವಿಯಾಗಿ ಕಾವ್ಯದಿಂದ ಕಾವ್ಯಕ್ಕೆ ದೊಡ್ಡ-ದೊಡ್ಡ ಕವಿಯಾಗಿ ಬೆಳೆದಿರುವವರೇ ನಮ್ಮೀ ದೊಡ್ಡರಂಗೇಗೌಡರು.

ಶೈಲಿ, ಪ್ರಾಸಗಳಲ್ಲಿಯೂ ದೊಡ್ಡರಂಗೇಗೌಡರು ತಮ್ಮ ತನವನ್ನು ಎಂದೂ ಬಿಟ್ಟುಕೊಟ್ಟವರಲ್ಲ. ಭಕ್ತಿ ಭಾವದ ನವ ಅಂತರಂಗ ತೆರೆದು ಕಾವ್ಯದೇವಿಗೆ ಅರ್ಪಿಸಿಕೊಂಡಿದ್ದಾರೆ. ಇವರ ಭಕ್ತಿ ಕುಸುಮಾಂಜಲಿಯನ್ನು ಸದಾ ಇಲ್ಲಿ ನಾವು ನೆನೆಯಲೇಬೇಕಾಗುತ್ತದೆ. ಸಹೃದಯರಿಗೆ ಮತ್ತು ಕಾವ್ಯದೇವಿಗೆ ನಿತ್ಯವೂ ನೂರೆಂಟು ನಮನ ಸಲ್ಲಿಸಿದ್ದಾರೆ. ತನ್ನೆಲ್ಲಾ ಸುಖ ನೋವು ನಲಿವು, ಒಲವು-ಗೆಲವು ಇವೆಲ್ಲವನ್ನು ಸಮಾಜಕ್ಕೆ ದಾರೆ ಎರೆದಿದ್ದಾರೆ.

ಬದುಕಿನ ಬೇವು-ಬೆಲ್ಲಗಳನ್ನು ಸಮಚಿತ್ತದಿಂದ ಸ್ವೀಕರಿಸುತ್ತಾ ಬಂದಿರುವ ದೊಡ್ಡರಂಗೇಗೌಡರು ರಮ್ಯದ ಭಾವುಕತೆ ಮತ್ತು ನವ್ಯದ ಭಾಷೆಯನ್ನು ಮೈಗೂಡಿಸಿಕೊಂಡಿದ್ದಾರೆ. ಪ್ರೀತಿ ಪ್ರಗಾಥ ಹಾಗೂ ಹಳ್ಳಿ ಹುಡುಗಿ ಹಾಡು-ಪಾಡುಗಳು ಇದಕ್ಕೆ ಸಾಕ್ಷಿಯಾಗಿವೆ. ಪ್ರೀತಿ-ಪ್ರೇಮದ ಉತ್ಕಟ ಕ್ಷಣಗಳನ್ನು ಕಾವ್ಯದಲ್ಲಿ ಹೊಸ ಚೆಲುವಿನೊಂದಿಗೆ ಅರಳಿಸುವ ಹೊಸ ಸಂಕಲ್ಪ ಮಾಡಿದ್ದಾರೆ. ಪ್ರೀತಿ-ಪ್ರೇಮದ ನೇರ-ಸರಳ ನಿರೂಪಣೆ ಇದಾಗಿದೆ. 'ಹಳೆ ಬೇರು ಹೊಸ ಚಿಗುರು ಕೂಡಿರಲು ಮರ ಸೊಬಗು' ಎಂಬ ನುಡಿ ಮುತ್ತಿನೊಂದಿಗೆ ತಮ್ಮ ಬದುಕನ್ನು ಬೆಸೆದುಕೊಂಡ ಮಣ್ಣಿನ ಮಗನಾಗಿ; ಮಣ್ಣಿನ ಮಾತುಗಳನ್ನು ನಮ್ಮೊಡನೆ ಚಿತ್ತರಿಸುವ ಗುಣವಂತರಾಗಿದ್ದಾರೆ. ಆದಕಾರಣ ಕವಿ ಹಿಂದಿನದನ್ನು ಎಂದೂ ಅಳಿಯದೆ ಹೊಸ ಕೃತಿಯನ್ನು ನಿತ್ಯ ಹುಡುಕಾಡುವ; ಅದನ್ನು ಸಮಾಜಕ್ಕೆ ಅರ್ಪಿಸುವ 'ಜ್ಞಾನ ಬಾಗಿನ'ವಾಗಿದ್ದಾರೆ.

ವಿಚಾರ ವಾಹಿನಿಯ ಆಲೋಚನೆಯಲ್ಲಿ ಈಜುತ್ತಾ; ಕವಿತೆ ಕಟ್ಟುವ ಕಾಯಕದಲ್ಲಿ ತೊಡಗಿರುವ ನಮ್ಮೀ ಗೌಡರು ಪರಿಸರ ಕಾಳಜಿಯ ಬಗೆಗೆ ಜನ-ಮನಕ್ಕೆ ಜಾಗೃತಿಯ ಅಮೃತ ಸಿಂಚನ ಮಾಡಿದ್ದಾರೆ. ನವನಾಗರೀಕತೆ ಮುಂದು-ಮುಂದುವರಿದಂತೆ ಚೈತನ್ಯ ಚಿಲುಮೆಯಾಗಿರುವ ನಿಸರ್ಗ ಹೇಗೆ ತನ್ನ ಅನನ್ಯತೆ ಕಳೆದುಕೊಳ್ಳುತ್ತಿದೆ ಎಂಬುದನ್ನು ತಮ್ಮ ವೈಚಾರಿಕ ಗದ್ಯ ಲೇಖನಗಳ ಮೂಲಕ ಅದರಲ್ಲಿಯೂ ವರ್ತಮಾನದ ವ್ಯಂಗ್ಯದಲ್ಲಿ ಬಿತ್ತರಿಸಿದ್ದಾರೆ. ನಾಡಿನ ಶ್ರೇಷ್ಠಕವಿಯಾಗಿ, ಚಲನಚಿತ್ರ ಗೀತರಚನಕಾರರಾಗಿ; ಭಾವಗೀತೆಗಳ ಹರಿಕಾರರಾಗಿ-ನಾಡಿನ ಜನ-ಮನದ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ.

ನವ್ಯ ಕವಿತೆಗಳ ಮೂಲಕ ನಾಡು-ನುಡಿಗೆ ಸ್ವಚ್ಛಂದವಾಗಿ ತಮ್ಮ ವಿಚಾರಗಳನ್ನೆಲ್ಲಾ ಹರಡಿದ್ದಾರೆ. ಜಗಲಿ ಹತ್ತಿ ಇಳಿದು, ಕಣ್ಣು ನಾಲಿಗೆ ಕಡಲು, ಮೌನ ಸ್ಪಂದನ, ನಾಡಾಡಿ, ಏಳು ಬೀಳಿನ ಹಾದಿ, ಕುದಿಯುವ ಕುಲುಮೆ, ಚದುರಂಗದ ಕುದುರೆಗಳು, ಬದುಕು ತೋರಿದ ಬೆಳಕು ಇವುಗಳ ಮೂಲಕ ತಾವು ಕಂಡ-ಉಂಡ ಅನುಭವಾಮೃತವನ್ನು ಸಮಾಜ ದೇಗುಲದಲ್ಲಿ ಸಿಂಚನಗೊಳಿಸಿದ್ದಾರೆ.

ರಾಷ್ಟ್ರಕವಿ ಕುವೆಂಪು, ಬೇಂದ್ರೆ ಅವರ ಪ್ರಭಾವ ಗೌಡರ ಮೇಲಿದ್ದು; ತಮ್ಮ ಕವನಗಳಲ್ಲಿ ಆ ವಿಚಾರಗಳನ್ನು ತೋಡಿಕೊಂಡಿದ್ದಾರೆ. ಗೌಡರು ಬೆಳೆದು ಬಂದ ಹಾದಿಯಿಂದ ಹಿಡಿದು ಇಂದಿನ ಅವರ ಜೀವನ ಕ್ರಮವೆಲ್ಲವೂ ಹಳೆಯ ಮತ್ತು ಹೊಸ ಅನುಭವದ ರಸಪಟ್ಟಿಗಳಾಗಿವೆ. ಪ್ರಕೃತಿ, ಪ್ರೀತಿ, ನೆಲ-ಜಲ, ಪೈರು, ಗೊಬ್ಬರ, ಬವಣೆ, ಬೇಗೆ, ಕಾವ್ಯ, ಕಾಮನಬಿಲ್ಲು, ಹಕ್ಕಿ-ಪಕ್ಕಿ ಹೀಗೆ ಅವರನ್ನು ಆವರಿಸಿಕೊಂಡಿರುವ ಎಲ್ಲಾ ಅಂಶಗಳೂ ಕೂಡ ತುಂಬು ಮನಮೋಹಕವೇ ಸರಿ. ಚೈತ್ರದ ಬಗೆಗೆ ಮನುಷ್ಯ ಪ್ರೀತಿಯ ಬಗೆಗೆ ಬರೆಯುವ ಯಾವುದೇ ಕವಿಯಾದರೂ ಆತನಲ್ಲಿ ಪರಿಪಕ್ವತೆ ತುಂಬಿರುವುದು ಕಂಡುಬರುತ್ತದೆ. ಒಟ್ಟಾರೆ ದೊಡ್ಡರಂಗೇಗೌಡರು ಪ್ಲೇಟೋ ತನ್ನ ವಿಶ್ವವಿಖ್ಯಾತ ಕೃತಿಯಾದ 'ರಿಪಬ್ಲಿಕ್' (ಗಣರಾಜ್ಯ)ನಲ್ಲಿ ಹೇಳಿರುವಂತೆ ಪರಿಪಕ್ವತೆ ಪ್ರಾಪ್ತವಾಗಿರುವ ನ್ಯಾಯವಂತ ಮನುಷ್ಯರೆಂಬುದನ್ನು ಅವರೆಲ್ಲಾ ವಿಚಾರಾಮೃತಗಳು ಸಾಬೀತುಗೊಳಿಸುತ್ತವೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಹರಿಕಾರರಾದ ನಮ್ಮೀ ದೊಡ್ಡರಂಗೇಗೌಡರು ನಮ್ಮ ನಡುವಿನ ಮಣ್ಣಿನ ಕಾವ್ಯ ಮಗನಾಗಿದ್ದು; ನಾಡು-ನುಡಿಯ ಚೇತನ ಚಿಲುಮೆಯಂತಿದ್ದಾರೆ, ಇಂತಹ ಒಬ್ಬ ಶ್ರೇಷ್ಠ ಕವಿಗಳು ನಮ್ಮೊಡನಿರುವುದು ನಮ್ಮೆಲ್ಲರ ಪುಣ್ಯ ಭಾಗ್ಯವೇ ಸರಿ. ಇವರಿಗೆ ದಯಾಮಯನಾದ ಭಗವಂತ ನೂರ್ಕಾಲ ಬಾಳಿ-ಬದುಕಲೆಂದು ಎಲ್ಲ ರೀತಿಯ ಶಕ್ತಿ-ಧೈರ್ಯ-ಪರಿಪಕ್ವತೆ ನೀಡಲೆಂದು ಬೇಡುತ್ತೇನೆ.

❑



# ಕನ್ನಡಕ್ಕಾಗಿ ಕೈ ಎತ್ತುವ ದೊಡ್ಡಜೀವ

• ರಾ.ನಂ. ಚಂದ್ರಶೇಖರ್

ಡಾ॥ ದೊಡ್ಡರಂಗೇಗೌಡರು ಜನಪ್ರಿಯ ಕವಿ. ಸಹೃದಯ ವಿಮರ್ಶಕರಾಗಿ, ಅಂಕಣ ಬರಹಗಾರರಾಗಿ, ಶ್ರೇಷ್ಠ ಪ್ರಾಧ್ಯಾಪಕರಾಗಿ ದೊಡ್ಡ ಹೆಸರು. ಚಿತ್ರಗೀತೆಗಳಿಗೆ ಅರ್ಥವಂತಿಕೆ, ತಾಜಾತನಗಳ ಮೂಲಕ ಕನ್ನಡಾಭಿಮಾನಿಗಳ ಹೃದಯದಲ್ಲಿ ವಿಶಿಷ್ಠ ಸ್ಥಾನಗಳಿಸಿಕೊಂಡಿದ್ದಾರೆ. ಇವು ಎಲ್ಲ ಕಡೆ ಗುರುತಿಸಲ್ಪಟ್ಟ ಸಂಗತಿಗಳು. ಗೌಡರ ವ್ಯಕ್ತಿತ್ವದ ಇನ್ನೊಂದು ಮುಖವಿದೆ. ಅದು ಕನ್ನಡ ನಾಡು-ನುಡಿಯ ರಕ್ಷಣೆ ಬಗ್ಗೆ ಅಪಾರ ಕಾಳಜಿ ಉಳ್ಳ ಒಬ್ಬ ಸೌಮ್ಯ ಹೋರಾಟಗಾರನದು. ಅದು ಎಲ್ಲೂ ಹೆಚ್ಚು ಪ್ರಸ್ತಾಪವಾಗಿಲ್ಲ. ಅವರು 'ಕನ್ನಡ-ಕನ್ನಡಿಗ-ಕರ್ನಾಟಕ'ಗಳ ವಿಚಾರ ಬಂದಾಗ ಸ್ಪಂದಿಸುವ ಪರಿ, ಕನ್ನಡ ಹೋರಾಟಗಾರರ ಬಗ್ಗೆ ತೋರುವ ಗೌರವ, ಕನ್ನಡ ಕಾರ್ಯಕರ್ತರೊಡನೆ ಸೌಜನ್ಯ ಪೂರಕವಾಗಿ ನಡೆದುಕೊಳ್ಳುವ ಬಗೆ ನನ್ನಂತಹ ಕನ್ನಡ ಕಾರ್ಯಕರ್ತರಿಗೆ ಆದರಣೀಯವಾದುದ್ದು. ಸದಾ ಹಸನ್ಮುಖಿಯಾಗಿರುವ ಗೌಡರು ಕನ್ನಡ ನಾಡು-ನುಡಿ ಆತಂಕಕ್ಕೆ ಸಿಲುಕಿದಾಗ ಕಿನ್ನರರಾಗುತ್ತಾರೆ. ಮೆಲುದನಿ ಗಡುಸಾಗುತ್ತದೆ. ಸುಮಾರು ಕಾಲು ಶತಮಾನದಿಂದ ದೊಡ್ಡರಂಗೇಗೌಡರನ್ನು ಬಲ್ಲೆ. ಅಂದಿನಿಂದ ಇಂದಿನವರೆಗೆ ಅದೇ ಕನ್ನಡ ನಿಷ್ಠೆ. ಕನ್ನಡ ಹಿತರಕ್ಷಣೆ ಪ್ರಶ್ನೆಬಂದಾಗ ಮಡಿವಂತಿಕೆಯಿಲ್ಲದೆ ಬೀದಿ ಚಳವಳಿಯಲ್ಲಿ ಪಾಲ್ಗೊಳ್ಳುತ್ತಾ ಬಂದಿರುವ ಶ್ರೀಯುತರು ಭಾಗವಹಿಸಿರುವ ಚಳುವಳಿಯ ಪಟ್ಟಿದೊಡ್ಡದು. ಆ ಪಟ್ಟಿ ಮಾಡುವುದು ಕಷ್ಟ ಜೊತೆಗೆ ಅದರ ಅಗತ್ಯವಿಲ್ಲ. ತಮ್ಮ ಪ್ರಶ್ನಾತೀತ 'ಕನ್ನಡ ಪ್ರೀತಿ'ಯಿಂದ ಎಲ್ಲಿ ಕನ್ನಡ ಕಾರ್ಯಕರ್ತರಿಗೆ ಆದರಣೀಯರೂ ಆಪ್ತರು ಆಗಿದ್ದಾರೆ.

ಕನ್ನಡ ಚಳುವಳಿಗೂ ಸಾಹಿತಿಗಳಿಗೂ ಬಿಡಿಸಲಾಗದ ನಂಟು. ಏಕೀಕರಣ ಚಳವಳಿ, ನಂತರ ಕನ್ನಡ ಭಾಷೆಯ ಅಸ್ತಿತ್ವಕ್ಕೆ ಅಪಾಯವಿದೆ ಅನ್ನುವ ವಾತಾವರಣ ನಿರ್ಮಾಣವಾದಾಗ ಅ.ನ.ಕೃ ನೇತೃತ್ವದಲ್ಲಿ ನಡೆದ ಚಳವಳಿ ನಂತರ ಕಾಗೆ ಕಾ ಎಂದ ಜಾಗದಲ್ಲೆಲ್ಲ ನಡೆದ ಗೋಕಾಕ್ ಚಳುವಳಿಗೆ ಮುನ್ನ ಕನ್ನಡ ಚಳುವಳಿ ಎಂದರೆ ಸಭ್ಯರಿಗಲ್ಲ ಅನ್ನುವ ಮಾತು ಕೇಳಿ ಬರುತ್ತಿತ್ತು. ಅಂತಹ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರದ, ವಿಶೇಷವಾಗಿ ಸಾಹಿತಿಗಳು-ಕಲಾವಿದರು

ಗೋಕಾಕ್ ಚಳುವಳಿಯಲ್ಲಿ ತೊಡಗಿಕೊಂಡ ಪರಿಣಾಮ ಮತ್ತೆ ಕನ್ನಡ ಚಳುವಳಿ ಕನ್ನಡ ಜನರ ಮನಗೆದ್ದು ಪರಿಣಾಮಕಾರಿಯಾದದ್ದು ಮಾತ್ರವಲ್ಲ. ಘನತೆ-ಗೌರವವನ್ನು ಪಡೆದುಕೊಂಡಿತು. ಇಂತಹ ಉತ್ತಮ ವಾತಾವರಣ ನಿರ್ಮಾಣವಾಗಲು ದೊಡ್ಡರಂಗೇಗೌಡರ ಪಾಲೂ ಇತ್ತು ಎಂಬುದು ಮರೆಯಲಾಗದು.

ಗೋಕಾಕ್ ಚಳುವಳಿಯ ಸಂದರ್ಭದಲ್ಲಿ ನನ್ನ ಪೂಜ್ಯಗುರುಗಳಾದ ಡಾ|| ಎಂ. ಚಿದಾನಂದಮೂರ್ತಿ ಅವರ ನೇತೃತ್ವದಲ್ಲಿ ರೂಪುಗೊಂಡ 'ಸಾಹಿತಿಗಳ ಕಲಾವಿದರ ಬಳಗ'ವು ಕನ್ನಡ ಪರ ಹೋರಾಟಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿತು. ಎಲ್ಲ ವರ್ಗದ ಜನ ಚಳವಳಿಯತ್ತ ಮುಖ ಮಾಡುವ ವಾತಾವರಣ ನಿರ್ಮಾಣವಾಯಿತು. ಬಳಗವು ನಡೆಸುತ್ತಿದ್ದ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಿದ್ದ ದೊಡ್ಡರಂಗೇಗೌಡರೂ ಆಶಾದಾಯಕ ಬೆಳವಣಿಗೆಗೆ ಕಾರಣಕರ್ತರಲ್ಲಿ ಒಬ್ಬರು. ಆ ದಿನಗಳಲ್ಲಿ ಹೊಸಕೋಟೆಯಲ್ಲಿ ವಾಸವಾಗಿದ್ದ ಗೌಡರು ಬೆಳಿಗ್ಗೆ ಚಳುವಳಿಯಲ್ಲಿ ಪಾಲ್ಗೊಂಡ ನಂತರ ಕಾಲೇಜಿಗೆ ಹೋಗುತ್ತಿದ್ದದ್ದು, ಸಂಜೆ ಚಳುವಳಿ ಸಭೆಗಳಲ್ಲಿ ಪಾಲ್ಗೊಂಡು ಕೊನೆಯ ಬಸ್ಸಿಗೆ ಮನೆಗೆ ಹೋಗುತ್ತಿದ್ದುದು ನನಗೆ ನೆನಪಿದೆ. ನಾವು ಕಾರ್ಯಕ್ರಮ ರೂಪಿಸಿದಾಗ ತಕ್ಷಣ ನೆನಪಾಗುತ್ತಿದ್ದ ಹೆಸರುಗಳಲ್ಲಿ ದೊಡ್ಡರಂಗೇಗೌಡ ಅವರದೂ ಒಂದು ಎಂಬುದನ್ನು ಉಲ್ಲೇಖಿಸಲೇಬೇಕು. 'ತಿರುವುಳ್ಳವರ್ ಪ್ರತಿಮೆ' ವಿರೋಧಿಸಿ ನಡೆದ ಚಳುವಳಿ ಬಗ್ಗೆ ವಿವರಿಸುವ ಅಗತ್ಯವಿಲ್ಲ. ಇಲ್ಲಿ ಒಂದು ಸಂಗತಿ ನೆನೆಯಬೇಕು. ರಾಜ್ಯ ಸರ್ಕಾರದ ಗಮನ ಸೆಳೆಯಲು ವಿಧಾನಸೌಧದ ಸಮೀಪವಿದ್ದ ಗೋಪಾಲಗೌಡ ವೃತ್ತದಲ್ಲಿ ಕನ್ನಡ ಶಕ್ತಿಕೇಂದ್ರ ಪ್ರತಿಮೆ ಸ್ಥಾಪನೆ ವಿರೋಧಿಸಿ ಧರಣಿ ಹಮ್ಮಿಕೊಂಡಿತ್ತು. ಧರಣಿಯ ಮುಕ್ತಾಯದಲ್ಲಿ ಸಭೆಯಿತ್ತು. ಆ ಸಭೆಯಲ್ಲಿ ದೊಡ್ಡರಂಗೇಗೌಡರು ಮಾತನಾಡುವುದಿತ್ತು. ಸಂಜೆ ತುಂತುರು ಮಳೆ ಆರಂಭವಾಯಿತು. ನೆನೆದು ಬಂದ ಗೌಡರು-ಮಾತನಾಡಲು ನಿಂತಾಗ ಮಳೆ ಜೋರಾಯಿತು. ಚಪ್ಪರ ಸೋರತೊಡಗಿತು. ವಿಚಲಿತರಾಗದ ಗೌಡರು 'ಮೇಘ ಸಂದೇಶ-ಶುಭ ಸಂದೇಶ' ನಾವು ಗೆಲ್ಲುತ್ತೇವೆ. ಕಾವ್ಯಾಭಿಮಾನಿಗಳೆಲ್ಲ ಮಳೆಗೆ ಹೆದರುವವರಲ್ಲ ಎಂದದ್ದು ನಂತರ ಒದ್ದೆ ಬಟ್ಟೆಯಲ್ಲೇ ಮನೆಗೆ ಹೋದದ್ದು ನೆನಪಿದೆ.

ಕಾವೇರಿ ವಿವಾದಕ್ಕೆ ಸಂಬಂಧಿಸಿದಂತೆ ಹಲವು ಚಳುವಳಿಗಳು ನಡೆದಿವೆ. ಬೆಂಗಳೂರಿನಲ್ಲಂತು ಉಗ್ರಪ್ರತಿಭಟನೆಗಳಾಗಿದೆ. ಇಂತಹ ಚಳುವಳಿಗಳೂ ಒಂದರಲ್ಲಿ ನಿಂತುಹೋಗಿತ್ತು. ತಮಿಳುನಾಡು ಕೇಂದ್ರದ ಮೇಲೆ ಒತ್ತಡ ತಂದಿತಲ್ಲದೆ ಎಂದಿನಂತೆ 'ಕರ್ನಾಟಕ ನೀರು ಬಿಡದಿರುವುದರಿಂದ ತಮಿಳು ನಾಡು ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿದ್ದಾರೆ'' ಎಂದು ರಾಷ್ಟ್ರಮಟ್ಟದಲ್ಲಿ ಸುದ್ಧಿಯಾಯಿತು. ಆಗ ಮಂಡ್ಯ ರೈತರು ವ್ಯವಸ್ಥಿತವಾಗಿ ದೊಡ್ಡ ಪ್ರಮಾಣದಲ್ಲಿ ನಿರಂತರ ಪ್ರತಿಭಟನೆ ನಡೆಸತೊಡಗಿದರು. ಬೆಂಗಳೂರಿನಲ್ಲಿ ವಿಶೇಷವಾಗಿ ಬುದ್ಧಿಜೀವಿಗಳು ಸ್ಪಂದಿಸದಿರುವ ಬಗ್ಗೆ ರೈತ ಸಂಘ, ಮಾದೇಗೌಡರು ನೊಂದು ಆಕ್ಷೇಪಿಸಿದರು. ತಕ್ಷಣ ಪ್ರತಿಭಟಿಸಲು ಡಾ|| ಎಂ.

ಚಿದಾನಂದಮೂರ್ತಿಯವರು ನೇಪಾಳಕ್ಕೆ ಹೋಗಿದ್ದರು. ಆಗ ಕನ್ನಡ ಗೆಳೆಯರ ಬಳಗದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ನೇತೃತ್ವದಲ್ಲಿ ಪ್ರತಿಭಟನೆ ಧರಣಿ ನಡೆಸಿತು. ಆಗ 30 ಗಣ್ಯ ಸಾಹಿತಿಗಳು, ಕಲಾವಿದರು, ಪತ್ರಕರ್ತರು ಪಾಲ್ಗೊಂಡಿದ್ದರು. ಅಂದು ದೊಡ್ಡರಂಗೇಗೌಡರು ಪ್ರಾರಂಭದಲ್ಲಿ ಮಾತನಾಡಿ ಸುಮಾರು 2-3 ಗಂಟೆಗಳು ಬಿಸಿಲಿನಲ್ಲಿಯೇ ಕುಳಿತಿದ್ದರು. ಇಂತಹ ಹಲವು ಘಟನೆಗಳನ್ನು ಹೇಳಬಹುದು. ಒಂದು ಮುಖ್ಯ ಘಟನೆಯನ್ನು ಇಲ್ಲಿ ಹೇಳಿ ಗೌಡರ ಕನ್ನಡಾಭಿಮಾನ ಎಂತಹದು ಎನ್ನುವುದನ್ನು ಸಾದರಪಡಿಸಿದರೆ ಸಾಕು ಎಂದು ತಿಳಿದಿದ್ದೇನೆ. ಧರ್ಮಸಿಂಗ್ ನೇತೃತ್ವದ ಸರ್ಕಾರ ರೀಮೇಕ್ ಚಿತ್ರಗಳಿಗೆ ಎಲ್ಲ ಸೌಲಭ್ಯವನ್ನು ಕೊಡುವುದಾಗಿ ಪ್ರಕಟಿಸಿದಾಗ ನಿರೀಕ್ಷಿತ ರೀತಿಯಲ್ಲಿ ಪ್ರತಿಭಟನೆ ಬರಲಿಲ್ಲ. ಚಿತ್ರರಂಗಕ್ಕೆ ಸಂಬಂಧಪಟ್ಟವರು ಧ್ವನಿ ಎತ್ತಲೇ ಇಲ್ಲ. ಆಗ ಕನ್ನಡ ಜನಶಕ್ತಿ ಮೊದಲು ಧರಣಿ ನಡೆಸಿತು. ನಂತರ ಕ.ರಾ.ರ.ಸಂ. ಕನ್ನಡ ಕ್ರಿಯಾಸಮಿತಿ ಪ್ರತಿಭಟನೆ ವ್ಯವಸ್ಥೆ ಮಾಡಿತು. ಆ ಪ್ರತಿಭಟನೆಯನ್ನು ಉದ್ಘಾಟಿಸಿದವರು ದೊಡ್ಡರಂಗೇಗೌಡರ. ಅಂದು ಅವರು ಆಡಿದ ಮಾತುಗಳು ನೇರವಾಗಿತ್ತು. ಚಿತ್ರ ಸಾಹಿತಿಯಾಗಿ ಚಿತ್ರರಂಗದ ಕೆಲವು ಕಟು ಸತ್ಯವನ್ನು ಉದ್ಧರಿಸಿದಾಗ ಪ್ರತಿಭಟನೆಯಲ್ಲಿದ್ದ ಕಿರಿಯ ಕಾರ್ಯಕರ್ತ ಹೇಳಿದ 'ಏನ್ ಸಾರ್ ಇಷ್ಟು ನೇರವಾಗಿ ಹೇಳುತ್ತಿದ್ದಾರೆ; ನಾಳೆ ಇವರಿಗೆ ಚಿತ್ರರಂಗದವರು ಅವಕಾಶ ಕೊಡುವುದು ಅನುಮಾನ' ಎಂದು. ಇದು ಗೌಡರ ಕನ್ನಡ ಪ್ರೀತಿ. ಸರಳರೂ, ಸಜ್ಜನರೂ ಆದ ಗೌಡರು ನೂರ್ಕಾಲ ನಮ್ಮೊಡನಿರಲಿ ಎಂದು ಕನ್ನಡಾಭಿಮಾನಿಗಳ ಪರವಾಗಿ ಆಶಿಸುತ್ತೇನೆ.

❑



# ಗೌಡರೊಂದಿಗಿನ ದಿನ

• ಡಾ|| ಎಂ.ಬಿ. ಹೂಗಾರ

ಕನ್ನಡದ ಕಾವ್ಯ ಪ್ರಪಂಚ ಹಾಗೂ ಚಿತ್ರರಂಗ ಪ್ರಪಂಚದಲ್ಲಿ ದೊಡ್ಡರಂಗೇಗೌಡರ ಹೆಸರು 'ದೊಡ್ಡ'ದು! ಕರ್ನಾಟಕದಾದ್ಯಂತ ಅವರ ಹೆಸರು ಚಿರಪರಿಚಿತ!

ಗೌಡರು ಎಷ್ಟು ಎತ್ತರಕ್ಕೇರಿದ್ದಾರೆಯೋ ಅಷ್ಟೇ ವಿನಯ-ಸೌಜನ್ಯ ಅವರಲ್ಲಿ ಬೆರೆತುಕೊಂಡಿದೆ. ಸಾಮಾನ್ಯವಾಗಿ ವಿದ್ವತ್ತು-ಸೌಜನ್ಯ ಇವೆರಡೂ ಒಬ್ಬನೇ ವ್ಯಕ್ತಿಯಲ್ಲಿ ಕೂಡಿರುವುದು ಅಪರೂಪ. ಗೌಡರು ಮಾತ್ರ ಇದಕ್ಕೊಂದು ಅಪವಾದ!

ಕರ್ನಾಟಕ ಸರಕಾರದ ಪಿಯುಸಿ ಪಠ್ಯ ಪುಸ್ತಕ ರಚನಾ ಸಮಿತಿಯ ಸದಸ್ಯನಾಗಿ ಕಾರ್ಯಮಾಡುವ ಸದವಕಾಶ ನನಗೊದಗಿ ಬಂದಿತ್ತು. ಡಾ|| ವಿವೇಕರೈ ಅವರು ಕಾರ್ಯಾಧ್ಯಕ್ಷರು. ಈ ಭಾಗದಿಂದ ನಾನು ಡಾ|| ಶ್ಯಾಮಸುಂದರ ಬಿದರಕುಂದಿ, ಡಾ|| ದಿಬ್ಬದ ಇವರೆಲ್ಲ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ ಪಠ್ಯಸಮಿತಿ ಕರೆದ ಸಭೆಗೆ ಹೋಗಿದ್ದೆವು. ಈ ಮೊದಲು ನಾನು ರಂಗೇಗೌಡರ ಹೆಸರನ್ನು ಕೇಳಿದ್ದೆ. ಆದರೆ ನೋಡಿರಲಿಲ್ಲ. ಅದೇ ಮೊದಲ ಸಲ ಅವರನ್ನು ನಾನು ಕಂಡದ್ದು.

ಗೌಡರು ಇಷ್ಟು ಸರಳರೆ? ಆಶ್ಚರ್ಯವೆನಿಸಿತು. ಪರಿಚಯವಾದಕೂಡಲೇ ಆತ್ಮೀಯರಾದರು! ಕೆಲವರು ಪರಿಚಯಸ್ಥರಿದ್ದರೂ ಅಪರಿಚಿತರಂತೆ ವರ್ತಿಸುತ್ತಾರೆ. ಗೌಡರದು ಸರಳ ಸ್ವಭಾವ. ನಿಷ್ಕಲ್ಮಶ ಮಗುವಿನ ಮನಸ್ಸು ಅವರದು. ಮುಗ್ಧರು. ಮೋಸ ವಂಚನೆ ಕಪಟಗಳು ಅವರಿಂದ ಮಾರುದ್ದ ದೂರ.

ಪಠ್ಯಕ್ಕೆ ಸಂಬಂಧಿಸಿದಂತೆ ವಿಷಯ ಹಂಚಿಕೊಳ್ಳುವಾಗ ಗೌಡರಿಗೆ ಯಾವುದು ಕೊಟ್ಟರೂ ಸರಿ. ನಕಾರಾತ್ಮಕ ಉತ್ತರ ಅವರ ಬಾಯಿಂದ ಬಂದುದೇ ಇಲ್ಲ. ಮಧ್ಯ-ಮಧ್ಯದಲ್ಲಿ ಸೊಗಸಾದ ಅನುಭವಗಳ ರಸಗಂಗೆ ಗೌಡರ ಹೃದಯದಿಂದ ಹೊರ ಸೂಸುತ್ತಿತ್ತು. ತರಾಸು ಅವರು ಹೊಯ್ಸಳೇಶ್ವರ ಕಾದಂಬರಿಯಲ್ಲಿ ಎರೆಯಂಗನನ್ನು (ವಿಷ್ಣುವರ್ಧನನ ತಂದೆಯನ್ನು) ಕುರಿತು

ಹೇಳುವ ಮಾತು 'ದೊರೆಯ ಹೆಸರು ಎರೆಯುಂಗ ಅವನ ಮಾತು ಕಾಸಿಗಂಗಾ' ನನಗೆ ಗೌಡರನ್ನು ಕಂಡಾಗೊಮ್ಮೆ ಅನ್ನಿಸಿಬಿಡುವುದು. ಇವರು ನಮ್ಮ ಎರೆಯುಂಗ ಎಂದು!

ಇನ್ನೊಂದು ಸಭೆ ಮಂಗಳೂರಿನಲ್ಲಿ. ಸಂಜೆ ನಾನು ಗೌಡರೊಂದಿಗೆ ಸಮುದ್ರ ತೀರದಲ್ಲಿ ತಿರುಗಾಡುತ್ತಿದ್ದೆ. ನಾನು ಯಾವುದಾದರೊಂದು ವಿನೋದ ಪ್ರಸಂಗ ಹೇಳಿದರೆ ತೀರಿತು; ಗೌಡರು ಮನಸ್ಸು ಬಿಚ್ಚಿ ನಗುವವರು. ನಮ್ಮಲ್ಲಿ ಒಬ್ಬರಿಗೆ ಸನ್ಮಾನ ನಡೆದಿತ್ತು. ನಮ್ಮ ಊರ ಕಡೆ. ಸನ್ಮಾನ ಮಾಡುವವರು ಮಾಲೆಯನ್ನು ಮರೆತು ಬಂದಿದ್ದರು. ಸನ್ಮಾನ ಮೂರ್ತಿಗಳು ಸನ್ಮಾನಪ್ರಿಯರು. ಅವರಿಗೆ ಎಷ್ಟು ಮಾಲೆ ಹಾಕಿದರೂ ಭಾರ ಹೊರುವ ಸಾಮರ್ಥ್ಯ. ಅವರದು 'ಕಂಚಿನ ಕಂಠ' ಕಂಚಿನಷ್ಟೇ ಗಟ್ಟಿ! ಮಾಲೆ ಮರೆತು ಬಂದ ಮಹನೀಯರು ಕೈಕೈ ಹಿಸುಕಿ ಸನ್ಮಾನ ಮಾಡಿಸಿಕೊಳ್ಳುವವರು ಎಪ್ಪತ್ತಕ್ಕೆ ಸಮೀಪವಿದ್ದರೂ ಥೇಟ್ ಮದುಮಗನಂತೆ ಸಾಲಂಕೃತಗೊಂಡು ವೇದಿಕೆಯ ಮೇಲೆ ಆಸೀನರಾಗಿದ್ದರು. ತಮಗೆ ಸನ್ಮಾನ ಮಾಡಲು ಬಂದವರ ಗೋಳನ್ನು ಅರಿತು ತಾವೇ ಸ್ವತಃ ಎದ್ದುನಿಂತು ತಮ್ಮ ಉದ್ದ ಗೋಣನ್ನು ಮುಂದೆಮಾಡಿ ಇದೇ, ಈ ಟೇಬಲ್ ಮೇಲಿನ ಮಾಲೆಯನ್ನು ತೊಗೊಂಡು ಹಾಕ್ರ ಬಹುತಃ ನೀವು ಮಾಲಿ ಮರೆತಿರಬೇಕು ಅಂದು ಫೋಟೋಗ್ರಾಫರ್ ಕಡೆ ನೋಡಿ ಫೋಟೋ ತಗೀರಿ ಎಂದೂ ಹೇಳಿದ್ದರು.

ಈ ಸಂಗತಿಯನ್ನು ನಾನು ಗೌಡರಿಗೆ ಹೇಳಿದಾಗ ಗೌಡರು ಹೊಟ್ಟೆ ಹಿಡಿದು ನಕ್ಕದ್ದೇ ನಕ್ಕದ್ದು.

**ಗೌಡರ ಸಂಸ್ಕೃತಿ ಪ್ರೀತಿಯ ಒಂದು ಪ್ರಸಂಗ:**

ಕನ್ನಡ ಚಿತ್ರ ನಿರ್ಮಾಪಕರೊಬ್ಬರು ಗೌಡರಿಗೆ ಚಿತ್ರಗೀತೆಗಳನ್ನು ಬರೆಯಲು ಕೇಳಿಕೊಂಡಿದ್ದರಂತೆ. ಗೌಡರು ಒಪ್ಪಿದ್ದೂ ಆಗಿತ್ತು. ಫೈವ್‌ಸ್ಟಾರ್ ಹೋಟೆಲ್ ಒಂದರಲ್ಲಿ ಸನ್ನಿವೇಶವೊಂದರ ದೃಶ್ಯ. ಅದು ತುಂಬ ಅಶ್ಲೀಲವಾಗಿತ್ತಂತೆ. ಒಂದು ಹೆಣ್ಣಿನ ಅಂಗಾಂಗ ಕುರಿತ ಗೀತೆ ರಚನೆ ಮಾಡಬೇಕಿತ್ತಂತೆ. ಗೌಡರು ಏನನ್ನೂ ಮಾತನಾಡದೆ ಹಣಕ್ಕಾಗಿ ನನ್ನ ಸಂಸ್ಕೃತಿ ಹರಾಜಾಗುವುದನ್ನು ನನ್ನ ಕವಿತೆ ಹೇಳುವುದಿಲ್ಲವೆಂದು ನುಡಿದು ಅವರು ಕೊಟ್ಟ ಹಣವನ್ನು ಅವರಿಗೆ ಹಿಂದಿರುಗಿಸಿ ಮರಳಿ ಮನೆಗೆ ಬಂದರಂತೆ. ಇದು ಗೌಡರ ಅಪ್ಪಟ ಸಂಸ್ಕೃತಿ ಪ್ರೀತಿಯ ಒಂದು ನಿದರ್ಶನ. ಬೇರೆಯಾಗಿದ್ದರೆ ಏನು ಮಾಡುತ್ತಿದ್ದರೊ ಗೊತ್ತಿಲ್ಲ; ಗೌಡರು ಮಾತ್ರ ಹಣಕ್ಕೆ ತಮ್ಮತನವನ್ನು ಮಾರಿಕೊಳ್ಳಲಿಲ್ಲ! ಇದು ಶುದ್ಧ ಕನ್ನಡ ಮನಸ್ಸು.

**ಇನ್ನೊಂದು ಸಂಗತಿ:**

ಮಂಗಳೂರಿನ ಆರ್ಟ್ಸ್ ಸ್ಕೂಲ್‌ನವರು ರಂಗೇಗೌಡರು ಬಂದಾರೆ ಎಂಬುದನ್ನು ಅರಿತು ತಮ್ಮ ಸ್ಕೂಲಲ್ಲಿ ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದ್ದರು. ಗೌಡರು ಕಲೆ-ಸಾಹಿತ್ಯ ಕುರಿತು ಸುಮಾರು 40 ನಿಮಿಷ ಬಹಳ ಸೊಗಸಾಗಿ ಮಾತನಾಡಿದರು. ತಾವೇ ಅದೇತಾನೆ ರಚಿಸಿದ

ಕವಿತೆಯನ್ನು ಸುಶ್ರಾವ್ಯವಾಗಿ ಹಾಡಿದರು. ಶ್ರೋತೃಗಳು ಮಂತ್ರಮುಗ್ಧರಾದರು. ಆ ಘಟನೆ ಇನ್ನೂ ನನ್ನೆದೆಯಲ್ಲಿ ಹಸಿರಾಗಿ ಉಳಿದಿದೆ.

ಇತ್ತೀಚೆಗೆ ಬೆಂಗಳೂರಲ್ಲಿ 'ಸಂಸ' ಬಯಲುರಂಗ ಮಂದಿರದಲ್ಲಿ ಒಂದು ಕಾರ್ಯಕ್ರಮ. ಸುರ್ವೆ ಅವರಿಗೆ ವಿಶ್ವೇಶ್ವರಯ್ಯ ಪುರಸ್ಕಾರ ಬಂದಿತ್ತು. ಅದಕ್ಕೆ ನಾವೆಲ್ಲರೂ ಬೆಂಗಳೂರಿಗೆ ಬಂದಿದ್ದೆವು. ಗೌಡರನ್ನು ಕಂಡೇ ಹೋಗಬೇಕೆಂದು ಕಾದೆವು. ನಾನು ಬಸ್ ರಿಜರ್ವ್ ಮಾಡಿದ್ದೆ, ವೇಳೆ ಆಗ್ತಾ ಬಂತು. ಆದರೆ ಗೌಡರು ಇನ್ನು ಬಂದಿರಲಿಲ್ಲ. ಚಾತಕ ಪಕ್ಷಿತರ ಕಾದ ಅನುಭವ. ಹೇಗೋ ಗೌಡರು ಬಂದಿದ್ದು ವೇದಿಕೆಮೇಲೆ ಕುಳಿತಿದ್ದರು. ಅವರ ಮತ್ತು ನನ್ನ ಆತ್ಮೀಯ ಸಂಬಂಧ ಸಭೆಯ ಒಳಪರಿಚಾರಿಕತೆಯನ್ನು ಮರೆಸಿತು. ಅವರನ್ನು ಕಂಡ ಕೂಡಲೆ ನನಗೆ ಖುಷಿಯೋ ಖುಷಿ! ಮಾತು ಮನದೊಳಗೆ ಹೂತುಕೊಂಡಿತ್ತು. ಯಾರಿಗೂ ಏನೂ ಹೇಳದೆ ನೇರವಾಗಿ ವೇದಿಕೆಗೆ ಹೋಗಿ ಅವರ ಹತ್ತಿರವೇ ನಿಂತುಕೊಂಡೆ. ಬಹುಶಃ ನನಗಾದ ಅನುಭವ ಗೌಡರಿಗೂ ಆಗಿರಬೇಕು. ಅವರು ಒಮ್ಮೆಲೆ ಎದ್ದು ಕೈಕುಲುಕಿ ಅಪ್ಪಿಕೊಂಡರು. ಆ ಸ್ನೇಹ ಯಾವ ರಕ್ತ ಸಂಬಂಧಗಳಿಗೂ ಮಿಗಿಲಾದುದು. 'ಯಾವಾಗ ಬಂದಿರಿ ಹೂಗಾರ ಅವರೆ' ಇದಿಷ್ಟೇ ಅವರು ಅಂದದ್ದು. ಈ ಮಾತಿನಲ್ಲಿ ಸಾಹಿತ್ಯಕ ಅಂಶವೇನೂ ಇಲ್ಲ. ಆದರೆ ಅದನ್ನೆಲ್ಲ ಮೀರಿದ ಭಾವನಾತ್ಮಕ ಸಂಬಂಧ; ಆ ಪ್ರೀತಿ ಅದು ಶಬ್ದಗಳನ್ನು ಮೀರಿದ್ದು. ನನಗೆ ಬಸ್ಸು ರಿಜರ್ವಮಾಡಿದ್ದು ಮರೆತು ಹೋಯಿತು. ಹಳೆಯ ನೆನಪುಗಳಲ್ಲಿ ನಾವಿಬ್ಬರೂ ಕಳೆದುಹೋಗಿದ್ದೆವು. ರಾಜ್ಯೋತ್ಸವ ಪ್ರಶಸ್ತಿ ವಿಜೇತ, ಕರ್ನಾಟಕದ ಜನರಿಗೆಲ್ಲ ಚಿರಪರಿಚಿತ ಚಿತ್ರಗೀತೆಗಳ ರಚನೆಗಾರ ಗಡಿಭಾಗದ ಅಧ್ಯಾಪಕ ಮಿತ್ರನೊಂದಿಗೆ ಬೆರೆತು ಆನಂದದ ಮಾತುಗಳಾನ್ನಾಡಿದುದು ನನಗಿನ್ನೂ ಕಣ್ಣುಗಳಲ್ಲಿ ಕಟ್ಟಿದೆ. ಮಾತು ಮುಗಿಯುವ ಹೊತ್ತು. ಗಡಿಯಾರ ನೋಡಿದೆ ರಾತ್ರಿ 9 ಗಂಟೆಯಾಗಿತ್ತು. ನಾನು ರಿಜರ್ವೇಶನ್ ಮಾಡಿಸಿದ ಬಸ್ಸು ಹೋಗಿತ್ತು. ಕೈಯಲ್ಲಿ ಟಿಕೇಟಿತ್ತು; ಎದೆಯಲ್ಲಿ ಗೌಡರ ನೆನಪಿತ್ತು! ಗೌಡರು ನನ್ನ ಹೆಗಲಮೇಲೆ ಕೈಯಿಟ್ಟು ಮಾತನಾಡಿದ್ದರು. ಈಗ ನನ್ನ ಹೆಗಲು ಇದೆ ಅದರ ಮೇಲೆ ಗೌಡರ ಕೈಯಿದ್ದ ಅನುಭವವೂ ಇದೆ!

❑



# ಹಿತಮಿತ ಮೃದುವಚನಂ

● ಕೆ. ಮುಕುಂದನ್

ಆತ್ಮೀಯ ಮಿತ್ರ ದೊಡ್ಡರಂಗೇಗೌಡರ ಬಗ್ಗೆ ಒಂದು ಲೇಖನವನ್ನು ಕೊಡಿ ಎಂದು ಕೇಳಿದಾಗ ನನ್ನ ನೆನಪು 38ವರ್ಷಗಳ ಹಿಂದಿನವರೆಗೆ ಓಡಿತು. ನಾನು ಹಾಗೂ ಗೌಡರು ಕನ್ನಡ ಬಿ.ಎ. (ಆನರ್ಸ್) ಮತ್ತು ಎಂ.ಎ. ತರಗತಿಗಳಲ್ಲಿ 5 ವರ್ಷಗಳ ಕಾಲ ಸಹಪಾಟಿಗಳು. ಇಪ್ಪತ್ತರ ಹರೆಯದಲ್ಲಿ ಅವರು ಹೇಗೆ ಉತ್ಸಾಹಪುಟಿಯುವಂತಿದ್ದರೋ ಅರವತ್ತರ ಮಾಗಿದ ದಿನಗಳಲ್ಲಿಯೂ ಅದೇ ತಾಜಾತನವನ್ನು ಉಳಿಸಿಕೊಂಡವರಾಗಿದ್ದಾರೆ. ಅಂದಿನ ದಿನಗಳಲ್ಲಿಯೂ ಒಂದು ರೀತಿಯಲ್ಲಿ ಕನ್ನಡವನ್ನು ವಿಶೇಷವಾಗಿ ಅಭ್ಯಾಸ ಮಾಡಲು ಹೋಗುವವರಲ್ಲಿ 90% ಹೆಚ್ಚು ಜನ ಆರ್ಥಿಕವಾಗಿ ಮಧ್ಯಮ ಹಾಗೂ ಕೆಳವರ್ಗಗಳಿಂದ ಬಂದವರೇ ಆಗಿದ್ದವರು. ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಒಂದು ಪ್ರತಿಷ್ಠಿತ ವಿದ್ಯಾ ಸಂಸ್ಥೆಯಾಗಿದ್ದು ಅಲ್ಲಿ ಅಭ್ಯಾಸಮಾಡುವುದೇ ಒಂದು ಪ್ರತಿಷ್ಠೆಯ ವಿಷಯವಾಗಿತ್ತು. ಆದರೂ ಆ ಸಮಯದಲ್ಲಿ ಕಾಲೇಜಿನ ವಾತಾವರಣದಲ್ಲಿ ಕನ್ನಡಕ್ಕೆ ಅಂತಹ ಪ್ರತಿಷ್ಠೆಯೇನೂ ಇರಲಿಲ್ಲ. ಕನ್ನಡ ವಿಭಾಗದಲ್ಲಿ ರಂ.ಶ್ರೀ ಮುಗಳಿ ಎಂ.ವಿ. ಸೀತಾರಾಮಯ್ಯ, ಜಿ.ಎಸ್. ಶಿವರುದ್ರಪ್ಪ, ಡಾ|| ಚಿದಾನಂದಮೂರ್ತಿಗಳಂತಹ ಮಹಿಮಾನ್ವಿತರು ನಮ್ಮ ಗುರುಗಳಾಗಿದ್ದವರು. ರಾಜರತ್ನಂರಂತಹ ಅದ್ಭುತ ವ್ಯಕ್ತಿತ್ವದವರು ನಮಗೆ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಬೇಂದ್ರೆ, ಡಿ.ಎಲ್.ಎನ್, ವಿ.ಸೀ. ಮುಂತಾದ ಅತಿರಥಮಹಾರಥರು ವಿಶೇಷ ಅತಿಥಿಗಳಾಗಿ ವಿದ್ಯಾರ್ಥಿಗಳನ್ನು ಸಂಭೋಧಿಸಿ ಮಾತನಾಡುತ್ತಿದ್ದರು. ವಿದ್ಯಾರ್ಥಿಗಳಲ್ಲೂ ಅಂಥದೇ ಉತ್ಸಾಹ. ಆದರೂ ತರಗತಿಯಿಂದ ಹೊರಗಡೆ ಕನ್ನಡ ವಿಭಾಗದ ಎಲ್ಲ ವಿದ್ಯಾರ್ಥಿಗಳು ಹೆಚ್ಚು ಸಮಯ ಕಳೆಯುತ್ತಿದ್ದುದು ಸೆಂಟ್ರಲ್ ಕಾಲೇಜ್ ಲೈಬ್ರರಿಯಲ್ಲಿ ಹಾಗೂ ಅದರ ಹೊರಗಿನ ಕಟ್ಟೆಯಲ್ಲಿ. ಬೇರೆ ವಿಭಾಗಗಳ ವಿದ್ಯಾರ್ಥಿಗಳಂತೆ ಇತರೇ ಪಠ್ಯೇತರ ಚಟುವಟಿಕೆಗಳಲ್ಲಿ (ಸಾಹಿತ್ಯೇತರ) ಈ ವಿಭಾಗದ ವಿದ್ಯಾರ್ಥಿಗಳು ಭಾಗವಹಿಸುತ್ತಿದ್ದುದು ತೀರಾ ವಿರಳವೇ ಆಗಿತ್ತು. ಇಂದು ಆ ದಿನಗಳನ್ನು ನೆನಪಿಸಿಕೊಂಡಾಗ ಬಹುಶಃ ನಮ್ಮ ಅಂದಿನ ಆರ್ಥಿಕ ಪರಿಸ್ಥಿತಿ ಅಷ್ಟಾಗಿ ಇಂಗ್ಲಿಷ್

ಭಾಷೆಯಲ್ಲಿ ಸಂಭಾಷಿಸಲು ತಡಕಾಡುತ್ತಿದ್ದ ನಮಗೆ ನಮಗರಿಯದಂತೆ ನಮ್ಮನ್ನು ಕಾಡುತ್ತಿದ್ದುದು ಒಂದು ರೀತಿಯ ಕೀಳರಿಮೆ. ಹೀಗಾಗಿ ನಾವು ವಿದ್ಯಾರ್ಥಿಗಳು ನಿರಂತರವಾಗಿ ಭಾಗವಹಿಸುತ್ತಿದ್ದುದೆಂದರೆ ನಗರದ ಬೇರೆ ಬೇರೆ ಭಾಗಗಳಲ್ಲಿ ನಡೆಯುತ್ತಿದ್ದ ಉಪನ್ಯಾಸಗಳು ಹಾಗೂ ರವೀಂದ್ರ ಕಲಾಕ್ಷೇತ್ರದಲ್ಲಿ 70ರ ದಶಕದಲ್ಲಿ ಪ್ರದರ್ಶಿತವಾದಂತಹ ನಾಟಕಗಳನ್ನು ನೋಡುವುದೇ ಆಗಿತ್ತು. ಇದಲ್ಲದೆ ನಮ್ಮ ಕೆಲವರಿಗಿದ್ದ ಏಕೈಕ ಹವ್ಯಾಸವೆಂದರೆ ಸಿನಿಮಾಗಳನ್ನು ನೋಡುವುದು. ಈ ಮಾತನ್ನು ಏಕೆ ಉಲ್ಲೇಖಿಸುತ್ತಿದ್ದೇನೆಂದರೆ ಇಂದು ಕನ್ನಡ ಚಲನಚಿತ್ರ ರಂಗದಲ್ಲಿ ದೊಡ್ಡ ಹೆಸರು ಮಾಡಿರುವ ಗೌಡರೂ ಸಹ ಒಂದು ಕಾಲದಲ್ಲಿ ಅತಿಯಾಗಿ ಸಿನಿಮಾ ನೋಡುತ್ತಿದ್ದ ನನ್ನಂತಹವನ ಬಳಗಕ್ಕೆ ಸೇರಿದ್ದವರಾಗಿದ್ದವರು.

ನಾವು 1976ರಲ್ಲಿ ಬಿ.ಎ. (ಆನರ್ಸ್) ತರಗತಿಗೆ ಸೇರಿದಾಗ, ಬಹುಶಃ ಸೆಂಟ್ರಲ್ ಕಾಲೇಜಿನ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ 30 ಜನ ಕನ್ನಡ ಆನರ್ಸ್ ತರಗತಿಗೆ ಸೇರಿದ್ದು. ಆ ಮೊದಲು ಕನ್ನಡ ಆನರ್ಸ್ ತರಗತಿಗಳಲ್ಲಾಗಲಿ, ಎಂ.ಎ. ತರಗತಿಗಳಲ್ಲಾಗಲಿ ಎರಡಂಕೆಯ ವಿದ್ಯಾರ್ಥಿಗಳೇ ಇರಲಿಲ್ಲ. 'ಮನುಜ' ಕಾವ್ಯನಾಮದಲ್ಲಿ ಆಗಿನಿಂದಲೇ ಬರೆಯಲು ಪ್ರಾರಂಭಿಸಿದ್ದ ಗೌಡರ ಬಗ್ಗೆ ಹಾಗೂ ಮತ್ತೊಬ್ಬ ಆತ್ಮೀಯ ಮಿತ್ರ ಸು. ರುದ್ರಮೂರ್ತಿಶಾಸ್ತ್ರಿಯ ಬಗ್ಗೆ ನಮಗೆಲ್ಲ ಒಂದು ರೀತಿಯ ಅಭಿಮಾನ. ಅದರಲ್ಲೂ ದೊಡ್ಡರಂಗೇಗೌಡರು ಆರ್.ಎಂ.ಎಸ್. ಇಲಾಖೆಯಲ್ಲಿ ಕೆಲಸ ಮಾಡಿಕೊಂಡು ಜೀವನನಿರ್ವಹಿಸುತ್ತಾ ಬಿಡುವಿನ ವೇಳೆಯಲ್ಲಿ ತರಗತಿಗಳಿಗೆ ಹಾಜರಾಗುತ್ತಿದುದು ಇಂದು ನೆನಪಿಸಿಕೊಂಡರೆ ಅವರದು ಅದ್ಭುತ ಸಾಧನೆಯೇ ಸರಿ.

ಅಂದಿನಿಂದ ಇಂದಿನವರೆಗೂ ಗೌಡರ ವ್ಯಕ್ತಿತ್ವದಲ್ಲಿ ಕಾಣುವ ಒಂದು ವಿಶೇಷ ಗುಣವೆಂದರೆ ಅದೇ ಸರಳತೆ, ಸಾಹಿತ್ಯದ ಬಗ್ಗೆ, ವಿಶೇಷವಾಗಿ ಕನ್ನಡದ ಬಗ್ಗೆ ಇರುವ ಅವರ ಅಪಾರ ಕಾಳಜಿ, 'ಹಿತಮಿತಮೃದುವಚನಂ' ಎನ್ನುವ ಕವಿಯ ಮಾತು ಇವರಿಗೆ ಅನ್ವರ್ಥ. ಬೇರೆ ಬೇರೆ ಸಂದರ್ಭದಲಿ ನನ್ನ ಇತರೇ ಗೆಳೆಯರಿಗೆ ಇವರನ್ನು ಪರಿಚಯ ಮಾಡಿಕೊಡುವ ಸಂದರ್ಭ ಬಂದಾಗ ಬೆರಗುಗಣ್ಣಿನಿಂದ ಇವರನ್ನು ನೋಡಿ ಇವರು ಮರೆಯಾದ ನಂತರ ಬಹಳಷ್ಟು ಜನ ಹೇಳುತ್ತಿದ್ದ ಒಂದೇ ಮಾತೆಂದರೆ ಇಷ್ಟು ಹೆಸರು ಮಾಡಿದ ವ್ಯಕ್ತಿ ಎಷ್ಟು ನಿಗರ್ವಿ, ಎಷ್ಟು ಸರಳ, ಇದು ಗೌಡರು ರೂಡಿಸಿಕೊಂಡದ್ದು ಎನ್ನುವುದಕ್ಕಿಂತ ಹುಟ್ಟಿನಿಂದ ಅವರ ವ್ಯಕ್ತಿತ್ವದಲ್ಲಿ ಮೂಡಿದ ಗುಣ. ಮಿತ್ರರು ಯಾರಾದರೂ ಸಮಸ್ಯೆಗಳನ್ನು ಹೇಳಿಕೊಂಡರೆ ಒಡನೆಯೇ ತಮ್ಮ ಸಹಾಯಹಸ್ತವನ್ನು ಚಾಚುತ್ತಾರೆ. ಅವರಿಗೆ ನಮ್ಮವರು ಬೇರೆಯವರು ಎನ್ನುವ ಭೇದಭಾವವಿಲ್ಲ ಎಲ್ಲರೂ ತಮ್ಮವರೆ 'ವಸುದೈವ ಕುಟುಂಬಕಂ.'

ವಿದ್ಯಾರ್ಥಿದೆಸೆಯಲ್ಲಿ ಅವರು ಉದ್ಯೋಗ ಮಾಡಿಕೊಂಡು ಅಭ್ಯಾಸ ಮಾಡುತ್ತಿದ್ದುದರಿಂದ ಬಹುಶಃ ನಮಗಿಂತ ಅವರ ಅರ್ಥಿಕ ಪರಿಸ್ಥಿತಿ ಉತ್ತಮವಾಗಿತ್ತು ಅವರೆ ತಮ್ಮ ಕೈಯಿಂದ

ಖರ್ಚುಮಾಡಿ ಒಂದು ಕೈಬರಹ ಪತ್ರಿಕೆಯನ್ನೂ ತರಲು ಪ್ರಯತ್ನಿಸಿದುದು. ಆಗ ನಾವು ಕೆಲವರು ಅವರ ಜೊತೆಗೂಡಿ ಲಿಪಿಕಾರರಾಗಿ ಕೆಲಸ ಮಾಡಿದ ನೆನಪು ಇದೆ.

ಎಂ.ಎ. ತರಗತಿಯ ನಂತರ ನಮ್ಮ ಬದುಕಿನ ದಾರಿಗಳು ಬೇರೆ ಬೇರೆಯಾಯಿತು. ಚಲನಚಿತ್ರರಂಗದಲ್ಲಿ ಅವರದು ಬಹಳ ದೊಡ್ಡ ಹೆಸರಾಗಿ ಬೆಳೆಯಿತು. ಎಷ್ಟೋ ವರ್ಷಗಳಿಗೊಮ್ಮೆ ಭೇಟಿಯಾಗಿದ್ದೂ ಉಂಟು. ಆಗಲೂ ಅದೇ ಮೊದಲಿನ ಆತ್ಮೀಯತೆ ಸರಸದ ಮಾತು, ಯಾವುದೇ ಹಮ್ಮು-ಬಿಮ್ಮು ಇಲ್ಲ. 1992ರಲ್ಲಿ ಲಲಿತಕಲಾ ಅಕಾಡೆಮಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಮತ್ತೆ ಆಗಾಗ ಅವರ ಭೇಟಿ, ಅವರಿಂದ ಲೇಖನ ಬರೆಸಿಕೊಳ್ಳುವುದು ಮುಂತಾದ ಸಂದರ್ಭಗಳು ಒದಗಿಬಂದವು. ನಂತರ ದಿನಗಳಲ್ಲಿ ಎಲ್ಲರ ಮನೆಗಳಿಗೆ ದೂರವಾಣಿ ಸೌಲಭ್ಯ ಬಂದ ನಂತರ ಸಂಪರ್ಕ ಇನ್ನೂ ಸುಲಭವಾಯಿತು. 2003ರಲ್ಲಿ ಸರ್ಕಾರ ಅವರ ಸೇವೆಯನ್ನು ಗುರುತಿಸಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ 7 ಜನ ಸದಸ್ಯರಲ್ಲಿ ಒಬ್ಬರನ್ನಾಗಿ ಆಯ್ಕೆಮಾಡಿತು. ಅಲ್ಲಿಂದ ಅವರ ಒಡನಾಟ ಹೆಚ್ಚುಹೆಚ್ಚಾಗಿ ಬಂದಿತು. ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ಕನ್ನಡದ ಬಗೆಗೆ ವ್ಯಕ್ತವಾಗುವ ಅವರ ಅಪಾರ ಕಾಳಜಿಯನ್ನು ಮರೆಯುವಂತೆಯೇ ಇಲ್ಲ. ಇಡೀ ರಾಜ್ಯಾದ್ಯಂತ ಕನ್ನಡ ಪರ ಕಾರ್ಯಕರ್ತರು ಇವರ ವಲಯದಲ್ಲಿದ್ದಾರೆ. ಅವರು ವೃತ್ತಿಯಿಂದ ನಿವೃತ್ತರಾದ ಮೇಲೆ ಅವರಿಗೆ ಡಾಕ್ಟರೇಟ್ ಪದವಿ ದೊರೆಯಿತು. ಅಭ್ಯಾಸಕ್ಕೆ ವಯಸ್ಸಿನ ಹಂಗೂ ಇಲ್ಲ ಎಂದು ತೋರಿಸಿಕೊಟ್ಟವರಲ್ಲಿ ಇವರೂ ಒಬ್ಬರಾಗಿ ಸೇರಿಕೊಂಡರು.

ಇವರ ನಡೆ, ನುಡಿ ಉಡುಗೆ ತೊಡಿಗೆ, ಊಟ-ಉಪಚಾರ ಎಲ್ಲದರಲ್ಲೂ ನಯ ವಿನಯ ಎದ್ದು ಕಾಣುತ್ತದೆ. ಕವಿ, ಲೇಖಕ, ವಿಮರ್ಶಕ, ಅಧ್ಯಾಪಕ, ಚಿತ್ರಗೀತೆ ರಚನೆಕಾರ, ಸ್ವರಸಂಯೋಜಕ, ಪತ್ರಿಕಾ ಸಂಪಾದಕ, ಅಂಕಣಕಾರ, ಜಾನಪದತಜ್ಞ ಹೀಗೆ ಬಹುರೂಪಿಯಾಗಿರುವ ಗೌಡರು ನೂರ್ಕಾಲಬಾಳಿ ಕನ್ನಡನಾಡಿಗೆ ತಮ್ಮ ಸೇವೆಯನ್ನು ಸಲ್ಲಿಸಲಿ ಎಂದು ಹಾರೈಸುತ್ತೇನೆ.

❑



# ಪ್ರಿಯ ದೊರಂಗೌ

• ಪ್ರೊ॥ ಕೆ.ಎಸ್. ನಿಸಾರ್ ಅಹಮದ್

ನನಗೆ ಪ್ರಿಯರಾದ ಪ್ರೊ॥ ದೊಡ್ಡರಂಗೇಗೌಡರು ಬದುಕಿನ 60 ಮೆಟ್ಟಿಲುಗಳನ್ನು ಏರಿಯೂ ಬಸವಳಿಯದಂತೆ ನಡೆಯುತ್ತಿದ್ದಾರೆ. ಚುರುಕುತನ ಲವಲವಿಕೆಗಳನ್ನು ಹೊಮ್ಮಿಸುತ್ತ ಗೆಲುವಿನಿಂದ ನಲಿದಿದ್ದಾರೆ. ಅದೇ ಉಮೇದಿನಿಂದ ಭವಿಷ್ಯೋನ್ಮುಖರಾಗಿ ಮುಂದುವರಿಯುವ ಸನ್ನಾಹದಲ್ಲಿದ್ದಾರೆ. ಇಂತಹ ಶುಭಾವಸರದಲ್ಲಿ ಅವರ ಹಿತಾಕಾಂಕ್ಷಿಗಳು ಗೌರವ ಗ್ರಂಥವನ್ನು ಅವರಿಗೆ ಅರ್ಪಿಸುತ್ತಿರುವುದು ಸಮಯೋಚಿತವಾಗಿದೆ. ಗೌಡರ ಮುಂದಿನ ಸಾಹಿತ್ಯ ಕೈಂಕರ್ಯವನ್ನು ಉತ್ತೇಜಿಸುವ ನಿಟ್ಟಿನಲ್ಲಿ ಈ ಹೊತ್ತಗೆಗೆ ಹೆಚ್ಚಿನ ಪ್ರಾಮುಖ್ಯವಿದೆ. ಇದಕ್ಕಾಗಿ ಗೌಡರ ಹಿತೈಷಿಮಿತ್ರರನ್ನು ನಾನು ಹೃತ್ಪೂರ್ವಕವಾಗಿ ಅಭಿವಂದಿಸುತ್ತೇನೆ. ಜೊತೆಗೇ, ದೊರಂಗೌ ಅವರಿಗೆ ಶುಭ ಹಾರೈಕೆಯನ್ನು ಸಲ್ಲಿಸುತ್ತೇನೆ.

ಪ್ರಸಕ್ತ ಗ್ರಂಥ ಗೌಡರ ಬದುಕು ಹಾಗೂ ಸಾಹಿತ್ಯ ರಚನೆಯ ಬಗ್ಗೆ ಉಪಯುಕ್ತ ಮಾಹಿತಿಗಳನ್ನು ಒದಗಿಸುವ ಆಕರ ಕೃತಿಯಾಗಿ ಹೊಮ್ಮಲೆಂಬ ಅಭಿಲಾಷೆ ನನ್ನದು. ಅಭಿನಂದನ ಗ್ರಂಥ ಎಂದಕ್ಷಣ, ಅದೊಂದು ಔಪಚಾರಿಕವಾದ ವಂದಿ ಮಾಗಧರ ಪರಾಕು ಪುಸ್ತಕ ಎಂಬ ಭಾವನೆ ಸಮಾನ್ಯವಾಗಿ ಚಾಲ್ತಿಯಲ್ಲಿದೆ. ಇಂತಹ ರೂಢಿಗತ ಸಂಪ್ರದಾಯವನ್ನು ಮುರಿದು, ಅದು ಬಹುಸಮಯಾವಧಿಯವರೆಗೆ ಶ್ರದ್ಧಾ ನಿಷ್ಠೆಯಿಂದ ಸಮಾಜೋಪಯೋಗಿ ಕಾರ್ಯದಲ್ಲಿ ತೊಡಗಿದ ವ್ಯಕ್ತಿಯ ಸಾಧನೆಯ ಬಗ್ಗೆ ಯಥಾರ್ಥ ಚಿತ್ರಣ ನೀಡುವ ಬೆಲೆಯುಳ್ಳ ದಾಸ್ತಾವೇಜು ಆಗಬೇಕು. ಆ ವ್ಯಕ್ತಿ ಸಾಗಿಬಂದ ನಿಡಿದಾದ ಹಾದಿಯಲ್ಲಿನ ನೆರಳು, ಮುನ್ನಡೆ, ಗೆಲವಿನ ಜೊತೆಗೇ ಅವನು ಅನುಭವಿಸಿದ ಧಗೆ, ವೈಫಲ್ಯ, ಮುಗ್ಗರಿಸುವಿಕೆಗಳ ಕಥನವೂ ಅದರಲ್ಲಿ ದಾಖಲಾಗಬೇಕು. ರಂಗದ ಮೇಲಿನ ದೀಪಗಳ ಕಣ್ ಕೋರೈಸುವ ಪ್ರಕಾಶದೊಂದಿಗೆ ನೇಪಥ್ಯದ ಅರೆಗತ್ತಲಿನ ವಾಸ್ತವವೂ ಆ ಗ್ರಂಥದಲ್ಲಿ ಅಭಿವ್ಯಕ್ತಗೊಳ್ಳಬೇಕು. ಜನಾದರಣೀಯತೆ, ಮೆಚ್ಚುಗೆಗಳ ಜೊತೆಯಲ್ಲೇ ವ್ಯಕ್ತಿತ್ವವನ್ನು ಸರಳ, ಸಂಕುಚಿತಗೊಳಿಸಿಬಿಡುವ ಇತಿಮಿತಿಗಳ ವ್ಯಾಖ್ಯೆ ಸಹ ನಮೂದಾಗಿರಬೇಕು. ಸೃಜನಶೀಲತೆಯ ಮುಕ್ತ ಹರಿವಿಗೆ ಅಣೆಯೊಡ್ಡುವ ಸಂತೃಪ್ತಭಾವನೆಯ ಪ್ರಲೋಭನೆಗೆ ಪಕ್ಕಾಗುವ ದುರ್ಬಲ ಕ್ಷಣಗಳ ಗಣನೆಯನ್ನೂ ಗ್ರಂಥ ಒಳಗೊಂಡಿರಬೇಕು.

ಹಾಗಾದಾಗ ಮಾತ್ರ ಸಂಬಂಧಪಟ್ಟ ವ್ಯಕ್ತಿಯ ಸಮಗ್ರ ಮತ್ತು ಸರ್ವತೋಮುಖ ಪರಿಚಯವನ್ನು ಕಟ್ಟಿಕೊಟ್ಟಂತಾಗುತ್ತದೆ. ಮುಂದೆ ಆತನ ಬಗ್ಗೆ ಬರೆಯಬೇಕೆನ್ನುವರಿಗೆ, ಹೆಚ್ಚಿನ ಸಂಗತಿಗಳನ್ನು ಸಂಗ್ರಹಿಸಬೇಕೆನ್ನುವವರಿಗೆ ಆ ಹೊತ್ತಗೆ ಅಧಿಕ ಪ್ರಯೋಜನಕಾರಿಯಾಗುತ್ತದೆ. ಒಟ್ಟಿನಲ್ಲಿ ಪರಾಮರ್ಶನ ಕೃತಿಯ ಅಂತಸ್ತು, ಮರ್ಯಾದೆ ಅದಕ್ಕೆ ಪ್ರಾಪ್ತವಾಗುತ್ತದೆ. ಗೌಡರ ಬಗೆಗಿನ ಈ ಅಭಿನಂದನಾ ಗ್ರಂಥ ಈ ನಮೂನೆಯದಾಗಿರುತ್ತದೆಂಬ ನಂಬಿಕೆ ನನ್ನದು.

ದೊರಂಗೌ ಪರಿಚಯ ನನಗೆ ಮೂವತ್ತು ವರ್ಷಗಳಿಗೂ ಹಿಂದಿನದು. ಅವರು ಕಾವ್ಯ ಸೌಧದ ಹೊರ ಜಗುಲಿಯನ್ನು ಹತ್ತಿ ಇಳಿಯುವ ತಾಲೀಮಿನಲ್ಲಿ ತೊಡಗಿಸಿಕೊಂಡಾಗಿನಿಂದ ಅವರನ್ನು ಬಲ್ಲೆ. ಆಮೇಲೆ ಅವರು ಚಲನಚಿತ್ರ ಗೀತರಚನೆಯ ಮುಖೇನ ಸರಸರ ಅಟ್ಟವೇರಿ ಆನಂದ ಪಟ್ಟದ್ದನ್ನು, ಆಗಿನ ಅವರ ಭಾವಲೋಚನೆಗಳ ಏಳು–ಬೀಳುಗಳನ್ನು ಗಮನಿಸಿದ್ದೇನೆ. ದಿಗ್ಗೆಡಿಸುವ ಆ ಕ್ಷೇತ್ರದ ಅಗ್ಗ ಹಾಗೂ ಅರ್ಥಶೂನ್ಯ ಬಡಬಡಿಕೆಗಳಿಗೆ, ರಾಗಾನುಸಾರಿ ಶಬ್ದಾಲಾಪಗಳಿಗೆ ಜನಪ್ರಿಯತೆಯ ಹಾತೊರೆವ ಹಂಬಲದಿಂದ ಅವರು ಎಲ್ಲಿ ಬಲಿಪಶುವಾದರೋ ಅಂದುಕೊಳ್ಳುತ್ತಿರುವಾಗ, ಅವುಗಳಿಗೆ ಜಾನಪದದ ಸಾರವಂತ ನುಡಿಗಟ್ಟನ್ನು ಕಸಿಕೊಳಿಸಿ ತಕ್ಕ ಮಟ್ಟಿನ ಸಹ್ಯತೆಯನ್ನುದಕ್ಕಿಸಿದ್ದನ್ನು ಮನಗಂಡಿದ್ದೇನೆ. ಈ ದೃಷ್ಟಿಯಿಂದ ಇವರು ಶ್ರೀ ಸಾಮಾನ್ಯರ ಕವಿ; ಇವರ ರಚನೆಗಳು ಅಶಿಷ್ಟ, ಜನಪರ.

ದೊರಂಗೌ ಲೆಕ್ಕವಿಲ್ಲದಷ್ಟು ಸಾರಿ ನನ್ನ ಸಂಗಡ ಮತ್ತು ನನ್ನ ಅಧ್ಯಕ್ಷತೆಯಲ್ಲಿ ಕವಿ ಸಮ್ಮೇಳನಗಳಲ್ಲಿ ಪಾಲ್ಗೊಂಡಿದ್ದಾರೆ. ನಾಟಕೀಯವಾಗಿ ಪದ್ಯವನ್ನು ಓದುವ ಹಾಗೆಯೇ ಸಭಿಕರ ಧೀರ್ಘ ಕರತಾಡನಗಳನ್ನು ಕಮಾಯಿಸುವ ಹಾಡುಗಾರರೂ ಆಗಿದ್ದಾರೆ. ಹಾಡಿ ಆದ ಮೇಲೆ 'ಒನ್ಸ್‌ಮೋರ್' ಉದ್ಗಾರವನ್ನು ಶ್ರೋತೃಗಳಿಂದ ದೋಚುವ ಅದೃಷ್ಟ ಇವರಿಗಿರುವಷ್ಟು ಇವರ ಸರೀಕ ಕವಿಗಳಿಗೆ ಇರಲಾರದು. ಇವರ ಹಾಡಿನಷ್ಟೇ ಸರಳ, ಸುಲಲಿತ ಇವರ ಪದ–ನುಡಿಕೂಡ. ಅದರಲ್ಲಿ ಧೀಮಂತಿಕೆಯ ತೋರುಗಾಣುಕೆಯ ಸೊಕ್ಕಿಲ್ಲ, ಖೊಟ್ಟಿವಿದ್ವತ್ತು, ವಿದಗ್ಧತೆಗಳ ಸೋಗಿಲ್ಲ, ಸುತ್ತ ಬಳಸಿನ ಶಬ್ದಾಡಂಬರ ಸೀಗೆ ಮೆಳೆಯಿಲ್ಲ. ಈಗುಣಗಳ ಜೊತೆಗೇ, ದೊರಂಗೌ ಅವರ ಒಂದು ಅಭ್ಯಾಸ ನನಗೆ ಅಪಥ್ಯವಾಗಿರುವುದನ್ನು ಪ್ರಾಮಾಣಿಕವಾಗಿ ಹೇಳಬೇಕು. ಅದೆಂದರೆ, ಏನೆಲ್ಲವನ್ನೂ ದಿಢೀರಾಗಿ ಪದ್ಯವಾಗಿಸುವ ಚಾಪಲ್ಯ; ಮನಸ್ಸಿಗೆ ಮೂಡಿದ್ದನ್ನು ಪ್ರಾಸಯುಕ್ತಗೊಳಿಸುವ ಧಾವಂತ. ಈ ಹುಮ್ಮಸ್ಸು ಮುಂದೊಮ್ಮೆ ಉಚಿತಾನುಚಿತ ವಿವೇಚನೆಯಿಂದ ಹದಗೊಂಡು ಗಟ್ಟಿವೈಚಾರಿಕ ರಚನೆಗಳಿಗೆ ಹಾದಿ ರಚಿಸುವುದೆಂದು ನಂಬಿದ್ದೇನೆ.

ಹದಿನೈದು ವರ್ಷಗಳ ಹಿಂದೆ ನನಗೆ ಯಾವುದೋ ಪ್ರಶಸ್ತಿ ಬಂದಿದ್ದಾಗ, ಆಗಿನ ಕಾಲಕ್ಕೆ ಕನ್ನಡದ ಏಕಮೇವಾದ್ವಿತೀಯ ವಾಹಿನಿಯಾಗಿದ್ದ ದೂರದರ್ಶನದಲ್ಲಿ ದೊರಂಗೌ ನನ್ನನ್ನು ಸಂದರ್ಶಿಸಿದ ರೀತಿ ಇಂದಿಗೂ ನೆನಪಿನಲ್ಲಿ ಸೆಲೆಯಾಗಿದೆ. ಅಲ್ಪ ಸಮಯದಲ್ಲಿ ಅವರಿಗೆ ಈ ಕೆಲಸವನ್ನು ಒಪ್ಪಿಸಿದರೂ, ಕಾಲೇಜಿನಲ್ಲಿ ಬಿಡುವಿಲ್ಲದ ಕಾರ್ಯಗಳಿದ್ದೂ ಅವರು ನನ್ನ ಮುಖ್ಯ

ಕೃತಿಗಳನ್ನು ಅವಗಾಹಿಸಿ ವಿಷಯ ಸಂಗ್ರಹಣೆ ಮಾಡಿ ಸಮಂಜಸವಾದ ಪ್ರಶ್ನೆಗಳನ್ನು ಕೇಳಿದ್ದು ನನಗೆ ಬಹಳ ಸಂತೋಷಕೊಟ್ಟಿತು. ಅವರ ಶ್ರದ್ಧೆ ಹಾಗೂ ಕರ್ತವ್ಯ ನಿಷ್ಠೆಗೆ ನನ್ನ ಅಭಿಮಾನ ಇಮ್ಮಡಿಸಿತು.

ದೊರಂಗೌ ಮತ್ತು ಅವರ ಪತ್ನಿ ರಾಜೇಶ್ವರಿ ನನ್ನ ಕವಿತೆಗಳನ್ನು ಕುರಿತು ಹಿಂದೆಯೇ ಪತ್ರಿಕೆಗಳಲ್ಲಿ ಬರೆದಿದ್ದಾರೆ. ಅವರ ಸತ್ವಪಕ್ಷಪಾತಿ ಸ್ವಭಾವ ಆ ಲೇಖನಗಳಲ್ಲಿ ನಿಚ್ಚಳವಾಗಿ ಪ್ರತಿಬಿಂಬಿಸಿದೆ. ಈ ದಂಪತಿಗಳು ತಮ್ಮ ಹೃದಯವಂತಿಕೆಯ, ಸ್ನೇಹಪರತೆಯ ಸಿಂಚನದಿಂದ ನನ್ನನ್ನು ಉಲ್ಲಾಸಗೊಳಿಸಿದ್ದಾರೆ.

ಈಗ್ಗೆ ಹತ್ತು ವರ್ಷಗಳ ಹಿಂದೆ ದೊರಂಗೌ ಅವರ 50ನೆಯ ಹುಟ್ಟುಹಬ್ಬದ ಸಮಾರಂಭ ಬೆಂಗಳೂರಿನ ಕುವೆಂಪು ಕಲಾಕ್ಷೇತ್ರದಲ್ಲಿ ವಿಜೃಂಭಣೆಯಿಂದ ಜರುಗಿತು. ಅವರ ಒಂದೆರಡು ಪುಸ್ತಕಗಳ ಬಿಡುಗಡೆಯಾದಂತೆ ನನೆಪು. ಡಾ॥ ಹಾ.ಮಾ. ನಾಯಕ, ಶ್ರೀ. ಜಿ.ವಿ. ಅಯ್ಯರ್ ಮತ್ತು ನಾನು ಅತಿಥಿಗಳಾಗಿ ಭಾಗವಹಿಸಿ ಗೌಡರಿಗೆ ಒಳಿತನ್ನು ಹಾರೈಸಿದ್ದೆವು. ಕಿಕ್ಕಿರಿದ ಸಭೆಯೇ ಗೌಡರ ಲೋಕಪ್ರಿಯತೆಗೆ ಸಾಕ್ಷಿ. ಸಾಹಿತ್ಯ, ಸಿನಿಮ ಜಗತ್ತಿನ ಜನವಲ್ಲದೆ ಶಿಕ್ಷಣ, ವ್ಯಾಪಾರ, ನ್ಯಾಯ ಆಡಳಿತ ಹಾಗೂ ಇನ್ನಿತರ ಕ್ಷೇತಗಳ ಮಂದಿ ದೊರಂಗೌ ಅವರಿಗೆ ತೋರಿದ ಪ್ರೀತ್ಯಾದರ ಹಾರ್ದಿಕವಾಗಿತ್ತು.

ಇವೊತ್ತು ದೊರಂಗೌ ಅವರಿಗೆ 60. ಎಪ್ಪತ್ತು. ಎಂಬತ್ತು, ತೊಂಬತ್ತು, ನೂರು ಹೀಗೇ ಸಂವತ್ಸರಗಳು ಸದಾಶಯ ಆಶಿಸುತ್ತಾ, ಶುಭವವನ್ನು ಬೆಂಬಲಿಸುತ್ತಾ ಹಿಂಬಾಲಿಸಲಿ. ಅವರ ಸಂಗಡ ಅವರ ಕವಿತೆಯೂ ವೈವಿಧ್ಯಮಯವಾಗಿ, ಸತ್ವವಂತರಾಗಿ ವರ್ಧಿಸುತ್ತ, ಮುಂದಿವರೆದಿರಲಿ. ಯಶಸ್ಸಿನ ಜೊತೆ ಶ್ರೇಯಸ್ಸೂ ಕೈಜೋಡಿಸಿ ಅವರ ಬದುಕನ್ನು ಸಾರ್ಥಕವಾಗಿಸಲಿ.





# ಸಾಧನೆಗೆ ಸಂದ ಗೌರವ

● ಎನ್. ಕೆಂಪರಾಜು

ಮಾನವನ ಹುಟ್ಟು ಆಕಸ್ಮಿಕ. ಸಾವು ಎನ್ನುವುದು ಖಚಿತ. ಇವೆರಡರ ಮಧ್ಯೆ ಇರುವ ಬದುಕೇ ಬಹಳ ಮುಖ್ಯ. ಈ ಬದುಕು ತನಗಷ್ಟೆಯಲ್ಲದೆ ಪರರ ಉಪಕಾರಕ್ಕೂ ಮತ್ತು ಅವರ ಬದುಕಿನ ಪರಿವರ್ತನೆಗೂ ಮಾದರಿಯಾದಾಗ ಮಾತ್ರ ಅದೊಂದು ಸಾರ್ಥಕ ಜೀವನವಾಗುತ್ತದೆ.

ಮಾಡಿದ ಪುಣ್ಯದ ಫಲವಾಗಿ ಮಾನವ ಜನ್ಮ ಲಭಿಸುತ್ತದೆ. ಈ ಜನ್ಮದ ಜೀವಿತಾವಧಿಯೂ ಸೀಮಿತ. ವಿವೇಕಿಯು ಈ ಅವಧಿಯನ್ನು ಸಾರ್ಥಕಪಡಿಸಿಕೊಳ್ಳಬೇಕು.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಜನಸಾಮಾನ್ಯನಿಗೆ ಅತ್ಯಂತ ನಿಕಟವಾದ ಮತ್ತು ಜನಜೀವನದ ದೈನಂದಿನ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು, ಸಿನಿಮಾದಂತಹ ಪ್ರಭಾವಶಾಲಿ ಮಾಧ್ಯಮದ ಮೂಲಕ ಮಾಧುರ್ಯವಾದ ಸತ್ವಪೂರ್ಣ ಸಾಹಿತ್ಯವನ್ನು ನೀಡಿದ ಹೆಗ್ಗಳಿಕೆ ಡಾ॥ ದೊಡ್ಡರಂಗೇಗೌಡರದು.

ಬೆಂಗಳೂರು ಕೋಟೆಯ ಎಸ್.ಎಲ್.ಎನ್. ಕಾಲೇಜಿನಲ್ಲಿ ವೃತ್ತಿ ಜೀವನ ಆರಂಭಿಸಿದ ಗೌಡರು ಕನ್ನಡ ಅಧ್ಯಾಪಕರಾಗಿ, ಪ್ರವಾಚಕರಾಗಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕನ್ನಡ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ವಿವಿಧ ಹುದ್ದೆಗಳನ್ನು ಅಲಂಕರಿಸಿ ಅವುಗಳಿಗೆ ಜೀವ ತುಂಬಿ ಸುಮಾರು ಮೂವತ್ತೆರಡು ವರ್ಷಗಳ ಧೀರ್ಘಕಾಲ ಸೇವೆ ಸಲ್ಲಿಸಿದ್ದಾರೆ. ವಿವಿಧ ಅಕಾಡೆಮಿಗಳ ಸದಸ್ಯರಾಗಿ, ಕನ್ನಡ ಭಾಷೆ, ದೇಶ, ನೆಲ, ಜಲ, ಸಂಸ್ಕೃತಿಗಳ ಏಳಿಗೆಗಾಗಿ ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸಮಾಜದ ಓರೆ ಕೋರೆಗಳನ್ನು ತಮ್ಮ ಮೊನಚಾದ ಲೇಖನಿಯ ಮೂಲಕ ಎಚ್ಚರಿಸಿದ್ದಾರೆ. ಪ್ರಸ್ತುತ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ವತಿಯಿಂದ ಹೊರಬರುತ್ತಿರುವ 'ಆದಿಚುಂಚನಗಿರಿ ಕನ್ನಡ ಮತ್ತು ಇಂಗ್ಲಿಷ್ ಮಾಸ ಪತ್ರಿಕೆಗಳ ಪ್ರಧಾನ ಸಂಪಾದಕರಾಗಿ; ಪ್ರಕಾಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಸುಮಾರು ಆರುನೂರು ಚಿತ್ರಗೀತೆಗಳನ್ನು ರಚಿಸಿ ಕನ್ನಡದ ಪ್ರಮುಖ ಗೀತರಚನೆಕಾರರಾಗಿರುವ ಡಾ॥ ದೊಡ್ಡರಂಗೇಗೌಡರು ಜನಪ್ರಿಯ ಪ್ರಾಧ್ಯಾಪಕರು, ಕವಿಗಳು, ಚಿಂತಕರು. ಇವರು ರಚಿಸಿದ ಉತ್ತಮ ಗೀತೆಗಳು ರಾಜ್ಯ ಪ್ರಶಸ್ತಿಯನ್ನು ಗಳಿಸಿವೆ. ಕಣ್ಣು ನಾಲಗೆ ಕಡಲು ಕವನ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನವನ್ನು ಗಳಿಸಿದ್ದಾರೆ. 1990ರಲ್ಲಿ 'ಪ್ರೀತಿ ಪ್ರಗಾಥ'ಕ್ಕೆ ಕ.ಸಾ.ಪ.ದಿಂದ ರತ್ನಾಕರ ವರ್ಣಿಯ ಮುದ್ದಣ ಕಾವ್ಯ ಪ್ರಶಸ್ತಿ ದೊರೆತಿದೆ. ಸುಮಾರು 70ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ಗೌಡರು ನಾಡು-ನುಡಿ ವಿಚಾರದಲ್ಲಿ ಅಪಾರ ಅಭಿಮಾನ-ಕಾಳಜಿ ಉಳ್ಳವರು. ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರ್ಕಾರವು 'ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ.

ಎಂಥವರನ್ನೂ ಆತ್ಮೀಯತೆಯ ತೆಕ್ಕೆಗೆ ಸೆಳೆದುಕೊಳ್ಳುವಂತಹ, ಕ್ರಿಯಾಶೀಲ, ಸರಳ ಸ್ವಭಾವದ ವ್ಯಕ್ತಿತ್ವವನ್ನೊಂದಿರುವ ಡಾ॥ ಗೌಡರು ಜನಪ್ರಿಯ ಕವಿಗಳು; ಉತ್ತಮ ವಾಗ್ಮಿಗಳು. ಜಾನಪದ ಶೈಲಿಯ ಮಾತಿನ ಮೋಡಿಗೆ ಒಳಗುಮಾಡಿ ಸಭೆಯಲ್ಲಿ ನೆರೆದ ಎಂಥವರನ್ನೂ ಮಂತ್ರಮುಗ್ಧರನ್ನಾಗಿಸುವ ಕಲೆಯನ್ನು ಮೈಗೂಡಿಸಿಕೊಂಡಿದ್ದಾರೆ.

ನಿರಂತರವಾಗಿ ಸಾಹಿತ್ಯ ಕೃಷಿಯನ್ನು ಮಾಡುತ್ತಿರುವ ಅವರ ಲೇಖನಿಯಿಂದ ಅನೇಕ ಕವನ ಸಂಕಲನಗಳು, ಭಾವಗೀತೆಗಳು, ಭಕ್ತಿಗೀತೆಗಳು, ಮುಕ್ತಕಗಳು ಮೂಡಿಬಂದಿವೆ. ಇವರ ಅನೇಕ ಕವಿತೆಗಳು ಇಂಗ್ಲಿಷ್ ಮತ್ತು ಹಿಂದಿ ಭಾಷೆಗೆ ಭಾಷಾಂತರಗೊಂಡಿವೆ. ಇವರ ಜನಪ್ರಿಯತೆಗೆ ಸಾಕ್ಷಿ ಎಂಬಂತೆ ಅಭಿಮಾನಿಗಳು, ಶಿಷ್ಯರು ಸೇರಿ ಸೃಜನಸಂಪನ್ನ, ಸಮಾಜಮುಖಿ, ಸಾಹಿತ್ಯ ಸಂಪದ ಮುಂತಾದ ಸಂಭಾವನಾ ಗ್ರಂಥವನ್ನು ಸಮರ್ಪಿಸಿ ಕೃತಾರ್ಥರಾಗಿದ್ದಾರೆ. ಶ್ರೀ ಗೌಡರ ಸಾಧನೆಗೆ ಸಂದ ಪ್ರಶಸ್ತಿ ಗೌರವಗಳು ಹಲವಾರು ಸಾಗರದಾಚೆಯ ವಿದೇಶಗಳಲ್ಲಿಯೂ ಅವರ ಖ್ಯಾತಿ ವಿಸ್ತಾರಗೊಂಡಿದೆ. **'ಸ್ವದೇಶೇ ಪೂಜ್ಯತೇ ರಾಜ ವಿದ್ವಾನ್ ಸರ್ವತ್ರ ಪೂಜ್ಯತೇ'** ಎಂಬಂತೆ ಡಾ॥ ದೊಡ್ಡರಂಗೇಗೌಡರು ವಿದೇಶಗಳಲ್ಲಿಯೂ ಪ್ರಶಸ್ತಿ, ಗೌರವಗಳಿಗೆ ಪಾತ್ರರಾಗಿದ್ದಾರೆ. ಲಂಡನ್ನಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಿಂದ "Men´of Achievment' ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಅಮೇರಿಕಾದ ಅಮೆರಿಕನ್ ಬಯೋಗ್ರಾಫಿಕಲ್ ಸೆಂಟರ್‌ನ 92-93ನೇ ಸಾಲಿನ ಜನಪ್ರಿಯ ಐದುನೂರು ಗಣ್ಯರಲ್ಲಿ ಒಬ್ಬರಾಗಿದ್ದಾರೆ. ಹೀಗೆ ಡಾ॥ ದೊಡ್ಡರಂಗೇಗೌಡರ ಬಗ್ಗೆ ಹೇಳುತ್ತಾ, ಬರೆಯುತ್ತಾ ಹೋದರೆ ಒಂದುಬೃಹತ್ ಗ್ರಂಥವೇ ಆಗುತ್ತದೆ.

'ಕನ್ನಡ ನವೋದಯ ಕಾವ್ಯ ಒಂದು ಪುನರ್ ಮೌಲ್ಯಮಾಪನ' ಎಂಬ ಮಹಾ ಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ. ಈ ಕೃತಿಯು ಮುನ್ನೂರು ಜನ ಕವಿಗಳ ಮೂರು ಸಾವಿರ ಕವಿತೆಗಳ ಒಂದು ಸಮಗ್ರ

ಅಧ್ಯಯನವಾಗಿದೆ. ಎಲೆಮರೆ ಕಾಯಿಯಂತೆ ತಮ್ಮ ಸಾಹಿತ್ಯ, ಕಾವ್ಯ ಕೃಷಿಯನ್ನು ಮಾಡುತ್ತಿರುವ, ವಿಮರ್ಶಾ ಲೋಕ ನಿರ್ಲಕ್ಷಿಸಿದ್ದ ಕವಿಗಳ ಬಗ್ಗೆ ಗೌಡರು ಬೆಳಕು ಚೆಲ್ಲಿದ್ದಾರೆ.

ಶ್ರೀಯುತರ ಕಾವ್ಯಾಸಕ್ತಿ, ಸಾಹಿತ್ಯಾಸಕ್ತಿ ನಿರಂತರವಾಗಿ ನದಿಯಂತೆ ಹರಿಯುತ್ತಲೇ ಇದೆ. ಸಿಪಾಯಿದಂಗೆಯಿಂದ ಹಿಡಿದು ಸ್ವಾತಂತ್ರ್ಯ ಸಂಗ್ರಾಮದವರೆಗೆ ನಡೆದ ಭಾರತ ಸ್ವಾತಂತ್ರ್ಯ ಸಂಗ್ರಾಮದ ವಸ್ತುವನ್ನು ಆಧರಿಸಿ ವಿಸ್ತಾರವಾದ ಮಹಾಕಾವ್ಯ ಕೃಷಿಯಲ್ಲಿ ತೊಡಗಿದ್ದಾರೆ.

ಜೀವನದಲ್ಲಿ ಸಾಧನೆ ಶಿಖರ ತಲುಪಿದ ಯಶಸ್ವಿ ವ್ಯಕ್ತಿಯ ಹಿಂದೆ ಕಾಣದ ಕೈ ಪಾತ್ರ ಇರುತ್ತದೆ. ಡಾ|| ಕೆ. ರಾಜೇಶ್ವರಿಗೌಡರು ಆದರ್ಶ ಸತಿಯಾಗಿ, ಜೀವನ ಸಂಗಾತಿಯಾಗಿ, ಪ್ರೇರಕಶಕ್ತಿಯಾಗಿ (ಡಾ|| ದೊಡ್ಡರಂಗೇಗೌಡರ ಎಲ್ಲ ಪ್ರಯತ್ನಗಳಿಗೂ) ಸಹಕಾರ ನೀಡುತ್ತಿದ್ದಾರೆ. ಪ್ರೀತಿಯ ಮಕ್ಕಳಾದ ಶ್ರೀ ಡಿ. ಭರತ್ ಮತ್ತು ಕು|| ಡಿ. ಸ್ಮಿತಾ ಇವರು ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಈ ಬಗೆಯ ಸರಳ, ಸಜ್ಜನಿಕೆ, ಸೌಜನ್ಯಕ್ಕೆ, ಕ್ರಿಯಾಶೀಲತೆಗೆ ಹೆಸರಾದ ಡಾ|| ದೊಡ್ಡರಂಗೇಗೌಡರ ಬರಹದಿಂದ ಸಾಹಿತ್ಯ ಕ್ಷೇತ್ರವು ವಿಸ್ತಾರಗೊಂಡು ಶ್ರೀಮಂತಗೊಳ್ಳಲಿ. ಇನ್ನು ಹೆಚ್ಚಿನ ಉತ್ತಮ ಕಾವ್ಯ, ಕೃತಿಗಳು ಹೊರಬಂದು ರಾಷ್ಟ್ರಕವಿ ಎಂಬ ಖ್ಯಾತಿಯನ್ನು ಪಡೆಯಲಿ ಎಂದು ವಾಗ್ದೇವಿಯಲ್ಲಿ ಬೇಡುತ್ತೇನೆ. ಇಂಥ ಮಹನೀಯರ ಸಂಸರ್ಗದಲ್ಲಿ ಸೇವೆ ಮಾಡುವ ಅವಕಾಶ ಪಡೆದ ನಾನೇ ಧನ್ಯ.

❑






# ಪ್ರೀತಿ ವಿಶ್ವಾಸದ ಪ್ರತೀಕ : ದೊಡ್ಡರಂಗೇಗೌಡ

• ಬರಗೂರು ರಾಮಚಂದ್ರಪ್ಪ

ಗೆಳೆಯರಾದ ದೊಡ್ಡರಂಗೇಗೌಡರ ತಾಯಿಯ ತವರೂರು ನನ್ನೂರು ಬರಗೂರು. ನಾನು ದೊಡ್ಡರಂಗೇಗೌಡರನ್ನು ಹತ್ತಿರದಿಂದ ನೋಡಿದ್ದು ನನ್ನೂರಿನಲ್ಲೇ. ಇವರು ಒಮ್ಮೆ ಬರಗೂರಿಗೆ ಬಂದಿದ್ದರು; ಅದು ರಜಾಕಾಲ. ಒಂದಷ್ಟು ದಿನಗಳನ್ನು ತಮ್ಮ ತಾಯಿಯ ತಮ್ಮನ ಮನೆಯಲ್ಲಿ ಕಳೆಯಬೇಕೆಂಬ ಅಪೇಕ್ಷೆಯಿಂದ ಇವರು ಬಂದಿದ್ದರು; ಇವರ ತಾಯಿ ಹುಟ್ಟಿದ ಮನೆಯಿದ್ದದ್ದು ಈರಮ್ಮನ ಗುಡಿಯ ಆವರಣದಲ್ಲಿ. ಮನೆಯೂ ಅಲ್ಲೇ; ಗುಡಿಯೂ ಅಲ್ಲೇ. ಗುಡಿಗೊಂದು ಹಜಾರವಿತ್ತು. ಮನೆಗೆ ಹೋದವರು ಈ ಹಜಾರದಲ್ಲಿ ಕೂತುಕೊಳ್ಳುವುದು ರೂಢಿ. ನಾನು ಒಮ್ಮೆ ಅಲ್ಲಿಗೆ ಹೋದಾಗ ಒಬ್ಬ ವ್ಯಕ್ತಿ ಹಜಾರದಲ್ಲಿ ಕೂತು ಸಾಲಾಗಿ ಪುಸ್ತಕಗಳನ್ನು ಜೋಡಿಸುತ್ತಿದ್ದರು. ನಿಬ್ಬೆರಗಾಗಿ ನೋಡುತ್ತನಿಂತೆ.

ಅವರ ಚಿತ್ತ ಪುಸ್ತಕದ ಮೇಲೆ. ಅವುಗಳನ್ನು ಜೋಪಾನಾಗಿ ಗೋಡೆಗೆ ಒರಗಿಸಿ ಒಪ್ಪವಾಗಿಡುವ ಏಕಾಗ್ರತೆಯಲ್ಲಿದ್ದ ಆ ವ್ಯಕ್ತಿ ನನ್ನಲ್ಲಿ ಎಲ್ಲಿಲ್ಲದ ಕುತೂಹಲ ಹುಟ್ಟಿಸಿದರು.ನಾನು ಅವರಷ್ಟೇ ಏಕಾಗ್ರ ಚಿತ್ತದಿಂದ ಪುಸ್ತಕಗಳನ್ನು ನೋಡುತ್ತಿದ್ದೆ. ಇಷ್ಟೆಲ್ಲ ಪುಸ್ತಕಗಳನ್ನು ಇವರು ಓದುತ್ತಾರೆಯೆ? ಅಂದಮೇಲೆ ಇವರೆಷ್ಟು ಬುದ್ಧಿವಂತರಿರಬಹುದು? ನನ್ನಲ್ಲಿ ಇಷ್ಟು ಪುಸ್ತಕಗಳೂ ಇಲ್ಲ; ಅಷ್ಟನ್ನು ಓದುವ ಬುದ್ಧಿಯೂ ಇಲ್ಲ. ಇವರು ನಿಜಕ್ಕೂ ಜ್ಞಾನಿಗಳು ಹೀಗೆ ನಾನು ಯೋಚಿಸುತ್ತಾ ನಿಂತಿದ್ದಾಗ ಇವರ ಸೋದರಮಾವ ಮನೆಯೊಳಗಿಂದ ಬಂದು ನನ್ನನ್ನು ನೋಡಿ 'ಏನಪ್ಪ ಬಂದಿದ್ದೀಯಾ?' ಎಂದರು. ಆಗ ಇವರು ನನ್ನ ಕಡೆ ನೋಡಿದರು. ನಸು ನಕ್ಕರು. ಅದು ನನಗೆ ಜ್ಞಾನಿಯೊಬ್ಬನ ನಗೆಯಾಗಿ ಕಾಣಿಸಿತ್ತು. ಇವರ ಸೋದರಮಾವನಿಗೆ ನನ್ನ ಅಣ್ಣ ಹೇಳಿದ ವಿಷಯ ಹೇಳಿದೆ. ಆನಂತರ ಅವರು ತನ್ನ 'ಅಳಿಯ'ನಿಗೆ ನನ್ನನ್ನು ಪರಿಚಯಿಸಿದರು. 'ಹೈಸ್ಕೂಲ್ ಓದ್ತಿದಾನೆ; ಬುದ್ಧಿವಂತ' ಎಂದು ಒಂದು ವಾಕ್ಯ ಹೆಚ್ಚಾಗಿ ಸೇರಿಸಿದರು. ನನಗೆ ಎಲ್ಲಿಲ್ಲದ ಖುಷಿ. ಸಾಲಾಗಿ ಪುಸ್ತಕ ಜೋಡಿಸುತ್ತಿದ್ದ ಈ ವ್ಯಕ್ತಿಯನ್ನು ನಾನು ಬಲು ಬುದ್ಧಿವಂತ ಎಂದು ಭಾವಿಸಿದ್ದಾಗ ನನ್ನನ್ನು 'ಬುದ್ಧಿವಂತ' ಎಂದು ಪರಿಚಯಿಸಿದರಲ್ಲ ಎಂದು ಅಪಾರ ಆನಂದವಾಯಿತು.

ಸೋದರಮಾವ ಹೊರಗೆ ಹೋದಮೇಲೆ 'ಬನ್ನಿ ಹಜಾರದಮೇಲೆ ಕೂತ್ಕಳ್ಳಿ' ಎಂದು ಈ ವ್ಯಕ್ತಿ ಕರೆದರು. ನಾನು ಸಂಕೋಚದಿಂದ ಹಜಾರ ಹತ್ತಿದೆ. ಅಳುಕುತ್ತಲೇ ಅವರ ಹತ್ತಿರ ಕುಳಿತೆ. 'ಇಷ್ಟೊಂದೆಲ್ಲ ಪುಸ್ತಕ ಓದ್ತೀರಾ ನೀವು? ಕಾಲೇಜು ಅಂದ್ರೆ ಇಷ್ಟೊಂದ್ ಪುಸ್ತಕಾನ ಪಠ್ಯ ಮಾಡ್ತಾರ?' ಎಂದು ಬೆಪ್ಪನಂತೆ ಕೇಳಿದೆ. ಅವರು 'ಇವೆಲ್ಲ ಕಾಲೇಜ್ ಪುಸ್ತಕಗಳಲ್ಲ, ಕತೆ, ಕವಿತೆ ಪುಸ್ತಕಗಳು. ಈಗ ರಜಾ ಅಲ್ವಾ? ತಗಂಡ್ ಬಂದಿದ್ದೀನಿ. ನಾನೂ ಕವಿತೆ ಬರೀತೀನಿ' ಎಂದರು. ನನಗೆ ಒಂಥರಾ ರೋಮಾಂಚನ! ಕವಿಯ ಹತ್ತಿರ ನಾನು! ಅದೂ ಈರಮ್ಮ ದೇವ್ರ ಗುಡಿಯಲ್ಲಿ, ಗರ್ಭಗುಡಿ ಮುಂದಿನ ಹಜಾರದಲ್ಲಿ! ಮಾತು ಹೊರಡಲಿಲ್ಲ. ಅವರ ಮಾತು ನಿಲ್ಲಲಿಲ್ಲ. ತುಂಬು ಪ್ರೀತಿಯಿಂದ ಪುಸ್ತಕಗಳ ಬಗ್ಗೆ ಹೇಳುತ್ತಾ ಹೋದರು. ನನ್ನ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸಿದರು. ನನಗೆ ಮತ್ತು ಅವರಿಗೆ ವಯಸ್ಸಿನಲ್ಲಿ ಮೂರ್ನಾಲ್ಕು ವರ್ಷಗಳ ಅಂತರ ಇರಬಹುದೆನ್ನಿಸಿದರೂ ನಾನು ಸಂತೋಷದಿಂದ ಮೈಮುದುಡಿ ಕೂತಿದ್ದೆ. ವಯಸ್ಸಿನಲ್ಲಿ ಮಾತ್ರವಲ್ಲ ಜ್ಞಾನದಲ್ಲೂ ಅವರು ದೊಡ್ಡವರೆನ್ನಿಸಿತ್ತು. ಅವರಿಗೆ ವಯಸ್ಸೂ ಮತ್ತು ಮನಸ್ಸು ಎರಡೂ ದೊಡ್ಡದಾಗಿದ್ದಾಗ ನನಗೆ ಸಂಕೋಚವಲ್ಲದೆ ಮತ್ತೇನು ಕಾಡೀತು? ಅಂದು ಅಷ್ಟು ಪ್ರೀತಿಯಿಂದ ಮಾತನಾಡಿಸಿದ ದೊಡ್ಡರಂಗೇಗೌಡರು ಇಂದು ಅದೇ ಪ್ರೀತಿಯನ್ನು ಇಟ್ಟುಕೊಂಡಿದ್ದಾರೆ. ವಿಭಿನ್ನ ವಿಚಾರಗಳಾಗಲಿ, ಬರವಣಿಗೆಯ ದಾರಿಗಳಾಗಲಿ ನನ್ನ-ಅವರ ಪ್ರೀತಿ ವಿಶ್ವಾಸಕ್ಕೆ ಅಡ್ಡಿಯಾಗಿಲ್ಲ. ನಮ್ಮ ಸ್ನೇಹವನ್ನು ಸಂಕುಚಿತಗೊಳಿಸಿಲ್ಲ.

ಅಂದು ಹಜಾರದಲ್ಲಿ ದೊಡ್ಡರಂಗೇಗೌಡರನ್ನು ನೋಡಿದ ನಾನು, ಅವರು ನಮ್ಮೂರಲ್ಲಿದ್ದಾಗ ಮತ್ತೆ ಎರಡು ಮೂರುಸಾರಿ ಭೇಟಿಯಾದೆ. ನಾನು ಹೈಸ್ಕೂಲ್ ಸೇರುವುದಕ್ಕೆ ಮುಂಚೆಯೇ ರವೀಂದ್ರನಾಥ ಟಾಗೂರರ 'ನನ್ನ ಬಾಲ್ಯ' ಎಂಬ ಪುಸ್ತಕವನ್ನು ಮಾಧ್ಯಮಿಕ ಶಾಲೆಯ ಪಠ್ಯವಾಗಿ ಓದಿ ಪ್ರೇರಿತನಾಗಿದ್ದೆ. ನಾನೂ ಯಾಕೆ ಕವಿಯಾಗಬಾರದು, ಚಿತ್ರಕಲಾವಿದನಾಗಬಾರದು ಎನ್ನಿಸಿ ಹತ್ತಾರು ಸಾಲುಗಳನ್ನು ಗೀಚಿದ್ದೆ. ಪೆನ್ಸಿಲಿನಲ್ಲಿ ಒಂದೆರಡು ಚಿತ್ರಗಳನ್ನು ಮನಸೋ ಇಚ್ಛೆ ಬರೆದಿದ್ದೆ. ಆದರೆ ಅದಾವುದನ್ನು ದೊಡ್ಡರಂಗೇಗೌಡರಿಗೆ ಹೇಳಲಿಲ್ಲ; ತೋರಿಸಲಿಲ್ಲ. ಒಮ್ಮೆ ಧೈರ್ಯಮಾಡಿ ನಾನು ನೋಡಿದ ಕನ್ಯಾದಾನ ಮತ್ತು ಸ್ಕೂಲ್ ಮಾಸ್ಟರ್ ಚಲನಚಿತ್ರಗಳ ಬಗ್ಗೆ ಮಾತಾಡಿದ್ದೆ. ಅವರು ಸಿನಿಮಾಕ್ಕಿಂತ ಸಾಹಿತ್ಯದ ಬಗ್ಗೆಯೇ ಹೆಚ್ಚು ಮಾತನಾಡಿದರು. ಅವರ ಮಾತುಗಳು ಪೂರ್ತಿ ಅರ್ಥವಾಗಲಿಲ್ಲ; ಅರ್ಥವಾಗಲಿಲ್ಲವೆಂದು ನಾನು ಹೇಳಲಿಲ್ಲ. ಅವರ ಸೋದರಮಾವ ನನ್ನನ್ನು 'ಬುದ್ಧಿವಂತ' ಎಂದು ಪರಿಚಯಿಸಿದ್ದರಲ್ಲ! ಅವರ ಮಾತಿಗೆ 'ದ್ರೋಹ' ಬಗೆಯುವ ಇಚ್ಛೆ ನನಗಿರಲಿಲ್ಲ!

ದೊಡ್ಡರಂಗೇಗೌಡರನ್ನು ನಾನು ಮತ್ತೆ ನೋಡಿದ್ದು ತುಮಕೂರಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಪದವಿಪೂರ್ವ ತರಗತಿಗೆ ಸೇರಿದಾಗ. ಅವರು ಪರಿಚಯವಾದ ದಿನದ ಪ್ರೀತಿಯನ್ನೇ ತೋರಿದರು. ಮಾತನಾಡಿಸಿದರು. ಆಗ ಅಂತಿಮ ಬಿ.ಎಸ್.ಸಿ.ಯಲ್ಲಿ ಓದುತ್ತಿದ್ದ ಅವರು

ಯುವಕವಿಯೆಂದು ಪರಿಚಿತರಾಗಿದ್ದರು. ಆ ಕಾಲದ ಪ್ರಸಿದ್ಧವಾದ ಪತ್ರಿಕೆಗಳಲ್ಲೊಂದಾದ 'ಗೋಕುಲ'ದಲ್ಲಿ ಇವರ ಕವಿತೆಗಳು ಅಚ್ಚಾಗಿದ್ದನ್ನು ಓದಿದ ನನಗೆ ವಿಚಿತ್ರ ಭಾವನೆಗಳು. ಅವರು ನನಗಿಂತ ದೊಡ್ಡವರು ಆದ್ದರಿಂದ ದೂರವಿರಬೇಕಾದವರು ಎಂಬ ತಿಳಿವಳಿಕೆ. ಅವರಾದರೂ ಟಿ.ಎಸ್. ಲೋಹಿತಾಶ್ವ ಅವರ ಜೊತೆ ಅದೂ ಇದೂ ಚರ್ಚಿಸುತ್ತ ಕಾಲೇಜು ಆವರಣದಲ್ಲಿ ಕಾಣಿಸಿಕೊಳ್ಳುತ್ತಿದ್ದರು. (ಲೋಹಿತಾಶ್ವ ಆಮೇಲೆ ಆಂಗ್ಲಭಾಷಾ ಅಧ್ಯಾಪಕರಾಗಿ, ಸಿನಿಮಾ ನಟರಾಗಿ ಎಲ್ಲರಿಗೂ ಪರಿಚಿತರು). ದೊಡ್ಡರಂಗೇಗೌಡರ ಒಡನಾಟ 'ಬುದ್ಧಿವಂತರು' ಜೊತೆ ಹೆಚ್ಚಿದಂತೆಲ್ಲ ನಾನು ದೂರವೇ ಉಳಿದೆ. ಅವರಾದರೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಿಂಚುತ್ತ ಮಿಂಚುತ್ತ, ಮಾಯವಾಗಿಬಿಟ್ಟರು! ಎಲ್ಲಿ ಹೋದರೂ ಎಂದು ತವಕಿಸುವ ವೇಳೆಗೆ ತುಮಕೂರಲ್ಲಿ ಇಲ್ಲವೆಂದು ಗೊತ್ತಾಯಿತು.

ಮತ್ತೆ ದೊಡ್ಡರಂಗೇಗೌಡರನ್ನು ಹತ್ತಿರದಿಂದ ನೋಡಲು ಸಾಧ್ಯವಾದದ್ದು ಬೆಂಗಳೂರಿನಲ್ಲಿ. ನಾನು ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎ.ಗೆ ಸೇರಿದೆ. ಅವರು ಮೂರನೇ ಆನರ್ಸ್ (ಕನ್ನಡ) ಓದುತ್ತಿದ್ದರು. ಅದೆ! ಇದೇನಿದು ಇಂಥ ವಿಪರ್ಯಾಸ ಎಂದುಕೊಂಡು ವಿಚಾರಿಸಿದಾಗ ಗೊತ್ತಾಯಿತು ಅವರು ಅಂತಿಮ ಬಿ.ಎಸ್.ಸಿಯನ್ನು ಮುಗಿಸಿ. ಬೆಂಗಳೂರಿನ ಆರ್.ಎಂ.ಎಸ್.ನಲ್ಲಿ ಕೆಲಸಕ್ಕೆ ಸೇರಿದ್ದರು. ರಾತ್ರಿ ಪಾಳಿಯ ಉದ್ಯೋಗ ಮಾಡುತ್ತಾ, ಹಗಲು-ಸಾಹಿತ್ಯಾಧ್ಯಯನಕ್ಕಾಗಿ ಕನ್ನಡ ಆನರ್ಸ್ ಓದಲು ಬರುತ್ತಿದ್ದರು.

ಅದು ನವ್ಯ ಸಾಹಿತ್ಯದ ಉತ್ಕರ್ಷಕಾಲ. ತುಮಕೂರಲ್ಲಿ ಕೋಗಿಲೆ, ದುಂಬಿ, ದಾಸವಾಳಗಳಲ್ಲಿ ವಿಹರಿಸುತ್ತಿದ್ದ ದೊಡ್ಡರಂಗೇಗೌಡರು ಬೆಂಗಳೂರಲ್ಲಿ ಅಪ್ಪಟ 'ನವ್ಯಕವಿ'ಯಾಗಿ ಮಿಂಚುತ್ತಿದ್ದರು! ಮತ್ತೆ ನನ್ನಂಥವರಿಗೆ ಸಂಕೋಚ! ರಾಜ್ಯದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ತಮ್ಮ ಕವಿತೆಗಳನ್ನು ಹಿಡಿದುಕೊಂಡು ಗೌಡರು ಬರುತ್ತಿದ್ದಾಗ ನವ್ಯಶೈಲಿಯ ನಡಿಗೆ ಕಣ್ಣಿಗೆ ಕಟ್ಟುತ್ತಿತ್ತು. ಆಗ ನನಗಿನ್ನೂ ನವ್ಯಕಾವ್ಯ ಅಷ್ಟಾಗಿ ಅರ್ಥವಾಗುತ್ತಿರಲಿಲ್ಲ. (ಈಗ ಪೂರ್ತಿ ಅರ್ಥವಾಗುತ್ತಿದೆಯೆಂದು ಇದರರ್ಥವಲ್ಲ!) ನವ್ಯಕಾವ್ಯದ ಜೊತೆಗೆ ದೊಡ್ಡರಂಗೇಗೌಡರೂ ಅರ್ಥವಾಗುತ್ತಿಲ್ಲವಲ್ಲ ಎಂದುಕೊಳ್ಳುತ್ತಿರುವಾಗ ಅವರು ಜಗಲಿ ಹತ್ತಿ ಇಳಿದೇ ಬಿಟ್ಟರು. ಅಂದರೆ 'ಜಗಲಿ ಹತ್ತಿ ಇಳಿದು' ಎಂಬ ಕವನ ಸಂಕಲನ ಪ್ರಕಟವಾಯಿತು. ಸ್ನೇಹಿತರು ಈ ಸಂಕಲನದಲ್ಲಿರುವ ಸಂಕೇತಗಳನ್ನು ಕುರಿತು ಚರ್ಚಿಸುವಾಗ ನಾನು ಸಂಕೋಚಗೊಂಡು ಕೂತಿರುತ್ತಿದ್ದೆ. ನಮ್ಮಲ್ಲಿ ಹಜಾರ, ಜಗಲಿ-ಎರಡು ಪದಗಳಿಗೂ ಒಂದೇ ಅರ್ಥ. ಆದರೆ ಅಂದು 'ಹಜಾರದಲ್ಲಿ ಕಂಡ ದೊಡ್ಡರಂಗೇಗೌಡರಿಗೂ ಇಂದು 'ಜಗಲಿ' ಹತ್ತಿ ಇಳಿಯುತ್ತಿದ್ದ ದೊಡ್ಡರಂಗೇಗೌಡರಿಗೂ ವ್ಯತ್ಯಾಸವಿತ್ತು. ಇದು ಬೆಳವಣಿಗೆಯಲ್ಲಾದ ವ್ಯತ್ಯಾಸ. ಹಾಗೇ ಇತ್ತು ಪ್ರೀತಿ ವಿಶ್ವಾಸ.

ಮುಂದೆ ದೊಡ್ಡರಂಗೇಗೌಡರು 'ಕಣ್ಣು ನಾಲಗೆ ಕಡಲು' ಎಂಬ ಕವನ ಸಂಕಲನ ಬರೆದರು;

ಅನಂತರ 'ಸಾಡಾಡಿ' ಬಂದಿತು. ಎರಡನ್ನು ಓದುತ್ತಾ ಅರ್ಥಮಾಡಿಕೊಳ್ಳುತ್ತಾ ಅವರು ಬೆಳೆಯುತ್ತಿರುವ ರೀತಿಗೆ ಮೂಕ ವಿಸ್ಮಿತನಾಗುತ್ತಾ ನಾನು ನನ್ನ ದಾರಿ ಹಿಡಿದಿದ್ದೆ; ಅವರು ಸಿನಿಮಾ ದಾರಿ ಹಿಡಿದರು.

ಚಲನಚಿತ್ರಗಳಿಗೆ ಹಾಡು ಬರೆಯತೊಡಗಿದ ಗೌಡರು ತಮ್ಮ ಮೂಲ ಸೊಗಡನ್ನು ಬಿಡಲಿಲ್ಲ. 'ತೇರ ಏರಿ ಅಂಬರದಾಗೆ ನೇಸರು ನಗುತಾನೆ/ ಮರಗಿಡ ಕೂಗ್ಯಾವೇ.. ಚಿಲಿಪಿಲಿ ಹಕ್ಕಿ ಹಾಡ್ಯಾವೇ' ಎಂದು 'ಪರಸಂಗದ ಗೆಂಡೆತಿಮ್ಮ'ನ ಬಾಯಲ್ಲಿ ಬಂದ ಇವರ ಗೀತೆ ಹೊಸದೊಂದು ರೋಮಾಂಚನವನ್ನು ನೀಡಿತ್ತು. 'ಭೂಮಿ ಮ್ಯಾಗೆ ಹಚ್ಚಹಚ್ಚಗೆ ಹಾದಿ ತೆರೆದಾವೆ/ ಆ ಹಾದಿ ಅಕ್ಕಪಕ್ಕ ಬೆಳ್ಳಿಬೆಳೆದಾವೆ/ ಸಾಲು ಸಾಲು ಬೆಟ್ಟಗುಡ್ಡ ಮೌನ ತಳೆದಾವೆ/ ಆ ಮೌನದ ಗಾನ ಎಲ್ಲರ ಮನಸಾ ಸೆಳೆದಾವೆ' ಎಂದು ಬರೆದ ದೊಡ್ಡರಂಗೇಗೌಡರ ಗೀತೆಗಳು ಎಲ್ಲರ ಮನಸ್ಸನ್ನು ಸೆಳೆದವು. ಹಚ್ಚಗಿನ ಹಾದಿ ತೆರೆದರು. 'ಇದರ ಫಲವಾಗಿ ಅಕ್ಕಪಕ್ಕ ಬಳ್ಳಿ ಬೆಳೆದವು. ಮೂಗಿನ ಮೇಲೆ ಬೆರಳಿಟ್ಟು ಕೇಳುಗ ಬೆಟ್ಟಗುಡ್ಡದ ಮೌನ ತಾಳುವಂತೆ ಮಾಡಿದವು. ಆಗ ದೊಡ್ಡರಂಗೇಗೌಡರು ಕನ್ನಡ ಚಿತ್ರಗೀತೆಗಳ ಲೋಕದಲ್ಲಿ ನಮ್ಮೂರ ಮಂದಾರ ಹೂವಾದರು, ಎಲ್ಲರೊಲುಮೆಯ ಬಾಂದಳದ ಚೆಲುವಾದರು. ಆದರೆ ನಿರಂತರವಾಗಿ ಸಿನಿಮಾಕ್ಕೆ ಬರೆಯುವಾಗ ಅದೇ ಮೂಲ ಸತ್ವವನ್ನು ಉಳಿಸಿಕೊಳ್ಳುವುದು ಕಷ್ಟವಾಗುತ್ತದೆ. ಈ ಕಷ್ಟವನ್ನು ಗೆಳೆಯ ದೊಡ್ಡರಂಗೇಗೌಡರು ಎದುರಿಸಬೇಕಾಯಿತು.

17109

ಇವರು ಸಿನಿಮಾ ಕ್ಷೇತ್ರದಲ್ಲಿ ಹೆಚ್ಚು ತೊಡಗಿಸಿಕೊಂಡಂತೆ ಸಾಹಿತ್ಯ ಕ್ಷೇತ್ರಕ್ಕೆ ಸ್ವಲ್ಪ ಮರೆಯಾಗತೊಡಗಿತೆಂದು ನನ್ನ ತಿಳಿವಳಿಕೆ. ಸಾಹಿತ್ಯ ಕ್ಷೇತ್ರದಲ್ಲಿ ಭರವಸೆಯ ಕವಿಯೆಂದೇ ಪ್ರಸಿದ್ಧರಾಗಿದ್ದ ದೊಡ್ಡರಂಗೇಗೌಡರು ಸಿನಿಮಾ ಗೀತೆಗಳ ಮೂಲಕ ಪ್ರಸಿದ್ಧರಾಗತೊಡಗಿದಂತೆ ಸಾಹಿತ್ಯ ಲೋಕದಲ್ಲಿ ಅವರ ಕಾವ್ಯದ ಚರ್ಚೆ ಕಡಿಮೆಯಾಗತೊಡಗಿತು. ಈ ಕೊರಗು ಗೆಳೆಯ ದೊಡ್ಡರಂಗೇಗೌಡರನ್ನು ಸದಾ ಕಾಡಿಸುತ್ತಿತ್ತು. ಆ ವೇಳೆಗೆ ನಾವು ಆತ್ಮೀಯರಾಗಿದ್ದೆವು. ಮುಚ್ಚುಮರೆಯಿಲ್ಲದೆ ಮನಸ್ಸನ್ನು ತೋಡಿಕೊಳ್ಳುವಷ್ಟು ಅವರು ಹತ್ತಿರವಾಗಿದ್ದರು. ಹೀಗಾಗಿ ತಮ್ಮೊಳಗಿನ ಕೊರಗನ್ನು ಅನೇಕಸಾರಿ ನನ್ನೊಂದಿಗೆ ಹಂಚಿಕೊಂಡಿದ್ದರು. ಸಿನಿಮಾ ಕ್ಷೇತ್ರಕ್ಕೆ ಆದ ಲಾಭ ಸಾಹಿತ್ಯಕ್ಕಾದ ನಷ್ಟವೆಂದು ನನಗಾಗ ಅನ್ನಿಸುತ್ತಿತ್ತು. ದೊಡ್ಡರಂಗೇಗೌಡರು ಸಾಹಿತ್ಯಲೋಕದಲ್ಲಿ ಗಟ್ಟಿಯಾಗಿ ನಿಲ್ಲುತ್ತಿದ್ದಾಗ ಸಿನಿಮಾ ಕ್ಷೇತ್ರವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡರೇನೋ ಎಂದು ನನಗೆ ಅನ್ನಿಸುತ್ತಿತ್ತು. ಆದರೆ ಅವರವರ ಆಯ್ಕೆ ಮತ್ತು ಆದ್ಯತೆ ಅವರವರದು. ಹೀಗಾಗಿ ನಾನು ಹೆಚ್ಚೇನೂ ಹೇಳುತ್ತಿರಲಿಲ್ಲ. ಸಿನಿಮಾ ಗೀತೆಗಳಲ್ಲಿ ಕಾಣಿಸಿದ ಹೊಸತನಕ್ಕಾಗಿ ಅವರನ್ನು ಅಭಿನಂದಿಸುತ್ತಿದ್ದೆ. 'ಈಕಡೆ' ಮತ್ತೇನು ಬರೆದಿರಿ ಎಂದು ಕೇಳುತ್ತಿದ್ದೆ. ನವೋದಯ ಕಾವ್ಯದ ಭಾವನೆಗಳಿಂದ ಬೆಳೆಯುತ್ತ ನವ್ಯಕಾವ್ಯದಲ್ಲಿ ಗಟ್ಟಿಯಾಗುತ್ತ, ಸಿನಿಮಾಕ್ಷೇತ್ರದಲ್ಲಿ ಮತ್ತೆ ನವೋದಯ ಕವಿಯಾದ ದೊಡ್ಡರಂಗೇಗೌಡರದು ಒಂದು ವಿಸ್ಮಯದ ಪಯಣ.

ನಾನು ಸಿನಿಮಾ ನಿರ್ದೇಶಕನಾದಾಗ ದೊಡ್ಡರಂಗೇಗೌಡರು ಅದೆಷ್ಟು ಆನಂದ ಪಟ್ಟರೆಂದು ನನಗೇ ಗೊತ್ತು. ಅವರು ಮತ್ತು ನಾನು ಸಾಹಿತ್ಯ ಮತ್ತು ಸಿನಿಮಾ ಎರಡೂ ಕ್ಷೇತ್ರಗಳಲ್ಲಿದ್ದರೂ ಅವರಲ್ಲಿ ತಪ್ಪಿಯೂ ಹೊಟ್ಟೆಕಿಚ್ಚು ಬರಲಿಲ್ಲ. ಅದೇ ಆತ್ಮೀಯತೆ, ಅದೇ ಮೆಚ್ಚುಗೆ, ಲಯತುಂಬಿದ ಮಾತಲ್ಲಿ ಮಿಡಿಯುವ ಮನಸ್ಸು. ನಿರ್ಮಲ ಪ್ರೀತಿ ವಿಶ್ವಾಸದ ಕಾರಣಕ್ಕಾಗಿ ದೊಡ್ಡರಂಗೇಗೌಡರು ಸದಾ ದೊಡ್ಡದಾಗಿ ಕಾಣುತ್ತಾರೆ. 'ಸಾವಿರದ ಜಾರಿ ಯಾಕೋ? ಪ್ರೀತಿಯೊಂದೇ ಬಾಳಿಗೆ ಸಾಕೋ!' ಎಂದು ಬರೆದಿರುವ ಇವರು 'ಪ್ರೀತಿಯ ಬಾಳಿನ ಅರಿಯದ ಬಂಧಕೆ ಮುಗಿವೆಂಬುದು ಇಲ್ಲ' ಎಂದು ನಂಬಿದ್ದಾರೆ; ಅದರಂತೆ ಬದುಕಿದ್ದಾರೆ.

ದೊಡ್ಡರಂಗೇಗೌಡರು ಬದುಕಿನ ವಿವಿಧ ಹಂತಗಳನ್ನು ಹಾದು ಬಂದಿದ್ದಾರೆ. ಹಳ್ಳಿ ಬದುಕಿನ ಸೊಗಸು, ಕಷ್ಟಕಾರ್ಪಣ್ಯದ ಬೆಳಸು, ಎಲ್ಲವನ್ನೂ ನುಂಗಿಕೊಂಡು ಬೆಳೆದ ಮನಸು-ಇದು ಅವರ ಬದುಕು. ಅವರೇ ಹೇಳುವಂತೆ 'ಹೊರಗೆ ಸುಂದರವಾಗಿ ಅತ್ತಿ ಹಣ್ಣಿನ ಹಾಗೆ ಚೆಂದ ಚೆಂದವಾಗಿ ಕಂಡ ಈ ಬದುಕು ಒಳಗೆ ಪುತಗುಡುವ ಹುಳುಗಳ ಹಾಗೆ ಕಂಡದ್ದು ಖಂಡಿತಾ ನಿಜ. ಮೂರು ಹೊತ್ತು ರಂಕಲು... ರಾಮಾಯಣ...' ಹೀಗಾಗಿ 'ದುಗುಡವೆಲ್ಲ ಅರಿವಿಲ್ಲದೆ ಹಾಡಾಯಿತು. ಅಭಿವ್ಯಕ್ತಿ ಮೊನಚಾಯಿತು.'

ದೊಡ್ಡರಂಗೇಗೌಡರೇ ಹೇಳಿಕೊಂಡಂತೆ ಅವರ ಕವಿತೆ ಈ ಮಣ್ಣಿಗೆ ಸಂಬಂಧಿಸಿದ್ದು. ಅವರ ಮೊದಲ ಮೂರ್‍ನಾಲ್ಕು ಸಂಕಲನಗಳು ಈ ಮಾತನ್ನು ಸಮರ್ಥಿಸುತ್ತವೆ. ದೊಡ್ಡರಂಗೇಗೌಡರಿಗೆ ತಮ್ಮ ಕಾವ್ಯದ ಬಗ್ಗೆ ಈಗಲೂ ಅದೇ ಅಚಲ ನಂಬಿಕೆಯಿದೆ;

'ಗೊಬ್ಬರ ತುಂಬಿದ ಕೈ ಬರೆದ
ಮಣ್ಣಿನ ಹಾಡು ನನ್ನದು
ಸಗಣಿ ಮೆತ್ತಿದ ಬೆರಳುಹಿಡಿದ
ಗ್ರಾಮೀಣ ಲೇಖನಿ ನನ್ನದು!

ಬೆವರು ಸುರಿಸಿ ಕಷ್ಟದಿ ದುಡಿದ
ನೆಲದ ಪದ ನನ್ನದು,
ಮುದ್ದೆ ಸೊಪ್ಪಿನ ಸಾರು ಕಂಡ
ರೈತನ ಮುದ ನನ್ನದು'

(ಹೆಜ್ಜೆಗುರುತು-ಪದ್ಯ)

ಹೀಗೆ ನೆಲದ ಪದಗಳನ್ನು ಹಾಡಲು ಹಾತೊರೆಯುವ ಈ ಕವಿ ನನ್ನ ಗೆಳೆಯನೆಂಬ ಸಂತೋಷ ನನ್ನದು. ಈ ಸಂತೋಷದ ನಡುವೆಯೇ ಒಂದು ಮಾತನ್ನು ಹೇಳಬೇಕು: ಅಂದು

ಸಿನಿಮಾಕ್ಷೇತ್ರವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡಂತೆ ಕಾಣುತ್ತಿದ್ದ ದೊಡ್ಡರಂಗೇಗೌಡರು ಇಂದು ಆದಿಚುಂಚನಗಿರಿ ಮಠವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡಿದ್ದಾರೆ ಎನಿಸುತ್ತದೆ. ಅವರ ಶ್ರದ್ಧೆಗಳ ಸ್ವಾತಂತ್ರ್ಯವನ್ನು ನಾನು ಪ್ರಶ್ನಿಸುವುದಿಲ್ಲ ಇದರಿಂದ ಸಾಹಿತ್ಯ ಶ್ರದ್ಧೆ ಸೊರಗಬಾರದು ಎಂಬ ಕಾಳಜಿ ನನ್ನದು. ನನ್ನ ಈ ಕಾಳಜಿಗೆ ಅರ್ಥವಿದೆಯೆಂಬುದಕ್ಕೆ ಸಮರ್ಥನೆಯ ಅಗತ್ಯವಿಲ್ಲ.

ಅದೇನೇ ಇರಲಿ, ದೊಡ್ಡರಂಗೇಗೌಡರದು ಅನ್ಯರಿಗೆ ಅನ್ಯಾಯ ಮಾಡಿ ಅಟ್ಟ ಹತ್ತುವ ಪ್ರವೃತ್ತಿಯಲ್ಲ, ಅವರದು ಆತ್ಮ ವಂಚನೆಯ ಹಾದಿಯಲ್ಲ. ಅವರ ಪ್ರೀತಿ ವಿಶ್ವಾಸಕ್ಕೆ ಅವರ ಸಾಹಿತ್ಯವೂ ಸಾಟಿಯಲ್ಲ. ನನ್ನ -ಅವರ ಸ್ನೇಹಕ್ಕೆ ಎಂದೂ ಕುಂದಿಲ್ಲ.





# ದೊಡ್ಡರಂಗೇಗೌಡರು ನಾನು ಬಲ್ಲಂತೆ

• ಬಿ.ಆರ್. ಲಕ್ಷ್ಮಣರಾವ್

ದೊಡ್ಡರಂಗೇಗೌಡರು ಮತ್ತು ನನ್ನ ಸ್ನೇಹ ಸುಮಾರು ನಲವತ್ತು ವರ್ಷಗಳಷ್ಟು ಹಳೆಯದು. ನಾವು ಸಮಾನ ವಯಸ್ಕರು, ಏಕವಚನದ ಗೆಳೆಯರು. ನಾನು ಬೆಂಗಳೂರಿನ ಜಿ.ಎ.ಎಸ್. ಕಾಲೇಜಿನಲ್ಲಿ ಬಿ.ಎ. ಓದುತ್ತಿದ್ದಾಗ ದೊಡ್ಡರಂಗೇಗೌಡರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಕನ್ನಡ ಆನರ್ಸ್ ವಿದ್ಯಾರ್ಥಿ. ಆಗಿನಿಂದಲೂ ನಮ್ಮ ಪರಿಚಯ. ಅವನು ಎಷ್ಟು ಕಷ್ಟಪಟ್ಟು ಮೇಲೆ ಬಂದವನೆಂದು ನನಗೆ ಗೊತ್ತು.

ದೊಡ್ಡರಂಗೇಗೌಡ ನನಗೆ ಇಂದಿಗೂ ತುಂಬ ಪ್ರಿಯನಾಗಿರುವುದು ಅವನ ಸರಳತೆ ಮತ್ತು ಸಜ್ಜನಿಕೆಗಾಗಿ. ಅವನಂಥ ಮುಗ್ಧ, ನಿಷ್ಕಪಟ, ಸ್ನೇಹಶೀಲ ವ್ಯಕ್ತಿ ತೀರಾ ವಿರಳ. ಅವನು ಖಾಸಗಿ ಮಾತುಕತೆಗಳಲ್ಲೂ ಸಹ ಯಾರ ಬಗ್ಗೆಯಾದರೂ ಕೆಟ್ಟದಾಗಿ ಮಾತಾಡಿದ್ದನ್ನು ನಾನು ಕೇಳಿಲ್ಲ. ಇತರರಿಂದ ತಾನು ವಂಚನೆಗೊಳಗಾದಾಗಲೂ ಆ ಬಗ್ಗೆ ವಿಷಾದವೇ ಹೊರತು ಕಹಿಯಿಲ್ಲ. ಮಾತ್ಸರ್ಯ ಅವನಿಂದ ಮಾರು ದೂರ. ಜನಪ್ರಿಯತೆಯ ಉತ್ತುಂಗದಲ್ಲಿದ್ದಾಗಲೂ ದುರಹಂಕಾರದಿಂದ ಬೀಗಿದವನಲ್ಲ, ಸದಾ ವಿನಯಶೀಲ. ಹೀಗಾಗಿ ಸಹಜವಾಗಿಯೇ ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರ.

ದೊಡ್ಡರಂಗೇಗೌಡ ಮತ್ತು ನಾನು 'ನವ್ಯ'ದ ಉತ್ಕರ್ಷ ಕಾಲದಲ್ಲಿ, ಅಂದರೆ ಅರವತ್ತರ ದಶಕದ ಉತ್ತರಾರ್ಧದಲ್ಲಿ, ಒಟ್ಟಿಗೇ ಕನ್ನಡ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದವರು. ಆಗ ಸೆಂಟ್ರಲ್ ಕಾಲೇಜಿನ ಕನ್ನಡ ಸಂಘ ಹೊರತಂದ ಉದಯೋನ್ಮುಖ ಕವಿಗಳ ಕವನ ಸಂಕಲನ 'ಚಿನ್ನದ ಗೆರೆ'ಯಲ್ಲಿ ನಮ್ಮಿಬ್ಬರ ಕವನಗಳೂ ಸೇರಿವೆ. ನಮ್ಮಿಬ್ಬರ ಚೊಚ್ಚಲ ಕವನ ಸಂಕಲನಗಳೂ ಸಹ 1971ರಲ್ಲಿ ಒಟ್ಟಿಗೇ ಹೊರಬಂದವು. ನಾನು ನಗರದ ಪರಿಸರದಿಂದ ಬಂದವನು; ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿ. ಹೀಗಾಗಿ 'ನವ್ಯ' ಮನೋಧರ್ಮ ನನಗೆ ಒಗ್ಗಿತ್ತು. ಆದರೆ ದೊಡ್ಡರಂಗೇಗೌಡ ಗ್ರಾಮೀಣ ಪರಿಸರದಿಂದ ಬಂದವನು; ಕನ್ನಡ ಸಾಹಿತ್ಯದ ವಿದ್ಯಾರ್ಥಿ.

ಹೀಗಾಗಿ, ದೊಡ್ಡರಂಗೇಗೌಡ ಸ್ವಭಾವತಃ 'ಸರ್ವೋದಯ' ಮನೋಧರ್ಮಕ್ಕೆ ಹತ್ತಿರದವನು. ಹೀಗಾಗಿ ಅವನು ಮುಂದೆ 'ಸರ್ವೋದಯಕ್ಕೆ' ವಿಶಿಷ್ಟವಾದ ನಿಸರ್ಗ ಪ್ರೀತಿ, ಆದರ್ಶಪ್ರಿಯತೆ, ಗೇಯತೆಗೆ ಒಲಿದದ್ದು ಸಹಜವೇ ಆಗಿದೆ.

ದೊಡ್ಡರಂಗೇಗೌಡ ಕಾವ್ಯದಲ್ಲಿ ಗ್ರಾಮೀಣ ಜೀವನಾನುಭವದ ಸೊಗಡಿದೆ; ಮನೋಜ್ಞ ಚಿತ್ರಗಳಿವೆ; ಭ್ರಷ್ಟಗೊಂಡ ತನ್ನ ಸುತ್ತಲಿನ ಸಮಾಜ, ರಾಜಕೀಯ ಹಾಗೂ ಧಾರ್ಮಿಕ ವಲಯಗಳ ಬಗ್ಗೆ ವಿಡಂಬನೆಯಿದೆ; ಅವನತಿಗೊಂಡ ಜೀವನ ಮೌಲ್ಯಗಳು, ಮಾನವೀಯ ಸಂಬಂಧಗಳ ಬಗ್ಗೆ ಗಾಢ ವಿಷಾದವಿದೆ; ಸರ್ವೋದಯಕ್ಕಾಗಿ, ಸ್ವಸ್ಥ ಸಮಾಜಕ್ಕಾಗಿ ಅದಮ್ಯ ಹಂಬಲವಿದೆ; ಜೊತೆಗೆ ಕೊಂಚ ಅತಿಯೆನ್ನಿಸುವಷ್ಟು ಮಾತುಗಾರಿಕೆ ಹಾಗೂ ವಾಚ್ಯತೆಯೂ ಇದೆ. ದೊಡ್ಡರಂಗೇಗೌಡರ ಕಾವ್ಯದ ಬಗ್ಗೆ ಮುಕ್ತ ವಿಮರ್ಶೆ ಮತ್ತು ಮೌಲ್ಯ ಮಾಪನ ನಮ್ಮ ವಿಮರ್ಶಕ ವಲಯದಿಂದ ಇನ್ನಾದರೂ ಆಗಬೇಕಿದೆ.

ದೊಡ್ಡರಂಗೇಗೌಡ ಇದೀಗ ಅರವತ್ತರ ಹೊಸ್ತಿಲಲ್ಲಿದ್ದಾನೆ. ಪ್ರಿಯ ಕವಿ ಮಿತ್ರನಿಗೆ ಹಾರ್ದಿಕ ಅಭಿನಂದನೆಗಳು. ಅವನ ಕಾವ್ಯಧಾರೆ ಸೆಲೆ ಬತ್ತದೆ ಮುಂದುವರಿಯಲಿ; ಕನ್ನಡ ಕಾವ್ಯ ಖಜಾನೆಗೆ ಮೌಲಿಕ ಕೊಡುಗೆಗಳು ಅವನಿಂದ ಒದಗಿಬರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

❑



# ಅವರ ಮಾತಿನಲ್ಲೇ ಅವರ ಕಂಡರಿಸಿ....

• ಡಾ|| ವಿಜಯಾ

ಅದು ಎಪ್ಪತ್ತರ ದಶಕದ ಪೂರ್ವಾರ್ಧ ಅಥವಾ ಪ್ರಾರಂಭದ ವರ್ಷಗಳು. ದೊಡ್ಡರಂಗೇಗೌಡ ಅವರ 'ಕಣ್ಣು ನಾಲಗೆ ಕಡಲು' ಸಂಕಲನ ಪ್ರಕಟವಾಗಿದ್ದ ದಿನಗಳು. ಅಂಕಣದಲ್ಲಿ ಸಂಕಲನದ ಬಗ್ಗೆ ನಾಲ್ಕುಮಾತು ಹೇಳಲು ಬಯಸಿದಾಗ ಮಲ್ಲಿಗೆ ಪತ್ರಿಕಾ ಕಚೇರಿಯಲ್ಲಿ ಅವರೊಂದಿಗೆ ಬಹಳ ಸಮಯ ಮಾತನಾಡಿದ್ದ ನೆನಪು. ದೊಡ್ಡರಂಗೇಗೌಡರ ಕವನ ಸಂಕಲನಗಳಲ್ಲಿ 'ಕಣ್ಣು ನಾಲಗೆ ಕಡಲು', 'ನಾಡಾಡಿ' ನಾನು ಆಗ ತುಂಬ ಮೆಚ್ಚಿಕೊಳ್ಳುತ್ತಿದ್ದ ಕೃತಿಗಳು. ಅನಂತರವೂ ಅವರು ಅನೇಕ ಕವಿತಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅನೇಕ ಅಡೆತಡೆಗಳನ್ನು ದಾಟಿ ಎತ್ತರಕ್ಕೆ ಬೆಳೆದಿದ್ದಾರೆ. ನೆನ್ನೆಗಳತ್ತ ಕಣ್ಣು ಹಾಯಿಸಿದಾಗ ಅವರ ಈ ಬೆಳವಣಿಗೆ ತುಂಬ ತೃಪ್ತಿ ಕೊಡುವ ಸಂಗತಿ.

ಸಾಹಿತ್ಯ ಚಳವಳಿಯು ಕಂಡ ಅವಸ್ಥಾಂತರಗಳಲ್ಲಿ ಇಂಥದೇ ಎಂದು ಒಂದು ಗೊತ್ತಾದ ಪಂಥದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ ದೊಡ್ಡರಂಗೇಗೌಡ. ಯಾವ ಗುಂಪಿನ ಒಳಗೂ ಸೇರದೆ ತನ್ನದೇ ಆದ ಚೌಕಟ್ಟಿನಲ್ಲಿ ಅಭಿವ್ಯಕ್ತಿ ಮಾರ್ಗಗಳನ್ನು ಬಳಸಿಕೊಳ್ಳುತ್ತಾ ಬಂದರು.

ವಿಮರ್ಶಕ ವಲಯದಲ್ಲೂ ವಿಚಿತ್ರ ತಿರುವುಗಳಿದ್ದವು. ಯಾರೂ ಯಾರನ್ನೂ ಗುರುತಿಸಿ, ಇಲ್ಲೊಂದು ಪ್ರತಿಭೆಯ ಸೆಳಕಿದೆ ಮೆಚ್ಚಿಕೊಳ್ಳೋಣ ಎಂಬ ಮನೋಧರ್ಮ ಹೋಗಿ ಅವರವರ ಇಷ್ಟಕ್ಕೆ ಬೇಕಾದ್ದನ್ನು ಕೊಡಬಲ್ಲವರನ್ನು ಮಾತ್ರ ಗುರುತಿಸುವ ಪ್ರವೃತ್ತಿ ಬೆಳೆಯುತ್ತಿತ್ತು. ಇದರಿಂದಾಗಿ ಸಹಜವಾಗಿಯೇ ಸಾಹಿತ್ಯದ ಗುಂಪುಗಾರಿಕೆ, ಮರ್ಜಿ, ಒಲ್ಮೆಕೆಗಳಂಥವು ನುಗ್ಗಿಯಾಗಿತ್ತು. ಹೀಗಾಗಿ ಗುಂಪುಗಾರಿಕೆ ಮತ್ತು ಕೆಲವು ಶ್ರೇಷ್ಠರೆಂದುಕೊಂಡವರ ಸುತ್ತ ಪರಿಭ್ರಮಿಸುವ ಶಿಷ್ಯವೃಂದ, ಅವರ ಕೃಪಾಕಟಾಕ್ಷಕ್ಕೆ ಇವರ ಒಲ್ಮೆಕೆ, ಇವರನ್ನು ಬಳಸಿಕೊಂಡು ಅವರ ಮೆರವಣಿಗೆ ಮಾಡಿಕೊಳ್ಳುವುದು ನಡೆದಿತ್ತು. ಇಂಥಲ್ಲಿ ಕೆಲವು ಜೊಳ್ಳುಗಳೂ ವಿಜೃಂಭಿಸಿದ್ದುಂಟು; ಗಟ್ಟಿಕಾಳುಗಳಿಗೂ ಅಭಾವವಿರಲಿಲ್ಲ. ಆದರೆ ಇಂಥ ವಲಯಗಳ ಒಳಗೆ ತೂರಿಕೊಳ್ಳಲಾಗದ

ಕೆಲವರು 'ಅವರೊಡನಿದ್ದೂ ಅವರಂತಾಗದ' ಇಕ್ಕಟ್ಟಿನಲ್ಲಿ ಎಲ್ಲಿ ಸಲ್ಲಬೇಕೋ ತಿಳಿಯದೇ ಪರದಾಡಿರಬಹುದು. ಕ್ರಮೇಣ ವಿಮರ್ಶೆ ತಾತ್ವಿಕತೆಯತ್ತ ಹೊರಳಿ, ಒಬ್ಬ ಕವಿ-ಕಾವ್ಯ ಕುರಿತ ಚರ್ಚೆ ಕಡಿಮೆಯಾಗತೊಡಗಿತು. ವೈಯಕ್ತಿಕ ಸಾಧನೆಗೆ ವಿಮರ್ಶೆ ತೆರೆದುಕೊಳ್ಳದೇ ಹೋದಾಗ ಸೃಜನಶೀಲ ಉತ್ಸಾಹ ಕಳೆದುಕೊಂಡವರೂ ಇದ್ದರು, ವಿಮರ್ಶೆಯ ಹೊಣೆ ಬೇಡವೆಂದು ಕೊಡವಿಕೊಂಡೆದ್ದು ಬಂದವರು ಹಲವರು.

'ಕಣ್ಣು ನಾಲಗೆ ಕಡಲು'ನಂಥ ಕೃತಿಕೊಟ್ಟ ಕವಿ ದೊಡ್ಡರಂಗೇಗೌಡ ಇಂಥ ಅಗ್ನಿದಿವ್ಯ ದಾಟಿ ಬರುವುದು ಅನಿವಾರ್ಯವಾಗಿತ್ತು. ಈ ಎಲ್ಲ ಹಂಗು ತೊರೆದು ತನಗೆಲ್ಲಿ ಮಾನ್ಯತೆ, ಗೌರವ ಇದೆಯೋ ಅಲ್ಲಿ, ಜನರ ಮಧ್ಯಕ್ಕೆ ರಾಜಗಾಂಭೀರ್ಯದಿಂದಲೇ ಜಿಗಿದರು. ಹೀಗಾಗಿ ದೊಡ್ಡರಂಗೇಗೌಡ ಅವರ ಕಾವ್ಯ ಕೌಶಲವೂ ಹೊಸ ಮಾರ್ಗವನ್ನು ಹುಡುಕಿಕೊಂಡಿತು. ಅಷ್ಟಾದರೂ ದೊಡ್ಡರಂಗೇಗೌಡ ಅವರ ವಸ್ತು ಸಂವಿಧಾನದಲ್ಲಿಯ ಕೌಶಲ, ಛಂದಸ್ಸಿನ ಪ್ರಯೋಗಶೀಲತೆ, ರಮ್ಯ ಕಲ್ಪನೆಗಳು ಅವರ ಕಾವ್ಯ ಬೆಳಕಿಗೆ ಬರುವಾಗ ಅನಿವಾರ್ಯವಾಗಿದ್ದ ಅನೇಕ ಒಪ್ಪಂದಗಳ ನಡುವೆಯೂ ತಮ್ಮದೇ ಆದ ವೈಶಿಷ್ಟ್ಯವನ್ನು ಸಾಧಿಸಿದವು.

ದೊಡ್ಡರಂಗೇಗೌಡರು ಚಲನಚಿತ್ರ ರಂಗಕ್ಕೆ ಬರುವ ವೇಳೆಗೆ ಆ ಕ್ಷೇತ್ರದಲ್ಲಿ ಉತ್ತಮ ಗೀತರಚನಕಾರರು ಆಗಲೇ ಸ್ಥಾಪಿತಗೊಂಡಿದ್ದರು. ಅಕೆಡಮಿಕ್ ವಲಯದ ಶಿಸ್ತು-ಚೌಕಟ್ಟುಗಳನ್ನು ಬಿಟ್ಟುಕೊಡದೇ ತನ್ನೆದುರಿಗಿದ್ದ ಪ್ರಬಲ ಶಕ್ತಿಗಳು ಹಾಗೂ ಅವರ ಜನಪ್ರಿಯತೆಯ ಧಾಟಿಯನ್ನು ಮೀರಿ ಪ್ರತ್ಯೇಕತೆಯ ಜೊತೆಗೆ ಗೆಲುವನ್ನು ಸ್ಥಾಪಿಸಲೇಬೇಕಾದ ಅಘೋಷಿತ ಸವಾಲು ಅವರದಾಗಿತ್ತು. ಜಯ ತುಂಬ ಸುಲಭವಾಗಿರಲಿಲ್ಲ. ಆದರೆ ದೊಡ್ಡರಂಗೇಗೌಡರಿಗೆ ಇದೇ ವೃತ್ತಿಯಾಗಿರಲಿಲ್ಲ. ಇದನ್ನೇ ಆಶ್ರಯಿಸಬೇಕಾದ ಅನಿವಾರ್ಯ ಅಥವಾ ಒತ್ತಡಗಳಿದ್ದರಿಂದ ಇಲ್ಲಿ ಅವರ ನಡೆ ಒಪ್ಪಂದ-ಒಡಂಬಡಿಕೆ ಆಗದೆ ರಾಜಮಾರ್ಗವಾಗುವುದು ಸಾಧ್ಯವಾಯಿತು. ಅದೇ ಅವರ ಯಶಸ್ಸಿಗೆ ಸಿಕ್ಕ ದೊಡ್ಡ ಆಸರೆ ಕೂಡಾ. ಹೀಗಾಗಿ ಇಲ್ಲಿ ಅವರಿಗೆ ಪ್ರಯೋಗ ಸ್ವಾತಂತ್ರ್ಯವಿತ್ತು. ಯಾರ ಹಂಗೂ ಇರಲಿಲ್ಲ ಎಂಬುದೇ ಅವರ ಜಯದ ಮೊದಲ ಹೆಜ್ಜೆ ಎನ್ನಬಹುದು.

ದೊಡ್ಡರಂಗೇಗೌಡ ಅವರನ್ನು ಅವರ ಉತ್ಸಾಹ ವಿನಯ ಶ್ರದ್ಧೆಗಾಗಿ ಸಾಹಿತ್ಯ ಕ್ಷೇತ್ರದ 'ಅತಿಗಣ್ಯರು' ಅಗತ್ಯವಿದ್ದಾಗೆಲ್ಲ ಬಳಸಿಕೊಂಡರು. ತಪ್ಪಿಯೂ ಅವರ ಪರಿಶ್ರಮವನ್ನು ಗುರುತಿಸುವ ಕೃತಜ್ಞತೆ ತೋರಲಿಲ್ಲ. ಇಂಥ ಹಲವು ಇಕ್ಕಟ್ಟುಗಳಿಂದ ಬಿಡಿಸಿಕೊಂಡು ಬರಲು ದೊಡ್ಡರಂಗೇಗೌಡರು ಪಟ್ಟ ಪಾಡೇನೂ ಕಡಿಮೆಯಿಲ್ಲ. ಅವರು ಮತ್ತೆ ಮತ್ತೆ ಅಂಥದೇ ಕಾದ ಕಡಾಯಿಯ ಸಮೀಪಕ್ಕೆ ಹೋಗಿಯೂ ಬೆಂಕಿ ತಾಗಿಸಿಕೊಳ್ಳದೆ ಜಾಣತನದಿಂದ ಹೊರಬಂದ ಪ್ರಸಂಗಗಳು ಹಲವು ಇವೆ. ಗ್ರಾಮೀಣ ಬದುಕಿನಿಂದ ಬಂದ ಮುಗ್ಧತೆಯೇ ಅವರನ್ನು ಕಾಪಾಡಿರಲೂ ಸಾಕು. ಸುಳಿಗಳನ್ನು

ಸಮೀಪಿಸಿಯೂ ಸುಳಿಯೊಳಗೆ ಸಿಗದೆ ಹೊರಬಂದ ದೊಡ್ಡರಂಗೇಗೌಡರು ಆ ಮಟ್ಟಿಗೆ ಅಸ್ತಿತ್ವಕ್ಕಾಗಿ ಸದ್ದಿಲ್ಲದೆ ಹೋರಾಡಿದರೆಂಬುದು ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ತಿಳಿಯುವಂಥದ್ದು.

ಬಹಳ ಹಿಂದೆಯೇ, ಪತ್ರಿಕೆ ಮಾಡಲು ಹೊರಟದ್ದು, ಮುಂದೊಮ್ಮೆ 'ಅಕಾವ್ಯ' ತರಲು ಹೊರಟದ್ದು ಕಡೆಗೆ ಬುದ್ಧಿಜೀವಿಗಳ ಸಿನಿಮಾಗಳಿಗೆ ದುಡಿದು ಬರಿಗೈಲಿ ಹೊರಬಂದದ್ದು ಇಲ್ಲೆಲ್ಲ ಇವರ ತಿಳಿವಳಿಕೆ, ಶ್ರಮ-ಶ್ರದ್ಧೆಯನ್ನು ಬಳಸಿಕೊಂಡ ಜಾಣ ಜನರ ಹುನ್ನಾರವೇ ಇತ್ತು.

ಇಷ್ಟಾದರೂ ಒಂದೇ ಒಂದು ಕಹಿಮಾತನ್ನೂ ಆಡದೆ ನನ್ನ ಪಾಡೆನಗಿರಲಿ ಎಂದು ಹೊರನಡೆದ ದೊಡ್ಡರಂಗೇಗೌಡರು ಸರಳವಾದ, ಸುಲಭವಾಗಿ ಜನರ ಹತ್ತಿರಕ್ಕೆ ಹೋಗಬಲ್ಲ ಮಾರ್ಗವನ್ನು ಕಂಡುಕೊಂಡರು. ಪಂಡಿತ ಮಾನ್ಯರ ಗಮನ ಸೆಳೆಯುವ ಪ್ರಯತ್ನಕ್ಕಿಂತ ಜನತಾ ಜನಾರ್ಧನನ ಅಡಿಯಲ್ಲಿ ಸಂತೋಷ ಸಂತೃಪ್ತಿಗಳನ್ನು ಕಂಡುಕೊಂಡರು. 'ನಾಡಾಡಿ'ಯಂಥ ಸಂಕಲನ ತಂದ ಕವಿ ಇಲ್ಲಿ ಒಮ್ಮೊಮ್ಮೆ ಅನಿವಾರ್ಯವಾಗಿ ತುಸು ತೆಳ್ಳನೆಯ ಭಾವನೆಗಳಿಗೆ ಪದ-ಪ್ರಾಸಗಳ ಜೋಡಣೆ ಮಾಡಿದ್ದೂ ಉಂಟು. ಸಮೃದ್ಧ ಪೈರು, ಹಾಲುತುಂಬಿದ ತೆನೆಯ ಸಂಖ್ಯೆಯೂ ಸಣ್ಣದಲ್ಲ.

'ಹಗುರ ಮಾತಿನದ್ದಲ್ಲ ಪೊಗರು ಭಾಷಣದ್ದಲ್ಲ
ಜೀವ ಜೀವಾಳ ಬಿತ್ತಿ ಬೆಳೆದದ್ದೊ!
ಮಾತು ಮಥಿಸಿ ಕೆತ್ತಿ ಕಡೆದದ್ದೊ!
ಪಾಡು ಪಟ್ಟವರ ಆತ್ಮ ಪಡೆದದ್ದೊ!
ಕೋಟಿ ಬವಣೆ ಕಂಡೋರು ನುಡಿದದ್ದೊ!
ಮಣ್ಣ ಮಕ್ಕಳ ಕಣ್ಣು ಕಂಡದ್ದೊ!
ಅಹೋ ರಾತ್ರಿ ಬನ್ನ ಉಂಡದ್ದೊ!'

-ಎಂಬ ಸ್ಪಷ್ಟ ಉತ್ತರದಿಂದಲೇ ತಮ್ಮ ಹಾಡು ಹುಟ್ಟುವ ಬಗೆಯನ್ನು ಹೇಳಿದರು. ಅವರಿಗೆ ಕಾವ್ಯರಚನೆ **'ಸೂರ್ಯ ಮೂಡಿದಂತೆ, ಹೂವು ಅರಳಿದಂತೆ'**.

ಸುಮಧುರ ಕಲ್ಪನೆಗಳಿಗೆ ತೆರೆದ ಮನಸ್ಸು ಲೋಕದ ಬನ್ನ ಬವಣೆಗಳತ್ತ ಮುಖ ಬವಣೆಗಳತ್ತ ಮುಖ ಮಾಡಿದಾಗ ಕರಗುತ್ತದೆ. 'ಸಿಂಬಿ ಸುತ್ತಿ ಮಲಗಿದ ಮನುಕುಲಕ್ಕೆ ಇನ್ನೆಂದಿಗೆ ಎಳಿಗೆ?' ಎನ್ನುವ 'ಕವಿದ ಕತ್ತಲೆ ಓಡಿಸುವ, ಮೆರೆದ ಮೌಢ್ಯತೆಗಳ ತೊಲಗಿಸುವ' ಎಚ್ಚರ ಈ ಕವಿಯದು.

ಲೋಕದ ರೀತಿ ನೀತಿಗಳು ಇರಬೇಕಾದ ರೀತಿಯಲ್ಲಿ ಇಲ್ಲ, ಎಲ್ಲವೂ ಸರಿಯಾಗಿಲ್ಲ ಎಂಬ ವ್ಯಥೆ. ಸಮಗ್ರವಾದ ಬದಲಾವಣೆಯನ್ನು ಬಯಸುವ ಮನಸ್ಸುಳ್ಳ ಕವಿ 'ಅಮೇಧ್ಯವನ್ನೂ

ಬಿಡದ ನುಂಗಣ್ಣ'ಗಳನ್ನು ನೋಡುತ್ತ ಸುಮ್ಮನೆ ಕುಳಿತ ಸಾವಂಥ ಮಂಗಣ್ಣಗಳು, 'ದಲಿತರುದ್ಧಾರದ ಹೆಸರಲ್ಲಿ ಬಲಿತರುದ್ಧಾರವಾಗುತ್ತಿದೆ, ಇಲ್ಲೆಲ್ಲಾ ಎಡವದೆ ಬದಲಿಸುವ ಪಣ ತೊಡಬೇಕು', ಅದಕ್ಕಾಗಿ ಛಲಬೇಕು ಎಂದು ಹೇಳುತ್ತಾರೆ.

ಕವಿಯು ಆಕ್ರೋಶ ಜನಮುಖಿಯಲ್ಲದ ಸಾಹಿತ್ಯದ ರಚನೆಗಳಿಗೆ ಅರ್ಥವಿಲ್ಲ ಎನ್ನುತ್ತದೆ. ಆದ್ದರಿಂದಲೇ ಅಭಿವ್ಯಕ್ತಿಗೊಂದು ಮುಖ್ಯ ಉದ್ದೇಶವಿಲ್ಲದಾಗ 'ಯಾರಿಗೂ ತಲುಪದ ಕ್ಲೀಷೆ ಕವಿತೆಗಳು ಯಾರಿಗೆ ಬೇಕು ಹೇಳಿ' ಎನ್ನುತ್ತ ಮನಸ್ಸನ್ನು, ಹೃದಯವನ್ನು ತಟ್ಟಿ ಪ್ಲಾಸ್ಟಿಕ್ ಪುತ್ಥಳಿಯಂಥಾ ಅಭಿವ್ಯಕ್ತಿ ಮಾರ್ಗಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. 'ಸತ್ಯ ಸೌಂದರ್ಯ ಅರಳಿಸುತ್ತ', ಗುರಿಯ ತೋರಿಸಿ ಶಿಖರ ಮುಟ್ಟಿಸುವಂಥ ಆದರ್ಶ ಮಾತ್ರ ನೋವನ್ನು ನೀಗಿಸಬಲ್ಲುದೆಂಬ ಆಶಯದ ಕವಿಗೆ 'ತಾನಿಟ್ಟ ಹೆಜ್ಜೆಯೆಲ್ಲ ಹೂವಿನ ಹಾದಿಯಲ್ಲ' ಎಂಬ ಅರಿವಿದೆ. 'ಕಪ್ಪುಜನರ ಕೆಂಪು ಕಥೆ ಬಿದ್ದೂ ಬಿದ್ದೂ ಎದ್ದ ಕಥೆ'ಯಾಗಿರುತ್ತದೆ, ಅದು 'ಕಣ್ಣೀರ ಎಣ್ಣೆದೀಪಮಾಡಿ, ಉಸಿರಿನ ಕುಡಿಬತ್ತಿಯೊಡ್ಡಿ ನಿತ್ಯ ಚಿಂತೆ ಜ್ಯೋತಿಯಾಗುತ್ತಾ ಗಾಳಿ ಮಳೆಯಲ್ಲಿ ಉಳಿಯುವಂಥದ್ದು; ಅದೇ ಕವಿಯ ಆತ್ಮಕಥೆ'ಯೂ ಆಗಿರಬಹುದು.

'ಒಬ್ಬರನ್ನೊಬ್ಬರು ಪ್ರೀತಿಸದೆ ಬದುಕೆಂಬುದಿಲ್ಲ, ಅಲ್ಲಿ ಆನಂದವೂ ಇಲ್ಲ' ಎಂದು ಸ್ನೇಹಕ್ಕಾಗಿ ಹಪಹಪಿಸುವ ಕವಿಗೆ 'ನಾಲಗೆಯಲ್ಲಿ ನಿತ್ಯವೂ ಸತ್ಯ ನುಡಿಯಿರಲು ಯಾರಿಗೆ ಹೆದರಬೇಕು? ಕಾಯಕ ನಿಷ್ಠೆ ಮೈಯಲ್ಲಿರಲು ಯಾರಿಗೇಕೆ ಹೆದರಬೇಕು?' ಎಂಬ ತಲೆ ಎತ್ತಿ ನಿಲ್ಲುವ ಪ್ರಾಮಾಣಿಕತೆಯಲ್ಲಿಯೇ ನಂಬಿಕೆ. ವೈಯಕ್ತಿಕ ಸಮಸ್ಯೆ, ಒಂಟಿತನ, ನಿರ್ಲಕ್ಷ್ಯಕ್ಕಾಗಿ ಮುಜುಗರ ಇಂಥವು ಕಾಡುತ್ತಿರುವಾಗಲೂ 'ಕೊಳೆಯಲಾರೆ ನಾನು ಬೆಳೆಯಬೇಕು ಇನ್ನೂ' ಅನ್ನುತ್ತ 'ಬಿರುಗಾಳಿಗೆ ಬಗ್ಗಿಯೂ ಸಾಯುದ ಗತ್ತು, ಸುಡುಬಿಸಿಲಿಗೆ ತಗ್ಗಿಯೂ ಕರಕಾಗದ ಗಮ್ಮತ್ತು' ಇದೆ. ತನ್ನ ಜನ 'ದಾರಿದ್ರ್ಯದ ಬೀಡಿನಿಂದ ದನಿ ಎತ್ತಿದವರು, ಮೇಲೆ ಮೇಲೆ ಬಂದು ಬಾಳ ಬೆಳಗಿನಿಂದವರು, ಅಂತಸ್ತಿನ ಪರದೆ ಹರಿದು, ಸಮಾನತೆಯ ಗೆರೆ ಬಿರಿದು, ಕಣ್ಣ ತುಂಬ ಬೆಳಕ ಹೊತ್ತು, ಹೊಸ ದಾರಿ ತೆರೆಯುತ್ತ ಹೊಸ ಚರಿತೆ ಬರೆಯ ಹೊರಟ ಜನ' ಎಂಬ ಹಮ್ಮು-ಬಿಮ್ಮು. 'ಬಿಡು ಬಿಡು ಜಾತಿ ಪಂಥ, ಹಿಡಿ ನೀನು ವಿಶ್ವಪಥ, ಕೆಳಗೆ ಬಿದ್ದ ಕರಿಯನೂ ಒಂದೇ ಮೇಲೆದ್ದ ಬಿಳಿಯನೂ ಒಂದೇ. ಇಂದಲ್ಲ ನಾಳೆ ಎಲ್ಲ ಒಂದೇ ಎಂಬ ಭಾವತಂತು ಅಕ್ಕರೆಯೇ ಶಾಶ್ವತ' ಎಂಬ ಕಿವಿಮಾತನ್ನು ಆ ತನ್ನ ಜನರಿಗೆ ಹೇಳುವ ಆರ್ದ್ರತೆ ಅವರದು.

'ನಿತ್ಯ ನಿತ್ಯ ಭೂಮಿ ಭಾನು ಬದುಕನ್ನು ಬೆಳಗುತ್ತಿವೆ, ಸತ್ಯ ಸಾರುತ್ತಿವೆ, ದಾರಿ ತೋರುತ್ತಿವೆ ಇತ್ತ ಗಮನಿಸಿ ಜಜ್ಜಿ ಹೋದ ಆಸೆ ಚಿಗುರಿ ಹೊಸ ಹೆಜ್ಜೆ ಇಡಲೇಬೇಕು, ರಿಕ್ತ ಭಾವ ಹಿಂದೆ ತಳ್ಳಿ ವಸತಿ ವಸನ ಇಲ್ಲವಾದರೂ ಛಲವ ಬಿಡಬೇಡ, ನೀನು ಅಗ್ನಿದಿವ್ಯ ಉದಿಸಲು ಬೇಕು, ಕೆಂಡ ನುಂಗಿ ಮೊಂಡನಾಗಿ ಸತ್ಯವ್ರತದ ಗಂಡನಾಗಬೇಕು' ಎಂದು ಸಾರುತ್ತ ತನ್ನ ಜನರಿಗಾಗಿ

ಬರೆವ-ಬದುಕುವ ಕವಿಗೆ ಯಾವ, ಯಾರ ಹಂಗಿನ ನರಕವೂ ಇಲ್ಲ. ಇಲ್ಲಿ ಕವಿತೆ ಅಂತರಂಗದ ಅರಳು, ನೊಂದವರ ಕೊರಳು, ಅದರಿಂದಲೇ ಅದು ಆನಂದದ ಕೊಳಲು; ಅಭಿವ್ಯಕ್ತಿಯ ಕಹಳೆಯೂ ಹೌದು. ಅದು ಸಮುದಾಯದ ದನಿ; ಸಂಸ್ಕೃತಿಯ ಹಣತೆ.

ಕವಿಯ ಕಾಳಜಿ ಸದಾ ತನ್ನ ಸುತ್ತಲ ಜನರ ಸುಖದ ಕಡೆಗೆ. ಅನ್ಯಾಯವೆನ್ನಿಸಿದಾಗ ಸಿಡಿಯುವ ಮನಸ್ಸು 'ಅಯ್ಯಾ ಸಾವಿರ ಸಾವಿರ ದೇವರ ಗುಡಿಗಳು ಪೂಜೆಯೇ ಇಲ್ಲದೆ ಒಳಗಿರುವಾಗ ಹೊಸ ಗುಡಿ ಬೇಕೇ, ಅದೂ ಜಾತಿಯ ಪಟ್ಟ ಕಟ್ಟಿಕೊಂಡು? ಮತಿ ಮರೆತು ಕಚ್ಚಾಡಿಕೊಂಡು ಗುಡಿ ಕಟ್ಟಬೇಕೆ? ರಾಮನ ದೇಗುಲ ಕಟ್ಟಲು ಹೋಗಿ ರಾವಣರಾಗುವಿರೇಕೆ? ರಾಮ ರಹೀಮ ಎಲ್ಲರೂ ಒಂದೇ ಅಲ್ಲವೇ? ಮಾನವರಾದಾಗ ಮಾತ್ರ ಮೈತ್ರಿ ಬಂಧವಲ್ಲವೇ' ಎಂದು ಮತಾಂಧರನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. ಲೋಕದಲ್ಲಿ ವೈರುಧ್ಯಗಳೇ ತುಂಬಿರುವಾಗ ಇದೆಂಥ ಪ್ರಜಾರಾಜ್ಯ, ಇದೆಂಥ ಚುನಾವಣೆ ಎಂದು ಪ್ರಶ್ನಿಸುತ್ತ 'ಇದು ಮೌಲ್ಯವಂತರಿಗಲ್ಲ ಕಣೋ, ಇಲ್ಲಿ ಬರೀ ಠಕ್ಕು ನರಿಗಳ ಸಂಚು, ಗೂಬೆಗಳ ಗಾಯನ, ಹಂದಿಗಳ ಸೌಂದರ್ಯ ಸ್ಪರ್ಧೆ, ಎಮ್ಮೆಗಳ ತೀರ್ಪು, ಹೆಡ್ಡರ ಮೇಳ, ಮುಂಗುಸಿಯ ಅಧಿಪತ್ಯವಿದೆ. ಇಂಥ ಕಡೆ ಹಸುವಿನ ಹಾಗೆ ಹಿಂದೆ ಬಂದರೆ ಒದೆಯದ ಮುಂದೆ ಬಂದರೆ ಹಾಯದ, ಅಸಹಾಯಕ ಪ್ರಜೆಗಳೇನು ಮಾಡಿಯಾರೆಂಬ ತಹತಹಿಕೆ.

'ಮನೆ ಮನೆಯಿಂದ ಮೌನ ಸೀಳಿ ಅಕ್ರಮವ ಪ್ರತಿಭಟಿಸಿ ಗುಡುಗಂತೆ ಮೊಳಗಿ ಸಿಡಿಲಂತೆ ಎರಗಿ ಬರುವ, ಹಳ್ಳಿಯ ಹನಿ ಹನಿಯೂ ಹರಿದು ನದಿಯಾಗಿ ಲಕ್ಷ ಲಕ್ಷ ಜನ ಮುನಿದು ಕುದಿವ ಕಡಲಾಗಿ, ಸ್ವಾಭಿಮಾನದಿಂದ ಸೆಡ್ಡು ಹೊಡೆದು ಘನತತ್ವಕ್ಕಾಗಿ ಕಣ್ಣ ತೆರೆಸಲು ಹರಿದು ಬರುವ' ರೈತರ ರ‍್ಯಾಲಿ ಕಂಡು ಮತ್ತೆ ಭರವಸೆ ತುಂಬಿಕೊಳ್ಳುತ್ತ 'ಸಮುದಾಯ ಸಂಘಟನೆಯೇ ವಿಚಾರ ಸ್ವಾತಂತ್ರ್ಯದ ಚೈತನ್ಯ, ಹೊಸ ಕ್ರಾಂತಿಯ ಗೀತೆ' ಎಂಬ ಸಮಾಧಾನ. ಸಮಾನತೆ, ಸಮಾಜವಾದೀ ಸೂರ್ಯತೇಜದ ಬೆಳಕಿನತ್ತ ಮುಖ ಮಾಡುತ್ತಾ ಸೆಟೆದು ನಿಂತು 'ರಾಗಮುಖಿ'ಯಾಗುವ ಕವಿ ದೊಡ್ಡರಂಗೇಗೌಡ ಅವರು ರಾಗದಲ್ಲಿ ಕೇವಲ ಸೊಬಗನ್ನು ತುಂಬದೆ ಸದಾ ಸಾಮಾಜಿಕ ಕಾಳಜಿಯನ್ನೇ ತೋರುತ್ತಾರೆ.

ಆ ರಾಗ ಮೌನಮುಖಿಯಾಗದೆ ಜ್ಞಾನಮುಖಿ, ಧ್ಯಾನಮುಖಿಯಾಗುತ್ತ ಲಾಸ್ಯ ಹಾಸ್ಯಗಳ ಜೊತೆಗೆ ಸ್ಪಂದಿಸುವ ಆತ್ಮಸುಖಿಯಾಗಿರುತ್ತದೆ. 'ನನ್ನ ಕವಿತೆಗಳು ಕವಿತೆಗಳಲ್ಲ ಅಂತರಾತ್ಮದ ಸರಿತೆಗಳು, ಅವು ಮಣ್ಣ ಮಕ್ಕಳ ಬಾಳ ತೊದಲು; ಸಂಸ್ಕೃತಿಯ ಸವಿ ಕೊರಳು' ಎಂಬ ಭರವಸೆಯಿರುವುದರಿಂದಲೇ ಕವಿಗೆ 'ಸಾವಿರ ರೀತಿ ಹಂಗಿಸೋ ಮಂದಿಗೆ ಸೊಪ್ಪು ಹಾಕುವ' ಅಗತ್ಯವಿಲ್ಲ ಮತ್ತು 'ಅದು ಕುಹಕಿಗಳಿಗೆ ಹೆದರಿ ಬದುಕು ನಡೆಸದ' ನೊಂದ ಜೀವ. ಆದ್ದರಿಂದಲೇ ಅದು 'ಕಷ್ಟವನ್ನು ಮೆಟ್ಟಿ ನಿಂತು ನಗೆ ಸೂಸಬಲ್ಲುದು'.

ಕವಿ ದೊಡ್ಡರಂಗೇಗೌಡರು ಇಂದು ನಾಡವರಿಂದ ಸಮ್ಮಾನಿತರು. ಎಲ್ಲರಿಗೂ ಪ್ರಿಯರೆನಿಸಿದ ಕವಿ. ಸಾಮಾಜಿಕವಾಗಿ, ಆರ್ಥಿಕವಾಗಿ, ಹಿರಿಯ ಸ್ಥಾನಮಾನ ಅವರಿಗೆ ಲಭಿಸಿದೆ. ನಾಡವರು ಆತ್ಮೀಯವಾಗಿ ಕಂಡಿದ್ದಾರೆ. ನಾಡಿಗೆ, ನುಡಿಗೆ, ಸಮಾಜದಲ್ಲಿ ಕೆಳಸ್ತರದ ಶೋಷಿತರ ಅಳಲಿಗೆ ದನಿಯಾಗುತ್ತ ನಡೆದ ಕವಿ ದೊಡ್ಡರಂಗೇಗೌಡ ನಾಡವರ ನಾಲಿಗೆಯಲ್ಲಿ ಹಾಡಾಗಿ ಹರಡಿಕೊಂಡವರು; ನುಡಿವವರಿಗೆ ನಲ್ಮಾತು ಕೊಟ್ಟವರು.

ದೊಡ್ಡರಂಗೇಗೌಡರೊಂದಿಗಿನ ನನ್ನ ಒಡನಾಟ ಬಹು ದೀರ್ಘ ಸಮಯದ್ದು. ಸರಿ-ತಪ್ಪು, ಕೊಂಕು-ಕುಹಕಗಳನ್ನೆಲ್ಲ ಹೊಟ್ಟೆಯಲ್ಲಿಟ್ಟುಕೊಂಡು ನಿರ್ಮಲವಾಗಿ ನಗುತ್ತ ಸ್ನೇಹಕ್ಕೆ ಕೈ ಚಾಚುವ ಅವರ ಗುಣ ನನಗೆ ತುಂಬ ಪ್ರಿಯವಾಗುತ್ತದೆ. ಚಿತ್ರರಂಗದಲ್ಲಿಯೂ ಅವರ ಸಾಧನೆ ಅನನ್ಯ. ದೊಡ್ಡರಂಗೇಗೌಡರು ನೋಟದಾಗೆ ನಗೆಯ ಮೀಟಿದವರು, ತೇರನೇರಿ ಅಂಬರದಾ ಚೆಲುವ ಓಡಿವ ಬಗೆ ತೋರಿದವರು. ಚಿತ್ರರಂಗದಲ್ಲೂ ಆದರ್ಶ ಪ್ರೇಮದ ಕಲ್ಪನೆ, ಚುಕ್ಕಿ-ಚಂದ್ರಮರು ಅಥವಾ ಶಬ್ದಾಡಂಬರವ ತುಂಬಿದ, ಒಂದು ಹಂತದಲ್ಲಿ ಏಕತಾನವಾಗುತ್ತಿದೆ ಎಂದು ಪ್ರೇಕ್ಷಕ ಭಾವಿಸತೊಡಗಿದಾಗ ಹೊಸ ಶಬ್ದಗಳು, ರೂಪಕಗಳು, ಜಾನಪದ ಧಾಟಿ ಎತ್ತಿ ತಂದು ಹೊಸಬೆಳಕು ಚೆಲ್ಲಿದವರು. ಅವರು ಕೊಟ್ಟ ಗ್ರಾಮ್ಯಭಾಷೆಯ ಸೊಗಡು ಚಲನಚಿತ್ರದ ಕಾವ್ಯಭಾಷೆಗೆ ಹೊಸಬಾಗಿಲನ್ನು ತೆರೆದಿತ್ತು. ಅವರ ಈ ಮಗ್ಗುಲಿನ ಸಾಧನೆಯನ್ನು ಹಲವರು ಹೇಳಿರಬಹುದು. ಇಲ್ಲಿ ಆ ಬಗ್ಗೆ ಹೆಚ್ಚು ಪ್ರಸ್ತಾಪಿಸುವ ಅಗತ್ಯವಿಲ್ಲ ಎಂದು ಭಾವಿಸುತ್ತೇನೆ.

ಮೊದಲ ಬಾರಿಗೆ ದೊಡ್ಡರಂಗೇಗೌಡರ ಸಲುವಾಗಿ ಎಸ್.ಪಿ. ಬಾಲಸುಬ್ರಹ್ಮಣ್ಯಂ ಬೆಂಗಳೂರಿನ ಸಾರ್ವಜನಿಕ ಸಮಾರಂಭದಲ್ಲಿ ಕಾಣಿಸಿಕೊಂಡು ದೊಡ್ಡರಂಗೇಗೌಡ ಅವರ ಗೀತೆಗಳ ಧ್ವನಿಸುರುಳಿ ಬಿಡುಗಡೆ ಮಾಡಿದ್ದು, ತುಂಬ ಮೆಚ್ಚಿಗೆಯ ಮಾತನಾಡಿದ್ದು ಇನ್ನೂ ನೆನಪಿನಲ್ಲಿದೆ. ಆ ಧ್ವನಿಸುರುಳಿ ಚಿತ್ರಗೀತೆಗಳದ್ದಲ್ಲ, ಭಾವಗೀತೆಗಳದ್ದು ಮತ್ತು ಆ ದಿನ ಮಾತನಾಡಿದ ಎಸ್ಪಿ ಅವರು ದೊಡ್ಡರಂಗೇಗೌಡ ಅವರ ಶಬ್ದಸಂಪತ್ತು ಅದು ಸಾಲುಗಳಲ್ಲಿ ಅವಿತು ಗಾಯನವಾದಾಗ ಹರಡಿಕೊಳ್ಳುವ ಧ್ವನಿ-ಅರ್ಥಗಳ ಬಗ್ಗೆ ಸೋದಾಹರಣಪೂರ್ವಕ ಮಾತನಾಡಿದ್ದರು.

ಅದೊಂದು ಅಪರೂಪದ ಸಮಾರಂಭವಾಗಿತ್ತು.

ತಾವು ಇದ್ದಲ್ಲಿ ಇಡೀ ಪರಿಸರವನ್ನೇ ಸಂಗೀತಮಯ ಮಾಡಿಬಿಡುವ ಕಲೆಗಾರ ದೊಡ್ಡರಂಗೇಗೌಡ ಅವರೊಡನೆ ಪ್ರಯಾಣಿಸಿದ ಹಲವು ಸಂದರ್ಭದಲ್ಲಿ ಅವರ ನಿಸರ್ಗ ಪ್ರೀತಿ, ಚೆಲುವಿಗೆ ಮಣಿವ ಮನಸ್ಸು-ಭಾವನೆಗಳೆಲ್ಲ ಹಾಡಾಗಿ ಹರಿವ ಬಗೆ ಕಂಡಿದ್ದೇನೆ; ಸಂತೋಷಪಟ್ಟಿದ್ದೇನೆ.

ನನ್ನ ಕವಿತೆ ಕೇವಲ ಕನ್ನಡದ ಕವಿತೆಯಲ್ಲ
ಜಗದ ಎಲ್ಲ ಒಳಿತ ಸೆಳೆವ
ಸತ್ಯ ಶ್ರದ್ಧೆ ಸಾರಿ ಹರಿವ
ನಿಯತ್ತಿನ ಮಂತ್ರ ಉಲಿವ ಮಂಗಲಕಾರಿಣಿ
.......
ತರುಣ ಕವಿ ಹೆಣ್ಣಾಗಿ ಹಡೆದ
ಸತ್ತ ಮನಕೆ ಜೀವಕೊಡುವ ಸ್ನೇಹ ಸಂಜೀವಿನಿ

ಎಂದು ತನ್ನ ಬನ್ನ ಬಗೆದು ಹೇಳಿಕೊಂಡ ಕವಿಗೆ ಅದೇ ನಲ್ವಾಣಿ, ಅದೇ ಸ್ನೇಹ ಸಂಜೀವಿನಿಯನ್ನು ತಂಗಾಳಿಯಂತೆ ಹರಿಸಿ ಉದ್ವಿಗ್ನಗೊಂಡ ಮನಸ್ಸುಗಳನ್ನು ತಣಿಸುವ ಶಕ್ತಿ ತುಂಬಿ ಬರಲಿ. ಅವರು ನಂಬಿದ ಭಾನುತೇಜ, ಭೂಮಿತಾಯಿ ಅವರನ್ನು ರಕ್ಷಿಸಲಿ. ಶುಭವಿರಲಿ.





# ಕವಿತೆ ಕಟ್ಟುವ ಕಾಯಕ

• ಡಾ. ಕೆ.ವಿ. ನಾರಾಯಣ

ಕವಿತೆಯ ಹುಚ್ಚು ಎರಡು ಬಗೆಯದು. ಕೆಲವರು ತಾವು ಬರೆಯಬಲ್ಲ ಕವಿತೆಗಾಗಿ ಇತರರ ಕವಿತೆಗಳನ್ನು ಓದುತ್ತಿರುತ್ತಾರೆ. ಮತ್ತೆ ಕೆಲವರು ತಾವು ಓದಬಯಸುವ ಕವಿತೆಗಳಿಗಾಗಿ ತಾವೇ ಕವಿತೆಗಳನ್ನು ಬರೆಯುತ್ತಿರುತ್ತಾರೆ. ಇಬ್ಬರೂ ತಮ್ಮ ಮಾದರಿ ಕವಿತೆಗಾಗಿ ಹುಡುಕುವವರೇ ಸರಿ. ಓದುತ್ತಾ ಹುಡುಕುವವರೊಂದು ಬಗೆ; ತಾವೇ ಬರೆಯುತ್ತ ಹುಡುಕುವವರೊಂದು ಬಗೆ. ಗೆಳೆಯ ದೊರಂಗೌ (ಹಾಗೆಂದೇ ನಮಗೆಲ್ಲ ಅವರ ಬಳಕೆ) ಎರಡನೆಯ ಬಗೆಯವರು. ಅವರ ಕವಿತೆ ಬರೆಯುವ ಉಮೇದು ಕಾಲೇಜು ದಿನಗಳಲ್ಲಿ ದಂತ ಕತೆಯಾಗಿತ್ತು. ಈಗಲೂ ಸುಮಾರು ಎರಡು ದಶಕ ಕಳೆದರೂ ಅವರ ಈ ತವಕ ಹಾಗೇ ಇದೆ. ಅಥವಾ ಸೆಳೆಯುತ್ತಿರುವ ಮಿಸುನಿ ಜಿಂಕೆಯ ಬೆನ್ನು ಹತ್ತಿ ನಿಡುದಾರಿ ಸವೆಸಿದ್ದಾರೆ. ಯಾವ ಕವಿಗೂ ಇದು ತಪ್ಪಿದ್ದಲ್ಲ ಅಲ್ಲವೇ?

'ಜಗಲಿ ಹತ್ತಿ ಇಳಿದು' (1969) ಪ್ರಕಟವಾದಾಗ ಅವರು ನವ್ಯ ಕವಿಗಳ ರಚನೆಯ ಮೋಡಿಯನ್ನು ತಮ್ಮ ಮಾತುಗಳಲ್ಲಿ ಕಂಡುಕೊಳ್ಳಲು ಯತ್ನಿಸುತ್ತಿದ್ದರು. ಆ ಸಂಕಲನದ ಕವಿತೆಗಳನ್ನು ನೋಡಿದರೆ ಅಲ್ಲಿ ಮತ್ತೆ ಮತ್ತೆ ಬರುವ 'ನೀನು', ಈಗಂತೂ ಮೋಡಿ ಎನ್ನಿಸುವುದು. ಈಗ 'ಗೀತಗಾರುಡಿ' (1983) ದೊರಂಗೌ, ಸಂಕಲನದ ಹೆಸರೇ ಸೂಚಿಸುವಂತೆ ಗೀತಗಳ ಗಾರುಡಿಗೆ ಒಳಗಾಗಿದ್ದಾರೆ. ಈ ನಡುವೆ ಬಂದ ಕವನ ಸಂಕಲನಗಳಲ್ಲಿ ಅವರು ಸಾಗಿಬಂದ ದಾರಿಯ ವಿವಿಧ ಮಜಲುಗಳಿವೆ.

ಅನುಭವದ ಆಕಾರವನ್ನು ಒಳಗಿನಿಂದ, ಅದರ ತಿರುಳನ್ನು ಅಧಿಕೃತ ವ್ಯಕ್ತಿತ್ವದ ಮೂಲಕ ಗ್ರಹಿಸುವ ಬಗೆಯ ಕವಿತೆಯನ್ನು ದೊರಂಗೌ ಮೊದಲನೆಯ ಹಂತದಲ್ಲಿ ಬರೆದಿದ್ದಾರೆ. ಹಾಗೆ ನೋಡಿದರೆ ಅದು ಅವರ ಆಯ್ಕೆಯಾಗಿತ್ತಾದರೂ, ಅದು ಅವರ ಅಪೇಕ್ಷೆಯಾಗಿತ್ತೆಂದು ಈಗ ಅನಿಸುವುದಿಲ್ಲ. ಆ ಕವಿತೆಗಳು ಕಟ್ಟೋಣದಲ್ಲಿ; ಧಾಟಿಯಲ್ಲಿ ಸಹಜತೆ ಹಾಗೂ ಅನುಕರಣೆಗಳು ಸೆಣಸಾಡುತ್ತಿವೆ. ಈ ಸ್ಥಿತಿಯ ಬಹುಪಾಲು ಕವಿತೆಗಳನ್ನು 'ಕಣ್ಣು ನಾಲಗೆ ಕಡಲು' (1972) ಕವನ ಸಂಕಲನದಲ್ಲಿ ನೋಡಬಹುದು.

ಈ ಅವಧಿಯಲ್ಲಿ ಬೇಸರವೇ ಸ್ಥಾಯಿಯಾದ ಕವನಗಳು ಬಹುಪಾಲು ಕವಿಗಳಿಂದ ರಚನೆಯಾಗತೊಡಗಿ, ನಮ್ಮ ಕಾವ್ಯದ ಮಾದರಿಗಳಿಗೆ ತಮ್ಮದೇ ಕಾರಣಗಳಿಂದ ಬಂಡೆದ್ದು 'ಅಕಾವ್ಯ'ವೆಂಬ ಪತ್ರಿಕೆ ತರತೊಡಗಿದವರಲ್ಲಿ ದೊರಂಗೌ ಕೂಡ ಒಬ್ಬರು. ಎಪ್ಪತ್ತರ ದಶಕದ ಮೊದಲ ಅರ್ಧ ಕನ್ನಡ ಕವಿತೆಯ ದೃಷ್ಟಿಯಿಂದ ಕುಲುಮೆಯ ಕುದಿತ ಮೊದಲಾದ ಕಾಲ. (ಹಾಗೆ ನೋಡಿದರೆ ಇನ್ನೂ ಕುದಿತ ತೀರಿಲ್ಲ) ಆಗ ಕವಿತೆಯ ವಸ್ತುವನ್ನು, ದೃಷ್ಟಿಯನ್ನು ವ್ಯಕ್ತಿಯಿಂದ ಸಮಾಜದ ಕಡೆಗೆ ಒಯ್ಯಬೇಕೆಂದುಕೊಂಡು ಕವಿತೆಗೆ ಬಾಯಿ ಕಣ್ಣುಗಳನ್ನು ಕೊಡತೊಡಗಿದರು. ದೊರಂಗೌ ಆಗಲೂ 'ನಾಡಾಡಿ' (1974) ಸಂಕಲನವನ್ನು ಪ್ರಕಟಿಸಿದರು.

ಇಲ್ಲಿಂದ ಮುಂದೆ ದೊರಂಗೌ ಇಕ್ಕಟ್ಟಿನಲ್ಲಿ ಸಿಲುಕಿದಂತೆ ತೋರುತ್ತದೆ. ಮುಖ್ಯವಾಗಿ ಸಮಾಜ ಹಾಗೂ ಪ್ರಕೃತಿಯನ್ನು ವಸ್ತುಗಳನ್ನಾಗಿ ಮಾಡಿಕೊಂಡ ಒಳಲಯದ ಕವಿತೆಗಳನ್ನು ಬರೆಯುವುದೋ, ಅಥವಾ ಕಾಲದೇಶ ಬದ್ಧವಲ್ಲದ ಭಾವಗಳಿಗೆ ಹೊರವಲಯದ ಕವಿತೆಗಳನ್ನು ಬರೆದು ಆಕಾರ ನೀಡುವುದೋ ಎಂಬ ತಾಕಲಾಟದಲ್ಲಿ ಅವರು ಸಿಲುಕಿದ್ದಾರೆ. ಅಂಥ ಎರಡು ಬಗೆಯ ಕವಿತೆಗಳನ್ನೂ ರಚಿಸಿದ್ದಾರೆ. ಗೀತೆಗಳನ್ನು ರಚಿಸುವಾಗ ಈವರೆಗೆ ಕಾಣದಿದ್ದ ಆಚ್ಛಾದಿತ ಭಾಷೆಯ ಮಾತುಗಳು ಕಾಣತೊಡಗಿವೆ. ಗೀತಗಳಲ್ಲದ ಕವಿತೆಗಳಲ್ಲಿನ ವಸ್ತು ಸಮಾಜ ಹಾಗೂ ಪ್ರಕೃತಿ ಎಂದೆ. ಇಲ್ಲಿಯೂ ತನ್ನನ್ನು ಹೊರಗಿಸಿಕೊಂಡು ಕವಿ ಚಿಂತಿಸುವ ಬಗೆಗೇ ಮೇಲುಗೈ.

ಇಷ್ಟು ವಿವರಗಳಿಂದ, ದೊರಂಗೌ ಕಳೆದ ಎರಡು ದಶಕಗಳ ಕನ್ನಡ ಕಾವ್ಯದ ಮುಖ್ಯ ಮಜಲುಗಳಲ್ಲೆಲ್ಲ ಹಾಯ್ದು ಬಂದಿದ್ದಾರೆಂಬ ಸಂಗತಿ ಮನದಟ್ಟಾಗುತ್ತದೆ. ಆದರೆ ಅವರ ನೆಲೆ ಯಾವುದು? ಹಾಯ್ದು ಬಂದೆಡೆಗಳಲ್ಲಿನ ಅವರ ರಚನೆಗಳು ಅವರ ಬಯಕೆಯ ಕವಿತೆಯ ಅಪೂರ್ಣ ಮಾದರಿಗಳೆಂದೇ ತೋರುತ್ತದೆ. ಅಂದರೆ ಅವರು ಇನ್ನೂ ತಮ್ಮ ಕವಿತೆಗಾಗಿ ಹುಡುಕಾಟವನ್ನು ಮುಂದುವರೆಸುವವರೇ ಸರಿ.

ಕವಿಯೊಬ್ಬ ಬರೆದ ಕವಿತೆಗಳೆಲ್ಲವೂ ಕಾಲದೊಡನೆ ಹೆಜ್ಜೆ ಹಾಕಲಾರವು. ಸ್ವರ್ಗಾರೋಹಣ ಪರ್ವದಲ್ಲಿ ಆದಂತೆ ಅಷ್ಟು ದೂರ ಕೆಲವು, ಮತ್ತಷ್ಟು ದೂರ ಕೆಲವು, ಮಗದಷ್ಟು ದೂರ ಇನ್ನುಳಿದ ಕೆಲವು ಬಂದು ಕೊನೆಗೆ ಉಳಿಯುವುದು ಒಂದೋ ಎರಡೋ. ದೊರಂಗೌ ಪ್ರಕಟಿಸಿದ ಕವಿತೆಗಳಲ್ಲಿ ಹೀಗೆ ಈಗಲೂ ಅವರ ತವಕವನ್ನು, ಹೆಜ್ಜೆಗಳನ್ನು, ಬದಲುಗಳನ್ನು ಆಸಕ್ತಿಗಳನ್ನು, ಪ್ರಯೋಗಗಳನ್ನು ಕಾವ್ಯದೊಡನೆ ಅವರು ನಡೆಸಿದ ವಾಗ್ವಾದದ ಸೋಲು ಗೆಲವುಗಳನ್ನು ಪ್ರತಿನಿಧಿಸುವ ಕೆಲವನ್ನು ಆಯ್ದಿದ್ದೇನೆ. ಇವೆಲ್ಲವೂ ಅವರನ್ನು ಬಿಂಬಿಸಬಲ್ಲವು. ಆದರೆ ಇವೆಲ್ಲವೂ ಉತ್ತಮ ಕವಿತೆಗಳೇ ಎಂಬ ಪ್ರಶ್ನೆ ಸಹಜ.

ದೊರಂಗೌ ಕವಿತೆಗಳನ್ನು ಕಟ್ಟುವ ಕಾಯಕದಲ್ಲಿ ಭಾಷೆಯೊಡನೆ ಹಲವು ಸಂಧಾನಗಳಿಗೆ ತೊಡಗಿದ್ದಾರೆ. ಇದು ಅವರ ಕವಿತೆಗಳಲ್ಲಿ ವಿವಿಧ ಪ್ರಮಾಣದಲ್ಲಿ ಉದ್ದಕ್ಕೂ ಕಾಣುವ

ಸಂಗತಿಯಾಗಿದೆ. ಎಲ್ಲಿ ಈ ಸಂಧಾನದ ಪ್ರಮಾಣ, ಒಪ್ಪಂದ ಸಮ್ಮುಖತೆ ಕಡಿಮೆಯಾಗಿದೆಯೋ ಅಲ್ಲಿ ಅವರ ಒಳ್ಳೆಯ ಕವಿತೆಗಳು ಕಾಣಸಿಗುತ್ತವೆ. ಅದಕ್ಕಾಗಿ ಅವರು ರೂಪಕಗಳನ್ನು ಸುಭದ್ರವಾಗಿ ನೆಲೆಯೂರಿಸುತ್ತಾರೆ. ಅಂಥ ಸಾಧನೆಯ ಗಳಿಗೆಗಳು ಅವರಲ್ಲಿ ಕಡಿಮೆಯಾದರೂ, ಇವೆಯೆಂಬುದು ಗಮನಾರ್ಹ. ಎಲ್ಲಿ ಸಂಧಾನಗಳ ಪ್ರಮಾಣ ಅಧಿಕವಾಗಿದೆಯೋ ಅಲ್ಲಿ ಅವರು ಕವಿತೆಯ ಹೊರ ಆಕಾರವನ್ನು ನಿರ್ಮಿಸುವಲ್ಲಿ ಮಾತ್ರ ತೃಪ್ತರಾಗುತ್ತಾರೆ. ಅಲ್ಲಿ ನಾವು ಅವರ ಸಾಮಾನ್ಯ ಕವಿತೆಗಳನ್ನು ಕಾಣುತ್ತೇವೆ. ಎರಡೂ ಬಗೆಯ ಕವಿತೆಗಳು ಈ ಆಯ್ಕೆಯಲ್ಲಿ ಇವೆ.

ಹೀಗೆ ಅವರ ಕವಿತೆಗಳಲ್ಲಿ ಆಯ್ಕೆ ಮಾಡಲು, ಅದಕ್ಕೊಂದು ಕಾರಣವನ್ನು ಹೇಳಲು ನನಗೆ ಅವಕಾಶ ಮಾಡಿಕೊಟ್ಟದ್ದಕ್ಕೆ ದೊರಂಗೌ ಅವರಿಗೆ, ಅವರ ವಿಶ್ವಾಸಕ್ಕೆ ನಾನು ಕೃತಜ್ಞ.





# ಆತ್ಮೀಯ ದೊಡ್ಡರಂಗೇಗೌಡ

● ಎ.ಎಸ್. ಮೂರ್ತಿ

ಅಭಿನಂದನಾ ಗ್ರಂಥಕ್ಕೆ ದೊಡ್ಡರಂಗೇಗೌಡರನ್ನು ಕುರಿತ ಲೇಖನವೊಂದನ್ನು ಪತ್ರಕರ್ತಮಿತ್ರ ಸತ್ಯಮೂರ್ತಿ ಆನಂದೂರುರವರು ಆಶಿಸಿದಾಗ ಹಳೆಯ ನೆನಪುಗಳು ಮರುಕಳಿಸಿ ದೊಡ್ಡಣ್ಣ ಹಾಲ್‌ನ ರಂಗುರಂಗಿನ ಚಿತ್ರಗಳು ಕಣ್ಣೆದುರು 'ತಕತ್ತೈ' ಎಂದು ಕುಣಿದದ್ದು ನಿಜ. ಅದಕ್ಕೆ ಮುಖ್ಯಕಾರಣ ದೊಡ್ಡಣ್ಣ ಹಾಲ್ ಎನಿಸಿಕೊಂಡ ಎಸ್.ಎಲ್.ಎನ್. ಕಾಲೇಜಿನಲ್ಲೇ ಅವರು ಅಧ್ಯಾಪಕರಾಗಿದ್ದದ್ದು. ನಾನು ಓದಿದ್ದು ಆರ್ಯ ವಿದ್ಯಾಶಾಲೆಯಲ್ಲಿಯೇ ಹೊರತು ಎಸ್.ಎಲ್.ಎನ್. ಶಾಲೆಯಲ್ಲಲ್ಲ. ಆದರೂ ಆ ಎಸ್.ಎಲ್.ಎನ್. ಹೈಸ್ಕೂಲ್ ಇಂದಿಗೂ ಬಹು ಅಚ್ಚುಮೆಚ್ಚು. ನಾನು ನಾಟಕರಂಗದಲ್ಲಿ ಹೆಸರಾಗಲು ಮೊದಲ ಮೆಟ್ಟಿಲಾದದ್ದು ಆ ಶಾಲೆಯೇ.

ನಾನು ನಾಟಕ ಬರೆಯಲಾರಂಭಿಸಿದ ದಿನಗಳಲ್ಲಿ ನಮ್ಮ ಸಂಬಂಧಿ ಟಿ. ರಾಮಕೃಷ್ಣ ಅಲ್ಲಿ ಉಪಾಧ್ಯಾಯರಾಗಿದ್ದರು. ಆ ಎಲ್ಲ ನಾಟಕಗಳು ವಾಚನಕ್ಕೆ ಅವರು ಅವಕಾಶಮಾಡಿದ್ದರು. ಅಲ್ಲಿ ಸಿಕ್ಕ ಒಳ್ಳೆ ಪ್ರತಿಕ್ರಿಯೆ ನನದೊಂದು ರೀತಿಯ ಸ್ಫೂರ್ತಿಯ ಚಿಲುಮೆಯಾಗಿತ್ತು. ಆ ಕುರಿತು ನಮ್ಮಪ್ಪ ಅ.ನ. ಸುಬ್ಬರಾಯರೊಂದಿಗೆ ಮಾತು ಕತೆಯಾಡುತ್ತಿದ್ದಾಗ. ದೊಡ್ಡಣ್ಣ ಹಾಲ್‌ನಲ್ಲಿ ನಡೆಯುತ್ತಿದ್ದ ಅದ್ಭುತ ರಮ್ಯ ಕಥೆಗಳನ್ನು ಕೇಳಿ ನಾನು ಬೆರಗಾಗಿದ್ದೆ. ಅಲ್ಲಿನ ಅಖಾಡದಲ್ಲಿ ನಡೆಯುತ್ತಿದ್ದ ಭಾರಿ ಜಟ್ಟಿಗಳ ಕುಸ್ತಿ ಪೈಪೋಟಿ. ಹಣ ಮಾಡಲೆಂದೇ ಮಿಸ್ಟರ್ ರಾವ್ ಎಂಬುವರು '' ಮಿಸ್ ವೈಟ್ ಅಂಡ್ ಮಿಸ್ ಬ್ಲಾಕ್ ಎಂಬುವರಿಂದ ಜಂಗೀ ಕುಸ್ತಿ'' ಎಂದು ಜಗಜ್ಜಾಹೀರು ಮಾಡಿದ್ದ ಕಥೆ ನಾನಿನ್ನೂ ಮರೆತಿಲ್ಲ.

ಅಂದು ಹೌಸ್‌ಫುಲ್ ಆಗಿತ್ತಂತೆ. ಟೋಪಿ ಗಿರಾಕಿ ರಾವ್ ಸಕಲ ಸಿದ್ಧತೆ ಮಾಡಿ ಕಲೆಕ್ಷನ್ ಬಾಚಿಕೊಂಡು ಮುಂಚೆ ತಾವು ಮೈಸೂರು ಬ್ಯಾಂಕ್‌ವರೆಗೂ ಹೋಗಿ ಅಲ್ಲಿಂದ 'ಸ್ಟಾರ್ಟ್' ಎಂದು ಗ್ರೀನ್ ಸಿಗ್ನಲ್ ಕೊಟ್ಟಿದ್ದಾರೆ. ವರ್ತಕರು – ಶ್ರೀಮಂತರು – ಶೆಟ್ಟರು ಹೆಣ್ಣುಗಳ ಕುಸ್ತಿ ಕಾಣಲು

ಕಾತರದಿಂದಿದ್ದಾಗ - ಒಬ್ಬ ಕರ್ಪಿ ಮತ್ತು ಒಬ್ಬ ಬಿಳುಪಿ ತೊಡೆ ತಟ್ಟುತ್ತ ಮಟ್ಟೆಗಿಳಿದಾಗ ಕಲ್ಲು ತೂರಾಟವಾಗಿ ರಂಪು-ರಾಧ್ಧಾಂತವಾಗಿದೆ. ಕಲ್ಲು-ಮಣ್ಣು ತೂರಿದ್ದಾರೆ. ಆ ಕ್ಷಣ ಜೇಲ್ ಖಿತಂ. ಆ ರಾಪ್ ಹಣ ಹಾರಿಸಿಕೊಂಡು ಮಾಯವಾಗಿದ್ದ. ದೊಡ್ಡಣ್ಣ ಶೆಟ್ಟರ ಹೃದಯ ವೈಶಾಲ್ಯದಿಂದ ವಿದ್ಯಾದಾನಕ್ಕೆ ಮೀಸಲಾದ ಆ ಶಾಲೆ ಈವರೆಗೆ ಸಹಸ್ರಾರು ವಿದ್ಯಾರ್ಥಿಗಳ ಬದುಕನ್ನು ರೂಪಿಸಿದೆ. ವಿದ್ಯಾರ್ಜನೆಯ ಜತೆಜತೆಯಲ್ಲೇ ಸಂಗೀತ, ಸಾಹಿತ್ಯ, ನೃತ್ಯ, ನಾಟಕಗಳ ಕೇಂದ್ರವೂ ಆಗಿ ಎಲ್ಲ ಕಲೆಗಳ ಬಗ್ಗೆ ಸಮಾನ ಪ್ರೀತಿ ತೋರಿಸಿದೆ. ಅಂಥ ಕಾಲೇಜಿಗೆ ಗೆಳೆಯ ದೊಡ್ಡ ರಂಗೇಗೌಡರು ಅಧ್ಯಾಪಕರಾಗಿ ಬಂದದ್ದು ಕೇಳಿದಾಗ ಸಂತಸಪಟ್ಟವರಲ್ಲಿ ನಾನೂ ಒಬ್ಬ.

ಒಳ್ಳೆ ಮೇಷ್ಟರಾಗಿ ದೊಡ್ಡರಂಗೇಗೌಡರು ಅನೇಕ ವಿದ್ಯಾರ್ಥಿಗಳಲ್ಲಿ ಸಾಹಿತ್ಯರಂಗದಲ್ಲಿ ಹೆಸರಾಗಲು ಕಾರಣರಾದರು. ಅವರ ಕತೆ, ಕವನ, ಕನ್ನಡ ಪ್ರೇಮ ಕುರಿತ ಲೇಖನಗಳು ವಿದ್ಯಾರ್ಥಿಗಳಿಗೆ ಕನ್ನಡದ ಕಾಳಜಿ ಹೆಚ್ಚಲು ಕಾರಣವಾಯಿತು. ಬಹಳಷ್ಟು ಕವಿಮೇಳಗಳಲ್ಲಿ ಅವರ ಕವನವಾಚನ ಕೇಳುತ್ತಾ ಬಂದೆ ನಾನು. ರಾಜರತ್ನಂ, ಕೆ.ಎಸ್.ನ, ವಿ.ಕೃ. ಗೋಕಾಕ್, ರಾಮಾನುಜಂ, ಅಡಿಗ, ವೀಚೀ, ಸುಮತೀಂದ್ರ ನಾಡಿಗ್, ನಿಸಾರ್ ಅಹಮ್ಮದ್, ರಾಮಚಂದ್ರಶರ್ಮ, ಪಿ. ಲಂಕೇಶ್, ಮುಂತಾದವರೆಲ್ಲರ ಕವಿಮೇಳಗಳು, ಹಾಡು ಹಬ್ಬಗಳು ಬಸವನಗುಡಿ ಗಾಂಧೀ ಬಜಾರ್ ಕಲಾಮಂದಿರದ ಅಟ್ಟದ ಮೇಲೆ ನಡೆಯುತ್ತಾ ಬಂದು ಅದೊಂದು ರೀತಿ ಸಾಂಸ್ಕೃತಿಕ ಕೇಂದ್ರವೆನಿಸಿ - ಹಿರಿ - ಕಿರಿಯರ ಕಲಾವಿದ - ಲೇಖಕರ ಮೀಟಿಂಗ್ ಪ್ಲೇಸ್ ಆಗಿತ್ತು.

ನವೋದಯ, ನವ್ಯ, ಬಂಡಾಯ ದಲಿತ ಪಂಥದ ಹಿರಿ-ಕಿರಿಯರೆಲ್ಲ ಅಲ್ಲಿ ಬರುತ್ತಿದ್ದುದರಿಂದಾಗಿ, ಎಲ್ಲರೊಡನೆ ಆತ್ಮೀಯತೆ ಬೆಳೆಯಲು ಕಲಾಮಂದಿರ ಕಾರಣವಾಗಿತ್ತು. ಅಂಥ ಒಂದು ಸುಮಧುರ ವಾತಾವರಣದ ವ್ಯಾಪ್ತಿ ವಿಶಾಲವಾಗುತ್ತ ಹೋದಾಗಲೆ ಗೌಡರು ಆತ್ಮೀಯರಾಗಿ ಹತ್ತಿರವಾದದ್ದು. ಕವಿಗಳ ಬಗ್ಗೆ ಅವರ ಕಾವ್ಯದ ಬಗ್ಗೆ, ಅವರು ತಮ್ಮ ಕೃತಿಗಳನ್ನು ಓದುತ್ತಿದ್ದುದರ ಬಗ್ಗೆ ನನಗೆ ಒಲವು ಹೆಚ್ಚಲು ಕಾರಣರಾದವರು ವೈ.ಎನ್.ಕೆ. ಕವಿತಾ ಸಾಲುಗಳ ಅಂತಸತ್ವವನ್ನು, ಪರಿಣಾಮಕಾರಿಯಾಗಿ ಸಾಹಿತ್ಯದ ಸಾಲುಗಳನ್ನು ಓದುವ ಬಗೆಯನ್ನು ನಾನು ಅಧ್ಯಯನ ಮಾಡಿದ್ದೂ ಅಲ್ಲೆ.

ಕೆಲವರು ಸೊಗಸಾಗಿ ಬರೆಯುತ್ತಿದ್ದರು - ಆದರೆ ಕೆಟ್ಟದಾಗಿ ಓದುತ್ತಿದ್ದರು. ಇನ್ನು ಕೆಲವರು ಸುಮಾರಾಗಿ ಬರೆಯುತ್ತಿದ್ದರು. ಆದರೆ ಅದ್ಭುತವಾಗಿ ವಾಚಿಸುತ್ತಿದ್ದರು. ದೊಡ್ಡರಂಗೇಗೌಡರು ತಮ್ಮ ಕವನಗಳನ್ನು ಸೊಗಸಾಗಿ ಹಾಡುತ್ತಿದ್ದರು. ಇಂಥವರೆಲ್ಲರ ಸಂಪರ್ಕದ ಪರಿಣಾಮವಾಗಿಯೇ "ಚೆಂದುಳ್ಳಿ ಚೆಲುವೆ" ನಾಟಕದಲ್ಲಿ ಶೇಖರ್‌ನಂತ ಕವಿ ಪಾತ್ರ ಸೃಷ್ಟಿಸುವುದು ಸಾಧ್ಯವಾದದ್ದು ನನಗೆ. ಅನಂತರವೇ ನವರತ್ನರಾಮ ಸಹಾ ಕಂಬೂತ ನಾಟಕ ಬರೆದದ್ದು.

ಕವಿ ಮಿತ್ರರೊಂದಿಗಿನ ಹರಟೆ ಕಟ್ಟೆಯಲ್ಲಿ ಪರಸ್ಪರ ಕಾಲೆಳೆಯುವ - ಕಾರ್ಯಕ್ರಮವೂ ರಂಜನೀಯವೆನಿಸುತ್ತಿತ್ತು. ಅಲ್ಲಿ ಕವಿಗಳ ಕುಶಲಿಗಳ, - ಪ್ರಸ್ತಾಪವಿರುತಿತ್ತು. ಕವಿತೆಗೊಂದು ಪ್ರತಿಕವಿತೆಯ ಕೆಸರೆರಚಾಟವೂ ಬಿಸಿಬಿಸಿ ವಾಗ್ವಾದಕ್ಕೆ ದಾರಿಮಾಡಿದ ದಿನಗಳವು. ದೊಡ್ಡರಂಗೇಗೌಡರಿಗೆ ಎಲ್ಲರೊಡನೊಂದಾಗುವ ಗುಣವಿತ್ತು. ಹಾಡು ಕವಿತೆಗಳ ಬಗೆಗೆ ಅವರಿಗೆ ಹೆಚ್ಚು ಒಲವಿದ್ದುದರಿಂದ ಅವರ ಕವಿತೆಗಳಲ್ಲಿ ಗೇಯಗುಣ ಹೆಚ್ಚು ಸಂಪದ್ಭರಿತವಾಗಿರುತ್ತಿತ್ತು. ನಿಸಾರರ 'ನಿತ್ಯೋತ್ಸವ' ಕನ್ನಡದ ಮೊದಲ ಕ್ಯಾಸೆಟ್ ಆಗಿ ಹೊರಬರುವ ಮುನ್ನ ಆ ಕುರಿತ ಮಾತುಕತೆ ಮೊದಲು ನಡೆದದ್ದು ಕಲಾಮಂದಿರದಲ್ಲೇ. ಆಗ ಮೈಸೂರು ಅನಂತಸ್ವಾಮಿಯವರೂ ತುಂಬ ಪ್ರೀತಿಯ ಒಡನಾಡಿಯಾಗಿ ಇಂಥ ಕಾರ್ಯಗಳಲ್ಲಿಗೆ ಪ್ರೀತಿಯಿಂದ ಮುಂದಾಗುತ್ತಿದ್ದರು. ಇಂಥ ವಾತಾವರಣ ದೊಡ್ಡರಂಗೇಗೌಡರಿಗೂ ಪ್ರಿಯವಾಗಿತ್ತು. ಆ ನಿಟ್ಟಿನಲ್ಲಿ ಗೌಡರೂ ಮುಂದಾಗಿ ಅನೇಕ ಕ್ಯಾಸೆಟ್‌ಗಳನ್ನೇ ಮಾಡಿ-ಜನಮನ ತಲುಪಲು ಕಾರಣರಾದರು.

ಜನ ಸಾಮಾನ್ಯರನ್ನೆಲ್ಲ ತಲುಪಬೇಕೆಂದು ಆಶಿಸುವ ಲೇಖಕ-ಉದ್ದೇಶಮುಖ್ಯ ಎಂಬ ಕಾರಣಕ್ಕೆ ಹಠಮಾರಿಯಾಗದೆ ನಾನಾ ಬಗೆಯ ರಾಜಿಗೂ ಸಿದ್ಧನಿರುತ್ತಾನೆ. ದೊಡ್ಡರಂಗೇಗೌಡರು ಈ ಗುಂಪಿಗೆ ಸೇರಿದರಾದುದರಿಂದ ಬೇಕೆಂದಾಗ ಸನ್ನಿವೇಶಕ್ಕೆ ಅನುಗುಣವಾಗಿ ಚಿತ್ರಕ್ಕೆಂದೇ ಗೀತೆರಚಿಸಿದರು, ಟ್ಯೂನ್ ಸಿದ್ಧವಿದೆ ಇದಕ್ಕೆ ಸಾಲುಗಳನ್ನು ಕೂಡಿಸಬೇಕೆಂದಾಗ ಅದಕ್ಕೂ ರೆಡಿ ಎಂದರು.

ವ್ಯಾಪಾರಿ-ಕಲಾತ್ಮಕ ಚಿತ್ರಗಳೆಂಬ ಬೇಧವಿಲ್ಲದೆ, ಹೊಸ ನಿರ್ಮಾಪಕ-ನಿರ್ದೇಶಕರು ಯಾರೇ ಆಹ್ವಾನಿಸಲಿ ಅವರೊಂದಿಗೆ ಕೂತು-ಚರ್ಚಿಸಿ-ಜನಪ್ರಿಯವಾಗಬಹುದಾದ ಚಿತ್ರಗೀತೆಗಳನ್ನು ರಚಿಸಿ ಹೆಸರಾದರು. ಅವರ ಗೆಂಡೆತಿಮ್ಮ ಗೀತೆ ಯಾರು ತಾನೆ ಮರೆಯಲು ಸಾಧ್ಯ. ಹೀಗಾಗಿ ದೊಡ್ಡರಂಗೇಗೌಡರು ಚಿತ್ರರಂಗದ ಮಂದಿಗೂ ತುಂಬ ಹತ್ತಿರವಾದರು.

ಅವರ ಗೀತೆಗಳು ಆಕಾಶವಾಣಿ-ದೂರದರ್ಶನದಲ್ಲಿ ಮೇಲಿಂದ ಮೇಲೆ ಪ್ರಸಾರವಾಗುತ್ತಿದ್ದುದರಿಂದಾಗಿ ಈ ವಾಮನ ಮೂರ್ತಿಯ ಹೆಸರು ಆಕಾಶದುದ್ದ ಬೆಳೆಯಿತು. 'ಆಡು ಮುಟ್ಟದ ಸೊಪ್ಪಿಲ್ಲ' ಎಂಬಂತೆ ಇವರು ನಾನಾ ಪ್ರಕಾರಗಳಲ್ಲಿ ಕೈ ಆಡಿಸಿ ಇಂಥ ಮಾಧ್ಯಮಕ್ಕೇ ನಾನು ಮೀಸಲು ಎಂಬ ಪಣತೊಡದೆ-ಎಲ್ಲ ರಂಗಗಳಲ್ಲಿ ತೊಡಗಿಸಿಕೊಂಡರು.

ಚಿತ್ರರಂಗದ ದಿಗ್ಗಜರ ಬಗ್ಗೆ ಕೃತಿರಚಿಸಿದರೂ ತಮ್ಮ ವಿಚಾರಲಹರಿಗಳನ್ನೆ ಪತ್ರಿಕೆಗಳು, ಅಂಕಣಗಳ ಮೂಲಕ ಹರಿಯ ಬಿಟ್ಟರು. ಜನಪದ ಕಲೆಯ ಬಗೆಗೆ ಅತೀವ ಆಸಕ್ತಿ ತೋರಿದರು. ಆ ಕಾರಣಕ್ಕೆ 'ಜನುಮದ ಜೋಡಿ'ಗೊಂದು ಕಂಸಾಳೆ ಪದದ ಅವಶ್ಯಕತೆ ಇದ್ದಾಗ ದೊಡ್ಡರಂಗೇಗೌಡರಿಗೆ ಕರೆ ಹೋಯಿತು. ಅದಕ್ಕೆ ಅವರು ಬರೆದ ಗೀತೆ ಜನಪ್ರಿಯವಾದಾಗ ಮಿಶ್ರಪ್ರತಿಕ್ರಿಯೆಗಳು ಬಂದು - ಅಂದಿನ ಪ್ರಕರಣ ಗೌಡರ ಗದ್ದಲಕ್ಕೂ ಕಾರಣವಾಯಿತು. ಜನರ ನಾಲಿಗೆಯ ಸ್ವತ್ತಾಗಿರುವ

ಜಾನಪದ ಗೀತೆ ಹಾಗೂ ಟ್ಯೂನ್‌ಗಳು ಚಿತ್ರರಂಗದಲ್ಲಿ ಬಳಕೆಯಾದಾಗ ಇಂಥ ಜಿಸಿಜಿಸಿ ಚರ್ಚೆ ಇಂದೂ ಮುಂದುವರಿದಿದೆ. ಇದೀಗ ಚಿತ್ರರಂಗದಲ್ಲಿ ಒಂದು ಸುವರ್ಣ ಅಧ್ಯಾಯನವನ್ನೇ ಆರಂಭಿಸಿದ 'ಜೋಗಿ'ಯಲ್ಲಿ, 'ಎಲ್ಲೋ ಜೋಗಪ್ಪ ನಿನ್ನ ಅರಮನಿ' ಇಂದು ಎಲ್ಲರ ನಾಲಿಗೆಯ ಮೇಲೆ ನಲಿದಾಡುತ್ತಿದೆ.

ಜಾನಪದ ಗಾಯಕರನೇಕರು ಆ ಗೀತೆ ಹಾಡುತ್ತಾ ಬಂದಿದ್ದಾರೆ, ಬಹಳಷ್ಟು ಕ್ಯಾಸೆಟ್‌ಗಳೂ ಆಗಿವೆ. ಜಾನಂದೂರು ಕೆಂಪಯ್ಯ ಆ ಹಾಡನ್ನು ನಿರಂತರ ಹಾಡುತ್ತಾ ಬಂದಿರುವುದನ್ನೇ ನಾನು ಕೇಳಿರುವವ. ಅಂಥ ಗೀತೆಗಳನ್ನೇ ಬಳಸುವಾಗ-ಅದಕ್ಕೆ ಒಗ್ಗರಣೆಯಾಗಿ ಇನ್ನೊಂದಷ್ಟು ಸಾಲು ಸೇರಿಸಿ ಹೆಸರು ಮಾಡುವ ಮಂದಿ ಸೌಜನ್ಯಕ್ಕಾದರೂ ಟೈಟಲ್‌ಕಾರ್ಡ್‌ನಲ್ಲಿ - ಬರೆದ ಅನಾಮಿಕರಿಗೆ, ಹಾಡುತ್ತಾ ಬಂದ ಗಾಯಕರಿಗೆ ನಮನ ಸಲ್ಲಿಸುವ ಸೌಜನ್ಯಬೆಳೆಸಿಕೊಂಡಲ್ಲಿ - ಆ ನಿಟ್ಟಿನಲ್ಲಿ ದುಡಿದ ಮಂದಿಗೂ ಒಗ್ಗು ತಂದೀತು. ಕರೀಂಖಾನ್, ಸು. ರಂಗಸ್ವಾಮಿ, ಮತಿಘಟ್ಟ ಕೃಷ್ಣಮೂರ್ತಿ, ಪಿ. ಕಾಳಿಂಗರಾವ್, ಎಲ್.ಜಿ. ಸುಮಿತ್ರಾ ಸೋದರಿಯರೂ ಮುಂತಾದವರ ಸೇವೆ ಮರೆಯುವುದು ಸಾಧ್ಯವೇ. ಇದೀಗ ಎಸ್. ನಾರಾಯಣ್ 'ಸೇವಂತಿ-ಸೇವಂತಿ' ಚಿತ್ರದಲ್ಲಿ 8 ಜಾನಪದ ಗೀತೆಗಳನ್ನು ಕೊಂಚವೂ ಸಾಹಿತ್ಯ ಬದಲಾಯಿಸದೆ ಹಾಗೆ ಬಳಸಲು ಹೊರಟಿದ್ದಾರೆ. ಅಂಥವೂ ಅಗತ್ಯ ಆಗಬೇಕು. ದೊಡ್ಡರಂಗೇಗೌಡರ ಬಗೆಗೆ ಬರೆಯಹೊರಟಾಗ ಇಂಥವೆಲ್ಲ ಅಂಶಗಳೂ ಪ್ರಸ್ತಾಪಿಸುವುದು ಅಗತ್ಯವೆನಿಸಿತು.

ದೊಡ್ಡರಂಗೇಗೌಡರಿಗೆ ಜಾನಪದದ ಬಗ್ಗೆ ಅಪಾರ ಒಲವು ಎಂಬ ಕಾರಣಕ್ಕೆ 'ಹನುಮಂತನಗರ ಬಿಂಬ'ದ ಮಕ್ಕಳ ಶಿಬಿರವೊಂದರಲ್ಲಿ ಜನಪದ ಕಲೆಯನ್ನೇ ಕೇಂದ್ರಬಿಂದುವಾಗಿಟ್ಟುಕೊಂಡು ರೂಪಿಸಿದಾಗ ಅದರ ಉದ್ಘಾಟನೆಗೆ ದೊಡ್ಡರಂಗೇಗೌಡರನ್ನೇ ಕರೆಸಿದ್ದೆವು. ದೊಡ್ಡ ಹುಲ್ಲೂರಿನಿಂದ ಬಂದಿದ್ದ ಜಾನಪದ ಗಾಯಕ-ಗಾಯಕಿಯರು-ತಮ್ಮ ದೇಶದ ವಿಶಿಷ್ಟ ಉಡುಪಿನಲ್ಲಿ ಹಾಡಿ ಕುಣಿದಾಗ, ತಮಟೆಯ ಢಮ-ಢಮಕ್ಕೆ ಹೆಜ್ಜೆ-ಗೆಜ್ಜೆಗಳಲ್ಲಿ ನರ್ತಿಸಿದಾಗ ಮಕ್ಕಳು ಅವರ ವಸ್ತ್ರ ವಿನ್ಯಾಸವನ್ನು, ಗೀಗೀ ಪದಕ್ಕೆ ಬಳಸಿದ ವಾದ್ಯಗಳನ್ನು ಗೆರೆಗಳಲ್ಲಿ, ವರ್ಣದಲ್ಲಿ ದಾಖಲಿಸಿದ್ದಲ್ಲದೆ - ನಾಟಕದ ಗುಂಪುಗಾಯನಕ್ಕೂ ಅದನ್ನೇ, ಅರ್ಥಪೂರ್ಣವಾಗಿ ಬಳಸಿ - ನಾಟಕಕ್ಕೆ ಜಾನಪದ ಸೊಗಡು ತಂದರು.

ಇದನ್ನು ಕಂಡ ದೊಡ್ಡರಂಗೇಗೌಡರು ಮಾತಾಡಿ "ನಮ್ಮ ಸಂಸ್ಕೃತಿಯ ಬೇರುಗಳಿಗೆ ಗೆದ್ದಲು ಹಿಡಿದ ದುರ್ಗತಿ ಬಂದಿರುವಾಗ 'ಬಿಂಬ' ಮಕ್ಕಳಲ್ಲಿ ಜಾನಪದದ ಬಗೆಗೆ ಒಲವು ಮೂಡುತ್ತಿರುವ ರೀತಿ ಪ್ರಶಂಸಿಸಿ - ಇಂಥ ಪ್ರದರ್ಶನಗಳು ಎಲ್ಲಾ ಶಾಲೆಗಳಲ್ಲಿ ಆಗುವಂತಾದರೆ ಮಕ್ಕಳಲ್ಲಿ ಸೃಜನಶೀಲತೆ ಬೆಳೆದೀತು" ಎಂಬ ಮಾತು ಹೇಳಿ ತಾವೂ ಒಂದು ಜಾನಪದ ಗೀತೆ ಹಾಡಿ ರಂಜಿಸಿದರು.

ತಾನೊಬ್ಬ ಕಾಲೇಜು ಅಧ್ಯಾಪಕನೆಂಬ ಹಮ್ಮು-ಬಿಮ್ಮು ತೋರದೆ, ಮಕ್ಕಳೊಡನೆ ಮಕ್ಕಳಾಗಿ - ತಾವು ಮಾಡಲು ಸಾಧ್ಯವಿಲ್ಲದ ಕಾರ್ಯ 'ಬಿಂಬ ನಿರಂತರ ನಡೆಸುತ್ತಾ ಬಂದುದಕ್ಕೆ ನುಡಿದ ಮೆಚ್ಚುಗೆ ನುಡಿ ನಾನೆಂದೂ ಮರೆಯಲಾರೆ. ಇದೀಗ ಬಹಳಷ್ಟು ಶಾಲಾ-ಕಾಲೇಜುಗಳಲ್ಲಿ ವಾರ್ಷಿಕೋತ್ಸವಗಳಲ್ಲಿ ಮನರಂಜನೆ ಕಾರ್ಯಕ್ರಮಗಳೆಂದರೆ ಹಿಂದೀ ಚಿತ್ರಗೀತೆಗಳಿಗೆ ಕುಣಿಯುವುದಾಗಿದೆ. ಹೀಗಾದರೆ ಮೈಸೂರುಮಲ್ಲಿಗೆಯ ಕಂಪು-ಕನ್ನಡದ ಘಮಘಮ ಮಕ್ಕಳನ್ನು ತಟ್ಟುವುದಾದರೂ ಎಂತು ಎನಿಸಿದಾಗ ಎಚ್.ಎಸ್. ವೆಂಕಟೇಶಮೂರ್ತಿಯವರ 'ಎಲೆಗಳು ನೂರಾರು' ಕವನ - ನಾಟಕಕ್ಕೆ ಅಳವಡಿಸಿದಾಗ ಇದು ದೊಡ್ಡರಂಗೇಗೌಡರ ಕಣ್ಣಿಗೆ ಬಿದ್ದಿದ್ದರೆ ಚೆನ್ನ ಎನಿಸಿ ಅವರನ್ನು ಹಾಗೂ ಶ್ರೇಷ್ಠನಟ ಪ್ರಶಸ್ತಿ ಪಡೆದ ದತ್ತಣ್ಣನವರನ್ನು ಆಹ್ವಾನಿಸಿದೆ.

ಮಕ್ಕಳು ಸೊಗಸಾಗಿ ಹಾಡಿದರು. ತಮ್ಮ ಅಭಿನಯದಿಂದ ನಾಟಕಕ್ಕೇ ಜೀವ ಕಳೆ ತುಂಬಿದರು. ಮಕ್ಕಳ ನಟನಾ ಪ್ರತಿಭೆ-ಎಗ್ಗಿಲ್ಲದ ಅಭಿನಯ ಬಹುವಾಗಿ ಪ್ರಶಂಸಿಸಿದ ಗೌಡರು "ಇಂಥ ಪ್ರಯೋಗಗಳಿಂದ ಮಕ್ಕಳ ಜ್ಞಾನ ವೃದ್ಧಿಯಾಗುತ್ತದೆ. ಹತ್ತು ಬಾರಿ ಕವನ ಓದಿ - ಅರ್ಥೈಸಿಕೊಳ್ಳಲು ಪಡಬೇಕಾದ ಕಷ್ಟ ತಪ್ಪುತ್ತದೆ. ಒಮ್ಮೆ ಇಂಥ ಪ್ರಯೋಗ ನೋಡಿದರೆ ಚಿತ್ರವತ್ತಾಗಿ ಮಕ್ಕಳ ಸ್ಮೃತಿಪಟಲದ ಮೇಲೆ ತನ್ನ ಛಾಪು ಒತ್ತುತ್ತದೆ. ನನ್ನದೂ ಹಲವು ಕೃತಿಗಳನ್ನು ಬಿಂಬಕ್ಕೆ ನೀಡುವೆ. ಅದನ್ನೇ ಅವರು ಅಭಿನಯಿಸುತ್ತಾರೆ ಎಂಬ ನಂಬಿಕೆ ನನಗಿದೆ" ಎಂದರು.

ನಂತರ ದತ್ತಣ್ಣ ಮಾತನಾಡಿ "ನಾನು ಈವರೆಗೆ ಇಲ್ಲೇ ಸುತ್ತಾಡುತ್ತಿದ್ದರೂ ಒಳಗೆ ಬಂದಿರಲಿಲ್ಲ. ಕನ್ನಡ ಕವಿಗಳ ಅವರ ಕೃತಿಗಳ ಪರಿಚಯ ಇಷ್ಟು ಮಾರ್ಮಿಕವಾಗಿ ಮಾಡುವುದು ಸಾಧ್ಯ ಎಂಬುದಕ್ಕೆ 'ಎಲೆಗಳು ನೂರಾರು' ಸಾಕ್ಷಿ. ಇಂಥ ಪ್ರಯೋಗಕ್ಕೆ ದೊಡ್ಡರಂಗೇಗೌಡರಂಥ ಕವಿಯನ್ನು ಆಹ್ವಾನಿಸಿದ್ದು ತುಂಬ ಸೂಕ್ತ" ಎಂದರು.

ದೊಡ್ಡರಂಗೇಗೌಡರೊಂದಿಗೆ ಕನ್ನಡ ರಾಜ್ಯೋತ್ಸವಗಳಲ್ಲಿ, ಶಾಲಾ ವಾರ್ಷಿಕೋತ್ಸವಗಳಲ್ಲಿ, ಚಿತ್ರಗೀತೆಗಳ ಕ್ಯಾಸೆಟ್ ಬಿಡುಗಡೆ ಸಂದರ್ಭಗಳಲ್ಲಿ ನಾನೂ ಭಾಗವಹಿಸುವ ಸಂದರ್ಭಗಳು ಅನೇಕವು ದಕ್ಕಿದೆ. ಕನ್ನಡದ ಬಗೆಗಿನ ಅವರ ಕಾಳಜಿಯು ವಿದ್ಯಾರ್ಥಿಗಳಲ್ಲಿ ಹುಮ್ಮಸ್ಸು ತುಂಬುವ ಅವರ ಮಾತುಗಳಲ್ಲಿ , ಕನ್ನಡ ಸಾಹಿತ್ಯ ಪರಂಪರೆಯನ್ನು, ಬಣ್ಣಿಸುವ ರೀತಿಯಲ್ಲಿ ಹೊಸತನ ಕಂಡಿದ್ದೇನೆ. ಓದುವ ಬಗೆಗಿನ ಪ್ರೀತಿ ಹೆಚ್ಚಿಸಲು-ಅವರು ನೀಡುತ್ತಿದ್ದ ಸಲಹೆಗಳು, ಮನಮುಟ್ಟುವ ಕತೆಗಳು ಮೆಲುಕುಹಾಕುವಂತಹವು. ಸಂದರ್ಭಕ್ಕೆ ಅನುಗುಣವಾದ ಹಾಡುಗಳನ್ನೇ ಆಯ್ದು ಹಾಡುವುದರಲ್ಲಿ, ಸಮಯಸ್ಫೂರ್ತಿಯಿಂದ ಪಿ.ಬಿ. ಶ್ರೀನಿವಾಸ್ ಅವರಂತೆ ಗೀತೆರಚಿಸಿ ಹಾಡುವುದರಲ್ಲೂ ಅವರು ನಿಸ್ಸೀಮರೆ. ವಾರ್ಷಿಕೋತ್ಸವಕ್ಕೆ ಕರೆದಾಗ, ಹುಟ್ಟುಹಬ್ಬವೆಂದಾಗ ಪ್ರೀತಿಯಿಂದ ಬಂದಿದ್ದಾರೆ. ತಮ್ಮ ಒಲವನ್ನೇ ಪದ್ಯಗಳ ಮೂಲಕ ಹಂಚಿದ್ದಾರೆ.

ದೊಡ್ಡರಂಗೇಗೌಡರು ಕಾಲೇಜು ಅಧ್ಯಾಪಕರಾದುದರಿಂದ ಬಹಳಷ್ಟು ವಿಚಾರಸಂಕಿರಣಗಳಿಗೆ

ಕರೆಬರುತ್ತಲೇ ಇರುತ್ತದೆ. ಅಂಥ ವೇಳೆ ಅವರು ಉಡಾಫೆಯಿಂದ ಮಾತಾಡದೆ, ಶಾಶ್ವತ ದಾಖಲೆಯಾಗಿ ಉಳಿಯಬಹುದಾದ ರೀತಿಯಲ್ಲಿ ಒಂದು ಪ್ರಬಂಧವನ್ನೇ ಅಣಿಮಾಡಿ ತರುವ ಅಭ್ಯಾಸ ಬೆಳೆಸಿಕೊಂಡವರು. ಈ ಸಾರಸ್ವತ ಲೋಕದಲ್ಲಿ ಬಹಳಷ್ಟು ಮಂದಿ ತಾವು ಮಾತ್ರ ಬೆಳೆದು, ತಮ್ಮ ಬುಡ ಭದ್ರಮಾಡಿಕೊಂಡು, ಸ್ಥಾನಮಾನ ಗಳಿಸಿಕೊಳ್ಳಲು ಭಾರಿ ಕುರ್ಚಿಗಳ ಕನಸು ಕಾಣುತ್ತ, ತಮಗಿಂತ ಪ್ರತಿಭಾನ್ವಿತರೆಂದು ಕಂಡ ಯುವ ಪೀಳಿಗೆಯವರನ್ನೇ ದೂರತಳ್ಳುವುದನ್ನೂ ನಾನು ಕಂಡಿರುವೆ. ಮಕ್ಕಳಿಂದ ದೊಡ್ಡವರವರೆಗೆ ಎಲ್ಲರನ್ನೂ ಸಮಾನ ಪ್ರೀತಿಯಿಂದ ಕಾಣುತ್ತಾರೆ ಎಂಬ ಕಾರಣಕ್ಕೆ ದೊಡ್ಡರಂಗೇಗೌಡರು ನನಗೆ ಪ್ರಿಯ. ಅದರಿಂದಲೇ ಗೌಡರನ್ನ ನಾನು 'ಆಲ್‌ರೌಂಡರ್' ಎಂದದ್ದು.

❑



# ಜನತೆಯ ಕವಿ

● ಡಾ॥ ಹೆಚ್.ಎಸ್. ವೆಂಕಟೇಶ ಮೂರ್ತಿ

ಮುಖಾಮುಖಿಯಾಗಿದ್ದು 1969ರಲ್ಲಿ ಎಂದು ನೆನಪು. ಆಗಷ್ಟೆ ನನ್ನ ಪರಿವೃತ್ತ ಪ್ರಕಟವಾಗಿತ್ತು. ಈಶ್ವರಚಂದ್ರ "ಪರಿವೃತ್ತ"ದ ಪ್ರತಿಯೊಂದನ್ನು ದೊಡ್ಡರಂಗೇಗೌಡರಿಗೆ ಕೊಟ್ಟಿದ್ದೇನೆ, ಅದರ ಬಗ್ಗೆ ಅವರು ಕನ್ನಡ ನುಡಿಯಲ್ಲಿ ಬರೆಯುತ್ತಾರೆ, ಎಂದು ನನಗೆ ಪತ್ರಬರೆದಿದ್ದು ಕೂಡ ನೆನೆಪಿದೆ. ನಾನಾಗ ಮಲ್ಲಾಡಿಹಳ್ಳಿಯ ಹೈಸ್ಕೂಲಿನಲ್ಲಿ ಕೆಲಸ ಮಾಡುತ್ತಿದ್ದೆ. 1970ರಲ್ಲಿ ನನ್ನ "ಬಾಗಿಲು ಬಡಿವ ಜನ' ಪ್ರಕಟವಾದಾಗ ಗೌಡರಿಗೆ ಅದರ ಪ್ರತಿಕಳಿಸಿಕೊಟ್ಟೆ. ಆ ವೇಳೆಗೆ ಅವರ "ಜಗಲಿಹತ್ತಿ ಇಳಿದು" ಪ್ರಕಟವಾಗಿತ್ತು. ಗೌಡರ ಮೊದಲ ಸಂಗ್ರಹದ ಆ ಪದ್ಯಗಳು ನನಗೆ ಇಷ್ಟವಾಗಿದ್ದವು.

ಈಶ್ವರಚಂದ್ರ ಮತ್ತು ನಾನು ಗಾಂಧಿಬಜಾರಿನಲ್ಲಿ ಹೋಗುತ್ತಿದ್ದಾಗ ಇದ್ದಕ್ಕಿದ್ದಂತೆ ಗೌಡರು ನಮಗೆ ಎದುರಾದರು. ಗೌಡರು ಆಗ ಹೇಗಿದ್ದರು ಎಂಬುದನ್ನು ಎರಡು ಮಾತಿನಲ್ಲಿ ವಿವರಿಸಲೇಬೇಕು. ತೆಳ್ಳಗೆ ಇದ್ದ ಗೌಡರು. ಕಾಲು ತೊಡೆಗೆ ಹತ್ತಿಕೊಂಡಿದ್ದಂಥ ಬಿಗ್ಗಿ ಪ್ಯಾಂಟ್ ಧರಿಸಿದ್ದರು. ಮೇಲೆ ಒಂದು ಜುಬ್ಬ ತಲೆಗೂದಲನ್ನು ಓರಣವಾಗಿ ಬಾಚಿಕೊಂಡಿದ್ದ ಸ್ಪುರದ್ರೂಪಿ ತರುಣ. ಮೂವರೂ ಗಾಂಧಿ ಬಜಾರಿನಿಂದ ಗವಿಪುರದ ಗಂಗಾಧರೇಶ್ವರ ದೇವಾಲಯದ ಬಳಿ ಹೋದೆವು. ಸಮಯದ ಅರಿವಿಲ್ಲದೆ ಗಂಟೆ ಗಟ್ಟಲೆ ಕಾವ್ಯ, ನಾಟಕ ಎಂದು ಮಾತಾಡಿದೆವು. ಗೌಡರು ಆಗಲೇ ಬೆಂಗಳೂರಿನ ಸಾಹಿತ್ಯಕ ಪರಿಭಾಷೆಯನ್ನು ರೂಢಿಸಿಕೊಂಡಿದ್ದರು. ನನಗೆ ಅದೆಲ್ಲ ಹೊಸತು. ಆ ಭೇಟಿಯಲ್ಲಿ ಗೌಡರ ಸರಳತೆ, ಸಾಹಿತ್ಯ ಪ್ರೇಮ, ನಿರ್ಮತ್ಸರದ ಗುಣ ನನಗೆ ಪ್ರಿಯವಾದವು.

1971ರಲ್ಲಿ ನಾನು ಬೆಂಗಳೂರಿಗೆ ಎಂ.ಎ. ಓದಲು ಬಂದಾಗ ಗೌಡರೊಂದಿಗೆ ಒಡನಾಟ ಹೆಚ್ಚಾಯಿತು. ಅವರು ನನಗಿಂತ ಒಂದು ವರ್ಷ ಮುಂದೆ. ಸೆಂಟ್ರಲ್ ಕಾಲೇಜಿನಲ್ಲಿ ತಮ್ಮ ಕವಿ ವ್ಯಕ್ತಿತ್ವದಿಂದ ಅವರು ಎಲ್ಲರ ಗಮನಸೆಳೆದ ವ್ಯಕ್ತಿಯಾಗಿದ್ದರು. ಬೇರೆ ಎಲ್ಲ ವಿದ್ಯಾರ್ಥಿಗಳಿಗಿಂತ

ಭಿನ್ನ ಎನ್ನುವಂತಿದ್ದರು. ಕವಿಯ ಗತ್ತುಗಾರಿಕೆ ಇಲ್ಲದಿದ್ದರೂ, ಮಾತು, ನಡತೆ, ಉಡುಪು ಎಲ್ಲವರಲ್ಲೂ ಕಾವ್ಯದ ಛಾಟು ಹೊಡೆಯುವಂತಿತ್ತು.

ಗೌಡರ ಕವಿತೆಗಳಲ್ಲಿ ಮೊದಲಿನಿಂದಲೂ ಎದ್ದು ಕಾಣುವ ಕೆಲವು ವಿಶೇಷಗಳಿವೆ. ಅವುಗಳಲ್ಲಿ ಬಹಳ ಮುಖ್ಯವಾದದ್ದು ಅವರ ಕಾವ್ಯದ ಜಾನಪದ ಸತ್ವ. ಜಾನಪದ ಎಂಬುದು ಅವರಲ್ಲಿ ಆರೋಪಿತವಾದ ಮೌಲ್ಯವಲ್ಲ. ಅದು ಅವರ ಸಹಜ ಮನೋಧರ್ಮ. ಹಳ್ಳಿಯಲ್ಲಿ ಹುಟ್ಟಿ ಬೆಳೆದ ಗೌಡರಲ್ಲಿ ಹಳ್ಳಿಯ ಭಾಷೆ ಸೊಗಡನ್ನು ಗೌಡರ ಕಾವ್ಯ ಚೆನ್ನಾಗಿ ರೂಢಿಸಿಕೊಂಡಿದೆ. ಇದು ಉತ್ತರ ಕರ್ನಾಟಕದ ಕವಿಗಳಲ್ಲಿ ಕಾಣುವ ಜಾನಪದ ಭಾಷೆಗಿಂತ ಭಿನ್ನ ಸ್ವರೂಪದ್ದಾಗಿದೆ.

ಎರಡನೆಯದು ಗೌಡರ ರಮ್ಯ ಮನೋಧರ್ಮ. ಒಂದು ಕನಸುಗಾರಿಕೆ, ಆದರ್ಶದ ಅಭೀಪ್ಸೆ, ಮಾನವೀಯ ಮೌಲ್ಯಗಳ ಬಗ್ಗೆ ಕಾಳಜಿ ಇವು ಅವರ ಕತ್ತಲಖಂಡವನ್ನೂ ಹಾದು, ಅವರ ಕಾವ್ಯ ಈಗ ಗ್ರಹಣ ಮುಕ್ತವಾಗಿದೆ.

ಕಾವ್ಯದ ಬಗ್ಗೆ ನನ್ನ ಮತ್ತು ಗೌಡರ ನಿರೀಕ್ಷೆಗಳು ಭಿನ್ನವಾಗಿವೆ. ಅವರ ಕವಿತೆಗಳ ಬಗ್ಗೆ, ಅವರ ಸಂಗ್ರಹವೊಂದರ ಬಿಡುಗಡೆಯ ಸಂದರ್ಭದಲ್ಲಿ ಅನಗತ್ಯವಾಗಿ ನಾನು ನಿಷ್ಠುರವಾಗಿ ಮಾತಾಡಿದ್ದೆ. ಆದರೆ ಅದು ನನ್ನ ಮತ್ತು ಗೌಡರ ಸ್ನೇಹವನ್ನು ಹದಗೆಡಿಸಲಿಲ್ಲ. ಗೌಡರಿಗೆ ಅಪಾರವಾದ ಆತ್ಮವಿಶ್ವಾಸ ಉಂಟು. ಕೆ.ವಿ. ತಿರುಮಲೇಶ್ ಗೌಡರ ಕಾವ್ಯದ ಬಗ್ಗೆ ಬರೆದಿರುವ ಲೇಖನದಲ್ಲಿ ಅವರ ಕಾವ್ಯದ ಗುಣವಿಶೇಷಗಳನ್ನು ಚೆನ್ನಾಗಿ ಗುರ್ತಿಸಿದ್ದಾರೆ.

ಗೌಡರ ಕೆಲವು ಕವಿತೆಗಳು ನನ್ನನ್ನು ಗಾಢವಾಗಿ ಕಾಡಿವೆ. 'ಕತ್ಮಂಡುಕಣಿವೆಯಲ್ಲಿ' ಎಂಬ ಪದ್ಯ. ಈಚೆಗೆ ಬಂದ ಅವರ ದಾಂಪತ್ಯಗೀತ-ಪ್ರೀತಿ ಪ್ರಗಾಥ ಮತ್ತು ಅವರು ಬರೆದ ಕೆಲವು ಚೆಲುವಾದ ಹಾಡುಗಳು. ಗೌಡರು ಜನತೆಯ ಕವಿ ಅವರ ಹಾಗೆ ಜನರ ಮಧ್ಯೆ ಬೆರೆತುಹೋಗುವ ಕವಿಗಳು ಕನ್ನಡದಲ್ಲಿ ವಿರಳ.

ಒಮ್ಮೆ ಡಾ|| ಜಿ.ಜಿ.ಎಲ್. ಸ್ವಾಮಿಯವರು ನನ್ನೊಂದಿಗೆ ಮಾತಾಡುತ್ತಾ, ತಾವು ಕೇಳಿದ ಒಂದು ಹೊಸಗೀತೆಯ ಮನೋಹರವಾದ ಚೆಲುವನ್ನು ಕುರಿತು ಪ್ರಸ್ತಾಪಿಸಿದರು. ಆ ಗೀತೆ ಗೌಡರದ್ದು. 'ತೇರನೇರಿ ಅಂಬರದಾಗೆ ನೇಸರ ನಗುತಾನೆ' ಎಂಬುದು ಆ ಗೀತೆ. ಗೌಡರ ಮನೋಧರ್ಮ, ಮತ್ತು ಕಾವ್ಯಪ್ರವೃತ್ತಿ, ಅವರಿಂದ ಅನೇಕ ಚೆಲುವಾದ ಹಾಡುಗಳನ್ನು ಬರೆಸಿದೆ. ಮೈಸೂರು ಅನಂತಸ್ವಾಮಿ ರಾಗ ಸಂಯೋಜನೆ ಮಾಡಿರುವ ಒಂದು ಹಾಡು ನನಗೆ ತುಂಬ ಪ್ರಿಯವಾದ ಹಾಡು. (ಅಸೀಮ ರೂಪಿ, ಅಂಬರದಾಗೆ). ಗೌಡರ ಭಾಷೆಯ ಜಾನಪದ ಗುಣ, ಲಾಲಿತ್ಯ ಚೆನ್ನಾಗಿ ಅಭಿವ್ಯಕ್ತವಾಗಿರುವುದು ಮಾವು-ಬೇವು ಎಂಬ, ಅಶ್ವತ್ಥರು ರಾಗ ಸಂಯೋಜಿಸಿ,

ಎಸ್.ಪಿ. ಬಾಲಸುಬ್ರಹ್ಮಣ್ಯಂ ಹಾಡಿರುವ ಧ್ವನಿಸುರಳಿಯ ಗೀತೆಗಳಲ್ಲಿ, ಮಾವು ಬೇವು ಮಾರುಕಟ್ಟೆಯಲ್ಲಿ ಈವತ್ತಿಗೂ ಚಾಲ್ತಿಯಲ್ಲಿರುವ ಅತ್ಯಂತ ಜನಪ್ರಿಯವಾದ ಧ್ವನಿಸುರಳಿ.

ಕಾವ್ಯದಲ್ಲಿ ಗೌಡರು ಉದ್ದಕ್ಕೂ ನಾನಾ ಬಗೆಯ ಪ್ರಯೋಗಗಳನ್ನು ಮಾಡಿಕೊಂಡು ಬಂದಿದ್ದಾರೆ. ಮುಕ್ತ ಛಂದಸ್ಸಿನ ನವ್ಯ ಕವಿತೆ (ಸಾಂಕೇತಿಕತೆ ಇಲ್ಲಿ ಮುಖ್ಯ), ಭಾವ ದೀಪ್ತ ಹಾಡುಗಳು, ಗದ್ಯಮಯ ವಚನಗಳು, ಗದ್ಯ ಕಾವ್ಯ, ಖಂಡಕಾವ್ಯ-ಹೀಗೆ ಹೆಸರಿಸುತ್ತಾ ಹೋಗಬಹುದು.





# ಸಾತ್ವಿಕ ಶಕ್ತಿ

• ಕ್ಯಾತನಹಳ್ಳಿ ರಾಮಣ್ಣ

ಸಾಯಂಕಾಲ ಆರೂಕಾಲಿಗೆ ಮೈಸೂರಿನಿಂದ ಹೊರಡುತ್ತಿದ್ದ ರೈಲು ಹತ್ತಿ ಏಳರ ಹೊತ್ತಿಗೆ ಪಾಂಡವಪುರದಲ್ಲಿ ಇಳಿದು; ಅಲ್ಲಿಂದ ಎರಡೂವರೆ ಮೈಲಿನಡೆದು ನನ್ನ ಹಳ್ಳಿಯನ್ನು ತಲಪುವ ಹೊತ್ತಿಗೆ ಏಳೂ ಮುಕ್ಕಾಲು ಆಗಿರುತ್ತಿತ್ತು. ವಿದ್ಯಾರ್ಥಿಯಾಗಿದ್ದಾಗ ಅದು ದಿನನಿತ್ಯದ ಪ್ರಯಾಣ. ಹಾಗೊಂದು ದಿನ ಮನೆ ತಲುಪಿದಾಗ, ಜಗಲಿಯ ಮೇಲೆ ಕುಳಿತಿದ್ದ ಅಪ್ಪನ ಬಾಯಿಂದ ಬಂದ ಮಾತುಗಳಿವು: 'ಒಳ್ಳೇ ಸಿನೇಯಿತುರ್ನೇ ಮಡಗಿದ್ದೀಯೆ ಬುಡು'. ಇದ್ದಕ್ಕಿದ್ದಂತೆ ಹೊರಟ ಈ ಮಾತಿನಿಂದ ಯಾಕೋ ಮನಸ್ಸು ಚುರುಕ್ಕೆಂದಿತು. ಸುಮ್ಮನೆ ಅಪ್ಪನನ್ನೆ ನೋಡುತ್ತ ನಿಂತೆ. ಅಪ್ಪ ಮಾತಾಡಿದರು: 'ಅಲ್ಲಾಕಲಾ, ಇಂಗೂ ಮಾಡಾರ ಜನ? ಎಲ್ಲಾರೂ ಮದ್ವೇಗೆ ಮೊದ್ಲೇ ಕರೀತರೆ. ಮದ್ವೆ ಮಾಡ್ಕಂಬುಟ್ಟಿ ಆದ್ಮೇಲೆ ಕರಿಯೋರ್ನ ನಾನು ಈಗ್ಲೇ ನೋಡುದ್ದು'. 'ಯಾರಪ್ಪಾ ಹಂಗ್ ಮಾಡಿರೋರು?' 'ಇನ್ಯಾರು. ನಿನ್ ಸಿನೇಯಿತ್ನೇಯ' ಎಂದು ಹೇಳಿ ಕಾಗದ ತರಿಸಿದರು ಒಳಗಿಂದ. ನೋಡಿದೆ. ಅದು ಐದು ಪೈಸೆಯ ಕಾರ್ಡು. ಓದು ಬರಹ ಬಾರದ ನನ್ನ ಅಪ್ಪ ಅದನ್ನು ಯಾರಿಂದಲೋ ಓದಿಸಿ ಕೇಳಿದ್ದರು. ಅದರಲ್ಲಿದ್ದ ವಿಷಯದಿಂದ ಅವರಿಗೆ ಬೇಸರವೂ ಆಗಿತ್ತು, ಕೋಪವೂ ಬಂದಿತ್ತು.

ಆ ಕಾರ್ಡು ಬೇರೆ ಯಾರದೂ ಅಲ್ಲ, ಆತ್ಮೀಯ ದೊಡ್ಡರಂಗೇಗೌಡರದು. ಅದರಲ್ಲಿದ್ದ ಒಕ್ಕಣೆ ಇಷ್ಟೆ: 'ಮಿತ್ರರೆ, ನಾನು ಗೆಳತಿ ರಾಜೇಶ್ವರಿ ಅವರನ್ನು ವಿವಾಹವಾಗಿದ್ದೇನೆ. ಈಗ ನಾವಿಬ್ಬರೂ ಕೆಳಕಂಡ ವಿಳಾಸದಲ್ಲಿ ವಾಸಿಸುತ್ತಿದ್ದೇವೆ. ನೀವು ಬೆಂಗಳೂರಿಗೆ ಬಂದಾಗ ನಮ್ಮ ಮನೆಗೆ ಬಂದು ಆತಿಥ್ಯ ಸ್ವೀಕರಿಸಬೇಕಾಗಿ ಕೋರುವೆ.' ಕೆಳಗಿದ್ದ ವಿಳಾಸ: 36, ಮೂರನೇ ಮಹಡಿ, ಸಂಜೀವ್ ನಾಯಕ್ ಲೇನ್, ಅವೆನ್ಯೂ ರೋಡ್ ಕ್ರಾಸ್, ಬೆಂಗಳೂರು – 2. ಕಾಗದ ಓದಿ ಖುಷಿಯಾಯಿತು. ತಮ್ಮ ತಂಗಿಯರಿಗಾಗಿ, ತಮ್ಮದೇ ಒಂದು ಉಜ್ವಲ ಭವಿಷ್ಯಕ್ಕಾಗಿ, ಗಾಣದೆತ್ತಿನಂತೆ ಹಗಲಿರುಳೂ ಅವಿಶ್ರಾಂತರಾಗಿ ದುಡಿಯುತ್ತಿದ್ದ ಗೌಡರನ್ನು ಕಂಡಿದ್ದವನು ನಾನು. ಈಗ ಪತ್ನಿ ಸಮೇತರಾದ ಗೌಡರು ಹೇಗಿರುತ್ತಾರೆಂದು ಕಲ್ಪಿಸಿಕೊಳ್ಳುವುದೇ ಒಂದು

ದೊಡ್ಡ ಸಂಭ್ರಮವಾಗಿ ಬಿಟ್ಟಿತ್ತು. 'ಏನ್ಲಾ ಅದು? ಕಾಜಗ ಓದ್ಬುಟ್ಟಿ ಅಂಗೆ ನಿಂತ್ಕಂಬುಟ್ಯಲ್ಲ?' ಎಂದು ಅಪ್ಪ ಕೇಳಿದಾಗಲೇ ನಾನು ವಾಸ್ತವ ಸ್ಥಿತಿಗೆ ಮರಳಿದ್ದು. ಆಮೇಲೆ ಅದೇ ಸಂಭ್ರಮದಿಂದ ಗೌಡರ ಬಗ್ಗೆ ಅಪ್ಪನಿಗೆ ವಿವರವಾಗಿ ಹೇಳಿದೆ. ಅವರು ಪಡುತ್ತಿದ್ದ ಶ್ರಮ, ತ್ಯಾಗ, ಎಲ್ಲವನ್ನೂ ಅಪ್ಪನ ಮನಸ್ಸಿಗೆ ನಾಟುವಂತೆ ಹೇಳಿದೆ. ಅಪ್ಪನ ಬೇಸರ, ಕೋಪ, ಎಲ್ಲವೂ ಮಾಯವಾಗಿ, 'ಅಂಗಾ! ಒಳ್ಳೇ ಮನ್ಸ. ಓಗ್ಲಿ ಬುಡು. ಬೆಂಗ್ಳೂರ್ರೋಗ್ಗಿ ಮಾತಾಡಿಸ್ಕಂಡ್ ಬರೋಗು' ಎಂದರು. ನನಗೆ ಸಮಾಧಾನವಾಯಿತು.

ಮೊನ್ನೆ ಶ್ರೀ ಸತ್ಯಮೂರ್ತಿ ಆನಂದೂರು ಅವರ ಪತ್ರ ಬಂದಾಗ, ಗೌಡರೊಂದಿಗೆ ಕಳೆದ ಸಂದರ್ಭಗಳೆಲ್ಲ ನೆನಪಾಗತೊಡಗಿದವು. ಮೂವತ್ತು ವರ್ಷಗಳ ಹಿಂದೆ ನನ್ನ ಮತ್ತು ಗೌಡರ ನಡುವೆ ಪತ್ರ ವ್ಯವಹಾರ ಸತತವಾಗಿ ನಡೆಯುತ್ತಿತ್ತು. ನಾನು ತುಂಬ ಪ್ರೀತಿಸುವ ಕೆಲವೇ ಮಿತ್ರರ ಸಂಗ್ರಹಾರ್ಹವೆನ್ನಿಸಿದ ಪತ್ರಗಳನ್ನು ಕಡತದಲ್ಲಿ ಸೇರಿಸುತ್ತಿದ್ದುದು ನೆನಪಾಯಿತು. ಕೂಡಲೇ ಕಡತ ಬಿಚ್ಚಿ ಹುಡುಕಿದೆ. ಐದು ಪತ್ರಗಳು ಸಿಕ್ಕಿದವು. ನಿಧಾನವಾಗಿ ಓದಿದೆ. ಓದುತ್ತ ಓದುತ್ತ ವಯಸ್ಸು ಮೂವತ್ತು ವರ್ಷಗಳ ಹಿಂದಕ್ಕೆ ಜಿಗಿದು ವಿಹರಿಸತೊಡಗಿತು. ದೊಡ್ಡರಂಗೇಗೌಡರು ನಿಜವಾದ ಅರ್ಥದಲ್ಲಿ ದೊಡ್ಡವರು. ಇದು ಉತ್ಪ್ರೇಕ್ಷೆಯ ಮಾತಲ್ಲ. ಹಿರಿಯರಿಟ್ಟ ಹೆಸರಿನಲ್ಲಿ 'ಗೌಡ' ಎಂಬ ಶಬ್ದವೊಂದು ಸೇರಿರುವುದನ್ನು ಹೊರತುಪಡಿಸಿದರೆ, 'ರೆ' ಏನು, ಆ ಶಬ್ದ ಇವರಿಗಲ್ಲ. ಯಾಕೆಂದರೆ ಇವರ ಜಾತಿ ಅದಲ್ಲ. ಇವರದು ಮನುಷ್ಯ ಜಾತಿ. ಯಾವ ಜಾತಿಗೂ ಇಂಥ ಮನುಷ್ಯನನ್ನು ಬಂಧಿಸುವ ಅಥವಾ ಮಿತಿಗೊಳಪಡಿಸುವ ಶಕ್ತಿಯಿಲ್ಲ. ಪಂಪ ಮಹಾಕವಿಯ ಮಾತಿಗೆ, ಸಾವಿರ ವರ್ಷ ಕಳೆದಮೇಲೂ ಮಹಾಕವಿ ಕುವೆಂಪು ಅವರಿಂದ ಪುನರುಕ್ತಗೊಂಡ ಮಾತಿಗೆ, ವ್ಯಕ್ತರೂಪವೊಂದನ್ನು ನಾವು ಕಾಣಬಲ್ಲೆವಾದರೆ, ಅದು ಡಾ॥ ದೊಡ್ಡರಂಗೇಗೌಡರು. ಎಲ್ಲ ಜಾತಿಗಳವರನ್ನೂ ಮುಕ್ತ ಮನಸ್ಸಿನಿಂದ ಪ್ರೀತಿಸುವ ಗೌರವಿಸುವ ಗುಣ ಕೇವಲ ಮನುಷ್ಯ ಜಾತಿಯವರಿಗೆ ಮಾತ್ರ ಮೀಸಲಾದುದು. ಈ ಜಾತಿಗೆ ಸೇರಿದವರು ಬಹಳ ಜನರಿಲ್ಲ.

ನಿಷ್ಕಲ್ಮಶ ಹೃದಯದ ದೊಡ್ಡರಂಗೇಗೌಡರನ್ನು ನನ್ನಂಥವರು ಏನೆಂದು ವರ್ಣಿಸಬಹುದು? ಇಂದ್ರ ಚಂದ್ರ ಸುಗುಣ ಸಂಪನ್ನ ಇತ್ಯಾದಿಗಳಲ್ಲದೆ ಇನ್ನೇನು ಇರಲು ಸಾಧ್ಯ? ಅಭಿನಂದನ ಗ್ರಂಥಗಳಲ್ಲಿ ಸಾಮಾನ್ಯವಾಗಿ ಒಳ್ಳೆಯದನ್ನು ಮಾತ್ರ ಕಾಣುತ್ತೇವೆ. ಈಗ ನನ್ನ ಮುಂದೆ ಇರುವ ಐದೂ ಪತ್ರಗಳು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದಂಥವು. ಯಾವ ಯಾವ ಸಂದರ್ಭಗಳಲ್ಲಿ ಗೌಡರ ಮನಸ್ಸು ಹೇಗೆ ಕೆಲಸ ಮಾಡುತ್ತಿತ್ತು ಎಂಬುದಕ್ಕೆ ಈ ಪತ್ರಗಳು ಉದಾಹರಣೆಗಳಾಗಬಲ್ಲುವು. ಅಷ್ಟೇ ಅಲ್ಲ, ಈ ಪತ್ರಗಳು ಗೌಡರ ಸೃಜನಶೀಲ ಬರಹಗಳ ಗುಂಪಿಗೇ ಸೇರಿರುವುದರಿಂದ, ಪ್ರಕಟವಾಗಲೇಬೇಕಾದ ಅನಿವಾರ್ಯತೆ ಕೂಡ ಇದೆ. ಆದ್ದರಿಂದ, ಗೌಡರನ್ನು ನನ್ನ ಮಾತುಗಳ ಮೂಲಕ ನೋಡುವುದಕ್ಕಿಂತ, ಅವರ ಮಾತುಗಳ ಮೂಲಕವೇ ನೋಡಿದರೆ ಚಂದ ಎಂದು ನನಗನ್ನಿಸುತ್ತಿದೆ.

# ಪತ್ರ ಒಂದು

ಪ್ರಿಯ ರಾಮಣ್ಣ ಅವರಿಗೆ....

ವಂದನೆಗಳು. ಬಿಡುವು ಮಾಡಿಕೊಂಡು ನಿಮಗೆ ಕಾಗದ ಬರೆಯುವಲ್ಲಿ ನೀವೇ ಕಾಗದ ಬರೆದದ್ದು ಇನ್ನೂ ಸಂತೋಷ. ಸಕಾಲಕ್ಕೆ ನಿಮ್ಮ ಪತ್ರ ತಲುಪಿ ನಿಮಗೆ ನಾಲ್ಕು ಸಾಲು ಉತ್ತರ ಬರೆಯಲೂ ಮನಸ್ಸಾಯಿತು.

ಪರೀಕ್ಷೆ-ಎರಡೂ ಅರ್ಥದಲ್ಲಿ ನಡೆಯಿತು. ಒಂದು ಸರಿಯಾಗಿ ಕ್ರಮಬದ್ಧವಾಗಿ ಓದದವನ ಪರೀಕ್ಷೆ. ಇನ್ನೊಂದು ನಮ್ಮ ಮುಂದಿನ ಬಾಳಿಗೆ ನಾಂದಿ ಹಾಡಬಹುದಾದ ಈ ಅಂಕಗಳಿಕೆ ತಂದೊಡ್ಡುವ ಜೀವನಾಧಾರದ ಪರೀಕ್ಷೆ. ಅಂತೂ ಮುಗಿಯಿತು.

ಮೂರು ಪೇಪರ್‌ಗಳಲ್ಲಿ ವಿಶಿಷ್ಟವಾಗಿಯೇ ಉತ್ತರ ಬರೆದ ಸಮಾಧಾನ. ಆದರೆ ಈ ಸರಿ Linguistics ಪೂರಾ ಕೈಕೊಟ್ಟಿತು. ಕೇವಲ ಜೀವನಾಂಶ ದಕ್ಕಿಸಿಕೊಳ್ಳಲೂ ಆ ಮೂರು ಗಂಟೆ ನನ್ನ ಈ ವರ್ಷದ ಯಶಸ್ಸಿನ ಅಳಿವಿನ ಉಳಿವಿನ ಪರೀಕ್ಷೆಯೇ ಆಗಿ ಪರಿಣಮಿಸಿತ್ತು. ಆ ಪೇಪರ್‌ನಿಂದ ದೊರಕಬಹುದಾಗಿದ್ದ Classಗೆ ಧಕ್ಕೆಯೂ ಆಗಿದೆ.

ಇನ್ನು ಮತ್ತೆ ಯಥಾಪ್ರಕಾರ ನನ್ನ ಜೀವನ ನಡೆದಿದೆ. ಆಫೀಸು-ನಿದ್ದೆ; ಓಟ-ಓದು; ವಿಶ್ರಾಂತಿ-ಬರವಣಿಗೆ-ಹೀಗೆ ಎಲ್ಲವೂ Hotch-Potch. ಬಹಳಷ್ಟು ದಿವಸಗಳಿಂದ ತಲೆಯಲ್ಲಿದ್ದ ಕೆಲವು ವಸ್ತುಗಳಿಗೆ ಅಭಿವ್ಯಕ್ತಿ ಕೊಟ್ಟಿದ್ದೇನೆ. ಕತೆಗಾಗಿ ಕತೆ ಬರೆಯುವ ಕೆಲಸ ನನಗೆ ಹಿಡಿಸದು; ಒಂದು ಪರಿಸರ, ಅಥವಾ ಒಂದು ಘಟನೆ ಮಾನಸಿಕ ವ್ಯತ್ಯಸ್ಥ ಸ್ಥಿತಿಗತಿಗಳಿಗೆ ಹೇಗೆ ಕಾರಣವಾಗುತ್ತಾ ಹೋಗುತ್ತೆ ಎಂಬುದನ್ನು ವ್ಯಕ್ತಿ ವ್ಯಕ್ತಿತ್ವಗಳ ಸುತ್ತ Applied Psychology ಅನ್ವಯಿಸಿ ಎರಕ ಹೊಯ್ಯುವ ಉತ್ಸಾಹ; ಈ ಕ್ರಮ ಕೆಲವು ಸಾರಿ ಫಲ ಕೊಡುತ್ತೆ. ಕತೆಗಾಗಿ ಕತೆ ಬಯಸುವ ಓದುಗರಿಗೆ ಅಂಥವು ಕತೆಗಳೇ ಆಗಲಿಕ್ಕಿಲ್ಲ ಎಂಬ ಅನುಮಾನವೂ ಇದೆ. ಆದರೂ ಈ ದಾರಿಯಲ್ಲೇ ಪ್ರಯೋಗಗಳನ್ನು ನಡೆಸಿ ಆ ಮೂಲಕ ಪದ್ಯತ್ವದ ಆಂತರಿಕ ಪ್ರಾಸ, ಲಯಗಳನ್ನು ಗದ್ಯದ ತುಡಿತಕ್ಕೆ ಸಂಭಾಷಣೆಯ ಒಳದನಿಗಳಲ್ಲಿ ಮಿಳಿತಗೊಳಿಸುವ ಕೆಲಸ ನನಗೆ ಇಷ್ಟ.

ಅಂತೂ ಆಗೊಮ್ಮೆ ಈಗೊಮ್ಮೆ ಬರೆಯುತ್ತೇನೆ. ಖುಷಿಗಾಗಿ; ನೋವು ಮರೆಯುವ ಸಲುವಾಗಿ; ಬಹಳಷ್ಟು ವೇಳೆ Irritation ಸಹಿಸಿಕೊಳ್ಳುವ ಸಲುವಾಗಿ. ಇನ್ನು ಅದೂ ಇದೂ ತಿರುವಿಹಾಕುವ ಕೆಲಸ. ಬೇರೆ ಬೇರೆ ಜನರೊಡನೆ ಬೆರೆಯುವ, ಅವರೆಲ್ಲರ ಹಿನ್ನೆಲೆ ತುಮುಲ ಧ್ಯೇಯ ಧೋರಣೆಗಳನ್ನು ಅರಿತು ಕತೆಗಾರಿಕೆಗೆ ವಸ್ತುವನ್ನು ಸಾದರಪಡಿಸುವುದೂ ನನಗೆ ಮೋಜಿನ ವಿಷಯ. Modern Poets Seriesನಲ್ಲಿ ದೊರೆತ 4 Volumes ಓದಿದೆ -

ಸಾವರ್ಕರ್ ಲೋಹಿಯಾ ಜೀವನಗಳನ್ನು ತಿಳಿಯಲು ಅವರ ಮಾಹಿತಿಗಳಿಸಲು ಕುತೂಹಲಕ್ಕಾಗಿ ಓದಿದೆ. ಲೋಹಿಯಾ ಬದುಕು ನನ್ನ ಚಿತ್ತವನ್ನು ಬಹುತೇಕ ಆಕರ್ಷಿಸಿದೆ.

ಪತ್ರಿಕೆಗಳಿಗೆ ಕೆಲವು ಕತೆಗಳನ್ನು ಕಳುಹಿಸಿದ್ದೇನೆ. ನನಗೂ ಬೆಂಗಳೂರಿಗೂ ಎಡೆ ಬಿಡದ ಸಂಬಂಧವಾದ್ದರಿಂದ ನಾನು ಈ ಸೆಕೆ, ಈ ಸಿಟಿಯ ಗೊಂದಲ, ಈ ಕೊಳಕು ಬೀದಿಗಳು, ನಾಗರಿ(ರ)ಕ ಜನ - ಅನಿವಾರ್ಯವಾಗಿದೆ.

ಏನಾದರೂ Solid ಆದದ್ದನ್ನು ಮಾಡಬೇಕು ಅನ್ನಿಸುತ್ತೆ. ತಾಳ್ಮೆ ಮೊದಲು ಕೈಕೊಡುವ ಸನ್ನಿವೇಶಗಳೇ ಜಾಸ್ತಿ. ನಾನಾಗಿ ನಾನು ತಲೆ ಮೇಲೆ ಹೊತ್ತುಕೊಂಡ ಕೆಲವು Commitments ಇವೆ; ಅವೆಲ್ಲಾ ಮುಗಿಸಿಬಿಡಬೇಕು ಅಂದುಕೊಳ್ಳುತ್ತೇನೆ. ದಿನೇದಿನೇ ಸಾಧ್ಯವಾಗಬಹುದು.

ಅಂದಹಾಗೆ ನೀವು ರಜಾ ಹೇಗೆ ಕಳೆಯಲು ಆಶಿಸಿದ್ದೀರಿ. ಮಳೆ ನಿಮ್ಮಕಡೆ ಬಂದಿದೆಯೇ? ಶ್ರೀ ಕಾಳೇಗೌಡರು ಏನನ್ನುತ್ತಾರೆ? ಶ್ರೀ ಜವರನಹಳ್ಳಿ ಸಿದ್ದಪ್ಪ, ಶ್ರೀ ರಮೇಶ್ ಹುಲ್ಲುಕೆರೆ - ಇವರೆಲ್ಲಾ ನಿಮಗೆ ಸಿಗಬಹುದಲ್ಲವೇ? ಅವರು ಸಿಕ್ಕರೆ ನನ್ನ ನೆನಪುಗಳನ್ನು ಕೊಡಿ ಅವರಿಗೆ.

ರಾಮಣ್ಣ, ನಿಮ್ಮಿಂದ ವಿಶಿಷ್ಟವಾದದ್ದನ್ನು ನಿರೀಕ್ಷಿಸುತ್ತೇನೆ. ನಿಮ್ಮ ಲೇಖನಿ ಅಂಥದ್ದ ಕೊಡುತ್ತೆ ಎಂಬ ಭರವಸೆ ನನಗಿದೆ. ಅಂಥ ಬರವಣಿಗೆಗೆ ನೀವು ನಿಮ್ಮ ಭೂಮಿಕೆಯನ್ನು ಹದಗೊಳಿಸುತ್ತಿದ್ದೀರೆಂದು ನಂಬಿದ್ದೇನೆ.

ಇತಿ ವಿಶ್ವಾಸಿ
ದೊಡ್ಡರಂಗೇಗೌಡ
14-5-71

## ಪತ್ರ ಮೂರು

ಪ್ರಿಯ ರಾಮಣ್ಣ ಅವರಿಗೆ....

ವಂದನೆ. ಎಷ್ಟೋ ಸಾರಿ ನಾನು ಯೋಚಿಸುತ್ತೇನೆ. ನೀವು ಯಾಕೆ ಮತ್ತೆ ಕಾಗದ ಬರೆಯಲಿಲ್ಲ ಎಂದು? ಆದರೆ ಮತ್ತೆ ಅಂದುಕೊಳ್ಳುತ್ತೇನೆ ನಾನೇನೋ ತಪ್ಪು ಮಾಡಿರಬಹುದು-ಇಲ್ಲಾ-ಕಾಗದ ಬರೆಯುವುದು ಮರೆತಿರಬಹುದು ಎಂದು. ಯಾವ ಕಾರಣವೋ ತಿಳಿದಿಲ್ಲ ನನಗೆ. ಆದರೆ ನಮ್ಮ ಪತ್ರ ವ್ಯವಹಾರ ನಿಲ್ಲದಿರಲಿ. ನಿಮ್ಮ ವಿಶ್ವಾಸವನ್ನು ಎಂದೆಂದೂ ಅಪೇಕ್ಷಿಸುವ ವ್ಯಕ್ತಿ ನಾನು; ಅಲ್ಲಿ ಜಾತಿಯ ಹುದ್ದೆಯ ಸಾಹಿತ್ಯಕವಾದ-ಎಲ್ಲ ಸಂಪರ್ಕಗಳಿಗಿಂತ ಮುಖ್ಯವಾದದ್ದು ಬೇರೆ ರೀತಿಯದು! ಅದು ಒಬ್ಬರನ್ನು ಮತ್ತೊಬ್ಬರು ಅರಿಯುವುದು, ನನ್ನ-ನಿಮ್ಮ ನಡುವೆ ಸ್ನೇಹ ಎಂದೆಂದಿಗೂ ಎಂಥ ಘಳಿಗೆಗಳಲ್ಲೂ ಕೆಡದ ಹಾಗೆ ನೋಡಿಕೊಳ್ಳುವುದು. ಮಧುರ ಗೆಳೆತನಕ್ಕೆ

ಬೆಲೆ ಇದೆ; ಈ ಜಗತ್ತಿನಲ್ಲಿ ನಾವು ಏನೂ ಸಾಧಿಸದೆ ಹೋದರೂ ಪರವಾಯಿಲ್ಲ. ಒಳ್ಳೆಯ ಬದುಕನ್ನ ನಡೆಸಲಿಕ್ಕೆ ಅಸಾಧ್ಯವಾದರೆ, ಒಳ್ಳೆಯ ಸ್ನೇಹದ ಆತ್ಮೀಯರನ್ನು ಪಡೆಯದೆ ಬಾಳಿದರೆ, ಅದರಷ್ಟು ನರಕ ಇರಲಿಕ್ಕಿಲ್ಲ. ಒಂದಲ್ಲ ಒಂದು ಸಂಗತಿಯನ್ನು ಆತ್ಮೀಯರ ಬಳಿ ಹೇಳಿಕೊಳ್ಳುವುದರಲ್ಲಿ ಅವರ್ಣನೀಯ ಆನಂದವಿದೆ; ಅದನ್ನ ಮೌಲ್ಯಗಳಲ್ಲಿ ಮಾತುಗಳಲ್ಲಿ ಲೆಕ್ಕಹಾಕಲಾರೆ; ಅದು ಮೌನದ ಭೇಟಿ ಸಂದರ್ಭದಲ್ಲಿ ಅವ್ಯಕ್ತ ರೀತಿಯಲ್ಲಿ ವ್ಯಕ್ತವಾಗುವ ನೋಟಗಳ ಹಿನ್ನೆಲೆಯ ಆಂತರ್ಯದಲ್ಲಿ ಹುದುಗಿದ ಅಂತಃಕರಣದ ವಿಧಾನವಿರಬೇಕು....

ನಾನು ಬಹಳ 'ಮೂಢ' (Moody?) ಕೆಲವು ಸನ್ನಿವೇಶಗಳಲ್ಲಿ ನನಗೆ ತೋಚಿದ ಹಾಗೆ ವರ್ತಿಸಿಬಿಡುವವ. ಸರಿಯೋ ತಪ್ಪೋ ನಾನರಿಯೆ; ಶುದ್ಧ ಜೀವನ ನಡೆಸುವ ಹಂಬಲ ನನ್ನದಷ್ಟೆ. ಉತ್ತಮ ವ್ಯಕ್ತಿಗಳ ವಿಶ್ವಾಸ ಕಾಪಾಡಿಕೊಳ್ಳುವುದು, ಅಂಥವರ ಜೊತೆ ಓಡಾಡುವ ಮಾತಾಡುವ ವ್ಯವಹರಿಸುವ ಹರಟುವ ವಿಮರ್ಶಿಸುವ ತಿನ್ನುವ ಉಣ್ಣುವ ಎಲ್ಲ ಕ್ರಿಯೆ ಅನುಕ್ರಿಯೆಗಳಲ್ಲಿ ಬದುಕುವ ಕಾಳಜಿ ನನಗೆ ಬೇಕು. ಆ ಕಾರಣಕ್ಕಾಗಿ ನಿಮ್ಮಿಂದ ಸದಾ ಕಾಗದ ನಿರೀಕ್ಷಿಸುತ್ತೇನೆ.

ಇತಿ ನಿಮ್ಮ ಸ್ನೇಹದ
ದೊಡ್ಡರಂಗೇಗೌಡ
11-9-72

## ಪತ್ರ ಐದು

ಪ್ರಿಯ ರಾಮಣ್ಣ ಅವರಿಗೆ....

ಹೃತ್ಪೂರ್ವಕ ವಂದನೆಗಳು.

ದಯವಿಟ್ಟು ತಪ್ಪು ತಿಳಿಯಬೇಡಿ. ಮದುವೆಗೆ ಬರಲಾಗಲಿಲ್ಲ. 'ಅಕಾವ್ಯ'ದ ಮೊದಲ ಸಂಚಿಕೆ ಪ್ರೂಫ್ ತಿದ್ದುವುದು ಇತ್ಯಾದಿ ಕೆಲಸಗಳು ; ಜೊತೆಗೆ ನಮ್ಮ ಕಾಲೇಜಿನ ವಾರ್ಷಿಕ ಸಂಚಿಕೆಯ ಸಂಪಾದಕ ಜವಾಬ್ದಾರಿಗಳು. ದಿವಸ ಎರಡು ಪ್ರೆಸ್ಸಿಗೆ ಅಲೆತ-ಕಾಲೇಜಿಗೆ. ಹೀಗೆ ಹತ್ತಾರು ಕೆಲಸ ಅಂಟಿಸಿಕೊಂಡು ಕನ್ನಡ ಅಧ್ಯಯನ ಕೇಂದ್ರದಲ್ಲಿ ನಡೆಯುತ್ತಿರುವ ಪಂಪ ವಿಚಾರ ಸಂಕಿರಣದಲ್ಲೂ ಪೂರ್ಣ ಭಾಗವಹಿಸಲಾಗುತ್ತಿಲ್ಲ.

ನಿಮ್ಮ ಮದುವೆಯ ವಿಷಯ ತಿಳಿದಾಗ, ಕರೆಯೋಲೆ ಬಂದಾಗ - ಅತೀವ ಆನಂದ. ನನ್ನ ಮನೆಯುವರದೇ ಯಾರದೋ ಮದುವೆ ಆಗಿದ್ದರೆ ಎಷ್ಟು ಸಡಗರ ಪಡುತ್ತಿದ್ದೆನೋ-ಅಷ್ಟೆ ಉತ್ಸಾಹದಿಂದ ನಿಮ್ಮ ಮದುವೆಯ ಸಂದರ್ಭದಲ್ಲಿ ಸಂಭ್ರಮದಿಂದ ಓಡಾಡುವ ಆಸೆ ಇತ್ತು. ಆ ಅಕ್ಕರೆಯನ್ನ ಬರೆಯುವ ಮಾತಲ್ಲಿ ಹಿಡಿದಿಡುವ ರೀತಿಗೆ ಭಾವುಕ ಮಿಡಿತಗಳು ನಿಜಕ್ಕೂ

ದಕ್ಕುವುದಿಲ್ಲ (ಪೆನ್ನಿಗೆ). ಆದರೆ ಎಲ್ಲರೂ ಒಂದು ಅರ್ಥದಲ್ಲಿ ಪರಿಸರ ಸನ್ನಿವೇಶಗಳಲ್ಲೇ ಬದ್ಧರಾಗಿರುವುದರಿಂದ ಕೆಲವು ಸಂದರ್ಭಗಳಲ್ಲಿ ನಾವು ಆಶಿಸುವಂತೆ ನಡೆದುಕೊಳ್ಳಲಾಗುವುದಿಲ್ಲ. ಅದೇ ಇರುವಿಕೆಯ ಸಂದಿಗ್ಧತೆ.

ನಿಮ್ಮ ವಿವಾಹ ಸಮಯದಲ್ಲಿ ನಾನು ಒಬ್ಬ ಆತ್ಮೀಯನಾಗಿ ನಿಮ್ಮ ಮನಸ್ಸಿನೊಂದಿಗೆ ಹಂಚಿಕೊಳ್ಳಬಹುದಾದ ವಿಷಯಗಳು - ನಿಮ್ಮಿಬ್ಬರ ವೈವಾಹಿಕ ಸಂಬಂಧಗಳು ಕೊನೆತನಕ ಸೌಹಾರ್ದ ನೆಲೆಯಲ್ಲಿ ಎಲ್ಲ ಏರಿಳಿತಗಳಲ್ಲೂ ಹದವರಿತು ಒಮ್ಮುಖವಾಗಿ ನಲ್ಮೆಯ ಕಡೆಗೆ ಸಾಗಲಿ ಎಂಬುದೇ ನನ್ನ ಅಭೀಪ್ಸೆ. ನಿಮ್ಮ ಸಂಗಾತಿ ನಿಮ್ಮ ಬದುಕಿಗೆ ಹೊಸ ತಿರುವನ್ನ ನವನವೀನ ಅನುಭವಗಳ ತೆರೆಯನ್ನ ದಿನದಿನವೂ ಹಣಿಸುವಲ್ಲಿ, ನಗೆಯಲ್ಲಿ ಚೆಲುವನ್ನ ಬಿತ್ತುವಲ್ಲಿ ಸುಖ ಸಂತಸಗಳಲ್ಲಿ ಮುಳುಗುವಲ್ಲಿ ಸಮಾನವಾಗಿ ಭಾಗಿಯಾಗುವಂಥ ಒಳಿತಿನ ಪ್ರೇರಣೆಯಿಂದ ನಿಮ್ಮಲ್ಲಿ ಒಂದಾಗಿ-ಇರುವಷ್ಟೂ ಕಾಲ ಸಾರ್ಥಕ ಜೀವನ ನಡೆಸುವ ಕಡೆಗೆ ನಿಮ್ಮನ್ನು ನಡೆಸುವಂತಾಗಲಿ ಎಂದೇ ಹಾರೈಸುತ್ತೇನೆ - ಮುಕ್ತ ಮನಸ್ಸಿನಿಂದ; ತುಂಬಿದ ಅಂತಃಕರಣದಿಂದ. ನಿಮ್ಮಿಬ್ಬರಿಗೆ ಬಾಳಿನಲ್ಲಿ ಸರ್ವ ಬಗೆಯ ಖುಷಿ ದೊರೆಯಲಿ - ಇದಕ್ಕಿನ್ನ ಇನ್ನೇನು ತಾನೇ ಹೇಳಬಲ್ಲ ಒಬ್ಬ ಗೆಳೆಯ?

ನನ್ನ ಹೆಂಡತಿ ಕೂಡ ರಾಮಣ್ಣ ಅವರ ಮದುವೆಗೆ ಹೇಗಾದರೂ ಮಾಡಿ ಹೋಗಿದ್ದರೇ ಚೆನ್ನಾಗಿರುತ್ತಿತ್ತು ಎಂದು ಚಡಪಡಿಸುತ್ತಿದ್ದಳು. ಅಲ್ಲಿ ಅವಳ ಭಾವನೆಗಳು ವ್ಯಕ್ತವಾದ ಧಾಟಿಯಲ್ಲಿ ಅವಳು ನಿಮ್ಮನ್ನು ಅಣ್ಣನಿಗಿಂತ ಹೆಚ್ಚಿನ ಅಕ್ಕರೆಯಿಂದ ಭಾವಿಸುವುದೇ ಆದ ವಾತ್ಸಲ್ಯ.

ಗಂಡ ಹೆಂಡಿರಿಬ್ಬರೂ ನಮ್ಮ ಮನೆಗೆ ಒಂದು ಸಾರಿ ಬನ್ನಿ. ನಾಲ್ಕು ದಿನ ನಮ್ಮೊಡನೆ ನೀವು ಇದ್ದು ಹೋಗಬೇಕೆಂದು ನಾವಿಬ್ಬರೂ ಆಶಿಸುತ್ತೇವೆ. ನಿಮಗೆ ಬಿಡುವು ದೊರೆತಾಗ-ನಮ್ಮ ಅಕ್ಕರೆಯ ಕರೆಯನ್ನು ಮನ್ನಿಸಿ ಬೆಂಗಳೂರಿನ ಬಸ್ಸು ಹತ್ತುವಿರೆಂದು ನಂಬಿದ್ದೇವೆ.

'ಅಕಾವ್ಯ' ಈ ಹೊತ್ತು 12.30ರ ಹೊತ್ತಿಗೆ ಎಲ್ಲರ (ಅಂದರೆ ಆಸಕ್ತರ) ಕೈಯಲ್ಲಿರಬೇಕೆಂದು ಅಣಿಮಾಡಿಸುವುದರಲ್ಲಿ ತೊಡಗಿದ್ದೇನೆ. ಪ್ರೆಸ್ಸಿನಲ್ಲಿ ಕೂತೇ - ಈ ಕಾಗದ ಬರೆಯುತ್ತಿದ್ದೇನೆ. ಅವಸರದಲ್ಲಿ ಒಕ್ಕಣಿಸುವಾಗ ನುಡಿಗಳಲ್ಲಿ ಎಡವಿದ್ದರೆ ಕ್ಷಮಿಸಿ.

ಹಿಮನಾ ಮುದ್ರಣ
ಬೆಳಿಗ್ಗೆ 11.35 ಗಂಟೆ

ಇತಿ
ನಿಮ್ಮ ಏಳಿಗೆಯನ್ನೇ ಬಯಸುವ
ಆತ್ಮೀಯ ದೊಡ್ಡರಂಗೇಗೌಡ
27-3-73

# ಪತ್ರ ನಾಲ್ಕು

ಸ್ನೇಹದ ಶ್ರೀ ರಾಮಣ್ಣ ಅವರಿಗೆ....

ಹೃತ್ಪೂರ್ವಕ ವಂದನೆಗಳು. ನಿಮ್ಮ ಪತ್ರ ಬಂದು ಎಷ್ಟೋ ದಿನಗಳ ನಂತರ ಉತ್ತರ ಬರೆಯುತ್ತಿದ್ದೇನೆ. ಕ್ಷಮೆ ಇರಲಿ. ನೀವು ಹಾಡುಗಳನ್ನು ಮುಕ್ತವಾಗಿ ಮೆಚ್ಚಿಕೊಂಡದ್ದು ಸಂತೋಷ.

ನಾ ಎಣಿಸಿರಲಿಲ್ಲ.... ಆದರೂ ನನ್ನ ಪಥ ಬದಲಾಯಿತು. ಶುದ್ಧ ಸಾಹಿತ್ಯ ಕ್ಷೇತ್ರದ ವ್ಯಕ್ತಿಗಳೆಲ್ಲ ನನ್ನ ಬೇಕೆಂದೇ ದೂರೀಕರಿಸಿದ್ದಾರೆ. ಒಳ್ಳೆಯದೇ ಆಯಿತು. ಈ ಎಲ್ಲ ಗುಂಪುಗಾರಿಕೆಗಳಿಂದ ವಿದೂರ ಉಳಿಯುವ ಅನಿವಾರ್ಯತೆ ಮತ್ತೊಂದು ಹೊಸ ಕ್ಷಿತಿಜದ ಅರಿವು ಪಡೆಯಲು ಎಡೆ ಮಾಡಿತು.

ಚಿತ್ರರಂಗವೇ ಒಂದು ಪ್ರತ್ಯೇಕ ಪ್ರಪಂಚ. ಇಲ್ಲಿನ ಥಳುಕು, ಮೋಸ, ಮಾತಿಗೆ ತಪ್ಪುವ ಅಪ್ರಾಮಾಣಿಕತೆ – ಈ ಎಲ್ಲದರಾಚೆಯೂ ಒಂದು ಸೃಷ್ಟಿಶೀಲ ವಾಸ್ತವ ಜಗತ್ತಿದೆ. ಅಲ್ಲಿ ಸೃಜನೆಯ ಪೈಪೋಟಿ ಇದೆ. ಹಿತವಾಗಿ ಮಿತವಾಗಿ ನಾದಮಯವಾಗಿ ಸನ್ನಿವೇಶಕ್ಕನುಗುಣವಾಗಿ ಪಾತ್ರದ ಘನತೆಗೆ ಹೊಂದಿಕೊಳ್ಳುವ ರೀತಿ ಬರೆಯಬೇಕಾದ ನಮ್ಮ ಆಲೋಚನೆಗಳನ್ನೇ ಯಾವುದೇ ನಿಶ್ಚಿತ ಥಾಟಿಗೆ ಒಳಪಡಿಸಿ ಎಲ್ಲರೊಪ್ಪಬಲ್ಲ ಕುಲಾವಿ ತಯಾರಿಸುವ ಕುಸುರಿ ಕೆಲಸ. ಅದು ನನಗೆ ಈಗೀಗ ಒಗ್ಗಿಹೋಗುತ್ತಿದೆ. ಚಿತ್ರಗೀತೆ ಬರೆಯುವವನಿಗೆ ಮುಕ್ತ ಸ್ವಾತಂತ್ರ್ಯವಿಲ್ಲ. ಸಂಗೀತ ದಿಗ್ದರ್ಶಕನ, ನಿರ್ದೇಶಕನ, ನಿರ್ಮಾಪಕನ ನಿಯಂತ್ರಣಗಳ ಎಲ್ಲೆ ಕಟ್ಟಿದೆ. ರಾಗ ತಾನಗಳ ಪರಿಮಿತಿಗಳಿಗೇ ಬರೆಯಬೇಕಾದ ಅಂಕಿತವಿದೆ. ಹೀಗಾಗಿ ಈ ಲಕ್ಷ್ಮಣರೇಖೆಗಳ ದಿಗ್ಬಂಧನಗಳ ನಡುವೆ ಕೂಡ ಏನಾದರೂ ಒಳಿತು ಮಾಡಲು ಪ್ರಯತ್ನಿಸಿದ್ದರ ಫಲ – "ಗೆಂಡೆತಿಮ್ಮ". ನನ್ನ ನಿರೀಕ್ಷೆ ಮೀರಿ ಹಾಡುಗಳು ಜನಪ್ರಿಯವಾಗಿವೆ. ಕೈ ತುಂಬ ಕೆಲಸವಿದೆ. ಅನೇಕ ಸಂಸ್ಥೆಗಳಿಗೆ ಒಪ್ಪಂದ ಮಾಡಿಕೊಳ್ಳಲು 'ಗೆಂಡೆತಿಮ್ಮ'ದ ಯಶಸ್ಸು ಅನುವು ಮಾಡಿಕೊಟ್ಟಿದೆ. ಇದು ನನ್ನ ಪ್ರವರ.

ಹೇಗಿದೆ ನಿಮ್ಮ ಜಾನಪದೀಯ ಚಿಂತನ? ಸಂಗ್ರಹಕಾರ್ಯ? ಪರಿಷ್ಕರಣ? ಮತ್ತೆ ಯಾವ ಯಾವ ಜಿಲ್ಲೆ ಸುತ್ತಿದ್ದೀರಿ? ಅಧ್ಯಾಪನವೂ ಈ ನಡುವೆ ನಡೆದಿರಬೇಕಲ್ಲವೆ? ನಿಮ್ಮ ಸ್ವಂತ ಬರವಣಿಗೆ?

ನಿಮ್ಮ ಶ್ರೀಮತಿಗೆ ನನ್ನ ಅನಂತ ನಮಸ್ಕಾರಗಳು. ಇಲ್ಲಿ ರಾಜಿ, ಭರತ ಆರೋಗ್ಯವಾಗಿದ್ದಾರೆ, ಆರಾಮವಾಗಿದ್ದಾರೆ. ಬೆಂಗಳೂರಿಗೆ ಬಂದಾಗ ಮರೆಯದೆ ಬನ್ನಿ. ನಾವು ಏನಾಗುತ್ತೇವೋ ಬಿಡುತ್ತೇವೋ – ಗೊತ್ತಿಲ್ಲ, ವಿಶ್ವಾಸವಂತೂ ಹೀಗೆ ಇರಲಿ.

ಇತಿ ನಿಮ್ಮ ಆತ್ಮೀಯ
ದೊಡ್ಡರಂಗೇಗೌಡ

# ಪತ್ರ ಎರಡು

ವಿಶ್ವಾಸದ ರಾಮಣ್ಣ ಅವರಿಗೆ....

ವಂದನೆ. ನಾನಿನ್ನೂ ವಿಶ್ವೇಶ್ವರಪುರದ ಕಾಲೇಜಿಗೆ ಸೇರಿಲ್ಲ. ನಿಮ್ಮ ಪತ್ರ ಬಂದು ಎರಡು ದಿನಗಳೇ ಆದರೂ ಈಗ ಬಿಡುವಾಯ್ತು ಬರೆಯಲಿಕ್ಕೆ.

ನಾನು ಈ ವರ್ಷ ಇಂಗ್ಲಿಷ್ ಎಂ.ಎ. ಮಾಡುವ ಮನಸ್ಸು ಮಾಡಿದ್ದೇನೆ. ಆದ್ದರಿಂದ ನೀವು ದಯಮಾಡಿ ಯೂನಿವರ್ಸಿಟಿ ಆಫೀಸಿನಲ್ಲೋ ಅಥವ ಅದಕ್ಕೆ ಸಂಬಂಧಪಟ್ಟ ಕಡೆ ಎಲ್ಲಾ ವಿಚಾರಿಸಿ ನನಗೆ ಮಾಹಿತಿ ಕಳುಹಿಸಿ. Postal Tution ಇದೆ ಎಂದು ಕೇಳಿಬಲ್ಲೆ. ಅದರ ಬಗ್ಗೆ ಕೂಡ ಬರೆಯಿರಿ. ಒಟ್ಟಿನಲ್ಲಿ External M.A.ಗೆ ಸೇರಲು ಅಂದರೆ Register ಮಾಡಿಸಲು ಕಾಲ ಆಗಿಹೋಗಿದೆಯೇ? ಇದೆಯೇ? ಇದ್ದರೆ ಯಾವಾಗ? ಫೀಜು ಎಷ್ಟು? ಫಾರಂ ಇರುವುದಾದರೆ ಕಳುಹಿಸಿಕೊಡಿ. ಹಾಗೆಯೇ Book-List, Syllabus ಕೂಡ. ನನಗೆ ಒಂದು ಅನುಮಾನ. Kannada Major ತೆಗೆದುಕೊಂಡವರಿಗೆ English Major ಕೊಡುತ್ತಾರೋ ಇಲ್ಲವೋ? Eligibility ಇತ್ಯಾದಿ ಎಲ್ಲಕ್ಕೂ ವಿವರ ಒದಗಿಸುತ್ತೀರೆಂದು ನಾನು ನಂಬಿದ್ದೇನೆ.

ಮತ್ತೆ ನೀವು ಬೆಂಗಳೂರಿಗೆ ಬಂದಿದ್ದಿರೇನು? ಇನ್ನೂ ನಾನಂತೂ RMSಗೆ ರಾಜೀನಾಮೆ ಕೊಟ್ಟಿಲ್ಲ. ದಿನಗಳು ಯಾಂತ್ರಿಕವಾಗಿವೆ. ಏನೋ ಎಲ್ಲಾ ಮಾಡಬೇಕಲ್ಲಾ ಎಂಬ ಬಲವಂತ ಅಷ್ಟೆ... ಬದುಕುವುದರಲ್ಲಿ ಯಾವ ಖುಷಿಯೂ ಇಲ್ಲ.

ಏನೆಲ್ಲ ಆಗುತ್ತಿರಲಿ ಆಗಿರಲಿ ಆಗಲಿ - ನಾಳೆ ನನ್ನ ಬದುಕು ಇನ್ನೂ ಉತ್ತಮ ಸ್ಥಿತಿಗೆ ಏರಬಹುದೆಂಬ ಎಂಥದೋ ಒಂದು ಬಗೆಯ ಆಶಾಭರವಸೆಯೊಂದೇ... ಖಚಿತವಾಗಿ ಏನನ್ನೂ ತಿಳಿದುಕೊಳ್ಳಲಾಗಿಲ್ಲ. ಎಲ್ಲವನ್ನೂ (ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ) ಓದ ಹೊರಟು ಅಥವಾ ಅರಗಿಸಿಕೊಳ್ಳಲು ಪ್ರಯತ್ನಪಟ್ಟು Jack of all but ..... Master of none ಎನ್ನುವ ಹಾಗಾಗಿದೆ ನನ್ನ ಪರಿಸ್ಥಿತಿ.

ಇತ್ತ "ಜಾನಪದ"ದಲ್ಲಿ ಬೇರುಗಳನ್ನ ಇಳಿಯಬಿಡಲಿಲ್ಲ (ಆಳವಾಗಿ).... ಅತ್ತ ಸೃಜನಶೀಲ ಪ್ರವೃತ್ತಿಗಳಲ್ಲೂ ಉನ್ಮುಖವಾಗಿ ಉಳಿಯಲಿಲ್ಲ.... ಹೀಗೆ ಧ್ಯೇಯಗಳು ನಡಿಗೆಗಳು ಮಾತು ಮೌನ ಹಿಂಸೆ ವಿಲಾಸ ಎಲ್ಲಾ.... ನನ್ನ ಸುತ್ತ ನನ್ನ ವಂಚಿಸುವ ಜನ; ನನ್ನ ಅವರವರ ಸಾಧನೆಗಳಿಗೆ ಒಂದು Means ಮಾಡಿಕೊಳ್ಳುವ ಪ್ರಾಣಿಗಳು ಹೆಚ್ಚು; ಈ ಪ್ರತಿಯೊಂದರಿಂದ ರೋಸಿ ಹೋಗಿದೆ ಮನಸ್ಸು. ಎಲ್ಲೂ ಸುಖ ಕಾಣಲಿಲ್ಲ. ನಿಂತ ಮನೆ; ಕುಂತ ಜಾಗ;-ಎಡೆ

ಎದೆಗೂ ಮುಜುಗರ. ಈ ಹೊರಳುವಿಕೆಯಲ್ಲಿ ಹುಳವಾಗಿದ್ದೇನೆ. ಒಳಗೊಳಗೇ-ಕೇವಲ ಹೊರ ಜಗತ್ತಿಗೆ ನಗುತ್ತಾ ಬದುಕಬೇಕಾಗಿದೆ. ಅದು ನಾಟಕ ಎಂದೂ ಅನ್ನಿಸಿದೆ. ಆದರೆ ಹಾಗೆ ನಗುನಗುತ್ತಾ ಅಡ್ಡಾಡದಿದ್ದರೆ ಹೆಂಡತಿಗೆ ಬೇಸರ, ಬಂಧುಗಳಿಗೆ ಅಸಹ್ಯ , ಸ್ನೇಹಿತರಿಗೆ ವ್ಯಾಕುಲ-ಏನೇನೋ?

ಈ ಸಮಸ್ತ ಮರೆಯಲು ನಾನು ಮಾಡಬಲ್ಲ ಏಕೈಕ ಕೆಲಸ, ಮಾಡಿಕೊಳ್ಳಲಿಚ್ಛಿಸುವ ವ್ಯವಸ್ಥೆ – ಸದಾ ಓದಿನಲ್ಲಿ ಮುಳುಗುವುದು. ಏಕಾಂತ ಬೀಳುವುದು... ಅದೊಂದಾದರೂ ನಡೆಯುತ್ತಿದ್ದರೆ ಕೊಂಚ ಮನಸ್ಸಿಗೆ ಹಗುರ.... ವೇಳೆ ಹೋಗುವುದು ಗೊತ್ತಾಗುವುದಿಲ್ಲ. ಏನೇನೋ ಬರೆದೆ. ಕ್ಷಮಿಸಿ

ಇತಿ ನಿಮ್ಮ ಸ್ನೇಹದ
ದೊಡ್ಡರಂಗೇಗೌಡ

ಬೆಳೆಯಬೇಕು, ಏನಾದರೂ ವಿಶಿಷ್ಟವಾದುದನ್ನು ಸಾಧಿಸಬೇಕು, ಶುದ್ಧ ಬದುಕನ್ನು ಬದುಕಬೇಕು – ಹೀಗೆ ಲೋಕ ಒಪ್ಪುವ ಹಿಗ್ಗುವ ಅಪೇಕ್ಷೆಗಳಲ್ಲದೆ ಬೇರೆ ಯಾವುದೂ ಗೌಡರ ಎದೆಯನ್ನು ಪ್ರವೇಶಿಸಲೇ ಇಲ್ಲ. ಒಂದಿಷ್ಟು ಸೀಸೀ, ಒಂದಿಷ್ಟು ದ್ರೋಹ, ಒಂದಿಷ್ಟು ಕಪಟ, ಒಂದಿಷ್ಟು ಸುಳ್ಳು, ಒಂದಿಷ್ಟು ವಂಚನೆ ಇಷ್ಟರಲ್ಲಿ ಯಾವುದಾದರೊಂದನ್ನು ಕೇವಲ ಉಪ್ಪಿನಕಾಯಿಯಂತೆ ಚಪ್ಪರಿಸಿದ್ದರೂ ಸಾಕಾಗಿತ್ತು, ಗೌಡರು ಉನ್ನತ ಹುದ್ದೆಗಳಲ್ಲಿ ಓಲಾಡಬಹುದಿತ್ತು; ಸಾಮಾಜಿಕವಾಗಿ ಸಾಹಿತ್ಯಕವಾಗಿ ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಕೂಡ ನಾಯಕತ್ವಕ್ಕೆ ನಾಮಕರಣಗೊಂಡು ಬಿಡುತ್ತಿದ್ದರು. ಆದರೆ ಅಂಥ ಯಾವ ಬಗೆಯ ಉಪ್ಪಿನಕಾಯಿಯನ್ನೂ ಗೌಡರ ನಾಲಗೆ ಚಪ್ಪರಿಸಲಿಲ್ಲ. ಅಮಾನ್ಯವೆನಿಸಿದುದನ್ನೆಲ್ಲ ಅವರ ನಾಲಗೆ ಯಾವತ್ತೂ ಉಗುಳಲಿಲ್ಲ; ತನ್ನಲ್ಲೆ ಅಡಗಿಸಿಕೊಂಡು ಬಿಟ್ಟಿತು; ಗೌಡರು ಬಯಸಿದ ಶುದ್ಧ ಬದುಕನ್ನು ದಕ್ಕಿಸಿಕೊಟ್ಟಿತು. ಅದು ಕಷ್ಟ ಇರಬಹುದು, ನಿಷ್ಠುರ ಇರಬಹುದು, ದ್ರೋಹವಂಚನೆಗಳಿರಬಹುದು, ಕಪಟ ಸುಳ್ಳುಗಳಿರಬಹುದು, ಎಲ್ಲವನ್ನೂ ನಗುನಗುತ್ತಲೇ ಸ್ವೀಕರಿಸುವ ಸ್ಥಿತ ಪ್ರಜ್ಞ ಮನಸ್ಸು ಗೌಡರದು. ಸಾತ್ವಿಕ ಶಕ್ತಿಯನ್ನು ಎದುರಿಸುವ, ಎದುರಿಗೆ ಗೆಲ್ಲುವ ಶಕ್ತಿಯು ಯಾವ ಎಂಥ ದುಷ್ಟಶಕ್ತಿಗೂ ಇರುವುದಿಲ್ಲ. ಈ ಮಾತು ಡಾ|| ದೊಡ್ಡರಂಗೇಗೌಡರ ಬದುಕಿಗೆ ಅಕ್ಷರಶಃ ಅನ್ವಯಿಸುತ್ತದೆ.

❑



# ಕೋಲುಮಂಡೆ ಜಂಗಮನಿಗೆ

**• ಡಾ. ಆರ್.ಜಿ. ಮಠಪತಿ**

ನಮ್ಮ ನಮ್ಮ ತೆವಲುಗಳಿಗಾಗಿ ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಎಷ್ಟೇ ವಿಂಗಡಿಸಿ, ಪ್ರಶಸ್ತಿ, ಪೀಠಗಳನ್ನು ಸ್ಥಾಪಿಸಿಕೊಂಡರೂ ಅದು ಅವಿಚ್ಛಿನ್ನ, ಶ್ರೇಷ್ಠವಾದುದು, ಸಾರ್ವಕಾಲಿಕ ಮೌಲ್ಯವನ್ನು ಹೊಂದಿರುವುದನ್ನು ನಮ್ಮ ಯಾವ ವಿಮರ್ಶೆಯೂ ಹತ್ತಿಕ್ಕಲಾಗದು ಎನ್ನುವುದಕ್ಕೆ ಪ್ರಗತಿ ಶೀಲ ಸಾಹಿತ್ಯ ಸಂದರ್ಭದ ಅನೇಕ ಜಾಗತಿಕ ಹಾಗೂ ಪ್ರಾದೇಶಿಕ ಬರಹಗಾರರನ್ನೂ ಉದಾಹರಿಸಬಹುದಾಗಿದೆ. ಇದೇ ಹಿನ್ನೆಲೆಯಲ್ಲಿ ಚಿತ್ರರಂಗದಲ್ಲಿ ಇದ್ದುಕೊಂಡು ಆಧುನಿಕರಂತೆ ಅದರ ಉದ್ಯಮ ಸಿದ್ಧಾಂತಕ್ಕೆ ತಮ್ಮ ಬದ್ಧತೆಗಳನ್ನು ಮಾರಿಕೊಳ್ಳದೇ ಎದೆಗೆ ಮುದ ನೀಡುವ, ಕಿವಿಗೆ ಮಧುರ ಎನ್ನಿಸುವ, ಮನುಷ್ಯನ ಹೃದಯ ಸೌಂದರ್ಯವನ್ನು ನೂರ್ಮಡಿಗೊಳಿಸುವ ಗೀತೆಗಳನ್ನು ರಚಿಸಿದ ಕೆಲವೇ ವಿರಳರಲ್ಲಿ ನಮ್ಮ ಪ್ರೀತಿಯ ದೊಡ್ಡರಂಗೇಗೌಡರು ಒಬ್ಬರು. ಅವರು ಚಲನಚಿತ್ರಗಳಿಗಾಗಿಯೇ ಕವಿತೆಗಳನ್ನು ರಚಿಸಿಕೊಂಡು ಬಂದು ವ್ಯಾಪಾರಕ್ಕೆ ಕುಳಿತ ಕವಿಯಲ್ಲ. ಬದುಕಿನ ಗಂಭೀರ ಚಿಂತಕರಾದ ರಂಗೇಗೌಡರು ಜೀವನದ ಅನಿರೀಕ್ಷಿತ ತಿರುವುಗಳಲ್ಲಿ ಯೋಗಾಯೋಗಕ್ಕೆ ಚಿತ್ರರಂಗ ಎಂಬ ಲೋಹ ಚುಂಬನಕ್ಕೆ ಸಿಕ್ಕಿ ಬೆಳಗಾಗುವುದರಲ್ಲಿ ಜನಪ್ರಿಯ ಕವಿಯಾದವರು.

ಮೂಲತಃ ಜನರಂಜನೆಗಾಗಿ ಹುಟ್ಟಿಕೊಂಡ ಚಲನಚಿತ್ರ ಅನಂತರ ಸ್ವಾತಂತ್ರ್ಯೋತ್ತರದಲ್ಲಿ ಈ ದೇಶದ ಒಂದು ಮುಖ್ಯ ಉದ್ಯಮವಾಗಿ ಬೆಳೆದದ್ದು ಸುದೈವವೋ ದುರ್ದೈವವೋ ಅದು ಇನ್ನೂ ನಿರ್ಧಾರವಾಗಬೇಕಾಗಿರುವ ವಿಷಯ. ಆದರೆ ಚಲನಚಿತ್ರಕ್ಕೆ ತೊಡಗಿಸಿಕೊಂಡಿದ್ದರು ಎಂಬ ಕಾರಣಕ್ಕಾಗಿ ನಟಿ ಮೀನಾಕುಮಾರಿಯಲ್ಲಿದ್ದ ಕವಿಯತ್ರಿಯನ್ನು, ಬಲರಾಜ ಸಹಾನಿಯಲ್ಲಿದ್ದ ಒಬ್ಬ ಶಿಸ್ತಿನ ಶಿಕ್ಷಕನನ್ನು, ಮಜರೂಮ ಸುಲ್ತಾನ್‌ಪುರಿ, ಸಾಹಿರ್ ಲಾಧಿಯಾನ್ವಿ ಕೈಫ್, ಫೈಜ್ ಅಹಮದ್ ಫೈಜ್‌ರಲ್ಲಿದ್ದ ಕವಿತ್ವವನ್ನು, ಕೆ.ಎ. ಅಬ್ಬಾಸರಲ್ಲಿದ್ದ ಒಬ್ಬ ಮಾನವತಾವಾದಿ ಸಾಹಿತಿಯನ್ನು ಸಾರಾಸಗಟಾಗಿ ನಿರಾಕರಿಸುವುದು, ಅಥವಾ ಬೇರೆಯಾಗಿ ನೋಡುವುದು ಒಂದು ರೀತಿಯ ಆತ್ಮ ವಂಚನೆ ಎನ್ನದೆ ಇನ್ನೇನನ್ನಲಾದೀತು?

ಹಾಗೆಯೇ ಆರ್.ಎಸ್. ಜಯಗೋಪಾಲ್, ಚಿ. ಉದಯಶಂಕರ್ ಹಾಗೂ ದೊಡ್ಡರಂಗೇಗೌಡರಂಥ ಕೆಲವರನ್ನು ಹೊರತುಪಡಿ ಕನ್ನಡ ಭಾವಗೀತೆ ಸಾಹಿತ್ಯವನ್ನು ಇಡಿಯಾಗಿ ಕಾವ್ಯವನ್ನು ನೋಡುವುದಾದಲ್ಲಿ ಅದೂ ಅಸಹ್ಯಕರವೆ. ಚಿತ್ರ ಸಾಹಿತಿಗಳೂ ಮೂಲತಃ ಸಾಹಿತಿಗಳು ಎಂಬುದನ್ನು ನಾವಿಲ್ಲಿ ಮರೆಯಲಾಗದು. ಜನಪದ, ದಾಸ ವಚನಗಳ ಅಧ್ಯಯನ ಹಿನ್ನೆಲೆಯೊಂದಿಗೆ ದಲಿತ, ಬಂಡಾಯ, ಪ್ರಗತಿಶೀಲ ನವ್ಯ ಹಾಗೂ ನವೋದಯದ ಕಾಲ ಘಟ್ಟದಲ್ಲಿ ಬೆಳೆಯುತ್ತಾ ಕಾವ್ಯ ಸಾಹಿತ್ಯವನ್ನು ನೋಡುತ್ತಲೇ ಒಂದು ಹೊಸ ಮಾರ್ಗ ಕಂಡುಕೊಂಡವರಿವರು. ಕನ್ನಡ ಸಾಹಿತ್ಯದ ಅವಿಭಾಜ್ಯ ಅಂಗವಾಗಿರುವ ದೊಡ್ಡರಂಗೇಗೌಡರು ನನ್ನ ಬಾಲ್ಯದ ಅವಿಭಾಜ್ಯ ಅಂಗವೂ ಆಗಿದ್ದಾರೆ. ಅವರು ನನ್ನ ಕಲ್ಪನಾ ಜಗತ್ತನ್ನು ವಿಸ್ತರಿಸಿದ ಮೊದಲ ಗುರು. ನೆನಪುಗಳು ಬದುಕಿನ ಅಮೋಘ, ಅದ್ಭುತ ಪುಟಗಳು ಎಂದು ನಾವು ಒಪ್ಪುವುದಾದರೆ ನಾನು ನನ್ನ ಬಾಲ್ಯದ ಅಪೂರ್ವ ನೆನಪುಗಳನ್ನು ಇಲ್ಲಿ ಮೆಲುಕು ಹಾಕಬೇಕು. ಮಹಾರಾಷ್ಟ್ರದ ಎದೆಗೆ ಒತ್ತಿಕೊಂಡಂತಿದ್ದ ನನ್ನೂರು ಚಡಚಣದಲ್ಲಿ ಶುದ್ಧ ಕನ್ನಡವನ್ನು ಕೇಳುವುದೇ ಒಂದು ಸಾಧನೆ. ಜೀವನ ವ್ಯವಹಾರಗಳೆಲ್ಲ ಮರಾಠಿಯಲ್ಲಿಯೇ ನಡೆದು ಹೋಗುತ್ತಿದ್ದ ಇಲ್ಲಿ ರೇಡಿಯೋ ಎನ್ನುವುದು ಕನ್ನಡ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆ ಹಾಗೂ ಚರ್ಚೆಗಳಿಗೆ ನಾವು ತೆರೆದುಕೊಂಡ ಬೆಳಕಿಂಡಿಯಾಗಿತ್ತು. ಅದರ ಮೂಲಕವೇ ನಮಗೆ ವಿಶ್ವದರ್ಶನವಾಗಬೇಕು. ಬಯಲಾಟ, ದೊಡ್ಡಾಟ, ಪಾರಿಜಾತ ಹಾಗೂ ತಮಾಷಾದಂಥ ಜನಪದದ ದಾರಿಯಲ್ಲಿ ಲಾವಣಿ, ಬಯಲು ಲಾವಣಿ ಮತ್ತು ಶರ್ಬಲಾಗಳನ್ನು ಮೆಲುಕು ಹಾಕುತ್ತಾ ಬೆಳೆದ ನನಗೆ ಅಥವಾ ನಮಗೆ ಸಿನಿಮಾ ಎಂಬುವುದೊಂದು ಮಾಯಾಲೋಕ. ಹಾಗೆ ನೋಡಿದಲ್ಲಿ ನಮ್ಮೂರಿಗೆ ಸಿನಿಮಾ ಪರಿಚಯಿಸಿದವರಿಗೂ ಕೂಡಾ ಸಿನಿಮಾದ ತಳಬುಡಗಳು ಗೊತ್ತಿರಲಿಲ್ಲ. ಹಾಗಂತಲೇ 'ಬಬ್ರುವಾಹನ'ವನ್ನು ಹಿಂದೆ ಮುಂದಾಗಿಯೂ, 'ಸನಾದಿ ಅಪ್ಪಣ್ಣ'ವನ್ನು ಅಪೂರ್ಣವಾಗಿಯೂ ಪ್ರೇಕ್ಷಕರಿಗೆ ತೋರಿಸುವಂತಹ ಅವಘಡಗಳು ನನ್ನೂರಲ್ಲಿ ಘಟಿಸಿದ್ದನ್ನು ನಾನು ಬಾಲ್ಯದಲ್ಲಿ ನೋಡಿದ್ದೇನೆ. ನಮ್ಮ ಪಾಲಿಗೆ ಸಿನಿಮಾ ಎಂಬುವುದೊಂದು ಹಸಿವು-ನೀರಡಿಕೆಗಳ ಭಯವಿಲ್ಲದವರ ಸೋಲು-ಬಡತನಗಳನ್ನು ಕಂಡರಿಯದವರ, ಕುರೂಪಿ, ಹೊಲಸಿಗರನ್ನು ಒಳಗೊಳ್ಳದೆ ಇರುವವರ ಲೋಕವೇ ಆಗಿತ್ತು. ಕ್ರಾಪ್ ಬಿಟ್ಟವರನ್ನೆಲ್ಲಾ ಸಿನಿಮಾ ನಟರೆಂದೂ ಸುಂದರಿಯರನ್ನೆಲ್ಲಾ ಈ ಮಾಯಾ ಲೋಕದ ಅಪ್ಸರೆಯರೆಂದೂ ಅವರ ಕನಸುಗಳನ್ನು ಕಾಣುತ್ತಲೇ ರಾತ್ರಿಗಳನ್ನು ಕೆಡಿಸಿಕೊಂಡಿದ್ದ ನಮಗೆ ಮತ್ತೆ ಮತ್ತೆ ನೆನಪಾಗುವುದು ಬಾಲ್ಯದಿಂದಲೂ ನನ್ನ ಮನಸ್ಸನ್ನು ಸೆರೆ ಹಿಡಿದ ದೊಡ್ಡರಂಗೇಗೌಡರ ಒಂದು ಗೀತೆ

ಒಲುಮೆ ಸಿರಿಯ ಕಂಡು
ಬಯಕೆ ಸಿಹಿಯ ಉಂಡು
ಪ್ರೀತಿ ಮಾತಾಡಿದೆ.
ಬಾಳು ಶರಣಾಗಿದೆ.

ಚಿತ್ರಸಾಹಿತ್ಯವನ್ನು ಸಾಹಿತ್ಯಲೋಕದಿಂದ ಹೊರಗಿಡುವ ವಿಮರ್ಶಕರಿಗೆ ಬಾಲ್ಯದ ಮಾಧುರ್ಯದ ಸರಿಯಾದ ಅರಿವು ಇದ್ದದ್ದಾದರೆ ಕೆಲವು ಅನ್ಯಾಯಗಳನ್ನು ತಪ್ಪಿಸಬಹುದಾಗಿತ್ತೇನೋ. ನನ್ನ ಪಾಲಿಗೆ ಮಾತ್ರ ಈ ಸಾಹಿತ್ಯವೇ ಬದುಕಿನ ಸರಳತೆಯ ದರ್ಶನವನ್ನು ನೀಡಿದ, ರೂಪ, ಗಂಧ, ವಾಸನೆಯ ಅನುಭವ ನೀಡಿದ, ನನ್ನ ಕಲ್ಪನೆಗೆ ಕೋಡು ಮೂಡಿಸಿದ, ನನ್ನ ಬರಹಕ್ಕೆ ಮೃದುತ್ವ ತುಂಬಿದ ಸಂಜೀವಿನಿಯಾಗಿದೆ. ಪ್ರಯಾಸವಿಲ್ಲದೆಯೆ ಸಂಗಾತಿಯಂತೆ ನಮ್ಮೊಂದಿಗೆ ಇದ್ದು ಒಂದು ಚೆಲುವಿನ ದರ್ಶನ ಮಾಡಿಸುವ ಚಲನ ಚಿತ್ರಗೀತೆಗಳು ನನ್ನ ಸಾಹಿತ್ಯ ಕೃಷಿಯ ಅವಿಭಾಜ್ಯ ಅಂಗಗಳಾಗಿಯೇ ಉಳಿದವು. ಈಗಲೂ ನನ್ನಜ್ಜಿಯ ಹಳ್ಳಿಗೆ ನಾನು ಭೇಟಿ ನೀಡಿದರೆ ಥಟ್ಟನೆ ನೆನಪಾಗುವುದು ದೊಡ್ಡರಂಗೇಗೌಡರ

ಮಲೆನಾಡಿನ್ಮೂಲೆನಾಗೇ .... ಇತ್ತೊಂದು ಸೋಮ್ನಳ್ಳಿ
ಆ ಹಳ್ಳಿ ಎಲ್ಲಾಜನರು .... ಲೋಕಾನೆ ಗೊತ್ತಿಲ್ಲೋದ್ರು
ಅವರೊಳ್ಗೆ ಮುದ್ಕಿ ಒಬ್ಳು .... ಡಾಲಿಂದ್ಲೇ ಮೆರೀತಿದ್ಳು
ಅವಳಂತು ಬೋಫಾಟಿ .... ಜಂಬಗಾತಿ.

ನಾನು ಕಂಡುಂಡ ಅನುಭವವೇ ನಮ್ಮವರೇ ಆದ ಯಾರದೋ ಸಾಲುಗಳಲ್ಲಿ ಒಡಮೂಡಿ ಮತ್ತೆ ನಮ್ಮ ಓದಿನ ತೆಕ್ಕೆಗೆ ಬೀಳುವುದರಲ್ಲಿಯೇ ಅಥವಾ ಥಟ್ಟನೆ ನಮ್ಮನ್ನು ತಡೆದು ನಿಲ್ಲಿಸುವುದರಲ್ಲಿಯೇ ಸಾಹಿತ್ಯದ ಸಾರ್ಥಕ ಅಡಗಿದೆ ಎನ್ನುವುದಾದರೆ ಅಂತಹ ಭಾವವನ್ನು ಅನುಭವಿಸುವ ಅನೇಕ ಸಂದರ್ಭಗಳನ್ನು ದೊಡ್ಡರಂಗೇಗೌಡರ ಸಾಹಿತ್ಯ ನನಗೆ ಒದಗಿಸಿದೆ. ನನ್ನ ಕಡು ಯೌವ್ವನದ ದಿನದಲ್ಲಿ ನನ್ನ ತೋಟದ ತುಂಬಾ ಓಡಾಡುತ್ತಾ ದೊಡ್ಡರಂಗೇಗೌಡರ

ಹೂದೋಟದ ಹಾದಿಯಾಗೆ
ಊರಿನಾಚೆ ತೋಪಿನಾಗೆ
ತಂಗಾಳಿಯು ತೀಡಿದ್ದಾಂಗೆ
ಹೊಂಬಾಳೆಯ ತೂಗಿದ್ದಾಂಗೆ
ನಿನ್ನ ಪ್ರೀತಿ ನೆನಪು ಬಂದಿತೋ
ಬಾಳುವಾಸೆ ಮತ್ತೆ ಉಕ್ಕಿ ಬಂದಿತೋ.

ಎನ್ನುವ ಪದ್ಯ ನೆನಪಿಸಿಕೊಂಡು ನನ್ನ ಪ್ರೀತಿಯ ಗೆಳತಿಯರನ್ನ ಮತ್ತೆ ಮತ್ತೆ ಕರೆದಿದ್ದೇನೆ, ಮಾತಿಗೆ ಮೌನಕ್ಕೆ ಕೆಲವು ಬಾರಿ ಜಗಳಕ್ಕೂ ಕೂಡಾ.

ದೊಡ್ಡರಂಗೇಗೌಡರು ನಮ್ಮಲ್ಲಿ ದೊಡ್ಡವರಾಗಿ ಉಳಿಯುವುದು ಜೀವನ್ಮುಖಿಯಾದ ಅವರ ಕವಿತ್ವದಿಂದ. ಎಲ್ಲಿಯೂ ಸೋಲಿನ ಮಾತನ್ನೇ ಆಡದ ಅವರ ಈ ಭಾವಗೀತೆಯ ಕೊನೆಯ

ಸಾಲು 'ಬಾಳುವಾಸೆ ಮತ್ತೆ ಉಕ್ಕಿಬಂದಿತು' ಎನ್ನುವುದಾಗಲಿ, ಇದೇ ಪದ್ಯದ ಮಧ್ಯ ಎಲ್ಲೋ ಇರುವ 'ಕೊಂಚ-ಕೊಂಚ ಮೋಹ ಉಕ್ಕಿ ಒಸಗೆ ಕರೆಯಿತು' ಎನ್ನುವುದಾಗಲಿ ಜೀವನವನ್ನು ಪ್ರೀತಿಸುವ, ಯಾರನ್ನು ಕೂಡಾ ತಡೆದು ನಿಲ್ಲಿಸುವ ಸಾಲುಗಳೇ. ಅವರ ಭಾವಗೀತೆಯಾಗಲಿ, ಚಿತ್ರಗೀತೆಗಳೇ ಆಗಲಿ ಜೀವನ ಪ್ರೀತಿಯ ಅದಮ್ಯ ಚೈತನ್ಯದಿಂದ ಕಂಪನಗಳೇ ವಿನಹ ಸಂಗೀತಕ್ಕಾಗಿ ಹುಟ್ಟಿದ ಶಬ್ದಗಳ ಹಂದರವಲ್ಲ.

ಬಾಲ್ಯದಿಂದಲೂ ಅವರ ಗೀತೆಗಳ ಧೂಳಿನೊಂದಿಗೆಯೇ ಬೆಳೆದು ದೊಡ್ಡವನಾದ ನನಗೆ ಅವರ ಪರಿಚಯ ಮಾತ್ರ ತುಂಬಾ ತಡವಾಗಿ ಆಯಿತು ಎನ್ನಬೇಕು. ದೂರದ ಹಳ್ಳಿಯಲ್ಲಿ ಗಡಿನಾಡಿಗರಿಗಾಗಿಯೇ 'ಕಲಾ ಗಂಗಾಧರ ಪ್ರಕಾಶನ' ಎಂಬ ಸಣ್ಣ ಪ್ರಕಾಶನ ಸಂಸ್ಥೆಯೊಂದನ್ನು ಪ್ರಾರಂಭಿಸಿದ್ದ ನಾನು ಗೆಳೆಯ ಜಿ.ಎಂ. ಮಲ್ಲಿಕಾರ್ಜುನ ಅವರ 'ಬಾನಂಗಳಕೆ ಬಾಗಿಲತಿ' ಎನ್ನುವ ಹನಿಗವನಗಳ ಸಂಕಲನದ ಮುನ್ನುಡಿಗಾಗಿ ಮತ್ತೊಬ್ಬ ಬೆಂಗಳೂರಿನ ಸ್ನೇಹಿತ ಎಂ. ರವಿಕುಮಾರರ ಮುಖಾಂತರ ದೊಡ್ಡರಂಗೇಗೌಡರನ್ನು ಸಂಪರ್ಕಿಸಿದ್ದು ಈಗ ಒಂದು ಪ್ರೀತಿಯ ನೆನಪು. ನಾವು ಕೇಳಿಕೊಂಡ ಎಂಟೇ ದಿನಗಳಲ್ಲಿ ಸುಂದರವಾದ ಮುನ್ನುಡಿಯೊಂದನ್ನು ಅವರು ಪ್ರೀತಿಯ ಮಹತ್ವವನ್ನು ತಿಳಿಸುತ್ತಾ ಬರೆದು ಕಳುಹಿಸಿದ್ದು ಮಾನವ ಸಂವೇದನೆಗಳಿಗೆ ಸ್ಪಂದಿಸುವ ರೀತಿಯನ್ನು ತೋರಿಸುತ್ತದೆ. ಅಂತಹ ಸಂವೇದನಾಶಾಲಿಯೇ ಅಲ್ಲವೆ ಕವಿಯಾಗುವುದು? ಇತ್ತೀಚೆಗೆ ದಿನಾಂಕ 28-8-2005ರಂದು 'ಒಂದಿಷ್ಟು ಕರುಣೆ ಮತ್ತಷ್ಟು ನೀರು' ಎನ್ನುವ ನನ್ನ ಕವನ ಸಂಕಲನದ ಬಿಡುಗಡೆಗೆ ದೂರದ ಬೆಳಗಾವಿಗೆ ಬಂದಿದ್ದ ಗೌಡರು ಆಡಿದ ಪ್ರೀತಿಯ ಮಾತುಗಳು  ಚಿತ್ರ ಜಗತ್ತಿನಲ್ಲಿಯೂ ಅವರನ್ನೊಬ್ಬ ವಿಶಿಷ್ಟ ಸಾಹಿತಿಯಾಗಿ ಸ್ಥಾಪಿಸುತ್ತದೆ. ಆ ದಿನ ಎತ್ತರದ ಅವರ ಪ್ರೀತಿಯ ಗೆಳೆಯರಾದ ಕವಿ ಬುದ್ದಣ್ಣ ಹಿಂಗಮಿರೆ, ಚೆನ್ನಣ್ಣ ವಾಲಿಕಾರ, ಸರ್ಜು ಕಾಟಕರ, ಚೆನ್ನವೀರ ಕಣವಿಯವರ ನೆನಪುಗಳ ಮೆಲುಕು ಹಾಕುವುದರೊಂದಿಗೆ ಆರಂಭದಲ್ಲಿ ಅವರೊಂದಿಗಿದ್ದ ಪಿ. ಲಂಕೇಶ, ಬರಗೂರು ರಾಮಚಂದ್ರಪ್ಪ, ಜಿ.ಎಸ್. ಶಿವರುದ್ರಪ್ಪ ಹಾಗೂ ಲಕ್ಷ್ಮಿನಾರಾಯಣ ಭಟ್ಟರ ಬಗೆಗೆ ಹೇಳುವುದನ್ನು ಅವರು ಮರೆಯಲಿಲ್ಲ. ಅವರ ಮೊಟ್ಟಮೊದಲನೆಯ ಕತೆ ಬೆಳಗಾವಿಯಿಂದಲೇ ಮುದ್ರಣವಾದದ್ದು ಅವರಿಗೆ ಇಂದಿಗೂ ಖುಷಿ ನೀಡಿದೆ. 1977ಕ್ಕಿಂತಲೂ ಮುಂಚೆ ಕನ್ನಡದ ಪ್ರಮುಖ ನವ್ಯ ಕವಿಗಳೊಂದಿಗಿದ್ದ ಅವರ ಹೆಸರು ಚಿತ್ರಗೀತೆಗಳನ್ನು ಬರೆದರು ಎಂಬ ಕಾರಣಕ್ಕಾಗಿ ಅನಂತರ ಬಿಟ್ಟುಹೋದದ್ದು ಅವರಿಗೆ ಅಪಾರ ನೋವನ್ನು ನೀಡಿದೆ. ಬಹುತೇಕ ಬೆಳಗಾವಿಯ ದೊಡ್ಡರಂಗೇಗೌಡರೊಂದಿಗಿನ ವಿದಾಯದ ಆ ಸಾಯಂಕಾಲವನ್ನು ನನಗೆ ಮರೆಯುವುದಾಗುವುದಿಲ್ಲ. ಬಸ್ಸು ಹತ್ತುವ ಮುಂಚೆ ಆಲಂಗಿಸಿಕೊಂಡು ಅವರು ಹೇಳಿದ ಈ ಮಾತುಗಳು "ರಾಗಂ ನೀವು ಸಮಕಾಲೀನರಿಗಿಂತಲೂ ತುಂಬಾ ಮುಂದೆ ಇದ್ದೀರಿ ಹಾಗೂ ವಿಶಿಷ್ಟವಾಗಿದ್ದೀರಿ. ನಿಮ್ಮ ಪ್ರೀತಿಯ ಅನ್ವೇಷಣೆ ಹೀಗೆಯೇ ನಿರಂತರವಾಗಿರಲಿ. ಮಾತುಗಳನ್ನು ಮೀರಿ ಕವಿ ಬೆಳೆಯಬೇಕು, ಮೌನ ಇಲ್ಲಿ ಗೀತೆ ಹಾಡಬೇಕು" ಎಂದಿದ್ದರು ಅವರು.

ಕವಿತೆಗಿಂತಲೂ ಕವಿ ದೊಡ್ಡವ. ಒಂದು ಬದ್ಧತೆಯ ಬದುಕಿಲ್ಲದ ಯಾವನೂ ಕವಿಯಾಗಿ ಜನಮಾನಸದಲ್ಲಿ ಉಳಿಯಲಾರ. ಸರಳತೆಗೆ ಸ್ನೇಹಪರತೆ, ನಿರಂತರ ಧ್ಯಾನಸ್ಥ ಮನಸ್ಥಿತಿಯ ಗೌಡರು, ಪ್ರೀತಿಯ ಗೌಡರೇ ವಿನಃ ದರ್ಪದ ಗೌಡರಲ್ಲ. ಪ್ರೀತಿ, ಒಲುಮೆ ಹಾಗೂ ಉಪಕೃತಿಯ ಭಾವ ರಂಗೇಗೌಡರ ಪದ್ಯಗಳಲ್ಲಿ ಮತ್ತೆ ಮತ್ತೆ ಕಾಣಸಿಗುವ ವಸ್ತುಗಳು. ಈ ಸಂದರ್ಭದಲ್ಲಿ ಟಿ.ಎಸ್. ನಾಗಾಭರಣ ಅವರ ಸಾಹಿತ್ಯ ಕೃತಿಯನ್ನು ಕುರಿತು ಆಡಿದ ಮಾತುಗಳು ಸ್ಮರಣೀಯ ''ಜನ, ಜನಪದ, ಭೂಮಿ, ಭೂ ಋಣ, ತಾಯಿ, ತಾಯಿ ಋಣ, ಪ್ರಕೃತಿ, ಪ್ರಕೃತಿ ಸೊಬಗು, ಹೆಣ್ಣು, ಹೆಣ್ಣಿನ ಗೌರವ, ಮಣ್ಣು, ಮಣ್ಣಿನ ವಾಸನೆ ಹೀಗೆ ಜೀವನದ ಎಲ್ಲಾ ಪದರಗಳನ್ನು ಹೊಕ್ಕು, ಕೃಷಿ ಮಾಡಿ ಪದ ಹೂರಣವನ್ನು ಜನ ಸಾಮಾನ್ಯರಿಗೆ ಹದವರಿತು ಉಣಬಡಿಸಿದ್ದಾರೆ. ಗ್ರಾಮೀಣ ನಿಲುವಿಗೆ, ಹಳ್ಳಿಗರ ದೇಸಿತನಕ್ಕೆ, ದೈವಭಕ್ತಿಗೆ, ನೈಜತೆಗೆ, ಉಡುಗೆ-ತೊಡುಗೆಗಳಿಗೆ, ಭಾವೈಕ್ಯತೆಗೆ, ಮೀನು ನೀರಿನಲ್ಲಿ ಈಜುವಷ್ಟೇ ಸಹಜವಾಗಿ ಸ್ಪಂದಿಸಿ ಕಥಾ ಹಂದರಕ್ಕೆ ಸುಂದರವಾಗಿ ಹೆಣೆದುಕೊಳ್ಳುವಂತೆ ಸಾಹಿತ್ಯ ರಚನೆ ಮಾಡುವುದು ಗೌಡರಿಗೆ ಒಂದು ಸಹಜ ಕ್ರಿಯೆ. ಇವು ಅತಿಶಯೋಕ್ತಿಯ ಮಾತುಗಳೇನು ಅಲ್ಲ.

ಈ ಗಾಳಿ ಈ ನೀರು ನನ್ನ ಒಡಲು
ಈ ಬೀದಿ ಈ ಮನೆಯೇ ನನ್ನಯ ತೊಟ್ಟಿಲು
ಈ ಮಾಚ ಈ ಕೆಂಚ ಎಲ್ಲಾ ಹೆಸರು
ಎಂದೆಂದೂ ನನ್ನೆದೆಯ ಹಚ್ಚನೆಯ ಹಸಿರು

-ಎಂದು ಎಲ್ಲರನ್ನೂ, ಎಲ್ಲವನ್ನೂ ಬಾಚಿ ತಬ್ಬುವ ದೊಡ್ಡರಂಗೇಗೌಡರ ಕಾವ್ಯ, ವಿಶ್ವವೇ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ ಎನ್ನುವ ನೆಲೆಯಲ್ಲಿ ಅರ್ಥೈಸಿಕೊಳ್ಳಬೇಕಾದ ಸಾಲುಗಳು. ಇಂದಿನ ಪಾಶ್ಚಾತ್ಯ ಸಂಗೀತದ ಅಬ್ಬರಕ್ಕೆ ಅಥವಾ ಟ್ರ್ಯಾಕ್‌ಗೆ ಭಾವವನ್ನೇ ಬಲಿಕೊಟ್ಟು, ಕರ್ಣಕಠೋರ, ಅಶ್ಲೀಲ ಗೀತೆಗಳನ್ನೂ ರಚಿಸುವ ಹಲವರನ್ನು ಕೇಳಿದಾಗ ಎಲ್ಲೋ ದೂರದಲ್ಲಿ ಗಂಟೆಯ ನಾದ ಉಲಿಯುವಂತೆ ಹುಟ್ಟಿಕೊಂಡ ದೊಡ್ಡರಂಗೇಗೌಡರ ಸಾಹಿತ್ಯದ ಶ್ರೀಮಂತಿಕೆ ಅರ್ಥವಾದೀತು.

ಒಂದು ನಿಶ್ಚಿತ ಉದ್ದೇಶಕ್ಕಾಗಿ ಸಾಹಿತ್ಯ ರಚಿಸಿದರು ಎಂಬ ಕಾರಣಕ್ಕೆ ಶಿಕ್ಷೆ ಸಿಗುವುದೇ ಆದಲ್ಲಿ ಹೆಮಿಂಗ್ವೆ, ಟಾಲ್‌ಸ್ಟಾಯ್, ಪ್ರೇಮ ಚಂದ, ಅಬ್ಬಾಸ್, ಗುಲ್ಜಾರ್‌ರಿಗೆ ಸಿಗುವ ಶಿಕ್ಷೆಯೇ ನಮ್ಮ ದೊಡ್ಡರಂಗೇಗೌಡರಿಗೂ ಸಿಗಲಿ. ಅಂಥ ಶಿಕ್ಷೆಗೂ ಒಂದು ಅರ್ಥ ಹಾಗೂ ಗೌರವವಿದೆ. ಪ್ರೀತಿಯಲ್ಲಿ ಎಲ್ಲವೂ, ಎಲ್ಲರೂ ನಮ್ಮವರೆ, ಸ್ವಾರ್ಥದಲ್ಲಿ ಮಾತ್ರ ಹತ್ತಾರು ಪೀಠ ಹಾಗೂ ಪ್ರತ್ಯೇಕತೆಗಳು. ದೊಡ್ಡರಂಗೇಗೌಡರು ತಮ್ಮ ನಿರಂತರ ಸಾಹಿತ್ಯ ಕೃಷಿಯ ಮೂಲಕ ಪ್ರೀತಿ ಹಂಚುತ್ತ ಸಾಗಿದ ಜಂಗಮ. ನೀವು ನಿಮ್ಮದೆಲ್ಲವನ್ನು ಅವರ ಜೋಳಿಗೆಗೆ ಹಾಕಬಹುದು. ಅಲ್ಲಿ ಎಲ್ಲವನ್ನೂ ಕಲಸುಮೇಲೋಗರವಾಗಿಸಿ ಈ ಜಂಗಮ ಮತ್ತೆ ನಿಮಗೇ ಮರಳಿಸುತ್ತಾನೆ ಮೃಷ್ಟಾನ್ನವಾಗಿ.





# ಸಮರ್ಥ ಪತ್ರಕರ್ತರಾಗಿ.....

● ಮೇಲುಕೋಟೆ ವಿ.ಎನ್. ಗೌಡ

ಕನ್ನಡ ಸಾರಸ್ವತ ಲೋಕದಲ್ಲಿ ಡಾ|| ದೊಡ್ಡರಂಗೇಗೌಡರದು ಬಹು ದೊಡ್ಡ ಹೆಸರು. ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಅವರ ಲೇಖನಿ ಬರೆಯದ ವಿಷಯವಿಲ್ಲ. ಗದ್ಯ, ಪದ್ಯ, ಕಾವ್ಯ, ವಿಮರ್ಶೆ, ವ್ಯಕ್ತಿ ಚಿತ್ರ, ಚಿತ್ರಸಾಹಿತ್ಯ, ಚಿತ್ರಗೀತೆ...... ಈ ಎಲ್ಲ ಕ್ಷೇತ್ರಗಳಲ್ಲಿ ಗೌಡರು ಪರಿಣತರೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಆದರೆ **'ಪತ್ರಕರ್ತ'**ರಾಗಿಯೂ ದೊಡ್ಡರಂಗೇಗೌಡರದು ಬಹುದೊಡ್ಡ ಹೆಸರು ಎಂದರೆ ಬಹುತೇಕರಿಗೆ ಅಚ್ಚರಿಯಾದೀತೇನೋ. ಹೌದು, ಪತ್ರಿಕೋದ್ಯಮಿಯಾಗಿ, ಸಮರ್ಥ ಪತ್ರಕರ್ತರಾಗಿ ದೊಡ್ಡರಂಗೇಗೌಡರು ಸವೆಸಿದ ಹಾದಿ ಕಡಮೆಯೇನಲ್ಲ.

ಸಿನಿಮಾ ಮತ್ತು ಸಾಹಿತ್ಯ ಕ್ಷೇತ್ರದಲ್ಲಿನ ಸಾಧನೆ ಇವರಿಗೆ ಖ್ಯಾತಿಯನ್ನು, ಹೆಸರನ್ನು ತಂದುಕೊಟ್ಟಿದ್ದು ನಿಜವಾದರೂ ತಮ್ಮ ತಾರುಣ್ಯದಲ್ಲಿಯೇ ಪತ್ರಿಕಾರಂಗಕ್ಕೆ ಧುಮುಕಿ, ಸಮರ್ಥ ಪತ್ರಕರ್ತರಾಗಿ ಖ್ಯಾತಿಗೊಂಡವರು ಗೌಡರು. ಕನ್ನಡ ಸಾರಸ್ವತ ಲೋಕದಲ್ಲಿ ಎಂತೋ, ಅಂತೆಯೇ ಕನ್ನಡ ಪತ್ರಿಕೋದ್ಯಮದಲ್ಲಿಯೂ ತೊಡಗಿಕೊಂಡು ಓದುಗರ ಮನಸೂರೆಗೊಂಡ ಗೌಡರು, ಅದು ಸಂಪಾದಕೀಯ ಇರಬಹುದು, ಅಗ್ರ ಲೇಖನವೇ ಇರಬಹುದು.... ಎಲ್ಲಕ್ಕೂ ಎತ್ತಿದ ಕೈ ಎನಿಸಿದ್ದರು. ವಿಷಯ ವಿಸ್ತಾರ, ವಿಚಾರ ಪ್ರಚೋದನೆ, ತಮ್ಮದೇ ಶೈಲಿಯ ನುಡಿಗಟ್ಟುಗಳ ಬಳಕೆ ಇವರ ಹೆಗ್ಗಳಿಕೆಯಾಗಿತ್ತು. ಅದರಲ್ಲೂ ಇವರ ವ್ಯಕ್ತಿಚಿತ್ರಗಳು ಚಿತ್ತಾಕರ್ಷಕ. ಮೃದು ಮಾತುಗಳ, ಸುಲಲಿತ ಶೈಲಿಯ ಬರವಣಿಗೆಯಾದರೂ ಕನ್ನಡದ ವಿಷಯದಲ್ಲಿ ಮಾತ್ರ ತೀವ್ರ ಮೊನಚು.

ದೊಡ್ಡರಂಗೇಗೌಡರ ತಂದೆ ಕನ್ನಡ ಪಂಡಿತರು. ಹಾಗಾಗಿ ಸಾಹಿತ್ಯದ ಬಗೆಗಿನ ಆಸಕ್ತಿ ಇವರಿಗೆ ತಂದೆಯದೇ ಬಳುವಳಿ. ಆದರೂ ಗೌಡರ ತಂದೆಗೆ ತಮ್ಮ ಮಗ ಕನ್ನಡ, ಸಾಹಿತ್ಯ.... ಅಂತೆಲ್ಲಾ ಹೋದರೆ ಮುಂದೆ ಹೊಟ್ಟೆಪಾಡು ನಡೆಯುವುದಿಲ್ಲ ಎಂಬ ನಂಬಿಕೆ. ಹಾಗಾಗಿಯೇ ಗೌಡರನ್ನು ನೀನು ವಿಜ್ಞಾನವನ್ನು ಓದಿ ಜೀವನ ರೂಪಿಸಿಕೋ ಎಂದು ಬಿ.ಎಸ್ಸಿಗೆ ಸೇರಿಸಿದ್ದರು. ಆದರೆ

ಗೌಡರಿಗೋ ಸಾಹಿತ್ಯದ ಕಡೆಗೆ ಸೆಳೆತ, ಸಾಹಿತ್ಯವನ್ನು ಬದುಕಿನ ಮಾಧ್ಯಮವನ್ನಾಗಿ ಮಾಡಿಕೊಳ್ಳಬೇಕೆಂಬ ತುಡಿತ.

ಆಗ ತುಮಕೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯುತ್ತಿದ್ದ ಸಂದರ್ಭ. ಅದರ ಅಧ್ಯಕ್ಷರಾಗಿದ್ದವರು ಖ್ಯಾತ ಸಾಹಿತಿ, ಕವಿ, ವಿಮರ್ಶಕರಾದ ಡಾ॥ ರಂ.ಶ್ರೀ. ಮುಗಳಿ ('ರಸಿಕ ರಂಗ') ಅವರು. ಆ ಸಮ್ಮೇಳನದಲ್ಲಿ ಸ್ವಯಂ ಸೇವಕರಾಗಿ ಓಡಾಡಿಕೊಂಡಿದ್ದ ದೊಡ್ಡರಂಗೇಗೌಡರನ್ನು ರಂ.ಶ್ರೀ. ಮುಗಳಿ ಅವರ ಭಾಷಣ ಸೂಜಿಗಲ್ಲಿನಂತೆ ಸೆಳೆಯಿತು. ಮುಗಳಿ ಅವರ ಮಾತು, ವ್ಯಕ್ತಿತ್ವದಿಂದ ಪ್ರಭಾವಿತಗೊಂಡ ಗೌಡರು ಬಿ.ಎಸ್ಸಿಯನ್ನು ಮುಗಿಸಿದ ಮೇಲೆ ಮತ್ತೆ ಬಿ.ಎ.ಗೆ ಸೇರಿಕೊಂಡು ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಸೇವೆ ಸಲ್ಲಿಸಬೇಕೆಂದು ಅಂದೇ ನಿರ್ಧಾರ ಮಾಡಿದರು.

ಪಿ.ಯು.ಸಿ. ಓದುತ್ತಿದ್ದಾಗಲೇ ಗೌಡರಿಗೆ ಪತ್ರಿಕೋದ್ಯಮದ ಬಗ್ಗೆ ಒಲವು ಮೂಡಿತ್ತು. ಬಿ.ಎಸ್ಸಿ ವಿದ್ಯಾರ್ಥಿಯಾಗಿದ್ದಾಗಲೇ ಗೌಡರು ಬೆಂಗಳೂರಿನಿಂದ ಪ್ರಕಟಗೊಳ್ಳುತ್ತಿದ್ದ 'ಗೋಕುಲ' ಎಂಬ ಪತ್ರಿಕೆಗೆ ಒಂದು ವರ್ಷಕಾಲ ಕವಿ ಕಾವ್ಯ ವಿಚಾರಗಳನ್ನು **'ಮನುಜ'** ಕಾವ್ಯನಾಮದಿಂದ ಬರೆದು ಸಾಹಿತ್ಯಾಸಕ್ತರ ಗಮನ ಸೆಳೆದಿದ್ದರು.

ಪ್ರಾರಂಭದಲ್ಲಿ ಇಂಗ್ಲೀಷ್‌ನಲ್ಲಿ ಬರೆದರಷ್ಟೆ ಶ್ರೇಷ್ಠ ಎಂಬ ಭ್ರಮೆಗೆ ಒಳಗಾಗಿದ್ದ ಗೌಡರು 1961ರಲ್ಲಿಯೇ ಇಂಗ್ಲೀಷ್‌ನಲ್ಲಿ ಕವಿತೆಗಳನ್ನು ಬರೆಯಲಾರಂಭಿಸಿದ್ದರು. ಇವರ ಇಂಗ್ಲಿಷ್ ಕವಿತೆಗಳು ಅಂತರಾಷ್ಟ್ರೀಯ ಪತ್ರಿಕೆ 'Literaty Half Yearly'ಯಲ್ಲಿ ಪ್ರಕಟವೂ ಆಗಿದ್ದವು. ಆದರೆ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಮಾಡುವಾಗ ಇವರಿಗೆ ವಾಸ್ತವದ ಅರಿವಾಯಿತು. ಆ ನಂತರದ ವಿದ್ಯಾರ್ಥಿ ದೆಸೆಯಲ್ಲಿ ಗೌಡರು ಶೂದ್ರ, ಮುಕ್ತ, ಅಂಕಣ.... ಮುಂತಾದ ಪತ್ರಿಕೆಗಳಿಗೆ ನಿರಂತರವಾಗಿ ಬರೆಯತೊಡಗಿದರು. ಜೊತೆಗೆ ಒಂದುವರ್ಷ 'B.S. Comunications' ಪದವಿಗಾಗಿ ಅಧ್ಯಯನ ಮಾಡಿ ಕನ್ನಡ ಪತ್ರಿಕೋದ್ಯಮದಲ್ಲಿ ಅಪಾರ ಅನುಭವ ಗಳಿಸಿಕೊಂಡರು.

ಪತ್ರಿಕೆಗಳಿಗೆ ಬರೆದಂತೆಲ್ಲಾ ಗೌಡರಿಗೆ ಪತ್ರಿಕೋದ್ಯಮದ ಬಗ್ಗೆ ಒಲವು ಹೆಚ್ಚಾಯಿತು. ತಾವೇ ಸ್ವತಃ ಒಂದು ಪತ್ರಿಕೆಯನ್ನು ಹೊರಡಿಸಬೇಕೆಂಬ ತುಡಿತ ಜಾಸ್ತಿಯಾಯಿತು. ಗೆಳೆಯರನ್ನು ಒಂದುಗೂಡಿಸಿಕೊಂಡ ಗೌಡರು ತುಮಕೂರಿನಿಂದ ವಾರಪತ್ರಿಕೆಯನ್ನು ಹೊರತರುವ ಸಾಹಸಕ್ಕೆ ಕೈಹಾಕಿ 'ಬೃಂದಾವನ' ಎಂಬ ಪತ್ರಿಕೆಯನ್ನು ಹೊರತಂದರು.

ದೊಡ್ಡರಂಗೇಗೌಡ, ಟಿ.ಎಸ್. ಲೋಹಿತಾಕ್ಷ, ಸ್ವಾಮಿ ವಿವೇಕಾನಂದ, ತಾ.ನಂ. ಕುಮಾರಸ್ವಾಮಿ, ವೇಣುಗೋಪಾಲ – ಈ ಐವರೂ ಗೆಳೆಯರು ಸೇರಿ ಪ್ರಕಟಿಸಲಾರಂಭಿಸಿದ

**'ಬೃಂದಾವನ'** ಪತ್ರಿಕೆ ಹಲವು ಯುವ ಕವಿಗಳನ್ನು, ಬರಹಗಾರರನ್ನು ಪರಿಚಯಿಸಿದ ಕೀರ್ತಿಗೆ ಪಾತ್ರವಾಯಿತು. ಅನ್ಯಾಯದ ವಿರುದ್ಧ ಎಚ್ಚರಿಕೆಯ ಗಂಟೆಯನ್ನು ಭಾರಿಸುತ್ತಲೇ ಸಾಹಿತ್ಯ ಪ್ರೇಮಿ ಪತ್ರಿಕೆಯಾಗಿ ರೂಪುಗೊಂಡ ಈ ಪತ್ರಿಕೆ ಅಪಾರ ಜನಮನ್ನಣೆ ಪಡೆಯಿತು.

ಸಂಪಾದಕ ಬಳಗದ ಮುಂಚೂಣಿಯಲ್ಲಿದ್ದ ಗೌಡರು ಅಗಸ್ತ್ಯ ಮನುಜ, ಮಣ್ಣಿನ ಮಗ, ದೊಡ್ಡರಂಗೇಗೌಡ, ಮಧುಕರ.... ಮುಂತಾದ ಹೆಸರುಗಳಿಂದ ಬರೆಯುತ್ತಿದ್ದರು. ಹಿರಿಯ ಪತ್ರಕರ್ತರಾದ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಜಯದೇವಪ್ಪ ಅವರ ಮಾರ್ಗದರ್ಶನದಲ್ಲಿ ಗೌಡರ ಪ್ರತಿಭೆ **'ಬೃಂದಾವನ'**ದಲ್ಲಿ ಪ್ರಜ್ವಲಗೊಳ್ಳುತ್ತಿತ್ತು. ಸ್ವಭಾವದಲ್ಲಿ ಉದಾರಿಯಾದರೂ ಗೌಡರು ಅಷ್ಟೇ ಧೈರ್ಯಶಾಲಿ. ಹಾಗಾಗಿ ತಮಗೆ ನ್ಯಾಯವೆಂದು ತೋರಿದ್ದನ್ನು ನಿರ್ದಾಕ್ಷಿಣ್ಯವಾಗಿ ಬರೆಯುತ್ತಿದ್ದರು. ತುಮಕೂರಿನಂತಹ ಜಿಲ್ಲಾ ಕೇಂದ್ರದಲ್ಲಿ ಈ ಪತ್ರಿಕೆಯ ಪ್ರಸರಣ ಸಂಖ್ಯೆ ಐದುಸಾವಿರಕ್ಕೇರಿದ್ದು ಸಾಮಾನ್ಯ ಸಂಗತಿಯಲ್ಲ. ಸ್ನೇಹಿತರ ಜೊತೆ ಸೇರಿ ಪತ್ರಿಕೆಯನ್ನು ಪ್ರಕಟಿಸಿ ಯಶಸ್ಸನ್ನು ಪಡೆದರಾದರೂ, ಆರ್ಥಿಕವಾಗಿ ಗರಿಗಟ್ಟದೆ ಬಾಲಗ್ರಹ ಪೀಡೆಗೆ ಒಳಗಾದ ಕಂದಮ್ಮನಂತೆ ಸೊರಗಿದ ಪತ್ರಿಕೆ ಆರ್ಥಿಕ ತೊಂದರೆಯಿಂದಾಗಿ ನಿಂತುಹೋಯಿತು.

ಕೆಲವು ಪತ್ರಕರ್ತರು ತಮ್ಮ ಸರ್ವಸ್ವವನ್ನು ಪತ್ರಿಕೆಗಳಿಗೆ ವಿನಿಯೋಗಿಸುತ್ತಾರೆ. ಆರ್ಥಿಕವಾಗಿ ಯಶಪಡೆಯಲಾಗದಿದ್ದರೂ ನೈತಿಕವಾಗಿ ಬಸವಳಿಯುವುದಿಲ್ಲ. ಅಂತೆಯೇ ಗೌಡರು ತುಮಕೂರನ್ನು ಬಿಟ್ಟು ಬೆಂಗಳೂರಿಗೆ ಬಂದಮೇಲೆ ಅಂಚೆ ಇಲಾಖೆಯಲ್ಲಿ ನೌಕರಿಗೆ ಸೇರಿದರು. ನೌಕರಿ ಯಾವುದಾದರೂ ಇವರಲ್ಲಿ ಸಾಹಿತ್ಯದ, ಪತ್ರಿಕೋದ್ಯಮದ ಸೆಳೆತ ಕಡಮೆಯಾಗಿರಲಿಲ್ಲ. ಆನಂತರ **'ಅಕಾವ್ಯ'** ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಸಂಪಾದಕರಾಗಿದ್ದ ಗೌಡರೊಂದಿಗೆ ಸಹ ಸಂಪಾದಕರಾಗಿ ಡಾ॥ ಚಂದ್ರಶೇಖರ ಕಂಬಾರ, ಸಿಂಹ ಕೊಳ್ಳೆಗಾಲ ಕೈ ಜೋಡಿಸಿದ್ದರು.

**'ಅಕಾವ್ಯ'** ಪತ್ರಿಕೆ ಪ್ರಾರಂಭವಾಗಿ ಒಂದು ಹೊಸ ಆಂದೋಲನವನ್ನೇ ಸೃಷ್ಟಿಸಿತು. ಅನೇಕ ವಾದ, ವಿವಾದಗಳನ್ನು ಸೃಷ್ಟಿಮಾಡಿದ ಈ ಪತ್ರಿಕೆ ಕನ್ನಡ ಜನತೆಯ ಗಮನವನ್ನು ಸೆಳೆದಿತ್ತು. ಪಿ. ಲಂಕೇಶ್, ಜಿ.ಎಸ್. ಶಿವರುದ್ರಪ್ಪ, ಯು.ಆರ್. ಅನಂತಮೂರ್ತಿ ಮುಂತಾದ ದಿಗ್ಗಜರೆಲ್ಲ ಈ ಪತ್ರಿಕೆಗೆ ಬರೆಯುತ್ತಿದ್ದುದು ಈ ಪತ್ರಿಕೆ ಗಳಿಸಿದ್ದ ಜನಪ್ರೀತಿಗೆ ಸಾಕ್ಷಿಯಾಗಿತ್ತು. ಅನೇಕ ಯುವ ಕವಿಗಳನ್ನು ಬೆಳಕಿಗೆ ತಂದ ಹೆಮ್ಮೆ ಈ ಪತ್ರಿಕೆಯದು. ಹೆಚ್.ಎಸ್. ಶಿವಪ್ರಕಾಶ್ ಅವರ ಮೊದಲ ಪದ್ಯವನ್ನು ಪ್ರಕಟಿಸಿದ ಕೀರ್ತಿ 'ಅಕಾವ್ಯ'ಕ್ಕೆ, ತನ್ಮೂಲಕ ಗೌಡರಿಗೂ ಸಲ್ಲಬೇಕು. ಆದರೆ **'ಬೃಂದಾವನ'**ದಂತೆಯೇ **'ಅಕಾವ್ಯ'**ವೂ ಚಂದಾದಾರರ ಕೊರತೆಯಿಂದ, ಆರ್ಥಿಕ ತೊಂದರೆಯಿಂದ ಪ್ರಕಟಣೆಯನ್ನು ನಿಲ್ಲಿಸಿತು.

ಪತ್ರಿಕೆಗಳನ್ನು ಪ್ರಕಟಿಸಿ ಜನಮನ್ನಣೆ ಪಡೆದಿದ್ದ ಗೌಡರು **'ಪ್ರಜಾವಾಣಿ'** ಪತ್ರಿಕೆಯಲ್ಲಿ ಮೂರು ತಿಂಗಳ ಕಾಲ ಕಾರ್ಯನಿರ್ವಹಿಸಿದ್ದಾರೆ. ದೇಶಾದ್ಯಂತ 'ನವ ನಿರ್ಮಾಣ' ಚಳವಳಿ ಹಬ್ಬಿದ್ದ ಸಮಯ ಅದು. ಮೇಧಾವಿ ಜಯಪ್ರಕಾಶ್ ನಾರಾಯಣ್ ಅವರು ಚಳವಳಿಯ ಮುಂಚೂಣಿಯಲ್ಲಿದ್ದರು. ಅವರು ಬೆಂಗಳೂರಿಗೆ ಬಂದಾಗ ನ್ಯಾಷನಲ್ ಕಾಲೇಜು ಮೈದಾನದಲ್ಲಿ ಐತಿಹಾಸಿಕ ಸಮಾರಂಭ ಏರ್ಪಾಟಾಗಿತ್ತು. ಆ ಸಮಾರಂಭದ ವರದಿ ಮಾಡುವ ಹೊಣೆ ದೊಡ್ಡರಂಗೇಗೌಡರು ಹಾಗೂ ಶ್ರೀಧರ್ ಆಚಾರ್ ಅವರ ಪಾಲಿಗೆ. ಸಮಾರಂಭದ ಮಹತ್ವವನ್ನರಿತು ಗೌಡರು ಮಾಡಿದ ವರದಿ ಜನಮನವನ್ನು ಸೆಳೆದಿತ್ತು. ಪತ್ರಿಕೆಯ ಹಿರಿಯರೆಲ್ಲ ಪತ್ರಕರ್ತನಾಗಿ ಉನ್ನತ ಸ್ಥಾನಕ್ಕೇರಬಲ್ಲ ಎಲ್ಲ ಲಕ್ಷಣಗಳಿವೆ ಎಂದು ಬೆನ್ನು ತಟ್ಟಿದ್ದರು. (ಪ್ರೊ॥ ಎ.ಇ. ಈಫನ್ ಹಾಗೂ ಬಿ.ಎ. ಶ್ರೀಧರ ಅವರ ಪ್ರೋತ್ಸಾಹವನ್ನು ಗೌಡರು ಈಗಲೂ ಸ್ಮರಿಸಿಕೊಳ್ಳುವುದನ್ನು ಕಂಡಿದ್ದೇನೆ)

1964ರಲ್ಲಿಯೇ "ಆಥರ್ಸ್ ವರ್ಕ್‌ಶಾಪ್ 'IS' (ಮಾಸಿಕ) ಪ್ರಾರಂಭಿಸಿ ಸಾಹಸ ಮೆರೆದಿದ್ದ ಗೌಡರ ಕಾರ್ಯಕ್ಷೇತ್ರ ಬಹುವಿಸ್ತಾರ. ಗೌಡರು ಬೆಂಗಳೂರು ವಿಶ್ವವಿದ್ಯಾಲಯದ **'ಜ್ಞಾನ ಭಾರತಿ ಸಮಾಚಾರ'** ಕನ್ನಡ ಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸಿ ವರ್ಷಕಾಲ ಅದರಲ್ಲೇ ತೊಡಗಿಕೊಂಡು ಅದಕ್ಕೊಂದು ಸ್ಪಷ್ಟ ರೂಪವನ್ನು ಕೊಟ್ಟಿದ್ದರು.

ಜೀವನದಲ್ಲಿ ಶಿಸ್ತಿಗೆ, ಚೊಕ್ಕಟತನಕ್ಕೆ ಹೆಸರಾದ ಗೌಡರು ಇತರರೆಲ್ಲರಿಗೂ ಆದರ್ಶಪ್ರಾಯರು. ಇವರ ನಡೆ ನೇರ. ಅಂತೆಯೇ ನುಡಿಯೂ ಸಹ. ಮಾತಿನಲ್ಲಿ ಒಂದು ಮನಸ್ಸಿನಲ್ಲಿ ಮತ್ತೊಂದು ಜಾಯಮಾನದವರಲ್ಲ. ಸಾಹಿತ್ಯಕವಾಗಿ ಉನ್ನತೋನ್ನತ ಸ್ಥಿತಿಗೆ ಏರಿದಂತೆಲ್ಲಾ ದೇಶ ವಿದೇಶಗಳನ್ನೆಲ್ಲ ಸುತ್ತಿ ಸಮಾಜ, ಸಮುದಾಯ, ಜೀವನ ಸಂಸ್ಕೃತಿಗಳನ್ನು, ಕಲೆ ಕೌಶಲ್ಯಗಳನ್ನು ಅಭ್ಯಸಿಸಿದ್ದಾರೆ; ಆಳವಾಗಿ ಅರಿತಿದ್ದಾರೆ. ತಾವು ಕಂಡ ಜೀವನದ ಅನುಭವದ ಸಾರವನ್ನು ಜನತೆಗೆ ನೀಡುತ್ತಿರುವ ಗೌಡರು ಜನಮಾನಸದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ನಾಡಿನ ಎಲ್ಲಾ ಪತ್ರಿಕೆಗಳಲ್ಲಿ ಇವರ ಲೇಖನ, ವಿಮರ್ಶೆ, ಕಾವ್ಯ..... ಮುಂತಾದವು ಪ್ರಕಟಗೊಳ್ಳುತ್ತಲೇ ಇವೆ.

ಗೌಡರು **'ರಾಗ ಸಂಗಮ'** ಪತ್ರಿಕೆಯ ಅಂಕಣಕಾರರಾಗಿ (ವಿಚಾರ ವೀಚಿ) ಸುದೀರ್ಘಕಾಲ ಬರೆದಿದ್ದಾರೆ. **ಸಂಯುಕ್ತ ಕರ್ನಾಟಕ** ಪತ್ರಿಕೆಯ 'ಸಾಹಿತ್ಯ ಶರಧಿ' ಅಂಕಣದಲ್ಲಿ ಹಾಗೂ **ಉಷಾಕಿರಣ** ಪತ್ರಿಕೆಯ 'ನೆನೆ ನೆನೆ ಇವರ' ಅಂಕಣದಲ್ಲಿ ಕನ್ನಡ ನಾಡು ನುಡಿಗೆ ದುಡಿದ ಚೇತನಗಳನ್ನು ಕುರಿತು ಗೌಡರು ಬರೆಯುತ್ತಿರುವ ವ್ಯಕ್ತಿಚಿತ್ರಗಳು ಅಪಾರ ಜನಮನ್ನಣೆ ಗಳಿಸಿವೆ. **ಪ್ರಜಾಮತ** ಪತ್ರಿಕೆಯ 'ವಿಶ್ವಮುಖಿ' ಅಂಕಣದಲ್ಲಿ, **'ವಿನೋದ'** ಪತ್ರಿಕೆಯ 'ಮಣ್ಣಿನ ಮಾತುಗಳು' ಅಂಕಣದಲ್ಲಿ, ಶಿಕ್ಷಣ ಇಲಾಖೆಯ ಶಿಕ್ಷಣ ಸಮಾಚಾರ ಪತ್ರಿಕೆಯ 'ಜ್ಞಾನದೀಪ್ತಿ' ಅಂಕಣದಲ್ಲಿ, **ಜಾಣಗೆರೆ ಪತ್ರಿಕೆ**ಯ 'ವರ್ತಮಾನದ ವ್ಯಂಗ್ಯದಲ್ಲಿ' ಅಂಕಣದಲ್ಲಿ, ದಾವಣಗೆರೆ

ಸಮಾಚಾರ ಪತ್ರಿಕೆಯ 'ನಾಡಾಡಿ ನುಡಿ' ಅಂಕಣದಲ್ಲಿ..... ಹೀಗೆ ಹಲವಾರು ಪತ್ರಿಕೆಗಳ ಅಂಕಣಕಾರರಾಗಿ ಸತತವಾಗಿ ಬರೆಯುತ್ತಿದ್ದಾರೆ; ಪತ್ರಿಕೆಗಳ ಸತತ ಸಂಪರ್ಕದಲ್ಲಿದ್ದಾರೆ.

ಬೆಂಗಳೂರಿನ ಎಸ್.ಎಲ್.ಎನ್. ಕಾಲೇಜಿನ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಮೂರು ದಶಕಗಳಿಗೂ ಹೆಚ್ಚುಕಾಲ ಸಾಹಿತ್ಯ ಸರಸ್ವತಿಯ ಸೇವೆ ಗೈದಿರುವ ಗೌಡರು ಅಸಂಖ್ಯಾತ ವಿದ್ಯಾರ್ಥಿಗಳ ನೆಚ್ಚಿನ 'ಗುರು'ವಾಗಿದ್ದಾರೆ. ಲಿ.ನ. ವಿದ್ಯಾಸಂಸ್ಥೆಯ ವಾರ್ಷಿಕ ಸಂಚಿಕೆ **'ಚೈತ್ರ'**ದ ಸಂಪಾದಕರಾಗಿ ಇಪ್ಪತ್ತೊಂಬತ್ತು ಸಂಚಿಕೆಗಳನ್ನು ಪ್ರಕಟಿಸಿ ಅವುಗಳನ್ನು ವಿದ್ಯಾರ್ಥಿಗಳ ಬಾಳಿನ 'ದಾರಿ ದೀಪ'ವನ್ನಾಗಿ ರೂಪಿಸಿದ್ದಾರೆ. **'ಚೈತ್ರ'**, ಸಂಚಿಕೆಗಳ ಮೂಲಕ ಬುಕ್ಕಾಪಟ್ಟಣವಾಸು, ಭುವನೇಶ್ವರಿ, ಅ.ನಾ. ಜಾದವ್, ಜಿ.ಆರ್. ಮಹಾಲಿಂಗ, ಸೋಮಶೇಖರ್, ರಾಮಪ್ರಕಾಶ್, ತುಳಸೀರಾಮಶೆಟ್ಟಿ, ಕೊಣ್ಣೂರು ಮಹಾದೇವ್ ಮುಂತಾದ ಇಪ್ಪತ್ತು ಮಂದಿ ಕವಿಗಳನ್ನು ಬೆಳಕಿಗೆ ತಂದ ಕೀರ್ತಿ ಗೌಡರದು.

ಎಸ್.ಎಲ್.ಎನ್. ಕಾಲೇಜಿನ ಪ್ರಾಂಶುಪಾಲ ಹುದ್ದೆಯಿಂದ ನಿವೃತ್ತಿಯಾದ ನಂತರ ಆರಾಮವಾಗಿ ಇರಬಹುದಿತ್ತು. ಆದರೆ ಗೌಡರದು ಆರಾಮವಾಗಿರುವ ಜಾಯಮಾನವಲ್ಲ. ಅವರದು ಕ್ರಿಯಾಶೀಲ ವ್ಯಕ್ತಿತ್ವ. ನಿವೃತ್ತಿಯ ಮರುದಿನವೇ ಎರಡು ಮುಖ್ಯ ಜವಾಬ್ದಾರಿಗಳನ್ನು ಹೊತ್ತುಕೊಂಡದ್ದು ಅವರ ಕರ್ತವ್ಯನಿಷ್ಠೆಗೆ ಸಾಕ್ಷಿ. ಅವರ ವೃತ್ತಿ ಬದುಕಿಗೆ ಸಂಬಂಧಿಸಿದಂತೆ ಶೇಷಾದ್ರಿಪುರಂ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾದುದು ಒಂದಾದರೆ, ಅವರ ಪ್ರವೃತ್ತಿಗೆ ಹತ್ತಿರವಾದ ಪತ್ರಿಕೋದ್ಯಮ ಕ್ಷೇತ್ರವನ್ನು ಆಯ್ದುಕೊಂಡು ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಮುಖವಾಣಿ **'ಆದಿಚುಂಚನಗಿರಿ'** ಮಾಸ ಪತ್ರಿಕೆಯ 'ಸಂಪಾದಕ' ಹುದ್ದೆಯನ್ನು ಅಲಂಕರಿಸಿದ್ದು ನಿಜಕ್ಕೂ ಮಹತ್ವದ ವಿಷಯ.

ಗೌಡರು ಮೊದಲಿನಿಂದಲೂ ಶ್ರೀ ಆದಿಚುಂಚನಗಿರಿ ಮಠದ ಪರಮ ಭಕ್ತರು. ಶ್ರೀಮಠದ ಪೀಠಾಧ್ಯಕ್ಷರಾದ ಜಗದ್ಗುರು ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರ ಪ್ರಭಾವಕ್ಕೆ ಒಳಗಾದವರು. ಸ್ವಾಮಿಗಳವರ ಮಾನವ ಸೇವೆಗೆ ಮಾರು ಹೋದವರು. ಶ್ರೀಮಠ, ಶ್ರೀ ಗುರುಗಳು. ಅಲ್ಲಿಯ ದೈವಗಳ ಬಗ್ಗೆ ಅಪಾರ ಭಕ್ತಿಗೌರವವನ್ನಿಟ್ಟುಕೊಂಡಿರುವವರು.

ಶ್ರೀ ಮಠದ ಸಂಪರ್ಕಕ್ಕೆ ಬಂದಂದಿನಿಂದಲೂ ಗೌಡರು ಶ್ರೀಮಠದ ಸಾರಸ್ವತ ಸಂಪತ್ತನ್ನು ಹೆಚ್ಚಿಸಿದವರು. ಶ್ರೀ ಕ್ಷೇತ್ರ, ಅಲ್ಲಿಯ ದೈವ, ಗುರುಗಳ ಬಗೆಗೆ ಗೌಡರು ರಚಿಸಿರುವ ಕೃತಿಗಳು, ಧ್ವನಿಸುರಳಿಗಳು ಮಠದ ಸಾಹಿತ್ಯ ಭಂಡಾರವನ್ನು ಸಮೃದ್ಧಗೊಳಿಸಿವೆ. ಕಳೆದ ಎರಡು ದಶಕಗಳಿಂದಲೂ **'ಆದಿಚುಂಚನಗಿರಿ'** ಮಾಸ ಪತ್ರಿಕೆಗೆ ಲೇಖನ, ವಿಮರ್ಶೆ, ಪದ್ಯ ಹಾಗೂ ಅಂಕಣಗಳನ್ನು ಬರೆಯುತ್ತಿದ್ದ ಗೌಡರು ಪತ್ರಿಕೆಯ ನಿಕಟ ಸಂಪರ್ಕವನ್ನಿಟ್ಟುಕೊಂಡು ಅದರ ಜನಪ್ರಿಯತೆಗೆ ದುಡಿದವರು.

ಗೌಡರ ಪ್ರವೇಶದಿಂದ **'ಆದಿಚುಂಚನಗಿರಿ'** ಪತ್ರಿಕೆ ಹೊಸ ರೂಪವನ್ನೇ ಪಡೆಯಿತು. ಪತ್ರಕರ್ತರಾಗಿ, ಪತ್ರಿಕೋದ್ಯಮಿಯಾಗಿ ಗಳಿಸಿದ್ದ ಅನುಭವವನ್ನೆಲ್ಲ ಈ ಪತ್ರಿಕೆಯ ಶ್ರೇಯಸ್ಸಿಗಾಗಿ ಧಾರೆಯೆರೆದಿರುವ ಗೌಡರು ಪತ್ರಿಕೆಯನ್ನು ಜನಮನಕ್ಕೆ ಬಹು ಹತ್ತಿರವಾಗಿಸಿದ್ದಾರೆ. ಶ್ರೀಮಠದ ಪತ್ರಿಕೆಯೆಂದು ಅದನ್ನು ಕೇವಲ ಆಧ್ಯಾತ್ಮಿಕ ವಿಷಯಗಳಿಗಷ್ಟೇ ಸೀಮಿತಗೊಳಿಸದೆ ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ, ಶಿಕ್ಷಣ, ಕೃಷಿ.... ಮುಂತಾದ ವಿಷಯಗಳಿಗೆ ಸಂಬಂಧಿಸಿದ ಅಂಕಣಗಳು, ಚಿಂತನಗಳು.... ಸದಭಿರುಚಿಯ ವಿಷಯಗಳಿಂದೊಡಗೂಡಿದ ಪತ್ರಿಕೆಯನ್ನಾಗಿಸಿದ್ದಾರೆ; **'ಆದಿಚುಂಚನಗಿರಿ'**ಯನ್ನು ಸೃಜನಶೀಲ ಸಿರಿಯನ್ನಾಗಿ ರೂಪಿಸಿದ್ದಾರೆ. ಶ್ರೀಮಠದ ಮತ್ತೊಂದು ಮಾಸಿಕ ಆಂಗ್ಲಭಾಷೆಯ **'ಶ್ರೀ ಕ್ಷೇತ್ರ ಆದಿಚುಂಚನಗಿರಿ'** ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸುತ್ತಿರುವ ಗೌಡರು ಆ ಪತ್ರಿಕೆಯನ್ನೂ ಚೆಂದಗೊಳಿಸಿದ್ದಾರೆ.

ಕ್ರಿಯಾಶೀಲತೆಗೆ ಹೆಸರಾದ ಗೌಡರು ಮಾನವೀಯ ಮೌಲ್ಯಗಳ ಆರಾಧಕರು. ಇವರದು ವ್ಯಕ್ತಿನಿಷ್ಠನಿಲುವಲ್ಲ, ವಿಚಾರ ನಿಷ್ಠನಿಲುವು. ಯುವಕರಿಗೆ ಸ್ವಾತಂತ್ರ್ಯವನ್ನು ಕೊಟ್ಟು ಅವರಲ್ಲಿರುವ ಸಾಮರ್ಥ್ಯವನ್ನು ಹೊರತೆಗೆಯುವವರು. ನಯ ವಿನಯದಲ್ಲಿ, ವ್ಯಂಗ್ಯ ವಿನೋದದಲ್ಲಿ ಯಾರಿಗೂ ಕಡಮೆಯಿಲ್ಲದ ಗೌಡರು ಯಾವುದಕ್ಕೂ ಉದ್ವಿಗ್ನಗೊಳ್ಳದ ಸಹನಶೀಲರು. ಸಾಹಿತ್ಯ ಕ್ಷೇತ್ರದಲ್ಲಿ ಎಂತೋ ಅಂತೆಯೇ ಪತ್ರಕರ್ತರಾಗಿಯೂ ತಮ್ಮ ಬರವಣಿಗೆಯ ಮೋಡಿಯಿಂದಲೇ ಎಲ್ಲರನ್ನೂ ಆಕರ್ಷಿಸಿದವರು, ಎಲ್ಲರಿಗೂ ಬೇಕಾದವರು.

ಕನ್ನಡ ಸಾರಸ್ವತ ಲೋಕದಂತೆಯೇ ಪತ್ರಿಕಾ ಕ್ಷೇತ್ರದಲ್ಲಿಯೂ ಸೋಲರಿಯದ ಇವರು ಬಹುಪರಾಕ್ ಸಂಸ್ಕೃತಿಯಿಂದ ದೂರವೇ ಉಳಿದವರು. (ಆದ್ದರಿಂದಲೇ ಏನೋ ಸಾರಸ್ವತ ಲೋಕದಲ್ಲಿ ಸೋಲರಿಯದ ಇವರು ಆ ಕ್ಷೇತ್ರದ ಅಧಿಕಾರವನ್ನು ಹಿಡಿಯುವಲ್ಲಿ ಸೋತಿದ್ದು. ಕನ್ನಡ ಸಾರಸ್ವತ ಲೋಕಕ್ಕೆ ಹಿಡಿದಿರುವ ಗ್ರಹಣ ಬಿಡದ ಹೊರತು ಇಂತಹ ಸೃಜನಶೀಲ ಸಾಹಿತಿಗಳು ಅಧಿಕಾರದಿಂದ ದೂರವೇ ಉಳಿಯಬೇಕಾದೀತೇನೋ) ತಮಗೆ ನ್ಯಾಯವೆಂದು ತೋರಿದ್ದನ್ನು ನಿರ್ದಾಕ್ಷಿಣ್ಯವಾಗಿ ಪ್ರತಿಪಾದಿಸುವ ಗೌಡರು ಧೈರ್ಯಶಾಲಿಗಳು. ಅದೇ ಅಲ್ಲವೇ ನಿಜ ಪತ್ರಕರ್ತನ ಮೂಲಭೂತ ಗುಣ.

❑



# ಸಹೃದಯ ವಿಮರ್ಶಕರಾಗಿ....

● ಡಾ|| ಎಸ್. ಶಿವಣ್ಣ

ಡಾ. ದೊಡ್ಡರಂಗೇಗೌಡರು ಎಂದು ತಕ್ಷಣ ನಾಡಿನಾದ್ಯಂತ ಸಹಜವಾಗಿ ನೆನಪಿಗೆ ಬರುವುದು ಅವರೊಬ್ಬ ಭಾವಗೀತಕಾರರು, ಕವಿ ಎಂಬುದು. ಐದು ನೂರಕ್ಕೂ ಹೆಚ್ಚು ಕನ್ನಡ ಚಿತ್ರಗೀತೆಗಳನ್ನು ರಚಿಸಿ ಜನಮನ ಗೆದ್ದ ಪ್ರೀತಿಯ ಕವಿ ಡಾ. ದೊಡ್ಡರಂಗೇಗೌಡರು. ಅವರ ಈ ಕಾವ್ಯಸಿದ್ಧಿಯೇ ಅವರ ಸಾಹಿತ್ಯ ವಿಮರ್ಶೆಯ ಸಮೃದ್ಧಿಯನ್ನು ಮರೆಯಾಗಿಸಲು ಕಾರಣವಾಗಿದೆಯೇ ಎಂದು ಒಮ್ಮೊಮ್ಮೆ ಅನಿಸುತ್ತದೆ. ಆದರೆ ಅವರ 'ಸಾಹಿತ್ಯ ಸರಸ್ವತಿ' ಕೃತಿ ಓದಿದಾಗ ಆಧುನಿಕ ವಿಮರ್ಶೆಯ ಮಹತ್ವದ ಲೇಖಕರಲ್ಲಿ ಒಬ್ಬರಾಗಿ ಗಮನಾರ್ಹರಾಗುತ್ತಾರೆ.

ಡಾ. ದೊಡ್ಡರಂಗೇಗೌಡರ 'ಸಾಹಿತ್ಯ ಸರಸ್ವತಿ' ಕೃತಿಯು ಹನ್ನೊಂದು ಭಾಗಗಳಾಗಿ ವಿಂಗಡಿಸಿಕೊಂಡ ಲೇಖನಗಳ ಸಂಕಲನ. ಜಾನಪದ ಸಾಹಿತ್ಯ, ಪ್ರಾಚೀನ ಸಾಹಿತ್ಯ, ವಚನಸಾಹಿತ್ಯ, ದಾಸ ಸಾಹಿತ್ಯ ಹಾಗೂ ನವ್ಯ, ದಲಿತ-ಬಂಡಾಯ ಇತ್ಯಾದಿ ಸಾಹಿತ್ಯ ಸೌಂದರ್ಯವನ್ನು ಸೊಗಸಾಗಿ ಪರಿಚಯಿಸಿದ್ದಾರೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯವನ್ನು ಪರಿಚಯ ಮಾಡುವುದು ಈ ಕೃತಿಯ ಮೂಲ ಉದ್ದೇಶ. ಅಷ್ಟೇ ಅಲ್ಲದೆ ಸಾಂಸ್ಕೃತಿಕ ಸಂಪನ್ನತೆ ಹೆಚ್ಚಿಸುವ ಉನ್ನತೆಯೂ ಡಾ. ದೊಡ್ಡರಂಗೇಗೌಡರ ವಿಮರ್ಶೆಯ ಒಂದು ಭಾಗವಾಗಿದೆ.

ಡಾ. ದೊಡ್ಡರಂಗೇಗೌಡರ ವಿಮರ್ಶನಾ ಪ್ರಜ್ಞೆ, ಸಾಹಿತ್ಯ ಚರಿತ್ರೆಯ ರಚನೆಗೆ ಹದಗೊಂಡಂಥದು. ಕನ್ನಡ ಪ್ರಾಧ್ಯಾಪಕರಾಗಿ ಸುಧೀರ್ಘ ಕಾಲ ಪ್ರೀತಿಯಿಂದ ಸಾಹಿತ್ಯದ ಪಾಠ ಹೇಳಿರುವ ಅವರು ವಿದ್ಯಾರ್ಥಿಗಳಿಗೆ ಒಳ್ಳೆಯ ಅಧ್ಯಾಪಕರು. ದಿನನಿತ್ಯ ಓದುವುದು, ಓದಿದ್ದನ್ನು ಟಿಪ್ಪಣಿ ಮಾಡಿಕೊಳ್ಳುವುದು ಅವರ ಅಧ್ಯಯನ ಕ್ರಮ. ಇಂಥ ಟಿಪ್ಪಣಿಗಳನ್ನೇ ಲೇಖನಗಳನ್ನಾಗಿಸಿ ಅನುಕ್ರಮವಾಗಿ 'ಸಾಹಿತ್ಯ ಸರಸ್ವತಿ' ಕೃತಿಯಲ್ಲಿ ಜೋಡಿಸಲಾಗಿದೆ. ಅಸಾಧಾರಣವಾದ ಈ ಬಗೆಯ ಪರಿಶ್ರಮದ ಸಾಹಿತ್ಯ ರಚನೆಯ ಹಿಂದಿದೆ. ಜಾನಪದ ಸಾಹಿತ್ಯ ಕುರಿತು ಬರೆಯುತ್ತ ಡಾ|| ದೊಡ್ಡರಂಗೇಗೌಡರು ಹಳ್ಳಿಹಾಡುಗಳಲ್ಲಿ ಹುದುಗಿರುವ ಗ್ರಾಮೀಣ ಬದುಕಿನ ಸ್ವಾರಸ್ಯವನ್ನು ಹೊರಗೆಳೆಯುತ್ತಾರೆ. ಇಂಥ ಕಡೆ ಅವರ ದೃಷ್ಟಿಕೋನ ಗ್ರಾಮೀಣ ಬದುಕಿನಲ್ಲಿ ಅಗಣಿತವಾಗಿರುವ ಒಂದೊಂದು ವಿಚಾರವನ್ನು ಹಾಡಿನ ಮೂಲಕ ಹೊರೆಗೆಳೆದು

ಅವರ ಬದುಕಿನ ಸಮಗ್ರದರ್ಶನವನ್ನು ಅನಾವರಣಗೊಳಿಸುವುದಾಗಿದೆ. ಅನಕ್ಷರಸ್ಥ ಜನರಾದರೂ ಅನುಭವಸ್ಥರು, ನಿರಕ್ಷರಕುಕ್ಷಿಗಳಾದ ಈ ಜನಪದ ಕವಿಗಳು.

ಪಂಪನನ್ನು ಕುರಿತು 'ಅವನು ಜೈನ ಕವಿಯಾದರೂ ಅವನ ಕಾವ್ಯ ಜೈನಧರ್ಮಕ್ಕೆ ಸೀಮಿತವಾಗಿಲ್ಲ, ಮಾನವೀಯ ಧರ್ಮಕ್ಕೆ ಹೆಚ್ಚು ಒತ್ತುಕೊಟ್ಟ ಕವಿ ಅವನು' ಎಂಬ ಡಾ. ಗೌಡರ ಮಾತುಗಳು ಅರ್ಥ ಗರ್ಭಿತ. 'ಮಾನವ ಕುಲಂ ತಾನೊಂದೆ ವಲಂ' ಎಂಬ ಪಂಪನ ಹೃದಯಾಂತರಾಳದ ಅನಿಸಿಕೆಯೊಂದೆ ಸಾಕು ಡಾ. ಗೌಡರ ಅಭಿಪ್ರಾಯಕ್ಕೆ.

ವಚನಕಾರರಾದ ದೇವರ ದಾಸಿಮಯ್ಯ, ಅಲ್ಲಮ, ಸಿದ್ಧರಾಮ, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ ಇವರುಗಳ ಬಗ್ಗೆ ಬರೆದಿರುವುದು ಡಾ. ದೊಡ್ಡರಂಗೇಗೌಡರು ವಚನಕಾರರ ಚಿಂತನೆಗಳು ಇವೊತ್ತಿಗೆ ಎಷ್ಟು ಪ್ರಸ್ತುತ! ಎನ್ನುವ ಪ್ರಶ್ನೆಗೆ ಉತ್ತರಿಸುವ ರೀತಿಯದಾಗಿದೆ. ಬಸವಣ್ಣನವರ ಚಿಂತನೆಯನ್ನು ಹೀಗೆ ಹೇಳುತ್ತಾರೆ. 'ಎಂಟು ನೂರು ವರ್ಷಗಳ ಹಿಂದೆಯೇ ಸಾಮಾಜಿಕ ಏಳಿಗೆಯನ್ನು ಕುರಿತು ಚಿಂತಿಸಿದ ಈ ಮಹಾಪುರುಷನ ಒಂದೊಂದು ಮಾತು-ನುಡಿಮುತ್ತು. ಉದಾ: "ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ" ಈ ಹೇಳಿಕೆ ಎಷ್ಟೊಂದು ವಾಸ್ತವ ಸತ್ಯ ಎಂಬುದು ಎಂಥವರಿಗೂ ಅರ್ಥವಾದೀತು. ಬಾಗೇವಾಡಿಯಲ್ಲಿ ಜನಿಸಿದ ಬಸವಣ್ಣ ಜಾಗತಿಕ ಹಂತದಲ್ಲಿ ನಿಂತು ಮಾತಾಡಿರುವುದು ಸ್ಮರಣಾರ್ಹ. ಜನತೆಯಲ್ಲಿ ಹೊಸ ಅರಿವನ್ನು ಮೂಡಿಸುವ ಪ್ರಯತ್ನವನ್ನು ಮಾಡಿದ ನಿಷ್ಠಾವಂತರು ಬಸವಣ್ಣ' ಎಂಬಂಥ ವಿಮರ್ಶಾತ್ಮಕ ಮಾತು ಇಂದಿನ ಜಾಗತೀಕರಣ ಸಂದರ್ಭದಲ್ಲೂ ಪ್ರಸ್ತುತವಾಗುತ್ತದೆ. ಬಿ.ಎಂ.ಶ್ರೀ ಅವರ ಬಗ್ಗೆ ಬರೆಯುವಾಗ ಡಾ. ದೊಡ್ಡರಂಗೇಗೌಡರು 'ಶ್ರೀ' ಅವರಿಗೆ ಇರುವ ಕನ್ನಡಾಭಿಮಾನವನ್ನು ಹೇಳುತ್ತ, ನಮ್ಮ ಗಮನ ಸೆಳೆಯುತ್ತಾರೆ. "ಅವರು ಕೇವಲ ಸಂಬಳಕ್ಕಾಗಿ ಪಾಠ ಮಾಡುವ ಯಾಂತ್ರಿಕ ಪ್ರಾಧ್ಯಾಪಕರಾಗಿರಲಿಲ್ಲ. ಕನ್ನಡಕ್ಕಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟ ಆಚಾರ್ಯರು. ತಮ್ಮ ಜೀವನವನ್ನು ಕನ್ನಡದ ಕೀರ್ತಿ ಪುರಸ್ಕಾರಕ್ಕಾಗಿ ಅರ್ಪಿಸಿಕೊಂಡ ಅಚ್ಚ ಕನ್ನಡದ ಶ್ರೀಗಂಧ ತರುವಂತೆ ಸದಾ ದುಡಿಯುತ್ತಾ, ಎಲ್ಲೆಡೆ ಕನ್ನಡದ ಕಂಪು ಹರಡಿದ ಅಭಿಜಾತ ಚಂದನ ಅವರು' ಎನ್ನುತ್ತಾರೆ. ಹಾಗೆ ನೋಡಿದರೆ ಸಾಹಿತಿ ಬರೆದ ಸಾಹಿತ್ಯವಷ್ಟೆ ಅಲ್ಲ ಅವರ ಸಾಹಿತ್ಯಾಭಿಮಾನದ ವೈಯಕ್ತಿಕ ಬದುಕು ಮುಖ್ಯ. 'ಶ್ರೀ' ಅವರಿಗೆ ಕನ್ನಡದ ಬಗೆಗೆ ಅಪಾರ ಪ್ರೀತಿ ಇದ್ದುದರಿಂದಲೇ ಅವರ 'ಇಂಗ್ಲೀಷ್ ಗೀತೆಗಳಲ್ಲಿ ಇಂಗ್ಲೀಷ್‌ನ ರೋಮ್ಯಾಂಟಿಕ್ ಕವಿತೆಗಳನ್ನು ಅನುವಾದ ಮಾಡಿದರು. ಅವು ಅಚ್ಚ ಕನ್ನಡಪವೇನೊ ಎಂಬಂತೆ ಸೊಗಸಾಗಿವೆ.

ಕುವೆಂಪು ಅವರ ಸಾಹಿತ್ಯದ ಬಗೆಗೆ ಬರೆಯುವಾಗ ಡಾ. ದೊಡ್ಡರಂಗೇಗೌಡರು ಕುವೆಂಪು ಅವರಲ್ಲಿ ಹುದುಗಿರುವ ವಿಶಿಷ್ಟತೆಯನ್ನು ಗುರುತಿಸುತ್ತಾರೆ. "ಮಹಾಕವಿ ಕುವೆಂಪು ಅವರ ಅಭಿಜಾತ ಕಾವ್ಯ ಶೈಲಿ ಮುಖ್ಯವಾಗಿ ಹಳೆಗನ್ನಡದ ಕೆಚ್ಚನ್ನು ನಿಚ್ಚಳವಾಗಿ ಪಡೆದುಕೊಂಡಿದೆ. ಸಂಸ್ಕೃತದ ಸಹಜ ಸೌಂದರ್ಯವನ್ನು ದಕ್ಕಿಸಿಕೊಂಡಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಇಂಗ್ಲೀಷಿನ ಚೇತೋಹಾರಿ ಗುಣವನ್ನು ಹದವಾಗಿ ಕಸಿ

ಮಾಡಿಕೊಂಡಿದೆ. ಇದಲ್ಲದೆ ಮೂಲತಃ ಮಲೆನಾಡ ಮಡಿಲಲ್ಲಿ ಬೆಳೆದ ಕವಿಯಾದ್ದರಿಂದ ಅವರ ರಕ್ತದಲ್ಲೇ ಪ್ರಕೃತಿ ಪ್ರಿಯತೆ ಹುದುಗಿ ವಿಶಿಷ್ಟವಾಗಿ ಹರಿದಿದೆ. ಕುವೆಂಪು ಕಾವ್ಯ ಗಗನಚುಂಬಿ ಪರ್ವತಗಳಂತೆ ಉನ್ನತ, ಆದರ್ಶಾಭಿಮುಖಿ; ಮನೋಹರ; ಸಹ್ಯಾದ್ರಿಯ ಕಾನನಗಳಂತೆ ಸುಂದರ. ಒತ್ತಟ್ಟಾದ ಕಾಡಿನಂತೆ ವಿಚಾರಗಳಿಂದ ಪರಿಪ್ಲುತ; ಸುವಿಶಾಲ, ಅಲ್ಲಿ ಭಾವದ ಉತ್ಕಟತೆ ಇದೆ; ಅಭಿವ್ಯಕ್ತಿಯ ಅನನ್ಯತೆ ಇದೆ; ಭಾವಾವೇಶದ ಸಹಜ ಭೋರ್ಗರೆತವೂ ಕಾವ್ಯ ಕಾವೇರಿಯಾಗಿ ಹರಿಯುತ್ತದೆ'' ದ.ರಾ. ಬೇಂದ್ರೆಯವರ ಕಾವ್ಯದ ಅನುಭವ ಮತ್ತು ಅನುಭಾವವನ್ನು ಕುರಿತು ಡಾ. ದೊಡ್ಡರಂಗೇಗೌಡರು ಒಂದು ಮುಖ್ಯ ವಿಮರ್ಶನ ಕ್ರಮದ ಬಗ್ಗೆ ನಮ್ಮ ಗಮನ ಸೆಳೆಯುತ್ತಾರೆ. ಬೇಂದ್ರೆ ಕಾವ್ಯ ಮುಖ್ಯವಾಗಿ ಸೃಷ್ಟಿಕರ್ತ ಎಷ್ಟು ದೊಡ್ಡವನೆಂದು ಹಾಗೂ ಸೃಷ್ಟಿ ಎಷ್ಟು ಮಹತ್ವದ್ದು ಎಂಬುದನ್ನು ಅಭಿವ್ಯಕ್ತಿಸಿದೆ; ಜೊತೆಗೆ ಇರುವ ಜೀವ ಅಮೂಲ್ಯವಾದದ್ದು. ಅನುಭವ ಹಾಗೂ ಅನುಭಾವಗಳೆರಡೂ ಕವಿಗೆ ಮುಖ್ಯವಾದದ್ದು. 'ರಮ್ಯವಾದ... ಇತ್ಯಾತ್ಮಕ' ಎಂಬ ಪ್ರಮುಖ ಧೋರಣೆ; ನಿಸರ್ಗ ಪ್ರೇಮ ಮಾನವನಿಗೆ ಅವಶ್ಯಕವಾದದ್ದು ಎಂಬ ಪ್ರಜ್ಞೆ. ರೋಸೋ ಹಾಗೂ ವರ್ಡ್ಸ್‌ವರ್ಥ್‌ನ ವಿಚಾರಧಾರೆ ಪ್ರಭಾವ. ಈ ಎಲ್ಲದರ ಸಂಗಡ-ಅರವಿಂದರ ''ದಿ ಫ್ಯೂಚರ್ ಪೊಯೆಟ್ರಿ'' ಹಾಗೂ ಕವಿ ರವೀಂದ್ರರ ತಾತ್ವಿಕ ಕಾವ್ಯ. ಈ ಎಲ್ಲದರ ಒಟ್ಟಾರೆ ಪ್ರಭಾವ, ಇವೆಲ್ಲಕ್ಕೂ ಮೂಲ ತಳಪಾಯದಂತಿದೆ. ಬೇರಂತಿದ್ದ, ತವನಿಧಿಯಂತಿದ್ದ, ಜಾನಪದದ ದಟ್ಟ ಪರಿಣಾಮ.

ಡಾ. ದೊಡ್ಡರಂಗೇಗೌಡರ ಭಾಷಾ ಶೈಲಿ ಶುದ್ಧ ಭಾವನಾತ್ಮಕವಾದುದು. ಕೆಲವು ಕಡೆಯಂತೂ ಕಾವ್ಯಾತ್ಮಕವಾದ ಸಾಲುಗಳಲ್ಲೇ ಚಿತ್ರಿತವಾಗಿರುತ್ತದೆ. - ಬೇಂದ್ರೆ ಕುರಿತ ಲೇಖನ ಗಮನಿಸಿ ''ಅನುಭಾವಿ ತತ್ವಜ್ಞಾನಿಯಂತೆ ನೋಡಿದ ಕವಿ ಬೇಂದ್ರೆ, ಅಪ್ಪಟ ಹಕ್ಕಿಗನಂತೆ ಜೀವ ಚೈತನ್ಯದಿಂದ ಸ್ಪಂದಿಸುತ್ತಾ ಹೋದ ಕವಿ, ಕನ್ನಡ ಭಾಷೆ ಚಿಗುರೊಡೆದಂತೆ ಬರೆದ ಕವಿ; ಮಧುರ ನುಡಿ ಮಾಮರವಾಗಿ ಹೂ ಬಿಡುವಂತೆ ಬರೆದ ಕವಿ, ಧ್ವನಿಪೂರ್ಣವಾಗಿ ಬರೆದ ಕವಿ'' ಎಂಬಂಥ ಸಾಲುಗಳು ಡಾ. ದೊಡ್ಡರಂಗೇಗೌಡರಲ್ಲಿ ಇರುವ ಶಬ್ದ ಚಮತ್ಕಾರದ ಆಸಕ್ತಿಯನ್ನು ತೋರಿಸುತ್ತದೆ.

''ಸಾಹಿತ್ಯ ಪರಂಪರಾಗತವಾಗಿ ಬೆಳೆದು ಬರುವಂತಹದ್ದು. ಇಂದಿನ ಕನ್ನಡ ಲೇಖಕರ ನೂತನ ಆಲೋಚನೆಗಳು, ಅವು ಎಷ್ಟೇ ನವ್ಯವಾಗಿದ್ದರೂ, ಅವುಗಳ ಹಿಂದೆ, ಕನ್ನಡದ ಗಟ್ಟಿ ಪರಂಪರೆಯ ಆರೋಗ್ಯಕರ ವೀರ್ಯವಂತಿಕೆ ಇದೆ'' ಎನ್ನುತ್ತಾರೆ ಡಾ. ದೊಡ್ಡರಂಗೇಗೌಡರು. ಅವರೇ ಹೇಳುತ್ತಾರೆ 'ನಾನು ಕುವೆಂಪು ಅವರಲ್ಲಿ ಪಂಪನನ್ನು, ಬೇಂದ್ರೆಯವರಲ್ಲಿ ಜಾನಪದವನ್ನು ಕಂಡಿದ್ದರೆ, ಅದಕ್ಕೆ ಕುವೆಂಪು ಹಾಗೂ ಬೇಂದ್ರೆ ನಮ್ಮ ಪೂರ್ವ ಪರಂಪರೆಯನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರ ಸಾಹಿತ್ಯಕ ಫಲ ಅದು.

ಆಧುನಿಕ ಸಾಹಿತ್ಯ ಪ್ರಕಾರಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ ಸಾಹಿತ್ಯದ ಸ್ವರೂಪ ಹಾಗೂ ಆ ಕಾಲಘಟ್ಟದ ಕವಿ-ಕೃತಿಗಳನ್ನು ಪರಿಚಯಿಸುವಾಗ ಡಾ. ದೊಡ್ಡರಂಗೇಗೌಡರು ಸಾಧ್ಯವಾದಷ್ಟು ವಿವರವಾಗಿಯೇ ಮಾಹಿತಿ ನೀಡುತ್ತಾರೆ. ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಪು.ತಿ.ನ., ಡಿ.ವಿ.ಜಿ., ಗೋಕಾಕ್, ಗೋಪಾಲಕೃಷ್ಣ ಅಡಿಗ, ಅನಂತ ಮೂರ್ತಿ, ಲಂಕೇಶ್, ತೇಜಸ್ವಿ, ಚಂಪಾ, ಕಂಬಾರ, ಕೆ.ಎಸ್. ನರಸಿಂಹಸ್ವಾಮಿ, ರಾಮಾನುಜನ್, ಶಿವಲಿಂಗಯ್ಯ, ಚೆನ್ನಣ್ಣ ವಾಲೀಕಾರ ಇನ್ನು ಮುಂತಾದವರು 'ಸಾಹಿತ್ಯ ಸಂಸ್ಕೃತಿ'ಗೆ ತಮ್ಮ ಕೊಡುಗೆ ನೀಡಿದ ಅನೇಕ ಕವಿ-ಕೃತಿಗಳ ಪರಿಚಯ ಇಲ್ಲಿದೆ. ಒಟ್ಟಿನಲ್ಲಿ ಈ ಕೃತಿಯು ಕನ್ನಡ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಗ್ರಹಿಸಲು ಉಪಯುಕ್ತವಾದುದು ಎಂಬುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬೇಕು.

❑




# ಹೃತ್ಪೂರ್ವಕ ಅಭಿನಂದನೆ

• ಡಾ|| ಎಸ್.ಎಸ್. ಲಕ್ಷ್ಮಿನಾರಾಯಣ ಭಟ್ಟ

ಶ್ರೀ ದೊಡ್ಡರಂಗೇಗೌಡರು ಕನ್ನಡನಾಡಿನ ಜನರೆಲ್ಲರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾದ ಕವಿ. ಕನ್ನಡ ಸಾಹಿತ್ಯದಲ್ಲಿ ಉನ್ನತ ಅಧ್ಯಯನ ನಡೆಸಿ, ಪ್ರಾಧ್ಯಾಪಕರಾಗಿ, ಲೇಖಕರಾಗಿ ಕನ್ನಡ ಚಿತ್ರ ಪ್ರಪಂಚದ ಮೂಲಕ ಜನ ಮೆಲುಕು ಹಾಕುವಂಥ ಚಿತ್ರಗೀತೆಗಳನ್ನು ನೀಡಿ ಅವರು ನಾಡಿನ ಮೂಲೆ ಮೂಲೆಗಳಲ್ಲಿ ಪ್ರಸಿದ್ಧರಾಗಿದ್ದಾರೆ. ಅವರ ಅಭಿಮಾನಿಗಳು ತಮ್ಮ ಪ್ರೀತಿ ವಿಶ್ವಾಸಗಳ ಸಂಕೇತವಾಗಿ ಅವರಿಗೊಂದು ಅಭಿನಂದನಾ ಗ್ರಂಥವನ್ನು ನೀಡಿ ಗೌರವಿಸುತ್ತಿರುವುದು ತುಂಬ ಸಂತೋಷದ ಸಂಗತಿ. ತಾವು ಮೆಚ್ಚಿದ ಅಕ್ಷರ ವ್ಯವಸಾಯಕ್ಕೆ ಜೀವಮಾನವಿಡೀ ದುಡಿಯುತ್ತಿರುವ ಶ್ರೀ ದೊಡ್ಡರಂಗೇಗೌಡರನು ನಅವರ ಸಾಧನೆಗಾಗಿ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ದೊಡ್ಡರಂಗೇಗೌಡರನ್ನು ನಾನು ಸುಮಾರು ಮೂವತ್ತು ವರ್ಷಗಳಿಂದ ಹೆಚ್ಚು ಕಾಲದಿಂದ ಬಲ್ಲೆ. ಅವರು ಆನರ್ಸ್, ಎಂ.ಎ. ತರಗತಿಗಳಿಗೆ ಅಧ್ಯಯನ ಮಾಡುತ್ತಿರುವಾಗ ನನ್ನ ವಿದ್ಯಾರ್ಥಿಯಾಗಿದ್ದರು. ಇದು ನನಗೆ ಅಭಿಮಾನದ ಸಂಗತಿ. ಅವರಷ್ಟು ಒಳ್ಳೆಯ ಸ್ವಭಾವ ನಡತೆಗಳು, ತಮ್ಮ ಉಪಧ್ಯಾಯರ ಬಗ್ಗೆ ಅಪಾರ ಗೌರವ ಹೊಂದಿರುವ ವ್ಯಕ್ತಿ ಬಹಳ ಅಪರೂಪ.

ವಿದ್ಯಾರ್ಜನೆಯ ಸಂಬಂಧದಲ್ಲಿ ಅವರಿಗಿದ್ದ ಆಸಕ್ತಿ, ಶ್ರದ್ಧೆ ಅಸಾಧಾರಣವಾದದ್ದು. ಆರ್ಥಿಕವಾಗಿ ಬಹಳ ತೊಂದರೆಯಲ್ಲಿದ್ದ ಅವರು ವಿದ್ಯಾರ್ಥಿಯಾಗಿದ್ದಾಗ ರೈಲ್ವೆ ವಿಭಾಗದಲ್ಲಿ ಒಂದು ಕೆಲಸಕ್ಕೆ ಸೇರಿದ್ದರು. ಅಲ್ಲಿ ರಾತ್ರಿ ಪಾಳಿಯಲ್ಲಿ ಎಂಟುಗಂಟೆ ಕೆಲಸಮಾಡುವುದು, ಹಗಲು ಹೊತ್ತು ಕಾಲೇಜಿನ ತರಗತಿಗಳಿಗೆ ಹಾಜರಾಗುವುದು ಹೀಗೆ ಅವರು ತಮ್ಮ ನಿದ್ದೆಯನ್ನು ಬಲಿಗೊಟ್ಟು, ಆರೋಗ್ಯವನ್ನು ಒತ್ತೆಯಿಟ್ಟು ನಾಲ್ಕುವರ್ಷ ಕಾಲ ಅಧ್ಯಯನ ನಡೆಸಿದರು. ಇಂಥ ನಿದರ್ಶನಗಳು ತೀರ ವಿರಳ. ಅವರ ಪ್ರಾಮಾಣಿಕ ಪರಿಶ್ರಮ, ಶ್ರದ್ಧೆಗಳನ್ನು ದೈವ ಮೆಚ್ಚಿ ಅನುಗ್ರಹಿಸಿತೆಂಬಂತೆ ಇಂದು ಅವರು ಕೀರ್ತಿಯ ಹೊಂಬೆಳಕಿನಲ್ಲಿ ನಿಂತಿದ್ದಾರೆ. ಅಭಿಮಾನಿಗಳಿಗೆ ಅಚ್ಚುಮೆಚ್ಚಿನ ಲೇಖಕರಾಗಿದ್ದಾರೆ.

ಅವರು ಕನ್ನಡ ಅಧ್ಯಯನ ಕೇಂದ್ರದಲ್ಲಿ ಎಂ.ಎ. ಓದುತ್ತಿರುವಾಗ ಶ್ರೀಮತಿ ರಾಜೇಶ್ವರಿ ಮಹಾರಾಣಿ ಕಾಲೇಜಿನಲ್ಲಿ ಆನರ್ಸ್ ಮುಗಿಸಿ, ಅಧ್ಯಯನ ಕೇಂದ್ರದಲ್ಲಿ ಎಂ.ಎ. ತರಗತಿಗೆ ಸೇರಿ ಅವರ ಸಹಪಾಠಿಯಾದರು. ಆ ದಿನಗಳಲ್ಲೇ ಅವರು ಪರಸ್ಪರರನ್ನು ಮೆಚ್ಚಿ ಒಲಿದಿರಬೇಕು. ಆನರ್ಸ್ ತರಗತಿ ಪೂರ್ತಿ ಕಷ್ಟಪಟ್ಟ ಗೌಡರಿಗೆ ಎಂ.ಎ. ಓದುವುದು ಅಷ್ಟು ಕಷ್ಟದ್ದಾಗಿರಲಾರದು. ಎಲ್ಲ ಶ್ರಮಗಳನ್ನು ಮರೆಸಬಲ್ಲ ಪ್ರೀತಿಯ ತಂಗಾಳಿ ಆಗ ಅವರ ಮೇಲೆ ಬೀಸತೊಡಗಿರಬೇಕು.

ದೊಡ್ಡರಂಗೇಗೌಡ ಮತ್ತು ರಾಜೇಶ್ವರಿ ದಂಪತಿಗಳಿಬ್ಬರೂ ಕಾಲೇಜಿನಲ್ಲಿ ಅಧ್ಯಾಪಕರಾಗಿ ತಮ್ಮ ವಿದ್ಯೆಯನ್ನು ಊರ್ಜಿತಗೊಳಿಸಿಕೊಂಡಿದ್ದಾರೆ; ಮುಂದಿನ ಪೀಳಿಗೆಗೆ ವಿದ್ಯಾದಾನ ಮಾಡಿ ತಮ್ಮ ಬಾಳನ್ನು ಸಾರ್ಥಕಪಡಿಸಿಕೊಂಡಿದ್ದಾರೆ; ಲೇಖಕರಾಗಿ ನಾಡಿನ ತುಂಬ ಸಂಪರ್ಕ ಬೆಳೆಸಿಕೊಂಡಿದ್ದಾರೆ. ಅವರ ಮಗ ಭರತ್ ಕೂಡ ಅಪ್ಪ ಅಮ್ಮಂದಿರ ಆದರ್ಶ ವೃತ್ತಿಯನ್ನೇ ಸ್ವೀಕರಿಸಿದ್ದಾರೆ. ಅವರ ಮಗಳು ಸ್ಮಿತಾ ಒಮ್ಮೆ ಮಧುಗಿರಿಯಲ್ಲಿ ನನ್ನ ಉಪನ್ಯಾಸಕ್ಕೆ ಬಂದಿದ್ದಳು. ಅದನ್ನು ಬಹಳ ಇಷ್ಟಪಟ್ಟದ್ದಾಗಿ ಹೇಳಿ ನನ್ನನ್ನು ಸಂತೋಷಪಡಿಸಿದಳು. ಗೌಡರಂತೆ ಅವರ ಮಕ್ಕಳೂ ಸಜ್ಜನರಾಗಿ ಬೆಳೆದಿದ್ದಾರೆ.

ದೊಡ್ಡರಂಗೇಗೌಡರಿಗೆ, ಅವರ ಕುಟುಂಬಕ್ಕೆ ಎಲ್ಲ ಮಂಗಳಗಳೂ ಒದಗಲಿ. ದೈವದ ಕೃಪಾಕಟಾಕ್ಷ ಅವರ ಮೇಲೆ ಸದಾ ಇರಲಿ ಎಂದು ಪ್ರಾರ್ಥಿಸುತ್ತೇನೆ.

❑



# ಜಾನಪದದ ಸೊಬಗು

• ಪ್ರೊ॥ ಡಿ. ಲಿಂಗಯ್ಯ

ನಿಜ ಹೇಳಬೇಕು ಅಂದರೆ ನನಗೆ ಪ್ರೊ॥ ದೊಡ್ಡರಂಗೇಗೌಡರ ನವ್ಯ ಕವನಗಳು ಅರ್ಥವಾಗಿಲ್ಲ; ಯಾವುದೂ ಮನಸ್ಸಿನಲ್ಲಿ ಸ್ಪಷ್ಟವಾಗಿ ನಿಂತಿಲ್ಲ. ನನ್ನ ಓದುವ ಕ್ರಮ ತಪ್ಪಿರಬಹುದು ಅಥವಾ ಇನ್ನಾವುದೋ ಕಾರಣವಿರಬಹುದು. ಕವಿ ದೊಡ್ಡರಂಗೇಗೌಡರು ಕಟ್ಟುವರೂಪಕ, ಶಬ್ದ ಚಿತ್ರ, ಪ್ರತಿಮೆಗಳು ತೀರಾ ವೈಯಕ್ತಿಕ ನೆಲೆಯಲ್ಲಿ ಸಂಚರಿಸುವುದರಿಂದ, ಸಾಮೂಹಿಕ ಗ್ರಹಿಕೆಗೆ ಕಷ್ಟವಾಗುತ್ತಿರಬಹುದು ಎಂದು ಸಮಾಧಾನ ಹೇಳಿಕೊಂಡಿದ್ದೇನೆ. ಆದರೆ, ಕವಿ ದೊಡ್ಡರಂಗೇಗೌಡರ ಭಾವಗೀತೆಗಳು ಹಾಗಲ್ಲ, ಸಾಕಷ್ಟು ಅರ್ಥವಾಗುತ್ತವೆ. ಇವು ಹೆಚ್ಚು ಸರಳವಾಗಿರುವುದರಿಂದ, ಗೇಯುಗುಣಗಳಿಂದ ಕೂಡಿರುವುದರಿಂದ, ಅರ್ಥೈಸುವಿಕೆಗೆ ತೊಡಕಾಗುವುದಿಲ್ಲವೆಂದು ಕಾಣುತ್ತದೆ. ಇವರ ನವ್ಯ ಕಾವ್ಯಗಳಲ್ಲಿ ಬೌದ್ಧಿಕ ನೆಲೆಯ ಕಸರತ್ತು ಜಾಸ್ತಿ; ಭಾವಗೀತೆಗಳಲ್ಲಿ ಹೃದಯವಂತಿಕೆಯ ಲಾಲಿತ್ಯ ಜಾಸ್ತಿ. ಈ ಎರಡೂ ಮಜಲುಗಳ ನಡುವೆ ಸಮಪ್ರೀತಿಯಿಂದ ಕವಿಯ ಸೃಜನಕ್ರಿಯೆ ಸಂಚರಿಸುತ್ತಿರುವಂತೆ ಭಾಸವಾಗುತ್ತದೆ. ಶ್ರೀ ಗೌಡರು ಮುಖ್ಯವಾಗಿ ಕವಿ. ಕಳೆದ ಇಪ್ಪತ್ತೈದು ವರ್ಷಗಳಿಂದ ನಿರಂತರವಾಗಿ ಕವನಗಳನ್ನು ಬರೆಯುತ್ತಿದ್ದಾರೆ. ಇವರ ಬದುಕಿನ ಏನೆಲ್ಲ ಅನುಭವಗಳನ್ನು ಕಾವ್ಯದ ಮೂಲಕವೇ ಅಭಿವ್ಯಕ್ತಿಸಲು ಪ್ರಯತ್ನಿಸಿದ್ದಾರೆ. ಶುದ್ಧ ಕಾವ್ಯಾಸಕ್ತಿಯಿಂದ ಹಿಡಿದು, ಚಲನಚಿತ್ರ ಗೀತಾಸಕ್ತಿಯವರೆಗೆ ಶ್ರೀ ಗೌಡರ ಕಾವ್ಯದ ದನಿಯೆತ್ತಿ ತಾರಕದಲ್ಲಿ ಹಾಡಿದೆ. ಈಗಂತೂ ಇವರು ಹೆಚ್ಚಾಗಿ ಜನಪ್ರಿಯ ಕವಿಯೆಂದೇ ಹೆಸರಾಗಿದ್ದಾರೆ. ಶ್ರೀಯುತರು ಕನ್ನಡದ ಅದೃಷ್ಟವಂತ ಕವಿಯೂ ಹೌದು. ಜನಪ್ರಿಯತೆಯ ಜೊತೆಗೆ ಹಲವು ಮನ್ನಣೆಗಳಿಗೂ ಪಾತ್ರರಾಗಿದ್ದಾರೆ. ಇವರ ಹಲವು ಕವಿತೆಗಳು ಇತರ ಭಾಷೆಗಳಿಗೂ ಅನುವಾದಗೊಂಡು ಪ್ರಕಟವಾಗಿವೆ.

ಪ್ರೊ॥ ದೊಡ್ಡರಂಗೇಗೌಡರ ಕವನಗಳನ್ನೆಲ್ಲ ಒಂದೇ ಉಸಿರಿಗೆ ಓದಿದರೆ, ಸೀಗೆ ಮೆಳೆಯ ನಡುವೆ ಸಿಕ್ಕಿಕೊಂಡಂತೆ ಅನುಭವವಾಗುತ್ತದೆ; ಕಗ್ಗಾಡಿನ ನಡುವೆ ದಾರಿತಪ್ಪಿದಂತೆ ಭಾಸವಾಗುತ್ತದೆ. ಇವರ ಕಾವ್ಯಕಟ್ಟಿನಲ್ಲಿ ಸಾಧಾರಣವಾದದ್ದು ಯಾವುದು? ಅಸಾಧಾರಣವಾದದ್ದು ಯಾವುದು?

ಎಂದು ಹಕ್ಕಿ-ತೆಗೆಯುವುದಕ್ಕೆ ಕಕ್ಕಾ ಬಿಕ್ಕಿಯಾಗುತ್ತದೆ. ನಿಜ, ಯಾವುದೇ ಪ್ರಮುಖ ಕವಿಯಲ್ಲಿ ಅವನೆಲ್ಲ ರಚನೆಗಳಲ್ಲೂ ಒಂದೇ ರೀತಿಯ ಹದ ಇರುವುದಿಲ್ಲ, ಒಂದೇ ರೀತಿಯ ಮುದ ದೊರೆಯುವುದಿಲ್ಲ. ಇದಕ್ಕೆ ಶ್ರೀ ದೊಡ್ಡರಂಗೇಗೌಡರೂ ಹೊರತಾಗಿಲ್ಲ. ಶ್ರೀ ಗೌಡರ ಕಾವ್ಯರಾಶಿಯಲ್ಲಿ ಅತ್ಯುತ್ತಮವಾದುದನ್ನು ಆಯುವುದಕ್ಕೆ ಸಹನೆ, ಸಂಯಮ, ಸಮಚಿತ್ತ, ಸಹೃದಯ ಶ್ರೀಮಂತಿಕೆ ರಸಗ್ರಹಣ ಶಕ್ತಿ ಅಗತ್ಯ. ಆದರೆ, ಅಂಥ ಪ್ರಯತ್ನದ ಫಲ ನಿರಾಶಾದಾಯಕವಲ್ಲ ಎಂಬುದು ಸಂತೋಷದ ವಿಷಯ. ನವ್ಯ ಕಾವ್ಯ ಅಥವಾ ಆಧುನಿಕ ಕಾವ್ಯದಲ್ಲಿ ಸಂಕೀರ್ಣವಾಗಿದ್ದ ಈ ಕವಿ, ಭಾವಗೀತೆಗಳಲ್ಲಿ ಭಿನ್ನವಾಗಿರುವುದು ಸ್ಪಷ್ಟವಾಗಿದೆ. ಇದಕ್ಕೆ ಕಾರಣ ಹುಡುಕುವುದು ಸುಲಭವಾದರೂ ತೀರ್ಮಾನ ಹೇಳುವುದು ಸುಲಭವೂ ಅಲ್ಲ, ಅಂತಿಮವೂ ಅಲ್ಲ. ಸಾಂಕೇತಿಕತೆ, ಸಂಕೀರ್ಣತೆಯಿಂದ, ಸರಳತೆಗೆ, ಸಹಜತೆಗೆ, ಹೊರಳಿರುವ ಕವಿಗೆ ಆಗಿರುವ ಪ್ರಯೋಜನದ ಇತಿಮಿತಿಯನ್ನು ಕಾಲ ನಿರ್ಧರಿಸಬೇಕಾಗಿದೆ. ನವ್ಯ ಕಾವ್ಯ ಬರೆಯುವಾಗ ಕವಿಯಲ್ಲಿದ್ದ ಪುಟಿಯುವ ಉತ್ಸಾಹ, ಭಾವಗೀತೆ ರಚನೆಯಲ್ಲೂ ಬತ್ತದಂತಿರುವುದು ಗಮನಾರ್ಗವಾಗಿದೆ.

ಪ್ರೊ॥ ದೊಡ್ಡರಂಗೇಗೌಡರ ಕವಿತೆಗಳಲ್ಲಿ ಜನಪದ ಅಂಶಗಳು ಎಷ್ಟಿವೆ? ಹೇಗಿವೆ? ಏಕಿವೆ? ಎಂಬ ಪ್ರಶ್ನೆಗಳಿಗೆ ಎತ್ತಿ ತೋರಿಸಬಹುದಾದ ಪುರಾವೆಗಳು ಸಾಕಷ್ಟಿಲ್ಲವಾದರೂ ಉತ್ತರಿಸುವುದು ಕಷ್ಟವಾಗಲಾರದು. ಹಾಗೆ ನೋಡಿದರೆ ಜನಪದ ಅಂಶಗಳಿಲ್ಲದ ಕವಿಯಿಲ್ಲ, ಕಾವ್ಯವಿಲ್ಲ ಎಂದೇ ಹೇಳಬಹುದು. ಎಂಥ ಶಿಷ್ಟಕವಿಯಲ್ಲೂ ಜನಪದ ಅಂಶಗಳು ತಳಕು ಹಾಕಿಕೊಂಡಿರುತ್ತವೆ. ಕೆಲವರಲ್ಲಿ ಹೆಚ್ಚಿರಬಹುದು, ಹಲವರಲ್ಲಿ ಕಡಮೆಯಿರಬಹುದು, ಅಷ್ಟೆ. ಜನಪದ ಆವರಣ ದಟ್ಟವಾಗಿರುವ ನಮ್ಮ ಪರಿಸರದಲ್ಲಿ, ಜನಪದ ಸ್ಪರ್ಶದಿಂದ ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಪ್ರೊ॥ ದೊಡ್ಡರಂಗೇಗೌಡರೂ ಇದಕ್ಕೆ ಹೊರತಾಗಿಲ್ಲ. ಜನಪದ ಅಂಶಗಳನ್ನು ವಿಶೇಷವಾಗಿ ಬಳಸಿಕೊಳ್ಳುವ ಕವಿಗಳ ಪೈಕಿ ಇವರು ಮುಂಚೂಣಿಯಲ್ಲಿದ್ದಾರೆ.

ಅಧಿಕ ಪ್ರಮಾಣದಲ್ಲಿ ಜನಪದ ನುಡಿಗಟ್ಟು, ರೂಪಕಗಳು ವರಕವಿ ದ.ರಾ. ಬೇಂದ್ರೆಯವರಲ್ಲಿ ಕಂಡುಬರುವ ಹಾಗೆ; ಇಡೀ ಕೃತಿಯ ತುಂಬ ಜನಪದ ಆಶಯ, ಪ್ರತಿಮೆಗಳು ಚಂದ್ರಶೇಖರ ಕಂಬಾರರಲ್ಲಿ ಕಂಡು ಬರುವ ಹಾಗೆ, ದೊಡ್ಡರಂಗೇಗೌಡರಲ್ಲಿ ಜನಪದ ಅಂಶಗಳು ದಟ್ಟವಾಗಿ ಕಂಡುಬರುವುದಿಲ್ಲ. ಅಲ್ಲಲ್ಲಿ ಕಂಡೂ ಕಾಣದಂತೆ, ಕಲಾಪತ್ತಿನ ರೇಖೆಗಳಂತೆ, ಕಾವ್ಯದ ಒಡಲಿನಲ್ಲಿ ಜನಪದ ಕಿರಣಗಳು ಮಿಂಚಿರುವುದುಂಟು. ಗ್ರಾಮೀಣ ಪರಿಸರದಲ್ಲಿ ಹುಟ್ಟಿಬೆಳೆದು, ಗ್ರಾಮೀಣ ಜನಜೀವನವನ್ನು ಆದ್ಯಂತವಾಗಿ ಬಲ್ಲ ಈ ಕವಿಯ ಅಭಿವ್ಯಕ್ತಿ ಜನಪದ ಲಾಲಿತ್ಯಕ್ಕಿಂತ, ನವ್ಯದ ಬಿಗುವಿನತ್ತಲೇ ಬಾಗುವುದು ಹೆಚ್ಚು. ಕೇವಲ ಹಳ್ಳಿಯ ಹೆಸರನ್ನು ಹಳ್ಳಿಗರ ಸಮಸ್ಯೆಗಳನ್ನು ಬಳಸಿದ ಮಾತ್ರಕ್ಕೆ ಅವುಗಳನ್ನು ಜನಪದ ಅಂಶಗಳೆಂದು ಪಟ್ಟಿಮಾಡಲು ಸಾಧ್ಯವಿಲ್ಲ; ಅದು ಸಾಧುವೂ ಅಲ್ಲ. ತಲೆತಲಾಂತರದಿಂದ ಮನುಕುಲವನ್ನು ಪ್ರತಿಮಿಸಿರುವ ಜನಪದ ಆಶಯಗಳನ್ನು

ಸಾಂಕೇತಿಕವಾಗಿ, ಆಧುನಿಕ ಸಂದರ್ಭಕ್ಕೆ ಬಳಸಿಕೊಳ್ಳದಿದ್ದರೆ ಅದು ಜನಪದ ಕ್ರಿಯೆ ಅನ್ನಿಸಿಕೊಳ್ಳುವುದಿಲ್ಲ. ಈ ಅಂಶ ಪ್ರಸ್ತುತ ಕವಿಗೂ ಗೊತ್ತಿಲ್ಲವೆಂದಲ್ಲ. ಸಾಮಾನ್ಯವಾಗಿ ಎಲ್ಲಾ ಕವಿಗಳಲ್ಲೂ ಕಂಡುಬರುವ ಹಾಗೆ ಕವಿ ದೊಡ್ಡರಂಗೇಗೌಡರ ಕವನಗಳಲ್ಲೂ ಅಲ್ಲಲ್ಲಿ ಎಳೆ ಎಳೆಯಾಗಿ ಜನಪದ ಅಂಶಗಳು ಕಂಡುಬಂದಿವೆ. ಇವುಗಳನ್ನು ಬಳಸಿರುವ ರೀತಿ ಚೇತೋಹಾರಿಯಾಗಿದೆ, ಹೆಚ್ಚು ಕಾವ್ಯಮಯವಾಗಿದೆ. ನವ್ಯಕ್ಕಿರಲಿ, ರಮ್ಯಕ್ಕಿರಲಿ, ಓದಿಕೊಳ್ಳುವ ನವ್ಯ ಕವನಕ್ಕಾಗಲೀ ಹಾಡಿಕೊಳ್ಳುವ ಗೇಯಗೀತೆಗಾಗಲೀ ರಚನೆ ಸಂದರ್ಭದಲ್ಲಿ, ಈ ಕವಿ ಹಲವು ರೀತಿಯ ಪ್ರಯೋಗಗಳನ್ನು ಮಾಡುವುದುಂಟು. ಇಂಥ ಸಂದರ್ಭದಲ್ಲಿ ಜನಪದ ಅಂಶಗಳು, ಕರಿಮಣಿಯ ಸರದ ನಡುವೆ ಮುತ್ತು ಪೋಣಿಸಿದಂತೆ, ಹದವಾಗಿ ಬೆರೆತು ಕುತೂಹಲಕಾರಿಯಾದ ಶಬ್ದಚಿತ್ರಗಳನ್ನು ಹೆಣೆಯುತ್ತವೆ. ಇದು ಈ ಕವಿಯ ಕಾವ್ಯ ಸೃಷ್ಟಿಯ ವಿಶೇಷ. ಕವಿ ದೊಡ್ಡರಂಗೇಗೌಡರು ಜನಪದ ಅಂಶಗಳನ್ನು ಬಳಸಿಕೊಳ್ಳುವ ರೀತಿ, ಕವಿ ಬೆಟಗೇರಿ ಕೃಷ್ಣಶರ್ಮ ಹಾಗೂ ಮಧುರಕವಿ ಕೆ.ಎಸ್. ನರಸಿಂಹಸ್ವಾಮಿಯವರನ್ನು ನೆನಪಿಸುತ್ತದೆ. ಜನಪದರ ನಡುವೆಯೇ ಹುಟ್ಟಿ ಬೆಳೆದ ದೊಡ್ಡರಂಗೇಗೌಡರಿಗೆ ಇತರರಿಗಿಲ್ಲದ ಹೆಚ್ಚಿನ ಸೌಲಭ್ಯಗಳಿವೆ; ಕಾಳಜಿಗಳಿವೆ; ಸಮಾಜಮುಖಿ ಚಿಂತನೆಗಳಿವೆ; ಜನಪರವಾದ ನಿಲವುಗಳಿವೆ ಜನಪದ ಅಂಶಗಳ ಬಳಕೆ ತೀರಾ ಅಗತ್ಯವೇನೋ ಎನ್ನುವಷ್ಟರ ಮಟ್ಟಿಗೆ ತಾದಾತ್ಮ್ಯವನ್ನು ಸಾಧಿಸುವುದು ಇವರ ಹೆಚ್ಚುಗಾರಿಕೆಯಾಗಿದೆ. ಶುದ್ಧ ಕವಿಯಾಗಿದ್ದ ದೊಡ್ಡರಂಗೇಗೌಡರು ಜನಪ್ರಿಯಕವಿಯಾದ ಮೇಲೆ ಲಾಭವೂ ಆಗಿದೆ, ನಷ್ಟವೂ ಆಗಿದೆ. ಇದರ ವಿಶ್ಲೇಷಣೆ ಪ್ರತ್ಯೇಕವಾಗಿಯೇ ನಡೆಯಬೇಕಾಗಿದೆ. ರೂಢಿಗತವಾದ ಕಾವ್ಯ ವಸ್ತುಗಳನ್ನು ಮೀರಿ ಜನಪರ ಕಾಳಜಿಗೆ ಹೆಚ್ಚಾಗಿ ಮುಗಿಬೀಳುವ ಕವಿಗಳು ಇಂಥ ವಿವೇಚನೆಯ ಸವಾಲನ್ನು ಎದುರಿಸುವುದು ಅನಿವಾರ್ಯವಾಗುತ್ತದೆ.

ಕಾವ್ಯಕ್ರಿಯೆಗೆ ರೂಪಕ ಜೀವಾಳ. ದೊಡ್ಡರಂಗೇಗೌಡರು ತಮ್ಮ ಕಾವ್ಯ ಕೃಷಿಗೆ ರೂಪಕಗಳನ್ನು ಧಾರಾಳವಾಗಿ ದುಡಿಸಿಕೊಳ್ಳುತ್ತಾರೆ. ಇವರ ಕಾವ್ಯ ನಿರ್ಮಿತಿಯ ಹೆಜ್ಜೆ ಹೆಜ್ಜೆಯಲ್ಲೂ ರೂಪಕ ಸಾಲುಗಟ್ಟುತ್ತೆ. ಜನಪದ ನುಡಿಗಳನ್ನು ರೂಪಕ ನಿರ್ಮಾಣಕ್ಕೆ ಸಹಜವಾಗಿ ಎರಕಹೊಯ್ಯುವುದು ಕವಿಗೆ ರಕ್ತಗತವಾಗಿದೆ. ಜನಪದ ನುಡಿ, ನುಡಿಗಟ್ಟುಗಳನ್ನು ವಿವಿಧ ವಿನ್ಯಾಸಗಳಲ್ಲಿ ಬಳಸಿ ಕಾವ್ಯಕ್ಕೆ ಮೆರುಗುಕೊಡುವುದು ಈ ಕವಿಯ ವಿಶೇಷವಾಗಿದೆ.. ಇವರ ಕವಿತೆಗಳಲ್ಲಿ ಯಥೋಚಿತವಾಗಿ ಕಾಣಿಸಿಕೊಳ್ಳುವ ಜನಪದ ಛಾಯೆಯ ಹಾಗೂ ಇತರ ಕೆಲವು ರೂಪಕಗಳು ಹೀಗಿವೆ:

ನೋಟದೂಟ, ರಾಸಲೀಲೆ, ಸಿರಿವೀಣೆ, ನಲ್ಮೆ ಭಾನು, ಅಕ್ಕರೆಹೊನ್ನು, ದಿವ್ಯಗಂಗೆ, ನುಡುಬಿತ್ತು, ಹೂಮ್ಯೆ, ಹೊನ್ನಾರು, ರಾಗಬಲೆ, ಮೈತ್ರಿಜೇನು, ರಸಿಕಬನ, ಗಜ್ಜುಗ ನೇತ್ರೆ, ತಿಂಗಳನಗೆ, ನಗ್ನಕಳಶ, ನೋಟದೂಟೆ, ನಲ್ಮೆ ದೋಣಿ, ಮಧುಬನ, ಬವಣೆ ಪಯಣ, ಮಹಾಮಾಯೆ, ಶೀಲದೀಪ, ಇಮ್ಮಾವು, ಸಿರಿತೊರೆ, ಬೆಂಕಿಬರೆ, ರಾಗೋತ್ಸವ, ಹೊನ್ನಕ್ಕಿ,

ಬೆಡಗಾಟ, ಪ್ರೇಮರಂಗು, ನಾದಗಂಗೆ, ಮೈತ್ರಿಮುಟ್ಟು, ರಾಗರತಿ, ಚುಕ್ಕಿಚಂದ್ರಮ, ಕಾವ್ಯಮಳೆ, ಕಾವ್ಯ ಕಡಗ, ಸಂತೋಷ ಕೊಳಗ, ಪ್ರೀತಿ ಹಕ್ಕಿ, ಹಂಬಲ ಗಂಗೆ, ನಲ್ಮೆ ನಿಕ್ಷೇಪ, ಹೊಂಗದಿರು, ಪುರಾಣಸ್ಪಂದ, ಋತುರಾಜ, ರಸರಾಗ, ಬೆಳ್ದೊರೆ, ತನಿಗುಸುಗು, ತಾಪಜಾಲ, ಮಂಗಳಕಾರಣೆ, ಮೌನಗಿರಿ, ಹೊಂಗೆ ನೆರಳು, ಓರಿಗುರಿ, ಬಾಳಾಗ್ನಿ, ತಾಳ್ಮೆ ತಪ, ನೆಲದಾಯಿ, ಭಾವತೇರು, ಹೂಮಳೆ, ನೇಗಿಲನೆಂಟ, ವಿಚಾರ ಹಣತೆ, ತೂಲಧಾರಿ, ಶ್ರಮಿಕಗೀತೆ, ಕೊರತೆ ಕೂಡು, ಕಾರ್ಮಿಕಗತಿ, ಕಲಾಚಿಗುರು, ನಾದವಾಹಿನಿ, ಗೋಕಂಠ-ಕಿಂಕಿಣಿ, ಶಬ್ದಸಿರಿ, ಕಾಮಕೂಟ, ಅಗ್ನಿಪೀಠ, ಜ್ವಾಲಾಪೀಠ, ಜನಮಾನಸ, ಧರ್ಮಾಂಕಣ, ಹೊನ್ನೇಸರ, ಶಿಲಾಮಣಿ, ಸಂಸ್ಕೃತಿ ತೇರು, ಪುಷ್ಪಕಾಶಿ. ತಾರಾಪಥ, ಧವಳಧಾರಿಣಿ, ಜ್ಞಾನವೈತರಣಿ, ಗೋಸುಂಬೆ ಗೀಳು, ಉರಿಲಿಂಗ, ಅನೂಹ್ಯ, ಹೊಂಬಾಳೆ, ಹೊಂಚಿಗುರು, ಗಾಳಿಗೀತ ಇತ್ಯಾದಿ.

ಕವಿ ದೊಡ್ಡರಂಗೇಗೌಡರ ರೂಪಕ ಸೃಷ್ಟಿ ರಂಜಕವಾಗಿದೆ. ನವ್ಯ ಕವನ ರಚನೆಯಲ್ಲಾಗಲೀ ಜನಪದ ಹಿನ್ನೆಲೆಯ ಕವಿತಾ ರಚನೆಯಲ್ಲಾಗಲೀ ಸುಲಲಿತವಾಗಿ ರೂಪಕಗಳನ್ನು ಸೃಷ್ಟಿಸಬಲ್ಲರು. ಒಟ್ಟು ಕಾವ್ಯ ಬಂಧಕ್ಕೆ ಸ್ವಸೃಷ್ಟಿಯ ರೂಪಕಗಳನ್ನು ಅರ್ಥಪೂರ್ಣವಾಗಿ ದುಡಿಸಿಕೊಳ್ಳುವ ಗುಟ್ಟು ಈ ಕವಿಗೆ ಸಿದ್ಧಿಸಿದೆ. ಕನ್ನಡ ಕಾವ್ಯದ ಸಂದರ್ಭದಲ್ಲಿ ಮಹಾಕವಿ ಕುಮಾರವ್ಯಾಸ, ಶಿವಯೋಗಿ ಬಸವಣ್ಣನವರಂತಹ ಕೆಲವೇ ಕವಿಗಳಲ್ಲಿ ವಿಶೇಷವಾಗಿ ಕಾಣುವ ರೂಪಕ ಸೃಷ್ಟಿ, ಕಲಾತ್ಮಕ ದೃಷ್ಟಿ ಕವಿ ದೊಡ್ಡರಂಗೇಗೌಡರಲ್ಲಿ ನಿಚ್ಚಳವಾಗಿ ಕಾಣುತ್ತದೆ. ಆಧುನಿಕ ಕನ್ನಡ ಕಾವ್ಯದಲ್ಲಿ ಹೇರಳವಾಗಿ ರೂಪಕ ರಚನೆ ಮಾಡಿರುವ ಕವಿಗಳಲ್ಲಿ ಇವರು ವಿಶೇಷ ಉಲ್ಲೇಖಕ್ಕೆ ಅರ್ಹರಾಗಿದ್ದಾರೆ. ಇವರ ಎಲ್ಲ ಕವಿತೆಗಳಲ್ಲೂ ಒಂದೆರಡಾದರೂ ರೂಪಕಗಳು ದೊರೆಯುತ್ತವೆ.

ಶ್ರೀ ದೊಡ್ಡರಂಗೇಗೌಡರ ಕವಿತೆಗಳಲ್ಲಿ ಜನಪದ ಸೊಗಡಿನ ಕೆಲವು ಶಬ್ದಗಳು ವಸ್ತು ವಿಶೇಷಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಒಟ್ಟು ಕವಿತೆಗಳ ಹಿನ್ನೆಲೆಯಲ್ಲಿ ಪುನರುಕ್ತಿಯೆನಿಸಿದರೂ ಬಿಡಿಯಾಗಿ ನೋಡಿದರೆ ಆಕರ್ಷಕವಾಗಿರುವುದುಂಟು. ಕೆಲವು ಪ್ರಾಣಿ ಪಕ್ಷಿ ಗಿಡಮರ, ಹೂಬಳ್ಳಿ, ಹಬ್ಬಹರಿದಿನ, ಆಚರಣೆ ಆರಾಧನೆ, ತೇರು ಜಾತ್ರೆ, ಪ್ರಕೃತಿಯಗೂಢ, ಪ್ರೀತಿ ವೈವಿಧ್ಯಗಳು ಈ ನಿಟ್ಟಿನಲ್ಲಿ ಗಮನಾರ್ಹವಾಗಿವೆ. ಈ ಕವಿಯ ಶಬ್ದಜಾಲದ ಕೆಲವು ಉದಾಹರಣೆಗಳನ್ನು ನೋಡಬಹುದು:

ಉಪ್ಪುಖಾರ, ಬೇವು ಬೆಲ್ಲ, ಸೀಸು, ಮೆಟ್ಟು, ಸುಗ್ಗಿ, ರಾಗಿಹೊಲ, ಹುಚ್ಚೆಳ್ಳು, ಸಾಸಿವೆ, ಅವರೆ, ಕಡಲೆ, ಕಬ್ಬು, ಜೋಳ, ನುಗ್ಗೆ, ಮೋಪು, ರಾಸು, ಮಾರಿಹಬ್ಬ, ನಗೆಸಾರ, ಒದ್ದು, ಹೊನ್ನಾರು, ಗುಂಚಕ್ಕಿ, ಕದಿರು, ಜೀರುಂಡೆ, ಗುಸ್ಸಹಾಕು, ಬಾಗಿನ, ನಾಗರ, ಕಾಜಾಣ, ಕೆಂದಾವರೆ, ಹೊಂಬಾಳೆ, ಪಲುಕು, ಹೊಂಗೆ, ಕೇದಗೆ, ಸೂಲಂಗಿ, ನೆಗ್ಗಿಲು, ಜೀಕು, ಮೊಸಳೆ ಕಣ್ಣೀರು, ಡೌಲು, ಮುಂಗಾರು, ಗುಡಿ, ಪೌಳಿ, ತುಡುಗಿ, ಗುಂಗು, ಸೋಗೆ ನವಿಲು, ಮಲ್ಲಿಗೆ

ಮೊಗ್ಗು, ರಂಕಲು, ಹೈಕಳು, ಕೆಂಡಕಾರು, ಆಜುಬಾಜು, ಹೊತ್ತಾರೆ, ಕೆಂಬಾರ, ಕಣ್ಣುಹೊಡೆ, ಕೋಗಿಲೆ, ಗಿಣಿ, ಬಾನಾಡಿ, ನವಿರು, ನೊರೆಹಾಲು, ಬೇಗೂರು ಸಂತೆ, ತುಮ್ಕೂರ ತೇರು, ಬೆಂಡೋಲೆ, ಸುತ್ತು ಸುಣ್ಣವಾಗು, ಕಣ್ಣಿಗೆ ಎಣ್ಣೆಹೊಯ್ಯುಕೊಂಡು, ಹಾಲಕ್ಕಿ, ಹಾದಿಹಾವು, ಬೇಲಿ ಎದ್ದು ಹೊಲ ಮೆಯ್ದಾಗ, ಹಕ್ಕಿಪಕ್ಕಿ, ಮಸ್ತು, ದವನ, ಚಂಡ್ಹೂವು, ವಜನು, ವೈನು, ಚೊಂಪೆ, ಬಿಕ್ಕೆಹಲಸು, ಮದನಿಂಗಿ, ಕೋರಿಬಟ್ಟೆ, ಕಟ್ಟೆ, ಅಂಬಟಿಹೂ, ಹಾಲುಗಿಂಡಿ, ಅಕ್ಕಡಿಸಾಲು, ತಿಟ್ಟುತೆವರು, ಈಳೆ, ಸೋಮೆ, ಆಟಕಟ್ಟು, ಕರಾಮತ್ತು, ಬೆಳ್ಳಕ್ಕಿ, ಪಡಪೋಸಿ, ಕದಂಬದ ಹೂ, ಚಿಟುಕು ಮುಳ್ಳಾಡಿಸು, ಗೊರವಂಕ, ಮಂಡರಗಪ್ಪೆ, ಸಿಡಿಗುಟ್ಟು, ತಕರಾರು, ಡೊಣೆನಾಯಕ, ದಿನಮಾನ, ಮಣಕ, ಸಿವುಡಕಟ್ಟು, ತಗಾದೆ ಇತ್ಯಾದಿ.

ಕವಿಯೇ ಹೇಳಿಕೊಂಡಿರುವಂತೆ ದೊಡ್ಡರಂಗೇಗೌಡರ ಕವಿತೆಗಳಲ್ಲಿ ಪ್ರಕೃತಿ, ಪ್ರೀತಿಗೆ ಸಂಬಂಧಿಸಿದ ವಿಷಯಗಳು ಹೇರಳವಾಗಿವೆ. ಪ್ರಕೃತಿ ಸಂದರ್ಭದ ಚೈತ್ರದ ಬಗೆಗೆ, ಮನುಷ್ಯ ಸಂಬಂಧದ ಪ್ರೇಮದ ಬಗೆಗೆ, ಮತ್ತೆ ಮತ್ತೆ ಬರೆದಿರುವುದುಂಟು. ಪುನರುಕ್ತಿಯಾದರೂ ಈ ವಿಷಯಗಳ ಬಗೆಗೆ ಈ ಕವಿ ಪುನಃ ಪುನಃ ಬರೆಯುವುದೇಕೆ? ಸಾಂದರ್ಭಿಕ ಒತ್ತಡವೋ? ವೈವಿಧ್ಯತೆಯ ಕುತೂಹಲವೋ? ಇದರಿಂದ ಕವಿಸೃಷ್ಟಿಯ ಒಟ್ಟಂದದ ಶಬ್ದ ಚಿತ್ರಕ್ಕೆ ಭಂಗಬರುವುದಿಲ್ಲವೆ? ಈ ಬಗೆಗೆ ವಿಚಾರ ಮಂಥನವಾಗಬೇಕಾಗಿದೆ.

ದೊಡ್ಡರಂಗೇಗೌಡರ 'ರಾಗತರಂಗಿಣಿ' ಕವನ ಸಂಗ್ರಹದ 'ಗ್ರಾಮೀಣ ಚಿತ್ರ' ಭಾವಗೀತೆ ಇಡಿಯಾಗಿ ಜನಪದ ಅಂಶಗಳಿಂದ ಇಡಿಕಿರಿದಿದೆ. ಕವಿಯ ಸದಭಿರುಚಿಯ ಸುಂದರ ಪ್ರಕೃತಿ ಚಿತ್ರಣಕ್ಕೆ ಇದು ಸಾಕ್ಷಿಯಾಗಿದೆ. ಇಂತಹ ಕವಿತೆಗಳ ರಚನೆಯಲ್ಲಿ ಈ ಕವಿಗಿರುವ ಇತಿಮಿತಿಯನ್ನೂ ಇದು ಸೂಚಿಸುತ್ತದೆ. ವಿಶಾಲವಾದ ಪ್ರಕೃತಿಯ ಹಾಳೆಯ ಮೇಲೆ, ಇಷ್ಟವಾದ ಬಣ್ಣಗಳನ್ನು ಚೆಲ್ಲಿದಾಗ, ಸ್ಪಷ್ಟವಾಗಿ ಮೂಡುವ ವಿನೂತನ ಚಿತ್ರಗಳಂತೆ ಇಲ್ಲಿನ ವರ್ಣನೆಗಳು ಆಕರ್ಷಿಸುತ್ತವೆ. ಗ್ರಾಮೀಣ ಪ್ರದೇಶದ ಆಡುಮಾತುಗಳು ಅನನ್ಯವಾಗಿ ದುಡಿದಿರುವುದು ವೇದ್ಯವಾಗುತ್ತದೆ:

ಹಾರ್ಯಾವೋ ಬೆಳ್ಳಕ್ಕಿ ಗದ್ದೆಯ ಬಯಲಾಗೆ
ಸೆಳೆದಾವೋ ಕಣ್ಣುಕ್ಕಿ ಚಿತ್ರ ಬರೆದ್ಹಂಗೆ
ಅಂಕುಡೊಂಕಿನ ನದಿ
ಗುಡ್ಡ ಬೆಟ್ಟದ ನದಿ
ಹೇಳ್ಯಾವೋ ಬಣ್ಣಿಸಿ ವೈನಾದ ಚೆಲುವನ್ನೇ
ನೀಡ್ಯಾವೋ ಸಂತೋಷ ಕಣ್ಣಿಗೆ ಮನಸೀಗೆ!
ನಗುತಾಳೋ ಭೂದೇವಿ ಹಸಿರ ಪತ್ತಲ ಉಟ್ಟು
ತೊನೆದಾಳೋ ತೂಗಾಡಿ ತೆನೆತೆನೆಯ ರವಿಕೆ ತೊಟ್ಟು

ಒತ್ತು ಒತ್ತಾದ ಹೂವು
ಜಾಜಿ ಮಲ್ಲಿಗೆ ಮಾವು
ನಕ್ಕಾವೆ ಮೈದುಂಬಿ ನೂರೆಂಟು ಬಗೆಯಾಗೆ
ಹಾಡ್ಯಾವೆ ಗುಂಚಕ್ಕಿ ಚಿಲಿಪಿಲಿ ಸ್ವರದಾಗೆ!
ತಾಕ್ಯಾವೋ ಮರಗಿಡ ಟೊಂಗೆ ಟೊಂಗೆಗೆ ಜೀಕಿ
ಮೂಡ್ಯಾವೋ ಹಾಡೆಲ್ಲಾ ಗರಿಗೆ ಗರಿಯು ತಾಕಿ
ಹೆಜ್ಜೆ ಹೆಜ್ಜೆಗೂ ಸೊಬಗು
ಕಬ್ಬಿನ ಜಲ್ಲೆ ಬೆಡಗು
ತೀಡ್ಯೆತೋ ತಂಗಾಳಿ ಎಳೆಯ ಬಾಳೆಯು ಬಳುಕಿ
ಮಾಡ್ಯೆತೋ ವಯ್ಯಾರ ನುಗ್ಗೆ ಗಿಡಗಳು ಕುಲುಕಿ!

ಈ ಭಾವಗೀತೆ ಸರಳವಾಗಿದೆ, ಸುಂದರವಾಗಿದೆ. ವಿವರಗಳು ಕಣ್ಣಿಗೆ ಕಟ್ಟುವಂತೆ ವರ್ಣನೆಯಾಗಿವೆ. ತನ್ಮೂಲಕ ಅನುಪಮವಾದ ಶಬ್ದ ಚಿತ್ರಮೂಡಿ ನಿಲ್ಲುತ್ತದೆ. 'ರಾಗತರಂಗಿಣಿ' ಸಂಗ್ರಹದ 'ಬಂಗಾರದ ಬೆಳಗು' ಭಾವಗೀತೆ ಕೂಡ ಗ್ರಾಮೀಣ ಪರಿಸರದ ವರ್ಣನೆ ನೀಡುವಲ್ಲಿ ನವುರಾದ ಭಾವನೆಗಳಿಗೂ ಎಡೆಮಾಡಿಕೊಡುವಂತೆ ರಚನೆಯಾಗಿದೆ.

'ಗೀತಗಾರುಡಿ' ಸಂಗ್ರಹದ ಹಲವು ಕವಿತೆಗಳಲ್ಲಿ ಹಳ್ಳಿಯ ಪರಿಸರವನ್ನು ಪರಿಚಯಿಸುವ, ಜನಪದ ಅಂಶಗಳನ್ನು ಯಥೋಚಿತವಾಗಿ ಬಳಸಿಕೊಂಡಿರುವ ವರ್ಣನೆಗಳು ಸಾಕಷ್ಟಿವೆ. 'ಆಸೆ-ಒಸಗೆ', 'ಮೋಹಕ ಮುಂಜಾನೆ' ಮೊದಲಾದ ಕವಿತೆಗಳಲ್ಲಿ ಸುಂದರ ಉಪಮೆ, ಉಪಮಾನ, ಶಬ್ದ ಚಿತ್ರಗಳಿಂದ ಕೂಡಿದ ಭಾಗಗಳಿವೆ. ಒಂದೆರಡು ಉದಾಹರಣೆಗಳನ್ನು ಮೆಲುಕುಹಾಕಬಹುದು:

ಬೆಳ್ಳಕ್ಕಿ ಸಾಲು ತೇಲಿ ತೇಲಿ ಪಲ್ಲಕ್ಕಿ ತೂಗ್ಯೆತೆ
ಮಲ್ಲಿಗೆ ತೋಟ ಮಿಂಚಿ ಮಿಂಚಿ ಬೆಳ್ಳಗೆ ಹೊಳೆದ್ಯೆತೆ..
(-ರಂಗಾದ ಬೆಳಗು)

ತೋಟ ತುಡಿಕೆಗಳೆಲ್ಲ ಕಿರಣಸ್ನಾನವ ಮಾಡಿ
ಪುಳಕಗೊಂಡವು ಪಕ್ಷಿ ಮೇಳ ಕೇಳಿ;
ಊರ ಗೋವುಗಳೆಲ್ಲ ಹುಲ್ಲುಗಾವಲಿನಲ್ಲಿ
ಅತ್ತಿತ್ತ ಹರಿಯುತಿವೆ ಕರುಗಳರಸಿ!
(-ಬಂಗಾರದ ಮುಂಜಾನೆ)

''ಹೊಸ ಹೊನಲು' ಕವನ ಸಂಗ್ರಹದಲ್ಲೂ ಇಂಥ ಶಬ್ದ ಚಿತ್ರಗಳುಂಟು;

ನಮ್ಮ ಹಳ್ಳಿ ಜನಪ್ರೀತಿ
ಬೆಳ್ದಿಂಗಳಿನ ರೀತಿ.
(-ನಮ್ಮ ಹಳ್ಳಿ ಬದುಕು)

ಕಣಿವೆಯ ಮಡಿಲಿನಲ್ಲಿ ಹಕ್ಕಿಯ ಓಂಕಾರ
ಹೊಂಗೆಯ ತೊಂಗಲಲಿ ದುಂಬಿಯ ಝೇಂಕಾರ,
(-ಹೊಂಬೆಳಗಿನ ಉದಯ)

ಗದ್ದೆ ಗದ್ದೆಯಲ್ಲೂ ಬೆಳ್ಳಕ್ಕಿ ಬೀಡು ಸೌಂದರ್ಯ ಲಹರಿಹರಿತ
ಮರಗಿಡಗಳಲ್ಲಿ ಉತ್ಸಾಹಭಾವ ನೋಟಕನ ಗಮನ ಸೆಳೆತ
ತಿಟ್ಟು ತೆವರಿನಲ್ಲಿ ದೊಂಡು ಹಾದಿಯಲ್ಲಿ ಪ್ರಕೃತಿ ಬರೆದ ಗೀತ
ಕವಿಕಾವ್ಯಕ್ಕಿಂತ ಜೀವಂತ ದೊರೆತ ಸಿರಿ ಇಳೆಯ ಚೆಲುವಿನ ಸೆಳೆತ.
(-ತಿಟ್ಟು ತೆವರಿನ ತರುಣಿ)

'ಬಯಲು ಸೀಮೆಯ ಬೆಳಗು' ಮತ್ತು 'ನೆಲದಗೀತ' ಎಂಬ ಕವಿತೆಗಳು ಜನಪದ ನುಡಿಲಾಲಿತ್ಯದಿಂದ ಗಮನ ಸೆಳೆಯುತ್ತವೆ.

ಅತ್ಯುತ್ತಮ ಶಬ್ದ ಚಿತ್ರ ನಿರ್ಮಿತಿಗೆ ದೊಡ್ಡರಂಗೇಗೌಡರು ಸುಂದರವಾದ ಉಪಮೆ ಉಪಮಾನಗಳನ್ನು ಸುಲಲಿತವಾಗಿ ಸೃಜಿಸುತ್ತಾರೆ. ಇವು ಕವಿತೆಯ ಒಟ್ಟಂದಕ್ಕೆ ಪೂರಕವಾಗಿ ಮೆರುಗುಕೊಡುತ್ತವೆ. 'ರಾಗತರಂಗಿಣಿ' ಸಂಗ್ರಹದ ಒಂದೆರಡು ಪದ್ಯ ಭಾಗಗಳನ್ನು ಗಮನಿಸಬಹುದು:

ನನ್ನ ಕಂದನ ಮೊಗವು ನಗುನಗುವ ಚೆಂಡ್ಹೂವು
ಎಳೆಗಣ್ಣು ಚೆಂದಿರ ಹೊಳೆದ್ಹಾಂಗೆ - ನನ ಕಂದ
ನಡೆದಾರೆ ಮಿಂಚೇನೇ ಹರಿದ್ಹಾಂಗೆ!
(-ನನ್ನ ಕಂದ)

ಮುಂಜಾನೆ ಹೂವು ಮೈಬಣ್ಣದವಳೇ
ಸಂಕೋಚವೇಕೆ ಸಂಗಾತಿ?
ಹೊಂಬಾಳೆ ನಗೆಯ ಕಣ್ತುಂಬಿದವಳೇ
ನನ್ನಿಂದ ಬಾಳು ಸಂಪ್ರೀತಿ!
(-ನೀನಾದೆ ಪ್ರೀತಿ ಸಂಗಾತಿ)

ಶ್ರೀ ದೊಡ್ಡರಂಗೇಗೌಡರ ಕವಿತೆಗಳಲ್ಲಿ ದೇಸೀಸೊಗಡಿನ ಸೂಕ್ತಿಪ್ರಾಯವಾದ ಸಾಲುಗಳು ಸಾಕಷ್ಟು ದೊರೆಯುತ್ತವೆ. ಇವು ಧ್ವನಿಪೂರ್ಣವಾದ ಅರ್ಥವ್ಯಾಪ್ತಿಯನ್ನು ಒಳಗೊಂಡಿದ್ದು ಅಲ್ಲಿ ಜನಪದ ಅಂಶಗಳನ್ನೂ ತುಂಬಿಕೊಂಡಿವೆ. ಅಂತಹ ಕೆಲವು ಸೂಕ್ತಿಗಳನ್ನು ಪರಿಭಾವಿಸಬಹುದು:

"ಪ್ರಕೃತಿಯೊಳಗೆ ಅಳಿವು ಉಳಿವು ಒಂದು ಬಿಟ್ಟು ಇನ್ನೊಂದಿಲ್ಲ ಮುಗಿಯದ ಲೋಕದಲ್ಲಿ ಬಾಳಬಟ್ಟೆ ಬೇವು ಬೆಲ್ಲ!"

"ಜಟಿಲತೆ ಜಗದಲಿ ಗೆಲುವನು ಪಡೆಯಲು
ತಿಳಿವಿನ ಬೆಳಕಲಿ ನಿಷ್ಠೆಯೇ ನೇಗಿಲು."
"ಎಲ್ಲಿಂದ ಎಲ್ಲಿಗೆ ಹೋದರೂ ಬೆರಗು ಕಾಣೋ ಈ ಜಗ!"
"ಮತ ಧರ್ಮಗಳು ಸಾವಿರವಾದರೂ ಮಾನವತೆಯು ಒಂದೇ
ನಡೆನುಡಿ ಎನಿತೇ ಇದ್ದರೂ ಹೃದಯದ ಮಿಡಿತಗಳೊಂದೇ."
"ಮೋದ ಆತ್ಮದ ದೀಪ!"
"ಭೂಮಿ ಬಾನು ಇರೋತನಕ ಪ್ರೀತಿ ಹೆಸರು ಉಳಿಯುತ್ತೈತೆ
ಸೂರ್ಯಚಂದ್ರ ಇರೋತನಕ ಪ್ರೀತಿ ಆತ್ಮ ಮೊರೆಯುತ್ತೈತೆ!"
"ಎಲ್ಲಿ ಸ್ನೇಹವೋ ಅಲ್ಲಿ ಅರ್ಪಣ
ಬಾಂಧವ್ಯ ಅಲ್ಲಿ ನೂತನ!"
"ಬಾಳ ಭಾವಗಂಗೆಯಲ್ಲಿ ಪ್ರೀತಿ ಪುಣ್ಯದೋಣಿ
ಪ್ರೀತಿ ಪುಣ್ಯದೋಣಿಯಲ್ಲಿ ಸಂಗಾತಿ ಸ್ನೇಹಭರಣಿ!"
"ಎಲ್ಲಿ ಜನಪದ ಕಲೆಯು ಸ್ಪಂದಿತ
ಅಲ್ಲಿ ಮಣ್ಣು ಕಂಪು ವರ್ಧಿತ."
"ಬಾಳೆಂಬುದು ಎಂದಿಗೂನು ಭೋಗವಲ್ಲಯ್ಯ
ಇರಬೇಕು ನಮಗೆ ದೈವಭಕ್ತಿ ಆಗಲೇಜಯ
ತ್ಯಾಗದಲ್ಲೇ ಬಾಳ ಸಮೃದ್ಧಿ ಇಹುದುಕಾಣಯ್ಯ
ಭಕ್ತರಾಗಿ ಸೇವೆಗೈಯಲು ಅವ್ಯಕ್ತದ ಅಭಯ!"

ಪ್ರೊ|| ದೊಡ್ಡರಂಗೇಗೌಡರು ಹಠಯೋಗಿಯಂತೆ ಆಧುನಿಕ ಕಾವ್ಯರಚನೆಯಲ್ಲಿ ತೊಡಗಿದವರು; ಕಾವ್ಯ ಸತ್ವ, ಕಾವ್ಯ ಸಂಖ್ಯೆಯಲ್ಲಿ ಪೈಪೋಟಿ ನಡೆಸಿದಂತೆ ಸಮೃದ್ಧವಾದ ಫಸಲು ತೆಗೆಯುವಲ್ಲಿ ಸಾಕಷ್ಟು ಯಶಸ್ವಿಯಾದವರು; ಕನ್ನಡದಲ್ಲಿ ಉತ್ಕೃಷ್ಟವಾದ ಭಾವಗೀತೆ ಪರಂಪರೆಯನ್ನು ಸಾರ್ಥಕವಾಗಿ ಮುಂದುವರಿಸಿದವರು. ಕಾವ್ಯ ಸಂಖ್ಯೆಯ ಜೊತೆಜೊತೆಗೆ ಏಕತಾನತೆ, ಪುನರುಕ್ತಿಗಳು ಸಹಜವಾಗಿಯೇ ತಲೆಹಾಕಿದಾಗ, ತಪ್ಪಿಸಿಕೊಳ್ಳುವ ಉಪಾಯದಿಂದ

ಜನಪದ ಪರಿವೇಷದತ್ತ ಹೊರಳಿದಂತೆ ಭಾಸವಾಗುತ್ತದೆ. ಈ ಹೊರಳುವಿಕೆಯಿಂದ ಇವರ ಕವಿತೆಗಳಿಗೆ ಗಣನೀಯವಾಗಿ ಲಾಭವಾಯಿತು; ಭಾವಗೀತೆಗಳಲ್ಲಿ ಹೊಸಬನಿ, ರಮ್ಯ ರಂಗು ಲೇಪನಗೊಂಡಿತು. ಇಲ್ಲೂ ತನ್ಮಯವಾಗಿ, ಏಕ ಪ್ರಕಾರವಾಗಿ ರಚನೆಗೆ ತೊಡಗಿರುವುದು ಭಾವಗೀತೆಗಳ ಸಂಖ್ಯೆಯಿಂದ ವೇದ್ಯವಾಗುತ್ತದೆ. ಇವರ ಆಧುನಿಕ ಕವನಗಳಲ್ಲಿ ಕಂಡುಬರುವ ಏಕತಾನತೆ, ಪುನರುಕ್ತಿ, ಜನಪದ ಸೊಗಡಿನ ಭಾವಗೀತೆಗಳಲ್ಲೂ ಕಂಡು ಬಂದಿದೆ. ಚಲನಚಿತ್ರ ಗೀತರಚನೆ ಹವ್ಯಾಸ, ಧ್ವನಿಸುರಳಿ ಜನಪ್ರಿಯತೆಯ ವ್ಯಾಮೋಹ, ಇದಕ್ಕೆ ಕಾರಣವಾಗಿರಬಹುದೇನೋ ಎನ್ನಿಸುತ್ತದೆ. ಆಧುನಿಕ ಕವನ ರಚನೆಯ ಯಾಂತ್ರಿಕತೆಯ ನಿವಾರಣೆಗೆ ಜನಪದ ಅಂಶದತ್ತ ಕವಿ ವಾಲಿದಂತೆ, ಜನಪದ ಪರಿವೇಷದ ಯಾಂತ್ರಿಕತೆಯಿಂದ ನಿವಾರಣೆ ಪಡೆಯಲು ಮತ್ತೊಂದು ಮಜಲಿಗೆ ಕಣ್ಣುಹಾಯಿಸುವುದು ಅನಿವಾರ್ಯವಾಗಿದೆ. ಅಂಥ ಶಕ್ತಿಯೂ ಈ ಕವಿಗಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಅಂಥ ಇನ್ನೊಂದು ದನಿಯ ಫಸಲಿನ ನಿರೀಕ್ಷೆ ಹುಸಿಯಾಗಲಾರದೆಂದು ಭಾವಿಸುತ್ತೇನೆ.

ಶ್ರೀ ದೊಡ್ಡರಂಗೇಗೌಡರ ರಮ್ಯ, ನವ್ಯ, ಆಧುನಿಕ, ಕವನಗಳಲ್ಲೆಲ್ಲಾ ಅಷ್ಟೋ ಇಷ್ಟೋ ಜನಪದ ಅಂಶಗಳು ಇರುವುದುಂಟು. ಆದರೆ, ನಿಗೂಢ ಪ್ರಕೃತಿ, ಅಮರ ಪ್ರೇಮ, ದೈವಾರಾಧನೆಗಳನ್ನು ಕುರಿತು ಭಾವಗೀತೆಗಳಲ್ಲಿ ಜನಪದ ಅಂಶಗಳು ದಟ್ಟವಾಗಿರುವುದನ್ನು ಸ್ಪಷ್ಟವಾಗಿ ಕಾಣಬಹುದು. ಇದರಿಂದ ಇವರ ಕಾವ್ಯದ ಹದವೇ ಭಿನ್ನವಾಗಲು ಸಾಧ್ಯವಾಗಿದೆ. ಕನ್ನಡ ಆಧುನಿಕ ಕವನ ರಚನಕಾರರಲ್ಲಿ ಜನಪದ ಅಂಶಗಳನ್ನು ವಿನೂತನವಾಗಿ ಬಳಸಿಕೊಂಡು ಯಶಸ್ವೀ ಕವಿತೆಗಳನ್ನು ನೀಡಿರುವುದರಲ್ಲಿ ಕವಿ ದೊಡ್ಡರಂಗೇಗೌಡರು ಅಗ್ರಗಣ್ಯರಾಗಿದ್ದಾರೆ. ಈ ಹಿನ್ನೆಲೆಯ ಕವಿತೆಗಳನ್ನು ಮತ್ತೆ ಮತ್ತೆ ಓದಿ ಸಂತೋಷಿಸಬಹುದು. ಜನಪದ ಗೀತೆಗಳ ಸಾರ್ವಕಾಲಿಕ ಶುಚಿರುಚಿ ಅರ್ಥವ್ಯಾಪ್ತಿ ಇವರ ಕವಿತೆಗಳಲ್ಲೂ ಕಂಡು ಬರುತ್ತದೆ. ಇದು ಕಡಮೆ ಸಾಧನೆಯಲ್ಲ.

ಪ್ರೊ॥ ದೊಡ್ಡರಂಗೇಗೌಡರು ಪ್ರಧಾನವಾಗಿ ವೈಷ್ಣವ ನೆಲೆಗಟ್ಟಿನ ಕವಿ. ಇವರು ಶೈವಾಸಕ್ತಿಗೆ ವಾಲಿರುವುದು ಕುತೂಹಲಕಾರಿಯಾಗಿದೆ. ಇದಕ್ಕೆ ಬಹುಶಃ ಶ್ರೀ ಆದಿಚುಂಚನಗಿರಿಯ ಪರಿಸರ, ಅದರ ಜಗದ್ಗುರುಗಳ ಪ್ರಭಾವ ಕಾರಣವಾಗಿರುವಂತಿದೆ. ಶ್ರೀ ಆದಿಚುಂಚನಗಿರಿ ಸಂಪೂರ್ಣವಾಗಿ ಜನಪದಮಯವಾಗಿರುವ ಜನಸಾಮಾನ್ಯರ ಶೈವಕ್ಷೇತ್ರ. ಅಲ್ಲಿರುವ ಪ್ರತಿಯೊಂದು ವಸ್ತು ವಿಶೇಷವೂ ಐತಿಹ್ಯಮಯ. ಅಲ್ಲಿ ಜನಪದ ಮನಸ್ಸಿನಿಂದ ಹುಟ್ಟಿಕೊಂಡಿರುವ ಕಥೆಗಳಿಗೆ ಲೆಕ್ಕವಿಲ್ಲ. ಆ ಕ್ಷೇತ್ರದ ಹಲವು ಐತಿಹ್ಯಗಳನ್ನು, ಶ್ರೀಗುರು ಪರಂಪರೆಯ ಪವಾಡಗಳನ್ನು ಶ್ರೀ ದೊಡ್ಡರಂಗೇಗೌಡರು ತಮ್ಮ ಹಲವು ಪದ್ಯಗಳಲ್ಲಿ ಪುನರ್ ನಿರೂಪಿಸಿದ್ದಾರೆ. ಜನಪದ ನಂಬಿಕೆಗಳನ್ನು ಆಧುನಿಕ ವಿವೇಚನೆಗೆ ಒಳಪಡಿಸದೆ ಪದ್ಯವಾಗಿಸಿದ್ದಾರೆ. ಇವೆಲ್ಲಾ ಪ್ರಚಾರ ಗೀತೆಗಳಾಗಿವೆ. ಇವು ಆ ಕ್ಷೇತ್ರಕ್ಕೆ ನಡೆದುಕೊಳ್ಳುವ ಭಕ್ತಿ ಸಮೂಹಕ್ಕೆ ಪ್ರಿಯವಾಗುತ್ತವೆ. ಈ ಹಾಡುಗಳಲ್ಲಿ ಜನಪದ

ಶಬ್ದ, ವಸ್ತು, ಧಾಟಿ ಬಳಕೆಯಾಗಿರುವುದುಂಟು. ಆದರೆ, ಇವುಗಳಲ್ಲಿ ಕಾವ್ಯಧ್ವನಿ ಕಡಿಮೆ. ಕ್ಷೇತ್ರ ಪ್ರಚಾರ ಗೀತೆಗಳಲ್ಲಿ ಧ್ವನಿ ಪ್ರಚುರತೆಯನ್ನು ಹುಡುಕುವುದು ಪ್ರಯೋಜನವಿಲ್ಲವೇನೋ. ಆದರೆ, ಈ ರಚನೆಗಳಲ್ಲಿ ಕವಿಯ ನಿಷ್ಠೆ ಸಮರ್ಪಣಾ ಧನ್ಯತೆ, ಕಣ್ಸೆಳೆಯುವಷ್ಟು ಢಾಳಾಗಿದೆ.

ಜನಪದ ನುಡಿ, ನುಡಿಗಟ್ಟು, ರೂಪಕ, ಶಬ್ದ ಚಿತ್ರ, ವಸ್ತು ವಿಶೇಷಗಳ ಬಗೆಗೆ ಅಪಾರ ಒಲವಿರುವ ಶ್ರೀ ದೊಡ್ಡರಂಗೇಗೌಡರು ಜನಪದ ತ್ರಿಪದಿ, ಲಾವಣಿಗಳ ಧಾಟಿಗಳನ್ನೂ ತಮ್ಮ ಅಭಿವ್ಯಕ್ತಿಗೆ ಬಳಸಿಕೊಂಡಿರುವುದುಂಟು. ಇದಕ್ಕೆ 'ಅರಿವಿನ ಹಣತೆಗಳು', 'ಜ್ಞಾನ ಸೊಡರು', ''ಶ್ರೀ ಕ್ಷೇತ್ರ ಮಹಿಮೆ', 'ಕೋಲು ಕೋಲನ್ನ ಕೋಲೆ' – ಮೊದಲಾದ ಗೀತೆಗಳು ಸಾಕ್ಷಿಯಾಗಿವೆ. ಆಡುಮಾತೇ ಇಡೀ ಪದ್ಯದ ಜೀವಾಳವಾಗಿರುವ ಉದಾಹರಣೆಯೂ ಇದೆ. 'ಎಲ್ಲೆಲ್ಲೂ ನೀನೆ ಚೌಡೇಶ್ವರಿ' ಇಂತ ರಚನೆಗಳಲ್ಲಿ ಒಂದಾಗಿದೆ.

ಪ್ರೊ॥ ದೊಡ್ಡರಂಗೇಗೌಡರು ಹುಟ್ಟುಕವಿ. ನಿರಂತರವಾಗಿ ಕಾವ್ಯ ರಚನೆ ಮಾಡಿರುವ ಕವಿ. ಇವರ ಕಾವ್ಯಾನುರಕ್ತಿ ಸಂಶಯಾತೀತ. ಶ್ರೀಯುತರು ಬಹಳ ತಡವಾಗಿ, ಸಾಂದರ್ಭಿಕ ಕಾರಣಗಳಿಂದಾಗಿ, ಗದ್ಯ ಬರಹಕ್ಕೆ ತೊಡಗಿ ಎರಡು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಹಾಗೆ ನೋಡಿದರೆ ಪ್ರೊ॥ ದೊಡ್ಡರಂಗೇಗೌಡರ ಪದ್ಯ ಬರವಣಿಗೆಯ ಅಂತಃಸತ್ವಕ್ಕೂ ಗದ್ಯ ಬರವಣಿಗೆಯ ಅಂತಃಸತ್ವಕ್ಕೂ ಅಂಥ ವ್ಯತ್ಯಾಸವೇನೂ ಇಲ್ಲ. ಪದ್ಯದಲ್ಲಿ ಸೂಚ್ಯವಾಗಿದ್ದ ಚಿಂತನೆಗಳು, ಗದ್ಯದಲ್ಲಿ ವಾಚ್ಯವಾಗಿ ಸಾಕಾರಗೊಂಡಿವೆ. ಪದ್ಯ ಮಾಧ್ಯಮದಲ್ಲಿ ಮೂಲಧಾತುವಾಗಿ ಹರಿಯುತ್ತಿದ್ದ ಭಾವಸೆಲೆ, ಗದ್ಯ ಮಾಧ್ಯಮದಲ್ಲೂ ತಲೆಹಾಕಿದೆ. ಸಮಾಜಮುಖಿ ಕಳಕಳಿ ಇವರ ಗದ್ಯ ಬರಹಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿದೆ. ಜನ ಸಾಮಾನ್ಯರ ಬದುಕಿನ ಬವಣೆ, ಜನಪರ ಕಾಳಜಿ, ದೀನದುರ್ಬಲ ಸಮೂಹದ ಚಿಂತನೆ, ಜನಪದ ಭಾವನೆಗಳನ್ನು ನೆನಪಿಸುತ್ತದೆ. ಕವಿಯ ಸಾಮಾಜಿಕ ಸಮಸ್ಯೆಯ ಸಮರ್ಥನೆ, ಉದಾಹರಣೆಗಳು ಜಾನಪದೀಯವಾಗಿರುವುದು ಗಮನಾರ್ಹವಾಗಿದೆ.

ಕವಿ ದೊಡ್ಡರಂಗೇಗೌಡರು ಪ್ರಕೃತಿ, ಪರಿಸರ, ಸಾಮಾಜಿಕ ಕಳಕಳಿಯ ಬರಹಗಳಲ್ಲಿ ವಿಶೇಷವಾಗಿ ಜನಪದ ಅಂಶಗಳನ್ನು ದುಡಿಸಿಕೊಂಡಿರುವುದು ಪ್ರಧಾನವಾಗಿ ಕಂಡುಬರುತ್ತದೆ. ಜನಪದ ಪರಿಕರಗಳು ಇವರ ಕವಿತೆಗಳ ತೇಜಸ್ಸನ್ನು ಗಣನೀಯವಾಗಿ ವೃದ್ಧಿಸಿರುವುದು ಸ್ಪಷ್ಟವಾಗಿದೆ. ಶ್ರೀ ದೊಡ್ಡರಂಗೇಗೌಡರ ನವ್ಯಕವನಗಳಿಗೆ ಸರಿಮಿಗಿಲಾಗಿ ಇವರ ಭಾವಗೀತೆಗಳು ಸ್ಪಂದಿಸಲು ಇವರು ಬಳಸಿಕೊಂಡಿರುವ ಜನಪದ ಅಂಶಗಳು ಮುಖ್ಯವಾಗಿವೆ ಎಂಬುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಇವರು ಜನಪದ ಅಂಶಗಳನ್ನು ಬಳಸಿಕೊಂಡು ರಚಿಸಿರುವ ಕವಿತೆಗಳು ಕಾವ್ಯ ರಸಿಕರ ಮನಸ್ಸಿನಲ್ಲಿ ಸದಾ ಅಚ್ಚಹಸುರಾಗಿದ್ದು ಬೆಚ್ಚನೆಯ ಅನುಭವವನ್ನು ನೀಡುತ್ತವೆ.





# 'ರಾಗ ರಂಗು' - ಗೀತೆಗಳ ಗುಂಗು

● ಡಾ॥ ಕಬ್ಬಿನಾಲೆ ವಸಂತ ಭರದ್ವಾಜ್

ಗೊಬ್ಬರ ತುಂಬಿದ ಕೈಬರೆದ
ಮಣ್ಣಿನ ಹಾಡು ನನ್ನದು
ಸಗಣಿ ಮೆತ್ತಿದ ಬೆರಳು ಹಿಡಿದ
ಗ್ರಾಮೀಣ ಲೇಖನಿ ನನ್ನದು

ಬೆವರು ಸುರಿಸಿ ಕಷ್ಟದಿ ದುಡಿದ
ನೆಲದ ಪದ ನನ್ನದು
ಮುದ್ದೆ ಸೊಪ್ಪಿನ ಸಾರು ಕಂಡ
ರೈತನ ಮುದ ನನ್ನದು

ಈ ಸಾಲುಗಳು ಡಾ॥ ದೊಡ್ಡರಂಗೇಗೌಡರ ಸಮಗ್ರ ಕಾವ್ಯವನ್ನು ಪ್ರತಿನಿಧಿಸುತ್ತವೆ ಎಂದು ಭಾವಿಸಬಹುದು. ಅವರ ಕಾವ್ಯಾನುಸಂಧಾನದಲ್ಲಿ ದೇಸೀತನದ ಸೊಗಡು ಹಾಸುಹೊಕ್ಕಾಗಿದೆ. ಹಳ್ಳಿಯ ಅನುಭವ-ಅನುಭಾವಗಳು ಹಚ್ಚಹಸಿರಾಗಿ ಅಭಿವ್ಯಕ್ತಗೊಳ್ಳುವುದು ಅವರ ಕಾವ್ಯದ ವಿಶೇಷತೆ. 'ತೇರ ಏರಿ ಅಂಬರದಾಗೆ ನೇಸರು ನಗುತಾನೆ' ಎಂಬ ಅವರ ಪ್ರಸಿದ್ಧ ಕಾವ್ಯ ಪಂಕ್ತಿ ಅಂತಹ ಸ್ವಭಾವೋಕ್ತಿಯ ಸಹಜ ಸೃಷ್ಟಿ. ಸೂರ್ಯೋದಯದ ಸುಂದರ ಸುಪ್ರಭಾತವನ್ನು ಕನ್ನಡದ ನೂರಾರು ಕವಿಗಳು ಕಂಡರಿಸಿದ ಕಾಣ್ಕೆಯ ನಡುವೆ ಡಾ॥ ದೊಡ್ಡ ರಂಗೇಗೌಡ ಅವರ ಈ ರಚನೆ ಅತ್ಯಂತ ವಿಶಿಷ್ಟವಾಗಿ ನಿಲ್ಲುವುದೇ ಈ ಕಾರಣದಿಂದ. ಕವಿ ಹೃದಯದ 'ಹುಣ್ಣಿಮೆ ಹೊನಲು' ಕೂಡಾ ಅಷ್ಟೇ ಸ್ವೋಪಜ್ಞವಾದುದು. 'ಬಾನಲಿ ಬೆಳ್ಳಿಯ ರೊಟ್ಟಿ ಹಾದು ಹಟ್ಟಿ ಹಟ್ಟಿ...' ಎಂದೇ ಅವರು ತೇಲುವ ಚಂದಿರನನ್ನು ವರ್ಣಿಸುತ್ತಾರೆ.

ಪ್ರಕೃತಿಯ ಕುರಿತಾದ ಸುಂದರ ಭಾವಗೀತೆಗಳ ರಚನೆಯಲ್ಲಿ ದೊಡ್ಡರಂಗೇಗೌಡ ಅವರ

ಸಹಜ ಪ್ರತಿಭೆಯ ಸಮ್ಯಕ್‌ದರ್ಶನವಿದೆ. 'ಯಾವ ಮಾಂತ್ರಿಕ ಸ್ಪರ್ಶ ತಾಕಿತೋ ಸುಡುವ ಭೂಮಿಯ ಒಡಲಿಗೆ, ನೋವ ಮರೆಸುವ ವರ್ಣ ವೈಭವ ಕಾಡು ಕಣಿವೆಯ ಮಡಿಲಿಗೆ, ಎಂಬ ಪಂಕ್ತಿಗಳಲ್ಲಿ ಸ್ಫೂರ್ತಿ ಋತುವಿನ ಹಾಸವಿಲಾಸ ಮನಂಬುಗುವಂತಿದೆ. ಎಲ್ಲೆಲ್ಲೂ ಹಸಿರನ್ನು ಕಾಣುವ ಚೈತ್ರೋನ್ಮಾದ, ಅವ್ಯಕ್ತ ಲೋಕಕ್ಕೆ ಅಕ್ಕರೆಯ ಆಹ್ವಾನವೀಯುವ 'ಮಧುರ ಮಧುರವೀ ಕೋಗಿಲೆ ಗಾಯನ', 'ಮಳೆಯು ಬಂದ ಮಾರನೇದಿನ ಮಿಂಚ ಹಂಚಿದೆ ಹೂ ಬನ' ಮುಂತಾದವುಗಳು ನೀಡುವ 'ಲಲಿತ ಪದ ಸುಖ' ಅನುಭವವೇದ್ಯ. 'ಕಾಡ ಹಕ್ಕಿಗಳೇ ನಿಮ್ಮ ಚಿಲಿಪಿಲಿಯು ಮೇಳವಾಯ್ತು ಧರೆಗೆ, ಎಂದು ಹಾಡುವ ಕವಿಗೆ 'ಸ್ವರ್ಗ ಲೋಕ ಇರುವುದಾದರೆ ಇಲ್ಲೇ ಕಣ' ಎಂಬಷ್ಟು ಸೌಂದರ್ಯೋಪಾಸನೆ ಇದೆ. 'ಸಂಜೆ ನೇಸರು ಮುಳುಗಿ ಹೊಂಬಣ್ಣ ತೇಲುತಿರಲು, ಅಂಬರದ ಅಂಚಿನಲಿ ಚಿತ್ರಕಾವ್ಯ'; 'ಇಬ್ಬನಿ ತಬ್ಬಿದ ಇಳೆಯಲಿ ರವಿತೇಜ ಕಣ್ಣ ತೆರೆದು ಬಾನ ಕೋಟಿ ಕಿರಣ ಇಳಿದು ಬಂತು ಭೂಮಿಗೆ' ಮುಂತಾದ ಸಾಲುಗಳು ನವೋದಯದ ರಮ್ಯಭಾವದಲ್ಲೂ ಬರೆಯುವ ಕವಿಸಾಮರ್ಥ್ಯಕ್ಕೆ ಕನ್ನಡಿ ಹಿಡಿಯುತ್ತವೆ.

ಪ್ರಕೃತಿಯ ಚಿತ್ತಾರದಷ್ಟೇ ಸೊಗಸಾದ ಕಾವ್ಯಲಹರಿ ಪ್ರೀತಿ-ಪ್ರೇಮದ ಶೃಂಗಾರ ಭಾವವನ್ನೂ ಚಿತ್ರಿಸುತ್ತಾ ಹರಿಯುತ್ತದೆ. 'ನಿನ್ನ ರೂಪು ಎದೆಯ ಕಲಕಿ ಕಣ್ಣುಮಿಂದಾಗ, ನಿನ್ನ ನೋಟ ಕೂಡಿದಾಗ ಕಂಡೆ ಅನುರಾಗ' ಎಂಬ ಕವಿತೆಯಲ್ಲಿ ಪ್ರೀತಿಯ ಸೂಕ್ಷ್ಮತೆ ತುಂಬಿನಿಂತಿದೆ.

ರಾಗರಂಗು ಮೂಡಿಬಂತೋ ಕಣ್ಣಿನಾಗೆ
ನೂರೆಂಟು ಆಸೆ ತಂತೋ ಬಾಳಿನಾಗೆ
ಮಾತು ಮೌನ ಮೀರಿ ಬೆಳೆದ ಸ್ನೇಹದಾಗೆ
ಅಂಗಸಂಗ ತೋರಿ ಹೊಳೆದ ಮೋಹದಾಗೆ

ಈ ಸಾಲುಗಳಲ್ಲಿ ಪ್ರೇಮೋಪನಿಷತ್ತು ಮಡುಗಟ್ಟಿ ನಿಂತಿದೆ? ದಾಂಪತ್ಯದ ನಿರ್ಮಲ ಪ್ರೀತಿಗೆ ಸುಂದರವಾದ ಭಾಷ್ಯ ಬರೆಯುವಲ್ಲಿ ಕವಿ ಪ್ರತಿಭೆ ಅನನ್ಯವಾಗಿ ಮೆರೆದಿದೆ. 'ನೂರು ನೋವಿನ ಬೆಟ್ಟ ಭಾರವ ಇಳಿಸೋ ಆಸರೆ ಕೈಯಿದೆ, ಎಂಬಲ್ಲಿ ಸ್ತ್ರೀಯ ಪ್ರೇಮ ಸಿಂಚನಕ್ಕೆ ಕವಿ ತೋರುವ ಗೌರವ ಅಪಾರವಾದುದು. 'ಕೊಳಲು ನೀನಿರೆ ದನಿಯು ನಾನಿರೆ, ನಮ್ಮೊಲುಮೆ ಆಲಾಪ ರಾಗ ತಾನವು; ಎಂಬಲ್ಲಿ ದಾಂಪತ್ಯವು ಸ್ವರ ಸ್ವರಗಳು ಬೆರೆತ ಮಧುರ ಮಧುರ ಗಾನವೆಂಬ ಭಾವಕಾಂತಿ ಉಜ್ವಲವಾಗಿದೆ. ಗಹನವಾದ ಅರ್ಥವನ್ನು ಅಡಕವಾಗಿ ಹೇಳುವ ಉತ್ಕೃಷ್ಟಕಾವ್ಯ ಧರ್ಮ ದೊಡ್ಡರಂಗೇಗೌಡ ಅವರ ಕವಿತೆಗಳಲ್ಲಿ ಅನೇಕ ಕಡೆ ಮಿಂಚುತ್ತದೆ. ಅಂತಹ ಮಿಂಚು ಇಲ್ಲಿದೆ-

ಕೊಟ್ಟು ಪಡೆವಾಟ, ನೆಟ್ಟು ನಗುವಾಟ
ಬಿತ್ತಿ ಬೆಳೆವಾಟ ಪ್ರೀತಿಗೆ

ಅಟ್ಟು ಉಣುವಾಟ, ಬಿಟ್ಟು ಬೆಸೆವಾಟ
ತೊಟ್ಟು ಕಳೆವಾಟ ಪ್ರೇಮಗೆ

ಹೆಣ್ಣು-ಗಂಡುಗಳ ಪರಸ್ಪರ ಆಕರ್ಷಣೆಯನ್ನು ಇಷ್ಟು ಸಮರ್ಥವಾಗಿ ಕೇವಲ ನಾಲ್ಕು ಸಾಲುಗಳಲ್ಲಿ ಹಿಡಿದಿಟ್ಟ ಮತ್ತೊಂದು ಉದಾಹರಣೆ ಇಲ್ಲ ಎನ್ನುವಷ್ಟು ಈ ಕವಿತೆಯ ಸೌಂದರ್ಯವಿದೆ: ಅದನ್ನೇ ಇಡೀ ಬದುಕಿಗೆ ಅನ್ವಯಿಸಿಕೊಂಡಾಗ ರಾಗ-ವಿರಾಗಗಳ ರೂಪಕ ಚಿತ್ರಮಾಲೆ ಚಿತ್ತಭಿತ್ತಿಯಲ್ಲಿ ಅಚ್ಚೊತ್ತುತ್ತದೆ. ಇದೇ ದೊಡ್ಡರಂಗೇಗೌಡ ಕಾವ್ಯದ 'ರಾಗದೊಳಗಿನ ರಾಗ ರಂಗಾಗುವ ಪರಿ'!

ಕವಿಯ ಪ್ರೀತಿ ಪ್ರಗಾಥದಲ್ಲಿ ನುಡಿ ಪ್ರೇಮವೂ ಅಷ್ಟೇ ಮಹತ್ವದ ಸ್ಥಾನ ಪಡೆಯುತ್ತದೆ. ಕನ್ನಡ ಭಾಷೆ-ಸಂಸ್ಕೃತಿಗಳ ಮೇಲೆ ಅವರು ತೋರುವ ಅಭಿಮಾನ ಸಹಜಸುಂದರ ಭಾವಗೀತಗಳಾಗಿವೆ. 'ಕನ್ನಡವೆಂದರೆ ಒಣಮತವಲ್ಲ, ಅದು ಕನ್ನಡಿಗರ ಹೃದಯ' ಎಂದು ಮೊಳಗುವ ಅವರ ಕರುನಾಡ ಕಹಳೆಯಲ್ಲಿ ನಿಜವಾದ ಕನ್ನಡತನ ಅನಾವರಣಗೊಳ್ಳುತ್ತದೆ. ಕನ್ನಡವೆಂದರೆ ಹುಸಿ ಉಳಿವಲ್ಲ, ಅದು ಸಮುದಾಯದ ಕೊರಳು' ಎಂಬ ಸಾಲಿನಲ್ಲಿ ಜನಮನದ ಅಭೀಪ್ಸೆಯೇ ಕನ್ನಡದ ನಿಜವಾದ ಅನುಭೂತಿ ಎಂಬ ವಾಸ್ತವ ದೃಷ್ಟಿಯಿದೆ.

'ಕೇಳಿಸದೆ ಕಲ್ಲು ಕಲ್ಲಿನಲಿ ಕನ್ನಡ ನುಡಿ
ಕಾಣಿಸದೆ ಹೊನ್ನ ಚರಿತೆಯಲಿ ಹಂಪೆಯ ಗುಡಿ'

ಎಂಬ ಗೀತೆಯನ್ನು ಕೇಳದ ಕನ್ನಡಿಗನೇ ಇಲ್ಲವೆನ್ನಬಹುದು. ಅದು ಕನ್ನಡ ಮನಸ್ಸಿನಲ್ಲಿ ಉಂಟು ಮಾಡುವ ಭಾವೋದ್ದೀಪನ ಅದ್ಭುತವಾದುದು. ಆದರೆ ಈ ಕನ್ನಡತನ ಭಾರತೀಯವಾಗಬೇಕೆಂಬ ಸಮಷ್ಟಿ ಪ್ರಜ್ಞೆಯೂ ಕವಿಮನದಲ್ಲಿ ಹರಳುಗಟ್ಟಿದೆ. 'ನಡೆ ನೂರಿರಲು ನುಡಿ ನೂರಿರಲಿ, ನಡೆ ನುಡಿಗೆ ಮೂಲ ಭಾರತ' ಎಂಬ ಗೀತೆಯಲ್ಲಿ ಭಾರತದ ಭಾವೈಕ್ಯ ಕನಸಿದೆ. ಈ ಪ್ರೀತಿಯೊಂದಿಗೆ 'ಜಗದ ಮೂಲೆ ಮೂಲೆಯಲ್ಲೂ ಅನುರಣಿಸಲಿ ಕನ್ನಡ' ಎಂಬ ಕವಿಯ ಅಂತರಂಗದ ಅಭೀಷ್ಟವೂ ಸೇರಿಕೊಂಡಿದೆ. 'ನನ್ನ ಕಾವ್ಯ ಕೇವಲ ಕನ್ನಡ ಕಾವ್ಯವಲ್ಲ' ಎಂದು ಹೇಳುವ ಕವಿಭಾವಕ್ಕೆ ಕನ್ನಡ ಪ್ರಜ್ಞೆ ವಿಶ್ವಪ್ರಜ್ಞೆಯಾಗಬೇಕು ಎಂಬ ತುಡಿತವಿದೆ. ದೊಡ್ಡರಂಗೇಗೌಡ ಅವರ ಕಾವ್ಯದಲ್ಲಿ ಅಂತರ್ನಿಹಿತವಾಗಿರುವ ಈ ವಿಶ್ವಮಾನವ ಪ್ರಜ್ಞೆ ಕನ್ನಡ ಮನಸ್ಸೊಂದರ ಸಾರ್ಥಕ ಅಭಿವ್ಯಕ್ತಿ.

**ಬಂಧ ಮತ್ತು ವಿನ್ಯಾಸ :**

ಡಾ|| ದೊಡ್ಡರಂಗೇಗೌಡರ ಭಾವಗೀತಗಳ ಬಂಧ ಮತ್ತು ವಿನ್ಯಾಸದ ಕುರಿತು ನಾಲ್ಕು ಮಾತು ಹೇಳಲೇಬೇಕು. ಕನ್ನಡ ನವೋದಯ ಕಾವ್ಯ ಪರಂಪರೆಯನ್ನು ವಿಶೇಷವಾಗಿ ಅಧ್ಯಯನ

ಮಾಡಿದ ಅವರಲ್ಲಿ ಸ್ವಾಭಾವಿಕವಾಗಿ ನವೋದಯ ಸ್ಪಂದವಿದೆ. ಸಾಂಗತ್ಯ, ಸೊಬಗಿನ ಸೋನೆ, ಕಿರುಪೀಸಗಳ ಛಂದೋಬಂಧಗಳನ್ನು ವಿನೂತನ ವಿನ್ಯಾಸಗಳಲ್ಲಿರಿಸುವ ಮೂಲಕ ಗೀತರಚನೆಯಲ್ಲಿ ಅವರು ಕಂಡುಕೊಂಡ ಸೃಷ್ಟಿಶೀಲತೆ ಮನೋಹರವಾದುದು. ಉದಾಹರಣೆಗೆ 'ನಮ್ಮೂರ ಮಂದಾರ ಹೂವೇ' ಎಂಬ ಭಾವಗೀತೆಯನ್ನೇ ಆಯ್ದುಕೊಳ್ಳಬಹುದು. ಇಂದರ ಪಲ್ಲವಿಯಲ್ಲಿ ಸಾಂಗತ್ಯದ ಕಿರುಪಾದಗಳ ಸಂಯೋಜನೆ ಇದೆ. ಅದರ ಸೊಲ್ಲುಗಳಂತೂ ಸಾಂಗತ್ಯದ ಸೃಜನಶೀಲ ವಿನ್ಯಾಸಕ್ಕೆ ಸಾಕ್ಷಿ

ಒಡನಾಟ ಮರೆದು ಒಡಲಾಳ ಮೊರೆದು'
ಒಡನಾಡಿ ಬಾಂಧವ್ಯ ಕಂಡೆ
ಋತುಮಾನ ಮೀರಿ ಹೊಸಗಾನ ತೋರಿ
ಹಿತವಾದ ಮಾಧುರ್ಯದಿಂದೆ
ತೀರದಾ.. ಮೋಹದಾ... ಇನಿದಾದ ಆನಂದ ತಂದೆ.

ಇಲ್ಲಿಯ ವಿಷಮಪಾದಗಳ ಎರಡು ಮತ್ತು ನಾಲ್ಕನೇ ಗಣಗಳಲ್ಲಿ ಬ್ರಹ್ಮಗಣಗಳನ್ನು ತಂದು ಕೊನೆಯ ಪಾದದಲ್ಲಿ ನಾಲ್ಕು ವಿಷ್ಣು ಒಂದು ಬ್ರಹ್ಮಗಣಗಳನ್ನು ಸಂಯೋಜಿಸಿದ ಕವಿಯ ಪ್ರತಿಭಾವಿಲಾಸ ಅನನ್ಯವಾದುದು. ಚಿತ್ರಗೀತೆಗಳಲ್ಲಿ ಏನು ಛಂದಸ್ಸು? ಎಂದು ಹೇಳುವವರಿಗೆ ಇಲ್ಲಿ ಉತ್ತರವಿದೆ. ಈ ರೀತಿಯ ನೂತನ ಛಂದೋ ಬಂಧಗಳ ಕಸೂತಿಯಿಂದ ಭಾವಗೀತೆಗೆ ಬಿನ್ನಾಣವೊಂದು ಸಾಧ್ಯವಾಗುತ್ತದೆ ಎಂಬುದನ್ನು ರಸಜ್ಞರು ಬಲ್ಲರು.

ದೊಡ್ಡರಂಗೇಗೌಡ ಅವರ ಮೇಲೆ ದಾಸಸಾಹಿತ್ಯದ ಪ್ರಭಾವ ಕೂಡಾ ಇದೆ ಎನ್ನಬಹುದು. 'ಹಕ್ಕಿ ಕಾಣದೋ-ಹೃದಯದ-ಹಕ್ಕಿ ಕಾಣದೋ', 'ಶಿಖರವೇಟಕುತಿಲ್ಲ ಬೆಟ್ಟದ-ಶಿಖರವೇಟಕುತಿಲ್ಲ', 'ನುಡಿಯು ಕೇಳಿ ಮಧುರ-ಕನ್ನಡ-ದುಡಿಯು ನುಡಿಸಿ ನುಧುರ' ಮುಂತಾದ ಬಂಧಗಳಲ್ಲಿ ಅದು ಸುವ್ಯಕ್ತ. ಸಹಜವಾಗಿ ಮೂಡಿದ ಅಂತ್ಯ ಪ್ರಾಸಗಳೂ ಅವರ ಕವಿತೆಗಳ ಚೆಲುವನ್ನು ಹೆಚ್ಚಿಸಿವೆ. ಅವುಗಳು ಪ್ರಯತ್ನ ಜಾತಗಳಾಗದೆ ಅಯತ್ನಜಾತಗಳೆಂಬುದೇ ಅವರ ಕಾವ್ಯದ ಹಿರಿಮೆ. ಉದಾ-

ನೀ ಬರೆದ ಒಲವಿನ ಓಲೆ
ನೀಡುತಿದೆ ಪುಳಕದ ಮಾಲೆ
ಇಂದೆನಗೆ ನಲಿವಿನ ವೇಳೆ
ತೂಗಿದೆ ಪ್ರೇಮದ ಉಯ್ಯಾಲೆ

ಮುಂಜಾನೆ ಮೂಡಿದ ಹಾಗೆ
ತಂಗಾಳಿ ತೀಡಿದ ಹಾಗೆ

ಹೊಂಬಾಳೆ ತೂಗಿದ ಹಾಗೆ
ಕೆಂದಾವರೆ ನೀನು ನನಗೆ

ಇದೇ ಸಂದರ್ಭದಲ್ಲಿ ಹಳೆಗನ್ನಡ ಕಾವ್ಯಗಳ "ವಡಿ" ಎನ್ನುವ ವಿಶಿಷ್ಟ ಪ್ರಯೋಗದ ಬಗ್ಗೆ ಹೇಳಬೇಕೆನಿಸುತ್ತದೆ. ಪಾದಾರಂಭದ ಒಂದು ವರ್ಣವು ಪಾದಮಧ್ಯದ ಅಥವಾ ಪ್ರತಿಪಾದಗಳ ನಿಯತಸ್ಥಾನದಲ್ಲಿ ಆವರ್ತಗೊಳ್ಳುವ ವಿಶಿಷ್ಟಕ್ರಮವನ್ನು ವಡಿ ಅಥವಾ ವಳಿ ಎನ್ನಲಾಗುತ್ತದೆ. ಈ ತೆರನಾದ ಪ್ರಾಚೀನ ಕಾವ್ಯಶಿಲ್ಪದ ಲಕ್ಷಣವೊಂದು ದೊಡ್ಡರಂಗೇಗೌಡ ಅವರ ರಚನೆಗಳಲ್ಲಿ ರಾಶಿ ರಾಶಿಯಾಗಿ ದೊರಕುವುದು ಅಚ್ಚರಿಯಾದರೂ ಸತ್ಯ. ಇದಕ್ಕೆ ಕೆಲವು ಉದಾಹರಣೆಗಳು -

ಮೂಡಣ ನಾಡಿನ ಮುಂಜಾನೆ ಸೂರ್ಯನು
ಮೋಹದ ಮನಸಿನ ಮಾದಕ ಬಯಕೆಗೆ
ಕಣ್ಣಿನ ಕಾಗುಣಿತ ಕಲಿಸಿದ ಕನ್ನಿಕೆಯೇ
ಬಾನಿನಲ್ಲಿ ಹಕ್ಕಿಹಾರಿ ಬರೆದವಲ್ಲಿ ರಂಗವಲ್ಲಿ
ಮಸೆವ ಬಿಸಿಲು ಮಾಗಿರುವಲ್ಲಿ ಮಂದಹಾಸ ಕೂಡಿದೆ
ಚಳಿಯಲೇ ಮುಲುಕುತ ಚಿಲಿಪಿಲಿ ಹಕ್ಕಿಗಳು
ಬಯಕೆ ಭಾವ ಬಾಳಿನಲ್ಲೆ ಭದ್ರ ಉಳಿಯಿತು
ಅಂತರಾಳದಲಿ ಒಬ್ಬ ಅನಾಮಿಕ ಇರಲು
ತೇಜೋಮಯ ತಪಸಿಗಳೇ ತಿಳಿವ ತಂಪು ತನ್ನಿ ತಿರೆಗೆ
ವಿದ್ವತ್ತಿನ ವಾಲ್ಮೀಕಿಗಳೇ ವಿದಾಯ ಹೇಳಿ ವಿಕಲ್ಪಗಳಿಗೆ

**ಕಾವ್ಯದ ಹುಡುಕಾಟ :**

ಭಾವಗೀತೆಗಳ ಬಯಲಿನಲ್ಲಿ ಕಾವ್ಯಾರ್ಥಚಿಂತನ ಸುಲಭಕಾರ್ಯವಲ್ಲ. ಅದು ಅದರ ಉದ್ದೇಶವೂ ಅಲ್ಲ. ಒಂದು ಕ್ಷಣದ ನೋವನ್ನೋ, ನಲಿವನ್ನೋ ಚಿತ್ರಿಸುವುದಷ್ಟೇ ಅದರ ವ್ಯಾಪ್ತಿ, ಪ್ರಾಪ್ತಿ. ಆದರೆ ದೊಡ್ಡರಂಗೇಗೌಡರು ಅದರ ಭಾವಗೀತಗಳಲ್ಲಿ ಅದರಾಚೆಗಿನ ಹುಡುಕಾಟವೂ ಸ್ಥಾನಪಡೆದಿದೆ ಎಂಬುದು ಕುತೂಹಲಕರ ಸಂಗತಿ.

ಹುಡುಕುತ್ತಲೇ ಇದ್ದೇನೆ ನಾನು
ಈ ಭೂಮಿ ಆ ಭಾನು
ನಿತ್ಯ ನಿತ್ಯ ನೀಡಿದೆ ಬೆರಗನ್ನು
ಊಹೆಗೆಟುಕದ ನಿಲುವನ್ನು

ಎಂಬುದು ಈ ಸೃಷ್ಟಿಯ ಬೆರಗು. ಹುಡುಕುತ್ತಲೇ ಇದ್ದರೂ ಆ ಸುಖದ ಜೇನು ಸಿಕ್ಕಿಲ್ಲ ಎಂಬುದು ಅವರ ಕೊರಗು. 'ಇನ್ನು... ಇನ್ನೂ... ಬದುಕಿ ನಾನು, ಬರೆಯ ಬೇಕು ನಿತ್ಯ ನಿತ್ಯ ಸಾವಿರದ ಕವಿತೆಯನ್ನು, ಎಂಬುದು ಅವರ ಕಾವ್ಯಪ್ರೀತಿ ಮತ್ತು ಜೀವನ ಪ್ರೀತಿ ಕೂಡಾ. ಈ ಶೋಧ ಯಾತ್ರೆಯಲ್ಲಿ ವಿಸ್ಮಯದರ್ಶನ ದೀಪ್ತಿಯೊಂದು ಕಂಡಾಗ 'ಶಬ್ದ ಸರಿತೆಯಲಿ ಅರ್ಥ ನೌಕೆಯೊಂದು ತೇಲುವುದ ನಾನು ಕಂಡೆ' ಎಂದು ಕವಿ ಹೇಳುತ್ತಾರೆ. ಪದ ಮತ್ತು ಅರ್ಥಗಳ ಪದಾರ್ಥ ಬಡಿಸುವವನಿಗೂ ಕಾವ್ಯಪಾಕ ತಿಳಿದಿರಬೇಕು. ಅದನ್ನು ಸವಿಯುವವನಿಗೂ ಆ ರುಚಿ ಶುದ್ಧಿ ಅಗತ್ಯ. ಕವಿಗಿರುವ ಆಶಾಭಾವವೇ ಈ ಪ್ರಪಂಚದ ಜೀವಸೆಲೆ. ಆದಕ್ಕಾಗಿಯೇ ಕವಿಭಾವ 'ಕತ್ತಲ ಕಡಲ ಈಜಬಲ್ಲ ಧೈರ್ಯ ನನ್ನದಾಗಲಿ, ನೋವಿನ ಕಂದರ ದಾಟಬಲ್ಲ ಶೌರ್ಯ ನನ್ನದಾಗಲಿ' ಎಂದು ಹಾರೈಸುತ್ತದೆ. 'ಎದುರು ಬರುವ ಅಲೆಗಳನ್ನು ಈಜಬೇಕು ಮನುಜ, ಅಡೆಗಡೆಗಳ ಉಪಟಳವನು ದಾಟಬೇಕು ಸಹಜ' ಎಂಬುದು ಈ ತಪಸ್ವಿನ ಹಿಂದಿರುವ ವಾಂಛೆ.

ಕಾವ್ಯದ ಹುಡುಕಾಟ ಅಂತರ್ಮುಖಿಯಾಗುವುದರ ಜೊತೆಗೇ ಸಮಾಜಮುಖಿಯಾಗಬೇಕಾದದೂ ಅಷ್ಟೇ ಮುಖ್ಯ. ನಮ್ಮ ಮನಸ್ಸುಗಳನ್ನು ಕಿತ್ತುತಿನ್ನುವ ಜಾತಿಮತಭೇದಗಳನ್ನು ಮರೆಯುವುದರೊಂದಿಗೆ ಮಾನವೀಯ ಕಳಕಳಿಯನ್ನು ಬಿತ್ತುವುದೂ ಕವಿಯ ದೀಕ್ಷೆಯಾಗಬೇಕು. 'ನಮ್ಮ ನಡುವೆ ಬೆಳೆದು ನಿಂತ ಹಳೆಯ ಕೊಳೆಯ ತೊಳೆವ ಬನ್ನಿ' ಎಂದು ಕರೆಯುವ ಕವಿಭಾವಕ್ಕೆ ನಿರ್ಮಲ ಪ್ರೀತಿಯ ಸಮಾಜ ನಿರ್ಮಾಣವಾಗಬೇಕೆಂಬ ಹಂಬಲವಿದೆ. ಅಂತರಾಳದ ಈ ಅನುಪಮ ಆಕಾಂಕ್ಷೆ 'ನನ್ನಿಗೆ ನಮನ' ಸಮರ್ಪಿಸುತ್ತಾ-

'ಚೈತನ್ಯದ ಚಕ್ಷುಗಳೇ
ಹರಿಸಿ ದಿಟ್ಟಿ ಬುವಿಯ ಕಡೆಗೆ
ಅಕಳಂಕದ ಅಕ್ಷರಿಗರೇ
ಸರಿಸಿ ಕವಿದ ತಮದ ಬಿಸಗೆ'

ಎಂದು ಸಂಪ್ರಾರ್ಥಿಸುತ್ತದೆ? ಇದು ದೊಡ್ಡರಂಗೇಗೌಡ ಅವರ ಕಾವ್ಯದ ವಿವಕ್ಷೆ ಕೂಡಾ.

ದೊಡ್ಡರಂಗೇಗೌಡ ಅವರ ಭಾವಗೀತೆಗಳ ಒಡಲಿನಲ್ಲಿ ಇಡಿಕಿರಿದ ಹಲವಾರು ಶಬ್ದ ಚಿತ್ರಗಳಂತೂ ಸಾಹಿತ್ಯ ವಿದ್ಯಾರ್ಥಿಗೆ ದಾರಿದೀಪ. ಬೇವಿನ ತವರಿನ ಬವಣೆ, ಸ್ವಪ್ನಸೂರ್ಯ, ಅಗ್ನಿಶೀರ್ಷ, ಮೌನಶಿಲೆ, ನೋಟದೂಟೆ, ಆಸೆ ಹಕ್ಕಿ, ಇಚ್ಛೆ ಇಂದ್ರ, ಜೊನ್ನ ಜೋತ್ಸ್ನೆ ಹೀಗೆ ನೂರಾರು ಪ್ರತಿಮೆಗಳು. ಪ್ರತಿಯೊಂದು ಪ್ರತಿಮೆಯೂ ಪುಟಗೊಂಡ ಪ್ರಸ್ತುಳಿ. ದೊಡ್ಡರಂಗೇಗೌಡ ಅವರ ಕಾವ್ಯಕೃಷಿ ಮಿಡಿದೊಡೆ ತನಿಗರ್ವುರಸಂ ಬಿಡುವವು' ಎಂಬಹಾಗೆ ಆಪಾತಮಧುರ. ಒಂದೊಂದು ಸಾಲಿನಲ್ಲೂ ಒಂದೊಂದು ಜೇನಹನಿಯ ಮಾಟ. ಎಲ್ಲೆಲ್ಲೂ ಹೊಸನೋಟ, ರಸದೂಟ. ಒಮ್ಮೆ ಜಾನಪದ ಛಂದದಲ್ಲಿ ಸಾಗಿದರೆ ಮತ್ತೊಮ್ಮೆ ರಮ್ಯಕಾವ್ಯ ಭಾಷೆಯ ಕಾಂತಿಯಲ್ಲಿ

ಅವರ ಕಾವ್ಯ ಕಂಗೊಳಿಸುತ್ತದೆ. ವರಕವಿ ಬೇಂದ್ರೆಯವರ ಜಾನಪದ ಶೈಲಿ ಮತ್ತು ಮಹಾಕವಿ ಕುವೆಂಪು ಅವರ ಪದಸೃಷ್ಟಿಯ ಪರಿಪಾಕ ಅವರಿಗೆ ಕರತಲಾಮಲಕ. ಅದಕ್ಕಿಂತಲೂ ಮಿಗಿಲಾಗಿ ಅವರ ಕಾವ್ಯಕ್ಕೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಬಂದಿದ್ದರೂ, ಅದನ್ನು ಮೀರಿಸುವ ಜನಮಾನಸದ ಅಭಿಮಾನದ ಮಹಾಪೂರ. ಅವರು ರಚಿಸಿದ ನೂರಾರು ಹಾಡುಗಳು ನಮ್ಮ ಜನಪದರ ನಾಲಗೆಯ ತುದಿಯಲ್ಲಿ ನಲಿದಾಡುತ್ತಿವೆ. ರಾಜಾಸ್ಥಾನದ ಕಂಕಣ ಭಾಗ್ಯಕ್ಕಿಂತಲೂ ಸಹೃದಯರ ''ಕಣ್ ಕಣ''ದ ಭಾಗ್ಯ ಅವರಿಗೆ ದೊರೆತಿದೆ. ಈ ದೃಷ್ಟಿಯಲ್ಲಿ ಅವರ ಹಾಡುಗಳು ಕನ್ನಡನಾಡಿನ ಮೂಲೆ ಮೂಲೆಗಳಲ್ಲಿ ರಾಗದ ರಂಗೇರಿಸಿವೆ. ನಿಜವಾದ ಕವಿಗೆ ಬೇರೇನು ಬೇಕು?





# ಕವಿತೆ-ಜನತೆ ನಡುವಿನ ಸಂಬಂಧ

• ಎಲ್.ಎನ್. ಮುಕುಂದರಾಜ್

ಅದು ಎಪ್ಪತ್ತರ ದಶಕ, ಆಗಿನ್ನೂ ನಾವು ಪುಟ್ಟ ಪ್ರಾಯದ ಹುಡುಗರು. ಹರಯಕ್ಕೆ ಕಾಲಿಡುವ ತಳಮಳದಲ್ಲಿದ್ದವರು. ಪಠ್ಯಪುಸ್ತಕಗಳನ್ನು ಪಕ್ಕಕ್ಕಿಟ್ಟು ಮನೆಯವರಿಗೆ ಕಾಣದಂತೆ ಕಥೆ ಕಾದಂಬರಿ ಓದುವ ಹುಚ್ಚಿಗೆ ಬಿದ್ದಿದ್ದವರು. ಗ್ರಾಮೀಣ ರಂಗಭೂಮಿ ಹಾಗೂ ವೃತ್ತಿ ಕಂಪನಿಗಳ ನಾಟಕಗಳನ್ನು ಅವಕಾಶ ಸಿಕ್ಕಾಗ ತಪ್ಪಿಸಿಕೊಳ್ಳದೆ ನೋಡುತ್ತಿದ್ದವರು. ಸಿನಿಮಾ ನೋಡಬೇಕೆಂದರೆ ಟೂರಿಂಗ್ ಟಾಕೀಸ್‌ಗಳಿಗೆ ಹೋಗಬೇಕಾಗಿತ್ತು. ಅಥವಾ ಹತ್ತಿರದ ದೊಡ್ಡಪಟ್ಟಣಗಳಿಗೆ ಕದ್ದುಹೋಗಬೇಕಾಗಿತ್ತು. ಮನೆಯವರಿಗೆ ಗೊತ್ತಾದರೆ ಅದರ ರಾದ್ಧಾಂತ ಬೇರೆ. ಇಂಥ ಪಡಿಪಾಟಲುಗಳ ನಡುವೆ ಒಳ್ಳೆಯ ಸಿನಿಮಾ ಬಂದರೆ ನೋಡಬೇಕೆಂಬ ಹಠಕ್ಕೆ ಬೀಳುತ್ತಿದ್ದೆವು.

ಹಾಗೆ ನೋಡಿದ ಒಂದು ಅದ್ಭುತ ಸಿನಿಮಾ ''ಪರಸಂಗದ ಗೆಂಡೆತಿಮ್ಮ'' ಗೆಂಡೆತಿಮ್ಮನನ್ನು ನೋಡಲು ಮೂರು ಮುಖ್ಯ ಕಾರಣಗಳಿದ್ದವು. ಮೊದಲನೆಯದು ಆ ಸಿನಿಮಾದ ಹಾಡು ''ತೇರ ಎರಿ ಅಂಬರದಾಗೆ ನೇಸರ ನಗುತಾನೆ'' ಎಂಬುದು. ಎರಡನೆಯದು ಆ ಸಿನಿಮಾ ಒಂದು ಕಾದಂಬರಿ ಆಧಾರಿತ ಸಿನಿಮಾ ಎಂಬುದು. ಶ್ರೀ ಕೃಷ್ಣ ಆಲನಹಳ್ಳಿಯ ಕೃತಿಗಳನ್ನು ನಾವು ಕಷ್ಟಪಟ್ಟು ಗಿಟ್ಟಿಸಿಕೊಂಡು ಓದುತ್ತಿದ್ದೆವು. ಆ ಹೊತ್ತಿಗೆ ಆಲನಹಳ್ಳಿ ನಮ್ಮಂತಹ ಗ್ರಾಮೀಣ ಓದುಗರ ಡಾರ್ಲಿಂಗ್ ಆಗಿದ್ದರು. ಮೂರನೆಯದು ಲೋಕೇಶ್ ಎಂಬ ನಟನ ಅಭಿನಯದ ಬಗ್ಗೆ ಉಂಟಾಗಿದ್ದ ತೀವ್ರ ಸಂಚಲನೆ.

'ತೇರ ಎರಿ ಅಂಬರದಾಗೆ' ಹಾಡು ಬರೆದವರು ಒಬ್ಬ ಕವಿ; ಅದೂ ಹಳ್ಳಿಗಾಡಿನಿಂದ ಬಂದವರು. ಅದಕ್ಕೇ ಅವರ ಹಾಡಿನಲ್ಲಿ ಹೊಸರೀತಿಯ ಓಘ, ಓಟ, ಸಂವೇದನೆ ಹಾಗೂ ಜಾನಪದ ಸೊಗಡನ್ನು ಕಾಣಬಹುದಾಗಿದೆ ಎಂದು ನಾವು ಮಾತನಾಡಿಕೊಳ್ಳುತ್ತಿದ್ದೆವು. ಈ ಹಾಡು ಬರೆಯುವ ಮೂಲಕ ಕವಿ ದೊಡ್ಡರಂಗೇಗೌಡರು ಕನ್ನಡ ಸಿನಿಮಾ ಗೀತ ಸಾಹಿತ್ಯಕ್ಕೆ

ವಿನೂತನ ವಿವೇಕವೊಂದನ್ನು ಕಟ್ಟಿಕೊಟ್ಟಿದ್ದರು. ಸಿನಿಮಾ ಜಗತ್ತು ಈ ಮಹತ್ವದ ಕವಿಯಿಂದ ವಿಶಿಷ್ಟ ಗೀತ ಕ್ರಮವೊಂದನ್ನು ಪಡೆದುಕೊಂಡಿತ್ತು. ಸಿನಿಮಾ ಎಷ್ಟಾದರೂ ಬಣ್ಣದ ಲೋಕ. ಅದಕ್ಕೆ ಕೃತಕತೆಯ ಬಹಿರಂಗವಿದೆಯೇ ಹೊರತು ಕೃತಜ್ಞತೆಯ ಅಂತರಂಗವಿಲ್ಲ. ಅದು ಪ್ರತಿಭಾವಂತರನ್ನು ಸುಸಂಸ್ಕೃತ ಸಜ್ಜನರನ್ನು ಸಹಿಸಿಕೊಳ್ಳುವುದಿಲ್ಲ. ತನ್ನ ರಾಕ್ಷಸ ಕಾಲುಗಳ ಕೆಳಗೆ ಹಾಕಿ ತುಳಿದುಹಾಕುತ್ತದೆ.

ಆ ಕಾಲದಲ್ಲಿ ದೊಡ್ಡರಂಗೇಗೌಡರ ಹಾಡುಗಳನ್ನು ಕೇಳುತ್ತಾ, ನಂತರ ಅವರ ಕವಿತೆಗಳನ್ನು ಓದುತ್ತಾ ಬೆಳೆದ ನಮ್ಮಂತವರಲ್ಲಿ ದೊಡ್ಡರಂಗೇಗೌಡ ಅವರ ಬಗ್ಗೆ ಮೇಲಿನ ಕಾರಣಕ್ಕಾಗಿ ಕನಿಕರ ಹಾಗೂ ವಿಷಾದಗಳು ಉಂಟಾಗುತ್ತವೆ. ಆ ಸಿನಿಮಾ ಜಗತ್ತು ದೊಡ್ಡರಂಗೇಗೌಡರಂತಹ ಅಪ್ಪಟ ಕವಿಯನ್ನು, ಅವರ ಒಳಗಿನ ಸಹಜ ಕವಿತ್ವವನ್ನು ತುಳಿದು ಹಾಕಿಬಿಟ್ಟಿತ್ತು. ಒಂದಷ್ಟು ಜನಪ್ರಿಯತೆಯನ್ನಲ್ಲದೆ ಗೌಡರು ಸಿನಿಮಾಗಳಿಂದ ಮತ್ತೇನನ್ನು ಗಳಿಸಲಿಲ್ಲ. ಇದದ್ದನ್ನು ಕಳೆದುಕೊಂಡರೇನೋ ಎಂಬ ಅನುಮಾನ ಮೂಡುತ್ತದೆ. ಇದು ದೊಡ್ಡರಂಗೇಗೌಡರಿಗೆ ಆದ ಅನ್ಯಾಯವಲ್ಲ, ಆಧುನಿಕ ಕನ್ನಡ ಕಾವ್ಯಕ್ಕೆ ಸಿನಿಮಾಗಳು ಬಗೆದ ದ್ರೋಹ.

ದೊಡ್ಡರಂಗೇಗೌಡರು ಇಲ್ಲಿಯವರೆಗೆ ಸುಮಾರು 50 ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಇವರ ಕಾವ್ಯಜೀವನದ ಪ್ರಾರಂಭದ ದಿನಗಳಲ್ಲಿ ಕಾವ್ಯಾಸಕ್ತರ ಕುತೂಹಲಕ್ಕೆ ಇಂಬಾಗಿದ್ದರು. ಕುವೆಂಪು ಅವರ ಗ್ರಾಮೀಣ ಬದುಕು ಹಾಗೂ ವೈಚಾರಿಕ ಚಿಂತನೆಗಳನ್ನು, ಬೇಂದ್ರೆ ಅವರ ಜಾನಪದ ಲಯಮಾಟಗಳನ್ನು ದೊಡ್ಡರಂಗೇಗೌಡರು ತಮ್ಮ ಕವಿತೆಗಳಲ್ಲಿ ಒಡಮೂಡಿಸಿದ್ದರು. ಕುವೆಂಪು ಹಾಗೂ ಬೇಂದ್ರೆಯನ್ನು ಮುರಿದುಕಟ್ಟಿದರೆ ಹೇಗೆ ಒಬ್ಬ ವಿಶಿಷ್ಟ ಕವಿ ರೂಪುತಾಳುತ್ತಾನೋ ಹಾಗೆ ದೊಡ್ಡರಂಗೇಗೌಡರು ಆ ಎರಡು ಹಿರಿಯ ಚೇತನಗಳ ಸಂಮಿಶ್ರ ಫಲದಂತಿದ್ದರು. ಇದು ಆ ಕಾಲಕ್ಕೆ ಅತ್ಯಂತ ಭರವಸೆಯ ನಿರೀಕ್ಷೆಯಾಗಿತ್ತು. ದೊಡ್ಡರಂಗೇಗೌಡರು ಆ ನಿರೀಕ್ಷೆಯನ್ನು ಹುಸಿಮಾಡದಂತೆ ಎತ್ತರಕ್ಕೆ ಬೆಳೆದು ಬಂದಿದ್ದರು.

ಎಪ್ಪತ್ತು, ಎಂಬತ್ತರ ದಶಕದಲ್ಲಿ ಕನ್ನಡ ಕಾವ್ಯ ಹೊಸ ದಿಕ್ಕುಗಳತ್ತ ಚಾಚತೊಡಗಿತ್ತು. ನವ್ಯದ ಪ್ರಭಾವಳಿಯಿಂದ ಯಾವ ಕವಿಯು ತಪ್ಪಿಸಿಕೊಳ್ಳಲಾರದಂತಹ ಕಾಲವದು. ಅಡಿಗ, ಶರ್ಮ, ಲಂಕೇಶ್, ಅನಂತಮೂರ್ತಿ ಮತ್ತಿತರರ ಕೃತಿಗಳು ಶ್ರೇಷ್ಠತೆಯ ಪರಾಕಾಷ್ಠೆ ಮುಟ್ಟಿದ್ದವು. ಕಾವ್ಯದ ಆತ್ಮಕ್ಕೆ ಹಾಗೂ ಮೈಮಾಟಕ್ಕೆ ವಿಶಿಷ್ಟ ನೆಲೆ ನವ್ಯದಿಂದ ಮೂಡಿಬಂದಿತ್ತು. ನಂತರದಲ್ಲಿ ಬಂದ ಬಂಡಾಯ ದಲಿತ ಚಳುವಳಿ ಕನ್ನಡ ಕಾವ್ಯಕ್ಕೆ ಇನ್ನೊಂದು ನೆಲೆಯ ವಿನೂತನ ಗ್ರಹಿಕೆಗಳನ್ನು ನೀಡತೊಡಗಿದ್ದವು. ಸಾವಿರಾರು ವರ್ಷಗಳಿಂದ ಮಾತುಕಳೆದುಕೊಂಡಿದ್ದ ದಮನಿತ ಜಾತಿ ಜನಾಂಗದ ಕವಿಗಳು ತಮ್ಮ ಸಂಕಟಗಳನ್ನು ನೋವುಗಳನ್ನು ಬಿಚ್ಚತೊಡಗಿದ್ದರು. ಈ ಎರಡು ಬಿಕ್ಕಟ್ಟುಗಳ ನಡುವೆ ದೊಡ್ಡರಂಗೇಗೌಡರಂತಹ ಪ್ರೇಮಮಯಿ ಕವಿಗಳು ತಮ್ಮದೆಂಬುದನ್ನು

ಭಾಪಿಸಬೇಕಾದ ಹೊಸ ಇಕ್ಕಟ್ಟನ್ನು ಎದುರಿಸಬೇಕಾಯಿತು. ಈ ಸವಾಲುಗಳನ್ನು ದೊಡ್ಡರಂಗೇಗೌಡರು ಎದುರಿಸುವ ರೀತಿಯನ್ನು ನಾವು ಗಮನಿಸಬೇಕಾಗಿದೆ. ನಮ್ಮ ಕನ್ನಡ ವಿಮರ್ಶೆ ಈ ಸಂದಿಗ್ಧಗಳನ್ನು ಕವಿ ಮೀರುವ ಬಗೆಯನ್ನು ಗುರುತಿಸುವ ಹೊಣೆಯಿಂದ ನುಣಚಿಕೊಂಡಿದೆ. ಅಥವಾ ಕವಿಗೆ ಆ ಬಗೆಯ ಜಿಜ್ಞಾಸೆ ಹಾಗೂ ತಾಕಲಾಟಗಳಿಗೆ ಮುಖಾಮುಖಿಯಾಗಿ ನಿಂತು ಕಾವ್ಯದ ರಿವಾಜನ್ನು ಸಮರ್ಥಿಸಿಕೊಳ್ಳಬೇಕಾದ ಸಂದರ್ಭ ಒದಗಿಸಬರಲಿಲ್ಲವೇಕೆ? ಎಂಬ ಅನುಮಾನವು ಮೂಡುತ್ತದೆ.

ಈ ಬಿಕ್ಕಟ್ಟಿನ ಸಂದರ್ಭದಲ್ಲಿ ದೊಡ್ಡರಂಗೇಗೌಡರು ಯಾವುದಾದರೂ ಒಂದು ಹಾದಿಯನ್ನು ಗಟ್ಟಿಯಾಗಿ ಹಿಡಿಯಬೇಕಿತ್ತು. ಅಥವಾ ಅದನ್ನು ಮೀರಿ ತನ್ನದೆ ಹೊಸ ಮಾರ್ಗವನ್ನು ಕಂಡುಕೊಳ್ಳಬೇಕಾಗಿತ್ತು. ಕವಿಗಿದ್ದ ಅನುಭವದ ಆಳ ಹಾಗೂ ಜ್ಞಾನದ ಎತ್ತರ ಈ ಸಾಧ್ಯತೆಗೆ ಇಂಬುಕೊಡುವಂತಿದ್ದವು. ತಮ್ಮ ಬತ್ತಳಿಕೆಯಲ್ಲಿದ್ದ ಈ ಮಹಾಸ್ತ್ರಗಳನ್ನು ದೊಡ್ಡರಂಗೇಗೌಡರು ಬಳಸುವ ಮೂಲಕ ತನ್ನ ಕಾಲದ ತಂತ್ರಕ್ಕೆ ಮರುತಂತ್ರವನ್ನು ಕಂಡುಕೊಳ್ಳಬೇಕಾಗಿತ್ತು. ಬಹುಶಃ ಸಿನಿಮಾ ಎಂಬ ಭ್ರಾಮಕ ಜಗತ್ತು ಕವಿಗೆ ಅವಕಾಶ ಕೊಡದೆ ಹೋಗಿರಬಹುದು. ಈ ಹಣಗಾಟದಲ್ಲಿ ಕವಿ ಇನ್ನೊಂದು ಗಮನಾರ್ಹ ಹಾದಿಯನ್ನು ಬಲವಾಗಿ ಹಿಡಿದದ್ದನ್ನು ನಾವು ಗುರುತಿಸಬಹುದು. ಅದು ಭಾವಗೀತೆಗಳ ಲೋಕ. ಲಕ್ಷ್ಮಿನಾರಾಯಣಭಟ್ಟ, ವೆಂಕಟೇಶಮೂರ್ತಿ, ಲಕ್ಷ್ಮಣರಾವ್, ವ್ಯಾಸರಾವ್ ಮುಂತಾದ ಉತ್ತಮ ಜಾತಿಯ ಕವಿಗಳು ಈ ಹಾದಿಯಲ್ಲಿ ಮಿಂಚುತ್ತಿದ್ದರು. ದೊಡ್ಡರಂಗೇಗೌಡರು ಕೂಡ ಈ ಕವಿಗಳನ್ನು ಹಿಂದಿಕ್ಕುವ ಪ್ರಯತ್ನಕ್ಕೆ ಮುಂದಾದರು. ಈ ಪ್ರಯತ್ನವನ್ನು ನಾವು ಕಡಿಮೆಯೆನ್ನುವಂತಿಲ್ಲ. ಕಾಲದ ಮತ್ತೊಂದು ತಹತಹಕ್ಕೆ ಒಳಗಾದ ಕವಿ, ಆ ದಿಕ್ಕಿನಲ್ಲಿ ಯಶಸ್ಸು ಸಾಧಿಸಿರುವುದನ್ನು ನಾವು ಸ್ಪಷ್ಟವಾಗಿ ಕಾಣಬಹುದು.

ತನ್ನ ಕವಿತೆಯ ಕ್ರಮವನ್ನು ದೊಡ್ಡರಂಗೇಗೌಡರು ತಮ್ಮ 'ಬಂಗಾರ ಭೂಮಿ' ಸಂಕಲನಕ್ಕೆ ಬರೆದ ನಿವೇದನೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

"ಸೊಲ್ಲು ಸೊಲ್ಲಲ್ಲೂ ಮುಳ್ಳು ಕಾಲು ಚುಚ್ಚಿದ ಅನುಭವವನ್ನು ಪಡೆದಿದ್ದರೂ.... ಕಲ್ಲು ಸಕ್ಕರೆಯನ್ನಾಗಿಸಿದ ಕಲಾಭಿವ್ಯಕ್ತಿಯಿದೆ; ಮುಕ್ತ ಉಕ್ತಿ ಚಾತುರ್ಯವಿದೆ.... ಆದ್ದರಿಂದಲೇ ನುಡಿ ನುಡಿಯಲ್ಲೂ ಲವಲವಿಕೆಯ ಕುಡಿ ಅರಳಿದೆ. ಎಂಥ ಕಹಿಯ ನಡುವೆಯೂ ಸಿಹಿ ಮಾತೇ ಪಲ್ಲವಿಸಿದೆ. ಅದು ನನ್ನ ಬದುಕಿನ ತಾಳ್ಮೆಯೂ ಹೌದು; ಸಹಜ ಸ್ವಭಾವವೂ ಹೌದು! ಸಾಹಿತ್ಯದಲ್ಲಿ ಅತ್ಯಂತ ಮುಖ್ಯವೂ, ಮಧುರವೂ, ರಮ್ಯವೂ ಆದದ್ದು – ಕಾವ್ಯ. ಆದ್ದರಿಂದಲೇ ಕಾವ್ಯಕ್ಕೆ ಅಪೂರ್ವ ಮಾಧುರ್ಯ ಪ್ರಾಪ್ತವಾಗುತ್ತದೆ.

ನುಡಿ ಬೆಡಗಿದ್ದಲ್ಲಿ ಚೆಂದ; ಆಗ ಮಾತೆಲ್ಲ ಮಕರಂದ. ನನಗಾದ ಜೀವನದ ರೋಮಾಂಚನದ ಎಲ್ಲ ಕ್ಷಣಗಳನ್ನೂ ಒಂದಲ್ಲ ಒಂದು ರೀತಿ ದಾಖಲಿಸುವ ಪ್ರಯತ್ನಪಟ್ಟಿದ್ದೇನೆ. ರಸಾನುಭವಗಳನ್ನು ರಮ್ಯ ಕಾವ್ಯವಾಗಿಸಿದ್ದೇನೆ.

ಹೀಗಾಗಿ ಇಲ್ಲಿನ ಕಾವ್ಯಕ್ಕೆ ಬುದ್ಧಿಗಿನ್ನ ಭಾವಪ್ರಕಾಶದ ತನಿ ತನಿ ಮೆರಗು ಮೂಡಿದೆ. ರಸ ಸಿದ್ದಿಯ ಕಡೆಗೇ ಇಲ್ಲಿನ ಮಾತು ತುಡಿಯುವುದರಿಂದ ಬನಿ ಇದೆ; ಜೇನ ಹನಿ ಇದೆ. ಗೀತಗಾರಿಕೆಯಲ್ಲಿ ವಾಗರ್ಥದಾಚೆಯ ಧ್ವನಿ ಸಿಂಫನಿ ಇದೆ.''

-ಇದು ತಮ್ಮ ಕಾವ್ಯಕ್ಕೆ ತಾವೇ ರೂಪಿಸಿದ ವ್ಯಾಖ್ಯಾನ. ದೊಡ್ಡರಂಗೇಗೌಡ ಕಾವ್ಯ ಕೌಶಲ್ಯದ ಹಾಗೂ ಸ್ವವಿಮರ್ಶೆಯ ಪರಿಪಕ್ವ ಚಿಂತನೆ.

ಅವರೇ ಹೇಳಿಕೊಂಡಂತೆ ತಮ್ಮ ಅನುಭವಕ್ಕೆ ಬಂದ ಯಾವತ್ತೂ ಗ್ರಹಿಕೆಗಳನ್ನು ಹಾಗೆಯೇ ಮಾಸಿಹೋಗಲು ಬಿಟ್ಟವರಲ್ಲ. ಪ್ರತಿಯೊಂದಕ್ಕೂ ಮೂರ್ತರೂಪಕೊಟ್ಟು ಕವಿತೆಯನ್ನಾಗಿಸುವ ಪರಿಣತಿ ತೋರಿಸಿದ್ದಾರೆ. ನಮ್ಮ ಕಾಲದಲ್ಲಿ ಹೀಗೆ ಎಲ್ಲವನ್ನೂ ಮುಟ್ಟಿ ಎಲ್ಲದರಲ್ಲೂ ಕವಿತೆಯನ್ನು ಕಾಣುವ ಪ್ರತಿಭಾ ಶಕ್ತಿಯುಳ್ಳ ಕವಿಗಳ ಸಂಖ್ಯೆ ತೀರ ಅತ್ಯಲ್ಪ. ವಸ್ತುವಿನ ಆಯ್ಕೆಯಲ್ಲಿ ದೊಡ್ಡರಂಗೇಗೌಡ ಅವರಿಗೆ ಎಲ್ಲೂ ಪ್ರಯಾಸವುಂಟಾಗುವುದಿಲ್ಲ. ಲೋಕದ ಪ್ರತಿ ನಡಿಗೆಯು, ಪ್ರತಿನೋಟವು ಅವರನ್ನು ಕಾಡಬಲ್ಲವು. ಕವಿಯ ಪ್ರತಿ ಮಾತು ಕವಿತೆಯೆ. ಕವಿ ಮುಟ್ಟಿದ್ದೆಲ್ಲಾ ಕಾವ್ಯ.

ದೊಡ್ಡರಂಗೇಗೌಡರು ನವ್ಯ ಚಳವಳಿಗೆ ಹತ್ತಿರವಾದರೂ; ಅವರನ್ನು ಕಾಡಿರುವುದು ರಮ್ಯಪಂಥ. ನಿಸರ್ಗಕ್ಕೆ ಹತ್ತಿರವಾದ ಕವಿ ಇವರು. ನಿಸರ್ಗದ ಅರಳುವ ಚೈತನ್ಯಕ್ಕೆ ಮಾರುಹೋದವರು. ಅವರ ಗ್ರಾಮೀಣ ಹಿನ್ನೆಲೆ ಇದಕ್ಕೆ ಮುಖ್ಯಕಾರಣವಾಗಿರಬಹುದು. ಈ ನೆಲ ಅವರಿಗೆ ಸದಾ ಬಂಗಾರಭೂಮಿ. ನೆಲದ ಅಭಿಮಾನವೇ ನುಡಿಯ ಅಭಿಮಾನ. ಕುವೆಂಪು ಅವರನ್ನು ಬಿಟ್ಟರೆ ಈ ಜಾಡು ಹಿಡಿದು ದೃಢವಾಗಿ ನಡೆದ ಮತ್ತೊಬ್ಬ ಕವಿ ಎಂದರೆ ದೊಡ್ಡರಂಗೇಗೌಡರು ಮಾತ್ರ. ಅಲ್ಲದೆ ಮನುಷ್ಯನ ಸಂಕಟಗಳಿಗೆ ಮಿಡಿಯದೆ ಸುಮ್ಮನೆ ಕುಳಿತ ಕವಿ ಇವರಲ್ಲ. ''ಕರಿಯ ಮೋಡಗಳೆ ಸುತ್ತ ಮುತ್ತಿರಲು ಅರುಣ ಕಿರಣ ಬರದೇ?'' ಎಂಬ ಪ್ರಶ್ನೆ ಕವಿಯಲ್ಲಿ ಇವೆ. ''ಬವಣೆ ಬೇವಾಗಿ ಒಗರೇ ತುಳುಕಿರಲು ಸುಖದ ಮಾವು ಇರದೇ?'' ಎಂಬ ಸಮಾಧಾನವೂ ಅವರಲ್ಲಿದೆ.

ಇಂದ್ರಿಯಾತೀತ ಆನಂದ ಹಾಗೂ ಸಂಭ್ರಮ ದೊಡ್ಡರಂಗೇಗೌಡರ ಕಾವ್ಯದ ಕೇಂದ್ರ ನೆಲೆ. ಇದೇ ಅವರ ಜನಪ್ರಿಯತೆಗೆ ಮತ್ತೊಂದು ಮುಖ್ಯ ಕಾರಣ. ನವ್ಯಪಂಥದ ಕವಿಗಳು ಕಾವ್ಯವನ್ನು

ಜನರಿಂದ ದೂರಮಾಡಿದರು ಎಂಬ ಆರೋಪವಿದೆ. ಈ ಆರೋಪದಲ್ಲಿ ಸ್ವಲ್ಪ ಮಟ್ಟಿಗೆ ಸತ್ಯಾಂಶವಿದೆ. ಇಂದಿನ ನಮ್ಮ ಸಮಾಜದ ಸಾಂಸ್ಕೃತಿಕ ಅಧಃಪತನಕ್ಕೆ ಇದು ಕಾರಣವಾಗಿದೆ. ದೊಡ್ಡರಂಗೇಗೌಡರಂತಹ ಕವಿಗಳು ಇದಕ್ಕೆ ಅಪವಾದ ಎಂಬಂತಿದ್ದಾರೆ. ಕವಿತೆಯನ್ನು ಜನತೆಯ ಬಳಿಗೆ ತೆಗೆದುಕೊಂಡು ಹೋಗುವ ಕ್ಲಿಷ್ಟಕರ ಜವಾಬ್ದಾರಿಯನ್ನು ದೊಡ್ಡರಂಗೇಗೌಡರು ಅತ್ಯಂತ ವಿಶ್ವಾಸದಿಂದ ತಮ್ಮ ಹೆಗಲಿಗೇರಿಸಿಕೊಂಡು ದುಡಿದಿದ್ದಾರೆ. ಅವರ ಕವಿತೆಗಳು ಜನರ ಬಳಿಗೆ ಹೋಗಿವೆ. ಅಕ್ಷರಸ್ಥರು-ಅನಕ್ಷರಸ್ಥರು, ಸಾಮಾನ್ಯರು-ಗಣ್ಯರು, ಮೇಲ್ವರ್ಗದವರು - ಕೆಳವರ್ಗದವರು ಹೀಗೆ ಎಲ್ಲ ಮಜಲಿನ ಜನತೆಯ ಜೊತೆಗೆ ಅವರ ಕಾವ್ಯದ ಒಡನಾಟವಿದೆ. ಇದು ಒಂದು ತಪಸ್ಸಿನಂತೆ, ಚಳವಳಿಯಂತೆ ದೊಡ್ಡರಂಗೇಗೌಡರು ಮಾಡಿದ್ದಾರೆ.





# ಬೆಳಕಿನ ತವಕದಲ್ಲಿ ಕಾವ್ಯದ ನಿತ್ಯ ಸಂಚಾರ

**• ಚಿಂತಾಮಣಿ ಕೊಡ್ಲೆಕೆರೆ**

ಕವಿ ದೊಡ್ಡರಂಗೇಗೌಡರ ಮೂರು ದಶಕಕ್ಕೂ ಮಿಕ್ಕಿದ ಕಾವ್ಯ ವ್ಯವಸಾಯವನ್ನಾಧರಿಸಿ ಅವರ ಆಯ್ದ ಕವಿತೆಗಳ ಈ ಸಂಕಲನವನ್ನು ಸಿದ್ಧಪಡಿಸಲಾಗಿದೆ. ಚಲನಚಿತ್ರಗಳಿಗಾಗಿ ಈ ಕವಿ ಬರೆದ ಹಾಡುಗಳು ಬಹು ದೊಡ್ಡ ಪ್ರಮಾಣದಲ್ಲಿ ಜನಪ್ರೀತಿಯನ್ನು ಪಡೆದಿವೆ. ಅದಲ್ಲದೆ ಈ ಕವಿ ಮುಕ್ತಛಂದದಲ್ಲಿ ಬರೆದಿದ್ದಾರೆ, ಮುಕ್ತಕಗಳನ್ನು ಬರೆದಿದ್ದಾರೆ, ಪ್ರಗಾಥ, ಭಕ್ತಿಗೀತೆ, ಭಾವಗೀತೆಗಳನ್ನೂ ಬರೆದು ಒಟ್ಟಾರೆ ಇಪ್ಪತ್ತಕ್ಕೂ ಹೆಚ್ಚು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ತಾನೊಬ್ಬ ಕಾವ್ಯಕೃಷಿಕ ಎಂದು ಕರೆದುಕೊಳ್ಳುವ ಗೌಡರು ನಿರ್ವ್ಯಂಚನೆಯಿಂದ ಈ ಶಬ್ದ ಬೇಸಾಯವನ್ನು ಗೈಯುತ್ತ ಬಂದಿದ್ದಾರೆ. ಈ ಒಕ್ಕಲುತನ ಸಹಜವಾಗಿರಬೇಕು. ಸತತವಾಗಿರಬೇಕು ಎಂಬುದು ದೊಡ್ಡರಂಗೇಗೌಡರ ನಿಲುವಾಗಿದೆ. ಗೌಡರು ವಿಪುಲತೆಯಲ್ಲಿ ವಿಶ್ವಾಸವಿಟ್ಟಿರುವ ಕವಿ. ಆದುದರಿಂದ ಅವರು ಉಕ್ಕುವ ಪ್ರತಿಭಾವವನ್ನೂ, ಚಿಂತನೆಯನ್ನೂ ಕವಿತೆಯಾಗಿಸುವ ತವಕದಲ್ಲಿರುತ್ತಾರೆ. 'ಬರೆದ ಬರಹಗಳೆಲ್ಲಾ ಕಾವ್ಯವಾಗುವುದಿಲ್ಲ' ಎಂದು ಅವರು ಬಲ್ಲರು. 'ಹೃದಯದ ಮಾತೆಲ್ಲ ಸೃಜನಶೀಲ' ಎಂಬುದು ಅವರ ಅದೇ ಮುಕ್ತಕದ ಕೊನೆ ಸಾಲು. ಅಂದರೆ ಹೃದಯದ ಮಾತು ಬರಹವಾದಾಗ ನಿಜವಾದ ಕವಿತೆ ಹುಟ್ಟುತ್ತದೆ ಎಂಬುದು ಈ ಕವಿಯ ಧೋರಣೆ ಎಂದು ನಾವು ತಿಳಿಯಬಹುದು.

> 'ಅಸ್ಪಷ್ಟ ಕತ್ತಲು ಕಲಸು ಮೇಲೋಗರದ ಗೆರೆಗಳು-
> ಸ್ಪಷ್ಟವಾಗುತ್ತಾ
> ಅನಿತ್ಯ ಬದುಕಿನ ಭಾವನೆಗಳು
> ನಿತ್ಯ ನಿತ್ಯವೂ ದಟ್ಟ ಕಾಣುತ್ತಾ
> ಅನುಭವದ ಕರಿನೆರಳು
> ಒಟ್ಟೊಟ್ಟಾಗಿ ದಾಪುಗಾಲು ಹಾಕುತ್ತಾ'

– ಈ ಕವಿ ಬರೆಯತೊಡಗುತ್ತಾರೆ. ಆದರೆ ತಾರಕದಲ್ಲೂ ಅಕ್ರಾಂತವಾಗದೆ ಸಂಯಮದಿಂದ ಅವರು ತನ್ನ ಕವಿತೆಗಳನ್ನು ರೂಪಿಸಬಯಸುತ್ತಾರೆ. ಸ್ವಪಿಮರ್ಶೆಯೂ ಗೌಡರ ಕಾವ್ಯದ ಒಂದು ಮುಖ್ಯ ಗುಣವೇ ಆಗಿದ್ದರೂ ಬರುಬರುತ್ತ ಅವರು ಹೆಚ್ಚು 'ಬಹಿರ್ಮುಖಿೀ' ಪದ್ಯಗಳನ್ನು ಬರೆಯತೊಡಗಿದ್ದಾರೆ. ಬಡತನ, ನಿರುದ್ಯೋಗ, ಶೋಷಣೆ, ಇಲ್ಲದವರ ಪಾಡು, ಶ್ರೀ ಸಾಮಾನ್ಯನ ದುರವಸ್ಥೆ, ಕುಸಿಯುತ್ತಿರುವ ಜೀವನ ಮೌಲ್ಯಗಳು, ಸಂಸ್ಕೃತಿಯ ಅಹಿತಕರ ಅಧಃಪತನ– ಇಂಥ ಎಲ್ಲ ಸಂಗತಿಗಳ ಕುರಿತು ಅವರ ಮನಸ್ಸು ಹೆಚ್ಚಾಗಿ ತೊಡಗಿಕೊಳ್ಳಲಾರಂಭಿಸಿದೆ. ಗೊಬ್ಬರ ತುಂಬಿದ ಕೈಯ ಸಗಣಿ ಮೆತ್ತಿದ ಬೆರಳು ಓಡಿದ ಇವರ ಗ್ರಾಮೀಣ ಲೇಖನಿ (ಹೆಜ್ಜೆಗುರುತು ಪದ್ಯ) ಅಪ್ಪಟ ಮಣ್ಣಿನ ಬದುಕಿಗಾಗಿ ಹಾತೊರೆಯುತ್ತದೆ. ಇಷ್ಟು ವರ್ಷಗಳ ನಗರದ ಸಹವಾಸದ ಬಳಿಕವೂ ಅವರಿಗೆ 'ನಮ್ಮಂಥವರಿಗಲ್ಲ ಈ ಪಟ್ಟಣ' ಎಂದೇ ತೋರಿದೆ. ಮತ್ತೆ ಮತ್ತೆ ಹಳ್ಳಿಯ ಜೀವನ, ಅಲ್ಲಿಯ ನಿಸರ್ಗ ಅವರನ್ನು ಕೈಬೀಸಿ ಕರೆಯುತ್ತದೆ. ಅವರು ನಗರವನ್ನು 'ಅಕ್ಟೋಪಸ್' ಎಂದು ಒಂದು ಕವಿತೆಯಲ್ಲಿ ಕರೆದರೆ ಇನ್ನೊಂದು ಪದ್ಯದಲ್ಲಿ ಸಿಟಿಯದು ದೈತ್ಯಕಟಿ ಎಂದು ವರ್ಣಿಸಿ ಅದನ್ನು ಹಿಡಿಯಲಾಗದ ತನ್ನ ಕಷ್ಟದ ಕುರಿತು ಬರೆಯುತ್ತಾರೆ. ಆದುದರಿಂದಲೇ ಅವರಿಗೆ ಹಳ್ಳಿ ಬದುಕು ಇಷ್ಟವಾಗತೊಡಗುವುದು.

'ನಮ್ಮ ಹಳ್ಳಿ ಮಣ್ಣು ಕಂಪು
ಎಂದೂ ನನಗೆ ಇಷ್ಟ
ಟಾರುರಸ್ತೆ ಬಿಗಿಯ ಬಿಸುಪು
ನನ್ನ ಕಾಲಿಗೆ ಕಷ್ಟ'

ಅಂದರೆ ಗೌಡರು ಬಯಸುತ್ತಿರುವುದು ಟಾರು ರಸ್ತೆಯ ಮಟ್ಟಿಗೂ/ಮಟ್ಟಕ್ಕೂ ಕಳಂಕಗೊಂಡಿರದ ಹಳ್ಳಿಯ ಬದುಕನ್ನು! ಅಲ್ಲಿ ನಲ್ಲಿ ನೀರಿಲ್ಲ, ಕಾಂಕ್ರೀಟು ಮನೆಗಳಿಲ್ಲ, ಅಲ್ಲಿಯ ಜನರದು ಬೆಳದಿಂಗಳಂಥ ವ್ಯಕ್ತಿತ್ವ. ಪ್ರಾಯಶಃ ಯಾವ ಹಳ್ಳಿಯೂ ಇಷ್ಟು ಪರಿಶುದ್ಧವಾಗಿ ಈಗ ಉಳಿದಿರಲಾರದು! ತನ್ನದೇ ಹಳ್ಳಿಯ ಕುರಿತು ಈ ಕವಿ 'ಗ್ರಾಮ-ಗೀತೆ' ಬರೆದಾಗ 'ನಿಯತ್ತು ಸತ್ತುಹೋಯ್ತು' ಎಂದು ಶೋಕಿಸಿದ್ದಾರೆ. ಆದರೂ ಅವರ ಕವಿತೆ ಬಹು ಹಳೆಯ ಕಾಲದ (ಅಥವಾ ಕವಿಯ ಬಾಲ್ಯ ಕಾಲದ) ನಿಸರ್ಗ ಸಹಜ ಬಾಳ್ವೆಯ ಹಳ್ಳಿಯೊಂದನ್ನು ನಿರ್ಮಿಸಿ ಅಲ್ಲಿ ಆಸರೆ ಪಡೆಯಲಿಚ್ಛಿಸುತ್ತದೆ. ಅದು 'ವಿದ್ಯುತ್, ರೇಡಿಯೋ' ಕೂಡ ಇಲ್ಲದ ಲೋಕ. ಅಲ್ಲಿ ತೇರಾ ಏರಿ ಅಂಬರದಾಗೆ ನೇಸರ ನಲಿಯುತ್ತಾನೆ. ಆಗ ಮರಗಿಡ ತೂಗುತ್ತವೆ, ಹಕ್ಕಿ ಹಾಡುತ್ತವೆ, ಸಾಲು ಸಾಲು ಬೆಟ್ಟ ಗುಡ್ಡ ಮೌನ ತಳೆಯುತ್ತವೆ, ಮಾವು-ಬೇವು-ತಾಳೆ-ತೆಂಗು ಲಾಲಿ ಹಾಡುತ್ತವೆ.....

ಅದು ದೊಡ್ಡರಂಗೇಗೌಡರ ಕನಸಿನ ಹಳ್ಳಿ. ಹತ್ತಾರು ಬಗೆಯಲ್ಲಿ ಅವರು ಆ ಕುರಿತು

ಬರೆಯುತ್ತಾರೆ. ಆ ಕಾಲ, ಆ ಬದುಕು ಉಳಿದಿಲ್ಲೆಂಬುದೂ ಅವರಿಗೆ ಚೆನ್ನಾಗಿ ಗೊತ್ತು. 'ನಮ್ಮೂರ ಸುತ್ತ ಮುತ್ತಾ' ಪದ್ಯದಲ್ಲಿ ಮಹತ್ತಾದ ಗುರಿಯಿಲ್ಲದ ಹಳ್ಳಿಯ ಹೊಸ ಪೀಳಿಗೆ ಬದುನ್ನು ವ್ಯರ್ಥಗೊಳಿಸಿಕೊಳ್ಳುತ್ತಿದೆ ಎಂಬ ಆತಂಕವಿದೆ. ಆದರೆ ಕವಿ ಭವಿಷ್ಯದ ಕುರಿತು ವಿಶ್ವಾಸ ಕಳೆದುಕೊಳ್ಳುವುದಿಲ್ಲ. ಯುವಶಕ್ತಿ ತನ್ನತನ ಸಾರುವುದೆಂಬ ಹಾರೈಕೆಯನ್ನು ಅವರು ಪ್ರಕಟಿಸುತ್ತಾರೆ. ಅವರ ಕವಿತೆಗಳು ದಿಕ್ಕಿಲ್ಲದ ಜೀವಗಳ ಬವಣೆಯ ಕುರಿತು ನಿರಂತರವಾಗಿ ದುಃಖ ವ್ಯಕ್ತಪಡಿಸುತ್ತವೆ ನಿಜ. ಜತೆಗೇ 'ಉಳಿಯುವ ತವಕ' ಮಾದರಿಯ ಕವಿತೆಗಳಲ್ಲಿ 'ನಿರಾಸೆ ಕತ್ತಲ ಸೀಳಿ ಆಸೆ ಬೆಳಕು ಬರುವ ತನಕ ಭರವಸೆ ತುಂಬಿಕೊಂಡು ಬದುಕಬೇಕೆನ್ನುವ ಆಸೆಯನ್ನು ಅಂಥ ಜೀವಗಳು ಹೊತ್ತಿವೆ'- ಎಂಬ ಚಿತ್ರ ನೀಡಿದ್ದಾರೆ.

ದೊಡ್ಡರಂಗೇಗೌಡರ ಕವಿತೆಗಳು ಸಮಕಾಲೀನ ಸಮಸ್ಯೆಗಳನ್ನು ಎದುರಿಸಲು ಹಿಂಜರಿಯುವುದಿಲ್ಲ. ಆದರೆ ಆ ಕುರಿತು ಅವು ಆಳವಾದ ಶೋಧನೆಯಲ್ಲೇನೂ ತೊಡಗುವುದಿಲ್ಲವಾದ್ದರಿಂದ, ಈ ನಾಡಿನ ಸಾಮಾನ್ಯರ, ಮಧ್ಯಮ ವರ್ಗದವರ ಬಿಡುಬೀಸಾದ ರಾಜಕೀಯ, ಸಾಮಾಜಿಕ ಪ್ರತಿಕ್ರಿಯೆಗಳ ಮಟ್ಟದಲ್ಲಿ ಮಾತ್ರ ಉಳಿಯುತ್ತವಾದ್ದರಿಂದ ಅಥವಾ ಇನ್ನೂ ಖಚಿತವಾಗಿ ಹೇಳಬೇಕೆಂದರೆ ಕಾವ್ಯದ ಸಾಮಾನ್ಯ ಓದುಗನೊಬ್ಬನ ಸಾಧಾರಣ ರಾಜಕೀಯ ಪ್ರಜ್ಞೆಗಿಂತ ಮೇಲ್ಮಟ್ಟದ ವೈಚಾರಿಕತೆಯನ್ನೇನೂ ಅವು ಪ್ರಕಟಿಸುವುದಿಲ್ಲವಾದ್ದರಿಂದ ಅವರ ಕವಿತೆಗಳ ಸಾಮಾಜಿಕ, ರಾಜಕೀಯ ಎಚ್ಚರದ ಕುರಿತು ಮೆಚ್ಚುಗೆ ಸೂಚಿಸಬಹುದಷ್ಟೇ ಹೊರತು ಹೆಚ್ಚಿನ ಮಾತುಗಳನ್ನಾಡಲಾಗುವುದಿಲ್ಲ. ಅಷ್ಟೇಕೆ

ರಾಗಿ ಜೋಳ ಬೆಳೆಯಬೇಕಾದಲ್ಲಿ
ಬಿತ್ತಿ ಬೆಳೆದಿದ್ದೇವೆ ನಾವು
ದುಷ್ಟ ಪುಢಾರಿಗಳನ್ನು
ಕೆಟ್ಟ ರಾಜಕಾರಣವನ್ನು;

ಮರೆಯಬಾರದ ಮಾತೆಂದರೆ ಕಡೆಗೂ ಅದೊಂದು ಪ್ರಯತ್ನ. 'ಎಲ್ಲರಂತೆಯೆ ಕವಿಯೂ ಅಸಹಾಯಕ' ಎಂಬ ಮಹತ್ವದ ನಿರ್ಧಾರಕ್ಕೆ ಅವರು ಕವಿತೆಯೊಂದರಲ್ಲಿ ಬಂದಿದ್ದಾರೆ. ('ಅಸಹಾಯಕ') ಕವಿ ಸಾರ್ವಭೌಮನಲ್ಲ, ಸರ್ವಾಧಿಕಾರಿಯಲ್ಲ, ಆತ ಬ್ರಹ್ಮನಂತೆ ಸೃಷ್ಟಿ ನಿರ್ಮಾಣದ ಶಕ್ತಿ ಪಡೆದಿರುವನೆಂಬುದೂ ಭ್ರಮೆಯೇ-ರಿಕ್ಷಾ ಗಾಲಿಯಡಿ ಸಿಲುಕಿ ಸತ್ತ ಮಗುವಿನ ಹೆಣದೆದುರು ಇನ್ನಿತರ ಜನರಂತೆಯೇ ಈ ಕವಿಯೂ ನಿಂತಿದ್ದಾನೆ, ಅಷ್ಟೇ ಅಸಹಾಯಕ, ಅಷ್ಟೇ ಸಾಮಾನ್ಯ. ಈ ಕವಿ ಕಂಡ ಜಗತ್ತು ಕಲಿಸಿದ ಕಠಿಣ ಪಾಠವಿದು. ಇಂಥಲ್ಲಿ ವ್ಯಕ್ತಿಗಳೆಂಬ ವೃತ್ತಗಳಿಗೆ ಜೀವಂತ ಮೌಲ್ಯಗಳೆಂಬ ಟ್ಯಾಂಜಂಟ್ ಎಳೆಯುವ ಅಪ್ಪಟ ಪ್ರಯತ್ನ ತನ್ನದು ಎಂಬುದಷ್ಟೇ ಕವಿಯು ಪಡೆಯಬಹುದಾದ ಸಮಾಧಾನ. ಅಂಥ ಸಮಾಧಾನ ಪಡೆಯಲೆಂದೇ ಗೌಡರು ನೂರಾರು ಪದ್ಯಗಳನ್ನು ಬರೆದಿದ್ದಾರೆ.

ಅವುಗಳಲ್ಲಿ ಒಂದಷ್ಟು ಪದ್ಯಗಳು ತೀರ ವಾಚ್ಯ, ತೀರ ತೆಳು ಎಂದು ತೋರಿದರೂ ಕವಿ ತಾನೇ ತನ್ನ ಮೇಲೆ ಹೊತ್ತುಕೊಂಡ ಸಂಸ್ಕೃತಿ, ಭಾರತೀಯತೆ, ಕನ್ನಡ ಪ್ರೀತಿ ಮುಂತಾದ ಮೌಲ್ಯಗಳ ಕುರಿತ ಅತಿಯಾದ ಕಾತರದಿಂದ ಅವು ಜನ್ಮ ತಾಳಿವೆ ಎಂದು ನಾವು ಊಹಿಸಬೇಕಾಗಿದೆ. ಕವಿ ಅಸಹಾಯಕನಿರಬಹುದು. ಆದರೆ ತನ್ನ ಪ್ರಯತ್ನವನ್ನು ಮಾತ್ರ ಆತ ಬಿಟ್ಟುಕೊಡಲಾರ. ಜನರ ಸುಖ ದುಃಖಗಳ ಕುರಿತು ಕವಿ ಮತ್ತೆ ಮತ್ತೆ ದನಿಯೆತ್ತಿ ಹಾಡತೊಡಗುತ್ತಾರೆ. ಅದನ್ನು ಕೇಳಿದ ನೇಗಿಲ ನೆಂಟ, ಸೌದೆ ಆಳು, ಕಾಳೀರಜ್ಜಿ–ಇದು ತಮ್ಮದೇ ಕಥೆ, ವ್ಯಥೆ ಎಂದು ತಲೆದೂಗಿದ್ದಾರೆ. ಅಂಥ ಬೆಂದ ಹೃದಯಗಳಿಗೆ ತಂಪೆರೆಯುವ ಶಕ್ತಿ ಗೌಡರ ಹಾಡುಗಳಿಗಿದೆ ಎಂಬುದು ಪ್ರಾಯಶಃ ಅವರ ಕವಿತೆಗಳನ್ನು ಇತರ ಸಮಕಾಲೀನ ಕವಿತೆಗಳಿಂದ ಪ್ರತ್ಯೇಕಿಸುವ ಅಂಶವಾಗಿರಬಹುದು.

ದೊಡ್ಡರಂಗೇಗೌಡರು ಓದುಗರಿಗಿಂತ ಹೆಚ್ಚಾಗಿ ಕೇಳುಗರನ್ನು ಪಡೆದ ಕವಿ. ತೀರ ಗದ್ಯಮಯ ಸಾಲುಗಳನ್ನು ಬರೆಯುವ ಈ ಕವಿ ಅಚ್ಚುಕಟ್ಟಾದ ಹಾಡುಗಳನ್ನೂ ಬರೆದು ಯಶಸ್ವಿಯಾಗಿದ್ದಾರೆ. ‘ಮುಂಜಾನೆ ಮಂಜೆಲ್ಲಾ ಚೆಂದಾಗ್ಯತೆ। ಸಂಗಾತಿ ತುಟಿಯಂಗೆ। ಹವಳದ ಮಣಿಯಂತೆ। ಹೊಳಪಾಗ್ಯತೆ’, ‘ಚಿತ್ತಾರ ಬಿಡಿಸ್ಯಾವೆ ಮುಂಗಾರು ಮಳೆ ಮೂಡಿದೆ’ ಎಂದು ಕವಿ ಸಂಭ್ರಮದಿಂದ ಹಾಡತೊಡಗುತ್ತಾರೆ. ಅದು ಪುನಃ ಮಲಿನತೆಯ ಸೋಂಕೂ ಇಲ್ಲದ ರಮ್ಯಲೋಕ. ಅಲ್ಲಿ ಓಮಮಣಿಯಲ್ಲೂ ಸೌಂದರ್ಯ ಜಿಮ್ಮನೆ ಹೊಳೆಯುತ್ತದೆ, ಹಂಸಗಳು ಹಾರಾಡುತ್ತವೆ, ಹೂವುಗಳು ಮುಗುಳ್ನಗುತ್ತವೆ. ‘ನಾ ಕಂಡ ಕನಸೆಲ್ಲಾ ನನಸಾಗಿದೆ’ ಎಂದು ಕವಿ ಸಂತೋಷದಿಂದ ಹೇಳಿಕೊಳ್ಳುತ್ತಾರೆ.

ಇದು ಸಂಕ್ಷಿಪ್ತವಾಗಿ ದೊಡ್ಡರಂಗೇಗೌಡರ ಕಾವ್ಯಲೋಕದ ದರ್ಶನ. ಸಫಲತೆಗಾಗಿ ಹಾರೈಸುತ್ತ ಅವರು ಅವ್ಯಾಹತವಾದ ಕಾವ್ಯರಚನೆ ಮಾಡಿದ್ದಾರೆ ಮತ್ತು ವಿಶ್ವಾಸದಿಂದ ಆ ಕ್ರಿಯೆಯನ್ನು ಮುಂದುವರಿಸುತ್ತಲಿದ್ದಾರೆ. ‘ತವಕ’ ಎಂಬ ಪದ್ಯದ ಈ ನಾಲ್ಕು ಸಾಲುಗಳು ಅವರ ಕಾವ್ಯದ ಆದರ್ಶವನ್ನು ಸಮರ್ಥವಾಗಿ ವ್ಯಕ್ತಪಡಿಸುತ್ತವೆ–

> ಎಂದು ಕಂಡಿತೋ ನಾಲಗೆ ಮೇಲೆ ವಾಗರ್ಥ–
> ವಚನ ವಿಲಾಸದ ತುದಿಗೆ ಧ್ವನ್ಯರ್ಥ–
> ಅಂದು ಹೊಳೆದೀತೇನೋ ಮುಕ್ತಾಫಲದುಕ್ತಿ ಶಿಖರ
> ಅಲ್ಲಿಯ ತನಕ ಬೆಳಕಿಗೆ ತವಕ, ನಿತ್ಯ ಸಂಚಾರ!

ಹಿರಿಯ ಕವಿ ದೊಡ್ಡರಂಗೇಗೌಡರ ಕಾವ್ಯದ ಬೆಳಕಿನ ತವಕ ಕುಗ್ಗದೆ ಮುಂದುವರಿದು ಅವರ ನಿತ್ಯ ಸಂಚಾರವು ‘ಮುಕ್ತಾಫಲದುಕ್ತಿಶಿಖರ’ಕ್ಕೆ ಕರೆದೊಯ್ಯಲೆಂದು ಅವರ ಕಾವ್ಯದ ಈ ಮಹತ್ವದ ಘಟ್ಟದಲ್ಲಿ ಹಾರೈಸಬಹುದು.

❑



# ‘ಭೂಮಿ-ಭಾನು’ : ಅವಲೋಕನ

• ಡಾ|| ವಿಜಯ ಸುಬ್ಬರಾಜ್

ದೊಡ್ಡರಂಗೇಗೌಡರು ಆಧುನಿಕ ಜನಪ್ರಿಯ ಕವಿಗಳಲ್ಲಿ ಬಹುಮುಖ್ಯರೆನಿಸಿದ್ದಾರೆ. ಪ್ರಾಧ್ಯಾಪಕರಾಗಿ, ಸೃಜನ ಶೀಲಬರಹಗಾರರಾಗಿ ಮೂರ್ನಾಲ್ಕು ದಶಕಗಳಿಂದಲೂ, ಕವಿತೆ, ವಿಚಾರ, ಸಾಹಿತ್ಯ, ರೂಪಕಗಳು, ಸಂಪಾದಿತ ಕೃತಿಗಳು-ಹೀಗೆ ಹಲವು ಪ್ರಕಾರಗಳಿಗೆ ತಮ್ಮ ಸ್ವೋಪಜ್ಞರೀತಿಯಲ್ಲಿ ಮಹತ್ವದ ಕೊಡುಗೆ ನೀಡಿದ್ದಾರೆ; ಜನಮೆಚ್ಚುಗೆ ಪಡೆದಿದ್ದಾರೆ. ರಾಷ್ಟ್ರೀಯ ಅಂತರಾಷ್ಟ್ರೀಯ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ. ಕೇವಲ ಬರವಣಿಗೆಯಿಂದ ಮಾತ್ರವೇ ಅಲ್ಲಿದೆ ಅವರ ಸೌಮ್ಯ, ಸ್ನೇಹಶೀಲ, ಸಜ್ಜನ ವ್ಯಕ್ತಿತ್ವದಿಂದ ಅಪಾರ ಜನಪ್ರೀತಿ ಗಳಿಸಿಕೊಂಡಿದ್ದಾರೆ. ಮೂವ್ವತ್ತು ವರ್ಷಕ್ಕೂ ಮೀರಿದ ಪರಿಚಯ, ಗೆಳೆತನದೊಂದಿಗೆ ಅವರ ಸಾಹಿತ್ಯ ಸಾಧನೆ ಗಮನಿಸುತ್ತಾ ಬಂದಿರುವ ನನಗೆ ಅವರ ಅಪಾರವಾದ ಸಾಹಿತ್ಯರಾಶಿ ನೋಡಿದರೆ ದಿಗ್ಭ್ರಮೆ ಮತ್ತು ಮೆಚ್ಚುಗೆಯ ಭಾವದಲ್ಲಿ ಮೂಕಳಾಗುವಂತಾಗುತ್ತದೆ. ನವ್ಯ ಶೈಲಿಯಲ್ಲಿ ಬರೆಯತೊಡಗಿದ್ದ ದೊಡ್ಡರಂಗೇಗೌಡರು ಚಿತ್ರಗೀತೆ ಬರೆಯಲು ಆರಂಭಿಸುವುದರೊಂದಿಗೆ ‘ಭಾವಗೀತೆ’ಗಳ ಕಡೆ ಹೊರಳಿದಂತೆನಿಸುತ್ತದೆ. ಚಿತ್ರ ಗೀತೆಗಳಿಗೆ ಬಂದ ಪುರಸ್ಕಾರಗಳೇ ಅವರ ‘ಚಿತ್ರಗೀತ’ ಅಥವಾ ‘ಭಾವಗೀತ’ ರಚನಾ ಸಾಮರ್ಥ್ಯಕ್ಕೆ ನಿದರ್ಶನವಾಗಿದೆ. ಬಹುಶಃ ಇದೇ ಅವರಿಗೆ ನೂರಾರು ಭಾವಗೀತೆಗಳ ರಚನೆಗೆ ಪ್ರಬಲ ಪ್ರೇರಣೆಯಾಗಿರಬೇಕು.

ಪ್ರಸ್ತುತ ಅವರ ‘ಭೂಮಿ-ಭಾನು’ ಎಂಬ ನೂರೊಂದು ಭಾವಗೀತೆಗಳ ಸಂಕಲನ, ‘ಭಾವಗೀತ’ ರಚನಾಕಾರರಾಗಿ ಅವರ ಪ್ರತಿಭೆ, ಸಾಮರ್ಥ್ಯಗಳನ್ನು ನಿಚ್ಚಳವಾಗಿ ಬಿಂಬಿಸಿದೆ. ಸಂಕಲನಕ್ಕೆ ‘ಭೂಮಿ-ಭಾನು’ ಶೀರ್ಷಿಕೆ ನೀಡಿರುವುದರ ಹಿನ್ನೆಲೆಯಲ್ಲಿ ಭೂಮಿ ಮತ್ತು ಸೂರ್ಯನ ಬಗ್ಗೆ ಗೌಡರಿಗೆ ಇರುವ ಅನನ್ಯ ಪ್ರೀತಿ, ನೆಲದೊಂದಿಗಿನ ಅನನ್ಯ ಸಂಬಂಧಗಳು ಕೆಲಸಮಾಡಿವೆ.

ಮನುಷ್ಯ ಬದುಕಿನಲ್ಲಿ ಭೂಮಿ ತತ್ವ ಮತ್ತು ಸೂರ್ಯ ತತ್ವಕ್ಕೆ ಮಹತ್ವದ ಸ್ಥಾನವಿದೆ. ಈ

ಎರಡೂ ತತ್ವಗಳು ಮನುಷ್ಯನ ಅಸ್ತಿತ್ವಕ್ಕೆ ಪೋಷಕ ತತ್ವಗಳಾಗಿವೆ. ಮನುಷ್ಯದೇಹ ಪಂಚಭೂತಗಳಿಂದ ಅಥವಾ ಪಂಚಕಾಯಗಳಿಂದ ನಿರ್ಮಾಣಗೊಂಡಿದೆ ಎಂಬ ಅರಿವಿನ ಒಪ್ಪಿಗೆಯಲ್ಲಿ, ಪಂಚಕಾಯ ಅಥವಾ ತತ್ವಗಳಲ್ಲಿ ಪ್ರಮುಖವಾದವು ಭೂಮಿ ಮತ್ತು ಸೂರ್ಯ ಎಂಬೆರಡು ತತ್ವಗಳು ಪ್ರಮುಖವಾದವು. ಮನುಷ್ಯ ನೆಲದ ಮಗು. ನೆಲ ಮನುಷ್ಯನನ್ನು ಪೋಷಿಸುತ್ತದೆ; ಸೂರ್ಯ ಚೈತನ್ಯ ತುಂಬುತ್ತಾನೆ. ಲೋಕ ಚೈತನ್ಯಪೂರ್ಣವಾಗಿ ಕ್ರಿಯಾಶೀಲನಾಗಿರಲು ಸೂರ್ಯ ಶಾಖ, ಸೂರ್ಯತೇಜಗಳು ಅನಿವಾರ್ಯ. ಭೂಮಿ, ಭಾನುಗಳು ಪ್ರಕೃತಿಯ ಮಹತ್ವದ ಅಭಿವ್ಯಕ್ತಿಗಳು - ಚೆಲುವು, ಚೈತನ್ಯಗಳ ಪ್ರತೀಕಗಳು. ಪ್ರಕೃತಿ ಒಲಿದು ನೀಡಿದರೆ ಮನುಷ್ಯನ ಅಸ್ತಿತ್ವ; ಬದುಕು, ಅದನ್ನು ಆರಾಧಿಸುವ, ಪೂಜಿಸುವ ಪ್ರೀತಿಸುವ ಮನಸ್ಸು ಮನುಷ್ಯನಿಗೆ ಅನಿವಾರ್ಯ, ಬದುಕಿನ ಜಂಜಡಗಳಿಂದ, ಕ್ಲೀಷೆಗಳಿಂದ ದೂರವಾಗಿ ಶಾಂತಿ, ಸಮೃದ್ಧಿ, ಸುಖ, ಆನಂದಗಳನ್ನು ಪಡೆಯುವುದಕ್ಕೆ ಸುತ್ತಲಿನ ನಿಸರ್ಗ ಸೌಂದರ್ಯಕ್ಕೆ ಕಣ್‌ಮನಗಳನ್ನು ತೆರೆದಿರಿಸಬೇಕು; ಅದರ ವ್ಯಕ್ತಿ ಅವ್ಯಕ್ತ ಅಥವಾ ಶ್ರುತ, ಅಶ್ರುತಗಾನಕ್ಕೆ ಕಿವಿತೆರೆದಿರಿಸಬೇಕು:- ಇದೇ ಕವಿಯ ಬಯಕೆ; ನಿರೀಕ್ಷೆ. ಪ್ರಕೃತಿಯನ್ನು ಅಪಾರವಾಗಿ ಪ್ರೀತಿಸುವ ಕವಿ ಗೌಡರಿಗೆ ಪ್ರಕೃತಿಯಲ್ಲಿನ ವಿಭಿನ್ನ ಲಯ ಲಾಸ್ಯಗಳು, ಅದರ ಚೆಲುವು ಒಲವಿನ ಮುಖಗಳು ಅತ್ಯಂತ ಆಪ್ತವೆನಿಸುವುದೇ ಅಲ್ಲದೆ, ಅವರೊಳಗಿನ ಸಹಜ, ಸಂವೇದನಾ ಶೀಲ, ಭಾವುಕ ಕವಿ ಗೀತಕಾರ ಜಾಗೃತನಾಗುವುದರೊಂದಿಗೆ ಸುಂದರ, ನಾದ ಲಯಾತ್ಮಕ ಗೀತೆಗಳು ಮೈ ಪಡೆಯುತ್ತವೆ.

ಪ್ರಕೃತಿಯ ಚೆಲುವಿಗೆ ಮನಸೋತಂತೆಯೇ ಮಾನವ ಬದುಕಿನಲ್ಲಿಯೂ ಪ್ರೀತಿಯ ಚೆಲುವನ್ನು ಸ್ನೇಹದ ಚೆಲುವನ್ನು, ಮುಕ್ತತೆಯ ಚೆಲುವನ್ನು ಕಾಣಬಯಸುತ್ತಾರೆ. ನಾಡು, ನುಡಿ, ಸಂಸ್ಕೃತಿ, ಸಾಹಿತ್ಯ ಧರ್ಮ-ಇವೆಲ್ಲವೂ ಕವಿಗೆ ಮುಖ್ಯ. ತಾನು ಬದುಕುತ್ತಿರುವ ಸಮಾಜದಲ್ಲಿ ಮಾನವ ಸಂಬಂಧಗಳು ಬಹು ಮುಖ್ಯ. ಸಂಬಂಧಗಳ ಸೌಹಾರ್ದತೆ ಮನಕ್ಕೆ ಮುದವಾಗಬಲ್ಲದು; ಅವುಗಳ ನಡುವಿನ ವಿರಸ ಬದುಕನ್ನು ಅಶಾಂತಿಯ ಕುಲುಮೆಯಾಗಿಸಬಲ್ಲದು. ಎಲ್ಲವೂ ಸರಿಯಾಗಿದ್ದಾಗ ಉಲ್ಲಾಸದಿಂದ ಗರಿಗೆದರುವ ಮನಸ್ಸು, ಸುತ್ತಲೂ ತಾಂಡವವಾಡುತ್ತಿರುವ ಅನ್ಯಾಯ, ಅಧರ್ಮ, ಕ್ರೌರ್ಯ. ಹಿಂಸೆ, ಸ್ವಾರ್ಥ, ಭ್ರಷ್ಟತೆಗಳನ್ನು ಕಂಡಾಗ ಮನಸ್ಸು ಕದಡುತ್ತದೆ. ವಿಷಾದದಿಂದ ಮುದುಡಿ ಹೋಗುತ್ತದೆ; ಕೋಪದಿಂದ ಕಿಡಿ ಕಾರುವಂತಾಗುತ್ತದೆ. ಪ್ರಕೃತಿ ಪರಿಸರದಲ್ಲಿ ವಿಶುದ್ಧವಾತಾವರಣ, ಚೆಲುವು, ಆಹ್ಲಾದಕ್ಕೆ ತಲೆದೂಗುವ ಮನಸ್ಸಿಗೆ ಇಂತಹ ಪರಿಸರ ಮತ್ತಷ್ಟು ರೋಸಿಹೋಗುವಂತೆ ಮಾಡುತ್ತದೆ. ತಟ್ಟನೆ ಕವಿ ಮನಸ್ಸು,

1) ಎಲ್ಲೆಡೆ ವಂಚನೆ ಬರಿ ಸ್ವಾರ್ಥ; ಶಕುನಿಗಳಂಥೋರೆ ಅತ್ತತ್ತ, ಎಲ್ಲೆಡೆ ದುರಾಸೆ ದುರಾಕ್ರಮಣ; ಈಗೀಗ ಆದರ್ಶ ದುರ್ಯೋಧನ ಸತ್ಯವಂತರು ಸಾಧ್ಯವೇ ಇಲ್ಲ' - ಎನ್ನುವ ಉದ್ಗಾರದೊಂದಿಗೆ ಖಿಲವಾಗುತ್ತಿರುವ ಮೌಲ್ಯಗಳ ಬಗ್ಗೆ ವಿಷಾದ ತಳೆಯುತ್ತದೆ. ಮೌಲ್ಯಗಳಿಗೆ ಬೆಲೆಯಿಲ್ಲದೇ ಹೋಗುತ್ತಿರುವ ಈ ಪರಿಸರದಲ್ಲಿ, ಥಟ್ಟನೆ ಮನಸ್ಸು ಸಂಸಾರ ವಿಮುಖತೆಗೆ

ಹಂಬಲಿಸುತ್ತದೆ. ಆದರೆ ಹೇಯ ಸಂಸಾರದಲ್ಲಿ ಹುಟ್ಟಿದ ಮೇಲೆ, ಪಲಾಯನ ಪ್ರವೃತ್ತಿಗೆ ಒಳಗಾಗದೆ ಎಲ್ಲವನ್ನು ಸಹಿಸಿಕೊಂಡು ಬಾಳಬೇಕೆಂಬ ಸಾಂತ್ವನ, ಧೈರ್ಯಗಳನ್ನು ನೀಡುತ್ತಾರೆ. ಕಷ್ಟ ಪರಂಪರೆಗಳಿಗೆ ಎದೆಗೆಡದೆ, ನಮ್ಮ ನಡುವಿನಿಂದಲೇ ಸುಖ, ನೆಮ್ಮದಿ ಶಾಂತಿಗಳಿಗೆ ಹಾದಿಕಂಡುಕೊಳ್ಳಬೇಕು. ಆಧುನಿಕ ಬದುಕಿನಲ್ಲಿ, ನಗರ ಜೀವನದಲ್ಲಿ ಸಾಧ್ಯವಾಗದ ಶಾಂತಿ, ಸಂತೋಷಗಳನ್ನು ಪಡೆಯಲು ಪ್ರಕೃತಿ ಪರ್ಯಾಯವಾಗಿ ದೊರಕುತ್ತದೆ. ಎಂಬುದು ಕವಿಯ ನಂಬಿಕೆ. ಆದ್ದರಿಂದಲೇ ಕವಿ ಗೌಡರು ಮನುಷ್ಯರನ್ನು ನಿಸರ್ಗದೆಡೆಗೆ ಆಹ್ವಾನಿಸುತ್ತಾರೆ. ಅದರ ಚೆಲುವಿನ ತಾಣಗಳನ್ನು ತೋರಿಸುತ್ತಾರೆ. ಬದಲಾಗುವ ಋತುಗಳ ಲಾಸ್ಯ, ವೈಭವಗಳನ್ನು ಮನಮುಟ್ಟುವಂತೆ ವರ್ಣಿಸುತ್ತಾರೆ. ನಿಸರ್ಗದ ಒಂದೊಂದು ಅಣುವಿನಲ್ಲೂ ಅಡಗಿರುವ ಅಶ್ರುತಗಾನಕ್ಕೆ ಕಿವಿಗೊಡುವಂತೆ, ಅದಕ್ಕೆ ಸ್ಪಂದಿಸಿ ಹಾಡುವಂತೆ ಪ್ರಚೋದಿಸುತ್ತಾರೆ. ಹಾಡು ಎಲ್ಲಿಲ್ಲ?

"ಕಾಡಿನಲ್ಲಿದೆ ಹಾಡು, ಬೀಡಿನಲ್ಲಿದೆ ಹಾಡು
ಓ! ಜಾಣ ಕಿವುಡು ಗೆಳೆಯ
ಕಿವಿ ತೆರೆದು ಕೇಳಿ ನೋಡು!

ಗಾಳಿಯಲ್ಲಿದೆ ಹಾಡು, ಬೇಲಿಯಲ್ಲಿದೆ ಹಾಡು
ಸಿನಿಕನಾಗಿ ಕಿವಿ ಮುಚ್ಚಿ ನೀ ಕುಳಿತೆ ಏಕಯ್ಯ?
ಮನದುಂಬಿ ಮೈಮರೆತು ನೀನು ಹಾಡು!"
-ಹಾಡು ಗೆಳೆಯಾ ಹಾಡು

ಎಂಬುದೇ ಕವಿಯ ಆಸೆ.

ಪ್ರಕೃತಿಗೆ ಮನಸೋತ ಕವಿ ಮನಸ್ಸು ಅದರ ಎಲ್ಲ ವರ್ಣ ವೈಭವ, ಬಹುರೂಪಿ ಚೆಲುವು ನಿಯತಿ ನಿಯಮದಂತೆ ಹೊಸ ವೇಷ ಭೂಷಣಗಳೊಂದಿಗೆ, ಹೊಸ ಬಗೆಯ ಚೆಲುವಿನೊಂದಿಗೆ ಸರದಿಯಂತೆ ಆವರ್ತನಗೊಳ್ಳುವ ಹೇಮಂತ, ವಸಂತಗಳು, ಮೊದಲಾದವುಗಳ ಬಗ್ಗೆ ತನ್ಮಯದಿಂದ ಹಾಡತೊಡಗುತ್ತಿದೆ, ಹೇಮಂತದ ಚಳಿಗೆ,

ಎಂಥ ಚಳಿಯಿದು
ಎಂಥ ಚಳಿಯಿದು
ಕೊರೆತ ಮೇರೆಯ ಮೀರಿದೆ' - ಎಂದೆನಿಸಿದರೆ
(ಹೇಮಂತಗಾನ)

ಶ್ರಾವಣದ ಸೊಬಗಿಗೆ ಮನದ ನವಿಲು ಉಲ್ಲಾಸದಿಂದ ಪುಟಿಯುತ್ತದೆ. ಶ್ರಾವಣದ ಸಂಭ್ರಮೋಲ್ಲಾಸಗಳನ್ನು ದೊಡ್ಡರಂಗೇಗೌಡರು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ.

ಈ ಶ್ರಾವಣದ ಸೊಬಗಿನಲಿ
ವಸುಧೆಗೆ ಬಹುರೂಪ;
ಎತ್ತ ತಿರುಗಲಿ ಅತ್ತ ಹಸಿ ಹಸಿರಿನ ಲಾಲಿ
ಮರೆಯಾಗಿದೆ ಸೂರ್ಯನ ಧಗೆ ಆತಪದ ತಾಪ!

ಪುಟಿ ಪುಟಿಯುವ ಪುಟಾಣಿ ಹೂವು
ಎಲ್ಲೆಲ್ಲೂ ಬಿರಿದು
ಹೊಂಬಣ್ಣದ ಹೂದೋಟವು
ಬರೆದವು ಹೊಸ ಕವಿತೆ!
-ಶ್ರಾವಣದ ಸೊಬಗು

ಹೀಗೆ ಪ್ರಕೃತಿಯಲ್ಲಿನ ಬದಲಾದ ಋತು ವಿಶೇಷಗಳನ್ನು ದಾಖಲಿಸುತ್ತಾ ಹೋಗುತ್ತಾರೆ. ಶ್ರಾವಣದ ವೈಭವ ಒಂದು ತೆರನಾದರೆ ವಸಂತನ ಆಗಮನ ಮತ್ತೊಂದು ತೆರ. ಚೆಲುವು ಸಂಭ್ರಮಗಳ ಪರಾಕಾಷ್ಠೆಯ ದರ್ಶನ ಈ ವಸಂತಋತುವಿನಲ್ಲಿ. ಇಡೀ ವರ್ಷದ ನಿರೀಕ್ಷೆಯ ಸಾಫಲ್ಯ ಈ ವಸಂತದಲ್ಲಿ! ತಪಸ್ವಿನಂತೆ ಕಾದುನಿಂತ ಪ್ರಕೃತಿ ಚೇತನಗಳು ವಸಂತಾಗಮನಕ್ಕೆ ಸ್ಪಂದಿಸುವ ತೆರ, ಕವಿಯ ಮಾತುಗಳಲ್ಲಿ ಅದ್ಭುತವಾಗಿ ಮೂಡಿ ಬಂದಿದೆ.

ಬನಬನದಲೂ ದುಂಬಿವಂದನೆ ಹೇಳಿವೆ
ಚೆಲುವ ತಂದನೆಂದು!
ಲತೆ ಲತೆಯಲೂ ಹೂಗೊಂಚಲು ಬಾಗಿವೆ
ಚೈತ್ರ ಬಂದನೆಂದು!

'ಅಲೆ ಅಲೆಯಲೂ ಗಾಳಿ ನಾದವ ಮೊರೆದಿದೆ
ಕಂಪು ತಂದನೆಂದು,
ಮಲೆ ಮಲೆಯಲೂ ವರ್ಣಮೇಳವೇ ನಡೆದಿದೆ
ಋತುರಾಜ ಬಂದನೆಂದು' -ಎಂದು ಸಾಗುತ್ತ

ಹೋಗುವ ಸಾಲುಗಳಲ್ಲಿ, ದುಂಬಿ, ಲತೆ, ಗಾಳಿ, ಮಲೆ, ಮರ, ಮಾವು, ಹಕ್ಕಿಪಕ್ಕಿ, ಕೋಗಿಲೆಗಳೆಲ್ಲ ವಸಂತನನ್ನು ಸ್ವಾಗತಿಸುವ ರೀತಿಯು ಕಲ್ಪನೆ ವಿನೂತನವಾಗಿದೆ. ಜಗತ್ತೇ

ಉನ್ಮತ್ತವಾಗಿ ಕುಣಿಯುತ್ತದೆ; ಋತು ರಂಗು ಸವಿದು ತಣಿಯುತ್ತದೆ ಎನ್ನುವುದು ಕವಿ ಮನದ ಭಾವ. ಹೀಗೆ ಪ್ರಕೃತಿಯನ್ನು ಎಲ್ಲ ಮುಖಗಳಿಂದಲೂ ಆಸ್ವಾದಿಸಿ ಬಣ್ಣಿಸುವ ಕವಿಗೆ ನೆಲ-ಭಾನುಗಳ ಬಗ್ಗೆ ವಿಶೇಷ ಒಲವು. ನೆಲದ ಬಗ್ಗೆ ಒಂದು ಬಗೆಯ ವ್ಯಸನ. ಎಷ್ಟು ಬಗೆಯಲ್ಲಿ ಕೊಂಡಾಡಿದರೂ ತಣಿಯದ ಮನಸ್ಸು. ನೆಲದ ಹಾಡು, ಇಳಾಗೀತೆ ನಭದಿಂದ ನೆಲಕ್ಕೆ, ಭೂಮಿ-ಭಾನು-ಇತ್ಯಾದಿ ಕವಿತೆಗಳಲ್ಲಿ ನೆಲ-ಭಾನಿನ ಬಗ್ಗೆ ಭಾವುಕವಾಗಿ, ಆತ್ಮೀಯವಾಗಿ, ಕೃತಜ್ಞತಾ ಪೂರ್ವಕವಾಗಿ, ವೈಭವೀಕರಿಸಿ ಹಾಡುತ್ತಾರೆ. ಸೂರ್ಯತಾಪ, ಗಾಳೀ ಗೀತ, ವರುಣಯೋಗ, ಚೈತ್ರ ಸರಸಗಳ ಅನುಭೂತಿಯ ಮೂಲಕ ಹಾದು ಪುಷ್ಪಮಂದಹಾಸ ಬೀರಿ, ನಗುವುದರೊಂದಿಗೆ ಧರೆಯಲ್ಲಿ ಸ್ವರ್ಗವಾಗಿ ಗೋಚರಿಸುತ್ತದೆ. ಅಷ್ಟೇ ಅಲ್ಲ ಇಳೆಯ ಸತ್ವಸಾಮರ್ಥ್ಯಗಳು ಮನುಷ್ಯನ ಗ್ರಹಿಕೆಗೆ ಮೀರಿದವು ಎಂಬ ಸತ್ಯದ ಅರಿವು,

ಇಳೆಯೇ ನಿನ್ನ ಆಳವನರಿಯೆವು!
ಹೊಳೆವ ಚೆಲುವಿಗೆ ಇಹುದೆ ಮುಗಿವು?
-------
ಮಲೆತು ನಿಂತವರೆನಿತೊ ಬಲವು
ಇಳೆಯೆ ನಿನ್ನ ಮುಂದೆ ಎಂದೂ ಅಳಿವು;
-------
ಬಲಿತ ಗರ್ವಿಗಳ ಸಿಟ್ಟು ಸೆಡವು
ಹುಳಿತು ಹೋಯಿತು ನಿನ್ನೆದುರು ಮೆರೆವು,

(- ಇಳಾಗೀತ)

ಎಂದು ಉದ್ಗರಿಸುವಂತೆ ಮಾಡುತ್ತದೆ. ನೆಲಕ್ಕೆ, ನಿಸರ್ಗಕ್ಕೆ ಮನುಕುಲ ವಿನಯ ವಿಧೇಯತೆಯೊಂದಿಗೆ ನಡೆದುಕೊಂಡಾಗಲೇ ಬಾಳು ಹಸನಾಗಲು ಸಾಧ್ಯ. ಭೂಮಿ-ಸೂರ್ಯರಿಗಲ್ಲದೆ ಬಾಳುವೆಯೇ ಇಲ್ಲ. ಈ ಪ್ರಜ್ಞೆಯೊಂದಿಗೆ ಕವಿ ಕಟುವಾಸ್ತವವನ್ನು

ಭೂಮಿತಾಯಿ ಇದ್ದರೆ ಬದುಕು
ಇಲ್ಲವಾದರೆ ಉಳಿವೇ ಅಳುಕು
ಸೂರ್ಯಸ್ವಾಮಿ ಇದ್ದರೆ ಜೀವನ
ಇಲ್ಲವಾದರೆ ಎಲ್ಲಿಯ ಜನಮನ?

ಎಲ್ಲಿ ಭೂಮಿ ಅಲ್ಲಿ ಭಾನು
ಎಲ್ಲಿ ತಾಯಿ ಅಲ್ಲಿ ತಂದೆ
ಭೂಮಿ ಭಾನು ನಕ್ಕರೆ ಬಾಳು

ತಾಯಿತಂದೆ ಇರದಿರೆ ಗೋಳು.
– ಭೂಮಿ ಭಾನು.

ಇಂತಹ ಸಾಲುಗಳ ಮೂಲಕ ಬಿಂಬಿಸಿದ್ದಾರೆ. ಭೂಮಿ ಭಾನು 'ತಾಯಿ ತಂದೆ' ಎನ್ನುವ ಪರಿಕಲ್ಪನೆ ಅಥವಾ ರೂಪಕದ ಹಿನ್ನೆಲೆಯಲ್ಲಿ ತಾಯಿ ತಂದೆ ಮಕ್ಕಳ ಅನನ್ಯ ಸಂಬಂಧ, ಗಾಢತೆಗಳು ಸ್ಪಷ್ಟವಾಗುತ್ತವೆ. ತಂದೆ ತಾಯಂದಿರು ಇಲ್ಲದೆ ಅನಾಥ ಸ್ಥಿತಿಗೆ ತಲುಪುವ ಮಕ್ಕಳಂತೆ, ಮನುಷ್ಯರ ಪಾಡಾಗುತ್ತದೆ. ತಾಯಿ ತಂದೆಯ ಸ್ಥಾನದಲ್ಲಿರುವ ಭೂಮಿ ಭಾನುಗಳ ಕೃಪೆ. ಅನುಗ್ರಹ, ಪ್ರೀತಿ ವಾತ್ಸಲ್ಯಗಳ ನೆರಳಲ್ಲಿ ಮಾತ್ರವೇ ಮನುಕುಲಕ್ಕೆ ಸುಖ ಸಂತೋಷಗಳು ಸಾಧ್ಯ. ಎಂಬ ಗ್ರಹಿಕೆಯೇ ಇಲ್ಲಿ ಪ್ರಧಾನವಾಗುತ್ತದೆ.

ಸೂಕ್ಷ್ಮ, ಸಂವೇದನಾಶೀಲ ಮನಸ್ಸು ಪ್ರಕೃತಿಯ ಜೊತೆಗೆ ಸ್ಪಂದಿಸುವಂತೆಯೇ, ಸಮಾಜದ ಆಗುಹೋಗು, ಸ್ಥಿತಿಗತಿಗಳ ಕಡೆಗೆ ಮುಖಮಾಡಿ ಪ್ರತಿಕ್ರಿಯಿಸುತ್ತದೆ. ವರ್ಗ, ಜಾತಿ ತಾರತಮ್ಯ, ಅಸಮಾನತೆಗಳ ಕಪಿಮುಷ್ಟಿಗೆ ಹಲಕೆಲವು ಅಸಹಾಯಕ ಜೀವಿಗಳು ಸಿಲುಕಿ, ಸಾಮಾಜಿಕ ತಿರಸ್ಕಾರ, ನಿರ್ಲಕ್ಷ್ಯ, ಶೋಷಣೆ, ಅನ್ಯಾಯಗಳಿಗೆ ಗುರಿಯಾಗಿರುವುದನ್ನು ಕಂಡಾಗ ಮನಸ್ಸು ಚಡಪಡಿಸುತ್ತದೆ. ಅವರಿಗಾದ ಅನ್ಯಾಯಕ್ಕೆ ಸಿಡಿದೇಳುವಂತಾಗುತ್ತದೆ. ಕವಿ ಗೌಡರು ಇದಕ್ಕೆ ಹೊರತಲ್ಲ. ರೈತ, ದಲಿತ, ಕಾರ್ಮಿಕ-ಹೀಗೆ ಹಲವಾರು ವರ್ಗದ ಮಂದಿ ತಾವು ನೋವುಂಡು, ದುಡಿದು, ಬೆವರು ಸುರಿಸಿ ಸಾಮಾಜಿಕ ಸುಖಕ್ಕೆ ಬೆನ್ನುಕೊಟ್ಟು ನಿಲ್ಲುತ್ತಾರಾದರೂ ಅವರಿಗೆ ಮಾತ್ರ ಸುಖ, ಸಂತೋಷ, ಸವಲತ್ತುಗಳು ದಕ್ಕದೆ ಹೋಗುತ್ತವೆ. ನೆಲವನ್ನೇ ನಂಬಿಕೊಂಡು ಹೊಲದಲ್ಲಿ ದುಡಿವ ರೈತನ ಬಗ್ಗೆ ಸಹಾನುಭೂತಿ, ಮೆಚ್ಚುಗೆಗಳಿವೆ. ರೈತನನ್ನು ಕುರಿತ ಎರಡು ಮೂರು ಕವಿತೆಗಳು, ರೈತ ವರ್ಗಕ್ಕೆ ಕವಿಯ ಕಾಣ್ಕೆಯಾಗಿವೆ. ನೇಗಿಲ ಯೋಗಿಯೆಂದೇ ಗುರುತಿಸಿಕೊಂಡ ರೈತನನ್ನು ಅವನು ಪಡುವ ಪಾಡನ್ನು ಸುದೀರ್ಘವಾಗಿ ವಿವರಿಸುವ 'ರೈತನಪಾಡು' ಕವಿತೆಯ ಕೆಲವು ಸಾಲುಗಳು ಹೀಗಿವೆ.

ಭೂಮಿತಾಯಿ ಎಂದೇ ನಂಬಿ ನೆಚ್ಚಿನ ನಡೆದೇ ಬಾಳಿದ ನಮ್ಮ ರೈತ
ಮಳೆ ಗಾಳಿ ಎನ್ನದೆ, ಬಿರುಬಿಸಿಲಿಗಂಜದೆ
ದುಡಿವ ಅನವರತ!

ದೇಶದೇಶಕೆ ಅನ್ನದಾತ
ನೂರು ನೋವಿದ್ದರೂ ನಗುತಾ ನಗುತಾ
ಬೆವರ ಬಸಿದು ನೆಲವ ಉಳುತ
ತಾಳ್ಮೆಯಿಂದ ಫಲಕೆ ಕಾಯುತ

ಸುಗ್ಗಿ-ವೇಳೆಗೆ-ಹಿಗ್ಗುವಾ--
ನಗ್ಗಿ ಹೋದರೂ ನೊಲುವ ಜೀವಂತ--

ಎಂದು ಅವನ ಪಾಡನ್ನು ಹಲವು ರೀತಿಗಳಲ್ಲಿ ವಿವರಿಸಿ, ಇಂತಹ ರೈತ ಸಮಾಜದ ಸುಖಕ್ಕೆ ನಿಲ್ಲುವ ಪರಿಗೆ ಮೆಚ್ಚುಗೆ, ಕೃತಜ್ಞತೆಗಳನ್ನು ಅಭಿವ್ಯಕ್ತಿಸುತ್ತಾರೆ. ಮೂಲತಃ ಗ್ರಾಮೀಣ ಪ್ರದೇಶದಿಂದ, ಬಂದ ಗೌಡರಿಗೆ ರೈತರ ಬದುಕಿನ ನೋವು ನಲಿವಿನ ಮಗ್ಗುಲಗಳ ಪರಿಚಯವಿರುವುದರಿಂದ ಅದರ ಗ್ರಹಿಕೆಗೆ ಒಂದು ಅಧಿಕೃತತೆ ಸಾಧ್ಯವಾಗುತ್ತದೆ. ಇದೇ ರೀತಿಯಲ್ಲಿ ದಲಿತಪರವಾಗಿಯೂ ಅವರ ದನಿ ಮೊಳಗುತ್ತದೆ. ಪ್ರತಿಭೆಗೆ ಜಾತಿ, ಮತ ವರ್ಗ-ಯಾವುದೂ ಅಡ್ಡಿ ಬರಲಾರದೆಂಬ ಸತ್ಯವನ್ನು ಸ್ವಲ್ಪ ಎತ್ತರದ ದನಿಯಲ್ಲಿ, ಸವಾಲಿನಂತೆಯೇ ಮಾತನೆಯುತ್ತಾರೆ. 'ದಲಿತ ಪ್ರಭೆ' ಕವಿತೆಯಲ್ಲಿ ದಲಿತಪರವಾಗಿ ನಿಲ್ಲುತ್ತಲೇ ಪ್ರತಿಭೆಯ ಸಾರ್ವತ್ರಿಕತೆಯನ್ನು ಅನೇಕ ಅನೇಕ ಉದಾಹರಣೆಗಳ ಮೂಲಕ, ತಮ್ಮ ದಲಿತಪರ ನಿಲುವನ್ನು ಸ್ಪಷ್ಟಪಡಿಸುತ್ತಾರೆ. ಕೊಂಪೆಯಲ್ಲಿ ಕೋಗಿಲೆಯ ಕುಹು ಕುಹು, ಕೆಸರಿನಲ್ಲಿ ತಾವರೆ, ಹಟ್ಟಿಯಲ್ಲಿ ಜಾಣ್ಮೆ ಕೌಶಲ, ಗುಡಿಸಲಲ್ಲಿ ಪ್ರತಿಭೆಗಳು ಸಾಧ್ಯವಾದಂತೆ ದಲಿತರಲ್ಲೂ ಸೃಜನಶೀಲತೆ ಮೊಳೆತೇ ಮೊಳೆಯುವುದೆಂಬ ಭರವಸೆ. ದಲಿತರ ಬಾಳು ಬದುಕಿನಲ್ಲೂ ಹೊಸ ಇತಿಹಾಸ ಬರದೇ ಬರೆಯುವುದು ಎಂಬ ಭವಿಷ್ಯದ ನುಡಿಯೊಂದಿಗೆ ಕವಿತೆಯ ಸಾಲುಗಳು ವಿರಮಿಸುತ್ತವೆ.

ಗೌಡರದು ಹೋರಾಟದ ಬದುಕು. ನೋವು ನಲಿವುಗಳು, ಏರಿಳಿತಗಳು, ಸ್ತುತಿ-ನಿಂದೆಗಳು ಅಸ್ತಿತ್ವದ ಒಂದು ಭಾಗವಾಗಿ ಭಾವಿಸುವವರು. ವಿರೋಧ, ವಿರೋಧಾಭಾಸಗಳ ನಡುವಿನಿಂದಲೂ ಮೇಲೇರುವ ಪ್ರಯತ್ನದಲ್ಲಿ

''ನಾಲಿಗೆಯಲಿ ನಿತ್ಯ ನಿತ್ಯ
ಸತ್ಯ ನುಡಿಯಿರಲು
ಯಾರಿಗೇಕೆ ಹೆದರಬೇಕು?-
(- ಅಭಯ ಪಥ)

-ಎಂಬ ನಿಲುವು ಮತ್ತು ಏನೇ ಆದರೂ

''ಕೊಳೆಯಲಾರೆ ನಾನು
ಬೆಳೆಯಬೇಕು ಇನ್ನೂ
ಕೊಳೆತಿಲ್ಲ ಸೂರ್ಯ
ಕೊಳೆತಿಲ್ಲ ಕಾವ್ಯ'' - ಎನ್ನುವ ನಂಬಿಕೆ

"ಮೊಳೆತಾಗಲೇ ಬಲಿವ ಛಲವಿತ್ತು
ಬಿರುಗಾಳಿಗೆ ಬಗ್ಗಿಯೂ ಸಾಯುದ ಗತ್ತು
(-ಛಲವಾದಿ)

ಎನ್ನುವ ಆತ್ಮವಿಶ್ವಾಸಗಳನ್ನು ಅನಿವಾರ್ಯವಾಗಿ ರೂಢಿಸಿಕೊಂಡರು.

ಗೌಡರ ಈ ಸಂಕಲನದಲ್ಲಿ ವಸ್ತು ವೈವಿಧ್ಯವಿದೆ. ಗೀತಕ್ಕೆ ಬೇಕಾದ ಭಾವತೀವ್ರತೆ, ಲಯಗಾರಿಕೆಯಿದೆ. ಪ್ರತಿಮೆ ಪ್ರತೀಕಗಳ ಗೋಜಲಿಲ್ಲದೆ ನೇರ ಗ್ರಹಿಕೆಗೆ, ಮನಕ್ಕೆ ದಕ್ಕುವ ಸರಳ, ಸಹಜ ಭಾಷೆಯ ಬಳಕೆ ಗೇಯಗುಣಕ್ಕೆ ಪೂರಕವಾಗಿ ಒದಗಿಬಂದಿದೆ.

ಪ್ರೀತಿ, ಪ್ರೇಮ, ದಾಂಪತ್ಯ, ಪ್ರಕೃತಿ, ಸಂಸ್ಕೃತಿ, ಸಾಮಾಜಿಕತೆ, ಸಮಕಾಲೀನ ವಿಚಾರಗಳು – ಹೀಗೆ ಹಲವು ವಿಷಯಗಳು ಇಲ್ಲಿನ ಕವಿತೆಗಳ ವಸ್ತು, ದ್ರವ್ಯವಾಗಿದೆ. ಗೌಡರ ಬಹುಮುಖ ಚಿಂತನೆಗೆ ದೃಷ್ಟಿಗೆ ಈ ಸಂಕಲನ ನಿದರ್ಶನವಾಗಿದೆ. ಸಮಾಜದ ಒಳಿತು, ಮನುಕುಲದ ಒಳಿತನ್ನು ಕುರಿತು ಚಿಂತಿಸುವ ಕವಿ ಮನಸ್ಸು, ಗೀತನುಡಿದು ಎದೆಭಾರ ಇಳಿಸಿಕೊಂಡು ಹಗುರಾಗಬೇಕೆಂದು ಬಯಸುತ್ತದೆ; ವಿದೇಶದತ್ತ ಓಡುವವರನ್ನು ಕಂಡಾಗ,

"ಭಾರತೀಯ ಮನಗಳೇಕೆ
ವಿದೇಶದತ್ತ ವಾಲಿವೆ
ನಮ್ಮ ನೆಲದಿ ಅಂಥ ಹಿರಿಮೆ
ವಿಷಾದದ ದನಿಯಲ್ಲಿ
ಏನೇನೂ ಇಲ್ಲವೇ?" – ಎಂದು ಪ್ರಶ್ನಿಸಿಕೊಳ್ಳುತ್ತದೆ.

ವಿಶ್ವ ಮೈತ್ರಿತ್ವ, ವಿಶ್ವ ಭ್ರಾತೃತ್ವ ವಿಶ್ವಮಾನವ ಪ್ರೀತಿ ನೆಲಸಬೇಕೆಂದು ತಹತಹಿಸುವ ಮನಸ್ಸಿನೊಂದಿಗೆ

"ಹಬ್ಬಿನಿಂತ ಅಂಧಕಾರ
ದೂರ ದೂರ ಸರಿಯಲೀ
ವಿಶ್ವಮೈತ್ರಿ ಮಿಡಿದು ಆತ್ಮ
ಜ್ಯೋತಿ ಪ್ರಭೆ ಮಿನುಗಲೀ" – ಎಂದು ಪ್ರಾರ್ಥಿಸುತ್ತಾರೆ.

ನೂರೊಂದು ಭಾವಗೀತೆಗಳ ಭೂಮಿ-ಭಾನು ಸಂಕಲನ ನಿಜಕ್ಕೂ ಮನಕ್ಕೆ ಮುದಕೊಡುವ ಕೃತಿಯಾಗಿದೆ. ಅವರ ಗೀತರಚನಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.





# ಶಿವಪಥದ ಪಥಿಕರು ಡಾ. ದೊಡ್ಡರಂಗೇಗೌಡರು

• ಅನ್ನದಾನಿ ಪುರಾಣಿಕ

ಡಾ॥ ದೊಡ್ಡರಂಗೇಗೌಡರು ಬಹುಮುಖ ಪ್ರತಿಭೆಯ ಶಿಷ್ಟ ಹಾಗೂ ವಿಶಿಷ್ಟ ವ್ಯಕ್ತಿ! ಜನಪ್ರಿಯ ಕವಿಯಾಗಿ, ಖ್ಯಾತ ಚಲನಚಿತ್ರ ಗೀತಕಾರರಾಗಿ, ಪರಿಣಿತ ಪ್ರಾಧ್ಯಾಪಕರಾಗಿ, ಸ್ನೇಹಜೀವಿಯಾಗಿ, ಹಾಗೂ ಮಾನವತಾವಾದಿಯಾಗಿ ಕನ್ನಡ ನಾಡಿನಲ್ಲಿ ಹೆಸರು ಗಳಿಸಿದ್ದಾರೆ. ಬರವಣಿಗೆ ಇವರ ಅವಿಭಾಜ್ಯ ಅಂಗ! ಅವರೇ ಹೇಳಿಕೊಂಡಿರುವಂತೆ ''ಬರೆಯಬೇಕೆನ್ನಿಸುತ್ತದೆ ಬರೆಯುತ್ತೇನೆ, ಬರೆಯದೆ ಇರಲಾರೆ. ಬರೆಯದೆ ಮೌನವಾಗಿ ಸುಮ್ಮನೆ ಇದ್ದುಬಿಡುವುದು ಖಂಡಿತಾ ನನ್ನಿಂದ ಸಾಧ್ಯವಿಲ್ಲ!'' ಏನನ್ನಾದರು ಇವರು ಬಿಟ್ಟಾರು, ಬರೆಯುವುದನ್ನು ಮಾತ್ರ ಬಿಡರು. ಬರವಣಿಗೆ ಇವರೊಂದಿಗೆ ಬೆಳೆದುಬಂದಿದೆ, ಬರವಣಿಗೆ ಇವರ ಮುಖ್ಯವೃತ್ತಿಯಲ್ಲ; ಅದು ಇವರ ಪ್ರವೃತ್ತಿ! ಕಾಸಿಗಾಗಿ, ಕೀರ್ತಿಗಾಗಿ, ಪ್ರಶಸ್ತಿಗಾಗಿ, ಪ್ರತಿಷ್ಠೆಗಾಗಿ ಇವರು ಬರೆಯುತ್ತಿಲ್ಲ! ಶ್ರೀ ಸಾಮಾನ್ಯರ ಒಳಿತಿಗಾಗಿ, ಸಮಾಜ ಸುಧಾರಣೆಗಾಗಿ, ಆತ್ಮ ಸಂತೋಷಕ್ಕಾಗಿ ಇವರು ಬರೆಯುತ್ತ ಬಂದಿದ್ದಾರೆ. ಗ್ರಾಮೀಣ ಪರಿಸರದಿಂದ ಬಂದಿರುವ ಇವರು, ''ಗೊಬ್ಬರ ತುಂಬಿದ ಕೈಯಿಂದ, ಸಗಣಿ ಮೆತ್ತಿದ ಬೆರಳು ಹಿಡಿದ ಗ್ರಾಮೀಣ ಲೇಖನಿಯಿಂದ ಮಣ್ಣಿನ ಹಾಡುಗಳನ್ನು'' ಬರೆಯುತ್ತ ಬಂದಿದ್ದಾರೆ. ಮಣ್ಣಿನ ವಾಸನೆ, ಜಾನಪದದ ಸಹಜತೆ, ಹಳ್ಳಿಗರ ಮುಗ್ಧತೆ, ಕೃಷಿಕರ ಸರಳತೆ, ಇವರ ಕೃತಿಗಳ ವೈಶಿಷ್ಟ್ಯಗಳಾಗಿವೆ. ಇವರು ಸಹಜ ಕಾವ್ಯಕೃಷಿಕರು! ಗ್ರಾಮೀಣ ಬದುಕಿನ ಜೀವಂತ ಪ್ರತೀಕಗಳಾಗಿವೆ ಇವರ ಅನೇಕ ಕವನಗಳು!

ಡಾ॥ ದೊಡ್ಡರಂಗೇಗೌಡರ ಆಯ್ದ ಕವನ ಸಂಕಲನವನ್ನು ಕನ್ನಡ ಪುಸ್ತಕ ಪ್ರಾಧಿಕಾರವು ''ಹೆಜ್ಜೆ ಗುರುತು'' ಎಂಬ ಹೆಸರಿನಲ್ಲಿ 2001ರಲ್ಲಿ ಪ್ರಕಟಿಸಿದೆ. ಮುನ್ನುಡಿಯಲ್ಲಿ... ವಿಸ್ತಾರವಾದ ವಸ್ತು ಸಮೃದ್ಧಿ, ಭಾಷೆಯ ವಿನೂತನ ಆವಿಷ್ಕಾರಗಳ ಜೊತೆಯಲ್ಲಿಯೇ ಭಾವಸಾಂದ್ರತೆ, ಸಮರ್ಥವಾದ ಸಂವಹನಶೀಲತೆ, ಎಳೆ ಎಳೆಯಾದ ಜಿಜ್ಞಾಸುಶೀಲತೆ. ಇವುಗಳಿಂದ ಕನ್ನಡ ಸಹೃದಯರ ವೈವಿಧ್ಯಮಯ ಅಭೀಪ್ಸೆಗಳನ್ನು ಈಡೇರಿಸುವ ಶ್ರೇಷ್ಠ ಕವಿಗಳಲ್ಲಿ ಒಬ್ಬರಾಗಿದ್ದಾರೆ'' ಎಂದು ಎಚ್.ಜೆ. ಲಕ್ಕಪ್ಪಗೌಡರು ಹೇಳಿರುವ ನುಡಿಗಳು ಯಥಾರ್ಥವಾಗಿವೆ. ಗೌಡರು ತಮ್ಮ ಕವಿತೆಗಳ

ಕಥೆಯನ್ನು 'ಕವಿನುಡಿ'ಯಲ್ಲಿ ಹೇಳಿಕೊಂಡಿದ್ದಾರೆ. ಕವಿಯ ಕನ್ನಡ ಪ್ರೇಮ, ಅಭಿಮಾನ, ಆಶಯ ಕೆಳಗಿನ ಪದ್ಯದಲ್ಲಿ ಮೂಡಿವೆ!

"ನಮ್ಮ ನೆಲದಿ ನಮ್ಮ ಮಾತೆ, ಸದಾಕಾಲ ಅಗ್ರಮಾನ್ಯ
ಪರಕೀಯರ ಸಂಸ್ಕೃತಿಯಾ ಅನುಕರಣೆಯೇ ಅಕ್ಷಮ್ಯ
ಪರಭಾಷೆಯ ಬೆಂಬತ್ತಲು ನಮ್ಮ ತನವೇ ಶೂನ್ಯ
ನಂಗುತ್ತಿವೆ ನಮ್ಮನೆಲ್ಲಾ ನಮ್ಮುದಾದ ಸೌಜನ್ಯ
ಕನ್ನಡಿಗರೇ ಮುನ್ನಡೆಸಿರಿ, ಕನ್ನಡದಾ ಶೌರ್ಯ!"

ಕವಿಯ ಈ ನುಡಿಗಳು ಪ್ರಸ್ತುತವಾಗಿವೆ. ಇಂಗ್ಲೀಷ್ ಮಾಧ್ಯಮದ ಪ್ರತಿಪಾದಕರಿಗೆ ತಕ್ಕ ಉತ್ತರವಾಗಿದೆ. ಕನ್ನಡಿಗರನ್ನು ಎಚ್ಚರಿಸುವ ಡಿಂಡಿಮವಾಗಿವೆ. ಪರಕೀಯ ಭಾಷೆ ಹಾಗೂ ಸಂಸ್ಕೃತಿಯ ಅನುಕರಣೆ ಅಕ್ಷಮ್ಯ ಅಪರಾದ! ಕನ್ನಡಿಗರ ಸೌಜನ್ಯ ಉದಾರತೆ, ಸಹಿಷ್ಣುತೆಗಳೇ ಅವರನ್ನು ಇಂದು ನುಂಗುತ್ತಿವೆ. ಕನ್ನಡಿಗರು ಎಚ್ಚೆತ್ತು ಧೈರ್ಯ, ಶೌರ್ಯ, ಸಾಹಸ ಪ್ರದರ್ಶಿಸಿ ಕನ್ನಡವನ್ನು ಮುನ್ನಡೆಸಿರಿ ಎಂದು ಕವಿ ಕನ್ನಡಿಗರಿಗೆ ಕರೆಕೊಟ್ಟಿದ್ದಾರೆ.

ಡಾ॥ ದೊಡ್ಡರಂಗೇಗೌಡರು ತಮ್ಮ "ಮಣ್ಣಿನ ಮಾತುಗಳು" ಎಂಬ ಕೃತಿಯಲ್ಲಿ ಮಣ್ಣಿನಲ್ಲಿ ಮಲ್ಲಿಗೆ ಅರಳಿಸಿದ್ದಾರೆ; 'ಪ್ರೀತಿ ಪ್ರಗಾಥ', ಪವಿತ್ರ ಪ್ರೇಮದ ಗಾಥೆ, 'ಮಾವು ಬೇವು' ಭಾವಗೀತೆಗಳ ಸಂಕಲನ; "ಶ್ರೀ ಗುರುಚರಣದಲ್ಲಿ' ಸ್ತೋತ್ರಗಳ ಸಂಕಲನ. ಈ ಕೃತಿಯಲ್ಲಿ "ಗುರುಕರುಣೆಯ ಅವಶ್ಯಕತೆ ಮತ್ತು ಅದರ ಮಹತ್ವವನ್ನು ಪ್ರತಿಪಾದಿಸಲಾಗಿದೆ. "ಹರಮುನಿದರೆ ಗುರು ಕಾಯುವ ಶಿವಪಥವನರಿವೊಡೆ ಗುರುಪಥವೇ" ಮೊದಲು "ಗುರು ಹೇಳಿದಂತೆ ಹುದುಯೋಗ' ಮೊದಲಾದ ಶಿವಶರಣ ಸೂಳ್ನುಡಿಗಳು ಇಲ್ಲಿಯ ಸ್ತೂತ್ರಗಳಲ್ಲಿ ವೊಗ ಪಡೆದಿವೆ ಕ್ರಿಯಾಜ್ಞಾನ ಸಾಮರಸ್ಯದಲ್ಲಿಯೇ ಶಿವಯೋಗ ಸಿದ್ಧಿ ಇದೆ ಎಂಬ ಶರಣ ಸಂದೇಶವನ್ನು ಸಾರಲಾಗಿದೆ. ಗುರುಸ್ಮರಣೆಯ ಸತ್‌ಫಲವನ್ನು ಕೆಳಗಿನ ಸ್ತೋತ್ರದಲ್ಲಿ ಕಾಣಬಹುದು;

"ಬಿಂದು ಬಿಂದು ಸೇರುವಲ್ಲಿ
ಸಿಂಧುವಾಯಿತು.
ರೇಖೆ ರೇಖೆ ಕೂಡುವಲ್ಲಿ
ಚಿತ್ರವಾಯಿತು.
ನಾದನಾದ ಬೆರೆಯುವಲ್ಲಿ
ಸಂಗೀತವಾಯಿತು.
ವಚನ ವಚನ ಅರಿಯುವಲ್ಲಿ
ವಾಙ್ಮಿಯ ಕಂಡಿತು.

ಶ್ರೀ ಗುರು ನಿಮ್ಮ ನೆನೆಯುವಲ್ಲಿ
ದೈವ ಮೈದೋರಿತು.
ಭಕ್ತಿ ಕೈ ಸಾರಿತು.
ಯೋಗ ಶುಭವು ಕೂಡಿತು
ಆಧ್ಯಾತ್ಮ ಕಾವ್ಯ ಮೂಡಿತು.''

ಈ ಕೃತಿಯಲ್ಲಿ ಭಕ್ತಿ ಹೊಳೆಯಾಗಿ ಹರಿದಿದೆ; ಕೆಲವು ಕಡೆಗಳಲ್ಲಿ ಎಲ್ಲೆ ಮೀರಿದೆ. ಇನ್ನಿತರ ಕೃತಿಗಳ ವಿಮರ್ಶೆಗೆ ಇಲ್ಲಿ ಹೋಗಿಲ್ಲ. ಡಾ॥ ದೊಡ್ಡರಂಗೇಗೌಡರು ಯಾವುದೇ ಒಂದು ಗುಂಪಿಗೆ, ಕಾವ್ಯ ಪ್ರಕಾರಕ್ಕೆ, ಸಂಪ್ರದಾಯಕ್ಕೆ ಸೇರದೆ ಎಲ್ಲವನ್ನೂ ಮೈಗೂಡಿಸಿಕೊಂಡಿದ್ದಾರೆ. ಇವರ ಕವನಗಳು ಕೃತಿಗಳು 'ಮುದ್ದೆಯ ಸೊಪ್ಪಿನ ಸಾರು! ಮಾದಾರ ಚೆನ್ನಯ್ಯನ ಅಂಬಲಿ'ಯಂತೆ ಶುಚಿರುಚಿ, ಶಿವಪ್ರಸಾದ! ಅಧರಕೆ ಉದರಕ್ಕೆ ಸಿಹಿ!

ಡಾ॥ ದೊಡ್ಡರಂಗೇಗೌಡರು ಸುಸ್ಕೃತರು ''ಸದುವಿನಯವೇ ಸದಾಶಿವನೊಲುಮೆ, ಮೃದ ವಚನಗಳೇ ಜಪತಪಗಳು'' ಎಂಬ ಬಸವಣ್ಣ ಸಂದೇಶವನ್ನು ತಮ್ಮ ಜೀವನದಲ್ಲಿ ಇವರು ಅಳವಡಿಸಿಕೊಂಡಿದ್ದಾರೆ. ಇವರು ಒಳ್ಳೆಯ ಸ್ನೇಹಜೀವಿಗಳು; ನಿಸರ್ಗಪ್ರೇಮಿಗಳು ''ಎಲ್ಲರೊಳಗೊಂದಾಗು ಮಂಕುತಿಮ್ಮ'' ಎಂಬ ಡಿ.ವಿ.ಜಿ ಸೂಕ್ತಿಯ ಅನುಷ್ಠಾನವನ್ನು ಇವರ ಜೀವನದಲ್ಲಿ ನೋಡಬಹುದು. ಶಿವನೀಡಿದುದರಲ್ಲಿ ಸಂತೃಪ್ತರಾಗಿ ಬಾಳುತ್ತಿರುವ ಡಾ॥ ದೊಡ್ಡರಂಗೇಗೌಡರು ಶಿವಪಥದ ಪಥಿಕರು! ಇಂದು ಇಂಥವರು ಅತಿವಿರಳ! ಇವರು ಬಹುಕಾಲ ಬಾಳಿ ನಾಡುನುಡಿಗಳಿಗೆ ಸೇವೆ ಸಲ್ಲಿಸಲೆಂದು ಹೃದಯಾರೆ ಹಾರೈಸುವೆ! ಶಿಷ್ಟರ-ತತ್ವನಿಷ್ಠರ, ಸನ್ಮಾನ ಪರಶಿವನಿಗೆ ಸಲ್ಲಿಸುವ ಪರಮಾನ್ನ!





# ವಿಭಿನ್ನ ನೆಲೆಯ ವಿಶಿಷ್ಟ ಕವಿ ದೊಡ್ಡರಂಗೇಗೌಡ

• ಜಿ. ನಾಗರಾಜ್ (ನಾದಲೀಲೆ)

ಜೀವನ ಪ್ರೀತಿ ಮತ್ತು ಸಾಹಿತ್ಯ ಇವೆರಡಕ್ಕೂ ಅವಿನಾಭಾವ ಸಂಬಂಧವಿದೆ. ಜೀವನ ಸಾಹಿತ್ಯದ ಬೇರು. ಅದರ ಸಾರದಿಂದ ಸತ್ವಯುತ ಭಾವಪುಷ್ಪವನ್ನು ಅರಳಿಸುವವನೇ ನಿಜವಾದ ಸಾಹಿತಿ. ''ಸಾಹಿತ್ಯವು ಜೀವನಕ್ಕೆ ನಿಕಟವಾದುದು. ಅದು ವೈಯಕ್ತಿಕತೆಯ ಎಲ್ಲೆಯನ್ನು ತೊರೆದು ಇತರರಿಗೆ ತಮ್ಮ ಅನುಭವವನ್ನು ಪಸರಿಸುವ ಸಾಧನ'' ಎಂಬುದಾಗಿ ಪಾಶ್ಚಾತ್ಯ ಕವಿ ಜಾರ್ಜ್ ಎಲಿಯಟ್ ಹೇಳುತ್ತಾನೆ. ನಮ್ಮ ಕನ್ನಡ ನಾಡಿನಲ್ಲಿ ಇಂತಹ ಅನೇಕ ಸಾಹಿತಿ–ಕವಿಗಳು ಮಿಂಚಿ ಮಿನುಗಿದ್ದಾರೆ. ಅಂತಹವರಲ್ಲಿ ಕವಿ ಡಾ|| ದೊಡ್ಡರಂಗೇಗೌಡರು ಸಹ ವಿಶೇಷವಾಗಿ ಒಬ್ಬರೆನಿಸಿದ್ದಾರೆ.

ಇಲ್ಲಿ ದೊಡ್ಡರಂಗೇಗೌಡರನ್ನು ವಿಶೇಷ ಎಂದು ಹೇಳುವುದರ ಔಚಿತ್ಯವೆಂದರೆ; ಅವರು ಸಾಹಿತ್ಯ ಕ್ಷೇತ್ರ ಹಾಗೂ ಚಲನಚಿತ್ರ ಕ್ಷೇತ್ರ ಇವೆರಡರಲ್ಲೂ ಮಾಡಿರುವ ವಿಶಿಷ್ಟ ಕೃಷಿ ಹಾಗೂ ಗಳಿಸಿರುವ ಜನಪ್ರಿಯತೆ. ನಾನು ನಮ್ಮ ಗುರುಗಳಾದ ಡಿ.ಆರ್.ಜಿ. (ದೊಡ್ಡರಂಗೇಗೌಡ)ರನ್ನು ಬಹಳ ಹತ್ತಿರದಿಂದ ಬಲ್ಲೆ. ತರಗತಿಯಲ್ಲಿ ಅವರ ಪಾಠ ಪ್ರವಚನಗಳನ್ನು ಸವಿದಿದ್ದೇನೆ. ಅಂತೆಯೇ ಅವರ ವ್ಯಕ್ತಿತ್ವವನ್ನು, ಹಾಗೂ ಹೃದಯ ಶ್ರೀಮಂತಿಕೆಯನ್ನು ಅರಿತಿದ್ದೇನೆ. ಗೌಡರ ಹೆಸರು ಮಾತ್ರ 'ದೊಡ್ಡ'ದಲ್ಲ, ಮನಸ್ಸೂ ದೊಡ್ಡದು. ಮಗುವಿನಷ್ಟೇ ಮೃದು. ಅದೊಂದು ಸ್ವೈರವಿಹಾರಿ.

ಅವರದು ಸದಾ ಕಾವ್ಯ ತಪಸ್ಸು. ಅವರು ಸದಾ ತಮ್ಮ ಬ್ಯಾಗಿನಲ್ಲಿ ಒಂದು ಡೈರಿಯನ್ನು ಇಟ್ಟುಕೊಂಡಿರುತ್ತಾರೆ. ನಿಂತಲ್ಲಿ, ಕುಂತಲ್ಲಿ, ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಎಲ್ಲೆಂದರಲ್ಲಿ ತಮಗೆ ತೋಚಿದ್ದನ್ನು ಗೀಚುತ್ತಾರೆ. ಸಾಹಿತ್ಯಾಸಕ್ತರ ಮುಂದೆ ಅದನ್ನು ಅಷ್ಟೇ ಭಾವತನ್ಮಯತೆಯಿಂದ ಓದಿ ರಂಜಿಸುತ್ತಾರೆ. ಈ ಒಂದು ತಪಸ್ಸೇ ಅವರನ್ನು ಇಂದು 'ದೊಡ್ಡ' ಹೆಸರಿನಲ್ಲಿ ನಿಲ್ಲಿಸಿರುವುದು.

ಸುಮಾರು 60ರ ದಶಕದಲ್ಲಿ ಸಾಹಿತ್ಯ ರಚನೆಗೆ ತೊಡಗಿದ ಗೌಡರು, ಆರಂಭದಲ್ಲಿ ನವ್ಯದ 'ಘಾಟಿ'ನಲ್ಲಿ ಹೆಚ್ಚಾಗಿ ಬರೆದವರು. ನಿಸಾರ್ ಅಹಮದ್, ಹೆಚ್.ಎಸ್. ವೆಂಕಟೇಶ ಮೂರ್ತಿ, ಪಿ. ಲಂಕೇಶ್ ಅವರಂಥ ನವ್ಯ ಕವಿಗಳ ಸಮಕಾಲೀನರಾಗಿದ್ದು ಸಹ ಇವರು ಕಾವ್ಯ ಛಂದಸ್ಸಿನಲ್ಲಿ ಹಲವಾರು ಪ್ರಯೋಗಗಳನ್ನು ಮಾಡಿದ್ದಾರೆ. ನವ್ಯಕ್ಕೆ ಲಯಗಾರಿಕೆಯ ವರ್ಚಸ್ಸನ್ನು ತಂದವರಲ್ಲಿ ದೊಡ್ಡರಂಗೇಗೌಡರು ಮೊದಲಿಗರು- ಮೈಸೂರು ವಿಶ್ವವಿದ್ಯಾನಿಲಯದ "Leterary Half Yearly" ಪತ್ರಿಕೆಯಲ್ಲಿ ದೊಡ್ಡರಂಗೇಗೌಡರ ಪದ್ಯಗಳನ್ನು "Jazy verse" (ಮಧುರವಾದ ಸಂಗೀತ ಸ್ಪರ್ಶ) ಎಂದು ವಿಮರ್ಶಕರೇ ಹೊಗಳಿದ್ದರು. ಹಿರಿಯ ಕವಿ ಪು.ತಿ.ನ.ರವರು ಕೂಡ ''ಇವರ ಪದ್ಯಗಳು ಕೇವಲ ಓದಿನಲ್ಲೇ ಹಾಡಿಸಿಕೊಳ್ಳುವ ಗುಣ ಹೊಂದಿವೆ'' ಎಂದಿರುವುದು ಇದಕ್ಕೆ ನಿದರ್ಶನ.

ಪ್ರತಿಮಾ ವಿಧಾನ ಮತ್ತು ರೂಪಕಗಳ ಸುಸ್ಪಷ್ಟ ಸಾಂಕೇತಿಕ ಶೈಲಿಯಲ್ಲಿ ಕ್ಷಮತೆಯನ್ನು ಹೊಂದಿದ್ದ ಇವರು ಸಾಹಿತ್ಯ ಸಿದ್ಧಾಂತವನ್ನು ಆಳವಾಗಿ ಅಧ್ಯಯನ ಮಾಡಿದವರು. ಇವರ ಪ್ರಥಮ ಕವನಗುಚ್ಛ **'ಜಗಲಿ ಹತ್ತಿ ಇಳಿದು'** ನಂತರದ **'ಕಣ್ಣು ನಾಲಗೆ ಕಡಲು'** ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

''ನೀನು ಕಡಿಯ ಬಂದೆ
ಕಡಿಯಲಾದೀತೆ?
ಕಡಿದರೂ ಮತ್ತೆ ಚಿಗುರಲಾರದೆ''

ಇದು ಗೌಡರ ಒಳತೋಟಿ. ಮೀಟಿ ನುಡಿಸಿದ ಕಾವ್ಯಗಾನ. ಬದುಕಿನ ಅಸ್ಪಷ್ಟಭಾವಗಳಿಗೆ ಇವರು ನೀಡುತ್ತಿದ್ದ ಚಿತ್ತಾರ ಶಕ್ತಿ ಓದುಗರನ್ನು ಸೆಳೆಯಿತು. 'ಕೆಂಭೂತ ನಾನಲ್ಲ, ನನಗಂಥ ಹುಚ್ಚಿಲ್ಲ' ಎಂಬಂತೆ ಹಾರ ತುರಾಯಿಗಳಿಗೆ ತುಡಿಯದೆಯೆ, ತಮ್ಮ ಪಾಡಿಗೆ ತಾವು ಕೃಷಿಯಲ್ಲಿ ತೊಡಗಿದವರು ದೊಡ್ಡರಂಗೇಗೌಡರು. ಇವರನ್ನು ಕುರಿತು ಸ. ರಘುನಾಥ ಅವರು ಹೀಗೆ ಹೇಳುತ್ತಾರೆ ''ಈ ಕವಿ ಒಂದೇ ಕಲ್ಪನೆಯ ಮಧುರ ಭಾವಲೋಕದಲ್ಲಿ ವಿಹರಿಸುತ್ತಾನೆ ಅನ್ನುವಂತಿಲ್ಲ, ವಾಸ್ತವದ ಕಟು ಬದುಕಿನ ಅರಿವೂ, ಇಲ್ಲಿನ ಕಷ್ಟಕೋಟಲೆಗಳ ಪ್ರಜ್ಞೆಯೂ ಉಳ್ಳವನಾಗಿದ್ದಾನೆ''. ನಿಜ ಈ ಮಾತುಗಳಲ್ಲಿ ಹುರುಳಿದೆ. ಗೌಡರ ಕವನಗಳಲ್ಲಿ ಜೀವನಾನುಭವ, ಪ್ರಕೃತಿ ಪ್ರೇಮ, ಮೈತ್ರಿ ಗೀತ, ಕಟಕಿ, ವಾಸ್ತವವಾದ ಎಲ್ಲವೂ ಪ್ರತಿಬಿಂಬಿತವಾಗಿದೆ.

'ನವ್ಯ' ಮಾರ್ಗದಿಂದ ಬಂದರೂ, ನಿಸಾರ್ ಅಹಮದ್ ಹಾಗೂ ಎನ್.ಎಸ್.ಎಲ್ ಭಟ್ ಅವರಂತೆ ಗೌಡರೂ ಸಹ ಭಾವಗೀತೆಗಳನ್ನು ವಿಪುಲವಾಗಿ ರಚಿಸಿದ್ದಾರೆ. ತಮ್ಮ ಅಪ್ಪಟ ಗ್ರಾಮ್ಯ ಶೈಲಿಯನ್ನು ಢಾಳಾಗಿ ಬಿಂಬಿಸಿದ್ದಾರೆ.

"ಮೂಡುತ ರವಿ ರಂಗು ತಂದೈತೆ
ಓಡುತ ನದಿ ಹಾಡು ನೀಡೈತೆ"

ನದಿ, ಬೆಟ್ಟ, ಪರಿಸರ ಈ ಕವಿಯ ಪ್ರೇರಕ ಶಕ್ತಿಗಳು. ಭಾವಗೀತೆಗಳಲ್ಲು ಸಹ; ಜೀವನ, ವಾಸ್ತವ, ಪ್ರಕೃತಿ ಮುಂತಾದ ಎಲ್ಲ ಪ್ರಕಾರಗಳೂ ಮೇಳೈಸಿವೆ. ಇತ್ತೀಚಿನ ಪ್ರಮುಖ ಭಾವಗೀತಕಾರರಲ್ಲಿ ದೊಡ್ಡರಂಗೇಗೌಡರೂ ಒಬ್ಬರಾಗಿರುವುದಕ್ಕೆ ಅವರ ಬರವಣಿಗೆಯ ಶೈಲಿಯೇ ಅದಕ್ಕೆ ಸಾಕ್ಷಿ. ಭಾವಗೀತೆಗಳಲ್ಲಿನ ಮಾಧುರ್ಯ, ಅರ್ಥದಲ್ಲಿ ಆತ್ಮೀಯತೆಯ ಅನಾವರಣ, ಸಲಿಲ ಸರಿತೆಯಾಗಿ ಸಾಗುವ ಕವಿತಾಗುಣ ಶ್ರೋತೃವರ್ಗವನ್ನು ಅಪಾರವಾಗಿ ಸೆಳೆದಿದೆ. **'ಮಾವು ಬೇವು"** ಧ್ವನಿಸುರುಳಿ 'Long Play' ದಾಖಲೆ ಸೃಷ್ಟಿಸಿದ್ದು ಈ ಕಾರಣದಿಂದಲೇ. ಈ ಹೊತ್ತು ಕನ್ನಡಿಗರಿಗೆ ಪರಿಚಯವಿಲ್ಲದ ಅನೇಕ ಅಪ್ಪಟ ಕನ್ನಡ ಪದಗಳನ್ನು ದೊಡ್ಡರಂಗೇಗೌಡರು ತಮ್ಮ ಕಾವ್ಯಗಳಲ್ಲಿ ಮೂಡಿಸಿದ್ದಾರೆ. ಉದಾಹರಣೆಗೆ:- ಬೆಂಕ, ರಂಕಲು, ತೆವರು, ಜೀಕಾಡಿ, ರೂವಾರಿ, ರಾಗ, ಮೋಜು, ಸಲ್ಮೆ, ಜೆದಕು, ಸಿವುಡು ಇತ್ಯಾದಿ. ಒಂದು ಭಾಷೆಯಲ್ಲಿನ ಪದಗಳು ಸದಾ ಉಚ್ಚರಿತವಾಗುತ್ತಿದ್ದರೆ, ಆ ಭಾಷೆ ಮತ್ತಷ್ಟು ಆಯಾಮಗಳೊಂದಿಗೆ ಕೊಡುಕೊಳ್ಳುವಿಕೆಯಿಂದ ಬೆಳೆಯುತ್ತಾ ಬರುತ್ತದೆ. ಆದರೆ ಆ ಭಾಷೆಯ ಅಪ್ಪಟ ಮೂಲಪದಗಳೇ ಹೆಚ್ಚಾಗಿ ಬಳಕೆಯಾಗದಿದ್ದರೆ ಕ್ರಮೇಣ ಅವು ನಶಿಸುತ್ತಾ ಬಂದು ಆ ಭಾಷೆಯಿಂದಲೇ ಕಣ್ಮರೆಯಾಗುತ್ತವೆ. ಅಂತಹ ಸಾವಿನಂಚಿನಲ್ಲಿರುವ ಪದಗಳನ್ನು ದೊಡ್ಡರಂಗೇಗೌಡರು ತಮ್ಮ ಕಾವ್ಯಗಳಲ್ಲಿ ಮತ್ತೆ ಮತ್ತೆ ಬಳಸುವ ಪ್ರಯತ್ನ ಮಾಡಿರುವುದು ಪ್ರಶಂಸಾರ್ಹನೀಯ.

70ರ ದಶಕದಲ್ಲಿ ಗೌಡರು ಚಲನಚಿತ್ರ ಕ್ಷೇತ್ರಕ್ಕೆ ಪದಾರ್ಪಣೆಮಾಡಿ ಗೀತ ರಚನೆಯಲ್ಲಿ ಹೊಸ ಅಲೆಯನ್ನೆ ಎಬ್ಬಿಸಿದರು. **"ತೇರ ಏರಿ ಅಂಬರದಾಗೆ ನೇಸರ ನಗುತಾನೆ"** ಹಾಡು ಯಾರಿಗೆ ತಾನೆ ಪರಿಚಯವಿಲ್ಲ! ಮಹಾರಾಷ್ಟ್ರ ರಾಜ್ಯದ ಕನ್ನಡ ಭಾಷೆಯ ಏಳನೆಯ ಇಯತ್ತೆಗೆ ಇದು ಪಠ್ಯವಾದದ್ದೂ ಉಂಟು. ಇಲ್ಲೂ ಸಹ ಗೌಡರು ತಮ್ಮ ಅಪ್ಪಟ ಗ್ರಾಮ್ಯ ಸೊಗಡಿನ ಹಾಡುಗಳಿಂದ ಕನ್ನಡ ಚಿತ್ರರಸಿಕರ ಮನೆ ಮಾತಾದರು. ಗೀತರಚನೆಗೆ 'Star value' ತಂದುಕೊಟ್ಟರು. ಹಿರಿಯ ಗೀತರಚನಾಕಾರರಾದ ಶ್ರೀ ಆರ್.ಎನ್. ಜಯಗೋಪಾಲ್‌ರವರು ದೊಡ್ಡರಂಗೇಗೌಡರನ್ನು ಕುರಿತು '.... You have opened a new Vistas in writing' (ನೀವು ಚಿತ್ರ ಸಾಹಿತ್ಯದಲ್ಲಿ ಒಂದು ಹೊಸ ಹಾದಿಯನ್ನೇ ತೆರೆದಿರಿ) ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು.

"ಮುಂಜಾನೆ ಮೂಡಿದ ಹಾಗೆ
ತಂಗಾಳಿ ತೀಡಿದ ಹಾಗೆ
ಹೊಂಬಾಳೆ ತೂಗಿದ ಹಾಗೆ
ಕೆಂದಾವರೆ ನೀನು ನನಗೆ

"ನಮ್ಮೂರ ಮಂದಾರ ಹೂವೆ
ನನ್ನೊಲುಮೆ ಬಾಂದಳದ ಚೆಲುವೆ"

"ಗೀತೆಗಳು ಪ್ರೇಕ್ಷಕರ ಮನದಾಳದಲ್ಲಿ ಅಚ್ಚೊತ್ತಿವೆ. ಕನ್ನಡ ಪತ್ರಿಕಾ ಲೋಕ ಮುಕ್ತ ಕಂಠದಿಂದ ಪ್ರಶಂಸಿಸಿವೆ. ಇವತ್ತಿಗೂ ಯಾವುದೇ ಕಾರ್ಯಕ್ರಮದ Orchestra ದಲ್ಲಿ 'ಹೃದಯ ಸಮುದ್ರ ಕಲಕಿ" (ಅಶ್ವಮೇಧ) ಗೀತೆಯನ್ನು ಹಾಡದೇ ಇರುವುದು ಕಡಿಮೆ. ಇದು ಕಾವ್ಯತಪಸ್ಸಿಗೆ ದೊರೆತ ಅನನ್ಯ ಫಲವೇ ಸರಿ.

ಆದರೆ ಯಾಕೋ "ಇಂತಹ ಉತ್ತಮ ಸಾಹಿತಿಯನ್ನು ಸಾಹಿತ್ಯ ಮತ್ತು ಚಿತ್ರರಂಗ" ಇನ್ನಷ್ಟು ಉತ್ತಮವಾಗಿ ಉಳಿಸಿಕೊಳ್ಳಲಿಲ್ಲ ಎಂಬುದು ವಿಷಾದನೀಯ. ನಾಡಿನ ಮಹಾನ್ ಗಾಯಕರುಗಳು, ಸಂಗೀತ ನಿರ್ದೇಶಕರು ಗೌಡರ ಕವಿತೆಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದಾರೆ. ಬೆಳ್ಳಿ ತೆರೆಯ ಮುಸುಕು ಗೌಡರ ಸಾಹಿತ್ಯಾಭಿವೃದ್ಧಿಗೆ ಎಷ್ಟೇ ತಡೆಯೊಡ್ಡಿದರೂ ಸಹ ನಿರ್ಮಲ ಚಿತ್ತದಿಂದ, ತಮ್ಮ ಕಾವ್ಯ ತಪಸ್ಸಿನಲ್ಲಿ ನಿರತರಾಗಿರುವ ಈ 'ಅಭಿನವ ವಾಲ್ಮೀಕಿ'ಯ ಲೇಖನಿ ಮತ್ತಷ್ಟು ಹುರುಪುಗೊಂಡಿದೆ. ನಿವೃತ್ತರಾದ ನಂತರವೂ ಛಲದಿಂದ ಡಾಕ್ಟರೇಟ್ ಪಡೆದಿರುವ ಕವಿ ದೊಡ್ಡರಂಗೇಗೌಡರದು ಸಾಹಿತ್ಯವೇ ಜೀವನ, ಹಾಗೂ ಜೀವನವೇ ಅವರ ಸಾಹಿತ್ಯ. ಈ 60ರ ಹರೆಯದಲ್ಲೂ ಅವರ ಬತ್ತದ ಸಾಹಿತ್ಯ ಒಲವು, ನಿಲುವುಗಳು ನಮ್ಮಂತಹ ಯುವ ಬರಹಗಾರರಿಗೆ ಪ್ರೇರಕ ಶಕ್ತಿಯೇ ಸರಿ.

❑



# ನವೋದಯ-ಒಂದು ಪುನರ್ ಮೌಲ್ಯ ಮಾಪನ

● ಡಾ.ಡಿ. ಮಂಗಳಾ ಪ್ರಿಯದರ್ಶಿನಿ

ಕವಿಗಳಾಗಿ, ಗೀತ ರಚನಕಾರರಾಗಿ ದೊಡ್ಡರಂಗೇಗೌಡರು ಕನ್ನಡ ನಾಡಿನ ಮನೆ ಮಾತಾಗಿದ್ದಾರೆ. ಶಿಕ್ಷಣಕ್ಷೇತ್ರದಲ್ಲಿ ಸುಮಾರು ಮೂರು ದಶಕಗಳಿಗೂ ಹೆಚ್ಚಿನ ಕಾಲ ಜನಪ್ರಿಯ ಪ್ರಾಧ್ಯಾಪಕರಾಗಿ ಕನ್ನಡ ಭಾಷೆ ಹಾಗೂ ಸಾಹಿತ್ಯಗಳನ್ನು ಬೋಧಿಸುತ್ತ ಬಂದಿದ್ದಾರೆ. ಗ್ರಾಮೀಣ ಪರಿಸರದಲ್ಲಿ ಹುಟ್ಟಿ ಬೆಳೆದವರಾದುದರಿಂದ ಅವರ ಕೃತಿಗಳಲ್ಲಿ ಕನ್ನಡ ದೇಸೀ ಸೊಗಡಿದೆ.

ಡಾ॥ ದೊಡ್ಡರಂಗೇಗೌಡರು ಕನ್ನಡ ಸಾಹಿತ್ಯದ ಬಹುತೇಕ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿದ್ದರೂ ಅವರ ಹೃದಯ ಮಿಡಿಯುವುದು ಕಾವ್ಯಾತ್ಮಕತೆಯ ತಾಣಗಳಲ್ಲಿಯೇ. ಸುಮಾರು 56 ಕೃತಿಗಳು ಹಾಗೂ ನೂರಾರು ಚಲನಚಿತ್ರಗೀತೆಗಳು ಇವರ ಸಾಹಿತ್ಯ ಭಂಡಾರವನ್ನು ತುಂಬಿವೆ-ಕವಿತ್ವದ ಜೊತೆ ಜೊತೆಗೇ ದೊಡ್ಡರಂಗೇಗೌಡರಲ್ಲಿ ಎದ್ದು ಕಾಣುವ ಪ್ರಮುಖ ಅಂಶಗಳೆಂದರೆ ಸಂಶೋಧಕ ಪ್ರವೃತ್ತಿ ಹಾಗೂ ವಿಮರ್ಶನ ಪ್ರಜ್ಞೆ ಅವರ ಮಹಾ ಪ್ರಬಂಧ 'ಕನ್ನಡ ನವೋದಯ ಕಾವ್ಯ - ಒಂದು ಪುನರ್ ಮೌಲ್ಯಮಾಪನ' ಅವರ ಸಾಹಿತ್ಯಕೃತಿಗಳಲ್ಲಿ ವಿಶೇಷ ಸ್ಥಾನ ಪಡೆದುಕೊಳ್ಳುವ ಕೃತಿಯಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ನವೋದಯ ಸಾಹಿತ್ಯ ಮುಂದಿನ ಬೆಳವಣಿಗೆಗೆ ತುಂಬ ಭದ್ರವಾದ ಅಡಿಪಾಯವನ್ನು ಹಾಕಿಕೊಟ್ಟ ಘಟ್ಟ. ಆಧುನಿಕ ಕನ್ನಡ ಕಾವ್ಯ ಅನೇಕ ಚಳವಳಿಗಳು, ಸಿದ್ಧಾಂತಗಳು, ವಿಚಾರಗಳು, ಬದ್ಧತೆಗಳ ಹಿನ್ನೆಲೆಯಲ್ಲಿ ಬೆಳೆದು ಬಂದ ರೀತಿ ಅತ್ಯಂತ ಕುತೂಹಲಕರವಾದದು. ಅದು ಪಡೆದುಕೊಂಡ ಹುಟ್ಟು, ಬೆಳೆದ ರೀತಿ, ಕಂಡ ಹೊರಳುಗಳು, ಪಲ್ಲಟಗಳು ಸಾಹಿತ್ಯದ ವಿದ್ಯಾರ್ಥಿಗಳಿಗೆ ಎಂದಿಗೂ ಬೆರಗು ಹುಟ್ಟಿಸುವಂತಹದಾಗಿದೆ.

'ನವೋದಯ ಕಾವ್ಯ' ಚಳವಳಿ ಹೊಸಗನ್ನಡ ಸಾಹಿತ್ಯದ ಮೊದಲ ಘಟ್ಟ. ಇಂಗ್ಲೆಂಡಿನ ರೋಮ್ಯಾಂಟಿಕ್ ಚಳವಳಿಯಿಂದ ಪ್ರಭಾವಿತರಾದರೂ, ನಮ್ಮ ನಾಡಿನಲ್ಲೂ ಆ ಸಾಹಿತ್ಯಹುಟ್ಟಿದ

ಸಂದರ್ಭವಿದ್ದುದರಿಂದ ಈ ನೆಲದ ಸಂಸ್ಕೃತಿಯು ಸತ್ವದಿಂದಲೇ ಅರಳಿರುವಂತಹದು. ಉದಾರವಾದ, ಆದರ್ಶವಾದ, ವಿಚಾರವಾದ, ರಾಷ್ಟ್ರೀಯತೆ, ನವಮಾನವತಾವಾದಗಳ ಬಗೆಗೆ ಇಲ್ಲಿ ಬಂದ ಕವಿಗಳು ತುಂಬ ಆಸಕ್ತಿಯನ್ನು ತೋರಿದ್ದಾರೆ. ಬಿ.ಎಂ.ಶ್ರೀ. ಯಂತಹ ಕವಿಗಳು ತಮ್ಮ 'ಇಂಗ್ಲಿಷ್ ಗೀತೆ'ಗಳ ಅನುವಾದಗಳ ಮೂಲಕ ಕನ್ನಡ ಛಂದಸ್ಸಿನ ಹೊಸ ಸಾಧ್ಯತೆಗಳಿಗೆ ನಾಂದಿ ಹಾಡಿದರು. ಶ್ರೀಯವರ ಪ್ರಯೋಗಶೀಲತೆ, ಅನನ್ಯತೆಗಳು ಕನ್ನಡ ಕಾವ್ಯವನ್ನು ಹೊಸದಾರಿಯಲ್ಲಿ ಕೈ ಹಿಡಿದು ನಡೆಸಿತು. ಇದರಿಂದ ಸಾಲುಸಾಲು ಪ್ರತಿಭಾವಂತ ಕವಿಗಳು ತಮ್ಮ ಭಾವನೆಗಳ ಪ್ರಪಂಚವನ್ನು ವಿಸ್ತರಿಸಿಕೊಳ್ಳಲು ಸಹಾಯಕವಾಯಿತು. ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ಪ್ರಗತಿ ಶೀಲ, ನವ್ಯ, ದಲಿತ, ಬಂಡಾಯ - ಮುಂತಾದ ಅನೇಕ ಮಹತ್ವದ ಸಾಹಿತ್ಯ ಚಳವಳಿಗಳಿಗೆ ನವೋದಯ ಸಾಹಿತ್ಯ ಚಳವಳಿ ನೀಡಿದ ಚಾಲನೆ ಅನುಪಮವಾದುದು.

ನವೋದಯ ಯುಗ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಮಹತ್ವದ ಕೊಡುಗೆಗಳನ್ನು ನೀಡಿತು. ಕಾದಂಬರಿ, ಸಣ್ಣಕತೆ, ಕಾವ್ಯ, ನಾಟಕ, ಪ್ರಬಂಧ, ವಿಮರ್ಶೆ, ವೈಚಾರಿಕ - ಹೀಗೆ ಎಲ್ಲಾ ಪ್ರಕಾರಗಳಲ್ಲೂ ಉತ್ತಮ ಕೃತಿಗಳು ಬಂದವು. ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಪು.ತಿ.ನ, ಡಿ.ವಿ.ಜಿ, ಕೆ.ಎಸ್.ನ, ಮಾಸ್ತಿ, ಎ.ಎನ್. ಮೂರ್ತಿರಾವ್, ಟಿ.ಪಿ. ಕೈಲಾಸಂ, ಜಿ.ಪಿ. ರಾಜರತ್ನಂ, ಶಂಬಾ, ವಿಸೀ, ಪಂಜೆಮಂಗೇಶ ರಾವ್, ಗೋವಿಂದ ಪೈ, ಎ.ಆರ್. ಕೃ, ಟಿ. ಎಸ್. ವೆಂಕಣ್ಣಯ್ಯ, ತೀ.ನಂ.ಶ್ರೀ, ಡಿ.ಎಲ್.ಎನ್, ಮಧುರ ಚೆನ್ನ - ಇವರುಗಳು ಹೊಸ ಚಿಂತನೆ, ಹೊಸ ಪ್ರಯೋಗಗಳನ್ನು ಕನ್ನಡ ಸಾಹಿತ್ಯ ಪರಂಪರೆಯಿಂದ ತೀರಾ ಆಚೆ ಬರದೆ ನಡೆಸಿದರು. ಶ್ರೀಯುರಂತಹವರು ಪ್ರಯೋಗಶೀಲರು. ಪರಂಪರೆಯ ಸತ್ವವನ್ನು ಗೌರವಿಸುತ್ತಲೇ ಎದೆಯೊಳಗಿನ ಆಧುನಿಕ ಸಂವೇದನೆಯಿಂದ ಹೊಸ ಹೊಸ ಪ್ರಯೋಗಗಳಿಗೆ ಕೈ ಹಾಕಿದರು. ಇದರೊಂದಿಗೆ 'ರಾಷ್ಟ್ರಪ್ರೇಮ', 'ಕನ್ನಡತನ' - ಇವು ಈ ಯುಗದ ಪ್ರಮುಖ ಕಾಳಜಿಗಳಾಗಿವೆ.

ನವೋದಯ ಕವಿಗಳ ಹೋರಾಟ ಏಕಕಾಲದಲ್ಲಿ ಕನ್ನಡ ವ್ಯಕ್ತಿತ್ವ, ರಾಷ್ಟ್ರೀಯ ವ್ಯಕ್ತಿತ್ವ ಹಾಗೂ ವಿಶ್ವಸ್ತ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳುವ ಹೋರಾಟ. ಇದು ವಸಾಹತುಶಾಹಿಯ ನೆಲೆಯ ಅನಿವಾರ್ಯತೆಯೂ ಹೌದು. ನಾಡು ಒಂದಾಗಿರದ, ನುಡಿ ಒಂದಾಗಿರದ ನೆಲೆಯಿಂದ ಹೊರಟ ಮೌಲ್ಯ ಶೋಧವೂ ಆಗಿದೆ.

'ನವೋದಯ ಕಾವ್ಯ' ಕಾವ್ಯಾಭ್ಯಾಸಿಗಳಿಗೆ, ಸಾಹಿತ್ಯಾಸಕ್ತರಿಗೆ ಎಂದಿಗೂ ಆಸಕ್ತಿಯ ವಿಷಯವೇ. ಮೌಲ್ಯ ಪ್ರಾಧಾನ್ಯತೆ, ಅಭಿರುಚಿ ನಿರ್ಮಾಣಗಳ ಕಡೆಗೆ ತುಡಿತ ಹೊಂದಿದ್ದ ಸಾಹಿತ್ಯ ಇಂದಿಗೂ ಅಧ್ಯಯನಯೋಗ್ಯವಾಗಿದೆ. ಈ ಯುಗದ ಸಾಹಿತ್ಯ, ಕವಿಗಳನ್ನು ಕುರಿತ ಅನೇಕ ಸತ್ವಯುತವಾದ ಅಧ್ಯಯನಗಳು, ಸಂಶೋಧನೆಗಳು ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕಾಣಿಸಿಕೊಂಡಿವೆ. ಆಗಿಂದಾಗ್ಗೆ ಮತ್ತೆ ಮತ್ತೆ ಅಧ್ಯಯನಗಳು, ಮರು ಅಧ್ಯಯನಗಳು ಪ್ರಸ್ತುತ ಬದುಕು, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳಲ್ಲಿ ಇವು ಯಾವ ರೀತಿಯ ಪರಿಣಾಮ,

ಅರ್ಥ ಸ್ವರೂಪವನ್ನು ಪಡೆದುಕೊಂಡಿದೆ ಎನ್ನುವುದರ ಕಡೆಗೆ ನಮ್ಮನ್ನು ಆಲೋಚಿಸುವಂತೆ ಮಾಡುತ್ತದೆ. ಗೌಡರು ತಮ್ಮ 'ಕನ್ನಡ ನವೋದಯ ಕಾವ್ಯ ಒಂದು ಪುನರ್ ಮೌಲ್ಯಮಾಪನ' – ಎಂಬ ಕೃತಿಯಲ್ಲಿ ಸಾಹಿತ್ಯದ ಪುನರ್ ಮೌಲ್ಯೀಕರಣ ಮಾಡುತ್ತಾರೆ.

ಲೇಖಕರು 'ನವೋದಯ'ವನ್ನು ವ್ಯಾಖ್ಯಾನ ಮಾಡಿಕೊಳ್ಳುವ ನೆಲೆ ಬೇರೆಯದೇ ಆಗಿರುವುದರಿಂದ ಇದುವರೆಗೆ ಅಕಾಡೆಮಿಕ್ ವಲಯಗಳಲ್ಲಿ 1950ರವರೆಗೆ ಕನ್ನಡದಲ್ಲಿ ಬಂದ ಸಾಹಿತ್ಯವನ್ನು 'ನವೋದಯ' ಎಂದು ಗುರುತಿಸಿದರೂ, ಗೇಯತೆ, ಭಾವಗೀತಾತ್ಮಕತೆಯನ್ನು ಹೊಂದಿರುವ ಇಂದಿನ ಕಾವ್ಯವನ್ನು 'ನವೋದಯ ಕಾವ್ಯ' ಎಂದೇ ಗುರುತಿಸಲಾಗಿದೆ. ಇದೇ ಪ್ರಬಂಧದ ಉದ್ದಕ್ಕೂ 'ರಮ್ಯ' ಪ್ರಜ್ಞೆ, 'ರಮ್ಯತೆ'ಯನ್ನು 'ನವೋದಯ ಕಾವ್ಯ', ನವೋದಯ ಪ್ರತಿಜ್ಞೆ ಪರ್ಯಾಯವಾಗಿ ಬಳಸಲಾಗಿದೆ. ಆದರೆ ಈವರೆಗೆ 'ನವೋದಯ'ವನ್ನು ಕುರಿತಾದ ಚರ್ಚೆಗಳು 'ರಮ್ಯತೆ'ಗೂ 'ನವೋದಯ'ಕ್ಕೂ ಇರುವ ವ್ಯತ್ಯಾಸಗಳನ್ನು ಬಹಳ ಸ್ಪಷ್ಟವಾಗಿ ಮಾಡಿವೆ. ಡಾ. ಜಿ.ಎಸ್.ಎಸ್. ಅವರು ನಮ್ಮ 'ನವೋದಯ' ಕೃತಿಯಲ್ಲಿ ಇಂಗ್ಲೀಷಿನ ರೋಮ್ಯಾಂಟಿಕ್ ಸಾಹಿತ್ಯದಿಂದ ಪ್ರೇರಿತವಾದ ಸಾಹಿತ್ಯವನ್ನು 'ನವೋದಯ' ಸಾಹಿತ್ಯ ಎಂದು ಗುರುತಿಸುತ್ತಾರೆ. ಏಕೆಂದರೆ ನವೋದಯ ಕವಿಗಳಿಗೆ ರೊಮ್ಯಾಂಟಿಕ್ ಕವಿಗಳಿಗಿಲ್ಲದ ಕೆಲವು ವಿಶೇಷ ಅಂಶಗಳಿರುವುದನ್ನು ಗುರುತಿಸಬೇಕು ಎಂದಿದ್ದಾರೆ. ಗೌಡರು ತಮ್ಮ ಪ್ರಬಂಧದಲ್ಲಿ ಉದ್ದಕ್ಕೂ ನವೋದಯ ಕವಿಗಳನ್ನು 'ರಮ್ಯವಾದೀ ಕವಿಗಳು' ಎಂದೇ ಗುರುತಿಸುತ್ತಾರೆ. 1920 ರಿಂದ 1950ರ ಅವಧಿಯನ್ನು 'ರಮ್ಯಕಾವ್ಯದ ಉತ್ಕರ್ಷ ಕಾಲ' ಎಂದು ಕರೆದಿರುವುದು ಕೊಂಚ ಗೊಂದಲಕ್ಕೆ ಕಾರಣವಾಗುತ್ತದೆ. ಏಕೆಂದರೆ ಈ ಬಗೆಯ ಚರ್ಚೆಗಳು ಸಾಕಷ್ಟು ನಡೆದಿದ್ದು 'ನವೋದಯ' ಎಂಬ ನಿಲುವಿಗೆ ಚಾರಿತ್ರಿಕವಾಗಿ ಬಂದು ನಿಂತಂತಹ ಚರ್ಚೆಗಳನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳುವುದು ಉಚಿತವೇನೋ?

ಹತ್ತು ಅಧ್ಯಾಯಗಳನ್ನೊಳಗೊಂಡ ಈ ಕೃತಿಯ ಮೊದಲನೆಯ ಅಧ್ಯಾಯ ಮಹಾಪ್ರಬಂಧದ ಉದ್ದೇಶ, ವ್ಯಾಪ್ತಿ ಮತ್ತು ಆಶಯಗಳನ್ನು ಪ್ರಸ್ತಾಪಿಸುವಂತಹದು. ಮುಖ್ಯವಾಗಿ ಕನ್ನಡ ನವೋದಯ ಹಾಗೂ ನವೋದಯ ಪೂರ್ವ ಕವಿಗಳ ಮುಖ್ಯಗುಣಗಳ ಗ್ರಹಣೆ ನಡೆದಿದೆ. ಇಂತಹ ಕವಿಯ ಇಂತಹ ಗುಣ ಮುಖ್ಯವಾದುದು ಎಂಬ ಅಂಶ ಪ್ರತಿಯೊಬ್ಬ ಕವಿಗೂ ನೀಡಿರುವ ಕಿರುಶೀರ್ಷಿಕೆಯಿಂದ ವ್ಯಕ್ತವಾಗುತ್ತದೆ. ಪುನರ್ ಮೌಲ್ಯಮಾಪನ, ಮರುವಿಮರ್ಶೆಗಳ ಸಾಧಕ, ಬಾಧಕಗಳು, ಅವುಗಳ ಚಿಂತನೆಯಿದೆ. ಕವಿಯೊಬ್ಬ ರಚಿಸಿದ ಕೃತಿ ಕೇವಲ ಅವನ ಸ್ವತ್ತಲ್ಲ, ಅದು ಸಾರಸ್ವತಲೋಕದ ಸ್ವತ್ತು. ಸತ್ವ, ಮೌಲ್ಯ, ಜೀವಂತಿಕೆಯಿದ್ದ ಕವಿ ಕಾಲಾತೀತ, ದೇಶಾತೀತ, ಸಮಯಾತೀತನಾಗುತ್ತಾನೆ. ಮಹಾನ್ ಕವಿ ಕೇವಲ ತನ್ನ ಕಾಲ, ಯುಗ ಧರ್ಮಗಳಿಗಷ್ಟೇ ಬದ್ಧನಲ್ಲ, ಅವನಲ್ಲಿ ಸಮಕಾಲೀನತೆ ಹಾಗೂ ಸಾರ್ವಕಾಲಿಕತೆ ಎರಡೂ ಏಕಕಾಲದಲ್ಲಿ ಕಂಡು ಬರುತ್ತದೆ. ಆ ಕಾರಣಕ್ಕೆ ವ್ಯಾಸ, ವಾಲ್ಮೀಕಿ, ಕಾಳಿದಾಸ, ಪಂಪ,

ಕುಮಾರವ್ಯಾಸ, ಬಸವಣ್ಣ, ಕುವೆಂಪು, ಬೇಂದ್ರೆ, ಅಡಿಗ-ಇಂತಹವರು ಸಾಯುವುದಿಲ್ಲ, ಉಳಿದುಕೊಳ್ಳುತ್ತಾರೆ. ಪ್ರಸ್ತುತ ಬದುಕಿಗೆ ಅರ್ಥಕೊಡದ, ದನಿಕೊಡದ ಕಾವ್ಯ ಸತ್ತು ಹೋಗುತ್ತದೆ. ಪುನರ್ ಮೌಲ್ಯಮಾಪನದ ಸಂದರ್ಭದಲ್ಲಿ ಈ ಅಂಶಗಳನ್ನು ಅವಶ್ಯವಾಗಿ ಗುರುತಿಸಬೇಕಾಗುತ್ತದೆ. ಇಲ್ಲದಿದ್ದರೆ ಸುಮ್ಮನೆ ಕವಿಗಳ, ಕೃತಿಗಳ ಪಟ್ಟಿಯಾಗಿ ಸಾಹಿತ್ಯ ಚರಿತ್ರೆಯಾಗಿ ಬಿಡುವ ಅಪಾಯಗಳಿರುತ್ತದೆ.

'ನವೋದಯ ಕಾವ್ಯ ಮೂಡುವ ಮುನ್ನ" ಇದ್ದಂತಹ ಸಾಂಸ್ಕೃತಿಕ, ಸಾಹಿತ್ಯಕ, ಸೃಜನಶೀಲ ಸಂದರ್ಭಗಳು ನಮಗೆ ಮುಖ್ಯವಾಗುತ್ತವೆ. ಅಷ್ಟೇನೂ ಜನಪ್ರಿಯತೆ ಗಳಿಸದಿದ್ದರೂ ತಮ್ಮ ಮೊದಲ ಪ್ರಯತ್ನಗಳನ್ನು ಮಾಡುತ್ತ ಇದೊಂದು ಸಾಹಿತ್ಯ ಚಳುವಳಿಯ ಸ್ವರೂಪವನ್ನು ಪಡೆದುಕೊಳ್ಳಲು ಕಾರಣರಾದ ಚುರುಮುರಿಯವರು, ಆಲೂರು ವೆಂಕಟರಾಯರು, ಕಿಟ್ಟಲ್ ಸಾಹೇಬರು, ಶಾಂತ ಕವಿಗಳ ಚರ್ಚೆಯಿದೆ. ಆಲೂರು ವೆಂಕಟರಾಯರು ಸ್ವತಃ ಕವಿಗಳಲ್ಲದಿದ್ದರೂ, ಅವರು ಬಿತ್ತಿದ ರಾಷ್ಟ್ರಾಭಿಮಾನ, ಕನ್ನಡಾಭಿಮಾನವು 'ನವೋದಯಕಾವ್ಯ'ಕ್ಕೆ ಪ್ರೋತ್ಸಾಹ ನೀಡಿದ್ದನ್ನು ಗುರುತಿಸಲಾಗಿದೆ. ಕಿಟ್ಟಲ್ ಸಾಹೇಬರು ಕನ್ನಡದಲ್ಲಿ ಕಾವ್ಯ ರಚನೆ ಮಾಡದಿದ್ದರೂ ಅವರ ಇಂಗ್ಲಿಷ್ ಕವನಗಳ ಅನುವಾದಗಳ ಮೂಲಕ ನವೋದಯ ಪರಂಪರೆಯಲ್ಲಿ ಅವರನ್ನು ಗುರುತಿಸಲಾಗಿದೆ. ಶಾಂತ ಕವಿಗಳು ಬೇಂದ್ರೆಯವರ ಮೇಲೆ, ಗೆಳೆಯರ ಗುಂಪಿನ ಮೇಲೆ ಪ್ರಭಾವವನ್ನು ಬೀರಿದರು. ಬೇಂದ್ರೆಯವರು ಶಾಂತ ಕವಿಗಳು ತೀರಿಕೊಂಡಾಗ ಅತ್ಯಂತ ನೋವಿನಿಂದ ಶಾಂತ ಕವಿಗಳ ಚಿರನಿದ್ರೆಯನ್ನು ಕುರಿತು ಪದ್ಯ ಬರೆಯುತ್ತಾರೆ. ಹೆಚ್ಚು ಚರ್ಚಿತವಾಗದ ಶಾಂತ ಕವಿಗಳನ್ನು ಗುರುತಿಸಲಾಗಿದೆ. ಇದೇ ನೆಲೆಯಲ್ಲಿ ಪಂಜೆ, ಗೋವಿಂದ ಪೈ, ಹಟ್ಟಿಯಂಗಡಿ ನಾರಾಯಣರಾಯರು, ಸೇಡಿಯಾಪು, ಪೇಜಾವರ ಸದಾಶಿವರಾಯರ ಸಾಧನೆಗಳನ್ನು ದಾಖಲಿಸಲಾಗಿದೆ. 'ನವೋದಯ ಕಾಲದಲ್ಲಿ ಪ್ರತಿಪಾದಿತವಾದ ರಮ್ಯವಾದ' ಎಂಬಲ್ಲಿ 'ರಮ್ಯತೆ' ಹಾಗೂ 'ನವೋದಯ' - ಇವೆರಡರ ಬಳಕೆ ಸಮಾನಾರ್ಥಕ ನೆಲೆಯಲ್ಲಿ ನಡೆದಿದೆ. 'ರಮ್ಯ ಕವಿಗಳು', ಹಾಗೂ 'ನವೋದಯದ ಕವಿಗಳು' ಇವರ ನಡುವೆ ಇರುವ ಸಂಬಂಧ ಮತ್ತು ವ್ಯತ್ಯಾಸಬಳಕೆಗೆ ಸೂಕ್ಷ್ಮರೂಪದ ಚರ್ಚೆಯಿದ್ದಿದ್ದರೆ ಚೆನ್ನಿರುತ್ತಿತ್ತೇನೋ? ನವೋದಯ ಕಾವ್ಯದ ಮೇರು ಶಿಖರಗಳೆಂದು ವರ್ಣಿಸಲಾಗಿದೆ. ಡಿ.ವಿ.ಜಿ., ಮಾಸ್ತಿ, ಪು.ತಿ.ನ., ವಿ.ಸೀ., ಕೆ.ಎಸ್.ನ., ಆನಂದ ಕಂದ, ಮಧುರ ಚೆನ್ನರನ್ನು 'ಧವಳ ಕೀರ್ತಿಗೆ ಪಾತ್ರವಾದ ನವೋದಯ ಕಾವ್ಯದ ಸಪ್ತಶೃಂಗಗಳೆಂದು ಗುರುತಿಸಲಾಗಿದೆ. 'ರಮ್ಯ ಹಾಗೂ ನವ್ಯ ಕಾವ್ಯ ಮಾರ್ಗಗಳ ಒಳಿತನ್ನು ಹೀರಿದ ಕವಿಗಳು' ಜಿ.ಎಸ್.ಎಸ್ ಹಾಗೂ ಚನ್ನವೀರಕಣವಿಯವರು ಸ್ಥಾನ ಪಡೆದಿದ್ದಾರೆ.

ಕನ್ನಡ ನಾಡಿನ ಪ್ರಾಂತೀಯ ನೆಲೆಯಲ್ಲಿ ಕವಿಗಳನ್ನು ಗುರುತಿಸುವ ಕಾರ್ಯ ಈ ಸಂಪ್ರಬಂಧದಲ್ಲಿ ನಡೆದಿದೆ. ಧಾರವಾಡದ ಕವಿಗಳು, ಕರಾವಳಿ ಕವಿಗಳು, ಮೈಸೂರು ಪ್ರಾಂತ್ಯದ

ಕವಿಗಳು, ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಕವಿಗಳು ಎಂದು ವಿಭಜಿಸಿ ಅಧ್ಯಯನ ಮಾಡಲಾಗಿದೆ. ಕವಿಗಳ ಮೇಲೆ ಉಂಟಾಗಿರುವ ಪ್ರಾಂತೀಯ ಸಂಸ್ಕೃತಿ, ಭಾಷೆ, ಆಚರಣೆಗಳು, ಸಂಪ್ರದಾಯಗಳು - ಇತ್ಯಾದಿಗಳು ಅವರನ್ನು ಇತರರಿಂದ ಪ್ರತ್ಯೇಕಿಸಲು ಕಾರಣವಾಗಿದೆ. ಆದಾಗ್ಯೂ, ಅವರೆಲ್ಲರನ್ನೂ ಒಂದು ಗೂಡಿಸಿರುವ ಸತ್ವ ಸೂತ್ರ ಯಾವುದೆಂಬ ವಿವರಣೆ, ಹುಡುಕಾಟಗಳು ಇಲ್ಲಿ ನಡೆದಿವೆ.

ನವೋದಯ ಕಾವ್ಯದಲ್ಲಿ ಪ್ರಸ್ತಾಪಿತವಾಗಿರುವ ಮುಖ್ಯ ವಿಷಯಗಳು, ಅವುಗಳ ಪರಿಕಲ್ಪನೆಗಳನ್ನು ಚರ್ಚಿಸುವ ಪ್ರಯತ್ನ ಈ ಪ್ರಬಂಧದ ಹೃದಯ ಭಾಗವಾಗಿದೆ. ಈ ಎಲ್ಲ ವಿಷಯಗಳು ನವೋದಯ ಸಾಹಿತ್ಯದ ಲಕ್ಷಣ, ಧ್ಯೇಯ, ಧೋರಣೆಗಳನ್ನು ನಿರೂಪಿಸುವಂತಹವಾಗಿವೆ. 'ನವೋದಯ' ಕಾವ್ಯದಲ್ಲಿ ದಾಖಲಾದ 'ಮಹಾತ್ಮಗಾಂಧಿ'ಯನ್ನು ಕುರಿತ ಚಿಂತನೆಗಳು ಔಚಿತ್ಯಪೂರ್ಣವಾಗಿವೆ.

ಒಟ್ಟಿನಲ್ಲಿ ದೊಡ್ಡರಂಗೇಗೌಡರು ತುಂಬಾ ವ್ಯಾಪಕವಾದ ವಿಷಯವನ್ನು ಆಯ್ಕೆ ಮಾಡಿಕೊಂಡು ದೊಡ್ಡ ಸಾಹಸವನ್ನೇ ಮಾಡಿದ್ದಾರೆ. ಅವರೇ ಹೇಳಿಕೊಳ್ಳುವಂತೆ ಅವರದು ಸಹೃದಯ ವಿಮರ್ಶೆ. ಹೀಗಾಗಿ ಗೌಡರು ಸಾಕಷ್ಟು ಉದಾರಶೀಲ ನೆಲೆಯಲ್ಲಿ ನಿಂತು ಹಿರಿ, ಮರಿಕವಿಗಳಿಬ್ಬರನ್ನೂ ಚರ್ಚಿಸಿದ್ದಾರೆ. ಅವರ ಗುಣವೇ ಅದು. ಯಾರೊಂದಿಗೂ ನಿಷ್ಠುರವಾಗದೆ, ಯಾರ ಮನಸ್ಸನ್ನು ನೋಯಿಸದೆ, ಎಲ್ಲರಲ್ಲೂ, ಎಲ್ಲದರಲ್ಲೂ ಒಳ್ಳೆಯ ಅಂಶಗಳನ್ನಷ್ಟೇ ಗ್ರಹಿಸುವ 'ಹಂಸ'ಗುಣ ಅವರದು.

ಈ ಸಂಪ್ರಬಂಧದಲ್ಲಿ ಒಬ್ಬ ಕವಿ ಇದ್ದಾನೆ, ಸಂಶೋಧಕ, ವಿಮರ್ಶಕ, ಚರಿತ್ರಕಾರನೂ ಇದ್ದಾನೆ. ಬಹುಶಃ ಈ ಸಂಪ್ರಬಂಧ ವಿಶಿಷ್ಟವಾಗಿ ನಿಲ್ಲುವುದು ಪ್ರತಿಯೊಂದು ಅಧ್ಯಾಯಕ್ಕೂ ನೀಡಿರುವ ಕಾವ್ಯಾತ್ಮಕ ಶೀರ್ಷಿಕೆಗಳಿಂದ. ಬರವಣಿಗೆ ಅತ್ಯಂತ ಸರಳವಾಗಿದ್ದು ಅಲ್ಲಿ ನೀಡಿರುವ ಸಂಗ್ರಹಗಳಿಂದ ಇಡೀ ಅಧ್ಯಾಯದ ಸಾರ, ಸತ್ವಗಳು ಪ್ರಕಟಗೊಳ್ಳುತ್ತವೆ. ಹೆಚ್ಚಿನ ವಿವರಣೆಗಳನ್ನು ಬಯಸದೆ ನೇರವಾಗಿ ಲೇಖಕನ ವಿಚಾರಗಳು ಗ್ರಹಿತವಾಗುತ್ತದೆ. ಇದು ಬರವಣಿಗೆಯ ಬಹಳ ಮುಖ್ಯ ಗುಣವಾಗಿದೆ. ಇದು ನವೋದಯ ಕಾವ್ಯವನ್ನು ಕುರಿತಾದ ಸಂಶೋಧನೆಯಷ್ಟೇ ಅಲ್ಲ, ಅಲ್ಲಿನ ಕವಿಗಳ ಮುಖ್ಯ ಗುಣವಾದ ಸಹೃದಯ ವಿಮರ್ಶೆಯಾಗಿದೆ. ನವೋದಯ ಕವಿ-ಕಾವ್ಯಗಳ ಚರಿತ್ರೆಯೂ ಆಗಿದೆ. ಡಾ. ದೊಡ್ಡರಂಗೇಗೌಡರ ಒಟ್ಟು ಸಾಹಿತ್ಯ ರಚನೆಯಲ್ಲಿ ಈ ಕೃತಿ ಮಹತ್ವದ ಕೃತಿಯಾಗಿದೆ. 'ಕನ್ನಡದಲ್ಲಿ ಎಲ್ಲ ಕಾವ್ಯಮಾರ್ಗಗಳೂ ತನ್ನ ಅಬ್ಬರಗಳನ್ನು ಕಳೆದುಕೊಂಡಿವೆ; ಹಾಗೆಂದು ಅವು ಯಾವೂ ಈಗ ಅಸ್ತಿತ್ವದಲ್ಲಿಲ್ಲ ಎಂದು ಅರ್ಥವಲ್ಲ' ಎಂದು ಹೇಳುತ್ತಾ, 'ಭಾವಗೀತೆಗಳ ಹೊನಲು ಮತ್ತೆ ಉಕ್ಕಿ ಬರುತ್ತಿರುವುದು 'ನವೋದಯ ಕಾವ್ಯ ಮಾರ್ಗ'ದ ನೂತನ ಅವತಾರವಾಗಿ 'ಪುನರುತ್ಥಾನ ಪರ್ವ'ವೇ ಪ್ರಾರಂಭವಾಗಿದೆ ಎಂದು

ಅಭಿಪ್ರಾಯಪಡುತ್ತಾರೆ. ನವೋದಯದ 'ರಮ್ಯ ಪ್ರಜ್ಞೆ', ಮನುಷ್ಯನ ಎಂತಹ ವೈಜ್ಞಾನಿಕ ಯುಗದಲ್ಲೂ ಬತ್ತದ 'ಭಾವ ಭಾಗೀರಥಿ'ಯಾಗಿದೆ ಎಂಬ ಅಂಶವನ್ನು ಪ್ರತಿಪಾದಿಸುತ್ತಾರೆ. 'ಭಾವಗೀತೆ', 'ನವೋದಯ', 'ರಮ್ಯತೆ' ಇವೆಲ್ಲಕ್ಕೂ ಸಂಬಂಧ ಕಲ್ಪಿಸುತ್ತ ಆಧುನಿಕ ಯುಗದ ಭಾವಗೀತಾತ್ಮಕ ಸಂವೇದನೆಗಳ ಬಗೆಗೆ ಹುಟ್ಟಿಕೊಂಡಿರುವ ಚರ್ಚೆಗೂ ಸೂಕ್ಷ್ಮವಾಗಿ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ. ಅಡಿಗ, ರಾಮಚಂದ್ರ ಶರ್ಮ ಇವರ ನಿಲುವುಗಳನ್ನು ಪ್ರಶ್ನಿಸಿ ವಾದಿಸಿ, ಕನ್ನಡದಲ್ಲಿ 'ಸುಗಮ ಸಂಗೀತ', 'ಭಾವಗೀತೆ'ಗಳ ಜಗತ್ತು ಹೆಚ್ಚು ಜನಪ್ರಿಯಗೊಳ್ಳಲು ಕಾರಣರಾದ ಕವಿಪರಂಪರೆ ಕನ್ನಡದಲ್ಲುಂಟು. ಇಂತಹ ಪರಂಪರೆಯನ್ನು ಪ್ರೀತಿಸುವ, ಗೌರವಿಸುವ ವರ್ಗವಿರುವ ಹಾಗೆ ವಿರೋಧಿಸುವ ವರ್ಗವೂ ಉಂಟು. ಸದಭಿರುಚಿಯ ಕಾವ್ಯ ಜನಸಾಮಾನ್ಯರನ್ನು ತಲುಪುವ ಸುಲಭ ಮಾರ್ಗವಿದಾಗಿದ್ದು, ಅದನ್ನು ಜನಪ್ರಿಯಗೊಳಿಸುವ ಕವಿಗಳು, ಗಾಯಕರು, ಸಂಗೀತ ನಿರ್ದೇಶಕರಿದ್ದಾರೆ. ಅಂತಹ ಜನಪ್ರಿಯ ವ್ಯಕ್ತಿಗಳನ್ನು ಡಾ. ದೊಡ್ಡರಂಗೇಗೌಡರು ತುಂಬಾ ಗಂಭೀರವಾಗಿ ಪರಿಶೀಲಿಸಿದ್ದಾರೆ.

ಒಟ್ಟಾರೆಯಾಗಿ ನವೋದಯ ಕಾವ್ಯ ಪ್ರಪಂಚದ ಇತ್ಯಾತ್ಮಕ-ನೇತ್ಯಾತ್ಮಕ ಗುಣಗಳು, ಅದರ ಭಾವ ಪ್ರಚೋದಕ ಹಾಗೂ ಬೌದ್ಧಿಕ ನೆಲೆಗಳು, ಆ ಕವಿಗಳು ಕನ್ನಡ ಸಾಹಿತ್ಯ, ಭಾಷೆ, ಸಂಸ್ಕೃತಿಗೆ ಕೊಟ್ಟ ಅನನ್ಯ ಕೊಡುಗೆಗಳನ್ನು ಕೃತಿ ಅಚ್ಚುಕಟ್ಟಾಗಿ ನಿರೂಪಿಸಿದೆ.





# ನೊಂದವರ ಬೆಂದವರ ಸಂವೇದನೆ

● ಡಾ॥ ಚೆನ್ನಣ್ಣ ವಾಲೀಕಾರ

ಗೆಳೆಯ ದೊಡ್ಡರಂಗೇಗೌಡರ ಯುಗವಾಣಿಗೆ ಮುನ್ನುಡಿ ಬರೆಯುತ್ತ ಬೈರಮಂಗಲ ರಾಮೇಗೌಡ, ಸಾಹಿತ್ಯ ಮತ್ತು ಸಿನಿಮಾ ಇವೆರಡರ ಜೊತೆ ನಂಟು ಬೆಳೆಸಿಕೊಂಡಿರುವವರ ಕಾವ್ಯದ ಮೌಲ್ಯಮಾಪನ ನಮ್ಮಲ್ಲಿ ಸರಿಯಾಗಿ ಆಗಿಲ್ಲ, ಎಂದು ಹೇಳಿದ ಮಾತು ಗಮನಿಸುವಂತಿದೆ. ದೊಡ್ಡರಂಗೇಗೌಡರಷ್ಟೇ ಪ್ರಬುದ್ಧ, ಕಲಾತ್ಮಕ ಕಾವ್ಯ ಬರೆದಾಗಲೂ ಜನ ಇವರು ಸಿನಿಮಾಗಳಿಗಾಗಿ ಬರೆದ ಹಾಡುಗಳನ್ನು ನೋಡುವಂತೆ ಪ್ರಬುದ್ಧ ಮತ್ತು ಕಲಾತ್ಮಕ ಹಾಡುಗಳನ್ನು ರಂಜನೀಯವಾಗಿ ತೇಲು ತೇಲಾಗಿ ನೋಡುವುದರಿಂದ ಬೈರಮಂಗಲ ರಾಮೇಗೌಡರು ಹೇಳುವ ಆ ವಿಚಾರ ದೊಡ್ಡರಂಗೇಗೌಡರ ಕಾವ್ಯಕ್ಕಾಗುವುದು.

ಕ್ರಾಂತಿಕಾರಿ ಆಂಧ್ರದ ಕವಿಯಾದ ಗದ್ದರರು, ಸಿನಿಮಾಕ್ಕೆ ಹಾಡು ಬರೆಯುವುದು ಶುರು ಮಾಡಿದಾಗ, ನಿರ್ದೇಶಕನಾಗಿ, ನಟನಾಗಿ, ಲೇಖಕನಾಗಿ ಸಿನಿಮಾಕ್ಕೆ ಕೆಲಸ ಮಾಡುವುದು ನಡೆಸಿದಾಗ ಮತ್ತೊಂದು ಬಗೆಯ ತೊಂದರೆಯನ್ನು ಗದ್ದರ ಎದುರಿಸಬೇಕಾಯಿತು. ಆ ಕ್ರಾಂತಿಕಾರಿ ಚಳುವಳಿಯಿಂದ ಅವರನ್ನೇ ಹೊರ ಹಾಕಲಾಯಿತು. ಹೆಚ್ಚಿನ ಜನರಿಗೆ ಸಿನಿಮಾ ಮಾಧ್ಯಮದಿಂದ ನಮ್ಮ ಕ್ರಾಂತಿಕಾರಿ ಚಳುವಳಿ ವಿಚಾರಗಳನ್ನು ಮುಟ್ಟಿಸುವ ಕೆಲಸ ನಡೆಸಿರುವೆನೆಂದು ಗದ್ದರ ತಿಳಿಸಿದರೂ ಕೆಲ ವರುಷಗಳವರೆಗೆ ಆ ಗುಂಪು ಗದ್ದರ ಅವರ ಮಾತು ಕೇಳಲಿಲ್ಲ. ಅದಕ್ಕವರು ಜನ ನಾಟ್ಯ ಮಂಡಳಿ ಕಟ್ಟಿಕೊಂಡು ಊರೂರು ತಿರುಗುತ್ತಾ ತನ್ನ ವಿಚಾರಗಳನ್ನು ಜನಮನದಲ್ಲಿ ಬಿತ್ತುತ್ತಾ ಹೊರಟರು. ಕೊನೆಗೆ ಗದ್ದರ್ ಅವರ ಸತ್ಯ ಸಂಧತೆ, ನಿಜತನ ಗೊತ್ತಾದಾಗ ಆ ಕ್ರಾಂತಿಕಾರಿ ಚಳುವಳಿ ಗುಂಪು ಹೊರಗೆ ಒಪ್ಪಿಕೊಂಡರೂ ಒಳಗೊಳಗೆ ಗುಸುಮುಸು ಮಾಡುತ್ತಲೇ ಇನ್ನೂ ಇರುವುದು.

ಈ ಕಾರಣದಿಂದ ಬೈರಮಂಗಲ ರಾಮೇಗೌಡರು ಕೊನೆಗೆ ಸಿನಿಮಾ ಕವಿಗೆ ಎಷ್ಟು ಹಣ

ತಂದು ಕೊಡುವುದೋ ಗೊತ್ತಿಲ್ಲ. ಆದರೆ ಜನಪ್ರಿಯತೆ ಶಿಖರಕ್ಕಂತೂ ಏರಿಸುತ್ತದೆ. ಇಂಥ ಅಸೂಯಾಮೂಲವಾದ ಅನಾದರದಿಂದಾಗಿಯೂ ನಿಜಕ್ಕೂ ದೊಡ್ಡರಂಗೇಗೌಡರಿಗೆ ದೊರೆಯಬೇಕಾದ ಪ್ರಚಾರ ದೊರೆಯುವುದಕ್ಕೆ, ಸಿಗಬೇಕಾದ ಪುರಸ್ಕಾರ ಸಿಗದಿರುವುದಕ್ಕೆ ಪ್ರತ್ಯೇಕ ಚರ್ಚೆಯೊಂದರ ಅಗತ್ಯವಂತೂ ಇದ್ದೇ ಇದೆ ಎಂದು ಹೇಳುವ ಮಾತು ಸತ್ಯವೆನಿಸುವುದು. ಆದುದರಿಂದ ಸಿನಿಮಾಕ್ಕೆ ಬರೆದ ಹಾಡುಗಳನ್ನು ಬಿಟ್ಟು ಸಾಹಿತ್ಯವಾಗಿ, ಕಲಾತ್ಮಕವಾಗಿ, ಕವಿ ತಾನೇ ತಾನಾಗಿ, ಯಾರ ಹಂಗಿಲ್ಲದ, ಲಂಗುಲಗಾಮಿಲ್ಲದ ಋಷಿ ಸದೃಶ್ಯನಾಗಿ ಬರೆದ ಹಾಡುಗಳನ್ನು, ಪದ್ಯ, ಕವಿತೆಗಳನ್ನು ತೆರೆದೆದೆಯಿಂದ, ಸಹೃದಯ, ವಿಮರ್ಶಕನ ಕಣ್ಣುಗಳಿಂದ ನೋಡಿ ಮೌಲ್ಯ ಮಾಪನ ಮಾಡುವುದೀಗ ಅಗತ್ಯವೆನಿಸುತ್ತದೆ. ಆಗ ಸಿನೆಮಾ ಕವಿಗಿಂತ ಸಾಹಿತ್ಯ ಕವಿಯಾದ ದೊಡ್ಡರಂಗೇಗೌಡರು ತುಂಬ ವಿಶಿಷ್ಠ ಶಕ್ತಿಯ ಸತ್ವದ ಕವಿಯಾಗಿ ಕಂಡದ್ದನ್ನು ಇಲ್ಲಿ ಅವರ 'ಯುಗವಾಣಿ' ಮೂಲಕ ಸಮಾಲೋಚಿಸಲಾಗಿದೆ.

ಯುಗವಾಣಿಯಲ್ಲಿ ಒಟ್ಟು ಎಪ್ಪತ್ತು ಕವಿತೆಗಳಿವೆ. ಪ್ರಕಾಶಕರಾದ ಗೋವಿಂದಳ್ಳಿ ದೇವೇಗೌಡರು 'ಇಂತಹ ಸಾಮಾಜಿಕ ಕಳಕಳಿಯ ಘಟನೆಗಳನ್ನು ಸರಳವಾಗಿ ಚಿತ್ರಿಸಿ ಸಾಮಾನ್ಯ ಜನರ ಮನಮುಟ್ಟುವಂತೆ, ಮನಬಂಧಿಸುವಂತೆ, ಮನ ಮಿಡಿಯುವಂತೆ ಬರೆಯುವ ಕಲೆಯಲ್ಲಿ ಸಿದ್ಧ ಹಸ್ತರಾಗಿರುವ ಸಹೃದಯ ಸಂಪನ್ನ ದೊಡ್ಡರಂಗೇಗೌಡರು ಜನತೆಯ ಜಡತೆಯನ್ನು ನಿವಾರಿಸುವ ಎದೆಗಾರಿಕೆಯುಳ್ಳ ಕವಿಯಾಗಿದ್ದಾರೆ' ಎಂದು ಹೇಳಿದ್ದನ್ನು ಇಲ್ಲಿ ಕಾಣಬಹುದಾಗಿದೆ.

'ಹೆಜ್ಜೆ ಗುರುತು' ಪದ್ಯದಲ್ಲಿ ಕವಿ ತನ್ನ ಲೇಖನಿ ಎಂಥದ್ದು ಎಂದು ಹೇಳುವ ಮಾತು ಮೆಲುಕು ಹಾಕುವಂತಿದೆ. ''ಗೊಬ್ಬರ ತುಂಬಿದ ಕೈ ಬರೆದ ಮಣ್ಣಿನ ಹಾಡು ನನ್ನದು, ಬೆವರು ಸುರಿಸಿ ಕಷ್ಟದಿ ದುಡಿದ ನೆಲದ ಪದ ನನ್ನದು, ಮುದ್ದೆ ಸೊಪ್ಪಿನ ಸಾರು ಕಂಡ ರೈತರ ಮುದ ನನ್ನದು.''

'ಕಟ್ಟಿಟ್ಟ ಬುತ್ತಿ'ಯಲ್ಲಿ ಜನ ಧನ ಪಿಶಾಚಿಗಾಗಿ ಕಾಡನ್ನು ಕಡಿದು ಮಸಣವನ್ನಾಗಿ ಮಾಡುತ್ತಿರುವುದರ ನೋಟದ ಚಿತ್ರಣ ಇಲ್ಲಿ ಬಂದಿದೆ.

ಮಾಯವಾಯಿತೇ ಬನಗಳ ಬೆಡಗು
ನಾಶವಾಯಿತೇ ಹೂಗಳ ಸೊಬಗು
ಹಸಿರು ವನಸಿರಿ ಹಾಳಾಗಿ
ದಟ್ಟ ಕಾಡುಗಳು ಬೀಳಾಗಿ
ಬರಡಾಯಿತೇ ಪಚ್ಚೆಯ ಒಡಲು?
ಬರಿದಾಯಿತೇ ತಾಯಿಯ ಮಡಿಲು

''ಅನಾಥರು'' ಎಂಬ ಕವಿತೆಯಲ್ಲಿ ಅನಾಥ ಮಕ್ಕಳು ಬೀದಿ ಬದಿಯಲ್ಲಿ ಮಲಗಿ ಗೋಳಾಡುವ ದುಃಖಪಡುವ ಮಕ್ಕಳ ಬಾಳಿನ ಚಿತ್ರಣ ಮನಮುಟ್ಟುವಂತೆ ಇಲ್ಲಿಯ ಕಾವ್ಯದಲ್ಲಿ ಕೆತ್ತಲಾಗಿದೆ. ''ತಂದೆಯು ಯಾರೆಂದು ತಾಯಿಯು ಯಾರೆಂದು ತಿಳಿಯದು, ಈ ಹುಡುಗರು ಮನೆಯೆಂದರೇನೆಂದು ಪ್ರೀತಿಯೆಂದರೇನೆಂದು ಅರಿಯರು. ಈ ಹುಡುಗರು ಬೀದಿಯೇ ಮನೆಯೆಂದು ಸಿಕ್ಕಿದ್ದು ಉಂಡು ತಿಂದು ಎಲ್ಲೆಂದರಲ್ಲಿ ಇವರು ಬಾಳುವರು. ಅವರಿವರು ಕೊಟ್ಟದ್ದೇ ಪರಮಾನ್ನ ಎಂದು ಚಿಂದಿಯ ತೊಟ್ಟರೂ ನಲಿಯುವರು.

ಬಡತನಕ್ಕಾಗಿ ಪಡಬಾರದ ಕಷ್ಟ, ಹಿಂಸೆ, ಸಾವು ನೋವು ಪಡುವವರ ಚಿತ್ರಣ ಕವಿ ದೊಡ್ಡರಂಗೇಗೌಡರು ಓದುಗರು ಕಣ್ಣು ತೆರೆಯುವಂತೆ ಚಿತ್ರಿಸಿದ್ದನ್ನು ಇಲ್ಲಿ ಕಾಣಬಹುದು.

ಬೀದಿಯ ಬದಿಯಲಿ ಸಾವಿರದ ಜೀವಗಳು
ತುತ್ತಿಗೆ ಹುಡುಕಾಡೋ ಹೃದಯಗಳು
ಬಡತನದ ಶಾಪದಲಿ ಬವಣೆಗಳ ಕೂಪದಲಿ
ರೊಟ್ಟಿಗೆ ಅಡವಿಡುವ ಶೀಲಗಳು
ಮೈಯೆಲ್ಲಾ ಮೂಳೆಗಳು ಏನೇನೋ ರೋಗಗಳು
ಪುಷ್ಕಳದೂಟವು ಬರೀ ಕನಸು
ಕೇಳುವವನೇ ಇಲ್ಲ ತಾಳಿಕೊಂಡರೂ ಎಲ್ಲ
ಯಾತನೆಯ ಸಹನೆಯೇ ಇವರುಸಿರ ಮೂಲ.



''ಆದರ್ಶ ಗೀತ'' ಎಂಬ ಹಾಡಿನಲ್ಲಿ ಎಂಥ ಸಮಾಜ ಎಂಥ ಜನಾಂಗ ನಾಡು, ಬೀಡು, ಪ್ರೀತಿ ರೀತಿ ಬೇಕೆಂಬುದನ್ನು ಕವಿ ಎದೆಬಿಚ್ಚಿ ಹೇಳಿದ್ದು ಇಲ್ಲಿ ಬಂದಿದೆ.

ವರ್ಗರಹಿತ ನಾಡು ನೆಮ್ಮದಿಯ ಬೀಡು
ಆದರ್ಶ ಅದುವೆ ಕಾಣೋ
ವರ್ಣ ರಹಿತ ಪ್ರೀತಿ ಮಾನವತೆ ರೀತಿ
ಅದನರಿತು ಮನುಜ ಬಾಳೊ

ಮೂಡೀತೆ ಅಗ್ನಿ-ದಿವ್ಯ?ದಲ್ಲಿ ಕವಿಹೃದಯ ಏನಾಗುತ್ತದೆ ಎಂಬುದು ಹೇಳಿದ್ದು ಕಾಣುತ್ತೇವೆ.

ಅಲ್ಲಿನ ತನಕ ನಾದ ನಾಡಿಯೊಳಗೆ ಅಗ್ನಿಕುಂಡ
ಕೊತ ಕೊತ ಕುದಿಯುತ್ತಿದೆ.

ದುಗುಡ ಹಾಡಾಗಿ ಕವಿ ಹೃದಯದೊಳಗೆ
ಬೆಂಕಿ ಭುಗಿಲಾಗಿ ಹರಿಯುತ್ತಿದೆ.

ಬೈರಮಂಗಲ ರಾಮೇಗೌಡರು ತಮ್ಮ ಮುನ್ನುಡಿಯ ಆರಂಭದಲ್ಲಿ ಹೇಳಿರುವ ಮಾತುಗಳು ಸದಾ ಆಲೋಚಿಸುವಂತಿದೆ. 'ಯಾವುದೇ ಒಂದು ಮಹತ್ವದ ಕೃತಿ ಅಂದಂದಿನ ಸಾಮಾಜಿಕ ಸಂದರ್ಭದಲ್ಲಿಯೇ ಸೃಷ್ಟಿಗೊಳ್ಳುವುದರಿಂದ ಅದು ಅಂದಿನ ಸಮಾಜದ ಆಶೋತ್ತರಗಳು ಪ್ರತಿನಿಧಿಯಾಗಬೇಕಾದದ್ದು ಅನಿವಾರ್ಯ. ಆದ್ದರಿಂದಲೇ ಒಬ್ಬ ಕವಿಯ ಶ್ರೇಷ್ಠತೆ ನಿರ್ಧಾರವಾಗಬೇಕಾದದ್ದು ಅಂದಿನ ಸಮಾಜವನ್ನೂ ಒಳಗೊಂಡಂತೆ ಸಮಗ್ರ ಬದುಕನ್ನೂ, ಸಾಂಸ್ಕೃತಿಕ ಸಂಘರ್ಷಗಳನ್ನೂ ತೀವ್ರ ಸಂವೇದನೆಯಿಂದ ಅವನು ಕಾವ್ಯಾನುಭವವಾಗಿಸಿದ್ದಾನೆಯೇ ಎನ್ನುವುದರ ಆಧಾರದ ಮೇಲೆ' ಈ ಬಗೆಯಲ್ಲಿ ಇಲ್ಲಿಯ ಕೆಲ ಪದ್ಯಗಳು ಬಂದದ್ದು ಕಾಣಬಹುದಾಗಿದೆ.

'ವಠಾರದೊಳಗೆ ವ್ಯಥೆ' ಎಂಬ ಪದ್ಯ ಮಹಾನಗರಗಳ ವಠಾರದ ಜನಗಳ ಕಷ್ಟ ಎಂಥದೆಂಬುದು ಬಂದಿದೆ.

ಹೆಸರಿದ್ದ ನಗರದೊಳಗೆ ಒಂದು ಬಸಿರಾದ ಬಡಾವಣೆ
ಅದರ ಬೀದಿ ಬದಿ ಐದಾರು ವಠಾರ, ಒಂದೊಂದು ಒಂದು ನಮೂನೆ
ಪ್ರತಿಯೊಂದರಲ್ಲೂ ಹಂದಿಗೂಡುಗಳಂಥ ಚಿಂದಿ ಚಿಂದಿ ಮನೆ

ಕೊನೆಯ ಸಾಲಿನಲ್ಲಿ ಇಡೀ ವಠಾರದ ಜನಗಳು ವಾಸಿಸುವ ಬದುಕಿನ ಗೋಳಿನ ದಾರುಣತೆ ಘೋರ ರೂಪ ತಾಳಿ ನಿಂತಿದ್ದು ಕಣ್ಣಿಗೆ ಮುಕುರುವುದು. ಇಂಥ ಹೀನಾಯದ ಪರಿಸ್ಥಿತಿಯಲ್ಲೂ ಜನ ಜೀವಿಸುತ್ತಿರುವುದು ನಗ್ನ ಸತ್ಯ.

ಕಾಲೇಜು ಕ್ಯಾಂಪಸ್ಸಿನಲ್ಲಿ ಏನೇನು ನಡೆಯುತ್ತಿದೆ ಎಂಬುದನ್ನು ಕವಿ ದೊಡ್ಡರಂಗೇಗೌಡರು ಹೀಗೆ ಹೇಳುತ್ತಾರೆ-

ಕಾಲೇಜಿನ ಮೈದಾನದಲ್ಲಿ ಹರೆಯದ ಕುದುರೆಗಳು ಕೆನೆಯುತ್ತಿವೆ
ಬಣ್ಣದ ಚಿಟ್ಟೆಗಳು ಮಿನುಗುತ್ತಿವೆ
ಕಾಲೇಜಿನ ಕಾರ್ಯಾಲಯದಲ್ಲಿ ಯೋಜನೆ ಹಾವುಗಳು ಹರಿಯುತ್ತಿವೆ
ಕರಣಿಕ ಮುಂಗುಸಿಗಳು ಮೆರೆಯುತ್ತಿವೆ.

'ಮೈತ್ರಿ ಗೀತದಲ್ಲಿ' ಸಾರ್ವಕಾಲಿಕ ಸಾರ್ವದೇಶಿಕ ವಿಚಾರ ಬಂದದ್ದು ನೋಡಬಹುದು.

ಸಾವಿರ ಸಾವಿರ ದೇವರ ಗುಡಿಗಳು ಪೂಜೆಯೇ ಇಲ್ಲದೆ ಒಣಗಿರಲು
ಹೊರಟರು ನಮ್ಮಯ ಧರ್ಮದ ತರುಣರು ಹೊಸ ಹೊಸ ಗುಡಿಯನು
ನಿರ್ಮಿಸಲು
ರಾಮದೇಗುಲ ಕಟ್ಟಲು ಹೋಗಿ ರಾವಣನಾಗುವುದೇನು ಚಂದ?
ರಾಮ ರಹೀಮ ಎಲ್ಲಾ ಒಂದೇ ಮಾನವನಾದರೆ ಮೈತ್ರಿ ಬಂಧ

ಡಾ॥ ಅಂಬೇಡ್ಕರ್ ಪದ್ಯದಲ್ಲಿ ದಲಿತರ ಕಗ್ಗತ್ತಲೆ ಖಂಡದ ಸೂರ್ಯವಾದ ಅಂಬೇಡ್ಕರರ ತತ್ವ, ಸಿದ್ಧಾಂತ, ಸಾಧನೆಗಳ ಕುರಿತು ಹೇಳಿದ್ದು ಬಂದಿದೆ.

ದಲಿತ ಜನಕ್ಕೆ ಬೆಳಕನಿತ್ತ ಭಾಗ್ಯದಾತನೇ
ಸಂವಿಧಾನ ಕೊಡುಗೆ ಕೊಟ್ಟ ಪ್ರತಿಭಾವಂತನೇ
ಜಾತಿಭೂತ ಮೆಟ್ಟಿ ನಿಂತ ಜನನಾಯಕನೆ
ಮಣ್ಣಿನಿಂದ ಎದ್ದು ಬಂದ ದೇಶಭಕ್ತನೆ.

ಯುಗವಾಣಿಯು ತಮ್ಮ ನಿವೇದನೆಯಲ್ಲಿ ಕವಿ ದೊಡ್ಡರಂಗೇಗೌಡರು ಹೇಳಿರುವ ಮಾತುಗಳು ಎಲ್ಲಾ ಜನ ಆಲೋಚಿಸುವಂತಿದೆ. 'ಕವಿವಾಣಿ ಯಾವತ್ತೂ ಯುಗವಾಣಿ ಆಗಬೇಕು ಎಂಬುದು ಅಂತರಂಗದ ಅಭೀಪ್ಸೆ. ಜೀವನದ ಎಲ್ಲ ಸಂದರ್ಭಗಳು ಒಂದಲ್ಲ ಒಂದು ರೀತಿಯಲ್ಲಿ ಕವಿಯ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ....' ಸಮಾಜ ಮುಖಿಯಾದ ಕವಿಯ ಕಾವ್ಯವಾಣಿಯೇ ವೈಚಾರಿಕ ಕ್ರಾಂತಿಗೆ ಕಹಳೆಯಾಗಬೇಕು. ಆ ಕೆಲಸವನ್ನು ಇಲ್ಲಿ ಪ್ರಾಮಾಣಿಕವಾಗಿ ಮಾಡಿದ ತೃಪ್ತಿ ನನಗಿದೆ' ಎಂದು ಹೇಳಿದ್ದು ಈ ಕೆಳಗಿನ ಪದ್ಯದಲ್ಲಿ ಅರಿಯಬಹುದಾಗಿದೆ.

'ಹಾಡು ಪಾಡು' ಪದ್ಯ ಕವಿಯ ಒಳದನಿಯಾಗಿ ನೋವಿನ ಕುಂಡವಾಗಿ ಮೂಡಿ ಬಂದಿದ್ದನ್ನು ಇಲ್ಲಿ ಕಾಣಬಹುದು. ''ಬರಿದೇ ಬವಣೆ ಪಲ್ಲವಿಯಾಗಿ ದುಗುಡು.. .. .. ತೂಗುಯ್ಯಾಲೆ ಚರಣವಾಗಿ ಮುಗಿಯದ ಹಾಡು'' ನನ್ನದು. ಒಂದಿದ್ದರೆ ಮತ್ತೊಂದಿರದು ಕೊರಗಿನ ಸ್ವರ ಉಸಿರಾಗಿ ಇಂದಿದ್ದರೆ ನಾಳೆ ಇರದ ಅತಂತ್ರ ಗತಿಯ ಜಿಂದಗಿ.''

'ದಿಕ್ಕು ದೆಸೆ ಇಲ್ಲದವರು' ಪದ್ಯದಲ್ಲಿ ಅನಾಥ ಅಸಹಾಯಕ ಜನಗಳ ಗೋಳು ಕಣ್ಣೀರು ಕಡಲಾಗಿ ಹರಿದದ್ದು ಇಲ್ಲಿ ಕಾಣುತ್ತೇವೆ.

ನೀರಿಂದ ತೆಗೆದ ಮೀನುಗಳೊ ಗಾಳಿ ಹೋದ ಬೆಲೂನುಗಳೋ
ಇಲ್ಲಾ ಇವೆಲ್ಲಾ ಒಟ್ಟಿಗೆ ಪ್ರತಿನಿಧಿಸುವಂಥವರೋ

ಜಗದ ಜಂಜಡವನ್ನೇ ತೋರಿ ಅಣಕಿಸುವವರೋ
ಅಥವಾ ಕಣ್ಣೀರ ಕೋಡಿಗರೆವ ದುಗುಡ ದುಮ್ಮಾನದ ಜೀವಿಗಳೋ
ಯಾರು? ಯಾರಿವರು?
ಯಾವ ಶಾಪಕ್ಕೆ ಗುರಿಯಾದವರಿವರು?
ಎಂದು ಮುಗಿದೀತೋ ಇವರ ಸಂಕಷ್ಟ ಹೋದರು.

''ಜಾಗೃತಿ ಗಾನ''ದಲ್ಲಿ ಜನಜಾಗೃತಗೊಳ್ಳುವ ಕುರಿತು ವಿಚಾರವಾಗಿ ಹೆಚ್ಚಿದ್ದು ನೋಡಬಹುದು.

ಎಲ್ಲೀತನಕ ನೋಡ್ಕೊಂಡಿರೋದು ಮೊಸಳೆ ಕಣ್ಣೀರು ನಾಟಕ
ನಾವು ನೀವು ಎಚ್ಚರ್ತಾದರೆ ಬದಲಾವಣೆಯ ಹೊಸ ಅಂಕ
ಎಲ್ಲೀತನಕ ಸಹಿಸಿಕೊಂಡಿರೋದು ಶೋಷಣೆ ಮಂದಿ ಮುಠ್ಠಾಳತನ
ನಾವು ನೀವು ಎದ್ದು ನಿಂತರೆ ಕಪಿ-ಮುಷ್ಠಿಯ ಉಚ್ಚಾಟನೆ.

''ಭಾರತೀಯ ತರುಣರು'' ಹೇಗೆ ಬಂದರೆಂಬ ಪದ್ಯ ತುಂಬ ಸುಂದರವಾಗಿ ಮನಮುಟ್ಟುವಂತೆ ಕವಿ ಇಲ್ಲಿ ಕಾಣಿಸಿದ್ದು ನೋಡಬಹುದು.

ದಾರಿದ್ರ್ಯದ ಬೀಡಿನಿಂದ ಅಜ್ಞಾನದ ಜಾಡಿನಿಂದ
ವಿಕ್ಷಿಪ್ತತೆ ಮೂಡಿನಿಂದ ವಿಪರ್ಯಾಸ ಹಾಡಿನಿಂದ
ಅತೃಪ್ತಿಯ ಅಳಲಿನಿಂದ
ತಳಮಳದಾ ಭುಗಿಲಿನಿಂದ
ಆಕ್ರಂದನದ ಹೊಲಬಿನಿಂದ ನಿರುದ್ಯೋಗ ಕಂಡು ನೊಂದ
ಭಾರತೀಯ ತರುಣರು
ಬಂದರೋ... ಬಂದರು।

'ದೀವಳಿಗೆ ಮಾಡುವುದೆಂದಿಗೆ' ಎಂಬ ಹಾಡು ಕವಿಯ ಮನದಾಳದಿಂದ ಮೂಡಿದ ಗೀತೆಯಾಗಿದೆ. ಓದುಗರನ್ನು ತನ್ನಾಳಕ್ಕೆ ಎಳೆದುಕೊಳ್ಳುವ ಶಕ್ತಿಯನ್ನು ಹೊಂದಿದೆ.

ಅನಾದಿ ಕಾಲದ ಮೂಲದಿಂದಲೂ-
ಅವಿಚಾರಗಳೇ ಹೆಡೆ ಎತ್ತಿ ಬೀಗಿರಲು
ಅಗಣಿತ ಮೌಢ್ಯಗಳಿಗೇ ಮಣೆಯ ಹಾಕಿರಲು

ವ್ಯಕ್ತಿ ಪೂಜೆಗೆ ಮಹಾಜನತೆ ಮಾರು ಹೋಗಿರಲು
ಜರ್ಜರವಾಗಿಹ ಮುಗ್ಧರ ಪಾಲಿಗೆ
ಹೊಸ ದೀವಳಿಗೆ ಮೂಡುವುದೆಂದಿಗೆ?

''ಮೌನ ಸಾಕ್ಷಿ' ಕವಿತೆ, ಕವಿಯ ಪೆನ್ನಿಗೆ ಇರುವ ಸೆಲ್ಫ್ ಶಕ್ತಿ ತೋರಿಸುವುದು.

ತುಂಬಿ ತುಳುಕಿಹರು ಸುತ್ತ ವಂಚಕರು
ನೆಮ್ಮದಿಯೇ ಇಲ್ಲ ಜನಕೆ
ಹೆಚ್ಚಿಕೊಂಡಿಹರು ಲಂಚ ಕೇಳುಗರು
ಏಳ್ಗೆಯಿಲ್ಲ ಸಮುದಾಯಕೆ
ಎಲ್ಲೇ ಇದ್ದರೂ ಸ್ವಾರ್ಥ ಸಾಧಕರು
ಹೆಗ್ಗಣಗಳಾಗಿ ಕೊಬ್ಬಿ
ನಿತ್ಯ ನಿತ್ಯವೂ ಮಾಂಸ ಭಕ್ಷಕರು
ಹಾದರದ ಮೈಯ ತಬ್ಬಿ...

ಹೂ ಮುಡಿಯದ ಹೆಣ್ಣಿಲ್ಲ, ಮೋಸ ಮಾಡದ ಗಂಡಿಲ್ಲದ ನಗರದಲ್ಲಿ ವಾಸ ಮಾಡುವ ಕವಿಗಳು ಏನು ನೋಡಿಲ್ಲ? ಏನು ಕಂಡಿಲ್ಲ? ಎಷ್ಟು ಕಷ್ಟ ನಷ್ಟ ಕಷ್ಟ ಕಾರ್ಪಣ್ಯ ಅನುಭವಿಸಿಲ್ಲ? ಇಂಥ ಕವಿತೆಗಳು ಬಂದದ್ದು, ಕಾಡಿದ್ದು, ಹಾಡಿದ್ದು.

ನಿಜಕ್ಕೂ ದೊಡ್ಡರಂಗೇಗೌಡರು ನೋವಿನ, ಬಡವರ, ಜನಪರ ಕವಿ ಎಂಬ ಮಾತು ಅವರ ಪ್ರತಿ ಪದ್ಯದಲ್ಲೂ ಕಾಣಬಹುದಾಗಿದೆ. 'ಲೂಟಿ' ಎಂಬ ಪದ್ಯದಲ್ಲಿ ಬಂದಿರುವ ಈ ಸಾಲುಗಳು ಧ್ವನಿಸುವುದು.

ಆಸೆ ನಾಲಗೆಗಳು ಕತ್ತಿಗಳಾಗಿ
ದುರ್ಜನ ದುರಾಸೆ ದುರ್ದಂತಗಳಾಗಿ
ಉರುಳಿವೆ ಹಸಿರಿನ ನೂರಾರು ಮರಗಿಡ
ನಡುಗಿದೆ ಉಡುಗಿದೆ ಸಮೃದ್ಧಿಯ ಬುಡ...
ರಾಜಕಾರಣದ ರಾಕ್ಷಸರೆದ್ದು
ರಾತ್ರೋರಾತ್ರಿ ನೀತಿ ನಿಯಮವನೊದ್ದು–
ಕರಗಿದೆ ಅಕ್ಷಯ ಪ್ರಕೃತಿಯ ಬಂಗಾರದ ಕೊಡ।

ಕಡು ಬಡತನದಿಂದ ಬಂದಂಥ ಕವಿ, ರಾತ್ರಿ ಹೊತ್ತು ಆರ್‌ಎಂಎಸ್‌ದಲ್ಲಿ ಕೆಲಸ ಮಾಡಿ ಹಗಲು ಬಿ.ಎ., ಎಂ.ಎ. ಅಧ್ಯಯನ ಮಾಡಿ ಕನ್ನಡದ ಪ್ರಾಧ್ಯಾಪಕರಾಗಿ, ಲೇಖಕರಾಗಿ, ಕವಿಗಳಾಗಿ ಸಿನಿಮಾದ ಗೀತರಚನಕಾರರಾಗಿ ನಾಡಿನಾದ್ಯಂತ ಸರ್ವರ ಪ್ರೀತಿ ಆದರಗಳಿಗೆ ಪಾತ್ರರಾದ ದೊಡ್ಡರಂಗೇಗೌಡರ ಯುಗವಾಣಿ ಹೆಸರಿಗೆ ತಕ್ಕಂತೇ ಯುಗದ ಧ್ವನಿಯಾಗಿದೆ. ನೊಂದವರ, ಬೆಂದವರ, ಸಂವೇದನೆಯಾಗಿದೆ. ಬದುಕು ಬರಹ ಒಂದಾದ ಈ ಕವಿಗೆ ತಕ್ಕ ಸತಿ ತಂಗಿ ಕೆ. ರಾಜೇಶ್ವರಿಯವರು ತುಂಬ ಸರಳ, ಸಜ್ಜನಿಕೆಯ ಆದರ್ಶದ ಈ ದಂಪತಿಗಳಂತೆ ಅವರ ಮಕ್ಕಳೂ ತಾಯ್ತಂದೆಗಳಂತೆ ಇರುವ ಇಡೀ ಕುಟುಂಬ ಧರ್ಮದಿಂದ, ಕಾವ್ಯ ಧರ್ಮದಿಂದ ತುಂಬಿಕೊಂಡದ್ದು ಅವರ ಮನೆಗೆ ಹೋಗುವರೆಲ್ಲರೂ ಬಲ್ಲರು.

ಪರ್ತಕರ್ತರಾದ ಎನ್. ಅರ್ಜುನ್‌ದೇವ್ ಅವರು 'ಪ್ರಸಕ್ತ ಕೃತಿ - ಯುಗವಾಣಿ' ಪ್ರಚಲಿತ ಸಮಾಜಕ್ಕೆ ಹಿಡಿದ ಕನ್ನಡಿ ಎಂದದ್ದು ನೂರಕ್ಕೆ ನೂರು ಸತ್ಯದಿಂದ ಕೂಡಿದೆ. ಇನ್ನೂ ವಯಸ್ಸಿನ ಮಧ್ಯಭಾಗದಲ್ಲಿರುವ ದೊಡ್ಡರಂಗೇಗೌಡರಿಂದ ಇನ್ನೂ ಮಹತ್ವದ ಕೃತಿಗಳು ಬರಲು ಅನುಮಾನವಿಲ್ಲ.








# ದೊಡ್ಡರಂಗೇಗೌಡರ ಕವಿತೆಗಳಲ್ಲಿ ಸಾಮಾಜಿಕ ಅರಿವು

• ಪ್ರೊ॥ ಎಂ.ಎಲ್ ನರಸಿಂಹಮೂರ್ತಿ

ತಾವು ಬರೆದಿರುವುದು ಸಾಮಾನ್ಯ ಜನರಿಗೂ ಅರ್ಥವಾಗುವಂತೆ, ಸರಳವಾದ ಭಾಷೆಯಲ್ಲಿ ಅಭಿವ್ಯಕ್ತಗೊಳಿಸಬಲ್ಲ ಕಾವ್ಯಕಲೆಯುನ್ನು ಕವಿ ದೊಡ್ಡರಂಗೇಗೌಡರು ಕರತಲಾಮಲಕವಾಗಿಸಿಕೊಂಡಿದ್ದಾರೆ. ಇದು ಅವರ ಕಾವ್ಯ ಸೃಷ್ಟಿಯ ಮಿತಿ ಹಾಗೂ ಸಾಮರ್ಥ್ಯ ಎನ್ನಬಹುದು. ಅವರು ಹಳ್ಳಿಗಾಡಿನಲ್ಲಿ ಹುಟ್ಟಿದವರು. ಅಲ್ಲಿನ ಪ್ರಕೃತಿ ಸೆಳೆತ, ಹೊಲಗದ್ದೆ ತೋಟಗಳಲ್ಲಿ ಬೆವರು ಸುರಿಸುತ್ತ ದುಡಿಯುವ ಕಾಯಕ ಜೀವಿಗಳ ಮಿಳಿತಗಳ ನಡುವೆ ಬಾಲ್ಯದ ಅನುಭವಗಳನ್ನು ತುಂಬಿಕೊಂಡವರು. ಅವರ ಉಮ್ಮಳ, ನಿರಾಳ, ಪ್ರಾಮಾಣಿಕತೆಯನ್ನು ಬಲ್ಲವರು, ಬಾಳಿದವರು. ಆದ್ದರಿಂದ ಆ ನೆನಪಿನ ಸವಿಯೆ ಅವರ 'ಹೆಜ್ಜೆ ಗುರುತು'ಗಳಾಗಿ ಮೂಡಿಬಂದಿದೆ.

ಗೊಬ್ಬರ ತುಂಬಿದ ಕೈ ಬರೆದ
ಮಣ್ಣಿನ ಹಾಡು ನನ್ನದು
ಮುದ್ದೆ ಸೊಪ್ಪಿನ ಸಾರು ಕಂಡ
ರೈತನ ಮುದ ನನ್ನದು!

ಎಂದು ಕವಿ ಯಾವುದೇ ಸಂಕೋಚವಿಲ್ಲದೆ ಮುಕ್ತವಾಗಿ ಹೇಳಿಕೊಂಡಿದ್ದಾರೆ. ಅವರ ಋಜುತನ ಮೆಚ್ಚುವಂಥದು. ಆತ್ಮಸಾಕ್ಷಿಯುಳ್ಳ ಇತರರು ಯೋಚಿಸುವಂಥದು.

ಕವಿ ಸಮಾಜದ ಒಂದು ಘಟಕವಾಗಿರುವುದರಿಂದ ತನ್ನ ಸುತ್ತಮುತ್ತಲ ಆಗುಹೋಗುಗಳನ್ನು ಕುತೂಹಲದಿಂದ ಗಮನಿಸುತ್ತಿರುತ್ತಾನೆ. ಅದು ಬುದ್ಧಿಯ ಹಿಡಿತ ಮತ್ತು ಕರುಳಿನ ಮಿಡಿತದಿಂದ ಹದವಾಗಿ ಮುದವಾಗಿ ಬೆರೆತಾಗ ಕಾವ್ಯ ತರಂಗಗಳನ್ನು ಹಬ್ಬಿಸುವುದು. ಇದನ್ನೇ ಕುವೆಂಪು

ಅವರು 'ಬುದ್ಧಿ ಭಾವಗಳ ವಿದ್ಯುದ್ದಾಲಿಂಗನ' ಎಂದು ಕರೆದಿದ್ದಾರೆ. ಸಾಮಾಜಿಕ ಅರಿವು ಇರುವ ಕವಿ ಎಲ್ಲೆಲ್ಲೂ ಯಾವಾಗಲೂ ಎಲ್ಲವೂ ಹಸನಾಗಿರಬೇಕೆಂದು ಸಹಜವಾಗಿಯೆ ಬಯಸುತ್ತಾನೆ. ಇಂಥ ಮನೋಭಾವದವರಿಗೆ ಸಲ್ಲದ್ದನ್ನು ಕಂಡಾಗ ಸಾತ್ವಿಕವಾದ ಸಿಟ್ಟು, ತಳಮಳ ಉಂಟಾಗುವುದು. ಅದನ್ನು ಕಾವ್ಯರೂಪದಲ್ಲಿ ನೀಡುವಾಗ ಸಾಮಾಜಿಕ ಅರಿವು ಆಂತರಿಕ ಸತ್ವವಾಗುತ್ತದೆ.

ಈ ಎಲ್ಲ ಮಾತುಗಳ ಹಿನ್ನೆಲೆಯಲ್ಲಿ ಕವಿ ದೊಡ್ಡರಂಗೇಗೌಡರ ಕವಿತೆಗಳಲ್ಲಿರುವ ಸಾಮಾಜಿಕ ಅರಿವನ್ನು ಗುರುತಿಸುವ ಪ್ರಯತ್ನವೇ ಈ ಲೇಖನದ ಉದ್ದೇಶವಾಗಿದೆ. ಅವರ ಅಸಂಖ್ಯಾತ ಕವಿತೆಗಳನ್ನು ಗಮನದಲ್ಲಿರಿಸಿಕೊಂಡು ಲೇಖನ ಸಿದ್ಧಪಡಿಸುವುದು ಕಷ್ಟಸಾಧ್ಯವಾದ್ದರಿಂದ, ಒಂದು ಪರಿಮಿತಿಗೆ. ಸೀಮಿತಗೊಳಿಸಿಕೊಳ್ಳುವ ಸಲುವಾಗಿ 'ಗೆಯ್ಮೆ' ಕವನ ಸಂಗ್ರಹದಲ್ಲಿರುವ ಕೆಲವು ಕವಿತೆಗಳನ್ನು ಮಾತ್ರ ಆರಿಸಿಕೊಂಡಿದ್ದೇನೆ.

ಹಸಿರು ನಮ್ಮ ಉಸಿರು. ಆದರೆ ಮನುಷ್ಯನ ಸ್ವಾರ್ಥದಿಂದಾಗಿ ಹಸಿರು ಕಣ್ಮರೆಯಾಗುತ್ತಿದೆ. ಪ್ರಕೃತಿ ಸಿರಿ ಬಂಜರಾಗುತ್ತಿದೆ. ಅದರ ಪರಿಣಾಮವಾಗಿ ಶುದ್ಧಗಾಳಿ, ಮಳೆ ಬೆಳೆಯಿಂದ ವಂಚಿತರಾಗುತ್ತಿದ್ದೇವೆ. ಕಂಡ ಮರಗಳನ್ನು ಕಡಿದು ಆರಣ್ಯನಾಶ ಮಾಡಲಾಗುತ್ತಿದೆ. ಕಾಡು ಕಡಿದು ನಾಡು ಕಟ್ಟುವ ಬಯಕೆಯಿಂದ ಕಾಂಕ್ರಿಟ್ ಕಾಡು ನಿರ್ಮಾಣಗೊಳ್ಳುತ್ತಿದೆ. ವೈಭವದ ಪೀಠೋಪಕರಣಗಳಿಗಾಗಿ ಮರಗಳನ್ನು ಕಡಿಕಡಿದು ಉರುಳಿಸಲಾಗುತ್ತಿದೆ. ಇದನ್ನು ವೈಜ್ಞಾನಿಕವಾಗಿಯೂ ಪರಿಶೀಲಿಸಿರುವ ಗೌಡರು ಪರಿಸರದ ಉಳಿವಿನ ಬಗ್ಗೆ ಕಾಳಜಿವಹಿಸಿ ಕಟ್ಟಿಟ್ಟ ಬುತ್ತಿ' ಕವಿತೆಯಲ್ಲಿ

ಮಾಯವಾಯಿತೆ ಬನಗಳ ಬೆಡಗು?
ನಾಶವಾಯಿತೆ ಹೂಗಳ ಸೊಬಗು?

ಹಸಿರು ವನಸಿರಿ ಹಾಳಾಗಿ
ದಟ್ಟ ಕಾಡುಗಳು ಬೀಳಾಗಿ
ಬರಡಾಯಿತೆ ಪಚ್ಚೆಯ ಒಡಲು?
ಬರಿದಾಯಿತೆ ತಾಯಿಯ ಮಡಿಲು?

ಎಂದು ನೊಂದು ನುಡಿದಿದ್ದಾರೆ. ಅದಕ್ಕೇ ಪ್ರತಿಫಲವಾಗಿ ಮನುಕುಲ 'ಮಾಡಿದ್ದುಣ್ಣೋ ಮಹರಾಯ' ಎಂಬಂತೆ ನಾನಾ ವಿಪತ್ತುಗಳಿಗೆ ಗುರಿಯಾಗುತ್ತಿದೆ. ದಿನೇ ದಿನೇ ಜನರು ಚಡಪಡಿಸುತ್ತಿದ್ದಾರೆ.

ಇಂಗಿವೆ ಪನ್ನರ್ತೀ ಬತ್ತಿ
ಕಟ್ಟಿದೆ ತಾಯಿಯ ಶಾಪದ ಬುತ್ತಿ!

ಎಂದಿರುವ ಕವಿ 'ಶಾಪದ ಬುತ್ತಿ' ಪದದ ಮೂಲಕ ಮನುಕುಲದ ಭವಿಷ್ಯಕ್ಕೆ ಭಾಷ್ಯ ಬರೆದಿದ್ದಾರೆ.

ಹಾಳು ಮಾಡುವವರ ನಡುವೆ ಬಾಳು ಕೊಡುವವರೂ ಇದ್ದಾರೆ. ಅಂಥವರನ್ನು ಗುರುತಿಸಿ ಕವಿಕೊಟ್ಟ ಕರೆಯ ರೂಪದಲ್ಲಿ

ಅನ್ನ ತಿನ್ನುವ ಮಣ್ಣಿನ ಮಗನೇ ನೀನು?
ಬನ್ನ ಬಂದಿದೆ ಕಾಡಿಗೆ ನೋಡಿರುವೆಯೇನು?

ಬೋಳು ಬೋಳಾಗಿಹುದು ಕಾಡಿನ ಒಡಲು
ಬಾಳಿ ಬದುಕಬೇಕಿದ್ದರೆ, ಗಿಡನೆಡು ಮೊದಲು

ಎಚ್ಚರಿಕೆ ನೀಡಿದ್ದಾರೆ. 'ಅನ್ನತಿನ್ನುವ' ಎಂಬ ಪಡೆನುಡಿಯನ್ನು ಬಹಳ ಹರಿತವಾಗಿ ಬಳಸಿಕೊಂಡಿದ್ದಾರೆ. ಗ್ರಾಮೀಣರು ಎಚ್ಚರಗೇಡಿಗಳನ್ನು ಕುರಿತು 'ಹೊಟ್ಟೆಗೆ ಅನ್ನ ತಿನ್ತೀಯೋ, ಏನ್ ತಿನ್ತೀಯಾ' ಎಂದು ಛೇಡಿಸುವುದುಂಟು.

ನಮ್ಮ ಸಾಮಾಜಿಕ ಪರಿಸ್ಥಿತಿಗೆ ಆಡಳಿತ ನಡೆಸುವವರೂ ಹೊಣೆಗಾರರು. ಆದ್ದರಿಂದ ಸಮಾಜ ಮತ್ತು ರಾಜಕಾರಣವನ್ನು ಬೇರೆ ಬೇರೆಯೆಂದು ಪರಿಭಾವಿಸುವುದು ಎಂದಿಗೂ ಸರಿಯಲ್ಲ. ಜನಪ್ರತಿನಿಧಿಗಳಾದವರು ಕಾಯಾವಾಚಾಮನಸಾ ಬದ್ಧರಾಗಿ ತಂತಮ್ಮ ಕ್ಷೇತ್ರಗಳ ಜನತೆಯ ಅಭಿವೃದ್ಧಿಗಾಗಿ ಶ್ರಮಿಸಬೇಕು. ಆದರೆ ನಡೆಯುತ್ತಿರುವುದೇನು?

ಚುನಾವಣೆಗಳು ಬಂದಾಗ ಮತಯಾಚಿಸಲು ಬಂದವರು
ಆಸೆ ಆಮಿಷ ತೋರುವ ಖಾದಿಜನ, ಬಣ್ಣದ ಮಂದಿ, 'ಮುಖವಾಡದವರು'
ಬೆಣ್ಣೆ ಮಾತುಗಳನ್ನಾಡುತ್ತಾ ಅವರನಿವರ ಆಡಿಕೊಂಡು ತಾವು ಒಳ್ಳೆಯವರೆಂದರು
ಸಾವಿರ ಸುಳ್ಳು ಹೇಳಿ ಇವರು ಮತ್ತೆ ಮತವ ಬೇಡಿದರು'!

ಸೂರಿರದ ಕಡೆ ನಾವು ಒದ್ದಾಡುವಾಗ ಎಲ್ಲಿದ್ದರು ಈ ಮಹನೀಯರು?
ನೀರಿರದೆ ನಾವು ಗುದ್ದಾಡುವಾಗ ಎಲ್ಲಿದ್ದರು ಈ ಗಣ್ಯರು?
ಮೂಲಭೂತಗಳು ಇಲ್ಲದಾಗ ಎಲ್ಲಿದ್ದರು ಈ ಮುಖಂಡರು?
ದೀಪವಿರದೆ ಎಡವುವಾಗ ಹೋಗಿದ್ದರೆಲ್ಲಿ ಜನನಾಯಕರು?

ಇಲ್ಲಿ ಬಳಕೆಯಾಗಿರುವ ಮಹನೀಯರು, ಗಣ್ಯರು, ಮುಖಂಡರು, ಜನನಾಯಕರು ಶಬ್ದಗಳು ವ್ಯಂಗ್ಯದ ಲೇಪನವನ್ನು ಪಡೆದು ಬಳಕೆಯಾಗಿರುವುದನ್ನು ಗಮನಿಸಿದರೆ, 'ಕವಿ ಜನಮನದ ಪ್ರತಿನಿಧಿ' ಎಂಬ ಮಾತು ಸತ್ಯವಾಗಿ ಕಾಣುತ್ತದೆ. 'ಆರಿಸಿ ಕಳುಹಿಸೆ ಮತ್ತೈದು ವರುಷ ಖಂಡಿತಾ ನಮ್ಮನ್ನು ನೋಡರು' ಎಂಬುದು ಜನಪ್ರತಿನಿಧಿಗಳ ಕಾರ್ಯ ಶೈಲಿಗೆ ಹಿಡಿದ ಕನ್ನಡಿಯಾಗಿದೆ.

ಅವರು ಮಾಡುವುದಿಷ್ಟೇ 'ಜಾತಿ, ಧರ್ಮ, ಪಕ್ಷ ನೋಡಿ / ಇದ್ದ ಊರ ವಿಭಾಗ ಮಾಡಿ / ಚುನಾವಣೆಯ ಹುರುಡಿನಲ್ಲಿ / ಒಣ ಪ್ರತಿಷ್ಠೆ ಕುರುಡಿನಲ್ಲಿ/ ರಾಜಕೀಯ ದುಷ್ಟ ಹುಚ್ಚಿಗೆ / ಒಳಿತಿಗಿಂತ ಕೆಡುಕು ಹೆಚ್ಚಿಗೆ!' ಅವರಿಗೆ 'ಸತ್ಯ' ಶಬ್ದ ಅರ್ಥ ಮಹತ್ವ ತಿಳಿಯದು. ತಿಳಿದಿದ್ದರೂ ಜಾಣ ಕುರುಡು, ಜಾಣ ಮೌನ, ಜಾಣ ಕಿವುಡು 'ಗೆದ್ದರೂ ಸತ್ಯ ಹೇಳಲಿಲ್ಲ'

ಅಧಿಕಾರ ಸಿಕ್ಕರೂ ತಾಳ್ಮೆಯಿಲ್ಲ
ತಿನ್ನದ ಜನಕೆ ಏಳ್ಗೆಯಿಲ್ಲ
ಎಂದು ತಿಂದುತೇಗಿ ದೇಶವೆಲ್ಲ
ಸಾಲದ ಹೊರೆಯಲಿ ನರಳುತಿಹುದಲ್ಲ!

ರಾಜಕಾರಣಿಗಳಿಗೆ ಭ್ರಷ್ಟಾಚಾರವೇ ಜೀವನ ವಿಧಾನವಾಗಿರುವ ಪರಿಯನ್ನು ತಿಳಿಸುತ್ತಲೇ ಅದರ ಫಲವನ್ನು ಪ್ರಜೆಗಳು ಸಾಲದ ಹೊರೆಯ ರೂಪದಲ್ಲಿ ಹೊರಬೇಕಲ್ಲ, ಯಾರೊ ಮಾಡುವ ತಪ್ಪಿಗೆ ಮತ್ತಾರಿಗೊ ಶಿಕ್ಷೆ. ಕವಿಯ ಒಳಗುದಿ ಕವಿತೆಯ ಮುಖೇನ ಎಲ್ಲವನ್ನೂ ಹೊರಹಾಕಿದೆ.

ರಾಜಕಾರಣಿಗಳು ಸೃಷ್ಟಿಸುವ ಹಗರಣಗಳು ದೊಡ್ಡವರೆಂದು ಭಾವಿಸಿಕೊಂಡಿರುವವರ ನೈತಿಕ ಪತನದ ನೀಲಿ ನಕಾಶೆಗಳು. ಅಂಥ ಹಗರಣಗಳಲ್ಲೊಂದಾದ ಹವಾಲಾ ಹಗರಣವನ್ನು ತರಾಟೆಗೆ ತೆಗೆದುಕೊಂಡು 'ಗುಮ್ಮನ ಗೂಳಿ' ಕವಿತೆಯಲ್ಲಿ ಕಟುವಾಗಿ ವಿಡಂಬಿಸುತ್ತ, ಇಂಥವನ್ನು ಹೀಗೆ ಪುನರಾವರ್ತನೆಗೊಳ್ಳಲು ಬಿಡಬಾರದೆಂದು ತಿಳಿಸುತ್ತ-

ದೇಶದ ಹೃದಯ ಸೀಳಿ ಸ್ತಬ್ಧವಾಗುವ ಮುನ್ನ
ಅನ್ಯಾಯ ಮತ್ತಷ್ಟು ಕೊನರುವ ಮುನ್ನ
ಹೊಸ ಸಂದೇಶ ಮೇಳ ನಡೆಯುವ ಮುನ್ನ
ಹಾಕೋಣ ಬನ್ನಿ ಕೊಬ್ಬಿದ ಗೂಳಿಗೆ ಬೆಂಡೆತ್ತುವ ಗುನ್ನ!

ಎಂದಿರುವರು, ಜನಮನದ ಮೌನಕ್ಕೆ ಮಾತು ಕೊಟ್ಟು ಜನಾಭಿಪ್ರಾಯವನ್ನು ಒಗ್ಗೂಡಿಸಿ ಹೇಳಿದ್ದಾರೆ. ನಗರ, ಪಟ್ಟಣಗಳಲ್ಲಿ ಎಲ್ಲೆಂದರಲ್ಲಿ ಎದುರಾಗುವ 'ಅನಾಥರು', 'ದಿಕ್ಕು ದೆಸೆ

ಇಲ್ಲದವರು' ನಮ್ಮ ಸಮಾಜದ ಜನರ ಅವ್ಯವಸ್ಥಿತ ಜೀವನಕ್ಕೆ ಜೀವಂತ ಸಾಕ್ಷಿಗಳು. ಇಂಥವರನ್ನು ಕಂಡು ಕವಿ ಕರುಳು ಮರುಗಿದೆ, ಕೊರಗಿದೆ, ಚಿಂತನೆ ಮಾಡಿದೆ.

ತಂದೆ, ತಾಯಿ ಯಾರೆಂದು ತಿಳಿಯದು; ಮನೆಯೆಂದರೇನೆಂದು, ಪ್ರೀತಿಯೆಂದರೇನು ಅರಿಯರು; ಓದೆಂದರೇನೆಂದು ಬರಹವೆಂದರೇನೆಂದು ಅರಿಯರು. ಬೀದಿಯೇ ಮನೆಯೆಂದು ಸಿಕ್ಕಿದ್ದ ಉಂಡುತಿಂದು, ಎಲ್ಲೆಂದರಲ್ಲಿ ಇವರು ಬಾಳುವರು.

ನೂರೆಂಟು ರೀತಿಯಲಿ ಬದುಕಲು ಹೆಣಗಾಡಿ
ರೋಗ ರುಜಿನದಲ್ಲೇ ನರಳುವರು
ಮಳೆಯಲ್ಲಿ ಕೆಸರಲ್ಲಿ ಉರಿಯುವ ಬಿಸಿಲಲ್ಲಿ
ಜಾಗ ಇದ್ದಲ್ಲೇ ಹೊರಳುವರು
ಹೊಟ್ಟೆ ಪಾಡಿಗೆ ತಾವು ಉಸಿರಿರುವ ತನಕ ಒದ್ದಾಡುವರು.

'ಅನಾಥರು' ಕವಿತೆಗೆ ಪೂರಕವಾದುದು 'ದಿಕ್ಕುದೆಸೆ ಇಲ್ಲದವರು' ಕವಿತೆ. ಇದರ ಪ್ರಾರಂಭದಲ್ಲಿಯೇ ಬರುವ 'ನೀರಿಂದ ತೆಗೆದ ಮೀನುಗಳೋ? ಗಾಳಿ ಹೋದ ಬೆಲೂನುಗಳೋ' ಎಂಬ ಸಾಲುಗಳು ಅವರ ಚಡಪಡಿಕೆ, ಅವ್ಯವಸ್ಥೆಯನ್ನು ತಿಳಿಸುತ್ತವೆ. ಅವರ ಬದುಕು

ಹಳಿತಪ್ಪದ ರೈಲಿನಂತೆ
ಎಲ್ಲೆಲ್ಲೋ ಮುರಿದುಬಿದ್ದವರು
ನೆಲೆಯಿರದೆ ಚೆದರುವ ಮೋಡಗಳಂತೆ.
ಬವಣೆ ಬೆಟ್ಟ ಹೊತ್ತು ಮುಗಿಲತ್ತ ದಿಟ್ಟಿನೆಟ್ಟಿಹರು

ಇಂಥ 'ನಿರಾಶ್ರಿತರು' ಕವಿಯ ಅಂತಃಕರಣಕ್ಕೆ ಕಾಣುವ ರೀತಿ ಮಾನವೀಯತೆಯನ್ನು ಮೊಳಗಿಸಿದೆ.

ನಮ್ಮ ಅಣ್ಣ ತಂಗಿಯರು ನಮ್ಮ ಅಕ್ಕತಮ್ಮಂದಿರು
ನಿರಾಶ್ರಿತರು, ಹುಟ್ಟಿದಂದಿನಿಂದ ಕೊನೆತನಕ
ಕೊರಗುತ್ತಲೇ ಮಣ್ಣಿಗೆ ಹೋಗುವವರು.

ಈ 'ವಂಚಿತರ ವ್ಯಥೆ' ತಿರುತಿರುಗಿ ನೆನಪಾಗಿ, ಕರುಳು ಕೂಗಲುತೊಡಗಿ ಅರಳಿಕೊಂಡವು ಮಾತು. 'ಬೀದಿಯ ಬದಿಯಲ್ಲಿ / ಸಾವಿರದ ಜೀವಿಗಳು / ತುತ್ತಿಗೆ ಹುಡುಕಾಡೋ ಹೃದಯಗಳು; / ಬಡತನದ ಶಾಪದಲಿ / ಬವಣೆಗಳ ಕೂಪದಲಿ / ರೊಟ್ಟಿಗೆ ಅಡವಿಡುವ ಶೀಲಗಳು!' ಹೊಟ್ಟೆಪಾಡಿಗಾಗಿ ಹೆಣ್ಣುಗಳು ಶೀಲವನ್ನು ಒತ್ತೆಯಿಡುವ ಹಂತಕ್ಕೆ ತಲುಪಿರುವುದು ಆಕೆಯ

ನಿಸ್ಸಹಾಯಕತೆಯನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುವ ನಯವಂಚಕರು, ಅವಕಾಶವಾದಿಗಳು, ಶೋಷಕರು ರೂಢಿಸಿಕೊಂಡಿರುವ ವಿಷ ವ್ಯಕ್ತಿತ್ವ, ಸಮಯ ನೋಡಿ ಕತ್ತು ಕೊಯ್ಯುವ ಕಾರ್ಯದಲ್ಲಿ ಮುಂದಾಗುವವರ ನೀಚತನವನ್ನೂ ತೋರಿಸುತ್ತದೆ.

ಇವನ್ನು ನಿಯಂತ್ರಿಸಲು ಹಲವಾರು ಯೋಜನೆಗಳು ಪರಿಹಾರ ರೂಪದಲ್ಲಿವೆಯಾದರೂ, ಮಧ್ಯವರ್ತಿಗಳ ಕೈಚಳಕದಿಂದ ತಲುಪಬೇಕಾಗಿದ್ದವರನ್ನು ತಲುಪುತ್ತಿಲ್ಲ.

ಮೇಧಾವಿ ಮೆದುಳುಗಳು
ಯೋಜನೆಯ ಹಾಕಿದರೂ
ಯಾವುದೂ ಇವರಿಗೆ ನೆರವೇ ಇಲ್ಲ;
ಹುಳದಂತೆ ಬಾಳಿಹರು ಮಂದಿಯೆಲ್ಲಾ!

ಎಂಬ ಮಾತುಗಳಲ್ಲಿ ಸರಕಾರ ರೂಪಿಸುವ ಬಹಳಷ್ಟು ಯೋಜನೆಗಳು ವಿಫಲವಾಗುತ್ತಿರುವುದನ್ನು ಕುಟುಕಲಾಗಿದೆ. 'ಯಾರ್ಯೇನೆ ಸಿಂಹಾಸನ/ಏರಿದರೂ ಫಲವಿಲ್ಲ / ಈ ನಾಡ ಮಕ್ಕಳಿಗೆ ನಗುವೇ ಇಲ್ಲ!' ಇದಕ್ಕೆಲ್ಲ ಮೂಲಕಾರಣವೆಂದರೆ 'ಎಲ್ಲೆಲ್ಲೂ ಮಾನವತೆ ಮಣ್ಣಾಗಿದೆ. ಇದು ಅವರ 'ಹಾಡು-ಪಾಡು'

ಬರಿದೇ ಬವಣೆ ಪಲ್ಲವಿಯಾದ
ದುಗುಡ ಹಾಡನೊರೆದು,
ತೂಗುಯ್ಯಾಲೆ ಚರಣವಾದ
ಮುಗಿಯದ ಪಾಡು ನನ್ನದು  ಎಂಬ ಕವಿಗೆ ಸತ್ಯ ತಿಳಿದಿದೆ.

ಸರ್ಕಾರವೆನಿತೋ ಬಂದು ಹೋದರೂ
ಉದ್ಧಾರವಿಲ್ಲ ಬಡವಗೆ,
ಭರವಸೆ - ನದಿಹರಿದು ಬಂದರೂ
ಸಹಜ ಬಂಜರು ಇರವಿಗೆ;

'ಕರುಳಿದ್ದವರ ಕಡೆ ಕೂಗು' ಎಲ್ಲೆಲ್ಲೂ ಮಾರ್ದನಿಸುತ್ತಿದೆ. ನೊಂದು ಬೆಂದವರು

ನಕ್ಕದ್ದಕ್ಕಿನ್ನ ಹೆಚ್ಚಾಗಿ ಉಪವಾಸವಿದ್ದುದ್ದು
ಉಂಡದಕ್ಕಿನ್ನ ಮಿಗಿಲಾಗಿ ಅತ್ತದ್ದು
ರಾಗ ಕಾಣಬೇಕಾದ್ದು ರಂಕಲಿಗೆ ಸಿಕ್ಕಿದ್ದು

ಕವಿಮನವನ್ನು ದಟ್ಟವಾಗಿ ಕಾಡಿ, ಮಾತಿನಲಿ ಮೈತಳೆದು ಬಂದು

ಕಣ್ಣಿದ್ದವರ
ಗಮನ ಸೆಳೆಯಬಯಸಿದೆ
ಮಾನವೀಯ ಹೃದಯ ಅರಸಿದೆ!

ನಮ್ಮ ಸಾಮಾಜಿಕ ಅಸ್ತವ್ಯಸ್ತತೆಯನ್ನು ಸರಿಪಡಿಸಲಾದೀತೆ! ಎಂದು ಯೋಚಿಸತೊಡಗಿದರೆ 'ಪ್ರಸ್ತುತ'ದಲ್ಲಿ

ಅಣುಯುಗದ ನಮ್ಮ ಗೊಣಗುಬಾಳಿನಲ್ಲಿ
ಹೆಜ್ಜೆ ಇಟ್ಟಲ್ಲಿ ತಗಾದೆಗಳು
ಪೈಥಾಗೊರಸ್ ಕೂಡ
ಸಾಧಿಸಲಾಗದ ಪ್ರಮೇಯಗಳು

ಗೌಡರು ಕೆಲವು ಕಾಲ ವಿಜ್ಞಾನದ ವಿದ್ಯಾರ್ಥಿಯಾಗಿದ್ದವರು. ಅಂದು ಕಲಿತದ್ದು ಅವರ ಕವಿತೆಯಲ್ಲಿ ಬಳಕೆಯಾಗುವಾಗ ಪಡೆದುಕೊಂಡಿರುವ ರೂಪ ಬದುಕು-ವಿಜ್ಞಾನಕ್ಕಿರುವ ಸಂಬಂಧ, ಸವಾಲುಗಳನ್ನು ವ್ಯಕ್ತಗೊಳಿಸುತ್ತದೆ. ಇದನ್ನೇ ಸಾಹಿತ್ಯಕವಾಗಿಸಿ

ಪ್ರಸ್ತುತವೆಲ್ಲ ಕೇವಲ ಕೇವಲ
ಬಿಡಿಸದ ಪದರಂಗಗಳ ಜಾಲ! - ಎಂದಿದ್ದಾರೆ.

ಬಿಚ್ಚುಮಾತಿನಲ್ಲೂ ಚುಚ್ಚುವ ಮೊನಚು ಇರಬಲ್ಲದು. ಆಧುನಿಕ ಜೀವನಯಾನದಲ್ಲಿ

ಸಂಗಾತಿ ಸೆರಗಲ್ಲೂ
ರತಿ ನಿಯಂತ್ರಿತ ಚಿಂತೆ.

ಅರ್ಥಮಾಡಿಕೊಳ್ಳುವ ಮಂದಿಗೆ ಇದಕ್ಕಿಂತ ಸರಳವಾಗಿ ಅನ್ಯರೀತಿಯಲ್ಲಿ ಹೇಳಲಾದೀತೆ.

ನಾಗರಿಕ ನಡೆ ವಿಷಮ ವರ್ತುಲವಾಗಿ
ಕ್ಷಣ ಕ್ಷಣವೂ ಒಗಟುಗಳು
ಕಣ್ ಬಿಟ್ಟಲ್ಲಿ ಅಣಕ
ಎತ್ತ ತಿರುಗಿದರೂ ಮುಗಿಯದ ಧಾವಂತ
ಇರುವಿಕೆ ಎಂದರೆ ನರಕ,
ಪರಿಚಿತ ವ್ಯಂಗ್ಯ ಸಂಕೇತ

ಇಷ್ಟೆಲ್ಲ ಹೇಳಿರುವ ಕವಿಗೆ ಇದನ್ನೆಲ್ಲ ಸರಿಪಡಿಸಬಹುದೆಂಬ ಚಿಗುರಾಸೆ ಇನ್ನೂ ಉಳಿದಿದೆ.

ಗೌಡರು 'ಆದರ್ಶಗೀತ'ದಲ್ಲಿ ಮನುಷ್ಯ ಹೇಗಿದ್ದರೆ ಬದುಕು ಉಳಿಯುವುದೆಂದು, ಬಾಳು ಬೆಳೆಯುವುದೆಂದು ತಿಳಿಸಿದ್ದಾರೆ.

ವರ್ಗರಹಿತ ನಾಡು ನೆಮ್ಮದಿಯ ಬೀಡಾಗುವುದು. ಅದುವೇ ಆದರ್ಶ. ವರ್ಣರಹಿತ ಪ್ರೀತಿ ಮಾನವತೆ ರೀತಿ. ಅದನರಿತು ಮನುಜ ಬಾಳೋ ಎಂದಿರುವರು. ಇರಲಿರಲಿ ಮೌಲ್ಯ ಹಾದಿ, ಶುದ್ಧ ನಡತೆ ಬಾಳಸಿದ್ಧಿ ನಿಷ್ಠೆ ಬಿಡದೆ ನೀನು ನಡೆಯೆ-ನಾಗರಿಕ ನಿಯತ್ತು ಅದುವೆ! ಆದರ್ಶಗಳನ್ನು ಹೇಳಲು ದೊಡ್ಡದೊಡ್ಡ ಪದಗಳನ್ನೇ ಹೇಳಬೇಕೆಂದೇನು ಇಲ್ಲ. ಗೌಡರ ಹಾಗೆ ಸರಳವಾದ ಪದಗಳ ಮೂಲಕವೂ ಹೇಳಬಹುದು. ಆದರೆ ಇದನ್ನು ಕೇಳಿಸಿಕೊಳ್ಳುವವರಿಗೆ ಉದಾರವಾದ ಮನಸ್ಸು ಇರಬೇಕು. ಕೇಳಿದ್ದನ್ನು ಬಾಳಿನಲ್ಲಿ ಅಳವಡಿಸಿಕೊಳ್ಳುವ ಸಾಮರ್ಥ್ಯವೂ ಇರಬೇಕು.

ಜಾತಿಗೋಡೆ ಕುಟ್ಟಿ ಕೆಡವೋ
ಸತ್ಯ ನ್ಯಾಯ ಶ್ರೇಷ್ಠ ಇರವೋ
ಕುಬ್ಜತನವ ತೊರೆದು ಬದುಕೋ
ಸ್ನೇಹತತ್ವ ಶಾಂತಿ ಬೆಳಕೋ;
ಸಂಕುಚಿತ ಬುದ್ಧಿ ಕೆಡುಕೋ
ಬಾವಿ ಕಪ್ಪೆಯಾಗಬೇಡವೋ

ಭ್ರಾತೃಪ್ರೇಮ ಹಾಲು-ಜೇನೋ.... ವಿಶ್ವಮಾನವನಾಗೋ ನೀನು! ಕಡೆಯ ಸಾಲಿನ ಕಡೆಯ ಮಾತು ಕುವೆಂಪು ಅವರ 'ಮನುಜ ಮತ-ವಿಶ್ವಪಥ' ಸಂದೇಶವನ್ನು ನೆನಪು ಮಾಡುತ್ತವೆ.

ಸಮಾಜದ ಬಹುಮುಖಗಳನ್ನು ಕಂಡಿರುವ ಗೌಡರು ಅಲ್ಲಿನ ಡೊಂಕುಗಳನ್ನು ಗ್ರಹಿಸಿ, ವ್ಯಾಕುಲಗೊಂಡು, ಅದನ್ನು ಸರಿಪಡಿಸಬೇಕು ಎಂಬ ಅಭೀಪ್ಸೆಯನ್ನು ವ್ಯಕ್ತಗೊಳಿಸಿದ್ದಾರೆ. ಇದು ಸಾಧ್ಯವೇ? ಎಂದು ಕೆಲವರಾದರೂ ದನಿ ಎತ್ತಬಹುದು. ಆದರೆ ಇಲ್ಲಿನ ಸಮಸ್ಯೆಗಳು ಮನುಷ್ಯ ಸೃಷ್ಟಿಯೇ ಹೊರತು ಮತ್ತೇನು ಅಲ್ಲ. ಆದ್ದರಿಂದ ಅವುಗಳ ನಿವಾರಣೆಗೆ, ಅಲ್ಲವೆ ಅವು ಸೃಷ್ಟಿಯಾಗದಂತೆ ನಡೆದುಕೊಳ್ಳಬಹುದಾದ ಜವಾಬ್ದಾರಿ ಮನುಷ್ಯನದೇ ಆಗಿದೆ. ಅದನ್ನು ಗೌಡರು 'ಸತ್ಕರ್ಮಸುಧೆ' ಎಂದಿದ್ದಾರೆ. ಅದನ್ನು ಎಲ್ಲರಿಗೂ ತಿಳಿಸಲು ಹಾಗೂ ಲೇಖನ ಮುಕ್ತಾಯ ಮಾಡಲು ಅವರ ಮಣ್ಣಿನಮಗ ಸಂಕಲನದಿಂದ ಈ ಭಾಗವನ್ನು ಬಳಸಿಕೊಳ್ಳುತ್ತಿದ್ದೇನೆ.

ಸಹೃದಯತೆ ನಿನಗಿರಲು ಸದ್ಧರ್ಮ ಸೂತ್ರ
ಸನ್ನಡತೆ ನಿನಗಿರಲು ಸತ್ಕರ್ಮ ಪಾತ್ರ...
ಸತ್ಫಲವ ಬಯಸಿರಲು ಸ್ವೇದ ಶ್ರಮಮಂತ್ರ
ಸತ್ಕರ್ಮ ಸಾಧಕಗೆ ಸೊದೆ - ಮಣ್ಣಿನ ಮಗ.





# ಮಣ್ಣಿನ ಮಗನ ಬಂಗಾರದ ಭೂಮಿ

● ಡಾ|| ಎಂ.ಜಿ. ನಾಗರಾಜ್

ಕಾವ್ಯ, ಕವಿಮಾನಸದ ಕಲಾತ್ಮಕ ಕಡಲು. ಭಾವ ಶ್ರೀಗಂಧದ ಮೇಲೆ ಬೌದ್ಧಿಕ ಚಾಣ ಆಡಿದಾಗ ಕಾವ್ಯ ಮಯೂರಿಯ ಸುಗಂಧ ಲಾಸ್ಯ; ಸೌರಭದ ವಿಪುಲ ಹಿತಸಿಂಚನ. ಸಹೃದಯರಲ್ಲಿ ಜಲಗಂಧ ಸಲಿಲ. ಯಾವುದೂ ಕೇವಲ ಕಲ್ಪನೆಯ ಅಲೌಕಿಕ ತಾಂಡವವಲ್ಲ. ಅನುಭವದ ಸತ್ವ ಸತ್ಯಶೀಲತೆಯಲ್ಲಿ ರೂಪುಗೊಳಿಸುವ ನವನೀತ ಮಾಧುರ್ಯದ ಮೂರ್ತಿ ಕೂಡ. ಅನುಭೂತಿ ಇದನ್ನು ವಿಶ್ಲೇಷಿಸುವಲ್ಲಿ ಆನಂದ ಮಾರ್ಗಿಯೆ. ಈ ಮಾರ್ಗ ಹದುಳವಾಗುತ್ತ ಬಂದಂತೆ ಅನುಭಾವಿಕ ದರ್ಶನವಾಗುತ್ತದೆ. ಅದು ಹೊಸ ಸೃಷ್ಟಿಗಳ ಮೇಳವೆ. ಕವಿ, ಸಹೃದಯರ ನಡುವೆ ಈ ಸಂವಾದ ಬೆಡಗು ಪಡೆದಷ್ಟೂ ಕಾವ್ಯ ಸಂತಾನ. ಕಾವ್ಯ ಹಾಗೆ ಸಂಜನಿಸಿದರೆ ಅದೊಂದು ಸಾರ್ಥಕತೆ. ಇಳೆಯ ಮೇಲಣ ಕೂಡಲ ಬಾಳು. ಇಳೆಯ ಮೇಲಣ ನಿರಂಜನ ನಿಲುವಿನಲ್ಲಿ ಪರಿತೋದರ್ಶನ ಸ್ರೋತವಾಗಿ ಬರಬೇಕು ಆಗ ಅದು ಸಮುದಾಯದ ಬದುಕು, ಸಂವಾದ. ಅಂತೇ ಸಹೃದಯ ಬಲು ಆತ್ಮೀಯ. 'ಮಾನಸಿಕ ದೂರ'ದ ವ್ಯಷ್ಟಿ ನೆಲೆ ಮೀರಿ ಸಮಷ್ಟಿನೆಲೆಯಲ್ಲಿ ನಿರಂಜನ ನೆಲೆ ಅನಿಕೇತನವಾಗುತ್ತದೆ. ಇಲ್ಲಿ ಗತಿಯೂ ಉಂಟು; ಸ್ಥಿತಿಯೂ ಉಂಟು. ಸೌಂದರ್ಯದ ನೆಲೆ ಕೇವಲ ಗತಿ ಬಿಂಬದಲ್ಲಿಯೆ ಪರ್ಯವಸಾನವಾಗುವುದಿಲ್ಲ. ಕಾರಣ ಗತಿಯೂ ವೈಜ್ಞಾನಿಕ ಬೆನ್ನುಡಿಯಲ್ಲಿ ಗಮನಿಸಿದಾಗ, ಸ್ಥಿತಿಯ ಒಂದು ಪರಿಸ್ಥಿತಿಯೆ. ಸ್ಥಾಯಿಯಾಗಲು. ಶಾಶ್ವತದ ಮೌಲ್ಯವಾಗಲು, ಸ್ಥಿತಿಯ ಅರ್ಥಾತ್ ಸ್ಥಿತಿಬಿಂಬದ 'ಪರಿಶೀಲನೆ' ಅಗತ್ಯವಾಗುತ್ತದೆ. ಹೀಗಾಗಿ ಬದುಕು ಗತಿಯೂ ಹೌದು; ಸ್ಥಿತಿಯೂ ಹೌದು. ಗತಿಬಿಂಬವೂ ಹೌದು, ಸ್ಥಿತಿಬಿಂಬವೂ ಹೌದು. ಸಕ್ರಿಯತೆ ಹಾಗು ಸಕ್ರಿಯದ ಪ್ರಕ್ರಿಯೆ ಗತಿ-ಸ್ಥಿತಿಬಿಂಬಗಳ ಸಮನ್ವಯ ಸಾರಥ್ಯದಲ್ಲಿ ನಡೆಯುತ್ತದೆ. ಇಲ್ಲಿ ಭಾವ, ಬುದ್ಧಿ, ಕನಸು, ನನಸು ಯಾವೆಲ್ಲವೂ ನೇಪಥ್ಯದಲ್ಲಿಯೇ ಪರ್ಯವಸಾನವಾಗುವುದಿಲ್ಲ. ಪ್ರತ್ಯಕ್ಷ ವೇದಿಕೆಗೆ ಕರೆತಂದು, ದೃಶ್ಯ-ಶ್ರವ್ಯಗಳ ಬೆಡಗನ್ನು ತೋರುತ್ತವೆ ಕಾವ್ಯ. ಹೀಗೆ ಅನುಭವದ ವೇದಿಕೆಯಲ್ಲಿ ವಿಕಸಿಸಿ ಅನುಭಾವದ ದರ್ಶನ ನಿರಂಜನ ನೋಟದಲ್ಲಿ ಸಮನ್ವಯಿಸಿಕೊಂಡಾಗ, ಸಮರ್ಥ, ಸಫಲ, ಕವಿತೆ ಎಂಬ

ಉಪಾಧಿ ಪ್ರಶಸ್ತಿಯಲ್ಲಿಯೇ ನಿಲ್ಲದೆ ದ್ರಷ್ಟಾರದ, ಸ್ರಷ್ಟಾರದ ರಸಾನಂದ ಸಂಚಿಯಾಗುತ್ತದೆ. ಇದಕ್ಕೆಲ್ಲ ವಸ್ತು, ಲೌಕಿಕದ ಅತಿಸಾಮಾನ್ಯ ಘಟಕದಿಂದ ಹಿಡಿದು ಅಲೌಕಿಕದ ಅಮೂರ್ತವನ್ನು ಮೂರ್ತಗೊಳಿಸುವ ಶಕ್ತಿ ಅನುಭವಿಸಿದ, ಕವಿಗೂ, ಸ್ವೀಕರಿಸಿದ ಸಹೃದಯನಿಗೂ ತರಂಗ ಸಮಸಂವೇದನೆಯಾಗಿ, ಪರಸ್ಪರ ತನ್ಮಗುತ್ತಾರೆ. ಲೋಪವಿದ್ದಾಗ ವಿಮರ್ಶೆಯ ಬಾಗಿಲನ್ನು ತೆರೆದಿಟ್ಟುಕೊಳ್ಳುತ್ತಾರೆ; ವಿವೇಚಿಸುತ್ತಾರೆ; ಮಾಗುತ್ತ ಹೋಗುತ್ತಾರೆ. ಸಿದ್ಧಿಗೊಳ್ಳುತ್ತಾರೆ. ಪ್ರಸಿದ್ಧಿ ಮತ್ತು ಪಾಂಡಿತ್ಯ ಬಿಡಿಯಾಗದೆ ಇಡಿಯಾಗಿ ಉಕ್ಕಿದಾಗ ಅದೊಂದು ಸೌಭಾಗ್ಯ ಇಳೆಯಲ್ಲಿ ಸಂಜೀವಿತಕ್ಕೆ ಸಫಲ ಸಾರ್ಥಕತೆ. ಈ ಹಿನ್ನೆಲೆಯ ನಮ್ಮ ನಾಡಿನ ಜನಮನದ, ಘನ ಕವಿ ಶ್ರೀ ದೊಡ್ಡರಂಗೇಗೌಡರು ನಮ್ಮ ನಾಡಿನ ಜನಮನದ ಘನಕವಿ ಶ್ರೀ ದೊಡ್ಡರಂಗೇಗೌಡರು ನಮ್ಮ ಹೃದಯ ಸೃಷ್ಟಿಸಿರುವ ಸಜ್ಜನ ಕವಿ ಎನಿಸುತ್ತಾರೆ. ಯಾರೇ ಪ್ರಸಿದ್ಧಗೊಂಡರೂ ಅವರೆಲ್ಲ ಸಹೃದಯ ಭಾವ ಕಡೆ ಮೂರ್ತಿಗಳೇ. ಅಂತಾಗಿ ಕವಿಯ ಸ್ವಂತ ವ್ಯಕ್ತಿತ್ವಕ್ಕೆ ಸಹೃದಯದ ಸಂವೇದನೆಯೂ ದೇಣಿಗೆ ನೀಡಿರುತ್ತದೆ ಎಂಬುದನ್ನು ಮರೆಯುವಂತಿಲ್ಲ. ಆದರೆ ಅಂಥ ವ್ಯಕ್ತಿತ್ವ ಪಲ್ಲವಿಸಿದಾಗ ಮಾತ್ರ ಅದೆಲ್ಲ ಸಾಧ್ಯ. ಶ್ರೀ ದೊಡ್ಡರಂಗೇಗೌಡರು ಈ ಪಥದಲ್ಲಿ ಸಾಗಿ ಬಂದ ಪ್ರಯಾಣಿಕ ಕವಿ. ನೋವುಂಡರೂ, ಆಡಿಕೆಯ ನೇತ್ಯಾತ್ಮಕ ಧ್ವನಿಗಳನ್ನು ಕೇಳಿಸಿಕೊಂಡರೂ ಸ್ಥಿತ ಪ್ರಜ್ಞೆಯನ್ನು ಮಂದಸ್ಮಿತದಲ್ಲಿ ಕಾಪಾಡಿಕೊಂಡು ರಂಜಿಸುತ್ತಲೇ ನಿರಂಜನಿಯಾಗಿದ್ದಾರೆ. ಇದು ತ್ಯಾಗದೊಳಗಣ ಸಜ್ಜನಿಕೆಯೂ ಹೌದು. ಅವರ ಕಾವ್ಯ ಕೃತಿ ಪಲ್ಲವದಲ್ಲಿ ಇವೆಲ್ಲ ಹೇಗೆ ಸಂಕೇತಗೊಂಡಿವೆ? ಸಜ್ಜುಗೊಂಡಿವೆ? ಎಂಬುದನ್ನು ಅವರ ಕಾವ್ಯ ಸಂಘಟದ ಕವನಗಳಲ್ಲಿ ನಾವು ವಿಹರಿಸಿ ಅರಿಯಬೇಕಾಗುತ್ತದೆ. ಅದೊಂದು ಪುಳಕ ವಿಹಾರವಾಗಬಹುದು, ಜಲಗಂಧ ಸೇಚನವಾಗಬಹುದು, ಯಾಂತ್ರಿಕ ಧ್ವನಿಗಳ ಕೇಳುವೆಯೂ ಅಲ್ಲಲ್ಲಿ ಒದಗಬಹುದು, ಸರಳೀಕರಣದ ಸಾಲುಗಳೂ ಇರಬಹುದು. ಆದರೆ ಒಟ್ಟಾರೆ ಕಾವ್ಯಶಿಲ್ಪ ಯಾವ ಬೆಡಗನ್ನು ನಮಗೆ ತಂದುಕೊಡುತ್ತದೆ ಎಂಬುದು ಮುಂದಿನ ವಿವೇಚನೆಯಲ್ಲಿ ವ್ಯಕ್ತ.

ಈ ವರ್ತಮಾನದಲ್ಲಿ ಕವಿಗಳ ಕವನ ಸಂಕಲನಗಳಿಂದ ಆಯ್ದ ಕವಿತೆಗಳ ಪ್ರಾತಿನಿಧಿಕ ಸಂಕಲನಗಳೂ ಪ್ರಕಟವಾಗಿರುವುದುಂಟು. ಅಥವಾ ಈಚೆಗೆ ಪ್ರಕಟವಾದ ಹೊಸ ಸಂಕಲನವೂ ಆಯಾ ಕವಿಯ ಪ್ರಾತಿನಿಧಿಕವೇ ಆಗಿರಬಹುದು. ಈ ಕವಿತೆಗಳು ಕವಿಯೇ ಮೆಚ್ಚಿಕೊಂಡ, ಸಹೃದಯರೂ ಮೆಚ್ಚಿಕೊಂಡ ಅರ್ಥಾತ್ ಸ್ವೀಕರಿಸಿದ ಕವಿತೆಗಳೇ. ಹಾಗೆ ನೋಡಿದರೆ ತನ್ನ ಸಂವೇದನೆಯನ್ನು ಆತ್ಮ ಸಂತೋಷಕ್ಕಷ್ಟೇ ಅಲ್ಲದೆ ಸಹೃದಯರ ಸಂವೇದನೆಯಲ್ಲಿ ರಸಾತ್ಮಕವಾಗಿ, ಕಲಾತ್ಮಕವಾಗಿ, ವಿವೇಚನಾತ್ಮಕವಾಗಿ, ಬೌದ್ಧಿಕ ಕೌಶಲ್ಯದೊಡನಾಗಿ ಸ್ವೀಕರಿಸಲೂ ಕವಿ ಪ್ರಕಟಿಸುತ್ತಾನೆ . ಇದು ಸಹೃದಯ ಸ್ವೀಕರಣದ ಆಯಾ ವರ್ತಮಾನವನ್ನು, ಸಿದ್ಧತೆಯನ್ನೂ ಅವಲಂಬಿಸಿರುತ್ತದೆ. ಕವಿ ವ್ಯಷ್ಟಿಯ ವ್ಯಕ್ತಿತ್ವವನ್ನು ಅಥವಾ ವ್ಯಕ್ತಿ ವೈಶಿಷ್ಟ್ಯವನ್ನು (ಐಡೆಂಟಿಟಿ) ಉಳಿಸಿಕೊಂಡರೂ ಸಮಷ್ಟಿಯ ಒಂದು ಭಾಗವೇ ಆಗಿರುತ್ತಾನೆ. ಹೀಗಾಗಿ ಅವನ ಕಾವ್ಯ; ಸಂವೇದನೆಯಲ್ಲಿ ಒಂದು ಪ್ರಯೋಗವೆ. ಸಮಷ್ಟಿಯ ಘಟಕಗಳಾದ ಸಹೃದಯರು ಅದಕ್ಕೆ

ಸಂವೇದಿಸಿದರೆ, ಕವಿಯ ಪ್ರಯೋಗ ಸಾರ್ಥಕ, ಸಮರ್ಥ, ಯಶಸ್ವಿಸದಾಗುತ್ತದೆ. ಇದನ್ನು 'ಸಂವೇದನಾ ಪ್ರಯೋಗ'ವೆನ್ನಲೂಬಹುದು. ಬರಿ ಯಶಸ್ಸು ಅಷ್ಟಕ್ಕೆ ನಿಂತರೆ ಸಾಲದು. ಒಂದು ವರ್ಗಕ್ಕೆ ವರ್ತಮಾನ ತೃಪ್ತಿ ತಂದರೆ ಸಾಲದು. ಅಲ್ಲದೆ ಸಹೃದಯರ ಸಂವೇದನೆ ಎನ್ನಿ ಭಾವನೆಗಳನ್ನಿ. ಈ ಹಿಂದೆಯೇ ಗಮನಿಸಿದಂತೆ ಅವುಗಳ ಮೊತ್ತವು ಕವಿಯ ಸಿದ್ಧಿಯನ್ನು ವ್ಯಕ್ತಿತ್ವವನ್ನು ಮೊತ್ತಗೊಳಿಸುತ್ತವೆ. ದೇವರ ಮಹಿಮೆ ಅಥವಾ ಪ್ರಸಿದ್ಧಿಯೂ ಭಕ್ತರ ಭಾವನೆಗಳ ಮೊತ್ತವೇ ಅಲ್ಲವೆ! ಆ ಮಟ್ಟಿಗೆ ನಿಜ ಕವಿಯ ಕಾವ್ಯ, ಸಹೃದಯರಲ್ಲಿ ಸಂವಹನವಾಗಿ, ಸ್ವೀಕೃತವಾಗಿ ಆನಂದವನ್ನು ಕಟ್ಟಿಕೊಟ್ಟಿರುತ್ತದೆ ಎನ್ನಬೇಕು. ಅಂದರೆ ನಿರಂತರ ವರ್ತಮಾನದ ಸಂವೇದನೆಗೆ, ಸ್ವೀಕರಣಕ್ಕೆ ಕಾವ್ಯ ಸಂವೇದನೆ ಭಾಗಿಯಾಗಬೇಕು. ಅದು ಸರ್ವಕಾಲಿಕ ಸಂವೇದನೆಯ ಮೀಸಲು. ಬಹುಶಃ ಮಹಾಕವಿಯ ಸಂವೇದನೆಗಳು ಇಂಥವಾಗಿರಬಹುದು. ಇಲ್ಲಿಯೇ ಮೌಲ್ಯದ ಪ್ರಶ್ನೆ ಮುಂದಾಗುತ್ತದೆ. ಸಾಮಾನ್ಯವಾಗಿ ಯಾವುದೇ ಜೀವನದ ಭಾವ ಪರಿಕರವು ಮೊತ್ತ ಮೊದಲಿಗೆ ಕುತೂಹಲ-ಆಸಕ್ತಿಗೆ ಒಳಗಾದಾಗ, ಕಾಲಕ್ರಮೇಣ ಅದರ ಸಾನ್ನಿಧ್ಯ, ಅಥವಾ ಸನಿಹ ಬೇಕೆನಿಸುತ್ತದೆ. ಅದೇ ಇಚ್ಛೆ; ಒಲವು; ಬಯಕೆ. ಅದರ ಸಂಪರ್ಕ ನಿಕಟವಾದಂತೆ ಬಯಕೆಯ ತೀವ್ರತೆಯೂ ಏರಂಕವೇ, ಉತ್ಕರ್ಷವೇ. ಆ ನಂತರ ಅನುರಕ್ತಿ ಬೆಳೆಯುತ್ತದೆ. ಅನುರಕ್ತಿ ಬೆಳೆದಂತೆ, ಬಿಟ್ಟಿರಲು ಸಾಧ್ಯವಾಗದಂಥ ಆವೇಶದ ಆವಾಹನೆಯಾಗುತ್ತದೆ. ಅದೊಂದು ಮೌಲ್ಯ ಎಂದು ಸ್ವೀಕರಿಸಿದಾಗ, ಅದೇ ಗುರಿ ಎಂದರೆ Idealogicallevel ಬದುಕಿನಲ್ಲಿ ಅದನ್ನು ಸಾಧಿಸುವ ಅವಿಭಾಜ್ಯ ಪ್ರಯತ್ನ ಸಿದ್ಧಿಯತ್ತ ಸಾಗುತ್ತದೆ. ಕಾವ್ಯದ ಸಂವೇದನೆ ವ್ಯಷ್ಟಿ ಸಮಷ್ಟಿಯಲ್ಲಿ ಈ ಮಟ್ಟ ಅಥವಾ ಹಂತವನ್ನು ತಲುಪಿದಾಗಲೆ ಸರ್ವಕಾಲಿಕ ಮೌಲ್ಯ ಪಡೆದಂತಾಗುತ್ತದೆ. ಅಂದರೆ ಕವಿಯಕಾವ್ಯ ಸಹೃದಯರ ಸರ್ವಕಾಲಿಕ ಸ್ವೀಕರಣ ಮೌಲ್ಯವನ್ನು ಯಾವುದೇ ಒಂದು ರೂಪದಲ್ಲಿ ಪಡೆಯುತ್ತದೆ. ಕವಿ ಬರೆದುದಕ್ಕೆ ಸೌಭಾಗ್ಯವು, ಜನತೆ (ಸಹೃದಯ) ಹೀಗೆ ಸಂವೇದನೆಯಲ್ಲಿ ರೂಪು ತಳೆದಾಗಲೇ ಒದಗುವುದು. ಇದರಲ್ಲಿ ತಾತ್ಕಾಲಿಕ, ಅಥವಾ ತೋರಿಕೆಯ ಸಂವೇದನೆ, ತಾತ್ಕಾಲಿಕ ಜನಪ್ರಿಯತೆ, ಸರ್ವಕಾಲಿಕ ಸಂವೇದನೆ ಎಂದು ವರ್ಗೀಕರಿಸಿಕೊಳ್ಳಬೇಕಾಗುತ್ತದೆ. ಈ 'ದೃಷ್ಟಿಯಿಂದ ಯಾವುದೇ ಕವಿಯ ಕವನ ಸಂಕಲನ ಇಂಥ ಮೌಲ್ಯದ ಪ್ರತೀಕ, ಹಾಗೂ ವಿಕಾಸ; ಅದನ್ನು ಮೀಸಲು ಸಂವೇವನೆಯ ಪ್ರಯೋಗವೆನ್ನಬಹುದು. ಕವಿ ಮೆಚ್ಚಿದ್ದು, ಮೌಲಿಕ ಎಂದದ್ದು ಸಹೃದಯರಲ್ಲಿಯೂ ಮೀಸಲಾದದ್ದು, ಎನ್ನಬೇಕು. ಕವಿ ಸಂವೇದನೆಗಳಿಂದ ಉದ್ಭವ-ಉತ್ಪನ್ನವು ಸ್ವಯಂಭೂಭಾವ ಮಕರಂದವಾಗಿರುತ್ತದೆ, ಕವಿ-ಸಹೃದಯರ ಭಾವ ಸಾಮರಸ್ಯದ ಸಂಬಂಧವಾಗಿ ಅದು ವಿಕಸಿಸಿ ಬಂದಿದೆ ಎಂಬುದು ಕಾವ್ಯದಲ್ಲಿ ಗಮನಿಸುವಂಥದ್ದಾಗಬೇಕು. ಈ ನಿಟ್ಟಿನಿಂದ ನಮ್ಮ ನಾಡಿನಲ್ಲಿ ಹೊರಬಂದಿರುವ ಕವಿತೆಗಳ ಸಂಕಲನದ ಪೈಕಿ, ಜನಮನದ ಕವಿ ಡಾ॥ ದೊಡ್ಡರಂಗೇಗೌಡರ 'ಬಂಗಾರದ ಭೂಮಿ' ಕವನ ಸಂಕಲನವೂ ಸದ್ಯ ವಿವೇಚನೆಗೆ ಮುಂದಿಟ್ಟುಕೊಂಡದ್ದಾಗಿದೆ. ಅವರು ಬದುಕಿನಲ್ಲಿ ಏನೆಲ್ಲ ಸಂಕಟಗಳನ್ನು ಅನುಭವಿಸಿದರೋ,

ಅದನ್ನೆಲ್ಲ ತೋಡಿಕೊಂಡರೂ ಸಿಹಿಯ, ಸಿರಿಯ ಮಾತುಗಳು ಪಲ್ಲವಿಸಿ, ಬದುಕಿನ ತಾಳ್ಮೆಯನ್ನು ತೋರಿದ ಸಹಜ ಕಲಾತ್ಮಕ ಅಭಿವ್ಯಕ್ತಿಯಾಗಿ ಇಲ್ಲಿನ ಕವನಗಳು ಕಸುವುಗೊಂಡಿವೆ ಎಂದರೆ ಪ್ರಶಸ್ತಿವಾಚನವೆನಿಸದು; ವಾಗರ್ಥ ಮೀರಿದ ಧ್ವನಿ ಬೆಳಗು-ಬೆಡಗು ಎಂದರೆ ಮನಸ್ಸಿಗೆ ತಾಗಿದ ಮುದವೆನಿಸದಿರದು.

ಈ ಸಂಕಲನದ 86 ಕವಿತೆಗಳಲ್ಲಿ ಪ್ರಕೃತಿ ಮುತ್ತೈದೆಯ ಮಂಗಳಕರ ಭಾವಗಳಿವೆ, ಅಭಿಮಾನದ ಆರಾಧನೆ ಇದೆ, ಜನಪದ ಮಿಡಿತವಿದೆ, ಪ್ರೇಮದ ಬಿಸಿ ಇದೆ, ವಾತ್ಸಲ್ಯದ ದನಿ ಇದೆ, ನುಡಿಯ ಕಾಳಜಿ ಇದೆ, ರಾಗದ ಶಿಲ್ಪವಿದೆ, ಗ್ರಾಮದ ಮುಗ್ಧ ಚೈತನ್ಯವಿದೆ, ವರ್ತಮಾನದ ಸಂವೇದನೆ ಇದೆ – ಕವನ ಶೀರ್ಷಿಕೆಗಳೇ ಪುಳಕದ ಗಿಂಡಿಯಿಂದ ಹೊರಹೊಮ್ಮಿ ಬಂದಂತಿವೆ. ತೊಡಲು ಉಡಲು ಮನದ ಮೈಗೆ ತವನಿಧಿಕ ತವಕ ಭಾವವೂ  ಇಲ್ಲಿವೆ.

ಬಂಗಾರ ಭೂಮಿ-ಸಂಕಲನದ ಮೊದಲ ಕವಿತೆ. ಪ್ರಕೃತಿ ಪೀಯೂಷವನ್ನು ಕುಡಿದ ಕವಿಗೆ; ಕೆಂಬಾರ ಸೂರ್ಯ ಅಂಬರದ ಹುಡುಗನಾಗಿ ಕಾಣುತ್ತಾನೆ. ಅವನು ಮಲಗಿದ್ದ ನಿಶೆಯನ್ನು ತಿದ್ದಿ ತೀಡಿ 'ಉಷೆ'ಯನ್ನು ತೋರಿಸಿದ. ದೇವ ಚೈತನ್ಯವಾಗಿ ತೋರುತ್ತಾನೆ. ಹೂವಿಗೂ ಪಲ್ಲವಿಸುವ ಪಾಠ ಹೇಳುವ ಶಿಕ್ಷಕನಾಗಿ ಕಾಣುತ್ತಾನೆ. ಇಲ್ಲಿ ಕವಿಯೂ ಬಾಲಕನೆ. ಅದಕ್ಕಾಗಿ ಬೆಳಕಿನ ಗೆಳೆಯನಾಗಿ ಬಂದ ಸೂರ್ಯನ ಚಟುವಟಿಕೆಗಳು ಕಲಾತ್ಮಕವಾಗಿ ಕಾಣುತ್ತವೆ. ಹೀಗಾಗಿ ನಿಶೆಯೊಳಗೆ ಅಡಗಿದ್ದ ಬೆಳಕು ಉಷೆಯಾಗಿ ಉಕ್ಕುವುದು, ಸೂರ್ಯಶಿಲ್ಪಿಯಿಂದಲೆ. ಹೂವು ಮೊದಲೇ ಸುಕೋಮಲ. ಅದಕ್ಕೆ ಪಲ್ಲವಿಸುವ ಬನಿ ತೋರಿದ ಅಂಬರದ ಹುಡುಗ ಬಿಸಿ ಮೈಯೊಳಗೆ ಉಕ್ಕಿಸುವುದು ಸುಪೋಷ ಮೈನೇವರಿಕೆ. ಇದಕ್ಕೆ ಅರಳದ ಕೋಮಲತೆ ಉಂಟೆ! ಹೀಗೆ ಪ್ರಕೃತಿಯ ಸಂಚಲನಕ್ಕೆ ಬದುಕಿನ ಅನುಭವದ ಮೆರುಗಿನಲ್ಲಿ ಕಾವ್ಯದ ನಡೆಮುಡಿ ಹಾಸಿ ಸಹಗಾಮಿಯಾಗಿ ಸಾಗಿರುವುದು, ಕವಿತೆಯ ಬನಿಯಾಗಿದೆ, ಬೆಡಗಾಗಿದೆ. ಆದರೆ ಈ ಕವಿತೆಯ 12 ಪದ್ಯಗಳಾಚೆ ಬರುವ, ಜಾನಪದ ಸೊಗಡಿನ ಮೂರು ಪದ್ಯಗಳು, ಸೇರ್ಪಡೆಯಾಗಿ ಧುಮ್ಮಿಕ್ಕಿದಂತೆ ಭಾವ ತಂದರೂ, ಪ್ರತ್ಯೇಕವಾಗಿಯೇ ಓದಿಕೊಂಡಾಗ ಬದುಕು ಮತ್ತು ಕಾವ್ಯದ ಸಾವಯುವ ಶಿಲ್ಪ ನಮ್ಮ ಮನಸ್ಸಿನ ಮುಂದೆ ವಿಶಾಲವಾಗಿ ಹರಡಿಕೊಳ್ಳುತ್ತದೆ. 'ಜನಪದರ ಜಗದಲ್ಲಿ ಉಳಿದ', ಸೂರ್ಯನ ಪ್ರಶಸ್ತಿ ಇಲ್ಲಿ ಮೋಹಕವಾಗಿ ಸಾಗಿದೆ. ಒಂದು ಯಶಸ್ವೀ ಕವನವೆನಿಸುತ್ತದೆ.

'ಚೈತ್ರೋದಯ'ದಲ್ಲಿ, ಚೈತ್ರದ ಹೂವು, ಮಾವು ಮನದ ಪ್ರಫುಲ್ಲತೆಗೆ ರಾಗೋತ್ಸವ ಸಂಚಾರ ತರುತ್ತಲೇ 'ಋಷಿ ವೈಭವವನ್ನು ಮನೋಮಂದಿರಕ್ಕೆ ವಿಸ್ತರಿಸಿ'ರುವುದು, ನಿಸರ್ಗಕ್ಕೆ ಪಾವಿತ್ರ್ಯದ ಆರತಿ ಎತ್ತಿದಂತಿದೆ.

'ಹೃದಯದ ಹಕ್ಕಿ' ಆಸೆಯ ಆಕಾಶದಲ್ಲಿ ಹಾರಿ ಏರಿ ಮನಕ್ಕೆ ಮೊದಲು ಕಸಿವಿಸಿ ತಂದರೂ,

ಜಾನಿನ ಚುಕ್ಕೆಯಾಗುವಲ್ಲಿ, ನೋಡುವ ಕಣ್ಣಿಗೇ ಧನ್ಯತೆ! ನಿರಾಸೆಯ ಮಡುವಿಗಿಳಿಯದೆ, ಆಸೆಯೊಳಗೆ ಶುಭಾಶಯ ಹೇಳುವ ಮನಕ್ಕೆ ಕನಸು ಕೊಟ್ಟ ಹಕ್ಕಿಯ ಕುರಿತಾದ ಕವನವಿದಾಗಿ ತಾತ್ವಿಕ ಅರ್ಥಗಳನ್ನು ಚೆಲ್ಲುತ್ತ ಹೋಗಿದೆ. ಆದರೆ 'ಅಭಿವಂದನೆ' ಕವನದಲ್ಲಿ ಸೌಂದರ್ಯದ ಸುಳುಹನ್ನು ಪೂರ್ಣವಾಗಿ ಅರ್ಪಿಸಲಾಗಿಲ್ಲ.

ಬಾಪುವನ್ನು ಕುರಿತ 'ಚೈತನ್ಯ-ತಂದೆ' ಕವನದಲ್ಲಿ ಹಳೆಯ ಸಿರಿ ನೆನಪುಗಳು, ಶ್ರದ್ಧೆಗಳು ಮೌಲ್ಯಗಳು ಪಡೆದ ಕಾಯಕಲ್ಪಗಳ ನೆನಸಿ, ಇಂದಿನ ಶಿಥಿಲೀಕರಣದ ಬದುಕನ್ನು ಹೋಲಿಸುತ್ತ ಕವಿಯ ಮನಸು ಮೆಲಕುಹಾಕಿದೆ.

'ಮುಂಜಾನೆ ಮೂಡಿದ ಹಾಗೆ' ಹಾಗೂ 'ಪ್ರೀತಿ; ಪರಸ್ಪರ' ಕವನಗಳಲ್ಲಿ ಪ್ರೀತಿಯ ಮುಖಗಳ ಸ್ವಾನುಭವ ವರ್ಣನೆ ಇದೆ; ದಾಂಪತ್ಯದ ಸೊಗಸಿನ ಅರ್ಥ ತುಳುಕಾಡಿದೆ. ಅಂತಾಗಿಯೇ ಪುಟಿಯುವ ಮಾತು;

ನಿನ್ನಿಂದ ನಾನು, ನನ್ನಿಂದ ನೀನು
ಒಲವಿರಲು ನೋವೇನಿಲ್ಲಾ!
ಅರಿವಿರಲು ಒಡನಾಟ ಮಧುರವಾಯಿತು
ಮನಸು ಬೆಸೆದಾಗ ಒಸಗೆ ನಡೆಯಿತು
ಸಂಗಾತಿ ನೀ ಬೆರೆಯೆ ಬದುಕು ಸ್ವರ್ಗಾನೆ!

ಎಂಬಲ್ಲಿ ಬದುಕಿನ ಸಾಮರಸ್ಯದ ಸಾವಯುವ ಶಿಲ್ಪ ಶೃಂಗಾರ ಕಲಾತ್ಮಕತೆಯಿಂದ ಮೂಡಿ ಬಂದಿದೆ. ಆದರೆ ಕೊನೆ ಸಾಲಿನಲ್ಲಿ ಲಯ ಬಾಗಿದಂತೆ ಕಾಣುತ್ತದೆ. ಹೀಗೆಯೇ ಪ್ರೀತಿ-ಪ್ರೇಮ ಕುರಿತಾಡುವ 'ಬೇವು-ಬೆಲ್ಲ', ಕವನವು, ಜೀವನದ ನೋವು-ನಲಿವಿನ ನಡುವೆ ಲೋಕವನ್ನು ಕಣ್ತೆರೆದು ನೋಡಬೇಕೆನ್ನುವ ತಾತ್ವಿಕ ಹುರುಳನ್ನು ಮುಂದಿರಿಸಿದೆ.

ಕನ್ನಡದ ಇಂದಿನ ಬಾಳುವೆಯ ಕಂಡ ಕವಿಯ ಮನಸು, ಕನ್ನಡದ ಸೌಭಾಗ್ಯ ಪಥವು ನಿರಂತರ ಧಾರೆಯಾಗಿ ಹರಿಯಲೆನ್ನುವ ಘೋಷಗಾನವಿಟ್ಟಿದೆ. ನಮ್ಮ ಕನ್ನಡ ಶಾಸನಗಳಲ್ಲಿ ಕೊಟ್ಟದಾನವು ಸೂರ್ಯ ಚಂದ್ರರಿರುವ ತನಕ ಶಾಶ್ವತವಿರಲಿ ಎಂಬ ಆಶಯುವಿಟ್ಟುಕೊಡಲಾಗಿರುವುದು ಕಂಡು ಬರುತ್ತದೆ. ಹಾಗೆಯೇ ಇಲ್ಲಿಯ ಕವಿಯ ಮಾನಸ ಕನ್ನಡ ಜನತೆಗೆ ತನ್ನ ಭಾವನೆಯ ದಾನವನ್ನು;

'ಸೂರ್ಯ ಚಂದ್ರರಿರುವ ತನಕ ಬೆಳಗುತಿರಲಿ ಕನ್ನಡ । ಕನ್ನಡ ಸಿರಿಗನ್ನಡ'
ಭೂಮಿ-ಬಾನು ಇರುವ ತನಕ ನಗುತಲಿರಲಿ ಕನ್ನಡ । ಕನ್ನಡ ಸವಿಗನ್ನಡ

ಎಂದು ಬಹಳ ಭರವಸೆಯಿಂದ ನೀಡಿದೆ. ಇದು ತಲೆತಲಾಂತರದವರೆಗೆ, ವಂಶಪಾರಂಪರ್ಯವಾಗಿ ಕನ್ನಡ ಜನತೆಯಲ್ಲಿ ನಡೆದು ಬರಲಿ ಎಂಬ ಆಶಯದ್ದಾಗಿದೆ. ವರ್ತಮಾನದ ಆತಂಕದ ನಡುವೆಯೂ ಭವಿಷ್ಯತ್ ಕನ್ನಡದಸ್ತಿತ್ವಕ್ಕೆ, ಕವಿಯು ಕೊಟ್ಟ ಕರೆಯೂ ಆಗಿದೆ. ಘೋಷದಲ್ಲಿಯೂ ಕಾವ್ಯ ಮಿಡಿದಿರುವುದು ಗಮನಾರ್ಹ.

'ಮಳೆಯು ಬಂದ ಮಾರನೇ ದಿನ' ಶೀರ್ಷಿಕೆಯಾಗಿ ಕವನದ ಸಾಲು ಹಾಗಿರುವಲ್ಲಿ ತನ್ನ ಎರಡನೇ ಸಾಲಿನಲ್ಲಿ 'ಮಿಂಚ ಹಂಚಿದೆ ಹೂ-ಬನ' ಎನ್ನುತ್ತ ಕಾವ್ಯ ಝುಳು ಝುಳುವಾಗಿ ಮಿಂಚಿನ ಪುಳಕದ ಧಾರೆಯನ್ನು ಹರಿಸುತ್ತದೆ. ಮಿಂಚು ಹಂಚುವುದೆಂದರೆ ಬೆಳಕನ್ನು ಹಂಚುವುದು; ಹೂ-ಬನ ಅದನ್ನು ಹಂಚುವುದೆಂದರೆ ಸೊಬಗಿನ, ಬೆಡಗಿನ ಸೌರಭದ ಕಣಗಳ ಜಂಗಮ ಚೈತ್ರ ಚಟುವಟಿಕೆಯೇ ಆಗುತ್ತದೆ. 'ಕುಹು ಕುಹು ಕೋಗಿಲೆಯೇ' ಕವನದಲ್ಲಿ ಕವಿಯು ಸಂವಾದಕ್ಕಿಳಿಸುವುದು, ಕೋಗಿಲೆಯ ದನಿಗೆ ಮೆಚ್ಚಿ ಸವಿದು ಹಾಕುವ ಅಭಿಮಾನದ ಪ್ರಶ್ನೆಗಳಿಂದಲೇ; 'ಯಾವ ಚೈತ್ರಪುರುಷ ನಿನ್ನ ಬಳಿಗೆ ಕೂಗಿ ಕರೆದ? ಯಾವ ಋತುವಿನ ರಾಜ-ನಿನ್ನ ದನಿಗೆ ಇಂಪು ತಂದ' ಎನ್ನುವ ಸಾಲುಗಳೇ ಇದಕ್ಕೆ ಸಾಕ್ಷಿ. ಅಂದರೆ ಇಡೀ ಪ್ರಕೃತಿಯ ಚೈತ್ರವೇ ಕೋಗಿಲೆಯ ಮಧುರ ಸ್ವರದ ಪ್ರತಿಮೆಯನ್ನು ಇದು ಕಡೆದು ಬಿಡುತ್ತದೆ. ಮುಕ್ತ ಛಂದದ ಇಲ್ಲಿನ ಸಾಲುಗಳು ಲಯದ ಲಾಲಿತ್ಯವನ್ನು ಪೋಷಿಸಿಕೊಂಡಿದೆ. ಈ ಸುಖದ ಅಮಲಲ್ಲಿ; ಜೇನುಗಣ್ಣಿನ ನಿದ್ದೆಯಲ್ಲಿ ರಸಶಂಕೆಯಾಗದೆ ವಾಸ್ತವ ರಮ್ಯೋತ್ಸವ ಎನಿಸುವಂತಿದೆ. ಇದರ ಇನ್ನೊಂದು ಧ್ರುವದಲ್ಲಿ 'ವಿರಹದ ಹಕ್ಕಿ' ತನ್ನ ಸಾಲುಗಳನ್ನು ಬಿಚ್ಚಿಡುತ್ತ

'ಇಳೆಗೆ ಬೆಡಗು ಬಂದರೂ ರಾಗ ಮೂಡದೆ ? ನಗುವ ಲೋಕ ಕರೆದರೂ
ಸಂತೋಷಕಾಣದೆ । ಪ್ರೀತಿ ಹಕ್ಕಿ ನಲಿಯದೆ ಮರುಟಿ ಕುಳಿತಿತೇಕೆ?
ರೆಕ್ಕೆಬಿಚ್ಚಿಹಾರದೆ ಒಂಟಿಯಾಯಿತೇಕೆ?
ಹಸಿರು ಕಾಡು ನುಡಿದರೂ ಟೊಂಗೆ ಟೊಂಗೆ ಮೀಟದೆ
ಹರಿವ ಜಲ ಮೊರೆದರೂ ಅಲೆ ಅಲೆಯದೆ ಈಜದೆ
ಉಲಿವ ಹಕ್ಕಿ ಒಮ್ಮೆಗೆ ತೆಪ್ಪಗಾಯಿತೇಕೆ?
ಬಿರಿದ ಹೂವು ತೂಗಿದರೂ ಬಳಿಗೆ ಬಂದು ಕೂರದೆ
ತನಿಯ ತೆನೆಯು ತೂರೆದರೂ ಅಕ್ಕಪಕ್ಕ ಸುಳಿಯದೆ
ಹಸಿದ ಹಕ್ಕಿ ಕೂಗದೆ ತಪಸಿಯಾಯಿತೇಕೆ?
ಬೆಸೆದ ಹಕ್ಕಿ ಸಂಗವ ದೂರ ಮಾಡಿತೇತಕೆ?
ವಿರಹ ಮಾಗಿ ಮುಗಿದರೆ ಚೈತ್ರ ಮರಳಿಬಾರದೆ?

ಇದು ಇಡೀ ಕವನದ ವಿಷಾದ ಪ್ರತಿಮಾಭಾವವನ್ನು ಹೆಕ್ಕಿ ತೋರುವಂತಿದೆ. ಆಸೆ, ಕನಸು,

ಪ್ರಕೃತಿ, ಚೆಲುವು, ಸಂಗ ಎಲ್ಲಿದ್ದರೂ ಸಾಂಗತ್ಯವಾಗದ ಮನೋಸ್ಥಿತಿ ಒದಗಲು ಕಾರಣವೇನು? ಎಂಬ ಸೂಕ್ಷ್ಮಧ್ವನಿ ಇಲ್ಲಿದೆ. ಕಾಲವಾಗಲಿ, ಜಡಗಾಗಲಿ, ಮನಸ್ಸಿಗೆ ಮುದಕೊಡಬೇಕಾದರೆ ಮನೋಸ್ಥಿತಿಯೂ ಸಂವೇದನೆಗೊಂಡಾಗಲೇ ಸಾಧ್ಯ ಎಂಬ ಧ್ವನಿ ಇಲ್ಲಿದೆ. ಸಂವೇದನೆಯ ಅಂತಗಳು ಉಭಯತ್ರ ಸಮತರಂಗದಲ್ಲಿದ್ದಾಗಲೇ ಸ್ಪಂದನ ಸುಖ, ಸಾಂಗತ್ಯದ ಸಹಸಾಧ್ಯ ಎಂಬ ಕಾವ್ಯ ಮೀಮಾಂಸೆಯು ತುಣುಕೊಂದು ಇಲ್ಲಿ ನೇಯ್ಗೆಯಾದಂತೆ ಭಾಸವಾಗುತ್ತದೆ. ಕವಿ ಈ ನಡುವೆಯೂ ಆಸೆಗೆ ಲಗ್ಗೆ ಹಾಕಿ ವಿರಹ ಮಾಗಿದ ಮೇಲೆ, ಚೈತ್ರದ ಕನಸು ನನಸಾಗುತ್ತದೆ ಎಂಬ ಭರವಸೆಯನ್ನು ಭಾವದ, ಕಾವ್ಯದ ನಾಣ್ನುಡಿಯಂತೆ ಮುಂಚೂಣಿಗಾಗಿಸಿರುವುದು, ಅಂತರಂಗದ ಸಫಲ ಉತ್ಸವವಾಗಿ ಕಾಣುತ್ತದೆ. ಇಷ್ಟೆಲ್ಲ ಸಫಲ ಉತ್ಸೇಧ ಭಾವಗಳ ನಡುವೆಯೂ 'ಪ್ರೀತಿ ಹಕ್ಕಿ' ಎಂಬ ಪದ ಪ್ರಯೋಗ ಸಮಾಧಾನ ತರುವುದಿಲ್ಲ. ಉಳಿದೆಡೆ ಪ್ರಾಸ-ಅನುಪ್ರಾಸದ ನಡೆ, ಚೆಲುವಿನ ನಡೆಯಾಗಿರುವುದರಿಂದ ಖುಷಿ ತರುತ್ತದೆ. ಕೋಗಿಲೆಯ ಗುಂಗಿನಲ್ಲಿಯೇ 'ಮಧುರಗಾನ', 'ಇಳೆಯ ಕಳೆ'ಯನ್ನು ನಿಸರ್ಗದ ಉಲ್ಲಸಿತ ಚಿತ್ರವಾಗಿ ಚಿತ್ರಿಸಿರುವಲ್ಲಿ; 'ತೂಗಿ ತೊನೆವ ಹೂವು ನಗುವಾಗ ವಿಲಾಸ ಸಾಗಿ ಹರಿವ ಹೊಳೆಯು ಬಳುಕಾಡಿ ಸಂಗೀತ....! ಇಳೆಯೇ ಹೊಳೆಯುತಿದೆ' - ಈ ಸಾಲುಗಳು ರಮ್ಯಲೋಕದ ಅನಂತಯಾತ್ರೆಯಲ್ಲಿರುವಂತಿವೆ; ಝುಳು ಝುಳು ಸಲಿಲ ಹೆಜ್ಜೆಯ ರಾಗದ ಗೆಜ್ಜೆಯ ದನಿ ಬೆಳಕಿನ ಭಾವಕಣಗಳನ್ನು ಚೆಲ್ಲುವಂತಿದೆ; ಬೆಳಕಿನಾಟವೆನ್ನುವಂತಿದೆ. ಪ್ರಕೃತಿಯು ಬನಿ ಇಲ್ಲಿ ಮಾಗಿದ ಹನಿ ಅರ್ಥಾತ್ ತೊಟ್ಟಿಕ್ಕುವ ಹನಿಯಾಗಿದೆ. 'ಸಿರಿಯುಗಾದಿ ಬಂದಿದೆ'; 'ಹುಣ್ಣಿಮೆ ತೇರು ಹರಿದ್ಯೆತೋ' ಕವನಗಳು ತಮ್ಮ ಶೀರ್ಷಿಕೆಯ ಸೊಬಗನ್ನು, ಕವನದ ಒಡಲೊಳಗೆ ತುಂಬಿಕೊಂಡಿವೆ ಎಂದೆನಿಸುವುದಿಲ್ಲ. ಒಂದು ರೀತಿ ಸರಳೀಕರಣದ ಪಲ್ಲಂಗದ ಮೇಲಿರುವಂತೆ ಕಾಣುತ್ತವೆ. ಇದೇ ಮಾತನ್ನು 'ಮರೆಯ ಬೇಡವೋ... ಮನುಜ', 'ಜೀವನದ ಇತಿ-ಮಿತಿ' ಕವನಗಳಿಗೂ ಅನ್ವಯ ಮಾಡಿಕೊಳ್ಳಬಹುದೆನಿಸುತ್ತದೆ. ಆದರೆ ಮನುಜರ ಕೃತ್ರಿಮ ವರಸೆಗಳನ್ನು, ನಿರ್ಲಿಪ್ತತೆಯ ತಾತ್ವಿಕ ಮೂಡು (Mood)ಗಳನ್ನು ದಟ್ಟವಾಗಿ ಮಂಡಿಸಬೇಕೆಂಬ ಕಾಳಜಿಯಂತು ಕಾಣುತ್ತದೆ.

ಪ್ರೇಮದ ಮುಖಗಳನ್ನು, ಪ್ರೀತಿಯ ಚಾಚುಗಳನ್ನು ಪ್ರಕೃತಿಯ ದನಿಗಳನ್ನು ರಾಗದ ನೆನಪುಗಳನ್ನು, ದಾಂಪತ್ಯದ ಚೆಲುವಿನ ಗಳಿಗೆಗಳನ್ನು, 'ನಿನ್ನ ರೂಪ ಪ್ರತಿರೂಪ'; 'ಕರೆದಿದೆ ನಿನ್ನ ದನಿ'; 'ನನ್ನ ಹೃದಯ ನಿನ್ನ ಬಿಡದು' - ಕವನಗಳಲ್ಲಿ ಕಾಣುವ ಸಹೃದಯನ ಮನಕ್ಕೆ ತಾಗುವ ಸಾಲು; 'ಹೂವಿನಾ ದಂಡೆಯಲಿ । ದುಂಬಿಯಾ ಹಿಂಡಿನಲಿ । ಬರೆದಿದೆ ನಿನ್ನ ನೆನಪು । ಹೊಂಬಾಳೆ ತೂಗಿನಲಿ ಸೂಲಂಗಿ ಬಾಗಿನಲಿ ಮರೆದಿದೆ ನಿನ್ನ ನೆನಪು'

ಇಲ್ಲಿ ಬರುವ 'ಹೊಂಬಾಳೆ ತೂಗಿನಲಿ' - ಪದ ಸೃಜನೆ ಹಿತವಾಗಿ ಓದಿಸಿಕೊಳ್ಳುತ್ತದೆ ಎನ್ನುವಂತಿಲ್ಲ. 'ಹೊಂಬಾಳೆ ತೂಗುವಲಿ, ಸೂಲಂಗಿ ಬಾಗುವಲಿ' ಎಂದಿದ್ದರೆ ಹೆಚ್ಚು

ಅಪ್ಯಾಯಮಾನವಾಗುತ್ತಿತ್ತೆನಿಸುತ್ತದೆ. ಕವಿಯ ಪ್ರಯೋಗಕ್ಕೆ ಭಾವದ ಘಳಿಗೆಗೆ ಒಡ್ಡು ಹಾಕುವುದು ಕಷ್ಟವೆಂದರೂ, ಸಹೃದಯನಲ್ಲಿ ಉದಯಿಸುವ ಭಾವಕ್ಕೂ ಈ ದಿಸೆಯಲ್ಲಿ ಬೆಲೆಕೊಡಬೇಕಲ್ಲವೆ!

'ಮೋಡಿ ಹಾಕಿದ ಬೆಳಗು' ಲಯ ಸಾಂಗತ್ಯದಿಂದ ಮೆರೆವ ಕವನವಾಗಿದೆ. ಬೆಳಗನ್ನೂ, ಬೆಳಕನ್ನು, ಅರ್ಥಪುಷ್ಟಿಯಿಂದ ಕಂಡಬಗೆ ಬೆಡಗಿನ ಸಲಿಲವಾಗಿ ನಮ್ಮ ಮನಸ್ಸನ್ನು ತುಂಬುವ ಆಕರ್ಷಕ ಕವನವಾಗಿದೆ.

'ನಮ್ಮೂರ ಮಂದಾರ ಹೂವೇ', ತಾಳ, ಲಯ ಮಿಳಿತಗೊಂಡ ದನಿ ಸೊಗಡಿನ ಕವಿತೆಯಾಗಿದೆ. ಮಂದಾರ ಬೇಡಿದುದನ್ನು ಕೊಡುವ ಕಲ್ಪವೃಕ್ಷವಾಗಿ ಕವಿಯ ಊರಿನಲ್ಲಿದೆ. ಅಂತೆಯೇ ಬರಿದಾದ ಮನದಲ್ಲಿ ಮಿನುಗುವ ಬೆಳಗುವ ಭಾವನೆಗಳ ವಿಯದ್ ವಿಹಾರವಾಡುವ ಬಾಂದಳದ ಚೆಲುವಿನ ಪ್ರತೀಕವಾಗಿದೆ. ಇದು ಹುಟ್ಟೂರಿನ ಮಮತೆ ಆಡಿಸಿರುವ ಸಂವೇದನೆಯ ಹನಿಗಳು. ಹೀಗಾಗಿ ಭಾವ ಲಾಸ್ಯವಾಡಿ ಮುಂದಿನ ಎರಡು ಪದಗಳಲ್ಲಿ ಗೇಯಗುಣಿತ ತಂದಿದೆ. ಈ ಲಯಗುಣಿತ ಅಪರೂಪ ಎನ್ನುವುದಕ್ಕೆ ಪದದ ಕೊನೆಯ ಸಾಲು ಸಾರ ಮುಕ್ತಾಯ ತರುವಲ್ಲಿ ಹೊಸ ನೆಮ್ಮದಿಯ ಕೊಡುಗೆ ಎನ್ನುವಂತಿದೆ.

'ಮೋಹಕ ಮುಂಜಾನೆ'ಯಲ್ಲಿ ಗ್ರಾಮೀಣ ಸಹಜ ನುಡಿಗಳ ಚೆಲ್ಲುವರಿ, ಗ್ರಾಮೀಣರ ನಿಸರ್ಗಾನುಭವದ ಒಳಮೈಯ ದರ್ಶನ ನೀಡುತ್ತದೆ ಎಂಬುದಕ್ಕೆ, ರಸ ಶೃಂಗಾರದ ಕುಡಿನೋಟದಂತೆ 'ಕಣ್ಣಾಗೆ ಸಂಗಾತಿ ಕುಣದ್ದುಂಗೈತೆ' ಎಂಬ ಸಾಲು ಸಾರಸಂಕೇತವಾಗಿಬಿಟ್ಟಿದೆ. ಈ ಪರಿಸರಕ್ಕೆ ತುಸು ಶಿಷ್ಟದ ಸೆರಗು ವಯ್ಯಾರವಾಡಿ ಗ್ರಾಮದ ಸುತ್ತಲಿನ, ತೋಟ, ತೋಪು, ಹೊಂಬಾಳೆ, ಗದ್ದೆ, ಹೊಸಪೈರು, ಘಾಟಿ ಜಾತ್ರೆಯಲ್ಲಿ ಹಣಿಕು ಹಾಕಿ 'ಆಸೆ ಒಸಗೆ' ಕವನದಲ್ಲಿ ಚಾಚಿಕೊಂಡಿರುವಂತಿದೆ. 'ರಂಗಾಯಿತೋ ಮೂಡಣ ನಾಡು' – ಪ್ರಕೃತಿ ವೈಭವವ ಉಷೆಯ ಚೆಲುವನ್ನು ವರ್ಣಿಸಿದರೂ, ಸರಳತೆಯ ಮೇಳದಲ್ಲಿ ಉಳಿದುಬಿಡುತ್ತದೆ. ಈ ಪ್ರಕೃತಿ ವರ್ಣನೆಯ ಸಾಲುಗಳ ಏಳು ಬೀಳಿನ ನಡುವೆ 'ಪ್ರೀತಿ-ರತಿ' ಕವಿತೆಯಲ್ಲಿ ನಾಲ್ಕುನಾಲ್ಕು ಸಾಲುಗಳು ನೀಳಗೊಂಡರೂ, 'ಕಣ್ಣಬಿಂಬದಲ್ಲೂ ತುಂಟ ಕೀಟಲೆಯ ಮಧುಕುಣಿಸಿ' ಎಂಬ ಸಾಲು ಕುಡಿನೋಟದ ರಾಗರತಿಯನ್ನೇ ತುಂಬ ಚೆಲುವಾಗಿ ಕಳೆಗಟ್ಟಿಸಿಕೊಟ್ಟಿರುವುದು ಮನದ ಮುದವೇ ಗೆಜ್ಜೆ ಹೆಜ್ಜೆಯಂತೆ ಕುಣಿವ ಸಡಗರದಂತಿದೆ. ಹಾಗೆಯೇ 'ಇಬ್ಬನಿ ತಬ್ಬಿದ ಇಳೆ' ಕವನದ ಶೀರ್ಷಿಕೆಯ ಕಾವ್ಯದ ಬೆಡಗಾಗಿ, ಚಳಿಯ ಮೈಗೂ ಕಾವ್ಯದ ಕಾವು ತರಿಸುವಂತಿದೆ; ಇಡೀ ಕವನ ಪ್ರಕೃತಿಯ ರಮ್ಯನೋಟವನ್ನು, ಚೈತ್ರಕ್ಕೆ ಮೀಸಲಿಡದೆ ಇಬ್ಬನಿಯ ಕಾಲಕ್ಕೂ ಹರಡಿರುವ ಬಗೆ ಮೋಹಕವೆನಿಸುತ್ತದೆ. ಆದರೆ ಮೂರನೆಯ ಪದದ ಕೊನೆಯ ಸಾಲಿನ 'ಕಾವೇರಿಯ ನಾಟ್ಯ' ಶಬ್ದವೂ ಮೇಲಿಂದ ಬಂದ ಲಯಕ್ಕೆ 'ಕಾನನದ ಕಾವ್ಯ' ಎಂಬ ಶಬ್ದಕ್ಕೆ ಸಮಲಯದಲ್ಲಿ ಸಮಸ್ಪಂದಿಯಾಗಿಲ್ಲ ಎಂಬ ಭಾವ ತರುತ್ತದೆ. ಗಣದ ಒಂದು ಮಾತ್ರೆ (ಗುರು), ಛಂದೋ ಹೊಂದಾಣಿಕೆಯಲ್ಲಿ ಕವಿ ಪ್ರಯೋಗ ಎಂಬ ರೂಢಿಯಲ್ಲಿದೆ ಎಂದುಕೊಂಡರೂ, ಇಲ್ಲಿ ನಿಲ್ಲುತಟ್ಟನೆ

ಭಾವ ತಂದು ಮುದದ ಹೆಂತ ಪಲ್ಲಟವಾಯಿತೇ ಎಂಬ ಅನುಮಾನಕ್ಕೆ ಕಾರಣವಾಗಿದೆ. 'ವಿರಹ-ಸಹರಾ', ಹೆಸರಿಗೆ ತಕ್ಕಂತೆ ರೂಪುಗೊಂಡಿರುವ ಈ ಕವನದಲ್ಲಿ 'ಕೂರ್ಪ್ಯ ಅಂಕಿತ' ಹಾಕಿರುವ ಕಾರಣ ಪ್ರಿಯನ ಪ್ರೀತಿ ಉಕ್ಕುವಂಥ ಅಚ್ಚರಿಯ ಕಣವೊಂದನ್ನು ಸೃಷ್ಟಿಸುವಷ್ಟು ಸಾಫಲ್ಯ ಪಡೆದಿದೆ. 'ಮಾತಾಡೇ...ನೀರೆ', ಎಂಬ ಕವನ ಎಂದಿನ ರಾಗದೊರತೆಯ ಸಹಜ ದಾಂಪತ್ಯದ ಕವನವೆನಿಸುತ್ತದೆ. ಈ ರಾಗದ ಪರಿಸರದಲ್ಲಿಯೇ 'ತೇಲಿ ಬಂತು ತಿಂಗಳನಗೆ' ಕವನವು-ಪಾರಿಜಾತ ಪಲ್ಲಂಗ ಕರೆದಿಹುದು-ಎಂಬ ರೋಚಕ ರೂಪಕದೊಡನೆ ಕೊನೆಗೆ ಮನದುಂಬುತ್ತದೆ. 'ಸೌಮ್ಯ-ಸೆಲೆ' ಕವನದಲ್ಲಿ 'ಮಾನಸ ಅರಿವಿನ ಕೊಳದಲ್ಲಿ ದಿವ್ಯಜ್ಞಾನದ ಸೆಲೆಯಿದೆ. ಎಂಬ ತಾತ್ವಿಕ ನಿಲುವು ಮೂಡಿ ಬಂದರೆ, 'ತುಡಿತ-ಮಿಡಿತ', 'ವಿಶ್ವಾಸ ವರ್ಷ' ಕವನಗಳು ಎಂದಿನ ಜಾಯೆಯ ಮತ್ತು ಪತಿಯ, (ದಂಪತಿ) ಬದುಕಿನ ಚಿತ್ರವನ್ನು ನೀಡುತ್ತವೆ. ಈ ನಡುವೆ ಮುದಗೊಂಡ 'ರಂಗಾದ ಬೆಳಕು' ಪ್ರಕೃತಿಯ ಸಡಗರವನ್ನು ಚೆಲುವಾಗಿ ವರ್ಣಿಸಿದೆ.

'ಸವಿ ನೆನಪೇ ನನ್ನ ಕಾಡಿದೆ' ಎಂದು ನೆನಪುಗಳ ಹನಿಗಳು ವಕ್ರೀಭವನದ ಪ್ರಕ್ರಿಯೆಯನ್ನು ಸಾಂಗಗೊಳಿಸಿದಂಥ ಕವಿತೆ 'ನೊಂದ ಜೀವಕ್ಕೆ ಮಳೆಬಿಲ್ಲು' ಆಗಿದ್ದ ಸಾಂತ್ವನದ ಚಿತ್ರ ನೀಡುತ್ತದೆ; ಆ ಸ್ಮರಣೆಯೆ ಸಿರಿಸಂಪದದ ಹಸಿರ ಹೊನಲಾಗಿ ಜಳಕವಾಡಿಸಿದೆ. ಇನ್ನು 'ಪ್ರೇಮೋನ್ಮಾದ' ಕವನದಲ್ಲಿ ಕವಿಯ ತಾರುಣ್ಯದ ಚೈತನ್ಯಪೂರ್ಣ ರಾಗದ ಕನಸುಗಳು ತುಟಿಯಾಡಿಸಿದ ಬಗೆಯು, ಹಂಸದ ನಡೆ, ಚಂದ್ರನ ಸೊಬಗು, ಕೋಗಿಲೆಯಸ್ವರ, ಸಾಗರದೊಲವು, ಅಪರಂಜಿಗುಣ, ಮೀನಿನ ಕಣ್ಣು ಇತ್ಯಾದಿಗಳನ್ನು ಒಲಿದ ಜೀವದ ಬಗ್ಗೆ ಮಿಡಿಸಿದ ವರ್ಣನೆಯಲ್ಲಿ ಕಾಣಬರುತ್ತದೆ. ಅಲ್ಲದೆ ಪ್ರಕೃತಿಜನ್ಯ ರೂಪಕಗಳಲ್ಲಿ ಹೆಣ್ಣಿನ ಬೆಡಗನ್ನು ನೇಯ್ದಿರುವುದು, ಕಾವ್ಯರಮಣೀಯತೆಗೆ ಸಾಕ್ಷಿ ಎನ್ನುವಂತಿದೆ. ಬದುಕಿನ ಮೈಸಿರಿಯನ್ನು ಪ್ರಕೃತಿಯ ಚೆಲುವಿನ ಸಿರಿಗೆ ಮೇಳ ಮಾಡಿರುವ ಕೌಶಲ್ಯ ಇಲ್ಲಿ ಕಾಣುತ್ತದೆ. ಆದರೆ ಇದೇ ಮಾತನ್ನು 'ಮೈತ್ರಿ-ದಿವ್ಯ' ಕವಿತೆಯ ಬಗ್ಗೆ, ಅದು ಸರಳೀಕರಣಗೊಂಡಿರುವ ಕಾರಣ ಹೇಳಲು ಬರುವುದಿಲ್ಲ. ಇನ್ನು 'ಚೆಲುವಾಗಿದೆ-ಬದುಕು-ಗೆಲುವಾಗಿದೆ', ಹಾಗೂ 'ಪ್ರೇಮ-ಸಿಂಧು' ಕವಿತೆಗಳು ಕವಿಯು ಸಂಗಾತಿಯಲ್ಲಿ ಕಾಣುವ ಆಶಯಗಳ ಮೊತ್ತದ ಸ್ಥಿತಸ್ಥ ರೂಪವೆನಿಸುವಂತಿವೆ. 'ಮೋಹಕ ಮುಂಜಾನೆ' ಒಂದು ಅತ್ಯುತ್ತಮ ಪ್ರಕೃತಿಯ ರಮ್ಯ ಕವಿತೆಯಾಗಿ ಮೊದಲ ಎರಡು ಪದಗಳಲ್ಲಿ ಲಾಲಿಯಾಡಿ ರಂಗಿನ ಚವರಿಯನ್ನು ಬೀಸಿದೆ.

ಬಂಗಾರ ಮುಂಜಾನೆ ಬಾಂದಳದಿ ತೆರೆಸರಿಸಿ । ಸಿಂಗಾರ ರಶ್ಮಿ ಹೊಳೆ ರಂಗವಲ್ಲಿ;
ಗಿಡಬಳ್ಳಿ ಮಾಡದಲಿ ಗೊರವಂಕ ಗಿಳಿಕೂಗಿ । ಹಸಿರುದಿನ್ನೆಗಳಲ್ಲಿ ಗೀತ-ಲಾಲಿ
ತೋಟ ತುಡಿಕೆಗಳಲ್ಲಿ ಕಿರಣ ಸ್ನಾನವ ಮಾಡಿ । ಪುಳಕಗೊಂಡವು ಪಕ್ಷಿ-ಮೇಳಕೇಳಿ
ಊರ ಗೋವುಗಳೆಲ್ಲ ಹುಲ್ಲುಗಾವಲಿನಲ್ಲಿ । ಅತ್ತಿತ್ತ ಹರಿಯುತಿವೆ ಕರುಗಳರಸಿ॥

ನಿಸರ್ಗದ ತಂಬುಲ ಇಲ್ಲಿ ಪಾವಿತ್ರ್ಯದ ರಸಚಿಮ್ಮುಗೆಯಾಗಿ ವರ್ಣಿತವಾದಂತಿವೆ 'ಗಿಡಗಂಟೆಯ ಕೊರಳಲಿ', ಹೊಸ ಕಲ್ಪನೆಯಾಗಿ ಹಸಿರುದಿನ್ನೆಗಳಾದ ಮರಗಿಡಗಳಲ್ಲಿ ಕಾಣಿಸಿಕೊಂಡಿರುವ ಬಗೆಯು ಮೋಹಕವಾಗಿ ವರ್ಣನೆಗೊಂಡಿದೆ. ಗೋವುಗಳು ಕೇವಲ ಕರುಗಳನ್ನು ಅರಸುವುದಿಲ್ಲ, ಮಾತೃವಾತ್ಸಲ್ಯದ ಅಮೃತ ಕುಂಭದ ಉಣಿಸೂಡಿಸಲು 'ಅರಸಿ'ಯಾಗಿಯೂ ಅರಸಿವೆ. ದೊಡ್ಡರಂಗೇಗೌಡರ ಕಾವ್ಯದ ಬನಿ ಇಲ್ಲಿ ಬಹು ಪ್ರಫುಲ್ಲವಾಗಿ ಕಾಣಿಸಿಕೊಂಡಿದೆ. ರೂಪಕಶಕ್ತಿ, ವರ್ಣನಾ ಪೌಷ್ಠಿಕತೆ ಲಯದ ಸೊಬಗು ರಮ್ಯವನದಲ್ಲಿ ಸಾಮಾಜಿಕ ಕಚಕುಳಿ ಇಟ್ಟುತುಂಬಿ ಬಂದಿವೆ. ಕವಿಯ ಎಲ್ಲ ಕವನಗಳಾಗಲಿ, ಎಲ್ಲ ಸಾಲುಗಳಾಗಲಿ ಚೆಲುವಿನಿಂದ ಕೂಡಿರುತ್ತವೆ ಎನ್ನುವಂತಿಲ್ಲ. ಆದರೆ ಇಂಥ ಪ್ರಾಕೃತಿಕ ಸಂವೇದನೆಯ, ಭಾವದ ಮಿಡಿತಗಳು ಉಕ್ಕುವ ಸಾಲುಗಳೇ ಆತನ ಕಾವ್ಯಶಕ್ತಿಯನ್ನು ಮೊಗೆದು ಮೊಗೆದು ತೋರುತ್ತವೆ. ವಚನಕಾರ ಚನ್ನಬಸವಣ್ಣ 'ಅನುಭಾವ ಒಂದು ನಿಮಿಷ ಸಾಲದೆ?' ಎಂದ. ದಾಸಿಮಯ್ಯ 'ಶರಣರ ಸೂಳ್ನುಡಿಯ ಒಂದರಘಳಿಗೆ ಇತ್ತ ನಿಮ್ಮನಿತ್ತೆ ರಾಮನಾಥಾ' ಎಂದ. ಹಾಗೆಯೇ ಕವಿ ಕೊಡುವ ಕಾವ್ಯಾನುಭವದ ಘಳಿಗೆ ಅವನ ಸತ್ವದ ದರ್ಶಿನಿಯಾಗಿರುತ್ತದೆ.

'ತಿಂಗಳ ಕಾವ್ಯ', 'ಮಂದಾರದ ಮೊರೆ' ಕವನಗಳ ಎಂದಿನ ಪ್ರಕೃತಿ ಗೀತೆಗಳಂತಿದ್ದರೆ. 'ಪರಿಸರಗೀತೆ'ಯ - ನೆಲಬೀಳಾದರೆ ಬನ ಹಾಳಾದರೆ ಸಮೃದ್ಧಿಯು ಇನ್ನೆಲ್ಲಿದೆ? - ಎಂಬ ಸಾಲು ಸಾಮಾಜಿಕ ವಾಸ್ತವದ ನಾಣ್ನುಡಿಯಂತೆ ನಮ್ಮ ಗಮನ ಸೆಳೆಯುತ್ತದೆ. 'ಬೆಡಗು' ಸರಾಗವಾಗಿ ಓದಿಸಿಕೊಂಡು ಹೋಗುವ ನಲಿವಿನ ಮಕ್ಕಳ ಹಾಡಿನಂತಿದೆ. 'ಜನುಮ ಜನುಮದ ಕಳೆ'; ಸಂಗಾತಿಯಲ್ಲಿ ಕಂಡ ಸೊಗಸಿನ ಚಿತ್ರವನ್ನು ಕೊಡುತ್ತದೆ. ಪ್ರಕೃತಿಯ ಮೈಸಿರಿಯೊಡನೆ ತೂಗಿ ನೋಡಿದೆ. ಆದರೆ 'ಕಾನನದ ಕಾವ್ಯ', ಹಿಂದೆ ಬಂದ 'ಇಬ್ಬನಿ ತಬ್ಬಿದ ಇಳೆ'ಯ ಪುನರಾವರ್ತನೆಯಾಗಿದೆ. 'ಮಾರ್ಪಾಟು', ಈ ಕವಿ ನಡೆದು ಬಂದ ಬಾಳಿನ ಕಷ್ಟ-ಸುಖಗಳ ನಡೆಮುಡಿಯ ಭಾವದ ಪುಳಕವಾಗಿದೆ. ಅಂತಾಗಿಯೆ 'ರೆಂಬೆ ರೆಂಬೆಯಲ್ಲಿ ಮೊಗ್ಗು ಮಾತಾಡಿತು; ಮಾತು ಹಿಗ್ಗಿ ಗೀತವೆಂಬ ಹೂ ಬಿಟ್ಟಿತು' ಎಂಬ ಸಾಲು ಅವರ ಬದುಕನ್ನು ಅರ್ಥಪೂರ್ಣವಾಗಿ ಮಂಡಿಸಿದೆ. ಈ ಕವಿತೆಯನ್ನು ಶ್ರೀ ಗೌಡರ ಇನ್ನೊಂದು ಸಮಾಜಮುಖಿ ಕವಿತೆಗಳ ಸಂಕಲನ 'ಯುಗವಾಣಿ'ಯ ಮೊದಲ ಕವಿತೆ 'ಹೆಜ್ಜೆಗುರುತು' ಕವಿತೆಯೊಡನೆ ಹೋಲಿಸಿದರೆ ಪುಷ್ಟಿಯುತ ಸಾಮ್ಯದ ಸೊಗಡು ಕಾಣುತ್ತದೆ. ಅದರಲ್ಲಿ ಬರುವ

ಗೊಬ್ಬರ ತುಂಬಿದ ಕೈ ಬರೆದ । ಮಣ್ಣಿನ ಹಾಡು ನನ್ನದು
ಸಗಣಿ ಮೆತ್ತಿದ ಬೆರಳು ಹಿಡಿದ । ಗ್ರಾಮೀಣ ಲೇಖನಿ ನನ್ನದು!
ಬೆವರು ಸುರಿಸಿ ಕಷ್ಟದಿ ದುಡಿದ । ನೆಲದ ಪದ ನನ್ನದು
ಮುದ್ದೆ ಸೊಪ್ಪಿನ ಸಾರು ಕಂಡ । ರೈತರ ಮುದ ನನ್ನದು

ಬಿಸಿಲೇ ಇರಲಿ ಮಳೆಯೇ ಬರಲಿ । ದುಡಿಯೋ ಕಾಯಕ ನನ್ನದು
ಅವರ ಇವರ ಕೈಯೊಡ್ಡಿ ಬೇಡದ । ಸ್ವಂತ ಬದುಕು ನನ್ನದು

ಈ ಮಾತುಗಳೊಡನೆ 'ಮಾರ್ಪಾಟು' ಕವಿತೆಯ ಸಾಲುಗಳು:

ಬೆಳಗೆನ್ನದೆ ಬೈಗೆನ್ನದೆ ಹಸಿವೆನ್ನದೆ ಉಸುರ್ ಎನ್ನದೆ
ಮಳೆಯೆನ್ನದೆ ಬಿಸಿಲೆನ್ನದೆ ಪೈಸೆ ಎನ್ನದೆ ರೂಪಾಯಿ ಯೆನ್ನದೆ
ಕರ್ತವ್ಯದ ಪಥ ತುಳಿದೆ ವರುಷ ವರುಷ ದುಡಿದೆ

ಇವನ್ನು ಹೋಲಿಸಿ, 'ಸಣ್ಣ ಪುಟ್ಟ ಕವಿತೆ ಶಹರ ಸೇರಿಯಿತು । ಬವಣೆ ಬದುಕ

ಸಹರಾ-ನಂದನವಾಯಿತು....ಮಾತು ಹಿಗ್ಗಿ ಗೀತವೆಂಬ ಹೂ ಬಿಟ್ಟಿತು'

ಇಲ್ಲಿ ಮಣ್ಣಿನ ಹಾಡು ಶಹರಕ್ಕೆ ಬಂದು ತನ್ನ ಸೊಗಸನ್ನು ಬೆಡಗು ಬನಿಗಳಿಂದ ಪ್ರಫುಲ್ಲಗೊಂಡ ಬಗೆಯನ್ನು ತಿಳಿಸುತ್ತದೆ; ಕೇವಲ ತಿಳಿಸುವುದಿಲ್ಲ. ಕವಿಯೇ 'ಮೆಟಮಾರ್ಫಸಿಸ್'ಗೊಂಡೂ ಹೊಸ ಲೋಕದ ಜಾಣ್ಮೆಯಲ್ಲಿ ಹಳ್ಳಿಯ ಗಟ್ಟಿ ಜಾಡನ್ನು ಆಕರ್ಷಕವಾಗಿ ವಾಸ್ತವವಾಗಿ ಮಂಡಿಸಿರುವುದು ಸತ್ವದ ನಿಕೇತನವಾಗಿ ಕಾಣುತ್ತದೆ. ಒಂದರಲ್ಲಿ ಸಹಜ ಬದುಕಿನ ಭಾರತೀಯ ರೈತ ಬಾಳಿನ ನೆಮ್ಮದಿಯ ಗುಟ್ಟನ್ನು ಸ್ಪಷ್ಟವಾಗಿ ಬಯಲುಗೊಳಿಸುವ ಸರಳ ತುಂಬೆಯ ಚೆಲುವಿದೆ. ಇನ್ನೊಂದರಲ್ಲಿ ಶಹರದ ಬದುಕಿನ ಯಾಂತ್ರಿಕ ಗಿರಿಗಿಟ್ಟಲೆಯೊಳಗೂ ಸ್ಥಾಯಿಬಿಂಬದಲ್ಲಿ ತಿರುಗುವ ಧಾಷ್ಟ್ಯವಿದೆ. ಇವೆರಡರ ಸಮನ್ವಯ ಸಿರಿ ಈ ಕವನಗಳ ಉಭಯ ಸಂವೇದನೆಯಾಗಿದೆ. ಬದುಕಿನ ಹಾಡು ಆಗಿದೆ. ಪ್ರಕೃತಿ ಹಾಗೂ ಬದುಕಿನ ಅನುಭವಗಳ ಗಟ್ಟಿ ಶೋಧನೆಯ ಸಾರವನ್ನುವಂತಿದೆ. ಗೌಡರ ವಿದ್ಯಾರ್ಥಿದೆಸೆ ಹಾಗೂ ಅಂಚೆ ಕಛೇರಿಯ ಕಾಯಕದ ನಡುವಿನ ಮುಗ್ಧನಗೆಯನ್ನು ಹತ್ತಿರದಿಂದ ಕಂಡಿದ್ದ ನನಗೆ ಈ ಉಭಯಕವಿತೆಗಳಲ್ಲಿ ಅದರ ಪ್ರತಿಮಾ 'ಸೃಜನೆ ಕಾಣುತ್ತದೆ.' ಗತಿ ಬಿಂಬದ 'ಸ್ಥಿತಿ ಬಿಂಬ'ದ ಸಮರಸ ರಥೋತ್ಸವ ಕಾಣುತ್ತದೆ. ಹೀಗಾಗಿ 'ಬದುಕೇ' ಗೌಡರ ತೇರಿನ ದೇವ; ಹಣ್ಣು ದವನದ ಸ್ವೀಕಾರದಲ್ಲಿ ನಗುವ ಭಾವದೇವ. 'ಅರ್ಥ' ಕವಿತೆ ಅರ್ಥಪೂರ್ಣಸಾಲುಗಳನ್ನು ಹೊಂದಿರುವ ರೀತಿ:

'ಒಲುಮೆಗೆ ಅರ್ಥವು ಒಲಿವುದರಲ್ಲೇ । ದ್ವೇಷವು ಗಡಿಪಾರಲ್ಲೇ'
'ಕರುಣೆಗೆ ಅರ್ಥ ಕರುಣೆಗಳಲ್ಲೇ । ಕಟುಕರ ನಿರಾಕರಣಯಲ್ಲೇ'

ಈ ಸಾಲುಗಳಲ್ಲಿ ಗುಣವಿಶೇಷಗಳಿಗೆ, ಪಾತ್ರ ಸೃಷ್ಟಿಮಾಡುವುದಷ್ಟೇ ಅಲ್ಲ, ಮೌಲ್ಯ ಪ್ರತಿಮೌಲ್ಯ ಆಗಿ ವ್ಯಕ್ತಿತ್ವ ಕಡೆದ ಶಿಲ್ಪವಿದೆ. ಆದರೆ 'ಗಡಿಪಾರಲ್ಲಿ' ಎಂಬ ಶಬ್ದ ಏಕೋ ಭಾವಸಂಸ್ಕಾರಕ್ಕೆ ಮಿಡಿಯಬಲ್ಲ ಪದವಲ್ಲವೆನಿಸುತ್ತದೆ. ಇಲ್ಲಿ ಒಲುಮೆಗೆ ಅರ್ಥಕೊಡುವಲ್ಲಿ, ಕರುಣೆಗೆ

ಅರ್ಥಕೊಡುವಲ್ಲಿ ವ್ಯಷ್ಟಿ-ಸಮಷ್ಟಿಗಳ ಚಿಂತನೆ ಅಂತರ್ದರ್ಶಿನಿಯಾಗಿದೆ. ಇದೇ ಗುಂಗಿನೊಳಗಾದ ಸಹೃದಯ ಮುಂದಿನ ಕವಿತೆ 'ದೂರಾದ ಹಕ್ಕಿ'ಯನ್ನು ಓದಿದಾಗ ಪ್ರೀತಿಯ ಹಕ್ಕಿಯ ಬರವನ್ನು ಧೇನಿಸುವ, ಕಾತರಿಸುವ, ತೀವ್ರಸಂಗ ಬಯಸುವ ಕವಿಯ ವಿರಹವೇದನೆಯ ಕಾವಿಗೆ ತಾಗುತ್ತಾನೆ. ಆದರೆ ಹಳ್ಳಿ ಹಾಗೂ ನಗರದ ನಾಲಗೆಯ ಭಾಷಾ ಪ್ರಯೋಗಗಳ ನಡುವೆ ತುಳುಕಾಡುತ್ತಾನೆ. ಜೊತೆಗೆ ಪ್ರೀತಿ ಹಕ್ಕಿ ಎಂಬ ಪದ ಪ್ರಯೋಗವೂ, ಇದೇ ಸಂಕಲನದಲ್ಲಿ ಬರುವ ವಿರಹದ ಹಕ್ಕಿ ಕವಿತೆಯಲ್ಲೂ ಬರುವ ಅದೇ ಪ್ರಯೋಗವು ಅಷ್ಟು ಹಿತವೆನಿಸುವುದಿಲ್ಲ. ಅಲ್ಲದೆ 'ವಿರಹದ ಹಕ್ಕಿ'ಯಲ್ಲಿ ಸಹೃದಯ ಅನುಭವಿಸುವ ತನ್ಮಯತೆ, 'ದೂರದ ಹಕ್ಕಿ' ಕವಿತೆಯೋದಿದಾಗ ಪುಟಗೊಡುವುದಿಲ್ಲ. ಬಹುಶಃ ಅಲ್ಲಿನ ಭಾವತೀವ್ರತೆ ಇಲ್ಲಿ ವೊನಚುಗೊಳ್ಳದ ಕಾರಣವಿರಬಹುದು.

'ವ್ಯಕ್ತಾವ್ಯಕ್ತ' ಕವಿತೆಯೊಂದು ಅದ್ಭುತ ತಾತ್ವಿಕ ಶಿಲ್ಪವಾಗಿ ಕಾಣುತ್ತದೆ; ಕಾಡುತ್ತದೆ. ಜಗದ ಬೆಳಗು-ಸಂಜೆಗಳು ಜೀವದೊಡಲುಗಳಲ್ಲಿ ಸಂಚಲನ ಹಾಗೂ ನೆಮ್ಮದಿಯ ಸಮರಸ ಪಥದ ಯಾತ್ರಾನುಭವವನ್ನು ತಂದು ಕೊಡುತ್ತವೆ. ವಾಸ್ತವದಾಚೆಯ ತತ್ವದ ಕುರಿತು ಕವಿಗೂ ಸೋಜಿಗದ ಚಿಂತನೆಯನ್ನುಕ್ಕಿಸಿದೆ. ಈ ಕವಿತೆ ತತ್ವದ ಭಾರವೆನಿಸದೆ ಪ್ರಕೃತಿಸಹಜ ವ್ಯಾಪಾರವನ್ನು ಕವಿಯ ಮನಸ್ಸು ಮಾಗಿದ ಮನಸ್ಸಾಗಿ ದರ್ಶನ ಮಾಡುವ ಸೂಚನೆ ಇಲ್ಲಿದೆ.

'ಬೆಟ್ಟದ ತುದಿಯಲ್ಲಿ', ಕವಿತೆಯು ನಿಸರ್ಗದ ಸಹಜ ಲಲಿತ ಸೌಂದರ್ಯವನ್ನು ವರ್ಣಿಸುತ್ತ, ಕಾನನದ ಲಾಲಿ ಹಕ್ಕಿ ಎಲೆ ಎಲೆ ಮೇಲಿನ (ಇಬ್ಬನಿ) ಮುತ್ತ, ಬಳುಕುವ ಹೊಳೆ, ಧುಮುಕುವ ಅಬ್ಬಿ, ತುಳುಕಾಡುವ ಮಾಂಘಲದ ತೋಪು, ಚೈತ್ರದ ಚೆಲುವು, ಮೆರೆಯುವಲ್ಲಿ ಸಡಗರವಾಗುವಲ್ಲಿ ನಾಕವು ನಲಿವ ಇಳೆಗೆ ಬಂದಿರುವ ಹದವನ್ನು, ಹದುಳವನ್ನು ತೋರುವಂತಿದೆ. ಇಲ್ಲಿ ಲಯಗಾರಿಕೆ ಲಾಸ್ಯವಾಡಿದೆ. ಭಾವ ಬೆಡಗಾಗಿದೆ. ಅರ್ಥ ಮೈದುಂಬಿದೆ. ತಾಳ ಗೆಜ್ಜೆಯಾಡಿದೆ. ಜನಪದ ಲಾಲಿ ಎದೆಯ ಹಾಡಾಗಿ ಬಂದಿದೆ. ನಿಸರ್ಗದ ಪ್ರತಿಯೊಂದು ಕಣಗಳಿಗೂ ಒಪ್ಪಿಸಿರುವ ರೂಪಕ ಸಿಂಚನ ನಮ್ಮ ಮನಸ್ಸಿಗೆ ಹರ್ಷವನ್ನು ಬಳಸುವರಿದಿದೆ. ಅದೊಂದು ರೀತಿ 'ಸ್ವರ್ಗಾನೆ ಇಳಿದೈತೋ!' "Nature is red in her tooth and claw' ಎಂಬ ಮಾತು ಇಲ್ಲಿ ಸದ್ಯ ಮರೆಯಾಗಿ ಬಿಡುತ್ತದೆ. ಇದೂ ಒಂದು ಸಾಧನೆಯೆ! ಇದೇ ಚೆಲುವಿನ ಮೂಡಿನಲ್ಲಿ ಹೊಕ್ಕುಮನಸ್ಸು ಮುಂದಿನ ಕವಿತೆ 'ಅರ್ತಿಗೀತೆ'ಯಲ್ಲಿ ಮುಳುಗಿದಾಗ 'ಹೆಜ್ಜೆ ಹೆಜ್ಜೆಗೆ ಹೂವು ಚೆಲ್ಲಿ ಹೃದಯವೆಲ್ಲ ಅರಳಿದೆ' ಎಂಬ ಭಾವ ಪುಳಕದೊಡನೆ ಮಿಳನಗೊಳ್ಳುತ್ತದೆ. ಇವೆಲ್ಲ ಬುದ್ಧಿಮೀರಿದ ಭಾವಸ್ಪಂದನ. ಈ ಕವನದಂಗಳದಿಂದ ದಾಟಿ ಬಂದವರಿಗೆ 'ನಿನ್ನ ನೀ ಅರಿಯೋ', 'ಆಶಾ ಜೀವನ', 'ನಮ್ಮ ನಾಡು' ಕವಿತೆಗಳು ಸಾಧಾರಣ ಕವಿತೆಗಳಂತೆ ಕಾಣಿಸಿಕೊಳ್ಳುತ್ತವೆ. 'ಸತ್ಯ ಸಶೇಷ', 'ಪ್ರೇಮವೇ ಸಿರಿದೇವಿಗೆ', 'ಹೇಂಮಂತ ಗಾನ' ಕವಿತೆಗಳು ಹೆಚ್ಚಿಗೇನು ಹೇಳಿಸಿಕೊಳ್ಳಲಾರವೆನಿಸುತ್ತದೆ.

'ಸಮತಾಗೀತೆ' 'ಹಸರೇ ಉಸುರುವಂತೆ ಭೇದಮೀರಿದ ಮಾನವ ಕುಲದ ಹೆಗ್ಗಳಿಕೆ ಹೇಳುತ್ತದೆ; 'ಜಮುಕು ಭಾರ'-ನಗರದ ಯಾಂತ್ರಿಕ ಬಾಳಿನ ದುಗುಡವನ್ನು ಬಿಂಬಿಸುತ್ತದೆ; 'ಫಲವು ಸಿಗುವುದೇನೋ?' ಎಂಬ ಪ್ರಶ್ನೆಯ ಕವಿತೆ ಬೆವರಿನ ಬೆಳಸು ಸೋಲಿನ ಸ್ವರ ತರದೆ ಹರ್ಷದ ಹೊಳಪು ತರುವಂಥ ಘಳಿಗೆಗಳನ್ನು ಉಕ್ಕಿಸಲಿ ಎಂಬ ಆಶಯವನ್ನು ತೋಡಿಕೊಳ್ಳುತ್ತದೆ. ಅಂತೇ 'ಕಳವಳ...ಮರೆಸುವಂಥ ಘಳಿಗೆ ಬಂದಿತೇನು ದೀವಳಿಗೆ ಬಾಳಿಗೆ', ಎಂಬ ಮಾತಿನಲ್ಲಿ ಅದು ನಿರೀಕ್ಷೆಗಳ ಹಂಬಲವನ್ನಿಟ್ಟಿದೆ. ಇದಕ್ಕೆ ಉತ್ತರವೆಂಬಂತೆ ಬಂದಿರುವ ಮುಂದಿನ ಕವಿತೆ 'ಉಗಾದಿ' ಹೇಳಿದೆ.

ನೂರು ನೋವಮರೆಸಿ । ನಲ್ಮೆ ಚೆಲುವನಿರಿಸಿ...
ಮಾವು ಬೇವ ನಗಿಸಿ । ಬಂತು ಸಿರಿಯುಗಾದಿ
ಬೇವಲ್ಲೂ ಬೆಲ್ಲ ಕೂಡಿ । ಶ್ರೀಮುಖವು ತೆರೆದು ಹಾದಿ
ಬಂತು ಸಿರಿ ಯುಗಾದಿ

ಇಲ್ಲಿ ವಿಶೇಷವೆಂದರೆ, ಮಾವು ನಗುವುದನ್ನು ಎಲ್ಲರು ಕಂಡಿದ್ದಾರೆ. ಆದರೆ ಬೇವು ನಗುವುದು ಯಾವಾಗ! ಅದೇ ಯುಗಾದಿಯ ಚೈತ್ರದ ಕಾವಿನಲ್ಲಿ ಅರಳಿದ ಬೇವಿನ ಹೂವು ಹಸಿರೊಡಲ ಪೂಗುಚ್ಛವಾಗಿ ಬಾಗಿಲ ತೋರಣದಲ್ಲಿ ಕಂಗೊಳಿಸುವಾಗ; ಜೀವನದ ಸಹಜ ತತ್ವವನ್ನು ಮೇಳೈಸಿ ಕೊಡುವ ಬೇವು ಬೆಲ್ಲಕೂಟವಾದಾಗ. ಇಂಥ ಶ್ರೀಮುಖಗಳನ್ನು ತೆರೆದು ತರುತ್ತದೆ ಯುಗಾದಿ. ಅದು ಸುಖವೂ ಇದೆ, ಕಷ್ಟವೂ ಇದೆ ಎಂದು ಬಾಳಿನ ಉಭಯ ಮುಖಗಳ ತಾತ್ವಿಕ ದರ್ಶನವನ್ನು ಸಾಮಾಜಿಕ, ಸಾಂಸ್ಕೃತಿಕ ನಡವಳಿಕೆಗಳಲ್ಲಿ ತೋರಿಸಿಕೊಡುತ್ತದೆ. ಅಂತಿರುವಲ್ಲಿ ಅದೇ ಯುಗಾದಿ, ಅದೇ ಹಬ್ಬ ಎಂಬ ಕ್ಲೀಷೆಯ ಮಾತುಗಳಿಗಿಂತ, ಮತ್ತೆ ಮತ್ತೆ ಬರುವ ಯುಗಾದಿ ನಮ್ಮ ಸಕ್ರಿಯಶೀಲತೆಯ ನಿರಂತರ ಚಾಲನೆಗಾಗಿ ಎಚ್ಚರಿಸುವ ಸಾಂಸ್ಕೃತಿಕ ಪ್ರತೀಕವಾಗುತ್ತದೆ.

'ಒಳದನಿ' - ಲೆಕ್ಕವಿರದ ಕವಿತೆಗಳಲ್ಲಿ ಪಿಸುಮಾತು ಲಗ್ಗೆ ಹಾಕಿದಾಗ, ಪರಸ್ಪರ ವಿವೇಚನೆ, ಸಂವಾದ ಬೆಳಕಿನ ಬೆಳೆಯನ್ನು ತರುತ್ತವೆ; ನೂರು ಸ್ವಗತಗಳು ಈ ತಿಳಿವಿನ ಬೆಳಕಿನಲ್ಲಿ ಗೀತೆಯಾಗೆ ಆತ್ಮದ ಹಂಬಲವಾಗಿ ಬರುತ್ತದೆ, ಎಂಬ ಅಂಶಗಳನ್ನು ನಮಗೆ ಮುಟ್ಟಿಸುತ್ತದೆ. ಇಂಥ ಒಳದನಿಯ ಮೂಸೆಯಲ್ಲಿ ಉದ್ಭವಿಸಿರುವ 'ಚುಕ್ಕಾಣಿಯಿರದ ಹಡಗು' ಕವಿತೆ ದಾಂಪತ್ಯದ ಗುಟ್ಟನ್ನು, ಬಾಳಸಂಗಾತಿಯ ನೆರವನ್ನು ಹಡಗು ನಡೆಸುವ ಉರುವಲಿನಂತೆ, ಇಂಧನದಂತೆ ಕಾಣುವ ಹವಣನ್ನು ಬಿಂಬಿಸಿದೆ. ಹಾಗೆಯೇ ಸರಸ ದಾಂಪತ್ಯದ ಕಚಕುಳಿಯಂತೆ-ಪ್ರೀತಿ ಪ್ರೇಮದ ಅಮಲಿನಲ್ಲಿ ಅಭಿಲಾಷೆ ನಿನ್ನ ಪಲುಕು-ಎನ್ನುವ ಸಾಲು ಧ್ವನಿಸೊಬಗಿನಿಂದ ಉಕ್ಕಿ ಬಂದಿದೆ. ಅಮಲಿನಲ್ಲಿ ಅಭಿಲಾಷೆಗಳೆಲ್ಲ ಸರಾಗದ ಹಳಿಯಲ್ಲಿ

ಒಡುತ್ತವೆ ಅಲ್ಲವೆ! ಹಾಗಾಗಿ ಮಧುರ ರಸರಾಗ ಮನದ ಕಿವಿಗೆ ಇಂಪಾಗಿ ಕೇಳುವ ಕಾವ್ಯದ ಈ ಸಾಲು ಪುಳಕಮುದದ ಪ್ರತೀಕದಂತಿದೆ.

'ಹೊಸತು ಸೊಬಗು-ಹೊಸತು ಹಾಡು'ವಿನಲ್ಲಿ ಮರದೈಸಿರಿ ಮೈಸಿರ ತರುಣಿಯೊಲು ಇಳಾದೇವಿ ಚೆಲುವೆಯಾಗಿ ಕಾಣುತ್ತ 'ಋತುಗೀತ' ಕವಿತೆಯತ್ತ ಸಾಗುವ ಮನಸ್ಸಾಗುತ್ತದೆ. ಕಾರಣ 'ಟೊಂಗೆ ಟೊಂಗೆಗೂ ಕೋಡುಮೂಡಿ ಗಿಣಿಯ ಮೈಯ ಪಡೆದಿವೆ'; 'ಈ ವಸುಂಧರೆ ತನ್ನ ಸೀರೆ ಬದಲಿಸುವಲ್ಲೂ ಶಾಂತ ಚಹರೆ'; 'ನೂರು ರಂಗಿನ ಬೆರಕೆ ರವಿಕೆ ತೊಟ್ಟಳೇ ಭೂ ತಾಯಿ... ಈ ಚೈತ್ರಕ್ಕೆ?' ಎಂಬ ರೂಪಕ ಶಕ್ತಿಯ ಮನೋಹರ ಸಾಲುಗಳು ಪ್ರಕೃತಿ ವೈಭವವನ್ನು ಋತು ಸೃಷ್ಟಿಯಾಗಿ ಆವಿಷ್ಕಾರಗೊಳಿಸಿರುವ ಕಾವ್ಯ ಸಂವೇದನೆಯನ್ನು ಮೊಗೆದು ಮೊಗೆದು ಕೊಟ್ಟಿರುವುದಾಗಿದೆ. ರಸದ ಹೊನಲು ಪ್ರಕೃತಿಯ ಸಿರಿಯ ತೀರ್ಥೋದ್ಭವದಂತೆ ಚಿಮ್ಮಿ ಬಂದಿದೆ. ಈ ಬಗೆ ಸೊಗಸು ಮುಂದಿನ ಕವಿತೆ 'ಹೊಂಬಾಳೆ ಹೂ ಅರಳಿತೋ!' ಯಲ್ಲಿ ಪುಷ್ಟಿಯಾಗಿ ಮನಸ್ಸಿಗೆ ತಾಗುವುದಿಲ್ಲ.

'ಅನುರಾಗ ತೋಟ' ಶೀರ್ಷಿಕೆ ಹೊಂದಿಕೊಳ್ಳುವ, 'ಅರಿ'ಯನ್ನೂ ಮೀರುವ ಉಭಯ ಭಾಷಾ ಶಬ್ದಗಳ ಸಮರಸವಾಗಿ ಕಾಣುವಂತಿದೆ. ಅನುರಾಗ ತೋಟದ ಹೂವು ರಾಗದ ಸರಳ ಹಾಡಿನಿಂದ, ಪಲುಕು ಪಕಳೆಗಳಿಂದ ಮನದುಂಬಿಯನ್ನು ಆಕರ್ಷಿಸುವ ಬಳುಕು ತೋರಿದೆ. 'ಬಳ್ಳಿ ಮರವನು ತಬ್ಬಿ ಬೆಳೆವುದು ನೋಡಿ' ಕವಿಯ ಕೋಮಲ ಕಾವ್ಯ ಶುಭಯೋಗದ ರಸಸಂಗಾತಿಯಾಗಲೆಳಸಿದೆ.

'ಅವಿಭಾಜ್ಯ ಗೀತೆ'ವೊಂದು ಯೌವ್ವನ, ಪ್ರಕೃತಿ, ಬದುಕು, ತಾತ್ವಿಕ ಚಿಂತನೆಗಳ ವ್ಯೂಹ ಪ್ರಶ್ನೆಗಳನ್ನಿಡುತ್ತ ಬೆರಗುಗಳ ಭಾವಕ್ಕೆ ನಮ್ಮನ್ನೊಡ್ಡುವ ಕವನವಾಗಿದೆ. 'ವಚನ' ಸ್ವರೂಪದ ಚಿಂತನೆ ಮೂಲಿಕೆಯಾಗಿಬಂದರೂ ಅವು ವಚನಭಾವವಾಗಿ ನಿಂತು ಬಿಡುವಂತಿದೆ. ಕವಿಗೇ ಅಗೋಚರವಾಗಿ ಮೂಡಿಬಂದ ಸಾಲುಗಳು ಹರಿದಂತಿವೆ. ಇದೇ ನಿಟ್ಟಿನಲ್ಲಿ 'ಅಮೃತಬಳ್ಳಿ' ಕವಿತೆಯನ್ನು ಗಮನಿಸುವಾಗ ಪ್ರೀತಿಯ ಆಳವನ್ನು ತಾತ್ವಿಕ ಆಶಾವಲಯದಲ್ಲಿ ಭರವಸೆಯಿಂದ ಜಗಿದ ಸಾಲುಗಳನ್ನು ಕವಿ ಮುಂದಿಟ್ಟಿರುವುದು ಕಾಣುತ್ತದೆ: 'ಗಂಡು ಹೆಣ್ಣಿನಲ್ಲೂ ಚಿಗಿತ ಪ್ರೀತಿಯ ಹಿರಿಮೆ-ಕವಿ ಎಷ್ಟೆ ಹಾಡಿದರೂ, ಅದು ಕೂಡ ಕಡಿಮೆ!' ಇದು ಶಬ್ದಮೀರಿದ, ಭಾವ ಮೀರಿದ ವ್ಯಾಖ್ಯೆಯಾಗಿದೆ.

ಈ ನಡುವೆ ವಾಸ್ತವಕ್ಕೆ ರಂಗು ತಂದು ಮನಂಬೊಗಿಸಿರುವ ಕವಿತೆ 'ಶೋಷಣೆಯ ಕಥೆ' ಬಂದಿದೆ. ಜಗತ್ತಿನ ಅನ್ಯಾಯವೊಂದನ್ನು ಎಳೆ ಎಳೆಯಾಗಿ ಬಿಡಿಸಿ ಕವಿಗೇ ಹೆಣ್ಣು ಮೈದುಂಬಿ ಬಂದಂತೆ ಮಂಡಿಸಲಾಗಿದೆ ಆಡಿ ನಲಿವಾ ಎಳೆಯ ಹೆಣ್ಣು ಹೆರುವ ಹೆಣ್ಣಾಗಿ ಹಣ್ಣಾದಳೋ ಎನ್ನುವಲ್ಲಿ ಅವಳು ಮಣ್ಣಾಗುವ ಸೂಚಿಯೇ ಕಾಣುತ್ತದೆ. ಸಂತಾನ ಸೃಷ್ಟಿಯ ಸೊಬಗು ದಿಟ.

ಆದರೆ ಅದು ಅತ್ರಿಯಾದರೆ ಹುಣ್ಣು ಎಂಬುದು ಧ್ವನಿತ; ಪಿತ್ರ ಸಂತಾನದ ಅಗತ್ಯ ಎಲ್ಲಿ? ಹೇಗೆ? ಎಂಬುದರ ವ್ಯಾಪ್ತಿ ಕೂಡ. ದೇವರಿಗೆ ಬಿಟ್ಟ ಬಸವಿ, ಬಸವನಂತೆ ಗೌರವಕ್ಕೆ ಸರಿಯಾಗಿಸುವ ಬದಲು ದಾಸಿಯಾಗಿಸುವ ಹುನ್ನಾರಕ್ಕೆ ಏನೆನ್ನಬೇಕು? 'ಪ' ಗಂಡು, 'ಪ' ಹೆಣ್ಣಾದರೆ ಈ ತಾರತಮ್ಯವೆ! ಪುರುಷ ಸ್ವಾಮ್ಯಕ್ಕೆ ಮತಿ ಬೇಡವೆ! ಹೀಗೆಯೇ 'ಜಾರೆ ಮಾಡಿ ಸಂತೆಗೆ ಹೊತ್ತು ತಂದು' ಹೆಣ್ಣನ್ನು ಮಾರುವ ಸರಕು ಮಾಡುವ ಮನಸ್ಸುಗಳ ಕಂಡು ಕವಿಯ ಸಂವೇದನೆ ತೀವ್ರಗೊಂಡಿದೆ. ಅಂತೇ ಸವಾಲಾಗಿ, ಕೇಳಿದೆ: 'ಅಬಲೆ ಹೆಣ್ಣಾಗದೆ... ಮೆಟ್ಟೆಂತು ಗಂಡಿನ ಸಮನಾಗಲ್ಹಾಕೋ!' ಇಲ್ಲಿ ಮೊದಲ ಪದಗಳು ಕ್ಲೀಷಾಪಸರದ್ದು ಎಂದುಕೊಳ್ಳುವ ಹೊತ್ತಿಗೆಯೇ, ಮುಂದಿನ ಶಬ್ದಗಳು 'ನವ್ಯ'ದ ಕಸುವಿನಲ್ಲಿ ಮೈಕೊಡವಿ ಎದ್ದಿವೆ. ಕ್ರೌರ್ಯದ ಎದುರು ಬಂಡಾಯದ ದನಿಯಾಡಿಸಿದೆ. ಕವಿಯ ಸಂವೇದನೆ ರಮ್ಯ, ನವ್ಯ, ಬಂಡಾಯಗಳ ನಡುವೆ ಹಾದು ಆತ್ಮರತಿ ಮೀರಿ ನಿಂತು ಅಭಿವ್ಯಕ್ತಿಸಿದೆ. ಈ ಕವಿತೆಯನ್ನು 'ಯುಗವಾಣಿ' ಕವನ ಸಂಕಲನದ 'ಪರಿಸರ ಗೀತೆ' ಕವಿತೆಯೊಡನೆ ಹೋಲಿಸಿದರೆ ಪರಿಸರದ ಶೋಷಣೆಯು ಒಂದು ಥಾಳ ಚಿತ್ರ ಸಮಸ್ಪಂದಿಯಾಗಿ ಬಂದಿರುವಂತೆ ಕಾಣುತ್ತದೆ. 'ಅನ್ನ ತಿನ್ನುವ ಮಣ್ಣಿನ ಮಗನೇ ನೀನು? ಬನ್ನ ಬಂದಿದೆ ಕಾಡಿಗೆ ನೋಡಿರುವೆಯೇನು?' ಎಂಬ ಪ್ರಶ್ನೆಗಳನ್ನಿಟ್ಟು ಸವಾಲು ಕೊಟ್ಟು ಶೋಷಣೆಯ ಅಜ್ಞಾತ, ಜ್ಞಾತ ಪ್ರಭಾವಕ್ಕೆ ಸಿಲುಕಬೇಡ ಎಂಬ ಎಚ್ಚರಿಕೆಯ ಧ್ವನಿಯಲ್ಲಿ ಕವಿ ಹೇಳಿದ್ದಾರೆ. ಸಸ್ಯ ಸಂಕುಲವು ಹೆಣ್ಣಿನಂತೆ ಮಾತೃಹೃದಯದ ಮಡಿಲು. ಅದನ್ನು ಹಾಳುಗೆಡುವಿದರೆ, ಮಾರುಕಟ್ಟೆಯ ಲಾಭದ ಆಮಿಷಕ್ಕೆ ಒಳಗಾದರೆ ಒದಗುವುದು ಸಮೃದ್ಧಿಗೆ ಶಾಶ್ವತವಿರಾಮ. ಅಂಥ ವಿರಾಮ ಸಲ್ಲ. ಇಂಥ ಭಾವಗಳನ್ನುಕ್ಕಿಸುವ ಎರಡೂ ಕವಿತೆಗಳಲ್ಲಿ ಮಾರಾಟ ಒಂದು ಶೋಷಣೆಯ ಮುಖವಾಗಿ ಪ್ರತಿಮಿಸಿದೆ ಎನ್ನಬೇಕು. 'ವರುಣೋತ್ಸವ': ನಗರ ಜೀವನದ ಜಡ್ಡು ಹಿಡಿದ ನಿತ್ಯಚಲನೆಯ ಬದುಕಿನಲ್ಲಿ ಮಳೆತರುವ ಗೋಣಗಾಟಗಳ, ವಿಚಿತ್ರನಗರ ಚರ್ಯೆಗಳ, ಸಾವರಿಸಿಕೊಳ್ಳಲು ತಾಕತ್ತನ್ನು ಉಡುಗಿಸಿಕೊಂಡು ಆಡುವ ಮಾತುಗಳ ಚಿತ್ರ ಮುಂದೆ ಮಾಲೆಯಾಗಿ ಹೆಣೆದು ತೋರಿದೆ. ತನ್ನೊಡಲಿನಿಂದ ಅಂಥದ್ದರಲ್ಲೂ ಉಕ್ಕಿಸಿರುವ ಕಾವ್ಯದ ಸೊಗಸಿನ ಸಾಲು 'ಬಟ್ಟೆಬರೆ-ಅಂಬರದೊಳು ತೇರಾದ ಘಳಿಗೆ' ನಮ್ಮ ಮಾನಸವನ್ನು ತುಂಬ ಆಕರ್ಷಿಸಿಬಿಡುತ್ತದೆ. ಪಾರಂಪರಿಕ ಅಚ್ಚುಕಟ್ಟಿನಿಂದ ಮೊಳೆತಿದ್ದ ನವ್ಯದ ಕಚಕುಳಿಯ ಚುರುಕು ಭಾವದ ಸಸಿಗುಚ್ಛವಾಗಿ ಕಾಣುತ್ತದೆ; ಕೃಷಿಯ ಪಾರಿಭಾಷಿಕ ಪದವಾಗಿ ಉಗ್ಗಡಿಸಿದರೆ 'ಕೈಪುಡಿ-ಕೈಪೈರು'ವಿನ ಮೋಹಕ ಕಳೆಯು ಹಸಿರು ಚೆಲ್ಲಾಟದಂತೆ ಕಾಣುತ್ತದೆ. ಗೌಡರಿಗೆ 'ಅಂಬರ' ಶಬ್ದ ಬಲು ಒಲವಿನ ಶಬ್ದ. ಅದೊಂದು ಪಾತ್ರವಾಗಿ ಅವರ ಅನೇಕ ಕವನಗಳಲ್ಲಿ ಬರುವಲ್ಲಿ, ಚಿತ್ರರಂಗದಲ್ಲಿ ಯಶಸ್ವಿಗೀತೆಯ ಪದವಾಗಿ ಬರುವಲ್ಲಿ ಅವರ ಕಾವ್ಯದ ಪ್ರತಿಮಾ ಕೂಡ ಆಗಿ ಬೆಳಕಿನ ಭಾವವನ್ನು ಮುಂದಿಡುತ್ತದೆ. ಕಾರಣ ಬಾನಿನಿಂದ ಬೆಳಕು ಎಂದರೆ ಅಂಬರದ ಸೂರ್ಯ, ಚಂದ್ರ, ತಾರೆಗಳ ಬೆಳಕಿನ ನೆಲೆದಾಣವಲ್ಲವೆ! ನೆಲೆಬೀಡು (ರಾಜಧಾನಿ) ಅಲ್ಲವೆ? ಜಲೋತ್ಸವದ ಉಗಮವೂ ಅಲ್ಲಿಯದೆ! ಈಚಿನ ವೈಜ್ಞಾನಿಕ ಚಾಲನೆಯ ಸ್ಪರ್ಶವಿಟ್ಟು ಹೇಳಿದರೆ ಅತಿ

ಸೂಕ್ಷ್ಮಕಣಗಳ ವರ್ತನಾ ಮಾದರಿಗಳ ವಿಜ್ಞಾನ ದರ್ಶಿನಿ ನ್ಯಾನೋ ಟೆಕ್ನಾಲಜಿಯ ಪರಿಕಲ್ಪನೆಯಲ್ಲಿ ಅಂಬರವು; ಜಲದ ಸೂಕ್ಷ್ಮ ಹನಿಗಳ ಶೀರ್ಘೋದ್ಭವ ನೆಲೆಯೆ. ಆದರೆ ಮೊದಲಗುಣದಿಂದ ಜಿಗಿದು ಮೊತ್ತದಲ್ಲಿ ಅದು ವಿಶಿಷ್ಟ ಗುಣದಲ್ಲಿ ದರ್ಶನಗೊಳ್ಳುವ ಪ್ರಕ್ರಿಯೆ. ಹೀಗಾಗಿ ಅಂಬರದ ಕಣಗಳು ಹನಿಗಳಾಗಿ. ಇಳೆಗೆ ವರುಣೋತ್ಸವವಾಗುವಲ್ಲಿ ಹೊಸ ಜಲದಿಳೆಯನ್ನು ಸೃಷ್ಟಿಸಿ ಬಿಡುತ್ತವೆ. ಇಂತೆಲ್ಲ ತಲೆಮಾರು ನಡಿಗೆಗಳ ನಡುವೆ ನಮ್ಮ ಯಾಂತ್ರಿಕ ಬದುಕು ಉಲ್ಲಟ ಪಲ್ಲಟ ಹವಾಮಾನದ ಗಡಿಬಿಡಿಯಲ್ಲಿ ಉಸಿರು ಕಳಕೊಳ್ಳದೆ ಭರ್ಜರಿಯಾಗಿ ಎದ್ದು ನಿಲ್ಲಬೇಕು ಎಂಬುದು ಕವಿಯ ಒಳ ಆಶಯದಲ್ಲಿದೆ.

'ಪ್ರೇಮತೇರು', 'ಅರುಣರಾಗ' ಕವಿತೆಗಳು ಎಂದಿನ ಪ್ರೇಮಗೀತೆಗಳ ಸಾಲಿನಲ್ಲಿ ವಿರಮಿಸಿವೆ. ಆದರೆ 'ಪ್ರೇಮಗೀತೆ'ಯಲ್ಲಿ ಬರುವ 'ಮನದ ಮಂದಾರ ಹೂವು ತೂಗುತಿದೆ' ಎಂಬ ಸಾಲು ವಿಚಿತ್ರ ಪ್ರತಿಮೆಯನ್ನು ತಂದೊಡ್ಡುವಂತಿದೆ. ಬೇಡಿದುದನು ನೀಡುವ ದೇವಲೋಕದ ಪುಷ್ಪ ಮಂದಾರ. ಅಂಥ ಪುಷ್ಪಮಯ ಮನಸ್ಸು ಉಯ್ಯಾಲೆಯಾಡುತ್ತಿದೆ ಎಂದರೆ ಕಾವ್ಯಾಲಯದೊಳಗೆ ಅನಿಶ್ಚಿತ ಪ್ರತೀಕವೆಂದರೂ ಸೊಬಗಿನ ಸುಗಂಧವನ್ನು ಜೋಕಾಲಿಗಾಳಿಯಲ್ಲಿ ಒಯ್ಯುತ್ತಿದೆ ಎಂಬ ಅರ್ಥಪರಿಷ್ಕರಣ ಸೂಚಿಯಾಗುತ್ತದೆ. ಇದೊಂದು ವಿಚಿತ್ರ ಸಂಘಟನೆ ಎನಿಸುತ್ತದೆ. ಕೊಡಲಿಕ್ಕೇ, ಈಡೇರಿಸಲಿಕ್ಕೆ ಹೆಸರುವಾಸಿಯಾದದ್ದು ಹೊಯ್ದಾಡುವಲ್ಲೂ ಸೊಗಸಿನ ಪ್ರೇಮದ ತೇರಾಗಿ ಹರಿದಿರುವುದಾಗಿದೆ. ಮುಂದಿನ 'ಬೆಳ್ಳಿ ಬೆಳಕು' ಕವನ ಎಂದಿನ ಪ್ರಕೃತಿ ಆರಾಧನೆಯಲ್ಲಿ ಒಲಿವ ದೈವಕ್ಕೆ ಪೂಜೆಗೆ ಅಣಿಯಾಗಿರುವಂತಹದ್ದಾಗಿದೆ. 'ಚಿತ್ತಚೋರಿ' ಪ್ರೇಮದ ತರಂಗಗಳನ್ನು ಹರಿಗೋಲಿನ ಹಾಯಿಯಲ್ಲಿ ಕಾಣಿಸುವ ಕಾತುರ ತೋರಿದೆ. 'ಪ್ರತೀಕ್ಷೆ' ಇದಕ್ಕಿಂತ ಹೆಚ್ಚು ವಿಭಿನ್ನವಾಗಿದೆ ಎಂದೆನಿಸುವುದಿಲ್ಲ. 'ಬದುಕಿನ ಪುಳಕದಲ್ಲಿ', ಭಾವ ತರಂಗದ ಕವಿ ಮನಸು ಬಾಳನಿರೀಕ್ಷೆಗಳಲ್ಲಿ, ಕನಸುಗಳನ್ನು ಮಂಡಿಸಿದೆ, ವಾಸ್ತವಗಳನ್ನು ಗುನುಗುನಿಸಿದೆ.

'ಹುಟ್ಟೂರು' ಕವಿಯು ಹುಟ್ಟಿದ ಊರಿನ ನೆನಪುಗಳ ವೈಭೋಗವನ್ನು ಮುಗ್ಧವಾಗಿ, ಪ್ರಾಮಾಣಿಕವಾಗಿ ವರ್ಣಿಸಿದೆ. ಪುಟ್ಟ ಹಳ್ಳಿ; ಆದರೆ ಪ್ರೀತಿ ಬೆಟ್ಟದಷ್ಟು ತುಂಬಿಕೊಂಡ ಹಳ್ಳಿ. ಕವಿಯ ಬಾಲ್ಯದಲ್ಲಿ ಸಂಗಾತಿಗಳು ಅದೇ ರಂಗ, ಸಿದ್ದ, ತಿಮ್ಮಿ, ನಾಗಿ ಇಂದಿಗೂ ಕಾಡುತ್ತಾರೆ. ಅಕ್ಕರೆಯ ಜೇನ ಹನಿಗಳನ್ನು ತೊಟ್ಟಿಕ್ಕಿಸಿ. ಈ ಹಳ್ಳಿಯಲ್ಲಿ 'ರೈತರ ಇರವೆಲ್ಲ ತಂಪು', 'ದಾರಿದ್ರ್ಯ ಬಂತೆಂದು ಅಳುತ ಕುಳಿತವರಲ್ಲ' ಇಲ್ಲಿಯ ಜನ ಗಟ್ಟಿಗಜನ; ಜಾತ್ರೆ, ನಾಟಕ, ಸಾಹಿತ್ಯ, ಕಲೆ ಮಾರಮ್ಮ, ರಂಗನಾಥ ಎಲ್ಲವನ್ನು ನಚ್ಚಿ ಮೆಚ್ಚಿ ಒಂದಾಗಿ ಬಾಳಿದ ಜನ-ಹೀಗೆಲ್ಲ ಭಾವದ ಮೋಡಿಯಲ್ಲಿ ವರ್ಣಿಸುವ ಕವಿ, ನಮ್ಮ ನಾಡಿನ ಹಳ್ಳಿಯ ಸಾಂಸ್ಕೃತಿಕ ಅಂತರಂಗವನ್ನು ತೆರೆದು ತೋರಿಸಿದ್ದಾರೆ. ಇಂದಿನ ರೈತ ಚಳುವಳಿಯ ಹಾಡುಗಳಲ್ಲಿ ಕಾಣುವ ದಿಟ್ಟ ಸೊಗಡಿಗೆ ಇಲ್ಲಿ ಸೌಮ್ಯ, ಸಾಂತ್ವನದುಡಿಗೆ ತೊಡಿಸಿದ್ದಾರೆ. ಬೆಳಹಾನಿ, ಬೆಲೆ ಕುಸಿತ, ಸಾಲಬಾಕಿ ಕಾರಣ ಮಾನಗೇಡು ಅನುಭವಿಸಿದ ಅನೇಕ ರೈತರ ಆತ್ಮಹತ್ಯೆಯಲ್ಲಿ ಇಂದಿನ ಬದುಕಿನ ಅವಿಶ್ವಾಸ

ಕಾಣುವುದರೊಡನೆ ಕವಿಯು ಬಾಲ್ಯದಲ್ಲಿ ಕಂಡ ರೈತರು ದಾರಿದ್ರ್ಯವನ್ನು ಎದುರಿಸುತ್ತಿದ್ದ ಗಟ್ಟಿಗತನವನ್ನು ಹೋಲಿಸಿದರೆ ಒಂದು ಸಾಮಾಜಿಕ ಬದುಕಿನ ಏರುಪೇರು, ಆಧುನಿಕ ಆಯಾಮಗಳು ಪರಿಹಾರಕ್ಕೆ ತಡಕಾಡುವ ಬಗೆಯನ್ನು ಚಿತ್ರಿಸಿರುವ ಕೌಶಲ್ಯವು ಕವಿತೆಯಲ್ಲಿ ಮೈಮುಂಜಿ ಬಂದಿದೆ. ಜಾಗೃತೀಕರಣದ ಉಸುಬಿಗೆ ದೇಸೀಕರಣದ ಮಾರುತವಿಟ್ಟ ಸವಾಲು ಎನಿಸುವಂತಿದೆ. ವಿಶ್ವವೇ ಒಂದು ಹಳ್ಳಿ ಎಂದು ಹೇಳುವ ಜಾಗತೀಕರಣ ನಿರ್ವಂಚನೆಯಿಂದ ಆ ಪರಿಕಲ್ಪನೆಯನ್ನು ಸಂಭಾಳಿಸದಿರುವ ಸಂದರ್ಭದಲ್ಲಿ ದೇಸೀಕರಣ ರೀತಿ ನೀತಿಯ ಸಲಹಾಪಾರಮ್ಯವನ್ನು ಪ್ರೇರಣಾತ್ಮಕತೆಯನ್ನು ಈ ಕವಿತೆಯ ಭಾವ ಪೂರೈಸುವಂತಿದೆ. ಈ ತೌಲನಿಕ ಭಾವ ಸಮನ್ವಯದಲ್ಲಿ, 'ಯುಗವಾಣಿ' ಕವಿತಾ ಸಂಕಲನದ 'ನಮ್ಮಂಥವರಿಗಲ್ಲ ಈ ಪಟ್ಟಣ' ಎಂಬುದರೊಡನೆ ಹೋಲಿಸಬೇಕು.

> ಮಾನವತೆ ಮಣ್ಣುಕ್ಕಿದ । ಎಷ್ಟೆಲ್ಲಾ ಸ್ನೇಹ ಪ್ರೀತಿ ತೋರಿದರೂ । ನಂಜುಕ್ಕುವ
> ನಗರ.... ಆತ್ಮದೊಳಗಿನ ಕಣಕಣದ । ನಿಯತ್ತಿಗೂ ಎಳ್ಳುನೀರು ಬಿಟ್ಟು
> ಅಡ್ಡಹಾದಿಗೆ ಅಡಿ ಇಟ್ಟು.... ಯಕಶ್ಚಿತ್ತಾದ ಮಾನವ ಚಿಂದಿಯಾದ...

ಹೀಗೆ ತೋರಿಕೆಯಲ್ಲಿ ಬಾಳುವ ನಂಜುನಗರವಾಗದೆ, ನಿಯತ್ತಿಗೆ ಅಂಟಿಕೊಳ್ಳದ ಯಕಶ್ಚಿತ್ ಮಾನವರ ನೆಲೆಯಾಗದ ಇರುವ ಹಳ್ಳಿಯೇ ಭಾರತದ ಸಾಂಸ್ಕೃತಿಕ ನಗರಿಯಾಗಿ ಕವಿಯ ಕಣ್ಣಿಗೆ ಕಂಡಿದೆ; ಮನಸ್ಸಿನಲ್ಲಿ ತುಂಬಿದೆ. ಇಂಥ ಸಂಸ್ಕೃತಿ ತುಂಬಿದ ಹಳ್ಳದಿಸೆಯ ಪ್ರಾಕೃತಿಕ ವೈಭವದ ಪ್ರತೀಕದಂತೆ 'ಸೌಂದರ್ಯದ ಸಿರಿ ಸಿಂಚನ' ಕವಿತೆ ಮೂಡಿ ಬಂದಿದೆ. 'ನೀಲಿಯ ಬಾನು ರಂಗೋಲಿ ಬರೆದಾಗ; ಜಲಧಾರೆ ದನಿಯೇ ಗಾಯನವಾದಾಗ; ಹೃದಯಾಂಬುಧಿ ಕಂಡ ರಾಗೋದ್ಭವ ಮಿಂದ ಭಾವನೆಗಳುಕ್ಕಿದಾಗ; ಶುಕ ಸಾರಿಕ ನುಡಿವ ಸ್ವರ ತಾನದ ಪಲುಕುಗಳಲ್ಲಿ ಲಾಸ್ಯವಾಡಿದಾಗ; ತೆಂಗು ತಾಳೆ ಬಳುಕಿ ಹೊಸ ನಾಟ್ಯದ ಸೊಬಗಿನಲ್ಲಿ ನೂರಾರು ಬೃಂದಾವನಗಳ ವರ್ಣ ಕಾರಂಜಿಗಳು ನಲಿಯುವಲ್ಲಿ ಅಂತರಂಗದಲ್ಲಿ ಕಾವ್ಯೋದ್ಭವ ರಿಂಗಣಗುಣಿತವಾಡುತ್ತದೆ' ಎಂಬ ಭಾವಗಳು ನಲಿದು ನಲಿದು ಮಿಂಚಿ ಮಿಂಚಿ ಬೆಳಕಿನ ತೀರ್ಥೋದ್ಭವದಂತೆ ಕಾಣಿಸಿಕೊಳ್ಳುತ್ತವೆ. ಈ ಕವಿತೆಯಲ್ಲಿ ರಮ್ಯದ ಪುಳಕ, ಮುಕ್ತದ ಲಾಲಿತ್ಯ, ನವೋದಯ ಗಾಂಭೀರ್ಯ, ನವ್ಯದ ಆತ್ಮಕ್ಷೋಭೆ ಸಾವಯವ ಸೃಷ್ಟಿಯಾಗಿ ಬಂದಿವೆ. ಕವಿತೆ ಕುಣಿದ ಕ್ಷಣಗಳು ಅಂತ್ಯವಿಲ್ಲದ ನಿರಾತಂಕ ಸ್ಮರಣೆಗಳಂತೆ ಕಾಣುತ್ತವೆ.

ಈ ಸಂಕಲನದ ಕೊನೆಯ ಕವಿತೆ 'ಸುನಾಮಿ ಸಂಕ್ಷೋಭೆ'ಯಲ್ಲಿ ಸುನಾಮಿ ಸಾಲುಗಳೇ ಪ್ರಕೃತಿಯ ರುದ್ರ ತಾಂಡವವನ್ನು, ಪರಿಸ್ಥಿತಿಯ ಪ್ರಕ್ಷುಬ್ಧವನ್ನು, ಮಾನವ ಬದುಕಿನ ದಿಕ್ಕಾಪಾಲು ಚಿಂದಿಯನ್ನು, ಕರಾಳ ಹೃದಯಗಳ ಕ್ರೂರ. ಶೋಷಣೆಯನ್ನು ಚಿತ್ರಿಸುವಂತಿವೆ. ಕಾವ್ಯ ಹೇಗೆ ಮಾನವ ಸಂವೇದನೆಯ ಪ್ರತೀಕವಾಗುತ್ತದೆ ಎಂಬುದನ್ನು ಕವಿ ಚಿತ್ರಿಸಿದ್ದಾರೆ ದಿಟವಾಗಿ, ದಟ್ಟವಾಗಿ;

'ನಿಷ್ಕರುಣೆ ಅಲೆಗಳು ಅನಿರೀಕ್ಷಿತವಾಗಿ । ಕಡಲ ಕಿನಾರೆ ಕೊಚ್ಚಿತೊ'
'ಆಡೋ ಮಕ್ಕಳ ಹೆದ್ದರೆ ನುಂಗಿತೋ।ದೊಡ್ಡೋರನ್ನು ಬಿಡದೆ ಎಲ್ಲರನ್ನು ತಿಂದಿತೊ'
'ಹೆದ್ದರೆಯ ಮೇಲೆ ಹೆದ್ದೆರೆಯು ಬಂದು । ತೀರ ಪ್ರದೇಶ ಪೂರಾ ಕರಗಿತೋ
ಸಾವು ಸಾವು ಸಾವು ಸಾವ ಸರಮಾಲೆಕಂಡು । ಯಮಧೂತ ಸುನಾಮಿ ಎನಿಸಿತೋ
'ಇದು ಯಾವ ಬಗೆಯ ಕಠಿಣಜಲಪ್ರಳಯ । ಹೆಣದ ಬಣವೆ ರಾಶಿ ರಾಶಿ...
ಕೊಳೆತು ನಾರುತ್ತಿರುವ ಭಾರೀ ಭೀಕರ ದೃಶ್ಯ । ಮುಳುಗಿತೇ ಸಮುದಾಯ ಅಳಿಸಿ'
'ಸಾವಿರದ ರೀತಿ ಬಂದರೂ ನೆರವು । ಸಂತ್ರಸ್ತರ ಸೇರಲಿಲ್ಲ'
'ಪರಿಹಾರ ಕಾರ್ಯ ಶುರುವಾದರೂನು । ಆ ಮುದ ಕೊಡಲಿಲ್ಲ'
'ಮತ್ತೆ ಹುಟ್ಟಬೇಕು ಎಲ್ಲವೂ ಹೊಸತಾಗಿ । ಹೊಳೆದೀತೇ ಬದುಕು ಬೆಳಗಿ?'

ಮಾನವ ಪ್ರಯತ್ನಗಳ, ಕ್ರಿಯಾಶೀಲತೆಗಳ ನಡುವೆ ಒಮ್ಮೊಮ್ಮೆ ಭಾರಿ ಹೊರೆಯಾಗಿ ಅಪ್ಪಳಿಸುವ ಪ್ರಕೃತಿ ವರ್ತನೆ ಎಷ್ಟೊಂದು ಅಮಾನುಷ ಎನಿಸಿದರೂ, ಹೊಸತರ ಹುಟ್ಟಿಗೂ ಕಾರಣವಾಗುತ್ತದೆ. ಆದರೆ ಬದುಕೆಲ್ಲವನ್ನು ಪೂರಾ ಗುಡ್ಡಾಗುಡಿಸಿಕೊಂಡು ಹೋಗಿ ಬಿಡಬೇಕೆ? ಎಂಬ ಪ್ರಶ್ನೆ ಕವಿಯ ಮಾರ್ದವ ಮನಸ್ಸಿನಲ್ಲಿ ನೋವಿನ ಮೊತ್ತವಾಗಿ ಕಾಣಿಸಿಕೊಳ್ಳುತ್ತದೆ. ಅಂತೆಲ್ಲ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಲೇ ಹೋಗುವಲ್ಲಿ ಕೆಲವೇಳೆ ಕಾವ್ಯ ಸ್ಪರ್ಶವನ್ನು ಕಳೆದುಕೊಂಡು ಗದ್ಯದ ಛಾಯೆಯ ಸಾಲುಗಳು 12 ಮತ್ತು 14ನೇ ಪದ್ಯಗಳಲ್ಲಿ ಹಣಿಕಿದರೂ, 'ಸಾವು ಸಾವು ಸಾವು ಸಾವ ಸರಮಾಲೆ ಕಂಡು' ಎಂಬ ಸಾಲಿನ ಮೂಲಕ ಸಾವಿನ ಅನುರಣನದ ಸುನಾಮಿ ಯಮನ ದರ್ಶನವನ್ನು ಯಥಾವತ್ತಾಗಿ ಮೂಡಿಸುತ್ತಾರೆ. 'ಯುಗವಾಣಿ' ಕವನಸಂಕಲನದ 'ಅನಾಥರು' ಕವನದ 'ಅಪ್ಪನಿಲ್ಲದೆ ಅಮ್ಮನಿಲ್ಲದೆ ಯಾವುದೇ ವಿಳಾಸವಿಲ್ಲದೆ । ಏಗುತ್ತಾ ಬಾಗುತ್ತಾ ನಡೆಯುವರು' ಎಂಬ ಸಾಲಿನ ವ್ಯಕ್ತಿ ಚಿತ್ರಗಳ ಅನಂತ ಸೃಷ್ಟಿಕಾರಕವಾದ ಸುನಾಮಿಯ ಚಿತ್ರಣ ಇಲ್ಲಿ ಕಾಣಬರುವಲ್ಲಿ, ಸುನಾಮಿಕಾರಕ ಯಮಕವಲುಗಳು ಇಲ್ಲಿ ಅವತಾರ ಭೀಕರವಾಗಿ ಕಾಣಿಸುವುದು ಉಳಿದ ಮಾನವ ಸಂವೇದನೆಗಳಿಗೆ ಎಡೆಯಾಗಲೆಂದೇ. ಆದರೆ ಸಂತ್ರಸ್ತರಿಗೆ ನಿಲುಕದ ನೆರವು, ಮುದವಾಗದ ಪರಿಹಾರ ಹೆಣಸುಡುವಾಗಲಿನ ಬೆಂಕಿಯಲ್ಲಿ ಬೇಳೆ ಬೇಯಿಸಿಕೊಳ್ಳುವ ಕ್ರೂರ ವರ್ತನೆಗಳನ್ನು ಕಂಡು ಕವಿ ಮನ ರೋಸಿ ಜಗದ ಜನತೆಯ ಮುಂದೆ ತೋಡಿಕೊಂಡಿದೆ. ಆದರೂ ಭರವಸೆ ಕಳೆದುಕೊಳ್ಳದ, ಸ್ಪಂದನ ಮನಸ್ಸುಗಳನ್ನರಸುತ್ತ 'ಹೊಳೆದೀತೇ ಬದುಕು ಬೆಳಗಿ?' ಎಂದು ಧನಾತ್ಮಕ ಪ್ರಶ್ನೆಯೊಂದಿಗೆ ಕಾವ್ಯ ಸಂಸ್ಕೃತಿಯನ್ನು ಈ ಕವಿತೆ ಹಾಗೂ 'ಬಂಗಾರ ಭೂಮಿ' ಕವಿತಾ ಸಂಕಲನ ಕಟ್ಟಿಕೊಟ್ಟಿದೆ.

ಕೇವಲ ಜೇನುಗಣ್ಣಿನ ಮಂಪರು ನಿದ್ದೆಯಲ್ಲಿ (Honey eyed Sleep) ಸಿಹಿ ಕಲ್ಪನೆಗಳನ್ನು ಮೆಲ್ಲುತ್ತ (Chewing Sweet Fancies) ಕೂರದೆ ವಾಸ್ತವಗಳನ್ನು ಗ್ರಹಿಸುವ (Realising Realitics) ಕಲೆಯನ್ನು ಆತ್ಮೀಯ ಸಾವಯವವಾಗಿ

ಕಂಡುಕೊಂಡ ಕವಿ ಶ್ರೀ ದೊಡ್ಡರಂಗೇಗೌಡರು : ಬದುಕು, ಪ್ರಕೃತಿ, ಕಾವ್ಯವನ್ನು ಹದಹದುಳದಲ್ಲಿ ನೇರ್ಪುಗೊಳಿಸಿಕೊಂಡು ಬಂದ ಸರಳ ಸಜ್ಜನ ಸಂಸ್ಕೃತಿವಂತ. ಬರೆದುದೆಲ್ಲ ಕವಿತೆಯೆನ್ನಲಾಗದು; ಕಾವ್ಯವೆನ್ನಲಾಗದು ದಿಟ. ಬಿಡಿಯಾಗಿ ನೋಡದೆ ಇಡಿಯಾಗಿ ನೋಡಿದಾಗ ಕವಿಯ ಗೆಲುವು, ಕವಿಯ ಸಾಫಲ್ಯ ಕಂಡರೆ ಸಾಕು. ಅದು ಪ್ರತಿ ಕವಿತೆಯ ಅಂಗಾಂಗಗಳಲ್ಲಿ ಜೇನಾಗಿ, ಸುಗಂಧದ ಬೊಟ್ಟಾಗಿ ಕಾಣಿಸಿಕೊಳ್ಳಬಹುದು. ಅದನ್ನು ಸಹಿಸಿಕೊಳ್ಳುವ ಅನುಭವಿಸುವ ಸಹೃದಯತೆ ಇದ್ದಾಗ ಕಾವ್ಯದ ಬನಿ ಹೊನ್ನಾಗಿ ಒದಗುತ್ತದೆ.

ಹಳ್ಳಿಯ ಮನೆಯವರಾಗಿ, ನಗರದ ಬದುಕಿಗೆ ಬಂದು, ಅಂಚೆ ಇಲಾಖೆಯಲ್ಲಿ ರಾತ್ರಿಪಾಳಿಯಲ್ಲಿ ಕಾಯಕಮಾಡುತ್ತ, ಹಗಲಿನ ಬೆಳಕಿನಲ್ಲಿ ವಿಶ್ವವಿದ್ಯಾಲಯದ ಕನ್ನಡ ಎಂ.ಎ. ತರಗತಿಯ ವ್ಯಾಸಂಗದಲ್ಲಿ ತೊಡಗಿ ಕನ್ನಡದ ಬದುಕನ್ನು ಬದುಕಿ ಬಾಳಿ ಬಂದ ಕವಿ ಡಾ॥ ಶ್ರೀ ದೊಡ್ಡರಂಗೇಗೌಡರು ಬದುಕು ಬೆಳಗುವ ಹಾದಿಯಲ್ಲಿ ಸಾಗಿದ್ದಾರೆ. ಅರವತ್ತರ ಈ ವಸಂತ ಅವರ ತುಂಬುಬಾಳಿಗೆ ನೂರರ ವಸಂತದವರೆಗೂ ಬೆಳಕಿನೊಡನೆ ನಡೆಸಿಕೊಂಡು ಹೋಗಲಿ ಎಂದು ಹಾರೈಸುವೆ. ಅಲ್ಲಿಯ ತನಕ ಅವರ ಕಾವ್ಯಪಥ ನಿರಂತರವಾಗಿ ಯುಗದರ್ಶನ ತರಲಿ ಎಂದೂ ಹಾರೈಸುವೆ.

❑



# ಮಾನವೀಯ ಅಪ್ಪಟ ಕನ್ನಡಿಗ

• ರವಿ ಉಪಾಧ್ಯ

1980ರ ಬಸವರಾಜ ಕಟ್ಟಿಮನಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಜರುಗಿದ ಮೂರನೆಯ, 59ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭ.

ಕವಿಗೋಷ್ಠಿಯಲ್ಲಿ Opening Batsman ನಾಗಿ ನಾನು ಸಾದರಪಡಿಸಿದ ಕವಿತೆ 'ತಾನ ತಂದಾನ' ಎಂಬುದು. ಚಿಕ್ಕಮಗಳೂರಿನಿಂದ ಗೆಲ್ಲಿಸಲ್ಪಟ್ಟ ಇಂದಿರಾ ಗಾಂಧಿಯ ಭೋಪರಾಕುವಿನ ವಸ್ತುವಾಗಿ, ಸ್ವಯಂಘೋಲಿನ ಅಮಲಿನಲ್ಲಿ 'ತಾನ ತಂದಾನ' ಎಂಬ ಪಲ್ಲನ್ನು ಕೊಚ್ಚುತ್ತ ಮೈದಳೆದ ಕವಿತೆ ಅದಾಗಿತ್ತು. ಸಾಂದರ್ಭಿಕವು, ಸಮಯೋಚಿತವೂ ಆಗಿತ್ತು.

ಗೋಷ್ಠಿಯ ನಂತರ ಪುಸ್ತಕ ಮಳಿಗೆಯೊಂದರಲ್ಲಿ ಅಕಸ್ಮಾತ್ ದೊಡ್ಡರಂಗೇಗೌಡರ ಮುಖಾಮುಖಿಯಾಗಿ ಸಂತೋಷಗೊಂಡಿದ್ದ ನಾನು, ಅವರನ್ನು ಮನೆಗೆ ಆಹ್ವಾನಿಸಿದೆ. ಅವರು ತಮ್ಮ ಹೆಂಡತಿ ರಾಜೇಶ್ವರಿ ಮತ್ತು ಮಗ ಭರತನೊಂದಿಗೆ ನನ್ನನ್ನು ಹಿಂಬಾಲಿಸಿದರು. ಬರಬರುತ್ತಿದ್ದಂತೆ ನಾನು ಬೆಳಗಾವಿಯ ಗಲ್ಲಿಗಳನ್ನು ಪರಿಚಯಿಸುತ್ತಿರುವಾಗ, ನಡುಮಧ್ಯ ಗೌಡರು ನೆನಪಿನ ಗಂಟನ್ನು ಬಿಚ್ಚುತ್ತ, ನನ್ನ ಮೊಟ್ಟಮೊದಲ ಕಥೆ ಇಲ್ಲಿಂದಲೇ ಪ್ರಕಟವಾದದ್ದು ಎಂದರು. ಎಲ್ಲಿಂದ, ಯಾರಿಂದ ಎಂದು ಪ್ರಶ್ನಿಸಿದಾಗ ಶೇರಿಗಲ್ಲಿ ಎಂದು ಥಟ್ಟನೆ ಉತ್ತರಿಸಿದರಷ್ಟೇ ಹೊರತು, ಪ್ರಕಾಶಕರ ಹೆಸರನ್ನು ಹೇಳಲಾಗಲಿಲ್ಲ, ಕಥೆ ಎಂದಾಗ ನಾನೇ ಪ್ಯಾಟಿಯವರೇನು? ಅಂದೆ. ಹೌದು , ಅವರೇ ಇರಬಹುದು ಎಂದರು. ಆದರೆ ಇದು ಸಮಾಧಾನ ಕೊಡಲಿಲ್ಲ, ಯಾಕೆಂದರೆ, ಶೇರಿಗಲ್ಲಿಯಲ್ಲಿ ಚಂದ್ರಪ್ರಭ ಪ್ರೆಸ್ಸಿನ ಭರತ ಚೌಗುಲೆ ಎಂಬುವರ ಮನೆ ಹಿತ್ತಲಲ್ಲಿ ಇದ್ದವರು ಪ್ರಭಾಕರ ಆನಿಗೋಳ ಎಂಬುವರು. ಕನ್ನಡತಾಯಿ ಪ್ರಕಾಶನದಿಂದ ಆಗಲೇ ಕೆಲವು ಪುಸ್ತಕಗಳನ್ನು ತಂದಿದ್ದರು. ಪ್ಯಾಟಿಯರು 'ಕಥಾಕುಂಜ' ಪ್ರಕಟವಾಗುತ್ತಿದ್ದದ್ದು ಗಣಪತ ಗಲ್ಲಿಯಿಂದ. ಒಟ್ಟಿನಲ್ಲಿ ಶೇರಿಗಲ್ಲಿಯಾದರೇನು, ಗಣಪತ ಗಲ್ಲಿಯಾದರೇನು ಗೌಡರ ಚೊಚ್ಚಲ ಕಥೆ ಪ್ರಕಟಗೊಂಡದ್ದು ಬೆಳಗಾವಿಯಿಂದಲೇ.

ಹೀಗೇ ಅದು-ಇದು ಮಾತಾಡುತ್ತ ಮುಂದೆ ಹತ್ತಿಪ್ಪತ್ತು ಹೆಜ್ಜೆ ಹಾಕುವಷ್ಟರಲ್ಲೇ ಮಠಗಲ್ಲಿ ಬಂತು. ಚಿಕ್ಕಬಸ್ತಿ ಬದಿಯಲ್ಲೇ ನನ್ನ ಮನೆ ಇತ್ತು. ಆಗ ನನ್ನ ಪ್ರೆಸ್ಸಿನ ಹೆಸರು 'ನ್ಯೂ ಜಯಭಾರತ ಪ್ರೆಸ್' ಎಂದಿತ್ತು. ಗೌಡರು ನನ್ನೆಡೆಗೆ ನೋಡುತ್ತ, 'ಅಂತೂ ನಿಮ್ಮದೇ ಸ್ವಂತ ಪ್ರೆಸ್ ಇದೆ, ಬೇಕಾದಷ್ಟು ಪುಸ್ತಕ ತರಬಹುದು ನೋಡ್ರಿ' ಅಂದರು. ಸುಮ್ನೆ ಮುಗುಳ್ನಕ್ಕ ನಾನು, ಗೌಡರನ್ನು ನಾವು ವಾಸವಾಗಿದ್ದ ಮಾಳಗಿ ಮೇಲೆ ಕರೆದೊಯ್ದೆ. ಜಿನೆಹತ್ತಿ ಎಡಗಡೆ ಕಣ್ಣಾಡ್ದ ಗೌಡರು 'ಇದೇನು ಇಲ್ಲಿ ಇಷ್ಟೊಂದು ಕೇಸಸ್ಸು' ಅಂದಾಗ, ಕೆಳಗಡೆ ಜಾಗ ಸಾಲದಕ್ಕೆ ಇಲ್ಲೂ ಕೆಲವೊಂದು ಇವೆ ಎಂದೆ. ಗೌಡರು ಹೆಂಡತಿ ಮಗನೊಂದಿಗೆ ನಡುಖೋಲಿಯ ಸೋಫಾದ ಮೇಲೆ ಕೂತರು. ನನ್ನ ಮನೆಯವರ ಪರಿಚಯವಾಗುತ್ತಿದ್ದಂತೆ ಇನ್ನೇನು ಇಷ್ಟರಲ್ಲೇ ಚಹಾ ಬರುವುದಿತ್ತು. ಗೌಡರ ಮಗ ಭರತನಿಗೆ ಆಗ ಬಹಳೆಂದರೆ ಆರೇಳು ವರ್ಷ ಇದ್ದಿರಬೇಕು. ಅಪ್ಪ-ಅಮ್ಮನೊಟ್ಟಿಗೆ ಅವನು ಹೇಗೆ ಅಂಟಿಕೊಂಡು ಕೂತಾನು? ಹುಡುಗ ಬುದ್ಧಿ, ಕಿಲಾಡಿತನ ಸ್ವಾಭಾವಿಕ. ಅತ್ತ-ಇತ್ತ ಸರಿದಾಡುತ್ತಿದ್ದವನು ಫಕ್ಕನೆ ಟೈಪ್ಸ್ ಇದ್ದ ಕೇಸುಗಳತ್ತ ಹೋದ. ಟೈಪ್ಸ್ ಅವನಿಗೆ ಆಟದ ವಸ್ತುಗಳಾಗಿ ಕಂಡವು. ಒಂದು ಮುಟ್ಟಿಗೆಯಲ್ಲಿ ತೆಗೆದುಕೊಂಡವನೇ ಹೊರಗಿನ ಗ್ಯಾಲರಿಗೆ ಹೋದ. ಬಲಗಡೆ ಭಟ್ಟರ ಮನೆ ಒಂದಷ್ಟು ಹೆಚ್ಚಿಗೆ ಮೂಗನ್ನು ಚಾಚಿಕೊಂಡಿದ್ದರಿಂದ ಆಕಡೆ ಏನೂ ಕಾಣುವಂತಿರಲಿಲ್ಲ. ಈಕಡೆ ಪನ್ನಾಳಗಿ ಪೈಪು (ತಗಡಿನದು) ನಡುವಿನೆತ್ತರದ ಸಿಮೆಂಟ್ ಗೋಡೆಯ ಮೇಲೆ ತನ್ನ ಮೊಣಕೈಗೆ ಆರಾಮ ಕಲ್ಪಿಸಿಕೊಂಡಿತ್ತು. ಭರತ ಶಕ್ತಿಮೀರಿ ಕಾಲೆತ್ತರಿಸಿ ಬಾಗಿ ಮುಟ್ಟಿಗೆಯಲ್ಲಿದ್ದ ಟೈಪ್‌ಗಳನ್ನು ಬದಿಯ ಹಂಚಿನ ಮೇಲೆ ಒಗೆದ. ಅವು ಹೇಳಿಕೇಳಿ ಕರಿಹಂಚು. ಡುಬುರಿ ಡುಬುರಿಗಳಾಗಿದ್ದವುಗಳು. ಅತ್ತಿತ್ತ ಸಂದಿಯಲ್ಲಿ ಟೈಪ್ಸ್ ಸೇರಿಕೊಂಡವು, ಸಿಕ್ಕಿಕೊಂಡವು, ಭರತನ ಉಲಕೋಚಿತನದ ಅರಿವು ತಾಯ್ತಂದೆಗಳಿಗೆ ಇಲ್ಲದೆ ಇದ್ದಿರಲಿಲ್ಲ. ಪಾಪ, ಅವರು ಇದನ್ನೆಲ್ಲಾ ನೋಡಿಬಿಟ್ಟು, ನನಗೆ ಏನು ಹೇಳಬೇಕೆಂಬುದೇ ತೋಚದೆ, ''ಸಾರಿ ರವಿಯವರೇ'' ಎಂದರು. ಮಗನ ಮೇಲೆ ರೇಗಿ ದುರುಗುಟ್ಟಿದರು. ನಾನು ಗೌಡರಿಗೆ, ''ಭರೂಗೆ ಏನೂ ಅನ್ನಬೇಡಿ, ಅವನೇನು ತಿಳಿದೂ ತಿಳಿದೂ ಮಾಡಿಲ್ಲವಲ್ಲ?'' ಅಂದೆ. ಆದರೂ ಗೌಡರ ಮನದಲ್ಲಿ ಒಂದು ಥರದ ಬೇಸರ ತುಂಬಿಕೊಳ್ಳದೇ ಇರಲಿಲ್ಲ. ಗೌಡರಿಗೆ ಈ ಘಟನೆ ಇಂದು ನೆನಪಿನಲ್ಲಿ ಇದ್ದಿರಲಿಕ್ಕಿಲ್ಲ. ಆದರೆ ನನ್ನಿಂದ ಮರೆಯಲು ಹೇಗೆ ಸಾಧ್ಯ? ಏನೇ ಆಗಲಿ, ಆ ಪುಟ್ಟ 'ಭರೂ' ನನಗಿಂದು ಇಷ್ಟಾದರೂ ಬರೆಯಲು ಹಚ್ಚಿದನಲ್ಲ, ಅಪ್ಪನ ಅಭಿನಂದನೆಗೆ ನನ್ನೊಂದಿಗೆ ಸಹಕರಿಸಿದನಲ್ಲ, ಅದೇ ದೊಡ್ಡ ಪ್ರೇರಣೆ.

ಈ ಮಗ ಭರತನ ಬಗ್ಗೆ ನನಗೆ ಹೆಮ್ಮೆ ಯಾಕೆಂದರೆ, ಅಪ್ಪನಂತೆ ಇವನೂ ಕವಿಯಾಗಿದ್ದಾನೆ. ಅದರಲ್ಲೂ ಕನ್ನಡ ಕವಿ! ಕಾವ್ಯದಲ್ಲಿ ಈತ ವೈವಿಧ್ಯಮಯ ಕನ್ನಡವನ್ನು ಹೇಗೆ ಗುರುತಿಸಿದ್ದಾನೆಂಬುದನ್ನು ನೋಡಿ; ವೈವಿಧ್ಯಮಯ ಕನ್ನಡ-

ಹೂವ ಕಟ್ಟೋ ಹೆಣ್ಣ ಮಾತೇ .... ಕನ್ನಡ ... ಕನ್ನಡ...
ಬೆರಣಿ ತಟ್ಟೋ ಕೈಯ ಆಸೆ .... ಕನ್ನಡ ... ಕನ್ನಡ...
ರಾಗಿ ಬೀಸೋ ಕಣ್ಣಬೆಳಕೇ .... ಕನ್ನಡ ... ಕನ್ನಡ...
ಗಾಡಿ ಹೊಡ್ಯೋ ಚೆಂದದ ಹಾಡೆ .... ಕನ್ನಡ ... ಕನ್ನಡ...

ಶಿವ್ನಾ ನೆನ್ದ ಮನದ ಉಸಿರೇ .... ಕನ್ನಡ ... ಕನ್ನಡ...
ಅನ್ನ ಬೆಳ್ದ ರೈತನ ಕನಸೇ .... ಕನ್ನಡ ... ಕನ್ನಡ...
ಅವ್ವ ಹೇಳೋ ಲಾಲಿ ಹಾಡೇ .... ಕನ್ನಡ ... ಕನ್ನಡ...
ಬನ್ನ ಬವಣೆ ಮರೋ ಭಾಷೆ .... ಕನ್ನಡ ... ಕನ್ನಡ...

ಆಡೋ ಮಗುವಿನ ಮುದ್ದು ಮಾತೇ.... ಕನ್ನಡ ... ಕನ್ನಡ...
ತಂಪುಗಾಳಿ ಸುಳಿವಾ ಬಗೆಯೇ .... ಕನ್ನಡ ... ಕನ್ನಡ...
ಹೊಳೆ ತುಂಬಿ ಹರಿವಾ ಸಿರಿಯೇ .... ಕನ್ನಡ ... ಕನ್ನಡ...
ಕೋಟಿ ಕೋಟಿ ಜನರಾ ದೊರೆಯೇ .... ಕನ್ನಡ ... ಕನ್ನಡ...
('ನಾಡು ನುಡಿ ನಮನ', ಪುಟ 81)

ಮಗನು ಕವಿಯಾದರೆ ಮಗಳೇಕೆ ಆಗಬಾರದು? ಸ್ಮಿತಾಳ 'ನಮ್ಮ ಪವಿತ್ರ ಕನ್ನಡ' ಹೀಗಿದೆ:

ಮನೆ ಕನ್ನಡ ಮನ ಕನ್ನಡ
ಕನ್ನಡ ಇನಿ ಜೇಂಗೊಡ!
ಎದೆ ದನಿಯಲಿ ತನಿ ಬನಿಯಲಿ
ಮುನ್ನಡೆದಿದೆ ಸಿರಿಗನ್ನಡ

ಕರಿ ನೆಲದಲೂ ಗಿಡಮರದಲೂ
ಪಿಸುಗುಟ್ಟಿದೆ ಮೆದುಗನ್ನಡ
ಕವಿನುಡಿಯಲೂ ಶಿಲೆ ಕಲೆಯಲೂ
ಕದತಟ್ಟಿದೆ ಹೊಂಗನ್ನಡ

ಕೃತಿ ಕೃತಿಯಲೂ ನಾಡಕೃತಿಯಲೂ
ಅನುರಣಿಸಿದೆ ಹೊಸಗನ್ನಡ
ಮಾತು ಮಾತುಗಳಲೂ ಗೀತೆಗಳಲೂ
ಹರಿದಾಡಿದೆ ಚೆಲುಗನ್ನಡ

ಕನ್ನಡ ಕಣ್ ಕನ್ನಡ ಕನ್ನಡ,
ಬಾಯ್ ಕನ್ನಡ ಕನ್ನಡ, ನಾಲಗೆ ನುಡಿ ಕನ್ನಡ
ನಮ್ಮ ಬದುಕೆಲ್ಲವೂ ಆಗಲಿ ಅಪ್ಪಟ ಕನ್ನಡ
ಪಂಚಕೋಟಿ ಪವಿತ್ರ ಕನ್ನಡ
('ನಾಡು ನುಡಿ ನಮನ', ಪುಟ 109)

ಹೌದು ತಂದೆಯೊಡನೆ ಮಕ್ಕಳೂ ಕವಿಗಳಾಗಿರುವಾಗ, ಹೆಂಡತಿ ಯಾಕಾಗಬಾರದು? ಕೆ. ರಾಜೇಶ್ವರಿಗೌಡ ಅವರ 'ಅಮೃತಮಯಿ ಕನ್ನಡ ತಾಯಿ' ಇರುವುದು ಹೀಗೆ;

ಅನ್ನ ನೀಡಿ ಸಲುಹಿದ
ಬನ್ನ ಕಳೆದು ಬದುಕಿಸಿದ
ಪ್ರಾಣಮಯಿ ಕನ್ನಡ ತಾಯಿ!
ನಿನ್ನ ಋಣವನೆಂತು ತೀರಿಸಲಿ?

ದೂರದಲಿರಲಿ ಹತ್ತಿರವಿರಲಿ
ನೀನಿರುವೆ ನನ್ನ ಕಣ ಕಣದಲಿ,
ನನ್ನ ಮನೋದೇವತೆ ನೀನು
ನಿನ್ನ ತಂಪು ಮಡಿಲ ಕಂದನಾನು!

ನಾನೆಲ್ಲಿದ್ದರೂ ಕರೆಯುವೆ ನೀನು
ಅಮೃತಮಯಿ ನಿನ್ನ ಕೃಪೆಗೆ ತಹ ತಹಿಸುವೆ ನಾನು
ಅನ್ಯ ನುಡಿಗಳ ತಾರಾ ಮೇಳದಲಿ
ಕಣ್ತುಂಬಿದೆ ನಿನ್ನ ಮುಕುಟ ಪ್ರಭಾವಳಿ!

ನಿನ್ನ ಮರೆತವರು ಮಾನಸಾಗರು
ಧಿಕ್ಕರಿಸಿದವರು ಧೃತಿಗೆಡುವರು
ಹಳಿದವರು ಅಳಿಯುವರು
ನೆಚ್ಚಿದವರು ನೆಮ್ಮದಿಯಲಿ ಬಾಳುವರು
('ನಾಡು ನುಡಿ ನಮನ', ಪುಟ 52)

ಈ ಮೇಲಿನ ಕವಿತೆಗಳನ್ನು ನೋಡಿದಾಗ, ಗೌಡರ ಮನೆಯಲ್ಲಿ ಕನ್ನಡದ ಬಗೆಗಿನ ಕೌಟುಂಬಿಕ ಸಾಮರಸ್ಯ ಅದೆಷ್ಟು ಚೆನ್ನಾಗಿದೆ ಮತ್ತು ಅದೆಷ್ಟು ಅರ್ಥಪೂರ್ಣವಾಗಿದೆ ಎಂಬುದು ವೇದ್ಯವಾಗುತ್ತದೆ.

ಕನ್ನಡದ ಬಗ್ಗೆ ಹೆಂಡತಿ ಮಕ್ಕಳು ತೋರುವ ಅನನ್ಯ ಪ್ರೀತಿಯೊಂದಿಗೆ ಗೌಡರು ದನಿಗೂಡಿಸುವುದು 'ಕಂಗೊಳಿಸಲಿ ಕನ್ನಡ' ಎಂದು. ಅದಿರುವುದು ಹೀಗೆ :

ಕಲ್ಲ ಕಲ್ಪದಲಿ ಕೊನರಿ
ಕಂಗೊಳಿಸಲಿ ಕನ್ನಡ,
ಶಿಲ್ಪ ಶಿಲ್ಪದಲ್ಲೂ ಅರಳಿ
ಕಲೆಯಾಗಲಿ ಕನ್ನಡ!

ನಿತ್ಯ ಸತ್ಯವಾಗಿ ಮೆರೆದು
ನೂರ್ಮಡಿಸಲಿ ಕನ್ನಡ,
ವಿಶ್ವ ಪ್ರೀತಿಯಲ್ಲಿ ಬೆಳೆದು
ಹಸಿರಾಗಲಿ ಕನ್ನಡ!

ಎಂದೂ ಶ್ರೇಷ್ಠವಾಗಿ ಹೊಳೆದು
ಹೆಸರಾಗಲಿ ಕನ್ನಡ,
ನಲ್ಮೆ ಮೈತ್ರಿಯಲ್ಲಿ ಉಳಿದು
ಉಸಿರಾಗಲಿ ಕನ್ನಡ!




ಕಣ್ಣು ಕಣ್ಣಿನಲ್ಲಿ ಮಿನುಗಿ
ಮೆರೆದಾಡಲಿ ಕನ್ನಡ,
ಹೃದಯ ಹೃದಯವನ್ನೂ ಬೆಳಗಿ
ಬೆಳಕಾಗಲಿ ಕನ್ನಡ!

ನೀತಿ ಧರ್ಮದಲ್ಲಿ ನಡೆದು
ನೆಲೆಯಾಗಲಿ ಕನ್ನಡ
ನೆಲ ಮುಗಿಲ ಮೀರಿ ಹರಿದು
ಅನನ್ಯವಾಗಲಿ ಕನ್ನಡ!

('ನಾಡು ನುಡಿ ನಮನ', ಪುಟ 5)

ಗೌಡರು ನಿಜಕ್ಕೂ ಭಾಗ್ಯವಂತರು. ಯಾಕೆಂದರೆ, ಹೆಂಡತಿ ಮಕ್ಕಳೂ ಕೂಡ ಕವಿಗಳೇ, ಅದರಲ್ಲೂ ಕನ್ನಡ ಕವಿಗಳೇ! ಇನ್ನೂ ಒಂದು ಮುಖ್ಯ ಅಂಶವೆಂದರೆ ನಾಲ್ವರೂ ಕನ್ನಡವನ್ನೇ ಅಭ್ಯಸಿಸಿ, ಕನ್ನಡವನ್ನೇ ಕಲಿಸುತ್ತಿರುವವರು. ಈ ರೀತಿಯ ಸಂಗಮ ವಿರಳ ಸಂಗಮವೇ ಸರಿ.

ನನಗೆ ಒಂದು ಆಶ್ಚರ್ಯವೆಂದರೆ, ಗೌಡರು ತಾವೇನೋ ಕನ್ನಡ ಕಲಿತವರು, ಆದರೆ, ಹೆಂಡತಿ ಮಕ್ಕಳು ಸೇರಿ ಅದನ್ನೇ ಕಲಿತಿದ್ದಾರೆಂದರೆ? ಹೆಂಡತಿಯನ್ನು ಬೇಕಾದರೆ ಪ್ರತ್ಯೇಕಗೊಳಿಸೋಣ. ಕಾರಣ ಬೇರೆ ಮನೆಯಿಂದ ಬಂದವಳೆಂದುಕೊಂಡು. ತವರು ಮನೆಯಿಂದಲೇ ಕಲಿತು ಬಂದವಳೆಂದುಕೊಂಡು. ಇರುವ ಇಬ್ಬರು ಮಕ್ಕಳಾದ ಡಿ. ಭರತ್ ಮತ್ತು ಡಿ. ಸ್ಮಿತಾ ಅವರುಗಳೂ ಅದನ್ನೇ ಅಂದರೆ? ಕನ್ನಡದ ಆಸಕ್ತಿ, ಒಲವು ಮೇಲಾಗಿ ಅದನ್ನೇ ಸ್ನಾತಕೋತ್ತರ ಮಟ್ಟದವರೆಗೂ ಐಚ್ಛಿಕ ವಿಷಯವನ್ನಾಗಿ ಕಲಿಯುವುದೆಂದರೆ? ಕನ್ನಡ ಭಾಷೆಯಲಿ ಅಂಥದ್ದೇನನ್ನು ಅವರು ಕಂಡುಕೊಂಡಿರಬೇಕು? ಒಬ್ಬರು ಡಾಕ್ಟರ್ ಆದರೆ ಇನ್ನೊಬ್ಬರು ಇಂಜಿನಿಯರ್ ಆಗಬಹುದಿತ್ತಲ್ಲ? ಆ ಮಾರ್ಗಗಳಲ್ಲಿಯ ವಿಶೇಷ ಕ್ಷಮತೆ ಜೊತೆಗೆ ಹಣದ ಕೊರತೆ ಉದ್ಭವವಾಗಿರಬೇಕೆಂದುಕೊಳ್ಳಬೇಕೆ? ಅಂತೂ-ಇಂತೂ ಇಬ್ಬರೂ ಸಮಾನಮನಸ್ಕರಾಗಿ, ಬೇರೆಯವರ ಕೀಳು ನೋಟಕ್ಕೆ ತಲೆಕೆಡಿಸಿಕೊಳ್ಳದೆ, ಸ್ವತಃ ತಾವೂ ಕೂಡ ಕಡಿಮೆಯವರೆಂದು ವಿಕಾರಭಾವದವರಾಗದೆ ಕನ್ನಡವನ್ನೇ ಉದ್ದಕ್ಕೂ ನೆಚ್ಚಿಕೊಂಡರಲ್ಲ, ಇದು ಅತ್ಯಂತ ದೊಡ್ಡ ಸಂಗತಿ.

ಇಲ್ಲಿ ನಾನೊಂದು ಮಾತನ್ನು ಹೇಳಲೇಬೇಕು. ಕನ್ನಡ ಪ್ರಾಧ್ಯಾಪಕರ ಅಂತಿಮ ಗುರಿ ಎಂದರೆ ಶತಾಯ ಗತಾಯ ಪಿ.ಎಚ್.ಡಿ. ಮಾಡಿಕೊಳ್ಳುವುದು. ಇವರಿಗೆ 'ಡಾ' ಆದರೆ ಆಯ್ತು, ಮುಂದೆ ಸೃಜನ ಸೃಷ್ಟಿಯ 'ಡು' ಎಂಬುದು ನೆನಪೇ ಆಗುವುದಿಲ್ಲ. 'ಹಾಡಿದ್ದನ್ನೇ ಹಾಡೋ ಕಿಸಬಾಯಿದಾಸ'ರಾಗಿ ಕೊನೆಗೊಮ್ಮೆ ಉಶ್ಶಪ್ಪ ಅನ್ನುತ್ತ ನಿವೃತ್ತರಾಗುತ್ತಾರೆ. ಮುಂದಂತೂ ವಿಶ್ರಾಂತಿಯೇ ವಿಶ್ರಾಂತಿ. ಬಹಳೆಂದರೆ, ಹಡೆದ ತಪ್ಪಿಗೆ ಮಕ್ಕಳ ಮದುವೆ ಮಾಡುತ್ತಾರೆ. ಶಹರದಲ್ಲಿದ್ದರೆ ಬಂಗಲೆ ಕಟ್ಟಿಕೊಳ್ಳುತ್ತಾರೆ. ಕಾರು-ಬಾರು ಎನ್ನುತ್ತಾರೆ. ಬಿಟ್ಟು ಬಂದ ಹಳ್ಳಿಯಲ್ಲಿ ಜಮೀನಿದ್ದರೆ ಆಗೊಮ್ಮೆ-ಈಗೊಮ್ಮೆ ಹೋಗಿ, ಧಣಿಯಂತೆ ವರ್ತಿಸಿ, ತಂಬಾಕು ಇಲ್ಲಾ ಕಬ್ಬನ್ನು ಬೆಳೆಸಿ, ಮತ್ತಷ್ಟೂ ಮತ್ತಷ್ಟು ಶ್ರೀಮಂತರಾಗುತ್ತಾರೆ. ಸಾಹಿತ್ಯದ ಯಾವುದೇ ಕಾರ್ಯಕ್ರಮಕ್ಕೆ ಬೆನ್ನು ತೋರಿಸುತ್ತಾರೆ. ಈಗಂತೂ ಇವರ ಪಾಲಿಗೆ ಸಾಹಿತ್ಯ ಎಂಬುದು ಸಾಮಗ್ರಿಯಾಗಿರುತ್ತದೆ. ಅದನ್ನು ನಂಬಿದವರು ಭಿಕ್ಷುಕರಾಗದೆ ಮತ್ತೇನು ಆಗುವುದಿಲ್ಲ ಎಂಬ ತಿಳಿವಿಗೆ ಬಂದಿರುತ್ತಾರೆ. ಈ ಮಾತುಗಳನ್ನು ನಾನು ಅತಿಶಯೋಕ್ತಿಯಾಗಿ ಹೇಳುತ್ತಿಲ್ಲ. ನನ್ನ ಅನುಭವಕ್ಕೆ ಬಂದ ಕೆಲವು ಉದಾಹರಣೆಗಳ ಆಧಾರದ ಮೇಲೆ ಹೇಳುತ್ತಿದ್ದೇನೆ.

ಈ ಮೇಲಿನ ಮಾತುಗಳನ್ನು ನಾನೇಕೆ ಹೇಳಬೇಕಾಯಿತೆಂದರೆ, ಗೌಡರ ಹೆಂಡತಿಯಾಗಲೀ, ಮಕ್ಕಳಾಗಲೀ ಆದಷ್ಟು ಜಾಗೃತರಾಗಿ ಹೆಜ್ಜೆ ಇಡಲೆಂದುಕೊಂಡು, ಮನೆ-ಮನಗಳಲ್ಲಿ ಕನ್ನಡ ಪರಿದಾಡುತ್ತಿರುವುದರಿಂದ ಅದರ ಉಳಿವಿಗಾಗಿ ಇವರು ಇನ್ನಷ್ಟು ಇನ್ನಷ್ಟು ಸೃಜನ ಕ್ರಿಯೆಯಲ್ಲಿ ತೊಡಗಿಕೊಳ್ಳುತ್ತ, ಮುಖ್ಯವಾಗಿ ಸಾಂಸ್ಕೃತಿಕ ಸಂಪತ್ತಿಗೆ ಮುಖಾಮುಖಿಯಾಗುತ್ತ, ವಾಸ್ತವಕ್ಕೂ ಅದಕ್ಕೂ ಸಂವಾದ ಏರ್ಪಡಿಸುವುದರೊಂದಿಗೆ ಜ್ವಲಂತ ಸಮಸ್ಯೆಗಳಿಗೆ, ಸವಾಲುಗಳಿಗೆ ಅಳುಕದೆ ಎದೆಗೊಟ್ಟು ಸ್ಪಂದಿಸಲೆಂದುಕೊಂಡು.

ಇವರಾರಿಗೂ ಸದ್ಯ ಸಾಹಿತ್ಯ ಸತ್ತಿದೆ ಎಂಬ ಭ್ರಮೆ ಬೇಡ. ಒಂದು ಬಗೆಯ ಸ್ಥಗಿತತೆ ಅಥವಾ ಏಕತಾನತೆ ಬಂದಿದೆ ಎಂದುಕೊಂಡು ಸಾಹಿತ್ಯ ನಿಂತೇ ಹೋಗಿದೆ ಎಂದು ಮಾತನಾಡುವುದು ಸರ್ವಥಾ ಸಲ್ಲ. ಸಾಹಿತ್ಯದ ಯಾವ ಕಾಲಘಟ್ಟಕ್ಕಾದರೂ ಈ ತೆರನಾದ ಅವಸ್ಥೆ ಒಮ್ಮೊಮ್ಮೆ ಅನಿವಾರ್ಯವೇ. ಮತ್ತು ಇದು ಒಂದು ದೃಷ್ಟಿಯಿಂದ ಒಳ್ಳೆಯದೇ, ಹೊಸ ಚಿಂತನೆ ಹೊಸಮಾದರಿ ಇಂಥಲ್ಲಿಂದಲೇ ಹುಟ್ಟುವುದು.

ಹಾಗೆ ನೋಡಿದರೆ, ಈಗ ಸಾಹಿತ್ಯಕ್ಕೆ ಹೊಸ ತಿರುವೊಂದು ಬೇಕಿದೆ. ಯಾಕೆಂದರೆ ಜಾಗತೀಕರಣದ ಪೆಟ್ಟು ದಿನೇ ದಿನೇ ಹೆಚ್ಚಾಗುತ್ತಿದೆ. ಇದಕ್ಕೆ ಸರಿಯಾದ ಮದ್ದೆಂದರೆ ದೇಸಿ ಚಿಂತನೆ, ಗಾಂಧಿಯ ಹಿಂದ್ ಸ್ವರಾಜ್ಯದೆಡೆಗೆ ಮುಖಚಾಚುವಿಕೆ. ಈ ನಿಟ್ಟಿನಲ್ಲಿ ನನ್ನದೇ ಒಂದು ಕವಿತೆಯನ್ನು ಕೊಡಬಯಸುತ್ತೇನೆ;

**ಸಹನೆಯ ಹಿಂದ ಸ್ವರಾಜ್ಯದಲ್ಲಿ;**

ಚಿಂತನೆಯೆಂಬ ದುಡಿಮೆಯ ಫಲವಾಗ
ನನ್ನ ಸಾಹಿತ್ಯ ನಿಮ್ಮ ಸಾಹಿತ್ಯ

ಪ್ರತಿಭೆಯೆಂಬುದೀಗ ಉತ್ಪಾದನೆ
ಅಥವಾ ಸರಕು
ಹಾಗೆಂದು ಹೆಮ್ಮೆಯಲ್ಲಿ ಬೀಗುವಂತಿಲ್ಲ
ನಾವದರ ಮಾಲಿಕರೆಂದು
ಮಾರ್ಕ್ಸ್‌ನ ತಲೆಯೆತ್ತಿ ನಿಂತ
ಕಾರ್ಮಿಕರೆಂದು

ಕಣ್ಣು ಕೋರೈಸುವ ಥಳಕು ಬಳುಕಿನ
ಪೈಪೋಟಿ ಮಾರುಕಟ್ಟೆಯಲ್ಲಿ
ಸಾರಾಸಗಟಾಗಿ ನಿರಾಕರಣೆ
ಎಷ್ಟು ಎಷ್ಟು ಬೇಕು ನಿಮಗೆ
ಉದಾಹರಣೆ?

ಮಾರಾಟವಾಗದಿದ್ದರೇನು
ನಮ್ಮನ್ಮ ಕೂಸುಗಳು ನಮಗೆ
ಮುದ್ದು ಎನ್ನುವಿರಾ?
ಭಾರವಲ್ಲವೆನ್ನುವಿರಾ?

ಹಾಗಂತ ಎಷ್ಟುದಿನ ಸಾರಲಾದೀತು?
ಎಷ್ಟಂತ ಅಚ್ಚೆ ಮಾಡಲಾದೀತು?
ಕೋಗಿಲೆಯಂತೆ ಕಾಗೆ ಗೂಡನ್ನು
ಹುಡುಕಿಕೊಂಡು ಹೋಗುವುದೇ?
ಆದರೆ ಇವು ಮೊಟ್ಟೆಯಲ್ಲವಲ್ಲ?

ಸಾಕು ಸಾಕಾಗಿ ನಮ್ಮಮ್ಮ ತಲೆಗಳೇ
ಮುಳುಗಿಬಿಟ್ಟಾವು!

ಹೌದೇ ಎಂದು ಹೌಹಾರಿ
ಕಂಗಾಲಾಗುವುದು ಬೇಡ
ಯಾವುದಕ್ಕೂ ಒಂದು ಉಪಾಯ ಮಾರ್ಗ
ಇರಬಹುದೇ?

ಯಾಂತ್ರೀಕತೆಗೆ ಶರಣಾದ ಮನಕ್ಕೆ
ಕಸಿವಿಸಿಯಾಗುವುದಂತೂ ಸುಳ್ಳಲ್ಲ

ಸರಕು ಎಂಬ ಅಭಿಶಾಪಕ್ಕೆ ಒಳಗಾಗಿರುವುದಕ್ಕೆ
ಬಿಡುಗಡೆಯಾದರೂ ಸಿಕ್ಕೀತು
ರೈಲುಹತ್ತುವುದು ಬೇಡ

ಬಂಡೀ ಹತ್ತೋಣ
ಸಹನೆಯ ಹಿಂದ ಸ್ವರಾಜ್ಯದಲ್ಲಿ
ಸ್ವದೇಶೀ ಗಾಂಧಿ ಕಂಡಾನು

ಜಾಗತೀಕರಣದ ಕ್ರೂರದಾಳಿಗೆ ಸೃಜನಶೀಲ ಮನಸ್ಸು ಮಂಕಾಗಿದ್ದರೂ ಅದನ್ನು ಮೆಟ್ಟಿನಿಲ್ಲುವ ಉಪಾಯಮಾರ್ಗವೊಂದನ್ನು ನನ್ನ ಸಹಿತ ಯಾರೆಲ್ಲರೂ ಕಂಡುಕೊಳ್ಳಬೇಕಾದ ಅನಿವಾರ್ಯತೆಯು ಇಂದು ಇದ್ದೇ ಇದೆ.

ಗೌಡರು 'ಜಾಗತೀಕರಣ'ವನ್ನು ಕುರಿತು ಬರೆಯುವುದು ಹೀಗೆ :

ಹಾಡು ಹಗಲೇ ನಾಡ ತುಂಬ
ತಿಮಿರ ಗೂಡು ಕಟ್ಟಿದೆ,

ಅಜ್ಞಾನದ ಮಸುಕು ಹೊದ್ದು
ರಾಷ್ಟ್ರ ಹೃದಯ ಕೆಟ್ಟಿದೆ!

ಮನುಜ ಮನುಜರಲ್ಲಿ ಜಾತಿ
ದ್ವೇಷದ ಹೊಗೆಯಾಡಿದೆ,
ಅವನು ಹೆಚ್ಚು ಇವನು ಕೀಳು
ಭೇದಭಾವ ಮೂಡಿದೆ!

ಲೋಕ ಧರ್ಮ ಮರೆತ ಜನಕೆ
ಹೇಳುವುದು ಮತ್ತೇನಿದೆ!
ಜಾಗತೀಕರಣ ಎಂಬ
ಹೊಸತು ಭೂತ ಮೆಟ್ಟಿದೆ

ಸ್ವೋಪಜ್ಞತೆ ಇರದ ಕುಬ್ಜ-
ಡೌಲು ಡೊಳ್ಳ ಬಡಿದಿದೆ;
ಬಹುರಾಷ್ಟ್ರೀಯ ಕಂಪನಿಗಳ-
ಕ್ರೂರ ದಾಳಿ ನಡೆದಿದೆ;

ನಮ್ಮ ನಲ್ಮೆ ನಾಡ ನೇಸರ
ಬೆಳಕೇ ಬತ್ತಿ ಹೋಗಿದೆ
ಬಾಪು ಕೊಟ್ಟ ದೇಸೀ ಮಂತ್ರ
ಚಿಂದಿ ಚಿಂದಿಯಾಗಿದೆ!

('ಹೂವು-ಹಣ್ಣು ಸಂಗ್ರಹದ ಪುಟ 9)

'ಮನಸ್ಸಿದ್ದರೆ ಮಾರ್ಗ' ಎಂಬ ಗಾದೆಯೊಂದಿದೆ. ಆದರೆ ಇಂದು ಆ ಮನಸ್ಸನ್ನೇ ಕೊಚ್ಚಿ ಹಾಕಿ ಗಾಯಗೊಳಿಸಲಾಗಿದೆ. ಹಾಗಾಗಿ ನೋಡುವ ನೋಟಕ್ಕೆ, ಭಾವಕ್ಕೆ, ಕಲ್ಪನೆಗೆ ಎಲ್ಲದಕ್ಕೂ ತುಕ್ಕು ಹಿಡಿದಂತಾಗಿದೆ. ಆದರೆ ಇಂಥ ವಿಷಾದಕರ ವಿಷಮತೆಯಲ್ಲೂ ಸೃಜನಶೀಲ ನಿರಂತರತೆ ರೆಕ್ಕೆ ಕಳೆದುಕೊಂಡು ಜಟಾಯು ಆಗಲಾರದೆಂಬುದಕ್ಕೆ ಗೌಡರ ಚಲನಶೀಲತೆಯೇ ಸಾಕ್ಷಿ. ಹಾಗಾಗಿಯೇ ಅವರಿಂದ 'ಬದುಕು-ಬರಹ' ಎಂಬ ಕವಿತೆ ಹುಟ್ಟುವುದು ಹೀಗೆ :

ಪಾಡಿನಲ್ಲೂ ಪಲ್ಲವಿಸುವ ಹಾಡು
ನನ್ನ ಬದುಕು-ಬರಹ

ಧೂಳಿನಲ್ಲೂ ಹೊಳೆವ ಹೆಜ್ಜೆ ಗುರುತು
ನನ್ನ ಬವಣೆ ಬಿನ್ನಹ!

ಬಾಳ ಬಿಂಬಿಸುವ ಬಿಸಿಲ ತರಹ
ಎದೆಯ ಸಂಕಟ ಸನಿಹ,
ಗೋಲ ಚುಂಬಿಸುವ ಗಹನ ದಾಹ
ನನ್ನ ಕಾವ್ಯ ಮೋಹ!

ನಿರಾಸೆ ಮುತ್ತಿ ಬತ್ತಿದರೂ
ಗರಿಕೆ ಚಿಗುರುವ ತರಹ
ಧೀಶಕ್ತಿ ಒಳಗೆ ಬತ್ತಿದರೂ
ನಾನು ನಾಡ ಸಿಂಹ!

('ಹೂವು-ಹಣ್ಣು' ಸಂಗ್ರಹದ ಪುಟ 5)

ಬಲಹೀನತೆಯಲ್ಲೂ ಬಲಾಬಲ ತೋರಿಸುವುದೇ ಪುರುಷಾರ್ಥ ಎಂಬ ಸತ್ಯ ಇಲ್ಲಿ ಧ್ವನಿತಗೊಂಡಿದೆ ಇದುವೇ ನಿಜವಾದ ಕವಿಯ ಲಕ್ಷಣ.

ಗೌಡರು ರಾಗಪ್ರಿಯರಾದರೂ, ಚೈತ್ರ ಚೆಲುವಿಗೆ ಮೋಹಗೊಂಡರೂ ವಾಸ್ತವ ಪ್ರಜ್ಞೆಯಿಂದ ವಿಮುಖರಾಗಿಲ್ಲವೆಂಬುದಕ್ಕೆ ಈ ಕವಿತೆ:

ಜಾಣ ಕಿವುಡರಿಗೆ....

ಜಾಣ ಕಿವುಡು ನಟಿಸುವಂಥ ಕುರ್ಚಿಸಂಕುಲವೇ
ಕಣ್ಣು ತೆರೆದು ನೋಡಿ ನೀವು, ಕಂಗೆಟ್ಟಿದೆ ರೈತ-ಕುಲವೇ!

ಮೀನಾ ಮೇಷ ಎಣಿಸಬೇಡಿ ಮನ್ನಾಮಾಡಿ ಬಡ್ಡಿ
ಆತ್ಮಹತ್ಯೆ ಮಾಡಿಕೊಳ್ಳುವ ರೈತರ ಕಾಪಾಡಿ!

ಬೇಡವೇ ಬೇಡವಯ್ಯ ನಮಗೆ ನಿಮ್ಮ ಜಾಗತೀಕರಣ
ಅದರಿಂದ ನಮಗೇನೆ ಭಾರಿ ಭಾರಿ ಹೊಡೆತ ಬಿದ್ದೀತಣ್ಣಾ!
ಬೇಡವೇ ಬೇಡ ನಮಗೆ ನಿಮ್ಮ ಉದಾರೀಕರಣ
ಅದರಿಂದ ನಮ್ಮ ಕಾಫಿ ಬೆಲೆಯೇ ಕುಸಿದು ಹೋಯಿತಣ್ಣಾ!

ಕಾಲದ ಸುಳಿಗೆ ಸಿಕ್ಕ ರೈತರು ತತ್ತರಿಸಿ ಹೋದರಣ್ಣಾ!
ಕಾನೂನು ಮಾಡೋ ಮಂತ್ರೀ ಜನರೇ ತೆಗೆಯಿರಿ ನಿಮ್ಮ ಕಣ್ಣ!
ಅರಣ್ಯ ರೋದನ ಆಗದಿರಲಿ ರೈತರ ಅಳಲ ಗಾನ....
ಕಾಯಕಲ್ಪ ಮಾಡಿ ಉಳಿಸಿ ರೈತ-ಸಮುದಾಯವನ್ನ!
('ರಾಗ ಮುಖಿ' ಪುಟ3)

ಬಡವರ ಗೋಳು ನಿರಂತರವಾದದ್ದೆಂದು ವಿಷಾದಪಡುತ್ತ ಗೌಡರು ಅದನ್ನು ಅಭಿವ್ಯಕ್ತಪಡಿಸುವುದು ಹೀಗೆ:

ಶತ ಶತಮಾನದಿಂದ ನನ್ನವರು
ದುಡಿಯುತ್ತಿದ್ದಾರೆ ಹೀಗೇ....
ಅದೇ ಬೆಂಜರೆ ಹೊಲ ಅದೇ ಗುಡ್ಡದ ತಪ್ಪಲು ನೆಲ
ನೀರಿಲ್ಲದ ಊರಿನಲ್ಲಿ ಒಣ ಬೇಸಾಯ!

ತುತ್ತು ಹಿಟ್ಟಿಗಾಗಿ ವರುಷದುದ್ದಕ್ಕೂ ಮೈಕೈ ಗಾಯ
ತಳ್ಳಂಕದೆದೆಯ ತಿದಿ ಒತ್ತಿ ಒತ್ತಿ ಹಣ್ಣಾದ-
ಗ್ರಾಮ ಸಮುದಾಯ,

ಯಾರಿಗೆ ಯಾರೂ ಇಲ್ಲ
ಬಡವರಿಗೆ ಆಶ್ರಯವಿಲ್ಲ!

ಅದೇ ಅಂಗೈ ಅಗಲ ಗದ್ದೆ ಗೋಮಾಳ ಬಯಲು
ಮುರುಕಲು ಮಣ್ಣಿನ ಮನೆ-ಬದಿಗೆ ಗೋಸಾಯಿ ಮಠ

ಸರ್ಕಾರಗಳು ಬಂದವು-ಸರ್ಕಾರಗಳು ಹೋದವು
ತಕರಾರುಗಳು ಹಾಗೆ ಹಾಗೆ ಉಳಿದವು!

ಊರಿನ ಮಾರಮ್ಮ ದೇವತೆ ಹಳೇ ಗುಡಿಯಲ್ಲಿ
ಬೇವಿನ ಮರದಡಿಯಲ್ಲಿ.... ಚಾವಡಿ ಎದುರಲ್ಲಿ
ನೋಡುತ್ತಿದ್ದಾಳೆ ಸುಮ್ಮನೆ!

ಹೊಸ ಮಿಲೇನಿಯಂ ಬಂದರೂ ಬಗೆಹರಿಯಲಿಲ್ಲ ಬೇನೆ!
ಊರ ಮುಂದಲ ನೆಲ ಧೂಳು

ಅತ್ತ-ಇತ್ತ ಮಣ್ಣೆಂಟೆ ಗೋಡೆ ಬಿದ್ದ ಮನೆಗಳೂ ಹಾಳು
ನಿರಂತರ ನದಿಯಾಗಿ ಹರಿದದ್ದೊಂದೇ.... ಬಡವರ ಗೋಳು
(ರಾಗಮುಖಿ 'ನಿರಂತರ ನದಿ,' ಪುಟ 121)

ಗೌಡರು ಪ್ರಯೋಗಾತ್ಮಕತೆಯಲ್ಲಿ ಶ್ರದ್ಧೆ ನಿಷ್ಠೆ ಉಳ್ಳವರು. ಅವರು ಪ್ರಗಾಥ (ode) ಪ್ರಕಾರವನ್ನು ಕುವೆಂಪು ಅವರಂತೆ ಕನ್ನಡಕ್ಕೆ ತಂದಿದ್ದಾರೆ. ಇದಕ್ಕೆ ಉದಾಹರಣೆಯಾಗಿ 'ಪೃಥ್ವಿ ಪ್ರಗಾಥ'ವನ್ನು ನೋಡಬಹುದು

ಹೆಬ್ಬನವು ನಲ್ಮೆ ಕಬ್ಬಿಗನ ಜೊತೆಗೆ
ಸಂವಾದ ಮಾಡುತ್ತಿತ್ತು;
ತಬ್ಬಿಬ್ಬಾದ ಕಬ್ಬಿಗನ ಹೃದಯ
ಅಬ್ಬರಿಸಿ ಮೊರೆಯುತ್ತಿತ್ತು!

ಹೀಗೆ ಪ್ರಾರಂಭಗೊಳ್ಳುವ ಕವಿತೆ ಉದ್ದೋ ಉದ್ದ ಬೆಳೆದು ಕೊನೆಯಲ್ಲಿ
ಮನುಜ ಕಣಜವಾಗಿ ಸ್ವಾರ್ಥ ಗೂಡು ಕಟ್ಟಿ
ಪ್ರಕೃತಿಯ ಒಡಲೂ ಬದಿರು!
ವಿಕೃತಿಯ ಕಂಡ ಸ್ವಾರ್ಥಿ ಮಣ್ಣ ಮನುಜ
ತೃಪ್ತಿ, ಪಡೆದ ಚಿತ್ರ ಬರೆದು!
('ಹೂವು-ಹಣ್ಣು'ವಿನ 'ಪೃಥ್ವಿ' ಪ್ರಗಾಥ,' ಪುಟ 1)

ಹೀಗೆ ಮುಕ್ತಾಯವಾಗುತ್ತದೆ. ಇಲ್ಲಿ ನಿಸರ್ಗ ಸ್ವಗತಕ್ಕೊಳಗಾಗಿ, ತನ್ನ ಅಂದಿನ ಚೈತ್ರ ವೈಭವವನ್ನು ಕಣ್ಮುಂದೆ ತಂದುಕೊಳ್ಳುತ್ತಾ, ನಾಡ-ನಾಡಿಗನ ಕೈಯಲ್ಲಿ ತನ್ನ ರೂಪದರ್ಶಿತ್ವವನ್ನು ಕಳೆದುಕೊಂಡದ್ದರ ಬಗ್ಗೆ ಪರಿ ಪರಿಯಾಗಿ ದುಃಖಿಸಿರುವುದನ್ನು ಕಾಣುತ್ತೇವೆ. ಕವಿತೆಯ ಅಂತ್ಯದ ಎರಡು ಸಾಲುಗಳಂತೂ ಸ್ವಾರ್ಥಿ ಮನುಷ್ಯನ ತೀಟೆಯ ಫಲ ಅದೆಷ್ಟು ಶುಷ್ಕ ಎಂಬುದನ್ನು ಧ್ವನಿಸುತ್ತವೆ. ವ್ಯಕ್ತಿಯೊಬ್ಬ ಕಲಾವಿದನ ಪಟ್ಟಕ್ಕೇರದೆ ಬರೀ ಚಿತ್ರಕಾರನಾಗಿ ಉಳಿಯುವುದರ ಬಗ್ಗೆ ಕವಿಗೆ ಎಲ್ಲಿಲ್ಲದ ಅಸಮಾಧಾನವಿದೆ.

'ಪರದೇಶಿ ಪ್ರಗಾಥ' ಇನ್ನೊಂದು ಖಂಡಕಾವ್ಯ, ಹಸಿವಿನ ತಾಂಡವವನ್ನು ತಾಳಲಾಗದೆ, ಕದ್ದು ತಿನ್ನಲು ಹೋದ ಬನ್ನು, ಕೊನೆಗೂ ಅಜ್ಜನ ಮೂಲಕ ಸತ್ಯದ ಪಾಠವನ್ನು ಕಲಿಸುತ್ತಲೇ, ಅಜ್ಜನ ನಿರಾಧಾರದಲ್ಲೇ ಮುಂದೊಮ್ಮೆ ಶಾಲಾ ಗುರುವಿನ ದಯೆಯಿಂದಾಗಿ, ಪರದೇಶಿಯನ್ನು ಜ್ಞಾನಕಾಶಿಯನ್ನಾಗಿ ಪರಿವರ್ತಿಸುವ ಕಥಾ ಹಂದರವನ್ನು ಹೊಂದಿದೆ. ಸಂಕಲ್ಪ ಗಟ್ಟಿಯಾಗಿದ್ದರೆ ಕಾಮಧೇನು ಸಿಗದೇನು? ಎಂಬುದರ ಸಾರ ಈ ಪ್ರಗಾಥದಲ್ಲಿದೆ.

ಇನ್ನೊಂದು ಪ್ರಗಾಥ 'ಪಕ್ಷಿ ಪ್ರಗಾಥ'. ಅದು ಪ್ರಾರಂಭಗೊಳ್ಳುವುದು ಹೀಗೆ:

ಎಂಥ ಕಾಲ ಬಂತೋ ನನಗೆ
ನೀರು ನೆರಳಿಲ್ಲದಾಯ್ತು ಧರೆಗೆ
ಹಸಿರ ಜಾಗರವಿತ್ತು ಪ್ರಾಣಿ ಆಗರವಿತ್ತು
ಬದಿಗೆ ನಾಗರವಿತ್ತು ಜೊತೆಗೆ ಸಾಗರವಿತ್ತು

ಎಂಥ ಬರವು ಬಂತೋ ಬುವಿಗೆ
ಯಾವ ಮೇವಿರದಾಯ್ತು ಸವಿಗೆ,
ಕಣಿವೆ ಕಾನನವಿತ್ತು ನಗುವ ಹೂ ಬನವಿತ್ತು
ಕಳವೆ ಗದ್ದೆಯೂ ಇತ್ತು ಬಣವೆ ಬಂಕಗಳಿತ್ತು
ಎಂಥ ಘಳಿಗೆ ಬಂತೋ ಬಾಳಿಗೆ

ಹೀಗೆ ತೆರೆದುಕೊಳ್ಳುವ ಕವಿತೆ
ಆಗ ಹೆಜ್ಜೆಗೆ ಹೆಜ್ಜೆ ಮಳೆ ಹನಿಯ ಗೆಜ್ಜೆ
ಭೂತಾಯಿಗೆ ವರ್ಷದ ಓಜೆ
ಹರ್ಷದಭಿಷೇಕ ಮುಂಜಾನೆ ಮುಸ್ಸಂಜೆ!
ಗುಂಡ ಸದ್ದೂ ಇಲ್ಲ ದಂಡ ಸದ್ದೂ ಇಲ್ಲ
ಆಗ ಇಳೆಯೆಲ್ಲ ಸ್ವರ್ಗವೆಲ್ಲಾ!
ಈಗ ಯಾಕಿಂಥ ಕ್ಷಾಮ ರೋದನ?

ಕುಣಿದು ಕುಪ್ಪಳಿಸೋದೆಂತು ತನು-ಮನ?
ಯಾವ ಲಾಸ್ಯವಿಲ್ಲ ರಮ್ಯ ಭಾಷ್ಯವಿಲ್ಲ
ಕವಿಯ ಕಾವ್ಯವಿಲ್ಲ ಕಲೆಯ ಸಾತತ್ಯವಿಲ್ಲ
ಹೀಗೆ ಮಧ್ಯದಲ್ಲಿ ಬೆಳೆಯುತ್ತ

ಎಲ್ಲ ರೋಗದ ಮೂಲ ಈ ಮಾನವನಯ್ಯ
ಇವನ ಮನಸಿನ ತಾಣ ದುರಾಸೆಯಯ್ಯ
ಇವನ ಲಾಲಸೆಗೆಲ್ಲಾ ಸ್ವಾಹಾ
ಕಾಡು ಕಡಲೂ ಕರಗಿಸೋ ದಾಹಾ

ಹೀಗೆ ಮುಂದುವರೆದು ಕೊನೆಯಲ್ಲಿ
ಇನ್ನೆಲ್ಲಿ ಸೌಂದರ್ಯ ಸಹಜ?
ಬಂದಿತೇ ನನಗೆ ತೇಜ?
ಕಂಡೀತೇ ಹಸಿರ ಕಣಜ?

ನಾ ಆದೇನೆ ಲಾಸ್ಯದ ರಾಜಾ?
ಪರಿಸರವಿದ್ದರೆ ಸೃಷ್ಟಿಯ ಬೀಜ!
ಎಂದಾಗ ಮುಗಿಯುತ್ತದೆ
('ಹೂವು-ಹಣ್ಣು'ವಿನ 'ಪಕ್ಷಿ ಪ್ರಗಾಥ' ಪುಟ 47)

ಇಲ್ಲಿ ಪಕ್ಷಿಯೊಂದು ಪ್ರಕೃತಿಯ ಸಂಕೇತವಾಗಿ, ತನ್ನ ಚೈತನ್ಯಶೀಲ ಸಮೃದ್ಧಿಯನ್ನೆಲ್ಲಾ ಕಳೆದುಕೊಂಡದ್ದರ ಬಗ್ಗೆ ಪರಿತಪಿಸುತ್ತ, ಈ ದುರವಸ್ಥೆಗೆ ಕಾರಣನಾದ ಎಲ್ಲ ರೋಗದ ಮೂಲ ಮಾನವನನ್ನು ಶಪಿಸುತ್ತಿದೆ. 'ಎಲ್ಲ ರೋಗದ ಮೂಲ ಮಾನವ' ಎನ್ನುವಲ್ಲಿ ಕ್ರೂರಸತ್ಯ ಅಡಗಿದೆ. ಇದೇ ಮಾನವ ರಾಜಕಾರಣಿಯೂ ಆದಾಗ, ಆ ಕ್ಷೇತ್ರದಲ್ಲೂ ದುರ್ನಾತ ಸರ್ವಸಾಮಾನ್ಯವಾಗುವ ಪರಿಯನ್ನು 'ಹುಟ್ಟುಗುಣ' ಎಂಬಲ್ಲಿ ಕಾಣಬಹುದು.

ಸಂದಿಗೊಂದಿಯಲ್ಲಿವೆ ಪೊಗದಸ್ತು ಹಂದಿ
ಯಾವ ಒಂದು ಚರಂಡಿಯನೂ ಬಿಡದೆ
ಗೂಟಾಡುತ್ತವೆ
ಸಿಕ್ಕಸಿಕ್ಕಿದ್ದನ್ನೆಲ್ಲಾ ತಿಂದು

ಬಿದ್ದುಕೊಳ್ಳುತ್ತವೆ ಒಂದರ ಮೇಲೊಂದು;
ಸಮುದಾಯದ ಹೃದಯಬಲ್ಲ
ಸಮಾಜವೈದ್ಯರು
ಆಗೀಗ ಸಾಕಷ್ಟು
ಮೈತೊಳೆಯುತ್ತಾರೆ ಅವುಗಳನ್ನೆಲ್ಲಾ
ಬಲವಂತ ಹಿಡಿದು ತಂದು!
ನೀವೆಷ್ಟು ಉಜ್ಜಿ ತೊಳೆದರೂ

ಏನೆಲ್ಲಾ ಶುದ್ಧಿ ಮಾಡಿದರೂ
ಹಂದಿಗಳು ಹುಡುಕಿಕೊಂಡು ಹೋಗುತ್ತವೆ

ರಾಜಕಾರಣದ ಕೊಚ್ಚೆ
ಅದಕ್ಕೇ ದೇಶದ ತುಂಬ ರಿಚ್ಚೆ!

('ಹೂವು - ಹಣ್ಣು'ವಿನ 'ಹುಟ್ಟುಗುಣ' ಪುಟ 38)

ಇಲ್ಲಿ, ಹಂದಿಗಳ ಸ್ವಭಾವ, ವರ್ತನೆಗಳ ಮೂಲಕ ರಾಜಕಾರಣಿಗಳ ಪ್ರತಿಛಾಯೆಯನ್ನು ಸಮೀಕರಿಸಲಾಗಿದ್ದು, ನಾವು ದಿನನಿತ್ಯ ಕಾಣುವ ಪಕ್ಷ-ಪ್ರತಿ ಪಕ್ಷಗಳ ನಡುವಿನ, ಸಮಿತ್ರಗಳ ನಡುವಿನ ತಿಕ್ಕಾಟ, ಗುದಮುರಗಿತನಗಳ ದೃಶ್ಯಾವಳಿಯನ್ನು ಕಣ್ಮುಂದೆ ತಂದುಕೊಳ್ಳಬಹುದಾಗಿದೆ. 'ಹುಟ್ಟುಗುಣ ಸುಟ್ಟರೂ ಹೋಗುವುದಿಲ್ಲ' ಎಂಬ ಮಾತಿಗೆ ಅಕ್ಷರಶಃ ಹಂದಿಗಳಂತಹ ರಾಜಕಾರಣಿಗಳೇ ಸಾಕ್ಷಿ ಎಂಬುದನ್ನು ವೇದ್ಯಪಡಿಸಿಕೊಳ್ಳಬಹುದಾಗಿದೆ.

ಇಂಥ ರಾಜಕೀಯ ರಾಡಿಯಿಂದ ಬೇಸತ್ತ ಗೌಡರು 'ಗ್ರಾಮೀಣ ಗೀತೆ' ಹಾಡುವುದರೊಂದಿಗೆ ಕುಗ್ಗಿದ ಮನವನ್ನು ಹಿಗ್ಗಿಸಿಕೊಳ್ಳುತ್ತಾರೆ.

ರಾಗಿ ಜೋಳ ತೂಗಿ ತೊನೆದು
ಅಕ್ಕಪಕ್ಕ ಹೊಲಗಳಲ್ಲಿ
ಹರಡೈತೋ ಹಳ್ಳಿ ಸೊಗಡು!

ನಕ್ಕೈತಿಲ್ಲ ಹಸಿರು ಹೊಂಗೆ ಸಾಲು
ಕುಣಿದೈತಿಲ್ಲಿ ಕಾಡು ಸೋಗೆ ನವಿಲು
ನೋಡೋಕೆರಡೂ ಕಣ್ಣು ಸಾಲತಾ ಇಲ್ವೋ!

ಬಾಗೈತಿಲ್ಲಿ ಚಿಗುರು ನಾಗವಲ್ಲಿ
ಬರದೈತಿಲ್ಲಿ ಹೂವಿನ ರಂಗವಲ್ಲಿ
ತಾಳೆ ಬಾಳೆ ಬಳುಕುತ ಕುಣಿದಾವಿಲ್ಲಿ
ಈಳೆ ನಿಂಬೆ ಹೊಳೆಯುತ ಸೆಳೆದಾವಿಲ್ಲಿ ....

ಮೂಕ ಮಾತಾಡ್ತಾನೋ
ಬೆಡಗೇ ಹರಿದಾಡ್ತಾವೋ
ನೊಂದು ಬೆಂದ ಮನಕೆ ಹಳ್ಳಿಗಾಡು
ಹುರುಪು ತಂದೈತೋ!

ದೂರದಲ್ಲಿ ತೆಂಗಿನ ತೋಟಗಳು
ಬೇರೆ ಜೀತಿ ಜಗಿಯುವ ಕೋತಿಗಳು

ಬಿಕ್ಕೆ ಹಣ್ಣು ಮರ ಗಿಡ ತೂಗಿರಲು
ಪಂಚರಂಗಿ ಗಿಳಿಗಳು ಹಾರಿರಲು

ಹಳ್ಳಿಪದ ಹರಿದಾವೋ
ಸೊಬಗಸಿರಿ ಸಾರಿಯಾವೋ
ಬದುಕು ಬವಣೆ ಮರೆಸೋ
ಹಳ್ಳಿಗಾಡು ಹಿಗ್ಗು ತಂದೈತೋ!

('ರಾಗ ಮುಖಿ'ಯ 'ಗ್ರಾಮೀಣ ಗೀತೆ, ಪುಟ 77)

ಹಳ್ಳಿ ಹಾಡಿನ ಗುಂಗು ತಾಪತ್ರಯ ಮರೆಸುತ್ತಿದ್ದಂತೆ ಬಾಲ್ಯದ ಮತ್ತಷ್ಟು ಅನುಭವಗಳು ಕೆನೆಗಟ್ಟುತ್ತದೆ. ಅವು ಪ್ರತ್ಯಕ್ಷಗೊಳ್ಳುವುದು ಹೀಗೆ:

ನೂರೆಂಟು ದುಗುಡಗಳ ಕಾರ್ಮೋಡ ಸರಿಸಲು
ನಮ್ಮ ಬಾಲ್ಯದನುಭವದ ನೆನಪೊಂದೇ ಸಾಕು
ಈ ದೌಲತ್ತು ಯಾಕೋ?
ಹುಸಿ ಅಂತಸ್ತು ಯಾಕೋ?

ತುಂಟಾಟ ಚೆಲ್ಲಾಟ ಹುಡುಗಾಟ ನೆನಪಿಸುವ
ನಮ್ಮ ಬಾಲ್ಯದನುಭವದ ನೆನಪೊಂದೇ ಸಾಕು!
ಆಡಾಡಿ ಕುಣಿದು, ಚಿನ್ನಿ-ದಾಂಡಾಡಿ ಮೆರೆದು
ಓಡೋಡಿ ನೆಗೆದು, ಎಲ್ಲ ಗುದ್ದಾಡಿ ಪುಟಿದು..

ಹೊತ್ತು ಗೊತ್ತು ಮರೆತು ನಮ್ಮ ಚೆಂಡಾಟ ನಡೆದು
ಬೆಟ್ಟ ಕಾಡು ಕಡಲು ಹೊಲ ಗದ್ದೆ ತೋಟ ಅಲೆದು....
ಸೀಬೆಕಾಯಿ ಕದ್ದು
ನಾವು ಹಂಚಿಕೊಂಡು ತಿಂದು
ನಮ್ಮ ಬಾಲ್ಯದನುಭವದ ನೆನಪೊಂದೇ ಸಾಕು!

ಒಂದಾಗಿ ಕಲೆತು, ಅಚ್ಚಿನ ಕಲ್ಲಾಟ ಕಲಿತು
ರಂಗೋಲಿ ಬರೆದು, ಪುಟ್ಟ ಬೊಂಬೆಯನ್ನು ಹಿಡಿದು...
ಹಗ್ಗದಾಟ ಸೆಳೆದು-ನಾವು ಕುಂಟೆ ಬಿಲ್ಲೆ ಎಸೆದು
ಅಡಗಾಟವಾಡಿ-ಕಣ್ಣಮುಚ್ಚಾಲೆಯಾಡಿ

ಹೊಳೆದಂಡೆ ಮೇಲೆ
ಮರುಳುಮನೆ ಕಟ್ಟಿದಂಥಾ
ನಮ್ಮ ಬಾಲ್ಯದನುಭವದಾ ನೆನಪೊಂದೇ ಸಾಕು!
('ರಾಗಮುಖಿ'ಯ ಬಾಲ್ಯದ ನೆನಪು, ಪುಟ 22)

ಬಾಲ್ಯದ ನೆನಪಿನ ರಸಗುಲ್ಲಾ ತಿನ್ನುತ್ತಿದ್ದಂತೆ ಗೌಡರಿಗೆ ಶ್ರಾವಣದ ಸೊಬಗೂ ಮೂರ್ತಮಯವಾಗುತ್ತದೆ.

ಶ್ರಾವಣದಲ್ಲಿ ಓಡಾಡೋ
ನಗರಿಗ ಓ ಮನುಜ,
ಕಲುಷಿತ ಪರಿಸರವ ದೂಡೋ
ಚೈತನ್ಯವ ಪಡೆವೆ ಸಹಜ!

ಹೊಲಗಳಲ್ಲಿ ಹಚ್ಚ ಹಸಿರು
ಕೈಯ ಬೀಸಿ ಕರೆಯಲು
ಅಲ್ಲಿ ಇಲ್ಲಿ ಎಲ್ಲೆಲ್ಲೂ....
ಹೂ ಹೊದರಿನ ಹೊನಲು,

ನೂರು ನುಡಿಗೂ ನಿಲುಕದಿರುವ
ಚೆಲುವಿನ ಸಿರಿ ಹಾಡು,
ಕಣ್ಣನೋಟ ಮೀಟಿ ಮಿಗುವ
ಪತ್ರ ಪುಷ್ಪ ಸೊಗಸು!

ಮಳೆಯ ರಾಡಿ ಕದಡಿ ಹರಿವ
ಕೆನ್ನೀರಿನ ಜುಳು ಜುಳು,
ಕಾಲಿಟ್ಟೆಡೆ ಅಂಟಿಕೊಳ್ಳುವ
ಕೆಸರ ಪಿಸರ ರಂಕಲು,

ಸುತ್ತಮುತ್ತ ಕೆರೆ ಕುಂಟೆಯ
ನೀರಿನಲೆಯ ಮಿನುಗು
ಹಗಲಿನಲ್ಲೂ ಮುಸುಕು ತೆರೆದು
ಹರಡಿಕೊಂಡ ಬೆಳಗು

ತಪ್ಪದೆ ಮಳೆ ಸುರಿಸಿ ನಗುವ
ಬಾನ ಬೈಗು ಬೆಡಗು,
ಭಾವುಕ ಕವಿ ಗೀತೆ ಬರೆವ
ಶ್ರಾವಣ ಸ್ಫೂರ್ತಿ ಸೊಬಗು!

('ರಾಗಮುಖಿ'ಯ 'ಶ್ರಾವಣದ ಸೊಬಗು', ಪುಟ 17)

ಗೌಡರು ಪ್ರಕೃತಿಯ ಸೊಬಗಿಗೆ ಆಕರ್ಷಿತರಾದಂತೆ, ವಾಸ್ತವದ ಝಳಕ್ಕೆ ಮೈಯೊಡ್ಡಿದಂತೆ, ಪ್ರೇಮಗೀತೆಗಳಿಗೆ ಮನಸೋತವರು. ಬೇಂದ್ರೆಯವರ 'ಸಖಿಗೀತ' ಖಂಡ ಕಾವ್ಯದಿಂದ ಪ್ರಭಾವಿತರಾದ ಇವರು 'ಪ್ರೀತಿ ಪ್ರಗಾಥ' ರಚಿಸಿ ತಮ್ಮ ದಾಂಪತ್ಯದ ನೋವು ನಲಿವನ್ನು ಅಭಿವ್ಯಕ್ತಿಸಿದ್ದಾರೆ. ಗೌಡರು ಮಾಮೂಲು ಮದುವೆಯನ್ನಾಗದೆ ಪ್ರೇಮವಿವಾಹವಾದವರು. ಹಾಗಾಗಿ ಪ್ರೇಮ ಪರೀಕ್ಷೆಯನ್ನು ಎದುರಿಸಿದವರು.

ನಿನ್ನ ಕಂಡ ಗಳಿಗೆಯಲ್ಲೇ
ಪ್ರೇಮಾಕ್ಷರ ಕಲಿತೆ,
ನಿನ್ನ ಹಿಂದೆ ಮುಂದೆ ತಿರುಗಿ
ಪ್ರೇಮದ ಕಾಗುಣಿತ ಅರಿತೆ.

17109

ಪಾರ್ಕಿನಲ್ಲಿ ಪಿಕ್‌ನಿಕ್‌ನಲ್ಲಿ
ಪ್ರೇಮದ ವ್ಯಾಕರಣ ತಿಳಿದು,
ಹೋಟೆಲಲ್ಲಿ ಸಿನಿಮಾದಲ್ಲಿ
ಹೃದಯದ ಕಥೆ ಬರೆದು

ಕನಸಿನಲ್ಲೂ ಮನಸಿನಲ್ಲೂ
ಪ್ರೇಮ ಪಾಠ ಗುನುಗಿಕೊಂಡೆ
ರೀತಿ ನೀತಿ ಎಲ್ಲಾ ಮರೆತು
ಪ್ರೇಮದ ಅಧ್ಯಾಯ ಓದಿ,

ಆಟ ಊಟ ಎಲ್ಲಾ ಬಿಟ್ಟು
ಪ್ರೇಮಗೀತೆ ಗಟ್ಟಿ ಮಾಡಿ
ಹಗಲು ಇರುಳು ನಿನ್ನ ನೆನೆದು
ಪ್ರೇಮದಮರ ಕಾವ್ಯ ಬರೆದೆ!

ಅಪ್ಪ ಅಮ್ಮ ತನಿಖೆ ಮಾಡಿ
ಪ್ರೇಮದ ಜ್ವರ ಕಾಡಿ ಕಾಡಿ
ಜಾತಿ ಗೀತಿ ಕಂಡು ಕೇಳಿ
ಪ್ರೇಮ ಕಠಿಣ ಹಾದಿ ಸಾಗಿ

ನಿನ್ನ ಮದುವೆಯಾದಂದೇ
ಪ್ರೇಮದ ಪರೀಕ್ಷೆ ಗೆದ್ದೆ!

('ರಾಗ ಮುಖಿ'ಯ 'ಪ್ರೇಮ ಪರೀಕ್ಷೆ' ಪುಟ 24)

ಗೌಡರಿಗೆ 'ಪ್ರೀತಿಯೆಂಬುದು ಭಾವವಲ್ಲ, ಬಾಳಿನುಸಿರು'. ಹಾಗಾಗಿ ಅದರ ಒಳ ಅರ್ತಿಯನ್ನು ಅನುಭವಿಸಿದ ಅವರು ಹದಿಹರೆಯದವರ ಹೃದಯದ ಮಿಡಿತ ತುಡಿತವನ್ನು ಅರಿತು ಪ್ರೇಮಕಾವ್ಯದ ಜಾದೂಗಾರನಂತೆ ರಸಿಕರ ಮನಹೊಕ್ಕು ಮಧುರ ಭಾವ ಹೊಮ್ಮಿಸಿದ್ದಾರೆ.

'ಪ್ರೇಮವೆಂಬ ಜಾದು ಹೊಕ್ಕು
ಕಲ್ಪನೆಯ ಕಡಲಾಯ್ತು ಬದುಕು
ಒಳಗಿನೊಳಗಿನ ರಾಗ ರಂಗಾಯ್ತು'

('ರಾಗಮುಖಿ'ಯ 'ರಾಗದೊಳಗಿನ ರಾಗ', ಪುಟ 27)

'ಕಾಯಿ ಹಣ್ಣಾಗುವಲ್ಲೂ
ನಿನ್ನ ನೆನಪೇ ಉಜ್ವಲ,
ಹಣ್ಣು ಬೀಜ ಚೆಲ್ಲುವಲ್ಲೂ
ನಿನ್ನ ನೆನಪೇ ಶ್ಯಾಮಲ'

('ರಾಗ ಮುಖಿ'ಯ 'ನಿನ್ನ ನೆನಪು', ಪುಟ 29)

ಎಲ್ಲಿ ನಲಿವೋ ಅಲ್ಲೆ ನೋವು ಅಲ್ಲವೆ? ಹಾಗಾಗಿ ಗೌಡರು ಹಳಹಳಿಸುವುದು ಹೀಗೆ :

'ಚಿಗುರದ ಕೊರಡಲಿ ಆಸೆಯ ಚಿಗುರಿಸಿ
ಬುಡವ ಕಡಿದಿಯೇಕೆ-ಗೆಳತೀ
ದುಗುಡ ಹರಿಯಿತೇಕೆ?'

ಎಂದು. ಆದರೂ ಮರುಕ್ಷಣದಲ್ಲೇ, ಪ್ರೀತಿ-ಪ್ರೇಮವೆಂಬುದು ದೇಹದಾಚೆಗಿನ ಮಧುರ ಬಾಂಧವ್ಯವೆಂದರಿತು

'ನಿನ್ನಯ ಗೋರಿಯ ಪ್ರತಿ ಕಣದಲ್ಲೂ
ನನ್ನ ಜೀವ ಹುದುಗಿ ಒಲುಮೆ
ಬೇರು ಬಿಟ್ಟ ತರುವು-ಎಂದಿಗೂ
ಜೀವಂತ ಪ್ರೀತಿ ಇರವು!'
('ರಾಗಮುಖಿ'ಯ 'ಜೀವಂತ ಪ್ರೀತಿ', ಪುಟ 59)

ಎಂದು ಅದರ ಅಮರತ್ವವನ್ನು ಸಾರುತ್ತಾರೆ.

ಯಶಸ್ವೀ ಪ್ರೇಮ ವಿವಾಹದ ಒಸ್ನೆಲೆಯಲ್ಲಿ, ನೈಜ ಪ್ರೀತಿ-ಪ್ರೇಮದ ಆಳ-ವಿಸ್ತಾರವನ್ನರಿತ ಗೌಡರಿಗೆ ದೀನ ದಲಿತರ ಬಗೆಗಿನ ಅನುಕಂಪದ ಪಾಠ ಬೇಕಿಲ್ಲ. ಅವರು ಸ್ವತಃ ಕಾರ್ಮಿಕ ವಲಯದಲ್ಲೇ ಬೆಳೆದು ಬಂದವರು.

ಗೌಡರ 'ರಾಗ ಮುಖಿ'ಗೆ ಮುನ್ನುಡಿ ಬರೆಯುತ್ತ ಡಾ|| ಜಿ. ಕೃಷ್ಣಪ್ಪ ಅವರು ಒಂದೆಡೆ ಹೀಗೆ ಹೇಳುತ್ತಾರೆ;

'ನಗರದಲ್ಲಿ ಬರಿಗೈಲಿ ಬಾಳುವೆ ಮಾಡಲು ಹೊರಟ ಹಳ್ಳಿಯ ಹೈದನಿಗೆ ನಗರ ಜೀವನ ಹಲವು ಹೂಟ ಹೂಡಿ ಬದುಕಿನ ಪಾಠ ಕಲಿಸಿದೆ. ಅಂತಹವನು ನಿರಸನ ತತ್ವದಲ್ಲಿ ನಗರ ಕ್ರೌರ್ಯ, ಅಸಹಾಯಕ ಉಸಿರುಗಟ್ಟಿಸುವ  ಭಾವವನ್ನು ಹೊಮ್ಮಿಸಿದ್ದಾನೆ. ಈ ಭುವಿಯ ಕಾವ್ಯಜೀವಿ ಬದುಕಲು ಹೊರಟಾಗ ಆಸರೆ ಇಲ್ಲದೆ ತೆವಳಿ ಮೇಲೆದ್ದು ನಿಂತದ್ದು, ಈ ನೆಲದ ಕಂಪು, ಅನುರಾಗ, ಮಣ್ಣಿನ ವಾಸನೆಯಿಂದ ಕೆಂಗಡಲೆಯಾಗಿದೆ. ಕುಹಕ, ಕುಯುಕ್ತಿ ಇಲ್ಲದ ಹಳ್ಳಿಯ ಹುಡುಗ ಅದನ್ನು ಸಮರ್ಥವಾಗಿ ನವ್ಯ ಧಾಟಿಯಲ್ಲಿ, ಬಂಡಾಯ ದಲಿತ ಧ್ವನಿಯಲ್ಲಿ ಹಾಡಿದ್ದು ನೋವಿನ ಸ್ವಾದನವಾಗಿದೆ. ಸಮಾಜದ ಮೇಲು ಕೀಳಿನ ಕಾರಣವನ್ನು ಶೋಧಿಸಿದ ಮನಸ್ಥೈರ್ಯದಿಂದ ಸಮಾಜವನ್ನು ಟೀಕಿಸಿ ಜನರನ್ನು  ಎಚ್ಚರಿಸಿದೆ' ಎಂದು.

ಹೀಗೆ ಹೇಳುವ ಕೃಷ್ಣಪ್ಪ ಅವರೇ ಮುಂದುವರಿದು ಕವಿಯ
'ಇದುವರೆಗೆ ನಮ್ಮ ಈ ಮನೆಯ ಮಂದಿಯ
ನೂರು ಎಲುಬು ಸೋಸಿ ಮಾಂಸ ಬೇಸಿ
ಬಾಡಿನ ಸಾರು ಉಂಡಿದ್ದಾರೆ ಅವರಿವರು
ತಿಂದು ತೇಗಿ ಕೇಕೆ ಹಾಕಿ ಲಗ್ಗೆ ಕೂಗಿದ್ದಾರೆ ಶಕ್ತಿ ಇದ್ದವರು'

ಎಂಬ ಈ ಸಾಲುಗಳನ್ನು ಉದ್ಧರಿಸುತ್ತ

ವ್ಯವಸ್ಥೆಯ ಲಗಾಮುಹಿಡಿದ ಸಬಲರು ನಿರ್ಗತಿಕರನ್ನು ಶೋಷಿಸುತ್ತಿರುವ ರೀತಿಯನ್ನು

'ನೂರು ಎಲುಬು ಸೋಸಿ' ಎಂಬ ನುಡಿಯಲ್ಲಿ ಮರ್ಮಬೇಧಕವಾಗಿ, ಹಿಂಸಾಕಾಂಡದ ಪ್ರತೀಕವಾಗಿ ಹಿಡಿದಿಟ್ಟಿರುವುದನ್ನು ಎತ್ತಿ ತೋರಿಸುತ್ತಾರೆ.

ಗೌಡರ 'ದಣಿಪುರಾಣ' ಶೋಷಣೆಯ ಬಗೆ ಬಗೆಯ ಸ್ತರಗಳನ್ನು ತೆರೆದಿಡುತ್ತದೆ. ಅಲ್ಲಿಯ ಈ ಪಂಕ್ತಿಗಳನ್ನು ನೋಡಿ;

'ಮಂದಿ ದನಿಕೊಯ್ದು ದಣಿ', 'ಅಡಿ ಎತ್ತರದ ಪಾಪಾಸುಮೆಟ್ಟಿ ಉಬ್ಬಿದ/ ದಣಿ ನೆರಳು ಊರಾಚೆ ಹುಣಸೆಮರದ ಕೆಳಗೆ ಬಿತ್ತು'. 'ಆಳುಗಳ ಬಡಿದು ಕಣ್ಣು ಬಿಡುವುದರಲ್ಲೇ/ಕ್ರೂರ ಭೈರಿಗೆ ತಿರುವಿ ಹೊಡೆದು.' 'ಬೇಲಿ ಮೇಲಿನ ಓತಿಕ್ಯಾತವಾದರೂ ಬೇಕು/ಇವನು ಬೇಡ.'

ಈ ರೀತಿ ಶೋಷಿತರನ್ನು ಶೋಷಣೆಗೈವ ದಣಿಪುರಾಣಕ್ಕೆ ಕೊನೆಯೇ ಇಲ್ಲ. ಹೇಳಿದಷ್ಟೂ ಪದರು ಪದರುಗಳು ಬಿಚ್ಚಿಕೊಳ್ಳುತ್ತಲೇ ಸಾಗುತ್ತವೆ.

ದೀನ ದಲಿತರ ಬಗ್ಗೆ ಹೃದಯಾಂತರಾಳದ ಕರುಣೆ ತೋರುವ ಗೌಡರು, ನಮ್ಮ ವಿಶೇಷ ಗಮನವನ್ನು ಸೆಳೆಯುವುದು ಪ್ರಕೃತಿ ಪದ್ಯಗಳಿಂದ.

'ಪರಸಂಗದ ಗೆಂಡೆತಿಮ್ಮ'ದ 'ತೇರ ಏರಿ ಅಂಬರದಾಗೆ ನೇಸರು ನಗುತಾನೆ' ಎನ್ನುವ ಹಾಡನ್ನು ಇಂದಿಗೂ ಜನತೆ ಮರೆತಿಲ್ಲ. ಎಲ್ಲೋ ದೂರದಿಂದ ಹಾಡು ಕೇಳಿಬಂದರೂ ಕಿವಿಗೆ ಮತ್ತೇನೂ ಬೇಕಾಗುವುದಿಲ್ಲ, ಬಾಯಿ ಪಿಸುನುಡಿಯಲ್ಲಾದರೂ ಅದರೊಟ್ಟಿಗೆ ದನಿಗೂಡಿಸುತ್ತದೆ.

ಹಳ್ಳಿಯ ಮುಗ್ಧ ಪ್ರೇಮಿ ಗೆಂಡೆತಿಮ್ಮ ತನ್ನ ಒಲುಮೆಯ ಮೋಡಿ ಮಾಡಿದ ಹೆಂಡತಿಯ 'ಪರಸಂಗ'ಕ್ಕೆ ನೊಂದು ಹಾಡಿದ ಆ ಭಾವಗೀತೆ ಕನ್ನಡ ಸಾಹಿತ್ಯ ಪರಂಪರೆಗೆ ಒಂದು ಹೊಸ ವಿಶೇಷ ಕೊಡುಗೆಯಾಗಿ ದಾಖಲಾಗಿದೆ.

ಗೌಡರಿಗೆ ನೇಸರನು ನಿಜವಾದ ಪ್ರಜಾಪ್ರಭುತ್ವವಾದಿಯಾಗಿ ಬೆಳಕಿನ ಮುಖಾಂತರ ಸಕಲ ಜೀವರಾಶಿಗೆ ಅರಿವನ್ನು ನೀಡಿ ಔನತ್ಯವನ್ನು ಹಂಚುತ್ತಿರುವ ಸಮಾಜವಾದಿ ಅವನ ಬಣ್ಣನೆ ಎಂದರೆ ಗೌಡರಿಗೆ ಆನಂದ ಮೈದುಂಬಿದಂತೆ.

> 'ತೇರ ಏರಿ ಅಂಬರದಾಗೆ ನೇಸರು ನಗುತಾನೆ
> ಮರಗಿಡ ತೂಗ್ಯಾವೆ-ಹಕ್ಕಿ ಹಾಡ್ಯಾವೆ' ಎಂದು

ಸೂರ್ಯನ ಬೆಳಕಿಗೆ ಕಣ್ತೆರೆದ ಪ್ರಕೃತಿಯ ಕ್ರಿಯೆಯನ್ನು ಬೀರ್ಯಾವೆ, ಅರಳ್ಯಾವೆ, ಬಳುಕ್ಯಾವೆ, ಬೀಸ್ಯಾವೆ ಎಂಬ ನುಡಿಯಲ್ಲಿ ಉಲ್ಲಾಸವಾಗಿ ಬಣ್ಣಿಸುತ್ತಾ ತುರಿಯಾವಸ್ಥೆಗೆ ಸಾಗುತ್ತವೆ.

'ಬೇಧ ಭಾವ ಮುಚ್ಚು ಮರೆ ಒಂದು ಮಾಡ್ತೇನೆ
ಆ ಸೂರ್ಯ ಒಂದೆ ಬೆಳಕ ನಮಗೆ ನೀಡ್ಯಾನೆ
ಗಾಳಿ ನೀರು ಎಲ್ಲ ಕೊಟ್ಟು ಜಗವ ನಡೆಸ್ಯಾನೆ
ಆ ಸಿರಿಯ ಹಂಚಿಕೊಂಡರೆ ಬಾಳು ಸವಿಜೇನೆ'

ಎಂಬಲ್ಲಿ ಘನೀಭೂತ ಚಿಂತನೆ ಮಡುಗಟ್ಟಿದೆ. ಈ ತೆರನಾದ ಉನ್ನತ ಚಿಂತನಾ ಲಹರಿ ಅವರ ಇನ್ನಿತರ ಪದ್ಯಗಳಲ್ಲೂ ಕಾಣಬಹುದು. ಬೇಂದ್ರೆಯವರ ಪ್ರಭಾವಕ್ಕೊಳಗಾಗಿಯೇ ಗೌಡರು 'ಶ್ರಾವಣದ ಸೊಬಗು' ಬರೆದದ್ದು.

ಡಾ|| ಜಿ. ಕೃಷ್ಣಪ್ಪ ಅವರು 'ರಾಗಮುಖಿ'ಗೆ ನಿಜವಾಗಿಯೂ ಮೌಲಿಕವಾದ ಮುನ್ನುಡಿಯನ್ನು ಬರೆದಿದ್ದಾರೆ. ಅವರು ಮುನ್ನುಡಿಯ ಕೊನೆ ಭಾಗದಲ್ಲಿ ಭಾವಗೀತೆಗಳಿಗೆ ಸಂಬಂಧಪಟ್ಟಂತೆ, ಅದೂ ಒಟ್ಟಾರೆಯಾಗಿ ಹೇಳಿದ್ದು ಹೀಗಿದೆ;

'ಉತ್ತಮ ಭಾವಗೀತೆಗಳನ್ನು ರಚಿಸಿದ ಕುವೆಂಪು, ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ ಮುಂತಾದವರು ಜನಮನಕ್ಕೆ ಹೆಚ್ಚು ತಲುಪಿದ್ದು ಗೀತೆಗಳು ಚಲನಚಿತ್ರ ಮಾಧ್ಯಮಕ್ಕೆ ಅಳವಡಿಸಿದ್ದರಿಂದಲೇ ಎಂದು ಹೇಳಬಹುದು. ಚಲನಚಿತ್ರಕ್ಕಾಗಿ ಗೀತೆ ರಚಿಸಿ ಅಲ್ಲಿ ಮಿಂಚಿ ಬೆಳಗಿದ ದೊ.ರಂ.ಗೌ ಅವರನ್ನು ಕನ್ನಡ ಕಾವ್ಯಲೋಕ ಅಷ್ಟು ಚರ್ಚೆಯ ವಲಯಕ್ಕೆ ತೆಗೆದುಕೊಂಡಿಲ್ಲ. ಸಾಹಿರ್ ಲುದಿಯಾನ್ವಿ, ಗುಲ್ಜಾರ್ ಅವರು ಹಿಂದಿ ಚಿತ್ರಗೀತೆಗಳನ್ನು ಬರೆದು ಜನಪ್ರಿಯರಾಗಿದ್ದರೂ ಅವರ ಜನಪರ ಕಾವ್ಯದಿಂದ ಕಾವ್ಯಕ್ಷೇತ್ರದಲ್ಲೂ ಚರ್ಚೆಗೆ ಒಳಗಾಗಿದ್ದಾರೆ, ಅದೇ ಬಗೆಯಲ್ಲಿ ತೆಲುಗು ಕಾವ್ಯ ಪ್ರಪಂಚದಲ್ಲಿ ಕ್ರಾಂತಿಕಾರಿ ಕವಿ "ಶ್ರೀ.ಶ್ರೀ", ಡಾ||ಸಿ. ನಾರಾಯಣರೆಡ್ಡಿ, ಆರುದ್ರ ಮುಂತಾದವರು ತೆಲುಗು ಚಿತ್ರ ಜಗತ್ತಿನಲ್ಲಿ ಮಿನುಗಿದ ಹಾಗೆನೇ ಕಾವ್ಯ ಪ್ರಪಂಚದಲ್ಲೂ ಉಲ್ಲೇಖಿತರಾಗಿದ್ದಾರೆ. ಮೌಲಿಕ ಕೊಡುಗೆಗಳನ್ನು ನೀಡಿ ವಿಮರ್ಶಕರಿಂದ ಚರ್ಚಿತರಾಗಿದ್ದಾರೆ.

ಕನ್ನಡದಲ್ಲಿ ಚಲನ ಚಿತ್ರಗಳಿಗೆ ಕವಿತೆಗಳನ್ನು ಬರೆದುಕೊಟ್ಟ ಕವಿಗಳನ್ನು ನಮ್ಮ ವಿಮರ್ಶಕರು ವಿಮರ್ಶೆಯಿಂದ ದೂರ ಇರಿಸಿದ್ದಾರೆ. ಈ ಅವಗಣನೆ ಸರಿಯಲ್ಲ, ಅಲ್ಲಿ ಗೀತೆ ಬರೆದವರು ಒಳ್ಳೆಯ ಕಾವ್ಯವನ್ನು ನೀಡಿದಾಗ ಮೌಲಿಕ ಚರ್ಚೆಗೆ ಒಳಗಾಗಬೇಕು. 'ಜನಪ್ರಿಯತೆ' ಎಂಬುದು 'ಅಭಿಶಾಪ' ಆಗಬಾರದು. ಕವಿಯ ಕಾವ್ಯದ ಅನುಸಂಧಾನಕ್ಕೆ ಜನಪ್ರಿಯತೆ ಅಡ್ಡಿಯಾಗಬಾರದು. ಚಲನ ಚಿತ್ರದ ಸಾಂದರ್ಭಿಕ ಸನ್ನಿವೇಶಗಳಿಗೆ ಅನುಗುಣವಾಗಿ ರಚಿಸಿದ ಗೀತೆಗಳು ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿರುವುದನ್ನು ಗಮನಿಸಬೇಕಾಗಿದೆ.'

ವಿಮರ್ಶಕರಾದ ಡಾ|| ಜಿ. ಕೃಷ್ಣಪ್ಪ ಅವರ ಈ ಮಾತುಗಳಲ್ಲಿ ಅರ್ಥವಿಲ್ಲದಿಲ್ಲ. ಕೊನೆ ಪಕ್ಷ ಅವರಾದರೂ ಗೌಡರ ಒಳ್ಳೆ ಚಿತ್ರಗೀತೆಗಳ ಪರವಾಗಿ ದನಿ ಎತ್ತಿದ್ದಾರಲ್ಲಾ ಅದೇ ಸಂತೋಷ.

ಆದರೆ, ಇಲ್ಲೇ ನಾನೊಂದು ಮಾತನ್ನು ಹೇಳಲು ಇಷ್ಟಪಡುತ್ತೇನೆ. ಸಿನಿಮಾ ಹಾಡುಗಳ ಒಲವು ತೋರಿದವರು ಬಹುತೇಕ ಸೃಜನಶೀಲತೆಯನ್ನು ಕಳೆದುಕೊಳ್ಳುತ್ತಾರೆಂದು. ಯಾಕೆಂದರೆ, ಗೀತಾಕಾರರಿಗೆ ತಮ್ಮದೇ ಆದ ಸ್ವಾತಂತ್ರ್ಯವಿರುವುದಿಲ್ಲ. ಸಂಗೀತಕಾರನ ಅಪೇಕ್ಷೆಯಂತೆ ಅವರು ಎಲ್ಲಿ ಹೇಗೆ ಬೇಕೋ ಹಾಗೆ ಶಬ್ದಗಳನ್ನೊದಗಿಸುವುದಷ್ಟೇ ಅವರ ಕೆಲಸ. ಸನ್ನಿವೇಶಕ್ಕೆ ತಕ್ಕಂತೆ ಭಾವ ಉಕ್ಕಬಹುದು, ಉಕ್ಕಲಿಕ್ಕಿಲ್ಲ. ಇಲ್ಲಿ ಸಂಗೀತಕಾರನೇ ಮುಖ್ಯ ಹೊರತು ಗೀತಕಾರನಲ್ಲ. ಈ ಒಂದು ಪ್ರಕ್ರಿಯೆಯಲ್ಲೇ ಗೀತಕಾರನೆನಿಸಿಕೊಂಡವನು ಕಾಲಮಿತಿಗೊಳಗಾಗದೇ ವರ್ಷಾನುಗಟ್ಟಲೆ ರೂಢಸ್ಥನಾಗಿಬಿಟ್ಟರೆ, ಅವನಲ್ಲಿದ್ದ ಸೃಜನಶೀಲತೆ ಅಥವಾ ನಾನು ಅಂದುಕೊಳ್ಳುವಂತೆ ಸೃಜನಸೃಷ್ಟಿಕ್ರಿಯೆ ಮಾಯವಾಗಿಬಿಡುವ ಸಂಭವವೇ ಜಾಸ್ತಿ. ಕವಿಮನದ ಪತ್ರಕರ್ತನೊಬ್ಬ ಮುಂದೊಂದು ಹಂತದಲ್ಲಿ ವರದಿಗಾರನಾಗಷ್ಟೇ ಉಳಿಯವಂತೆ. ಯಾವುದನ್ನೂ ಗೀಚುವಷ್ಟಕ್ಕೇ ಸೀಮಿತಗೊಂಡಂತೆ.

ಗೌಡರ ವಿಷಯದಲ್ಲೂ ನನಗೊಂದು ಬಗೆಯ ಮರುಕ ಉಂಟಾಗದಿಲ್ಲ. ಗೌಡರು ಈಗ ಸಿನಿಮಾ ಹಾಡುಗಳನ್ನು ಬರೆಯುವುದನ್ನು ಬಿಟ್ಟಿದ್ದಾರೆಂದು ಕಾಣುತ್ತದೆ. ಅಥವಾ ಆ ವಲಯದವರು ಕೇಳುತ್ತಿಲ್ಲವೇನೋ. ಇದೇನೇ ಇರಲಿ, ಈಗಲೂ ಗೌಡರ ಪ್ರಸ್ತಾಪ ಬಂದಾಗ, 'ಅವ್ರ ಸಿನಮಾ ಹಾಡು ಬರ‍್ಯಾವ್ರು' ಅನ್ನುವ ರಾಗದ ಮಾತೇ ಇರುತ್ತದೆಯೇ ಹೊರೆತು, ಅವರೊಬ್ಬ ಪ್ರತಿಭಾವಂತ ಸ್ವೋಪಜ್ಞ ಕವಿ ಎಂಬುದನ್ನು ಯಾರೂ ನೆನಪಿಸಿಕೊಳ್ಳುವುದಿಲ್ಲ. ಕನ್ನಡ ಬುದ್ಧಿವಂತ ಮನಸ್ಸುಗಳೇ ಹೀಗೆ ಏನೋ.

ಯಾರು ಏನೇ ಅನ್ನಲಿ, ನಾನು ಮಾತ್ರ ಗೌಡರನ್ನು ಪ್ರೀತಿಸುವುದಕ್ಕೆ, ಗೌರವಿಸುವುದಕ್ಕೆ, ನನ್ನದೇ ಆದ ಮುಖ್ಯ ಕಾರಣವೆಂದರೆ, ಅವರು ಅಂತರ್ಜಾತಿ ವಿವಾಹವಾಗಿರುವುದು. ತಾನು ನಂಬಿಕೊಂಡ ಆದರ್ಶಕ್ಕೆ ಇದು ಸಾಕ್ಷಿ ಎನ್ನಬೇಕು. ಎರಡನೆಯದಾಗಿ, ಕನ್ನಡದಿಂದಾಗಿಯೇ ಅವರು ಕನ್ನಡತಿಯನ್ನು ಕಟ್ಟಿಕೊಂಡದ್ದು. ಇದಕ್ಕೂ ಹೆಚ್ಚಿನ ಅಂಶವೆಂದರೆ, ಮಕ್ಕಳಾದ ಭರತ ಮತ್ತು ಸ್ಮಿತಾ ಅವರುಗಳನ್ನೂ ಕನ್ನಡದ ದೀಕ್ಷೆಗೆ ಒಳಗಾಗುವಂತೆ ಪೋಷಿಸಿ, ಬೆಳೆಸಿದ್ದು. ಮನೆ-ಮನಗಳೆಲ್ಲವೂ ಕನ್ನಡಮಯವೆಂದರೆ ಅದಾರಿಗೆ ಹೆಮ್ಮೆಯಾಗಲಿಕ್ಕಿಲ್ಲ? ಗೌಡರನ್ನು 'ಸಿನೆಮಾ ಕವಿ' ಎಂದು ಗೇಲಿ ಮಾಡುವವರಿಗೆ ಇದು ಪಾಠವಾಗಬೇಕು. ವೇದಿಕೆ ಮೇಲೆ ಕನ್ನಡ, ಕನ್ನಡ ಎಂದು ಬೊಬ್ಬೆ ಹೊಡೆಯುತ್ತ, ಮಕ್ಕಳು, ಮೊಮ್ಮಕ್ಕಳನ್ನು ಇಂಗ್ಲಿಷ್ ಮಾಧ್ಯಮ ಸ್ಕೂಲುಗಳಿಗೆ ಕಳಿಸುತ್ತಿರುವವರಿಗೆ ಮಾದರಿಯಾಗಬೇಕು.

ಇನ್ನು, ಗೌಡರ ಕಾವ್ಯಕ್ಕೆ ಬಂದದ್ದಾದರೆ, ಅವರು ಅದನ್ನು ಕಾಣುವುದು ಹೀಗೆ:

'ಗೊಬ್ಬರ ತುಂಬಿದ ಕೈ ಬರೆದ ಮಣ್ಣಿನ ಹಾಡು ನನ್ನದು
ಸಗಣಿ ಮೆತ್ತಿದ ಬೆರಳು ಹಿಡಿದ ಗ್ರಾಮೀಣ ಲೇಖನಿ ನನ್ನದು

ಕೋರಿ ಬಟ್ಟೆ ತುಂಡು ತೊಟ್ಟ ಒರಟು ದೇಹ ನನ್ನದು
ಒಡೆದ ಕಾಲು ನೆತ್ತರ ಸುರಿಸೋ ಹೆಜ್ಜೆ ಗುರುತು ನನ್ನದು'

ಗೌಡರ ಅಭಿವ್ಯಕ್ತಿಯಲ್ಲಿ ಅವರ ಕಾವ್ಯದ ಗೊಬ್ಬರದ ವಾಸನೆ, ಮುದ್ದೆ ಸೊಪ್ಪಿನ ಸಾರು, ಮಣ್ಣಿನ ಆಹ್ಲಾದ, ಅವರೆ ಸೊಗಡಿನ ಪರಿಮಳ-ಮೈದಾನ ಆವರಿಸಿದಂತೆ ಕಮ್ಮನೆ ಭಾವಕ್ಕೆ ಒಳಗಾದಂತೆ ಸಹಜ ಭಾವಗೀತವಾಗಿ ಸಹೃದಯನಿಗೆ ಆಹ್ಲಾದ ನೀಡುವಂತಿದೆ.

ಗೌಡರ ಕಾವ್ಯಕ್ಕೆ ಅದರದೇ ಆದ ಉದ್ದೇಶವಿದ್ದು, ಅವರು ಕಾವ್ಯ ಮುಖೇನ ಜನಸಾಮಾನ್ಯನಿಗೆ ತಮ್ಮ ವಿಚಾರ ತಲುಪಿಸಬೇಕೆನ್ನುತ್ತಾರೆ, ಅವನನ್ನು ಎಚ್ಚರಿಸಬೇಕೆನ್ನುತ್ತಾರೆ. ಹೀಗೆ ಮಾಡುವಾಗ ಅವರ ಕಾವ್ಯ ಸರಳ ಭಾಷೆಯಲ್ಲಿ, ಮಧುರ ಭಾವದಲ್ಲಿ ಸದಭಿರುಚಿಯ ಸ್ಪಂದನಶೀಲ ಗುಣವನ್ನು ಹೊಂದುತ್ತದೆ. ಕ್ಲಿಷ್ಟ ಪಾಂಡಿತ್ಯದ ಜೀಗು ಬಿಂಕಸ್ನು ತೊರೆಯುತ್ತದೆ.

ನನ್ನ ಪ್ರಕಾರ, ಗೌಡರ ಕಾವ್ಯ ಹೇಳಿಕೆ ನೀಡುವಷ್ಟರ ಮಟ್ಟಕ್ಕೆ ಇಳಿದಂಥಾ ಕಾವ್ಯವಲ್ಲ. ಇದಕ್ಕೆ ಉದಾಹರಣೆಯಾಗಿ ಮೇಲೆ ಬಂದಂಥ 'ಒಡೆದ ಕಾಲು ನೆತ್ತರ ಸುರಿಸೋ ಹೆಜ್ಜೆ ಗುರುತು ನನ್ನದು' ಎನ್ನುವ ಇದನ್ನು ಸೂಕ್ಷ್ಮಕ್ಕೆ ತೆಗೆದುಕೊಂಡಲ್ಲಿ, ಒಡೆದ ಕಾಲಿನಿಂದ ರಕ್ತ ಬರುವುದೇನೋ ಸಹಜ. ಆದರೆ ಅದರಿಂದಲೇ ಹೆಜ್ಜೆ ಗುರುತನ್ನು ಮೂಡಿಸುವುದೆಂದರೆ? ರೈತ ಅದೆಷ್ಟು ಕಟ್ಟಾಳು ಆಗಿರಬೇಡ, ಅವನ ದುಡಿತ ಅದೆಷ್ಟು ಕಠೋರವಾಗಿರಬೇಡ ಎಂಬ ಊಹೆಗೆ ನಮ್ಮನ್ನು ನೂಕುತ್ತದೆ. ಈ ರೈತ ತಾನೇನೋ ತನ್ನ ದುಡಿತವೇನೋ ಎಂಬಷ್ಟಕ್ಕೇ ಮಿತಿ ಹಾಕಿಕೊಂಡವನಲ್ಲ. ತಾನು ಪಡುವ ಪರಿಶ್ರಮದ ಅರಿವು ಬೇರೆಯವರಿಗೂ ಆಗಬೇಕೆಂಬ ಹಂಬಲ ಅವನದು. ಮೇಲಾಗಿ ತನ್ನ ಪರಿಶ್ರಮ ವ್ಯರ್ಥವಾದದ್ದಲ್ಲ ಎಂಬ ಬಗ್ಗೆ ಅವನಿಗೆ ಖಾಚಿತ್ಯವಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ 'ಕಾಯಕವೇ ಕೈಲಾಸ' ಎಂಬುದರ ಜೀಜ ಮರ್ಮವನ್ನು ಮೇಲಿನ ಸಾಲು ಧ್ವನಿಸುವಂತಿದೆ. ಇನ್ನೂ ಒಂದು ಅರ್ಥದಲ್ಲಿ 'ರೈತ ಸಾಮಾನ್ಯನಲ್ಲ' ಎಂಬುದನ್ನು ಇಲ್ಲಿ ಸೂಚಿಸಿದಂತಿದೆ.'

ಇಂಥ ಉದಾಹರಣೆಗಳಿಗೆ ಗೌಡರ ಕಾವ್ಯದಲ್ಲಿ ಕೊರತೆಯಿಲ್ಲ, ಆದಾಗ್ಯೂ ಅವರು ಕಾವ್ಯಕ್ಕೆ ಸರಳ ಸಹಜ ಸೂತ್ರವನ್ನು ಅನ್ವಯಿಸುವುದರಿಂದ, ನಾದಮಯ ಸೊಗಸಿಗೆ, ಗುಂಗಿಗೆ ಒತ್ತು ಕೊಡುವುದರಿಂದ, ಮರುಚಿಂತನೆಯ ಕಾವು ದಟ್ಟೈಸುವುದಿಲ್ಲ. ಪ್ರಗಾಥ ಪ್ರಕಾರಕ್ಕೆ ವಿಶೇಷ ಒಲವು ತೋರಿದ ಗೌಡರು ಅದನ್ನು ಭಾವಗೀತೆಯ ಲಘು ನಡಿಗೆಯಲ್ಲೇ ಕಥನ ರೂಪವಾಗಿ ಕಟ್ಟುತ್ತಾರೆ. ಬದುಕಿನ ಬವಣೆಯ ವಸ್ತು ಗಂಭೀರವೆನಿಸಿದರೂ, ಅದಕ್ಕೆ ಸನ್ನದ್ಧಗೊಳ್ಳುವ ಭಾಷೆ ಗಾಂಭೀರ್ಯದಿಂದ ಕೂಡುವುದಿಲ್ಲ. ಇನ್ನೇನು, ಭಾವ, ಮನಸ್ಥಿತಿ ಒಂದೇ ತೆರನಾಗಿ ಸಂಚರಿಸದೆ, ಮಾನವೀಯ ತುಡಿತದಿಂದಲೋ, ವಿಕೃತಿ ತಂದಿತ್ತ ಸಂಕಟದಿಂದಲೋ ಬದಲಾಗುತ್ತ ವಸ್ತುವನ್ನು

ನಿರ್ವಹಿಸುವ ರೀತಿಯಲ್ಲಿ ಗೌಡರು ಹಾದಿ ತಪ್ಪುವುದಿಲ್ಲ. ಪ್ರಾಸಮಯತೆಯಲ್ಲಿ ಎಚ್ಚರಿಕೆಯನ್ನು ತೋರುತ್ತಾರೆ. ಭಾವ ಅನುಭಾವಕ್ಕೆ ತಕ್ಕಂತೆ ದೀರ್ಘ ಪ್ರಗಾಥವನ್ನು ಅಲ್ಲಲ್ಲಿ ವಿಭಾಗಿಸುತ್ತಾರೆ.

ಅಂತೂ ಗೌಡರು ಬಿ.ಎಂ.ಶ್ರೀ, ಡಿ.ವಿ.ಜಿ., ಕುವೆಂಪು ಅವರ ಪ್ರಗಾಥ ಮಾರ್ಗವನ್ನು ಉತ್ಸಾಹ, ಉಲ್ಲಾಸದಿಂದ ಮುಂದುವರಿಸಿದ್ದಾರಲ್ಲ, ಅದುವೇ ಹೆಮ್ಮೆಯ ಸಂಗತಿ.

ಎಲ್ಲರಂತೆ ಗೌಡರೂ ದ್ವಂದ್ವಗಳಿಂದ ಹೊರತಾಗಿಲ್ಲ. ಹಾಗಾಗಿ ಒಂದೆಡೆ ವೈಚಾರಿಕತೆ, ಇನ್ನೊಂದೆಡೆ ಧಾರ್ಮಿಕತೆ ಸೆಳೆಯುತ್ತವೆ. ಈ ವೈರುಧ್ಯ ಅವರಿಗೆ ಇಷ್ಟವಾಗಿದ್ದರೂ, ಅವರು ಹೆಚ್ಚು ಹೆಚ್ಚಾಗಿ ವೈಚಾರಿಕತೆಯೆಡೆಗೇ ವಾಲುತ್ತ ಸಮಾಜ ಮುಖಿಯಾಗಿರುವುದು ಸಂತೋಷದಾಯಕ ಸಂಗತಿಯೇ.

ಗೌಡರು ಹಾಗೂ ಸಾಮಾಜಿಕ, ರಾಜಕೀಯ ಕ್ಷೇತ್ರಗಳ ವೈಚಾರಿಕ ಪ್ರಜ್ಞೆಯನ್ನು ಹೊಂದಿದವರಾಗಿರುವುದರಿಂದ ತಮ್ಮ ಸೃಜನ ಶಕ್ತಿಯನ್ನು ಇಂಥಲ್ಲೇ ಮೂರ್ತಗೊಳಿಸುವುದು ಸೂಕ್ತ. ಧಾರ್ಮಿಕತೆ ಬಗ್ಗೆ ನಾನೇನು ಹೇಳುವುದಿದೆ? ಒಂದೇ ಒಂದು ಮಾತನ್ನು ಹೇಳಬಹುದು. ಧರ್ಮ ನಿಂತ ನೀರು. ಅದೇ ಆಧ್ಯಾತ್ಮ ಹರಿಯುವ ನದಿ. ಧರ್ಮವನ್ನು ಪ್ರಶ್ನಿಸುವಂತಿಲ್ಲ, ಶಂಕಿಸುವಂತಿಲ್ಲ. ಆಧ್ಯಾತ್ಮದಲ್ಲಿ ಜಿಜ್ಞಾಸೆಗೆ ಆಸ್ಪದವಿದೆ. ವಾದ-ಪ್ರತಿವಾದಕ್ಕೆ ಎಡೆ ಇದೆ. ಗೌಡರು ಈ ವ್ಯತ್ಯಾಸವನ್ನು ಅರಿತಿದ್ದರೆ ಸಾಕು.

ಈ ಲೇಖನದ ಅಂತ್ಯವನ್ನು ನಾನು ನನ್ನ ಪ್ರಕಾರ ಮುಗಿಸುವ ಬದಲು, ಸ್ವತಃ ಗೌಡರೇ 'ನಾನೇಕೆ ಬರೆಯುತ್ತೇನೆ' ಎಂಬಲ್ಲಿ ವ್ಯಕ್ತಪಡಿಸಿರುವ ಮಾತುಗಳಿಂದ ವಿರಾಮ ಹಾಕಬಯಸುತ್ತೇನೆ.

'..... ವರ್ಗ ವರ್ಣಗಳ ಭೇದಿಸಿದೆ, ಕುತಂತ್ರಿಗಳ, ಕಪಟಿಗಳ ನುಡಿನುಡಿಯಲ್ಲೂ ಸೀಳಿದೆ; ಗೋಮುಖವ್ಯಾಘ್ರರ ಬಯಲಿಗೆಳೆದೆ. ಜನಪ್ರಿಯನಾದೆ. ಆದರೆ ಒಳಗೊಳಗೆ ಮುದಕ್ಕಾಗಿ, ಹದಕ್ಕಾಗಿ, ಛಂದಕ್ಕಾಗಿ, ಬಂಧಕ್ಕಾಗಿ-ಈ ನಾಡಿನ ಕೋಟಿ ಕೋಟಿ ಜನರ ಬದುಕು ಸುಖಮಯವಾಗಬೇಕೆಂಬ ಅಭೀಪ್ಸೆಯ ತಹತಹಕ್ಕಾಗಿ ಸಮಾಜಮುಖಿಯಾಗಿ ಜಾಗತೀಕರಣ, ಉದಾರೀಕರಣ, ನಗರೀಕರಣ ಎಂಬೆಲ್ಲ ಬೂಟಾಟಿಕೆಗಳ ಈಡಾಡುವ ಕಾವ್ಯ ಮುಖಿಯಾಗಿ, ಜಗದ ಶಾಂತಿಗಾಗಿ, ನೆಮ್ಮದಿಗಾಗಿ ಕವಿತೆ ಬರೆಯಬೇಕೆಂದು ಈಗನ್ನಿಸುತ್ತಿದೆ.....'

❑



# ಧರ್ಮ-ಸಾಹಿತ್ಯ-ಸಂಗೀತಗಳ ತ್ರಿವೇಣಿ ಸಂಗಮ : ಶ್ರೀ ಗುರು ಚರಣದಲ್ಲಿ

• ನರಸಿಂಹಯ್ಯ

ಮನುಷ್ಯ ಮೂಲತಃ ಸಮಾಜಜೀವಿ. ಸಮಾಜವನ್ನು ಬಿಟ್ಟು ಮನುಷ್ಯನಿಗೆ ಅಸ್ತಿತ್ವವಿಲ್ಲ. ಜನಸಮುದಾಯದ ನಡುವೆಯೇ ಆತ ಬೆಳೆಯುತ್ತಾನೆ. ಆತನ ಒಳಿತು-ಕೆಡುಕುಗಳಿಗೆ, ಸುಖ-ದುಃಖಗಳಿಗೆ ಅಂದಿನ ಸಮಾಜ ವ್ಯವಸ್ಥೆಯಲ್ಲಿಯೇ ಕಾರಣಗಳು ಸಿಗುತ್ತವೆ. ಸಮಾಜವನ್ನು ಬಿಟ್ಟು ಸಂಸಾರವನ್ನು ತೊರೆದು ಸಂನ್ಯಾಸಿಯಾದವನೂ, ತನಗರಿವಿಲ್ಲದಂತೆಯೇ ಆ ಸಮಾಜದ ವ್ಯವಸ್ಥೆಯ ಬಗೆಗೆ ಏನಾದರೂ ಮಾತನಾಡುತ್ತಲೇ ಇರುತ್ತಾನೆ. ಇಲ್ಲವೆ ಆ ಸಮಾಜದಲ್ಲಿದ್ದಾಗಿನ ನೆನಪುಗಳನ್ನು ಮರುಕಳಿಸುತ್ತಿರುತ್ತಾನೆ. ಹೀಗೆ ಸಮಾಜವನ್ನು ಬಿಟ್ಟು, ಸಮಾಜದ ನೆನಪುಗಳನ್ನು ಬಿಟ್ಟು ಬದುಕಲು ಅಸಾಧ್ಯ. ಹೀಗೆ ಸಮಾಜದೊಂದಿಗೆ ಸಂಬಂಧವನ್ನು ಕಟ್ಟಿಕೊಂಡವರೆಲ್ಲರಲ್ಲಿಯೂ ಸಾಮಾಜಿಕ ಪ್ರಜ್ಞೆ ಇರುತ್ತದೆಂದು ಭಾವಿಸಬೇಕಾಗಿಲ್ಲ. ಸಮುದಾಯದ ನಡುವೆ ಇದ್ದರೂ ಸಮುದಾಯವನ್ನು ಎಲ್ಲರೂ ಅರ್ಥೈಸಿಕೊಂಡಿರುವುದಿಲ್ಲ. ಜನಸಮುದಾಯದ ಮೂಲಕ, ರಾಜಕೀಯ ಸ್ಥಿತ್ಯಂತರಗಳ ಮೂಲಕ, ಸಾಹಿತ್ಯದ ಆಶಯಗಳ ಮೂಲಕ ಆ ಸಮಾಜದ ಬಗೆಗೆ ಸರಿಯಾಗಿ ತಿಳಿದುಕೊಳ್ಳುವುದು, ಅಂತಹ ತನ್ನ ಸಮಕಾಲೀನ ಸಮಾಜದ ಬೆಳವಣಿಗೆಗಾಗಿ ಪ್ರಯತ್ನಿಸುವುದು, ಆ ಮೂಲಕ ಆಲೋಚಿಸುವುದು ಸಾಮಾಜಿಕ ಪ್ರಜ್ಞೆ ಎಂದೆನಿಸುತ್ತದೆ.

'ಸಾಮಾಜಿಕ ಪ್ರಜ್ಞೆ' ಪದದ ಅರ್ಥವ್ಯಾಪ್ತಿ ತುಂಬ ದೊಡ್ಡದು ಮತ್ತು ವಿಶಾಲವಾದದ್ದು. ಸಮಾಜದ ಸಮುದಾಯಕ್ಕೆ ಸಂಬಂಧಿಸಿದ ಎಲ್ಲ ಬಗೆಯ ವಿವರಣೆಗಳು ಇಲ್ಲಿಮುಖ್ಯವಾಗುತ್ತವೆ. ಧರ್ಮ, ನೀತಿ, ಶಿಕ್ಷಣ, ಸಂಸ್ಕೃತಿ, ಬದುಕು, ಆಚಾರವಿಚಾರ, ನಡೆ-ನುಡಿ, ಮೇಲು-ಕೀಳು, ಹೆಚ್ಚು-ಕಡಿಮೆ ಈ ಎಲ್ಲ ಅಂಶಗಳ ಬಗೆಗೆ ವಸ್ತುನಿಷ್ಠವಾಗಿ ತಿಳಿದುಕೊಂಡು ಅಲ್ಲಿಯ ಮಿತಿಗಳನ್ನು ದೋಷಗಳನ್ನು ಕೈಬಿಡುತ್ತ; ಸಂಪ್ರದಾಯಗಳನ್ನು ಮೌಢ್ಯತೆಗಳನ್ನು ತಿರಸ್ಕರಿಸುತ್ತ; ಸಮಾನತೆಯನ್ನು

ಮಾನವೀಯತೆಯನ್ನು ಸ್ವಾಗತಿಸುತ್ತ ಸಾಮಾಜಿಕ ಸ್ಥಿತಿಯನ್ನು ಆರೋಗ್ಯಕರವಾಗಿಡುವುದು ನಿಜವಾದ ಹೋರಾಟದ ಲಕ್ಷಣವಾಗುತ್ತದೆ. ಇಂಥ ಒಂದು ಹೋರಾಟಕ್ಕೆ ಸಂಘರ್ಷಕ್ಕೆ ''ಆದಿಚುಂಚನಗಿರಿ ಮಹಾಸಂಸ್ಥಾನ'' ಮಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಮುಂಚೂಣಿಯಲ್ಲಿದ್ದಾರೆ.

ಈ ಗುರುವಿನ ಸಾನ್ನಿಧ್ಯ ಪಡೆದಿರುವ ಕವಿಯು ತಮ್ಮ ಭಕ್ತಿಯ ವಿವಿಧ ಮುಖಗಳನ್ನು ಭಕ್ತಿಗೀತೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಶಿಷ್ಯ ಯಾವಾಗಲೂ ಶ್ರೀ ಗುರುವಿನ ದಾಸನಾಗಿರಬೇಕು. ಗುರು ಕೃಪೆಯಾಗಬೇಕಾದರೆ ಸಾಧನೆ, ಭಕ್ತಿಯಂತಹ ಮಾರ್ಗಗಳು ಅತ್ಯವಶ್ಯಕ 'ಶ್ರೀ ಗುರುಚರಣದಲ್ಲಿ' ಭಕ್ತಿಗೀತ ಸಂಕಲನ ಒಂದು ಸಾಧನಾ ಮಾರ್ಗವಾಗಿದೆ. ಈ ಭಕ್ತಿ ಗೀತೆಗಳ ಮೂಲಕ ಸಾಮಾಜಿಕರನ್ನು ಬಡಿದೆಚ್ಚರಿಸುವ ಆಶಯ ಕವಿಯದಾಗಿರುವುದು ಸುವೇದ್ಯ. 'ನಂಬಿಕರೆದರೆ ಹರಿಬಂದೆ ಬರುತ್ತಾನೆ' ಎಂಬ ದಾಸರ ವಾಣಿಯಂತೆ ಕವಿಯು ತನ್ನ ಅದಮ್ಯವಾದ ಆತ್ಮವಿಶ್ವಾಸದಿಂದ ಈ ಭಕ್ತಿಗೀತೆಗಳಲ್ಲಿ ''ಶ್ರೀಗುರು''ವನ್ನು ಧ್ಯಾನಿಸಿದ್ದಾರೆ. ಶಿಷ್ಯ ಗುರುವನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಆಚರಿಸಬೇಕಾಗಿರುವ ಮಾರ್ಗವನ್ನು ''ಎಲ್ಲ ಕಲಿತದ್ದು ಶ್ರೀಗುರುವೇ ನಿಮ್ಮಿಂದ'' ಮುಂತಾದ ಉದಾಹರಣೆಗಳಿಂದ ಕವಿಯು ಸ್ಪಷ್ಟಪಡಿಸಿದ್ದಾರೆ. ''ನೀರೆರೆದು ಪೋಷಿಸಿ ಬೆಳೆದೆವು ಪಲ್ಲವಿಸಿ'' ಎಂಬಂತಹ ಸಾಲುಗಳಲ್ಲಿ ನಿಷ್ಠಾ ಭಕ್ತಿಯ ಮಹತ್ವವಿದೆ. ಕೆರೆಯ ನೀರನು ಕೆರೆಗೆ ಚೆಲ್ಲಿದಂತೆ ಶ್ರೀಗುರುವಿನ ಕರುಣದಲ್ಲಾದ ಭಾಗ್ಯವನ್ನು ಗುರುವಿಗೆ ಸಮರ್ಪಣೆ ಮಾಡುವ ಕವಿಯು ಭಕ್ತಿಗೀತೆಗಳಲ್ಲಿ ಸಮರ್ಪಣಾ ಭಕ್ತಿಯಡಗಿದೆ. ಹೀಗೆ ಸ್ಮರಣೆ, ಸೇವನೆ, ಪೂಜನ, ವಂದನೆ, ದಾಸ, ಸಖ್ಯ, ಅರ್ಪಣಾ ಮಾರ್ಗಗಳ ಮೂಲಕ ಕವಿಯು ಭಕ್ತಿ ಸಾಧನೆ ಮಾಡಿದ್ದಾರೆ.

''ಶ್ರೀ ಗುರುಚರಣದಲ್ಲಿ'' ಕೃತಿಯಲ್ಲಿ 108 ಗೀತೆಗಳಿವೆ. ಈ ಕೃತಿಯ ವಿಷಯ ''ಗುರುಸ್ತುತಿ''. ದೇವರ ಒಲವನ್ನು ಗಳಿಸಲು, ಸಾಕ್ಷಾತ್ಕಾರ ಸುಲಭವೂ ಆದುದು ಭಕ್ತಿಮಾರ್ಗ, ಭಕ್ತಿಗೆ ಪೂಜೆ ಪ್ರಾರ್ಥನಾದಿಗಳು ಮಾಧ್ಯಮ. ಪ್ರಾರ್ಥನೆ ಎಂದರೆ ಬೇಡಿಕೆ. ಸ್ತೋತ್ರ ಎಂದರೆ ಪ್ರಶಂಸೆ. ಈ ಭಕ್ತಿ ಮಾಧ್ಯಮ ಅಥವಾ ಪ್ರಾರ್ಥನೆಯು ಪ್ರಶಸ್ತೆ, ಯಾಚನೆ, ಅಪರಾಧ ಕ್ಷಮಾಪಣೆ, ಸ್ವರೂಪ ನಿರೂಪಣೆ, ಆಧ್ಯಾತ್ಮ ಭಾವುಕತೆ ಮುಂತಾದ ರೂಪದಲ್ಲಿರುತ್ತದೆ. ನಿಂದನಾ ರೂಪದಲ್ಲಿರುವುದೂ ಉಂಟು. ಈ ನಿಂದನೆಯು ದೈನ್ಯವಾಗಿ ಪರಿವರ್ತನೆಗೊಂಡು ಅನನ್ಯಶರಣಾಗತಿಯಲ್ಲಿ ಪರ್ಯವಸಾನಗೊಳ್ಳುತ್ತದೆ. ತುದಿನಾಲಗೆಯಲ್ಲಿ ಮೂಡಿಬಂದ ಸ್ತೋತ್ರ ಸತ್ವಹೀನ; ಅದರಲ್ಲಿ ಭಕ್ತಿ ಇರುವುದಿಲ್ಲ... ಲೇಖಕರು ಅವ್ಯಕ್ತ ದೇವರನ್ನು ವ್ಯಕ್ತ ಗುರುವಿನಲ್ಲಿ ಸಾಕ್ಷಾತ್ಕರಿಸಿಕೊಂಡಿದ್ದಾರೆ. ಗುರುದೇವತಾ ತದಾತ್ಮ್ಯದಿಂದ ಹಾಡಿನಲಿಸಿದ್ದಾರೆ. ದೇವರುಗಮ್ಯ; ಗುರುವು ಗಮಕ, ಭಕ್ತಿ ಗುರು ದೇವ ಇದು ಸರ್ವಾಂಗೀಕೃತ ಕ್ರಮ. ಭಕ್ತನು ಸಾಧಕನಾದ ಗುರುವಿನ ಕೃಪೆಯಿಂದ ದೇವನನ್ನು ಕಾಣಬೇಕು. ಈ ದೃಷ್ಟಿಯಿಂದ ಭಕ್ತನಿಗೆ ''ದೇವರಿಗಿಂತ ಗುರು ದೊಡ್ಡವನು'' ಗೀತಾ

ಸಂಕಲನದ ಮೊದಲ ಮಾತು ಭಾಗದಲ್ಲಿ ಈ ಅಂಶವನ್ನು ದಾಖಲಿಸಲಾಗಿದೆ. ಶಿವನಿಗಿಂತ ಶಿವಭಕ್ತನೆ ಮುಖ್ಯ ಎಂದು ವಚನಕಾರರು ನಂಬಿರುವಂತೆ ಪ್ರಸ್ತುತ ಲೇಖಕರಿಗೆ ದೇವರಿಗಿಂತ ತನ್ನ ಗುರುವೇ ದೊಡ್ಡವರಾಗಿ ಕಂಡಿರುವುದರಲ್ಲಿ ಆಶ್ಚರ್ಯವೇನಿಲ್ಲ.

"ತಿರೆಯ ಮೇಲೊಂದು
ಅಪೂರ್ವ ತೇಜಸಿರಿಯಾದ ಶ್ರೀ ಗುರುವೇ
ನನ್ನ ಕಾವ್ಯ ಸ್ಥಲಕೆ
ನಿಮ್ಮಾಶೀರ್ವಾದವೇ ಮಂತ್ರ"

ಈ ಎಲ್ಲಾ ಸಾಲುಗಳು ಕವಿಯ ಭಕ್ತಿಯ ಆಂತರಿಕ ಸತ್ವವನ್ನು ಎತ್ತಿ ಹೇಳುತ್ತವೆ. ಗುರು-ಶಿಷ್ಯಬಾಂಧವ್ಯ ಕಣ್ಣೆದುರು ಕಟ್ಟುತ್ತದೆ. ಭಾರತೀಯ ಧರ್ಮಗಳಲ್ಲಿ ಭಕ್ತಿಗೆ ಪ್ರಥಮ ಪ್ರಾಶಸ್ತ್ಯವಿದೆ. ಆ ಭಕ್ತಿಯ ಒಂದು ಸಾಕಾರವನ್ನು ಕವಿಯ ವ್ಯಕ್ತಿತ್ವದಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ಎಲ್ಲ ಧರ್ಮಗಳಲ್ಲಿಯೂ 'ಭಕ್ತಿ'ಯ ಉದ್ದೇಶ ಮೋಕ್ಷಸಾಧನೆಯಾದರೆ, ಇಲ್ಲಿಯ ಭಕ್ತಿಯ ಉದ್ದೇಶ ಗುರುಒಲುಮೆಗೆ ಮಾತ್ರ ಸೀಮಿತಗೊಂಡಿದೆ. ಕವಿಯ ನಿಶ್ಚಲ ಪ್ರೇಮವೇ ಭಕ್ತಿಯಾಗಿದೆ. ಗುರುವಿನ ಹಂಬಲ, ಸೇವಾಭಾವ, ನಂಬಿಕೆ, ತ್ಯಾಗ ಇವೆಲ್ಲ ಭಕ್ತನ ಲಕ್ಷಣಗಳು ಈ ಎಲ್ಲ ಲಕ್ಷಣಗಳನ್ನು ಲೇಖಕರಲ್ಲಿ ಕಾಣಬಹುದಾಗಿದೆ.

ಪ್ರಸ್ತುತ ಭಕ್ತಿಗೀತೆಯ ಸಂಕಲನದಲ್ಲಿ ಭಾವಗೀತೆಯ ಲಕ್ಷಣಗಳನ್ನು ಕಾಣಬಹುದು. ಗೇಯತೆ-ಸಂಕೀರ್ಣತೆಗಳನ್ನುಳಿಸಿಕೊಂಡೇ ಇಲ್ಲಿಯ ಗೀತೆಗಳು ಸರಳವಾಗಿ-ಸ್ಪಷ್ಟವಾಗಿವೆ. ಸಾಮಾನ್ಯ ಜನತೆಗೆ ಪರಿಚಿತವಿರುವ, ಲೇಖಕರ ಅನುಭವಕ್ಕೆ ನೇರವಾಗಿ ದಕ್ಕಿರಬಹುದಾದ ಸಂಗತಿಗಳನ್ನು ಉದಾಹರಿಸುತ್ತಲೇ ತಮ್ಮ ಗುರುವಿನ ಸಮಾಜಸೇವೆಯ ಸ್ಪಷ್ಟಚಿತ್ರಣವನ್ನು ಕವಿ ಕಟ್ಟಿಕೊಟ್ಟಿದ್ದಾರೆ.

"ಪ್ರತಿ ದಿನ ನೂರು ಕಾರ್ಯಕಲಾಪ
ಎಲ್ಲೆಡೆ ನಿಮ್ಮದೇ ಪರಿಶೀಲನೆ
ಸಲಹೆ ಸೂಚನೆ"

ಎಂದು ಶ್ರೀ ಗುರುವಿನ ಕರ್ಮ ಪಥವನ್ನು ಹುಡುಕಲೆತ್ನಿಸಿದ್ದಾರೆ.

ಯಾವ ಕಾವ್ಯ ಸಹೃದಯ ಓದುಗನಲ್ಲಿ ಗಂಭೀರ ಪ್ರಭಾವವನ್ನುಂಟು ಮಾಡುತ್ತದೆಯೋ ಯಾವುದು ಮತ್ತೆ ಮತ್ತೆ ಓದಿಸಿಕೊಳ್ಳುತ್ತದೆಯೋ ಯಾವುದು ಬದುಕಿನ ಹೆಜ್ಜೆಗುರುತುಗಳನ್ನು ತೋರಿಸುತ್ತದೆಯೋ ಯಾವುದು ಒಳನೋಟಗಳನ್ನು ಕಟ್ಟಿಕೊಡುತ್ತದೆಯೋ ಅಂತಹ ಎಲ್ಲ

ಬರವಣಿಗೆಯಲ್ಲಿಯೂ ಕಾವ್ಯ ಸೌಂದರ್ಯವಿರಲು ಸಾಧ್ಯವಿದೆ. ಕೇವಲ ಮನೋವರ್ಣನೆಗೆ ಮಾತ್ರ ಇದು ಸೀಮಿತವಾಗಿರಬಾರದು. 'ಶ್ರೀಗುರು ಚರಣದಲ್ಲಿ'ನ ಗೀತೆಗಳು ಎದೆಯಲ್ಲಿ ಹೊತ್ತಿ ಉರಿಯುವ ಪಂಜಿನಂತೆ 'ಭಕ್ತಿ'ಯ ಕಾರಂಜಿ ಚಿಮ್ಮಿದೆ.

"ಭಾವ ತೊರೆ ಹರಿದಿತ್ತು ಜ್ಞಾನ ಕೆರೆ ತುಂಬಿತ್ತು
ಸಾಧನ ಕರೆ ಕರೆದಿತ್ತು
ಆನಂದದ ನೆರೆ ನೆರೆದಿತ್ತು
ಬಾಳ ಹಾದಿಯ ತುಂಬ ನಿಲ್ಲದ ಪಯಣ
ನಿರಂತರ ಶ್ರಮದ ಜೀವ ಭಾವಕವನ"

ಈ ಮುಂತಾದ ಗೀತೆಗಳಲ್ಲಿ ಕಾವ್ಯ ಸೌಂದರ್ಯ ಇರುವುದನ್ನು ಗಮನಿಸಬಹುದಾಗಿದೆ. ಕನ್ನಡ ಸಾಹಿತ್ಯದಲ್ಲಿ ನವೋದಯ ಪರಂಪರೆಯಿಂದ ಹೊಸ ಹೊಸ ದಾರಿಗಳಲ್ಲಿ ಅನೇಕ ಪ್ರಸಿದ್ಧರು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಶ್ರೀ ಗೌಡರು ಈ ಎಲ್ಲ ಕಾವ್ಯಗಳ ನೆಲೆಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಗಮನಿಸಿದ್ದಾರೆ. ಆದರೆ ಎಲ್ಲಿಯೂ ಅನುಕರಣೆಯ ಹಾದಿಯನ್ನು ತುಳಿಯದೆ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಕಾವ್ಯಕೃಷಿಮಾಡಿಕೊಂಡು ಬರುತ್ತಿದ್ದಾರೆ. ಪ್ರತಿಭಾಸಂಪನ್ನರಾದ ಕವಿ ತನ್ನ ಸ್ವೋಪಜ್ಞತೆಯನ್ನು ಕಳೆದುಕೊಳ್ಳುವುದಾಗಲಿ, ಸಂದರ್ಭಕ್ಕೆ ತಕ್ಕಂತೆ ರಾಜಿ ಮಾಡಿಕೊಳ್ಳುವುದಾಗಲಿ ಸಾಧ್ಯವಾಗುವುದಿಲ್ಲ. ತನ್ನ ಪ್ರತಿಭಾ ಕುಲುಮೆಯಲ್ಲಿ ಅಪೂರ್ವ ಕಲಾಕೃತಿಗಳನ್ನು ಹೆಕ್ಕಿ ತೆಗೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಕನ್ನಡ ಕಾವ್ಯ ಲೋಕಕ್ಕೆ ಭರವಸೆಯ ಕವಿಯಾಗಿ ಬೆಳೆಯುತ್ತಿರುವ ಗೌಡರು 'ಶ್ರೀ ಗುರುಚರಣದಲ್ಲಿ' ನಮ್ಮೆಲ್ಲ ಭರವಸೆಗಳನ್ನು ಹುಸಿಯಾಗಿಸಿಲ್ಲ. ಈ ಭಕ್ತಿಗೀತ ಸಂಕಲನದಲ್ಲಿ ಎಲ್ಲ ಕವನಗಳೂ ಯಶಸ್ವಿಯಾಗಿವೆ ಎನ್ನಲು ಬರುವುದಿಲ್ಲ; ಕೆಲವು ಕವನಗಳು ಭವದ ನೆಲೆಯಿಂದ ಮೇಲೇರುವುದಿಲ್ಲ, ಕೆಲವು ಕವನಗಳು ಭಕ್ತಿಯ ಭಾರದಿಂದ ಕುಸಿಯುತ್ತವೆ. ಮತ್ತೆ ಕೆಲವು ಕವನಗಳು ಭಕ್ತಿ ಭಾವನೆಗಳಿಂದ ತುಂಬಿ, ಸಹೃದಯ ಓದುಗರ ಮನಃ ಸೂರೆಗೊಳ್ಳುತ್ತವೆ. ಬಹುಕಾಲ ನೆನಪಿನಂಗಳದಲ್ಲಿ ಉಳಿಯುತ್ತವೆ. ಇಂಥ ಕವನಗಳಲ್ಲಿ ಕಾವ್ಯಸೌಂದರ್ಯ ತುಂಬಿದೆ. ಇದರಿಂದ ಕೆಲವು ಭಕ್ತಿಗೀತೆಗಳು ಸಾಮ್ಯ ಸಂಬಂಧದಿಂದ ಉತ್ಕೃಷ್ಟವಾಗಿವೆ.

ಕಾವ್ಯ ಸೌಂದರ್ಯವನ್ನುಂಟು ಮಾಡುವ ಶಬ್ದಾರ್ಥ ವೈಚಿತ್ರಗಳಿಗೆ ಅಲಂಕಾರಗಳೆಂದು ಹೆಸರು. ಧ್ವನಿ, ರಸ, ವಕ್ರೋಕ್ತಿ, ರೀತಿ, ಗುಣ ಇವುಗಳು ಸಂದರ್ಭಕ್ಕನುಗುಣವಾಗಿ ಶಬ್ದ ವೈಚಿತ್ರವನ್ನೋ ಅರ್ಥ ವೈಚಿತ್ರವನ್ನೋ ಉಂಟುಮಾಡಿ ಕಾವ್ಯಸೌಂದರ್ಯವನ್ನು ತರುತ್ತವೆ. ಅಲಂಕಾರವೆಂಬುದು ಭಾಷೆಯ ಒಂದು ಅವಿಭಾಜ್ಯ ಅಂಗ. ಮಾತನಾಡುವಾಗ, ಕೃತಿ ರಚನೆಮಾಡುವಾಗ ಅಲಂಕಾರಗಳು ಸಹಜವಾಗಿಯೇ ಹೊರಹೊಮ್ಮುತ್ತವೆ.

"ಶ್ರೀ ಗುರುಚರಣದಲ್ಲಿ" ಅಲಂಕಾರಗಳು ಸಹಜವಾಗಿ ಬಂದಿವೆ. ಕವಿಯ ಭಾವನೆ ಓದುಗನಿಗೆ ಮನವಟ್ಟು ಮಾಡಿಕೊಟ್ಟು ಗಾಢ ಪರಿಣಾಮವನ್ನುಂಟುಮಾಡುವ ಹಲವು ಸಾಲುಗಳು ಇಲ್ಲಿವೆ.

"ಬಿಂದು ನಾನು, ಸಿಂಧು ನೀವು
ಬದ್ಧನಾನು, ಬುದ್ಧ ನೀವು"

"ಸಾಧಿಸಿ ನಿಂತರು ಆಧ್ಯಾತ್ಮಗುರು
ನನ್ನ ಬಾಳಿಗೆ ಅವರೇ ತವರು
ಅಭಿನವ ವಿವೇಕಾನಂದರು!"

ಇಲ್ಲಿ ಬಂದಿರುವ 'ಪದಪುಂಜಗಳು' "ವಾಕ್ಯಸರಣಿಗಳು" ಹೋಲಿಕೆಗಳು ಸಹಜವಾಗಿ ಮೂಡಿ ಬಂದಿವೆ. ಅನುಭಾವವನ್ನು ಅನುಭವದ ಮೂಲಕ ಇಲ್ಲಿ ಅಭಿವ್ಯಕ್ತಿಸಲಾಗಿದೆ. ತಮ್ಮ ಪ್ರಿಯಗುರುವಿಗೆ "ಭಕ್ತಿ ಗೀತಾಂಜಲಿ"ಗಳ ಮೂಲಕ ತುಂಬು ಹೃದಯದ ಭಾವಾಂಜಲಿ ಸಲ್ಲಿಸಿ ಪುನೀತರಾಗಿದ್ದಾರೆ.

ಸಾಹಿತ್ಯದಲ್ಲಿ ಅಭಿವ್ಯಕ್ತಿಗೆ ಪ್ರಾಧಾನ್ಯತೆ ಇರುವಂತೆ ಅಲ್ಲಿರುವ ವಸ್ತುವಿಗೂ, ಆ ವಸ್ತು ಒಳಗೊಂಡ ಜೀವನ ಮೌಲ್ಯಗಳಿಗೂ ಅಷ್ಟೇ ಪ್ರಧಾನ ಸ್ಥಾನವಿದೆ. ಮೌಲ್ಯಗಳು ಕಾಲದಿಂದ ಕಾಲಕ್ಕೆ ಅಪಮೌಲ್ಯವಾಗಿ ಕಾಣಬಹುದಾಗಿದೆ. ಯಾವುದೇ ಒಂದು ವಿಚಾರಕ್ಕೆ ನೀತಿಗೆ, ಮಾತಿಗೆ ಅಂದಂದಿನ ಕಾಲದ ಜನ ಸಮೂಹ ಬೆಲೆ ಕೊಟ್ಟು ಒಪ್ಪಿಕೊಂಡಾಗ ಅದು ಮೌಲ್ಯವಾಗುತ್ತದೆ. ಸತ್ಯ-ಪ್ರೀತಿ-ಮಾನವೀಯತೆಯ ಮೌಲ್ಯಗಳನ್ನು ಶ್ರೀ ಗುರುಗಳು ಎತ್ತಿ ಹಿಡಿದಿದ್ದಾರೆ. ಮನುಷ್ಯ ಮನುಷ್ಯರ ನಡುವೆ ಪ್ರೀತಿ-ಆತ್ಮೀಯತೆ-ಸ್ನೇಹಗಳು ಅತಿ ಮುಖ್ಯವೆಂದು ಪ್ರತಿಪಾದಿಸಿರುವ ಕವಿ ಪ್ರೀತಿಯನ್ನು ಭಕ್ತಿಯ ಹಂತಕ್ಕೇರಿಸಿ ಒಂದು ಮೌಲ್ಯವನ್ನಾಗಿಸಿದ್ದಾರೆ. ಹಿಂದೆ ಜಾತಿ ಒಂದು ಮೌಲ್ಯವಾಗಿತ್ತು. ಇಂದು ಜಾತಿ-ಧರ್ಮಗಳು ವಿಷವರ್ತುಲವಾಗಿ ಮನುಷ್ಯತ್ವ ಪಶುತ್ವವನ್ನು ಪಡೆದಿದೆ. 'ಪ್ರೀತಿ'ಯ ಮೌಲ್ಯ ಕಮರಿಹೋಗಿದೆ. ಇಂಥ ಸಂಘರ್ಷದ ಸಂದರ್ಭದಲ್ಲಿ 'ಶ್ರೀಗುರು' ಪಶುತ್ವವನ್ನು ಮೀರಿ ಮನುಷ್ಯತ್ವವನ್ನು ಸಾಧಿಸಬೇಕೆಂದು ತಮ್ಮ ಬದುಕಿನುದ್ದಕ್ಕೂ ಅಹರ್ನಿಶಿ ದುಡಿಯುತ್ತಿದ್ದಾರೆ. ಜಾತ್ಯಾತೀತ ಮೌಲ್ಯಗಳನ್ನು ಸಾರುವುದೇ ಅವರ ಪರಮೋದ್ದೇಶವಾಗಿದೆ. 'ಸ್ಪಂದನ' ಗೀತೆಯಲ್ಲಿ;

"ಜಾತಿ ಸೂತಕ ಅರಿಯದ ಗುರುವೇ
ಜಾತ್ಯಾತೀತ ಅರಿವನಿತ್ತ ಗುರುವೆ"

ಎಂದು ತಮ್ಮ ಗುರುವಿನ ಜಾತ್ಯಾತೀತ ಮೌಲ್ಯವನ್ನು ಕವಿ ಗುರುತಿಸಿದ್ದಾರೆ.

ಬದುಕು ಅರಣ್ಯವಲ್ಲ; ಅದು ಸುಂದರ ನಂದನವನ. ಸಂತೋಷ, ತೃಪ್ತಿ, ಶಾಂತಿ ಮಾನವನ ಬದುಕನ್ನು ಹಸನುಗೊಳಿಸುವ ತಾರಕ ಮಂತ್ರಗಳು. ಮಾನವ ತನ್ನ ಸಾರ್ಥಕಬದುಕಿನ ಕಾರ್ತಿಕೋತ್ಸವವನ್ನು ಆಚರಿಸಿಕೊಂಡಾಗ ಬದುಕು ಸಾರ್ಥಕವಾಗುತ್ತದೆ. ಇದು ಬದುಕಿನ ಸಾಮರಸ್ಯದಿಂದ ಮಾತ್ರ ಸಾಧ್ಯ. ''ಸಾಮರಸ್ಯ'' ಗೀತೆಯಲ್ಲಿ ತಮ್ಮ ಗುರುವಿನ ಸಾಮರಸ್ಯದ ವಿಶ್ವರೂಪವನ್ನು ಅದ್ಭುತವಾಗಿ ಅಭಿವ್ಯಕ್ತಮಾಡಿದ್ದಾರೆ.

ಸರ್ವೇಜನಃ ಸುಖಿನೋಭವಂತು
ತತ್ತ್ವಾರ್ಥದನುಸರಣೆಯ
ಅನನ್ಯ ಅಂತರ್ಯ''!

'ಮಾನವ ಪ್ರೇಮ' ಗೀತೆಯಲ್ಲಿ

''ಮನುಕುಲದ ಪ್ರೇಮ
ಆಧ್ಯಾತ್ಮ ಸಂಭ್ರಮ
ಅಂತರಂಗ ಚಿಂತನದ ಮಮ
ವೇದಾಂತ ಸರಿಗಮ''

'ಮನಕುಲದ ಪ್ರೇಮ' ಅರ್ಥವ್ಯಾಪ್ತಿಯನ್ನು ವಿಸ್ತರಿಸಿದ್ದಾರೆ.

"Knowledge is Power" 'ನಹಿ ಜ್ಞಾನೇನ ಪವಿತ್ರ ಮಿಹ ವಿದ್ಯತೆ' ಎಂಬ ಅಮೃತವಾಣಿಯಲ್ಲಿ ಶ್ರೀಗುರು ಅಪಾರಭರವಸೆ ತುಂಬಿಕೊಂಡಿದ್ದಾರೆ. ಜ್ಞಾನದಾಸೋಹಕ್ಕೆ ಶ್ರೀಗಳದು ಪ್ರಥಮ ಆದ್ಯತೆ. 'ಎಣೆಯಿಲ್ಲದ ಸೇವೆ' ಗೀತೆಯಲ್ಲಿ ಕವಿ

''ಮಕ್ಕಳಿಗೆ ಜ್ಞಾನಾಮೃತ ಉಣಿಸಿ
ಶಿಕ್ಷಣ ಕ್ಷೇತ್ರದಲ್ಲಿ ಸಿದ್ಧಹಸ್ತರೆನಿಸಿ
ಜ್ಞಾನದಾಸೋಹ ನಿರಂತರ ಮುಂದುವರೆಸಿ
ವಿದ್ಯಾಪ್ರಚುರ ಪಂಡಿತರೆನಿಸಿದ
ಶ್ರೀಗುರುವೇ''

ಎಂದು ಎಣೆಯಿಲ್ಲದ ಸಮಾಜ ಸೇವೆ ಸಲ್ಲಿಸುತ್ತಿರುವ ಗುರುವಿಗೆ ಶರಣು ಶರಣೆಂದು ಭಕ್ತಿ ನುಡಿನಮನ ಸಲ್ಲಿಸಿದ್ದಾರೆ.

ಸಾಹಿತ್ಯ ಸಂವಹನದ ವಿಚಾರ ತುಂಬ ಮುಖ್ಯವಾದುದು. ಈ ಸಂವಹನ ಕ್ರಿಯೆಯಲ್ಲಿ

ಭಾಷೆಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತದೆ. ಕವಿಯ ಸಿದ್ಧಿ-ಸಾಧನೆಗಳೆಲ್ಲ ಭಾಷೆಯನ್ನೇ ಅವಲಂಬಿಸಿರುತ್ತವೆ. ಭಾಷೆಯನ್ನು 'ಮಾನವ ಕುಲದ ಮೂಲಭೂತ ಸಂಸ್ಥೆ' ಎಂದು ವಿಜ್ಞಾನಿಗಳು ಕರೆಯುತ್ತಾರೆ. "Poet should use the Language of the Common People" ಎಂದು ವರ್ಡ್ಸ್‌ವರ್ತ್ ಹೇಳುವಂತೆ ಜನಸಾಮಾನ್ಯರ ಭಾಷೆಗೆ ಮಹತ್ವದ ಸ್ಥಾನವಿದೆ. ಆದ್ದರಿಂದ ಉಸಿರಿನಷ್ಟೇ ಸಹಜವಾಗಿ ನೆಲದ ನುಡಿಯನ್ನು ಲೇಖಕರು ಸಮರ್ಥವಾಗಿ ಬಳಸಬೇಕು. ಕವಿ ಈ ಕೃತಿಯಲ್ಲಿ ಬಳಸಿರುವ ಭಾಷೆ ಸಹಜವಾಗಿದೆ, ಸರಳವಾಗಿದೆ, ಸುಲಭವಾಗಿದೆ. ''ಜೋಳಿಗೆಯ ಉಡ್ಡಿಯೊಡ್ಡಿ ಭಿಕ್ಷೆ ತಂದ ತಂದೆ'' ''ಇಳೆಗೆ ಮಳೆಯು ಬಂದ ವೇಳೆ ತನಿತನಿ ತಂಪು ತುಂಬಿದಂತೆ'' ''ಕಾಲ ಚಕ್ರದುರುಳಿನಲ್ಲಿ ಕಾಲೆಳೆದವ ನಾನು, ಕಾಲಲೀಲೆ ಅರಿವಿನಲ್ಲಿ ಕಾರ್ಯ ಮುಖಿ ನೀವು'' ಬವಣೆಬಿಸಿಲಲ್ಲಿ ಬದುಕು ಧಗೆಯಲ್ಲಿ ಸೋತು ನಿಂತಾಗ ಮುಂದೆ ತೆವಳುವುದೇ ಕಷ್ಟವಾದಾಗ ಮುಂತಾದ ಮೇಲಿನ ಸಾಲುಗಳು ಭಾಷಾದೃಷ್ಟಿಯಿಂದ ಗಮನಸೆಳೆಯುತ್ತವೆ. ಲಯ ವೈವಿಧ್ಯ ಹಾಗೂ ಬಿಗುವನ್ನು ತಂದುಕೊಟ್ಟಿವೆ. ಭಾಷೆಯ ಮೂಲಸತ್ವ ಈ ನುಡಿಗಳಲ್ಲಿ ಹಾಸುಹೊಕ್ಕಾಗಿದೆ.

ಮನುಷ್ಯರ ಪ್ರತಿನಿಧಿಯಾಗಿ ಇಲ್ಲಿ ಗುರುವಿನ ಅನನ್ಯ ಮಹಿಮೆಯನ್ನು ಎಳೆ ಎಳೆಯಾಗಿ ಬಿಡಿಸಿ ನೋಡಲು ಪ್ರಯತ್ನಿಸಿರುವ ಕವಿ ಆತ್ಮಶೋಧನೆ ಹಾಗೂ ಸ್ವವಿಮರ್ಶೆಯನ್ನು ಮಾಡಿಕೊಂಡಿದ್ದಾರೆ. ''ಶ್ರೀ ಗುರು ಚರಣದಲ್ಲಿ'' ಗೀತಸಂಕಲನದ ಹಿಂದೆ ಅಪೂರ್ವ ಅರ್ಥ ವಿಶೇಷತೆ ಇರುವುದನ್ನು ಗಮನಿಸಬಹುದು.

ಅರ್ಥ ಸೂಕ್ಷ್ಮತೆ, ಧ್ವನಿ ಪೂರ್ಣ ಅಭಿವ್ಯಕ್ತಿ, ವಿಶಾಲ ಅನುಭವ ಪ್ರಾಮಾಣಿಕ ಶೋಧ, ಆಧ್ಯಾತ್ಮ ಹಂಬಲ, ಬದುಕಿನ ಸಂಘರ್ಷ ಈ ಎಲ್ಲ ಗುಣಗಳಿಂದ ಕೂಡಿರುವ ಈ ಗೀತ ಸಂಕಲನದಲ್ಲಿ ಯಾಂತ್ರಿಕತೆಯನ್ನು ಮೀರಿದ ಚೇತನವಿದೆ. ಸ್ಥಗಿತ ತಡೆಯನ್ನು ತೊರೆದ ಚಲನಶೀಲತೆಯಿದೆ. ನೆಲದ ಮಾತಿನಲ್ಲಿ ಮೊಳೆದ ಇಲ್ಲಿನ ಗೀತೆಗಳು ಧರ್ಮ - ಸಾಹಿತ್ಯ - ಸಂಗೀತಗಳ ತ್ರಿವೇಣಿ ಸಂಗಮವಾಗಿದೆ. ಇವುಗಳಲ್ಲಿ ಮುಗ್ಧತೆಯ ಜೊತೆಗೆ ಪ್ರಖರ ವೈಚಾರಿಕತೆಯೂ ಇದೆ, ಸರಳತೆಯ ಜೊತೆಗೆ ಸಂಕೀರ್ಣತೆ ಇದೆ, ಲೋಕ ವ್ಯವಹಾರ ಜ್ಞಾನದ ಜೊತೆಗೆ ಅಪಾರ ಆಧ್ಯಾತ್ಮಿಕಾನುಭವವೂ ಇದೆ ಈ ಎಲ್ಲ ಗುಣಗಳನ್ನು ಮೇಳೈಸಿಕೊಂಡಿರುವ ಅಪರೂಪದ ಕೃತಿ ಇದಾಗಿದೆ.

❑



# ಮಹಾಪ್ರಬಂಧದ ಮೌಲ್ಯಮಾಪನ

● ಡಾ|| ಬಿ.ಆರ್. ಹಿರೇಮಠ

ಸಾಹಿತ್ಯ ಚರಿತ್ರೆಯ ಪುನರ್ ಮೌಲ್ಯಮಾಪನ ಚಿಂತನಾಶೀಲರೂ ಆದ ಡಾ|| ಸಿ. ವೀರಣ್ಣ ಅವರ ಮಾರ್ಗದರ್ಶನದಲ್ಲಿ ನಾಡಿನ ಸುಪ್ರಸಿದ್ಧ ಕವಿಗಳೂ, ವಿಮರ್ಶಕರೂ, ಚಿಂತಕರೂ ಆದ ಪ್ರೊ|| ದೊಡ್ಡರಂಗೇಗೌಡ ಅವರು ''ನವೋದಯ ಕಾವ್ಯ : ಒಂದು ಪುನರ್ ಮೌಲ್ಯಮಾಪನ'' ಎಂಬ ವಿಷಯವನ್ನು ಕುರಿತು ಆಳವಾದ ಮತ್ತು ಗಟ್ಟಿಯಾದ ಸಂಶೋಧನೆ ಕೈಗೊಂಡು ಪಿ.ಎಚ್.ಡಿ. ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ ''ನವೋದಯ ಕಾವ್ಯ'' (ಒಂದು ಪುನರ್ ಮೌಲ್ಯಮಾಪನ) ಸತತಾಧ್ಯಯನ, ಹೊಸ ಆಲೋಚನೆ ಆಶಯ, ಅನ್ವೇಷಣೆ, ಸೃಜನಶೀಲ ಮನಸ್ಸು - ಬರಹ, ವಿಮರ್ಶನ ದೃಷ್ಟಿ - ಧೋರಣೆ, ಸಾಹಿತ್ಯಕ ಹದ-ಹಂಬಲ, ವಸ್ತು ನಿಷ್ಠತೆ, ಪ್ರಾಮಾಣಿಕ ಪ್ರಯತ್ನ, ಸಾಹಿತ್ಯಕ-ಶೈಕ್ಷಣಿಕ ಶಿಸ್ತು, ಸಂಶೋಧನ ಒಳನೋಟಗಳಿಂದ ಕೂಡಿದ ಈ ಮಹಾಪ್ರಬಂಧ ಕನ್ನಡ ಸಂಶೋಧನೆ ಮತ್ತು ವಿಮರ್ಶನ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯೆನಿಸಿದೆ. ಸೃಜನ, ವಿಮರ್ಶನ ಹಾಗೂ ಸಂಶೋಧನೆಗಳ ಅಪೂರ್ವ ಸಂಗಮವೇ ಪ್ರಸ್ತುತ ಮಹಾಪ್ರಬಂಧ. ಸೃಜನಶೀಲ ಕ್ರಿಯೆಯಲ್ಲಿಯೇ ವಿಮರ್ಶನ ಮತ್ತು ಸಂಶೋಧನೆ ಕ್ರಿಯೆಗಳು ಮೇಳವಿಸಿಕೊಂಡಿರುತ್ತವೆಯೆಂಬುದನ್ನು ಪ್ರೊ|| ದೊಡ್ಡರಂಗೇಗೌಡರು ಸಾಧಿಸಿ ತೋರಿಸಿದ್ದಾರೆ.

ಕಾವ್ಯ ಸಾಹಿತ್ಯ ಸಾಧಕರಾದ ಪ್ರೊ|| ದೊಡ್ಡರಂಗೇಗೌಡರು ಇಲ್ಲೆ 'ದೊಡ್ಡದನ್ನೇ ಸಾಧಿಸಿ ತೋರಿಸಿದ್ದಾರೆ. ಈ ಮಹಾಪ್ರಬಂಧ ಅವರ ವಿಮರ್ಶನ ಮತ್ತು ಸಂಶೋಧನ ಸಾಧನೆಗಳನ್ನು ಸಾಬೀತುಪಡಿಸುತ್ತದೆ. ಇಡೀ ಸಂಶೋಧನ ಮಹಾಪ್ರಬಂಧ ಸೃಜನಾತ್ಮಕವಾಗಿ ರೂಪಿತಗೊಂಡಿದೆ. ಸಂಶೋಧನೆ ಸೃಜನಾತ್ಮಕವಾಗಿದ್ದರೆ ಹೇಗೆ ಜನಪರ, ಸಹೃದಯಪರ ಆಗಿರುತ್ತದೆಯೆಂಬುದನ್ನು ಈ ಮೂಲಕ ಅರಿತುಕೊಳ್ಳಬಹುದಾಗಿದೆ.

ಸಾಹಿತ್ಯ, ಸಂಸ್ಕೃತಿಗಳ ಪುನರ್ ಮೌಲ್ಯಮಾಪನಕಾರ್ಯಗಳು ಅಲ್ಲಲ್ಲಿ ಆಗಾಗ ಮಾತ್ರ

ನಡೆದಿರುತ್ತವೆ. 'ಪುನರ್ ಮೌಲ್ಯಮಾಪನ' ನಡೆಸುವುದು ಅಷ್ಟೊಂದು ಸುಲಭದ ಕೆಲಸವಲ್ಲ. ಇದಕ್ಕೆ ಗಟ್ಟಿಯಾದ ಜೀವನಾನುಭವ, ವಿಶಿಷ್ಟ ಮತ್ತು ವ್ಯಾಪಕವಾದ ಕಾವ್ಯಾನುಭವ ಶ್ರದ್ಧೆ-ನಿಷ್ಠೆ ಪ್ರಾಮಾಣಿಕತೆಯ ಕಾವ್ಯಾನುಸಂಧಾನ, ಮತದೋಪಾದಿಯ ಕಾವ್ಯಾಧ್ಯಯನವೂ ಇರಬೇಕಾಗುತ್ತದೆ. ಪ್ರೊ॥ ದೊಡ್ಡರಂಗೇಗೌಡರ ಕಾವ್ಯನಿಷ್ಠೆ ಜೀವನನಿಷ್ಠೆ ಕಾರ್ಯನಿಷ್ಠೆಗಳು ಈ ಕಾರ್ಯವನ್ನು ಮಾಡಿಸಿವೆ. ಕಾವ್ಯಸಾಹಿತ್ಯದ ಈ ಪುನರ್ ಮೌಲ್ಯಮಾಪನ ವ್ಯಕ್ತಿಯ ಕಾವ್ಯಶಕ್ತಿ-ಸತ್ವಗಳನ್ನು ವಿಮರ್ಶೆಯ ಒಳನೋಟಗಳನ್ನು, ಪಾರದರ್ಶಕ ವ್ಯಕ್ತಿತ್ವವನ್ನು ಅವಲಂಬಿಸಿರುತ್ತದೆ. ಪುನರ್ ಮೌಲ್ಯಮಾಪನ ಮಾಡುವವರು ''ಪಾರದರ್ಶಕ... ವ್ಯಕ್ತಿತ್ವವನ್ನು ಹೊಂದಿದ್ದರೆ ಮಾತ್ರ ಕಾವ್ಯ ವಿಮರ್ಶೆಗೆ ಕಾವ್ಯದ ಅನನ್ಯತೆಗೆ ಪಾರದರ್ಶಕತೆಯನ್ನು ತಂದುಕೊಡಲು ಸಾಧ್ಯವಾಗುತ್ತದೆ. ಸುಲಭವಲ್ಲದ ಈ ಕಾರ್ಯವನ್ನು ಪೂರೈಸುವ ಸಂಶೋಧಕ ದೊಡ್ಡರಂಗೇಗೌಡರ ಸಾಹಸ-ಸಾಧನ ಮೆಚ್ಚುತ್ತಕ್ಕುದಾಗಿರುತ್ತದೆ. ಪೂರ್ವಾಗ್ರಹ ಪೀಡಿತವಲ್ಲದ ಮನಸ್ಸು, ಸೂತಕರಹಿತ ವ್ಯಕ್ತಿತ್ವವುಳ್ಳವರು ಮಾತ್ರ 'ಸಾಹಿತ್ಯದ ಪುನರ್ ಮೌಲ್ಯಮಾಪನ' ಕಾರ್ಯ ನೆರವೇರಿಸಬಲ್ಲರು. ಪ್ರೊ॥ ದೊಡ್ಡರಂಗೇಗೌಡರಿಗೆ ಇಂಥ 'ಪ್ರಸಾದಮಯ' ವ್ಯಕ್ತಿತ್ವ ಇದೆ. ಈ ಮಹಾಪ್ರಬಂಧ ರಚನೆಯ ಮೂಲಕ ಅದನ್ನು ಸಾಧಿಸಿ-ಸಿದ್ಧಿಸಿ ತೋರಿಸಿದ್ದಾರೆ. 'ಸಾಹಿತ್ಯದ ಪುನರ್ ಮೌಲ್ಯಮಾಪನ' ದಿಂದ ಕವಿಯ ಆಕೃತಿ ಆಶಯ-ಅಭಿವ್ಯಕ್ತಿಗಳಿಗೆ ಹೊಳಪು, ಹೊಸತನ, ಹರಿತ ಮತ್ತು ಸಾರ್ವತ್ರಿಕತೆ ಸಂಪ್ರಾಪ್ತವಾಗುತ್ತದೆ. ಈ ಮೂಲಕ ಕವಿ ಸಮಕಾಲೀನವೂ ಸಾರ್ವಕಾಲಿಕವೂ ಆದಂತಾಗುತ್ತದೆ. ಇದಲ್ಲದೆ ಇಂಥ ಅಧ್ಯಯನಗಳು ಕಾವ್ಯಸಾಹಿತ್ಯಕ್ಕೆ ಅಧಿಕೃತತೆಯನ್ನು, ಪ್ರಸ್ತುತತೆಯನ್ನೂ ಒದಗಿಸುತ್ತವೆ. ಪ್ರೊ॥ ದೊಡ್ಡರಂಗೇಗೌಡರು ಈ ಮಹಾಪ್ರಬಂಧದಲ್ಲಿ ನವೋದಯ ಕಾಲದ ಸತ್ವಶಾಲಿ ಹಿರಿಯ ಕವಿಗಳಿಂದ ಹಿಡಿದು ಉಪೇಕ್ಷಿತ ಶಕ್ತಿಶಾಲಿ ಕಿರಿಯ ಕವಿಗಳ ಕಾವ್ಯಸಾಹಿತ್ಯವನ್ನು 'ಪುನರ್ ಮೌಲ್ಯ ಮಾಪನ' ಮಾಡಿದ್ದಾರೆ. ಇದನ್ನು 'ಪ್ರಜಾಪ್ರಭುತ್ವ ಮಾದರಿಯ ವಿಮರ್ಶೆ' ಎಂದು ಕರೆಯಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜನಿಂದ ಪ್ರಜೆಯವರೆಗೆ ಎಲ್ಲರನ್ನೂ ಎಲ್ಲವನ್ನೂ ಒರೆಹಚ್ಚಿ ನೋಡುವ ಅವಕಾಶವಿರುತ್ತದೆ. ಪ್ರೊ॥ ದೊಡ್ಡರಂಗೇಗೌಡರು ಅಂಥಾ ಪ್ರಜಾಪ್ರಭುತ್ವ ದೃಷ್ಟಿಯಿಂದ ಇಲ್ಲಿ ಕಾವ್ಯ ವಿಮರ್ಶೆ ಮಾಡಿದ್ದಾರೆ. ಇದು ಅವರ ವಿಮರ್ಶೆಯ ಒಳನೋಟವನ್ನೂ, ವಸ್ತುನಿಷ್ಠತೆಯನ್ನೂ ನ್ಯಾಯಪ್ರಜ್ಞೆಯನ್ನೂ ಎತ್ತಿ ತೋರಿಸುತ್ತದೆ. ಇದು ದೊಡ್ಡರಂಗೇಗೌಡರ ಮಹಾಪ್ರಬಂಧದ ವಿಶೇಷತೆ.

ನವೋದಯ ಕಾವ್ಯ ರಚನೆಯ ಸಂದರ್ಭದಲ್ಲಿ ವಿಮರ್ಶೆ ಮೆಚ್ಚುಗೆಯ ಮಟ್ಟದಲ್ಲಿ ಮಾತ್ರ ಇದ್ದಿತು. ಅದು ವಿಶ್ಲೇಷಣಾತ್ಮಕವಾಗಿ ಇರಲಿಲ್ಲ. ಅದು ಕೇವಲ ರಸಗ್ರಹಣ ಕಾರ್ಯಕ್ಕೆ ಮಾತ್ರ ಸೀಮಿತವಾಗಿದ್ದಿತು. ಆಳವಾದ ಚಿಂತನೆ ವಿವೇಚನೆಗಳಿಂದ ಕೂಡಿರಲಿಲ್ಲ. ಇದನ್ನು ಅನುಲಕ್ಷಿಸಿ ಸಂಶೋಧಕರು ಈ ಮಹಾಪ್ರಬಂಧದಲ್ಲಿ 'ನವೋದಯ ಕಾವ್ಯ'ದ ಪುನರ್ ಮೌಲ್ಯಮಾಪನ

ಕಾರ್ಯ ಕೈಕೊಂಡಿದ್ದಾರೆ. ವಸ್ತು ನಿಷ್ಠವಾದ, ಗುಣಗ್ರಾಹಿಯಾದ, ಸಮದರ್ಶಿತ್ವವುಳ್ಳ, ಈ ಮರುಚಿಂತನೆ ವಾಸ್ತವತೆಯನ್ನೂ ಪ್ರಾಮಾಣೀಕತೆಯನ್ನೂ ಸ್ಪಷ್ಟಪಡಿಸುತ್ತದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನದ ಅನುಕೂಲತೆಗಾಗಿ ಹತ್ತು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ. ಒಂದನೆಯ ಅಧ್ಯಾಯದಲ್ಲಿ ಮಹಾಪ್ರಬಂಧದ ಉದ್ದೇಶವನ್ನು ಹೇಳಲಾಗಿದ್ದು ಆಮೇಲೆ ಅಧ್ಯಯನದ ವ್ಯಾಪ್ತಿಯನ್ನು ನಿಖರವಾಗಿ ಸ್ಪಷ್ಟಪಡಿಸಲಾಗಿದೆ. ಎರಡನೆಯ ಅಧ್ಯಾಯ ಪ್ರಸ್ತುತ ಮಹಾಪ್ರಬಂಧಕ್ಕೆ ಗಟ್ಟಿಯಾದ, ಅವಶ್ಯಕವಾದ ಹಿನ್ನೆಲೆಯನ್ನು ಒದಗಿಸಿದೆ. ಇದು ನವೋದಯ ಕಾವ್ಯದ ಅರುಣೋದಯ ಸ್ಥಿತಿಯನ್ನು ಮನದಟ್ಟು ಮಾಡಿಕೊಡುತ್ತದೆ.

ನವೋದಯ ಕಾಲದಲ್ಲೇ ಪ್ರತಿಪಾದಿತವಾದ 'ರಮ್ಯ'ವಾದವನ್ನು ಕುರಿತು ಮೂರನೆಯ ಅಧ್ಯಾಯದಲ್ಲಿಯೂ ನವೋದಯ ಕಾವ್ಯದ ಮೇರು ಕವಿಗಳನ್ನು ಕುರಿತು ನಾಲ್ಕನೆಯ ಅಧ್ಯಾಯದಲ್ಲಿಯೂ ವಿಮರ್ಶಿಸಲಾಗಿದೆ, ವಿವೇಚಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ನವೋದಯ ಕಾವ್ಯದ ಕೀರ್ತಿಶಿಖರವೆನಿಸಿದ ಏಳುಜನ ಪ್ರಮುಖ ಕವಿಗಳನ್ನು, ಮರುಚಿಂತನೆಗೆ ಒಳಪಡಿಸಿದರೆ, ಆರನೆಯ ಅಧ್ಯಾಯದಲ್ಲಿ 'ರಮ್ಯ' ಹಾಗೂ 'ನವ್ಯ' ಕಾವ್ಯಮಾರ್ಗಗಳ ಸತ್ವವನ್ನು ಸವಿದ ಇಬ್ಬರು ಕವಿಗಳನ್ನು ವಿಶ್ಲೇಷಣಾತ್ಮಕವಾಗಿ ನೋಡಿದ್ದಾರೆ. ಏಳನೆಯ ಅಧ್ಯಾಯದಲ್ಲಿ 'ನವೋದಯ ಕಾವ್ಯ'ದ ಪ್ರಾತಿನಿಧಿಕ, ಪ್ರಮುಖ ಹಾಗೂ ಸತ್ವವುಳ್ಳ ಕವಿಗಳನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಪರಾಮರ್ಶಿಸಿದ್ದಾರೆ. ನವೋದಯಕಾವ್ಯದ ವಸ್ತು ವೈವಿಧ್ಯ ಮತ್ತು ವಿಶೇಷತೆಗಳನ್ನು ಎಂಟನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ನವೋದಯದ ವೇಗ ಮತ್ತು ಆವೇಗಗಳು ಕಡಿಮೆಯಾದ ಸಂದರ್ಭದಲ್ಲಿಯ ಆಧಾರದಿಂದ ಪರಾಮರ್ಶಿಸಲಾಗಿದೆ. ಹತ್ತನೆಯ ಅಧ್ಯಾಯ 'ಸಮಾರೋಪ' ಇದರಲ್ಲಿ ನವೋದಯ ಕಾವ್ಯದ ಪುನರುತ್ಥಾನ ಪರ್ವದ ಕವಿ ಕೃತಿಗಳನ್ನು ಕುರಿತು ಸ್ಪಟಿಕದ ರೂಪದಲ್ಲಿ ವಿಮರ್ಶಿಸಲಾಗಿದೆ. ಇದಲ್ಲದೆ ನವೋದಯ ಕಾವ್ಯದ ಗುಣಾತ್ಮಕ ಅಂಶಗಳನ್ನು ಈ ಕಾವ್ಯಮಾರ್ಗದ ಆಶಾಕಿರಣವನ್ನೂ ಇಲ್ಲಿ ಹೇಳಲಾಗಿದೆ. ಅಂತ್ಯದಲ್ಲಿ ಜೋಡಿಸಿರುವ ಅನುಬಂಧ ಮಹಾಪ್ರಬಂಧಕ್ಕೆ ಪೂರಕವಾದುದಾಗಿರುತ್ತದೆ.

ಇಲ್ಲಿಯ ಪ್ರತಿಯೊಂದು ಅಧ್ಯಾಯದ ಶೀರ್ಷಿಕೆಗಳು ಕಾವ್ಯಾತ್ಮಕವಾಗಿದ್ದು ಅರ್ಥಪೂರ್ಣವೂ ಸತ್ವಪೂರ್ಣವೂ ಆದವುಗಳಾಗಿರುತ್ತವೆ. ಅಧ್ಯಾಯಗಳಿಗೆ ಇಟ್ಟಿರುವ ಹೆಸರುಗಳು ಔಚಿತ್ಯಪೂರ್ಣತೆಯಿಂದ ಕೂಡಿದ್ದು ಸಮರ್ಪಕವೂ ಸಾಧುವೂ ಎನಿಸಿವೆ. ಅಧ್ಯಾಯಗಳ ವರ್ಗೀಕರಣ ಮತ್ತು ವಿಷಯ ವಿವೇಚನೆಗಳಲ್ಲಿ ವಸ್ತುನಿಷ್ಠತೆ, ಹೊಸತನ, ಒಳನೋಟ, ಶಾಸ್ತ್ರೀಯತೆ, ಸಮಗ್ರತೆ, ಸಮದರ್ಶಿತ್ವ, ಸಮತೋಲನ ಹಾಗೂ ಪ್ರಾಮಾಣಿಕತೆಗಳು ಅಧಿಕವಾಗಿ, ಅಚ್ಚುಕಟ್ಟಾಗಿ ಇರುವುದು ಸ್ಪಷ್ಟವಾಗುತ್ತದೆ.

ಈ ಮಹಾಪ್ರಬಂಧ ಆಳವಾದ, ವಿಸ್ತೃತವಾದ, ಗಂಭೀರವಾದ, ಸುಧೀರ್ಘವಾದ, ಅಧ್ಯಯನ, ಅಪಾರವಾದ ಪರಿಶ್ರಮ, ಪ್ರಾಮಾಣಿಕ ಪ್ರಯತ್ನ ಉಜ್ವಲವಾದ ಶ್ರದ್ಧೆ, ನಿಷ್ಠೆ ಸಾಹಿತ್ಯಕ ಬದ್ಧತೆ, ಶೈಕ್ಷಣಿಕ ಶಿಸ್ತು, ಜೀವನ ಆರಾಧನೆ, ಕಾವ್ಯಾರಾಧನೆ, ದಕ್ಷತೆ, ಸಾಹಿತ್ಯಪ್ರೀತಿ, ವಿಮರ್ಶಾಪ್ರೀತಿ, ಶಾಸ್ತ್ರೀಯವಾದ ಅಚ್ಚುಕಟ್ಟಾದ ವರ್ಗೀಕರಣ ವಿಶ್ಲೇಷಣೆ ನಿಷ್ಠುರ ನಿರೂಪಣೆ ಸ್ಪಷ್ಟವಾದ ಖಚಿತವಾದ ಬರವಣಿಗೆಗಳಿಂದ ಕೂಡಿದ್ದು, ಅತ್ಯಂತ ಮೋಹಕವೂ ಉಪಯುಕ್ತವೂ ಆದುದಾಗಿರುತ್ತದೆ.

ಪ್ರಸ್ತುತ ಮಹಾಪ್ರಬಂಧ ವಿಮರ್ಶೆಯ ಮರುಚಿಂತನೆಯ ಮಾದರಿಗೆ, ಸೃಜನಶೀಲ ಸಂಶೋಧನೆಗೆ ಉತ್ತಮ ಉದಾಹರಣೆಯೆನಿಸಿದೆ. ಇಲ್ಲಿಯ ವಿಮರ್ಶೆಯಲ್ಲಿ ಹಲವಾರು ಒಳನೋಟಗಳೂ ಗಟ್ಟಿಯಾದ ಗಂಭೀರವಾದ ಚಿಂತನೆಗಳೂ ಸಮಾವೇಶಗೊಂಡಿರುತ್ತವೆ.

ಈ ಮಹಾಪ್ರಬಂಧ ಸಂಶೋಧನೆ ಹಾಗೂ ವಿಮರ್ಶಾ ಕ್ಷೇತ್ರಕ್ಕೆ ನೀಡಿದ ಅಪೂರ್ವ ಕೊಡುಗೆಯೆನಿಸಿದೆ. ಈ ಮೂಲಕ ಸಂಶೋಧಕರಾದ ದೊಡ್ಡರಂಗೇಗೌಡರು ಸಂಶೋಧನೆ ಮತ್ತು ವಿಮರ್ಶೆಯ ಪರಿಧಿಯನ್ನು ವಿಸ್ತರಿಸಿದ್ದಾರೆ. ಮೂಲ ಸಂಶೋಧನೆ ಹಾಗೂ ವಿಮರ್ಶೆಯ ಹೊಸನೋಟಗಳಿಂದ ಕೂಡಿದೆ. ಇದು ಅತ್ಯಂತ ಅಮೂಲ್ಯವಾದ ಸಂಶೋಧನೆಯಾಗಿದೆ.





# ಮೌಲ್ಯಮಾಪನ ವರದಿ

● ಪ್ರೊ|| ಸಿ.ಪಿ. ಸಿದ್ಧಾಶ್ರಮ

ಕನ್ನಡದಲ್ಲಿ ಕಾಲಕಾಲಕ್ಕೆ ಸಾಹಿತ್ಯದ ಪುನರ್ ಮೌಲ್ಯಮಾಪನ ಕಾರ್ಯ ನಡೆಯುತ್ತಲೇ ಬಂದಿದೆ. ಈಗಾಗಲೇ ನವೋದಯ ಕಾವ್ಯ ಕುರಿತು ವಿಭಿನ್ನ ನೆಲೆಯ ಸಾಕಷ್ಟು ಪ್ರಮಾಣದ ಸಂಶೋಧನೆ, ವಿಮರ್ಶೆಗಳು ಬಂದಿವೆ. ''ನವೋದಯ ಕಾವ್ಯ'' ಪ್ರಪಂಚ ತುಂಬ ವಿಶಾಲವಾದುದು. ಹಲವಾರು ಜನ ಹಿರಿ-ಕಿರಿ ಕವಿಗಳು ಕಾವ್ಯ ಕೃಷಿ ಮಾಡಿ ನವೋದಯ ಕಾವ್ಯ ಸಮೃದ್ಧವಾಗಿ, ವೈವಿಧ್ಯಮಯವಾಗಿ ರಚಿತಗೊಳ್ಳಲು ಕಾರಣರಾಗಿದ್ದಾರೆ. ಆದರೆ ನವೋದಯದ ಎಲ್ಲ ಕವಿಗಳ ಕಾವ್ಯವನ್ನು ಒಂದೇ ಬಗೆಯ ಆಪ್ತತೆಯಿಂದ, ವಸ್ತುನಿಷ್ಠ ಧೋರಣೆಯಿಂದ ಅಧ್ಯಯನ ಮಾಡಿ, ಎಲ್ಲ ಕವಿಗಳಿಗೆ, ಅವರ ಸಾಹಿತ್ಯಕ್ಕೆ ನ್ಯಾಯ ದೊರಕಿಸಿಕೊಡುವ ಕಾರ್ಯ ಪ್ರಾಮಾಣಿಕವಾಗಿ ಎಲ್ಲ ವಿಮರ್ಶಕರಿಂದ, ಸಂಶೋಧಕರಿಂದ ನಡೆದಿದೆ ಎಂದು ಹೇಳಲಾಗದು. ಆದ್ದರಿಂದ ಸಮೃದ್ಧವಾದ, ಬಹುಮುಖಿಯಾದ ಹಾಗೂ ವೈವಿಧ್ಯಮಯವಾದ ''ಕನ್ನಡ ನವೋದಯ ಕಾವ್ಯ'' ಮತ್ತೆ ಮತ್ತೆ ಪುನರ್ ಮೌಲ್ಯಮಾಪನಕ್ಕೆ ಒಳಗಾಗುವುದು ಸಹಜವೇ ಆಗಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ದೊಡ್ಡರಂಗೇಗೌಡರಿಂದ ನಡೆದ ನವೋದಯ ಕಾವ್ಯದ ಪುನರ್ ಮೌಲ್ಯಮಾಪನದ ಈ ಕಾರ್ಯ ಔಚಿತ್ಯಪೂರ್ಣವೆಂದು ಹೇಳಬೇಕು.

ಸಂಶೋಧಕ ದೊಡ್ಡರಂಗೇಗೌಡರು ನವೋದಯ ಕಾವ್ಯದ ಪುನರ್ ಮೌಲ್ಯಮಾಪನದ ಕಾರ್ಯವನ್ನು ಸಾಕಷ್ಟು ಜವಾಬ್ದಾರಿಯಿಂದ, ವಸ್ತುನಿಷ್ಠ ನೆಲೆಯಿಂದ ನಿರ್ವಹಿಸಿದ್ದಾರೆ. ನವೋದಯ ಕಾವ್ಯದ ಆರಂಭದ ಕವಿಗಳಾದ ಚುರುಮುರಿ ಶೇಷಗಿರಿರಾಯ, ಶಾಂತಕವಿ, ಎಸ್.ಜಿ. ನರಸಿಂಹಾಚಾರ್ಯ, ಗೋವಿಂದ ಪೈ, ಹಟ್ಟಿಯಂಗಡಿ ನಾರಾಯಣರಾಯ, ಬಿ.ಎಂ.ಶ್ರೀ, ಪೇಜಾವರ ಸದಾಶಿವರಾಯ ಮೊದಲಾದ ಕವಿಗಳ ಕೊಡುಗೆಯನ್ನು ಗುರುತಿಸಿ, ಕುವೆಂಪು, ಬೇಂದ್ರೆ, ಪುತಿನ, ಮಾಸ್ತಿ, ಡಿ.ವಿ.ಜಿ., ಕೆ.ಎಸ್. ನರಸಿಂಹಸ್ವಾಮಿ, ಮಧುರಚೆನ್ನ ವಿ.ಸೀ.-ಮುಂತಾದ ನವೋದಯದ ಸುಪ್ರಸಿದ್ಧ ಕವಿಗಳು ಕನ್ನಡ ನವೋದಯ ಕಾವ್ಯವನ್ನು ಶ್ರೀಮಂತಗೊಳಿಸಿದ ಕಾವ್ಯ ಮಹತಿ ಮತ್ತು ಸಾಧನೆಯನ್ನು ಸ್ಪಷ್ಟಪಡಿಸಿ; ಪ್ರಸಿದ್ಧರಲ್ಲದ, ಸಂಶೋಧಕರ, ವಿಮರ್ಶಕರ ದೃಷ್ಟಿ

ಅಷ್ಟಾಗಿ ಜೀಳದ ಅನಾಮಿಕ ಕವಿ-ಕಾವ್ಯದ ಬಗೆಗೂ ಇಲ್ಲಿ ಚರ್ಚೆ ಮಾಡಲಾಗಿದೆ. ಈಶ್ವರ ಸಣಕಲ್ಲ, ಹುಲಿಮನೆ ತಿಮ್ಮಪ್ಪ, ಬೇಡರೆಡ್ಡಿಹಳ್ಳಿ ಪಂಪಣ್ಣ, ವಿ.ಸಿ. ಐರಸಂಗ, ಸಿದ್ದಪ್ಪ ಬಿದರಿ, ಟಿ. ಮಹದೇವಯ್ಯ, ದ್ವಾರಕಾನಾಥ್ ಕಬಾಡಿ, ತಾ.ಸಿ. ತಿಮ್ಮಯ್ಯ, ಸಾ.ಶಿ. ಮರುಳಯ್ಯ, ಜಿ.ಎಂ. ಶಿವಕುಮಾರ್ ಮುಂತಾದವರ ಬಗ್ಗೆ ಮೊದಲ ಬಾರಿಗೆ ದೀರ್ಘವಾಗಿ ಚರ್ಚಿಸಲಾಗಿದೆ. ಅಲ್ಲದೆ ಕನ್ನಡದ ಹಿರಿಯ ಕವಿ ಪಂಜೆಮಂಗೇಶರಾಯರು ಶ್ರೀಯವರಿಗಿಂತ ಮೊದಲೇ ಕನ್ನಡ ನವೋದಯ ಕಾವ್ಯದ ಹರಿಕಾರರಾಗಿದ್ದರೆಂಬುದನ್ನು ಇಲ್ಲಿ ಸೂಚಿಸಲಾಗಿದೆ. ನವೋದಯ ಕಾವ್ಯ ಸಂದರ್ಭದಲ್ಲಿ ಭಾವಗೀತೆಗಳ ಜನಪ್ರಿಯ ಕಾವ್ಯ ಝರಿ ನಿರಂತರವಾಗಿ ಹರಿದುಬಂದಿರುವುದರಿಂದ ನವೋದಯದ ರಮ್ಯ ಪಂಥಕ್ಕೆ ಅಳಿವಿಲ್ಲವೆಂಬ ಸತ್ಯವನ್ನು ಸಂಶೋಧಕರು ಕಂಡರಿಸಿದ್ದಾರೆ ಮತ್ತು ಆ ಕಾವ್ಯವನ್ನು ಕುರಿತು ವಿಶ್ಲೇಷಿಸುವ, ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ದೊಡ್ಡರಂಗೇಗೌಡರು ರಮ್ಯ ಪಂಥಕ್ಕೆ ಸೇರಿದ ಕಾವ್ಯವನ್ನು ಸಹಜವಾಗಿಯೇ ''ನವೋದಯ ಕಾವ್ಯ''ವೆಂದು ಸ್ವೀಕರಿಸಿ ಚರ್ಚಿಸಿದಂತೆ, ರಮ್ಯ ಕಾವ್ಯಗುಣಲಕ್ಷಣ ಹೊಂದಿದ ನವ್ಯೋತ್ತರ ಕಾವ್ಯವನ್ನೂ ನವೋದಯದ ಪರಿಧಿಯೊಳಗೆ, ಸ್ವೀಕರಿಸಿ ಚರ್ಚಿಸುವ, ವಿವರಿಸುವ ಪ್ರಯತ್ನ ಮಾಡಿದ್ದಾರೆ.

ನವೋದಯ ಕಾವ್ಯದ ಪುನರ್ ಮೌಲ್ಯಮಾಪನದ ಈ ಕಾರ್ಯದಲ್ಲಿ ಹೆಚ್ಚುಕಮ್ಮಿ ನೂರು ಜನ ಕವಿಗಳ ಕಾವ್ಯವನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಇದು ತುಂಬ ದುಸ್ತರವಾದ ಕೆಲಸ ಎಂಬುದನ್ನು ಯಾರೂ ಒಪ್ಪಲೇಬೇಕು.

ಇಲ್ಲಿ ಪುನರ್‌ಮೌಲ್ಯಮಾಪನದ ಆಸಕ್ತಿ, ವಿಮರ್ಶೆಯ ಹೊಳಪು, ಸಂಶೋಧನೆಯ ಹೊಸಫಲಿತಗಳು ಕಂಡುಬಂದರೂ ಹಲವು ಕಡೆ ಸಂಶೋಧನೆ ವಿವರಣೆಯ, ಸಮೀಕ್ಷೆಯ ಮಟ್ಟದಲ್ಲೇ ನಿಂತು ಬಿಡುವುದು ಈ ಪ್ರಬಂಧದ ಮುಖ್ಯ ಮಿತಿಯಾಗಿದೆ. ಆದರೆ ಒಂದು ಪಂಥದ, ಪಂಥಕ್ಕೆ ಸೇರಬಹುದಾದ ಕವಿ-ಕಾವ್ಯದ ಸಮಗ್ರವಾದ ಮಾಹಿತಿ ಇಲ್ಲಿ ಒಂದೆಡೆ ಸಿಗುವುದರಿಂದ ಇದೊಂದು ತುಂಬ ಉಪಯುಕ್ತವಾದ ಕೆಲಸವೆಂದೇ ಹೇಳಬೇಕು. ದೊಡ್ಡರಂಗೇಗೌಡರು ತುಂಬಾ ಶ್ರಮವಹಿಸಿ, ಕಾಳಜಿಯಿಂದ ಈ ಕೆಲಸವನ್ನು ಪ್ರೀತಿಯಿಂದ ಪೂರೈಸಿದ್ದಾರೆ.

ದೊಡ್ಡರಂಗೇಗೌಡರು ವ್ಯಾಪಕವಾಗಿ ಅಧ್ಯಯನಮಾಡಿ, ಸಮೃದ್ಧವಾಗಿ ಮಾಹಿತಿ ಸಂಗ್ರಹಿಸಿ, ವಿಷಯವನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅವರ ಸಂಶೋಧನಾ ಶ್ರದ್ಧೆ, ಸಾಮರ್ಥ್ಯ, ಪ್ರಾಮಾಣಿಕತನ ಮುಂತಾದ ಗುಣಗಳು ಇಲ್ಲಿ ಎದ್ದು ಕಾಣುತ್ತವೆ. ದೊಡ್ಡರಂಗೇಗೌಡರದು ಸಹೃದಯ ವಿಮರ್ಶೆ, ನೇತ್ಯಾತ್ಮಕವಾದುದಲ್ಲ, ಇತ್ಯಾತ್ಮಕವಾದುದು, ಆರೋಗ್ಯಪೂರ್ಣವಾದುದು. ದೊಡ್ಡರಂಗೇಗೌಡರ ದೃಷ್ಟಿಕೋನವೇ ಇತ್ಯಾತ್ಮಕವಾದುದು. ಇಂದು ಇದು ಅಪೇಕ್ಷಣೀಯವೂ ಹೌದು.





# ಹೂವು-ಹಣ್ಣಾದ ಡಾ|| ದೊಡ್ಡರಂಗೇಗೌಡ

● ಎ.ಕೆ. ರಾಮೇಶ್ವರ

'ಗೀತ ಗಾರುಡಿ'ಯೊಂದಿಗೆ ಕಾವ್ಯಲೋಕಕ್ಕೆ ಕಾಲಿರಿಸಿದ ಡಾ|| ದೊಡ್ಡರಂಗೇಗೌಡರು ಇಂದು ಅರವತ್ತರ ಅಂಚನ್ನು ದಾಟುತ್ತಿದ್ದಾರೆ. 'ಪ್ರೇಮಾಂಜಲಿ'ಯೊಂದಿಗೆ ಜನಮನವನ್ನು ಸೆಳೆದ ಈ ಕವಿ 'ಕಾವ್ಯ ಕಲ್ಯಾಣಿ'ಯಾಗಿ ನಿಂತು 'ಹೋಳಿ ಹುಣ್ಣಿಮೆ'ಯ ರಂಗಿನಾಟಕ್ಕೆ ರಾಗಿ ರಾಗಿಣಿಯರನ್ನು ಕರೆದು 'ಗೀತ-ವೈಭವ' ಮೆರೆದು 'ನಾಡಾಡಿ'ಯಾಗಿ 'ಮೌನ ಸ್ಪಂದನ'ದೊಂದಿಗೆ 'ಜಗಲಿ ಹತ್ತಿ ಇಳಿದು' ಬರುವುದರೊಳಗೆ 'ಐವತ್ತೂ ಐಸಿರಿ'ಯನ್ನು ಕಂಡಿದ್ದಾರೆ - 'ಮಾವು-ಬೇವು' ಸವಿದು 'ಶ್ರೀ ಗುರುಚರಣ'ದಲ್ಲಿ 'ನೂರೊಂದು ನಮನ' ಅರ್ಪಿಸಿದ್ದಾರೆ. 'ಮಿಂಚಿನ ಗೊಂಚಲು' ಆಗಿ ಜಲಕ್ಕನೇ ಮಿಂಚಿದ್ದಾರೆ. 'ಸಮಾಜ ಮುಖಿ'ಯಾದ ಇವರು 'ವಿಚಾರ ವಾಹಿನಿ'ಯಾಗಿ ಲೀಲಾಜಾಲವಾಗಿ ಹರಿದು 'ಸಾಹಿತ್ಯ ಸಂಪದ' ರಚಿಸಿ ಜನಸಾಮಾನ್ಯರಿಗೆ ಓದುವ 'ಅಭಿರುಚಿ' ಹುಟ್ಟಿಸಿದ ಸುಪ್ರಸಿದ್ಧ ಕವಿ ಡಾ|| ದೊಡ್ಡರಂಗೇಗೌಡರು. ಹೀಗೆ ಅದರ ಕಾವ್ಯ ಕಾರಂಜಿ 'ಭೂಮಿ-ಭಾನು'ಗಳನ್ನು ಸ್ಪಂದಿಸಿ 'ತಾಳ-ಮೇಳ'ಗಳೊಂದಿಗೆ ಅರವತ್ತು ಸಂವತ್ಸರದಲ್ಲಿ 'ಹೊಸ ಹೊನಲು' ಹರಿಯ ಬಿಟ್ಟು 'ಹೂವು-ಹಣ್ಣು' ಅರ್ಪಿಸಿದ ಇವರ ಹೃದಯ ಶ್ರೀಮಂತಿಕೆಯನ್ನು ಮೆಚ್ಚಿ ಬೆರಗಾಗಿ ಬೆರಳು ಕಚ್ಚಿದವರೇ ಇಲ್ಲ. ಇಂದು ಡಾ|| ದೊಡ್ಡರಂಗೇಗೌಡರು ಚಿತ್ರ ಗೀತೆ, ಭಾವ ಗೀತೆ, ನವ್ಯ ಕಾವ್ಯದೊಂದಿಗೆ ಜನಮನದಲ್ಲಿ ಬೆರೆತು ಹೋಗಿದ್ದಾರೆ. ಇಂತಹ ಅಪರೂಪದ ಕವಿಗೆ ಇಂದು ಅರವತ್ತರ ಬಾಗಿನ. ಯಾರಿಗೆ ಹರ್ಷಾನಂದವುಂಟಾಗಲಿಕ್ಕಿಲ್ಲ.

ಮಾಗಿದ ಹೃದಯದಿಂದ ಮೂಡಿಬಂದ 'ಹೂವು-ಹಣ್ಣು' ಒಂದು ಉತ್ತಮ ಕವನ ಸಂಕಲನ. 'ಹೂವು' ಮುಡಿಯಬೇಕು 'ಹಣ್ಣು' ತಿನ್ನಬೇಕು ಎಂಬ ಆಶೆ ಯಾರಿಗಿರಲಿಕ್ಕಿಲ್ಲ. 'ಸೃಜನ ಸುರಭಿ' ಕವನದಲ್ಲಿ ಉಕ್ಕಿ ಬಂದ ಅವರ ಹೃದಯ ಹೀಗೆ ಹಾಡುತ್ತಲಿದೆ.

> "ಮಾಗಿ ಕಳೆಯ ಕೂಗಿ ಕರೆವ
> ಮಾಂದಳಿರದ ಸಂತೆ.

ಬೆಳಗು ಹೊಳೆಯಾಗಿ ನಗುವ
ಹೊಂಬಿಸಿಲಿನ ಒರತೆ.

ಯಾವ ಬ್ರಹ್ಮ ಒಳಗೆ ಕುಳಿತು
ಸಿಂಗರಿಸಿದ ಹೊರಗೆ?
ಎಲ್ಲಿ ನೋಡಿ ಅಲ್ಲಿ ಹೊಸತು
ಹೊಂದಳಿರಿನ ಲಗ್ಗೆ''

ವಸಂತ ಮಾಸದಲ್ಲಿ ಅರಳಿನಿಂತ ಸೃಷ್ಟಿಯ ಸೊಬಗನ್ನು ಕಂಡು ಕವಿ ಹೃನ್ಮನ ಆಹ್ಲಾದಗೊಂಡಿದೆ-

''ಬರಡು ಎಂಬ ತರುಲತೆಯಲ್ಲೂ
ಎಳೆಯ ಚಿಗುರು ಬಂಪು
ಕೊರಡು ಕೊಡ ಕೊನರಿ ಸೊಬಗು
ಚೈತ್ರ ಬಂದ ಸೊಂಪು''

ಈ ಸೃಷ್ಟಿಯ ಚೆಲುವನ್ನು, ಸೊಬಗನ್ನು, ಸೊಗಸನ್ನು ಕಂಡು 'ಯಾವ ಬ್ರಹ್ಮ ಒಳಗೆ ಕುಳಿತು ಸಿಂಗರಿಸಿದ!' ಎಂದು ಉದ್ಗಾರವೆತ್ತುತ್ತಾರೆ' ಸೃಷ್ಟಿಯ ಈ ವೈಚಿತ್ರಕ್ಕೆ ಮಾರು ಹೋಗುಎಷ್ಟು ಆಳಕ್ಕಿಳಿದರೂ ಅಷ್ಟು ನಿಗೂಢ ಈ ಸೃಷ್ಟಿ. ಎಂದು ಇನ್ನೂ ವಿಸ್ಮಯರಾಗುತ್ತಾರೆ.

''ಆಕಾಶ ತುಂಬ ಕೆಂಪು ಮೂಡ್ಯೆತೆ
ಊರಾಚೆ ಗುಡ್ಡ ಕೊಡೆಯ ಹಿಡದ್ಯೆತೆ
ಕತ್ತಲು ಕಂಬಳಿ
ಸುತ್ತಿದ್ದ ಸೊಯ್
ರಥವು ಹಿರಿದ್ಯೆತೆ''

ಎಂದು ಕವಿ ಆಡು ಭಾಷೆಯಲ್ಲಿ ಹೇಳುವಾಗ ದೇಶಿಯ ಅಪ್ಪಟ ಸಂಸ್ಕೃತಿಯನ್ನು ಪುರಸ್ಕರಿಸಿ ಜನಸಾಮಾನ್ಯರ ಹತ್ತಿರದ ಕವಿಯಾಗಿ, ಅವರೆದೆಯ ಕವಿಯಾಗಿ ಕಂಗೊಳಿಸುತ್ತಾರೆ.

''ಹಾಡು ಹಗಲೆ ನಾಡ ತುಂಬ
ತಿಮಿರು ಗೂಡು ಕಟ್ಟಿದೆ
ಅಜ್ಞಾನದ ಮುಸುಕು ಹೊದ್ದು
ರಾಷ್ಟ್ರಹೃದಯ ಕೆಟ್ಟಿದೆ''

ಎಂದು ಡಾ|| ದೊಡ್ಡರಂಗೇಗೌಡರು ಕಳವಳ ವ್ಯಕ್ತಪಡಿಸಿದ್ದಾರೆ. ಜಗತ್ತು ಹೀಗೆ ನಾಯಿಯ ಬಾಲದಂತೆ ಮಹಾತ್ಮರು ಬಂದು ಜಾಗೃತಗೊಳಿಸಿದಾಗ ಅದು ಸೀದಾಗಿದ್ದು ಅವರು ಹೋದಮೇಲೆ ಮತ್ತೆ ಅದು ತನ್ನ ಸ್ಥಿತಿಗೆ ಬರುತ್ತದೆ. ಅಂತಹ ದುಸ್ಥಿತಿಯನ್ನು

"ನಮ್ಮ ನಲ್ಮೆ ನಾಡ ನೇಸರ
ಬೆಳಕೆ ಬತ್ತಿ ಹೋಗಿದೆ.
ಬಾಪು ಕೊಟ್ಟ ದೇಸಿ ಮಂತ್ರ
ಚಿಂದಿ ಚಿಂದಿಯಾಗಿದೆ"

ಅಪ್ಪಟ ಗಾಂಧಿವಾದಿಯಾದ ಈ ಕವಿ "ಬಾಪೂಜಿ ಕೊಟ್ಟ ದೇಶೀ ಮಂತ್ರ" ಇಷ್ಟು ಬೇಗ ಜನ ಮರೆತರಲ್ಲ, ಎಂದು ಕಸಿವಿಸಿಗೊಂಡಿದ್ದಾರೆ. ಜನರು, ಜನಸಾಮಾನ್ಯರು ನೆಮ್ಮದಿಯಾಗಿ ಬಾಳಲೆಂದು, ಬದುಕಲೆಂದು ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟರು; ಬಾಪೂಜಿ. ಜನ ಅದನ್ನು ದುರುಪಯೋಗ ಮಾಡಿಕೊಂಡರು. ಇಂದು ಉದಾರೀಕರಣ, ಜಾಗತೀಕರಣದ ಡೌಲು, ಡೊಳ್ಳು ಬಡಿಯುತ್ತ 'ಅಂತಃ ಕರಣ'ವನ್ನು ಕಳೆದುಕೊಂಡು ಮಾನವ ಮಂಗನಾಗತೊಡಗಿದ್ದಾನೆ. ಇವನನ್ನು ಇಷ್ಟಕ್ಕೆ ಬಿಡಬಾರದೆಂದು.

"ನಿರಾಶೆ ಮುತ್ತಿ ಬತ್ತಿದರೂ
ಗರುಕೆ ಚಿಗುರುವ ತರಹ
ಧೀ ಶಕ್ತಿ ಬಳಗ ಬತ್ತಿದರೂ
ನಾನು ನಾಡ ಸಿಂಹ"

ಎಂದು ಗರ್ಜಿಸುತ್ತಾರೆ. ನಾನು ನಿಮ್ಮೆಲ್ಲರನ್ನೂ ಬಡಿದೆಬ್ಬಿಸುವ 'ನಾಡಸಿಂಹ' ಎಂದು ಜನ ಸಮುದಾಯದ ಮಧ್ಯ ಗರಿಗೆದರಿ ನಿಲ್ಲುತ್ತಾರೆ– 'ಹೊಸ ಹುಟ್ಟ'ನೊಂದಿಗೆ ಆಶಾವಾದಿಯಾಗಿ ಇಂದಿಲ್ಲ ನಾಳೆ

"ಹೃದಯದ ಕದ ತಟ್ಟಿತ್ತು
ಪ್ರೇಮ ಬೀಜ ನೆಟ್ಟಿತ್ತು
ಹೊಸ ಭರವಸೆ ಹುಟ್ಟಿತ್ತೋ
ನಲ್ಮೆ ಅಂತರಂಗ ಮುಟ್ಟಿತ್ತು"

ಎಂದು ಭರವಸೆ ತಾಳುತ್ತಾರೆ. ಜನರಲ್ಲಿಯೂ ಭರವಸೆ ಮೂಡಿಸುತ್ತಾರೆ. ಇದು ಕವಿ ಧರ್ಮವೂ ಹೌದು, ಕರ್ತವ್ಯವೂ ಹೌದು. ಇಂಥ ಕರ್ತವ್ಯ ನಿರತ ಕವಿ ಸಮಾಜದ ರತ್ನಗನ್ನಡಿ.

ಸಮಾಜವನ್ನು ಇದ್ದುದರಂತೆ ಚಿತ್ರಿಸಿ ಜನರ ಮುಂದೆ ಇಟ್ಟು ಅದನ್ನು - ಪ್ರಯತ್ನಿಸುತ್ತಾನೆ. ಅಂತಹ ಪ್ರಯತ್ನ ಇಲ್ಲಿ ನಡೆದಿದೆ.

ಹೀಗೆ 'ಹೂವು-ಹಣ್ಣು' ಕೃತಿಯಲ್ಲಿ ಮೂಡಿಬಂದ ನಿಸರ್ಗ ಪ್ರೇಮ, ಕುಟುಂಬ ವಾತ್ಸಲ್ಯ, ಆಧ್ಯಾತ್ಮದ ಅನುಭೂತಿ, ಸಾಮಾಜಿಕ ವಿಡಂಬನೆ, ದೇಶೀಯ ಸಂಸ್ಕೃತಿ, ಕೃಷಿಯ ಪ್ರಜ್ಞೆ, ಕರ್ತವ್ಯ ನಿಷ್ಠೆ ಮಡುಗಟ್ಟಿ ನಿಂತಿದೆ.

ಡಾ॥ ದೊಡ್ಡರಂಗೇಗೌಡರು ಭಾವಗೀತೆಗಳ ಮೂಲಕ ಚಿತ್ರ ಗೀತೆಗಳ ಮೂಲಕ, ನವ್ಯ ಕಾವ್ಯದೊಂದಿಗೆ ಜನ ಮನವನ್ನು ತಿದ್ದಲು ಪ್ರಯತ್ನಿಸಿದ್ದಾರೆ. ಅವರ ಸಾಹಸವನ್ನು ನಾವು ಮೆಚ್ಚಲೇಬೇಕು. ಕವಿ ಡಾ॥ ದೊಡ್ಡರಂಗೇಗೌಡರು 1946 ಫೆಬ್ರವರಿ 7ನೇ ತಾರೀಖು ತುಮಕೂರು ಜಿಲ್ಲೆಯ ಕುರುಬರಹಳ್ಳಿಯಲ್ಲಿ ಜನಿಸಿದರು. ತಂದೆ ರಂಗೇಗೌಡರು ತಾಯಿ ಅಕ್ಕಮ್ಮ ಅವರ ಅಕ್ಕರೆಯ ಪುತ್ರರು ದೊಡ್ಡರಂಗೇಗೌಡರು. ತಮ್ಮ ಜನ್ಮ ಸ್ಥಳದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಮುಗಿಸಿ 1970ರಲ್ಲಿ ಬೆಂಗಳೂರು ವಿಶ್ವ ವಿದ್ಯಾಲಯದಿಂದ ಬಿ.ಎ. (ಆನರ್ಸ್) ಪದವಿ 1973ರಲ್ಲಿ ಎಂ.ಎ ಪದವಿ ಪಡೆದು ಎಸ್.ಎಲ್.ಎನ್ ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರೆಂದು ವೃತ್ತಿ ನಿರತರಾದರು ವಿದ್ಯಾರ್ಥಿಗಳ ಅಚ್ಚು ಮೆಚ್ಚಿನ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತ ಕನ್ನಡ ಪ್ರವಾಚಕರೆಂದು, ಕನ್ನಡ ವಿಭಾಗದ ಮುಖ್ಯಸ್ಥರೆಂದು ಕೊನೆಗೆ ಕಾಲೇಜಿನ ಪ್ರಾಚಾರ್ಯರೆಂದು ಹಂತ ಹಂತವಾಗಿ ಏರುತ್ತ ಅಹರ್ನಿಶಿ ಸೇವೆ ಸಲ್ಲಿಸಿದರು. ಅಧ್ಯಾಪನದೊಂದಿಗೆ ಅಧ್ಯಯನ ಮಾಡುತ್ತ 2004ರಲ್ಲಿ "ಕನ್ನಡ ನವೋದಯ ಕಾವ್ಯ: ಒಂದು ಪುನರ್ ಮೌಲ್ಯಮಾಪನ" ಎಂಬ ವಿಷಯದ ಮೇಲೆ ಮಹಾ ಪ್ರಬಂಧ ಬರೆದು ಪಿ.ಎಚ್.ಡಿ. ಪದವಿ ಪಡೆದರು. ಹೀಗೆ ಸತತ ನಾಲ್ಕು ದಶಕಗಳ ಕಾಲ ಶಿಕ್ಷಣ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ.

ಕವಿ ದೊಡ್ಡರಂಗೇಗೌಡರದು ಆದರ್ಶ ಕುಟುಂಬ. ಮಡದಿ ಡಾ॥ ರಾಜೇಶ್ವರಿ ಅವರು ಬೆಳಕಿಗೆ ಬೆಳಕಾಗಿ ಬಂದವರು. ಇವರಿಗೆ ಡಿ. ಭರತ್, ಡಿ. ಸ್ಮಿತಾ ಇಬ್ಬರು ಮಕ್ಕಳು. ಮಗ ಡಿ. ಭರತ್ ತಂದೆಯಂತೆ ಅಧ್ಯಾಪಕರು, ಕವಿ ಸಾಹಿತಿಗಳು. ಮಗಳು ಸ್ಮಿತಾ ಇದೇ ರೀತಿಯಲ್ಲಿಯೇ ಸೇವೆ ಸಲ್ಲಿಸುತ್ತಾ ಇದ್ದಾರೆ. ಹೀಗೆ ಮಗ-ಸೊಸೆ, 'ಭೂಮಿ' ಮೊಮ್ಮಗಳು, ಮಗಳು ಒಬ್ಬರಿಗೊಬ್ಬರು ಅತ್ಯಂತ ಪ್ರೀತಿ, ವಾತ್ಸಲ್ಯಗಳಿಂದ ತುಂಬಿಕೊಂಡ ಇವರ ಮನೆ ನಂದಗೋಕುಲವಾಗಿದೆ ಎಂದು ಹೇಳಲು ಹೆಮ್ಮೆ ಎನಿಸುತ್ತದೆ.

ಅರವತ್ತು ಸಂವತ್ಸರಗಳನ್ನು ದಾಟುತ್ತಲಿರುವ ಡಾ॥ ದೊಡ್ಡರಂಗೇಗೌಡರಿಗೆ ದೇವರು ಆಯುರಾರೋಗ್ಯ ಭಾಗ್ಯ ಕೊಟ್ಟು ಕಾಪಾಡಲಿ ಎಂದು ಹರಸಿ ಹಾರೈಸಿ ನನ್ನ ಲೇಖನಿಗೆ ವಿರಾಮ ನೀಡುತ್ತೇನೆ.





# "ಲೋಕಾಯಣ" ಕುರಿತು

● ಎಂ. ಕೃಷ್ಣಪ್ಪ
ಫಾರ್ಮಿಂಗ್ಟನ್ ಹಿಲ್ಸ್ ಮಿಚಿಗನ್, ಯು.ಎಸ್.ಎ.

"Every man is a poet when he is in love." - Plato

"Do.Ran.Gou is always a poet, because he is always in love." - M. Krishnappa

"Lokayana-A Real Poetry of Today's Real World" - M. Krishnappa

"One merit of Poetry few person will deny: It says more and in fewer words than prose." - Voltaire-A Philosophical Dictionary

"ಪ್ರತಿಯೊಬ್ಬ ಪ್ರೇಮಿಸುವಾಗ ಕವಿ ಹೃದಯಿ
ಸಹೃದಯಿ ದೊರಂಗೌ ಸದಾ ಕವಿ."

"ಲೋಕಾಯಣ-ಇಂದಿನ ವಾಸ್ತವ ಪ್ರಪಂಚದ ವಾಸ್ತವ ಕಾವ್ಯ"-ಎಂ. ಕೃಷ್ಣಪ್ಪ

"ಉದ್ದನೆಯ ಗದ್ಯಕ್ಕಿಂತ
ಮೊಟಕಿನ ಪದ್ಯ ಲೇಸು!" - ಎಂ. ಕೃಷ್ಣಪ್ಪ

ಡಾ॥ ದೊಡ್ಡರಂಗೇಗೌಡರಿಗೆ ಅವರ ಷಷ್ಟ್ಯಬ್ದಿ ಮಹೋತ್ಸವವನ್ನು ಅವರ ಅಕ್ಕರೆಯ ಅಭಿಮಾನಿಗಳು ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ಫೆಬ್ರವರಿ 7, 2006ರಂದು ಆಚರಿಸುವ ಸಮಾರಂಭದಲ್ಲಿ ಅವರಿಗೆ ಅರ್ಪಿಸಲಿರುವ "ಜಾನಪದ ಜಂಗಮ" ಎಂಬ ವಿಶೇಷ ಗ್ರಂಥಕ್ಕೆ ನನ್ನ ಹೆಮ್ಮೆಯ ಕೊಡುಗೆ ಈ ಲೇಖನ.

"ಲೋಕಾಯಣ" ಹೊತ್ತಿಗೆಯ ಬಗ್ಗೆ ತಮ್ಮ ಮೊದಲ ಮಾತುಗಳನ್ನು "ಪ್ರವಾಸಿಯ ಪಲ್ಲವಿ" ಎಂದು ಕರೆದು ಅದರ ಕೊನೆಯಲ್ಲಿ (ಪುಟ xxviii) ಹೀಗೆಂದು ಹೇಳಿದ್ದಾರೆ: ".... ರಸಿಕರೆದೆಗೆ ನಾನು ಈ ಮಾತುಗಳನ್ನು ಹೇಳುವುದು ಅವಶ್ಯವಿದ್ದುದರಿಂದ ಇಲ್ಲಿ ಮೂಡಿಸಿದ್ದೇನೆ ಪ್ರಾಮಾಣಿಕವಾಗಿ ಪ್ರವಾಸೀ ಪಲ್ಲವಿ. ಇದರ ನಿಜವಾದ ಚರಣಗಳನ್ನು ನೀವು ಬರೆಯುವಂತಾಗಬೇಕು. ಅದು ಈ ಇಹದ ಮಾನವನಾಗಿ ನನ್ನ ಆಸೆ. ಈ ಕೃತಿ ನಿಮ್ಮಲ್ಲಿ ಭಾವದ ಅನುರಣಗಳನ್ನು ಮೂಡಿಸಿದರೆ, ನನ್ನ ಕಡೆಗೂ ಹಾಯಿಸಿದರೆ ತುಂಬಾ ಸಂತೋಷವಾಗುತ್ತದೆ." ನನ್ನ ಈ ಲೇಖನ ಕವಿ ದೊಡ್ಡರಂಗೇಗೌಡರ ಮನಸ್ಸಿಗೆ ಸ್ವಲ್ಪ ಮಟ್ಟಿನ ಸಂತೋಷವನ್ನಾದರೂ ತಂದರೆ, ನನಗೂ ತುಂಬಾ ಸಂತೋಷವಾಗುತ್ತದೆ. ಹೆಚ್ಚು ಮುಖ್ಯವಾಗಿ ಜನರ ಮೆಚ್ಚುಗೆಗೆ ಪಾತ್ರವಾಗಿ ಸಮಾಜಕ್ಕೆ ಕಿಂಚಿತ್ತಾದರೂ ಒಳ್ಳೆಯದಾದರೆ ನನ್ನ ಪ್ರಯತ್ನ ಸಾರ್ಥಕವಾದೀತು!

ಲೋಕಾಯಣ ಬಿಡುಗಡೆಯಾದದ್ದು ನನ್ನ ಸ್ವಂತ ದೃಷ್ಟಿಯಿಂದ ಒಂದು ವಿಶೇಷ ಸಮಯದಲ್ಲಿ. ನಾನು ಬೆಂಗಳೂರಿನಲ್ಲಿದ್ದಾಗ. ಅನಿರೀಕ್ಷಿತವಾಗಿ, ಅವರ ಹುಟ್ಟು ಹಬ್ಬದ ದಿನ ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ 5 ಪುಸ್ತಕಗಳ ಬಿಡುಗಡೆಗೆ ಏರ್ಪಾಡಾಗಿರುವ ಸುದ್ದಿ ತಿಳಿದು ಬಂತು.. ಅವರನ್ನು ಭೇಟಿಮಾಡಿದಾಗ- "ಬಿಡುಗಡೆಯ ದಿನ ಒಂದೊಂದು ಪುಸ್ತಕದ ಬಗ್ಗೆ ಒಬ್ಬೊಬ್ಬರು ಒಂದೆರಡು ನಿಮಿಷಗಳ ಕಾಲ ಮಾತಾಡುತ್ತಾರೆ; ಅಮೆರಿಕದಿಂದ ಬಂದಿರುವ ನೀವು 'ಲೋಕಾಯಣ'ದ ಬಗ್ಗೆ ಮಾತಾಡಿದರೆ ಅತ್ಯಂತ ಸೂಕ್ತ." ಎಂದು ಅವರು ಕೊಟ್ಟ ಸಲಹೆಗೆ ಒಪ್ಪಿಕೊಂಡೆ... ನಂತರ, ಜನವರಿ 24ರಂದು ಆಗತಾನೆ ಪ್ರೆಸ್‌ನಿಂದ ಬಿಸಿಯಾಗಿ ಬಂದಿದ್ದ ರಫ್ ಡ್ರಾಫ್ಟ್ (ಉದ್ದನೆಯ ಹಾಳೆಗಳ ಮೇಲೆ ಪ್ರಿಂಟ್ ಆಗಿದ್ದ "ಲೋಕಾಯಣದ"ದ ಸುಮಾರು 80 ಪದ್ಯಗಳು) ಅದನ್ನು ಅವರಿಂದ ಪಡೆದುಕೊಂಡೆ... ಇಂದಿಗೆ ಸರಿಯಾಗಿ ಮೂರು ವರ್ಷಗಳ ಹಿಂದೆ ನಡೆದ ಆ ಸಮಾರಂಭದಲ್ಲಿ ನಾನು ಆಡಿದ ಮಾತುಗಳ ನೆನಪಿಗೆ ಈಗ ನಿಜವಾದ ಪುಸ್ತಕವನ್ನು ಓದಿಕೊಳ್ಳುತ್ತ ಮನಸ್ಸಿಗೆ ಬಂದ ಹೊಸ ಅನಿಸಿಕೆಗಳನ್ನು ಸೇರಿಸಿ, ಈ ಲೇಖನವನ್ನು ಸಿದ್ಧಪಡಿಸಿದ್ದೇನೆ...

ಮುಖಪುಟದ ಮೇಲಿರುವ ಶೀರ್ಷಿಕೆ: "ಪ್ರೊ॥ ದೊಡ್ಡರಂಗೇಗೌಡರ ಲೋಕಾಯಣ (ಪ್ರವಾಸೀ ಪದ್ಯಗಳು)" ಎಂದಿದ್ದರೂ, ಒಳಗೆ ನೋಡಿದಾಗ ವಾಸ್ತವವಾಗಿ ಎರಡು ಭಾಗಗಳಿವೆ.

ಭಾಗ 1. "ಲೋಕಾಯಣ (ಪ್ರವಾಸೀ ಪದ್ಯಗಳು)" - (ಪುಟ 3-67ರ ವರೆಗೆ), ಒಟ್ಟು ಪದ್ಯಗಳು : 81 (ಹೆಚ್ಚು ಪಾಲು ಸುಮಾರು 50-ಅಮೆರಿಕಕ್ಕೆ ಸಂಬಂಧಿಸಿದವು.)

ಭಾಗ 2. "ಹೊಸ ಹೊನಲು (ಭಾವಗೀತೆಗಳು)" - (ಪುಟ 68-127ರ ವರೆಗೆ), ಒಟ್ಟು ಗೀತೆಗಳು: 57

ಶೀರ್ಷಿಕೆಗೂ, ಒಳಗಿನ ವಾಸ್ತವತೆಗೂ ಇರುವ ವ್ಯತ್ಯಾಸಕ್ಕೆ ಕಾರಣ ಏನಿರಬಹುದು?... ಇದಕ್ಕೆ ವಿವರಣೆಯನ್ನು ಹುಡುಕುವುದು ಸಾಧ್ಯವೇ? ಎಂದು ಚಿಂತಿಸಿದೆ... ಸ್ವಲ್ಪ ಸಮಯದ ನಂತರ ಸಮಾಧಾನವಾದ ಒಂದು ವಿವರಣೆ ಹೊಳೆಯಿತು. ಈ ಲೇಖನ ಮುಂದುವರಿದಂತೆ, ಅದು ಸ್ಪಷ್ಟವಾಗುವುದೆಂದು ನಂಬಿದ್ದೇನೆ.

ಭಾಗ 1-ಲೋಕಾಯಣ

ಇಲ್ಲಿರುವ ಎಲ್ಲ ಪದ್ಯಗಳಲ್ಲೂ, ಕವಿಯ ವಾಸ್ತವಿಕತಾ ಪ್ರವೃತ್ತಿ (Objectivity), ನ್ಯಾಯಪರತೆ (Honest approach), ತೆರೆದ ಮನಸ್ಸು (Open-mindedness), ಸಮತಾದೃಷ್ಟಿ(Balanced View), ನಿಷ್ಪಕ್ಷಪಾತ (Nondiscrimination), ದಿಟ್ಟತನ (Boldness) ... ಮುಂತಾಗಿ ದೊಡ್ಡ ಕವಿಗೆ ಇರಬೇಕಾದ ಉದಾತ್ತ ಗುಣಗಳು ಎದ್ದು ಕಾಣುತ್ತವೆ. ಎರಡೂ ಕಡೆಯ ಹುಳಕು, ತಳುಕು, ಭಾರತೀಯರು ಕಲಿಯಬೇಕಾದ ವಿಷಯಗಳು, ಪಾಶ್ಚಾತ್ಯರು ಆಸಕ್ತಿ ತೋರಿಸುವ ಭಾರತೀಯ ವಿಸಯಗಳು... ಎಲ್ಲವನ್ನೂ ಮುಂದಿಟ್ಟಿದ್ದಾರೆ.

"ಮನೆ-ಚಿಂತೆ (Home-sickness)"; ಸಾಮಾನ್ಯವಾಗಿ ಜನರು ತಮ್ಮ ಮನೆ ಬಿಟ್ಟು ದೂರ ಹೋದಾಗ ಎಂಥವರಿಗಾದರೂ ಅವರ ಮನೆ ಬಗ್ಗೆ ಯೋಚನೆ ಬರುವುದು ಸಹಜ. ಕವಿ ದೊಡ್ಡರಂಗೇಗೌಡರಿಗೆ ಹಂಬಲ ಮನೆಯದಲ್ಲ, ತಮ್ಮ ದೇಶದ ಮೇಲಿನದು, ತಾಯ್ನಾಡು ಕರ್ನಾಟಕ, ಬೆಂಗಳೂರು, ಕನ್ನಡ ಜನ, ಕನ್ನಡ ಭಾಷೆ ಕಡೆಯದು, ಮೊದಲ ಬಾರಿಗೆ ಅವರು Home-sick ಆಗಿದ್ದಾರೆ ಎಂದು ಓದುಗರಿಗೆ ಕಾಣಿಸಿಕೊಳ್ಳುವುದು ಲೋಕಾಯಣದ 11ನೇ ಪದ್ಯ (ಪುಟ 13) "ಅವಲೋಕನ"ದಲ್ಲಿ.

ಅಮೆರಿಕಾದ ನೆಲದಲ್ಲಿ ಅಡ್ಡಾಡುವಾಗಲೂ
ನೆನಪಾಗಿತ್ತು ಭಾರತ ನನ್ನ ಅಂತರಾಳದಲ್ಲೂ
ಎಂದು ನನ್ನ ನಾಡು ಹೀಗಾದೀತು?
ಎಂದು ಹೀಗೆಲ್ಲಾ ಮುಂದುವರೆದೀತು?
ಎಂದು ನನ್ನ ಜನಕ್ಕೆ ಸೌಲಭ್ಯಗಳು
ಹೀಗೆ ಉಪಯುಕ್ತ ಸಿಕ್ಕೀತು?

ಬೆಳೆದೀತೆ ಇಂಥ ಗಾಢ ದೇಶಪ್ರೇಮ
ನನ್ನ ಜನರಲ್ಲೂ...!
....................

....................

## ಭಾಗ 2- ''ಹೊಸ ಹೊನಲು''

ನಾನು ಮೇಲೆ ಹೇಳಿರುವ ಆಧಾರದ ಮೇಲೆ, 57 ಭಾವಗೀತೆಗಳನ್ನೊಳಗೊಂಡ ಈ ಸಂಕಲನವನ್ನು ''ಭಾರತಾಯಣ ಮತ್ತು ಕರ್ನಾಟಕಾಯಣ'' ಎಂದು ಕರೆಯಬಹುದು.

ಕಾಲ ಮತ್ತು ಸ್ಥಳದ ಅಭಾವದಿಂದಾಗಿ ಈ ಭಾಗದಿಂದ 6 ಭಾವಗೀತೆಗಳನ್ನು ಮಾತ್ರ ಆರಿಸಿಕೊಂಡಿದ್ದೇನೆ-ವಿಷಾದ ಗೀತೆ, ನಗರ ನಾಗರನ ತೆಕ್ಕೆಯಲ್ಲಿ, ಜಾತಿಯೆಂಬ ಪಿಡುಗು, ಭಯೋತ್ಪಾದನೆ, ಹೂವಾಗು ಮನವೇ ಹೂವಾಗು ಮತ್ತು ದೀವಳಿಗೆ ಹಾಡು.

(1) ವಿಷಾದ ಗೀತೆ (ಸಾಲುಗಳು : 43, ಪುಟ 76):

ಏನಾಯ್ತು ಹೇಳೋ ಗೆಳೆಯಾ
ಬಾಯ್ಬಿಟ್ಟು ವಸಿ ಹೇಳಯ್ಯಾ
ಏನಯ್ಯಾ ಹೊಸ ಸುದ್ಧಿ ಏನಯ್ಯಾ?
..........
ಊರುಊರಲ್ಲಿ ಏಡ್ಸ್ ಮಾರಿ ಬೆಳೆದು ಬಂತಯ್ಯಾ
ಜನಸಂಖ್ಯೆ ಮಿಲುನ್-ಗಟ್ಟಲೆ ಏರ್ತಾ ಹೋಯ್ತಯ್ಯಾ
ಅಸತ್ಯ ಗಂಗೆಯಾಗಿ ಹರಿದು ಹರಿದು ಬಂತಯ್ಯಾ...
''ವಿಷಾದ ಗೀತೆ'' ಬರೆಯೋದಷ್ಟೇ ಕವಿಭಾಗ್ಯವಾಯ್ತಯ್ಯಾ!

(2) ನಗರ ನಾಗರನ ತೆಕ್ಕೆಯಲ್ಲಿ... (ಸಾ:18, ಪು.74)

ನರಳುತ್ತಿವೆ ನಗರದಲ್ಲಿ ಕಡು ಬಡಜೀವ
ಮೂರು ಹೊತ್ತು ಇದ್ದದ್ದೆ ಬೆಂಕಿಯ ಭಾವ!
...........
ಈ ನಗರವೇ ನವ್ಯ ನಾಗರ
ಇಲ್ಲಿ ನಿತ್ಯ ನಿತ್ಯ ನಮಗೂ ನಿಮಗೂ ದುಃಖಸಾಗರ!

(3) ಜಾತಿಯೆಂಬ ಪಿಡುಗು (ಸಾ: 20, ಪು. 104)

ಜಾತಿ ಜಾತಿ ಎಂದು... ಮತಿ ಮರೆವೆಯೇಕೋ?
...........

ಬೀಸೋ ಗಾಳಿ ಒಂದೇ ಕುಡಿಯೋ ನೀರೂ ಒಂದೇ
ಸಾವಿರದ ಜಾತಿ ಯಾಕೋ? ಪ್ರೀತಿಯೊಂದೇ ಬಾಳಿಗೆ ಸಾಕೋ!

(4) ಭಯೋತ್ಪಾದನೆ (ಸಾ: 18, ಪು. 99)

ತಾಯಿ ಮಾನ ಉಳಿಸಿ ನೀವು
ಒಬ್ಬೊಬ್ಬರೂ ಸೈನಿಕರೇ ನಾವು!

(5) ಹೂವಾಗು ಮನವೇ ಹೂವಾಗು (ಸಾ:18, ಪು. 77)

"ಲೋಕಾಯಣ" ಮಾಡುತ್ತಿರುವಾಗ ಆಗಾಗ್ಗೆ ತನ್ನ ಸ್ವಂತ ದೇಶದ ಬಗ್ಗೆ ಚಿಂತಿಸಿದ್ದ ಕವಿಯ ಮನಸ್ಸಿಗೆ, ಹಿಂತಿರುಗಿದ ನಂತರ ಸುತ್ತಮುತ್ತಲೂ ನೋಡಿ ಹೀಗೆ ಅನ್ನಿಸಿರಬೇಕು. ತಮಗೆ ಮಾತ್ರವಲ್ಲ, ಈ ಮಾತುಗಳನ್ನು ಓದುಗರ ಗಮನಕ್ಕೆ ತಂದು ಕಾಣುವ ದುಃಸ್ಥಿತಿಯನ್ನು ಸರಿಪಡಿಸಲು ಪ್ರಯತ್ನಿಸುವಂತೆ ಪ್ರೇರೇಪಿಸುತ್ತಿರಬೇಕು. ಇದೊಂದು ಆಶಾಪೂರ್ವವಾದ ಭಾವಗೀತೆ ಎಂದು ನಾನು ತಿಳಿಯುತ್ತೇನೆ.

ಹೂವಲ್ಲಿ ಹೂವಾಗು... ಓ... ಮನವೇ
ಹಣ್ಣಲ್ಲಿ ಹಣ್ಣಾಗು... ಓ... ಮನವೇ
..........
..........
ನೀನೇಕೆ ಕಲ್ಲಾಗುವೇ ಮನವೇ
ಹೂವಲ್ಲಿ ಹೂವಾಗು ನೀ ಮನವೇ ಹೂವಲ್ಲಿ ಹೂವಾಗು ನೀ!

(6) ದೀವಳಿಗೆ ಹಾಡು (ಸಾ: 8, ಪು. 79);

ನಾನು ಮೇಲೆ ಹೇಳಿರುವ ಮಾತಿಗೆ, ಕವಿಯ ಮುಂದಿನ ಭಾವಗೀತೆ ಒಳ್ಳೆಯ ನಿರ್ದೇಶಕನು:

ಬದುಕಿನ ಬೆಳಕಿಗೆ ಬದುಕೇ ಸಂಭ್ರಮ
ಬೆಳಕಿನ ಹೊನಲದು ಹರಿಯಲು ಅನುಪಮ!
...........
...........
ದಿನ ದಿನ ಶುಭಸಿರಿ ಬಾಳಿಗೆ ಬರಲಿ
ದೀವಳಿಗೆ ಎಲ್ಲರಿಗೆ ಆನಂದ ತರಲಿ...

ಲೋಕಾಯಣವನ್ನು ಈ ಸಮಾರಂಭಕ್ಕೆ ಬರುವ ಶ್ರೀ ಸಾಮಾನ್ಯರು, ಸಾಹಿತ್ಯ ಪ್ರೇಮಿಗಳು, ಸಾಹಿತಿಗಳು, ಕವಿಗಳು, ದೊರಂಗೌ Fans (ಚಲನಚಿತ್ರ ಹಾಡುಗಳ ಪ್ರೇಮಿಗಳೂ ಸೇರಿ)

ಮಾತ್ರವಲ್ಲದೆ, ಅದನ್ನು ಇನ್ನೂ ಓದದಿರುವ ಅಧಿಕಾರಿಗಳು, ರಾಜಕಾರಣಿಗಳು ... ಎಲ್ಲರೂ ಓದಿ, ಓದಲು ಬರದವರಿಗೂ ಪ್ರಸಾರವಾಗುವಂತಾಗಬೇಕು ಎಂದು ನನ್ನ ಅಭಿಲಾಷೆ.

ಜನವರಿ 2003ರಲ್ಲಿ ನಡೆದ ಪುಸ್ತಕಗಳ ಬಿಡುಗಡೆ ಸಮಯದಲ್ಲಿ ನಾನು ಹೇಳಿದಂತೆ, "ಲೋಕಾಯಣ" ಕಾಲೇಜ್ ಮಟ್ಟದಲ್ಲಿ ಪಠ್ಯ ಪುಸ್ತಕವಾಗಬೇಕು. ಕನ್ನಡ ಮಾತ್ರ ಅಲ್ಲದೆ ಎಲ್ಲ ತರಗತಿಗಳಲ್ಲೂ, ಲೋಕಾಯಣ ಮುಂತಾದ ಕನ್ನಡ ಪುಸ್ತಕಗಳ "ಪುಸ್ತಕ ವಿಚಾರ ವೇದಿಕೆ" (Book Discussion) ಗಳನ್ನು ಏರ್ಪಡಿಸಬೇಕು. ಮುಂದಿನ ನಾಯಕರಾಗುವ ಇಂದಿನ ಯುವಕರಿಗೆ ಪ್ರಪಂಚದ ಇತರ ದೇಶಗಳೊಡನೆ ತಮ್ಮ ನಾಡು ಎದುರಿಸುತ್ತಿರುವ ಸಮಸ್ಯೆಗಳ ಅರಿವಾಗಿ, ಅವುಗಳಿಗೆ ಪರಿಹಾರ ಕಂಡುಹಿಡಿಯುವ ಸ್ಫೂರ್ತಿ ಬರುವಂತಾಗಬೇಕು....

ಈ ಮೂಲಕ ಲೋಕಾಯಣ ನನ್ನಲ್ಲಿ ಮೂಡಿಸಿದ ಭಾವದ ಅನುರಣಗಳಲ್ಲಿ ಹಲವನ್ನು ಕವಿ ದೊಡ್ಡರಂಗೇಗೌಡರ ಕಡೆಗೂ ಹಾಯಿಸುತ್ತಿದ್ದೇನೆ. ದೊರಂಗೌ ಈಗ ತಾನೆ 60 ಮುಗಿಸುತ್ತಿರುವ ನವ್ಯ, ತರುಣ ಕವಿ. ಇವರ ಸೇವೆ ಇನ್ನೂ ನೂರ್ಕಾಲ ನಡೆಯುವಂತಾಗಲೆಂದು ನನಗೆ ಲೋಕಾಯಣ ತಂದ ಉತ್ಸಾಹದಿಂದ ಭಾರತೀಯರ ಹಾಗೂ ವಿಶ್ವಪ್ರಜೆಗಳ ಪರವಾಗಿ ಭುವನೇಶ್ವರಿಯಲ್ಲಿ ಬೇಡುತ್ತೇನೆ.





# ಹೂವು-ಹಣ್ಣು

● ಡಾ|| ಎಂ.ಎ. ಜಯಚಂದ್ರ

'ಹಾಡ್ತಾ ಹಾಡ್ತಾ ರಾಗ, ಬರಿತಾ ಬರಿತಾ ಕಾವ್ಯ'- ಎಂಬ ಸೂಕ್ತಿ ಆಯಾಯಾ ಕ್ಷೇತ್ರಗಳಲ್ಲಿ ಸಿದ್ಧಿ ಪಡೆಯಲು ಸತತ ಸಾಧನೆ ಅನಿವಾರ್ಯ ಎಂಬುದನ್ನು ತಿಳಿಸುತ್ತದೆ. ಸಾಧನೆಯ ಕಾಲದಲ್ಲಿ ಸಿದ್ಧಿಯಿರುವುದಿಲ್ಲ, ಆದರೆ ಸಿದ್ಧಿಯ ಹೊಳಪುಗಳಿರುತ್ತವೆ, ಅವನ್ನು ಕಾಣುವಾಗಿನ ನೋವು ನಲಿವುಗಳಿರುತ್ತವೆ. ಅದು ಬರಿ ಹುಳಿಯೂ ಅಲ್ಲ, ಬರಿ ಸಿಹಿಯೂ ಅಲ್ಲ, ಹುಳಿ-ಸಿಹಿ ಬೆರತ ದೋರುಹಣ್ಣಿನಂತೆ. ಆ ಸ್ಥಿತಿ, ಪೂರ್ಣ ಅರಳಿದ ಹೂವು ಅಲ್ಲ, ಇನ್ನು ಅರಳದ ಮೊಗ್ಗು ಅಲ್ಲ, ಅದು ಅರೆಬಿರಿದ ಮೊಗ್ಗಿನಂತೆ. ಈ ಪ್ರಕ್ರಿಯೆಗಳ ಚಿತ್ರಣದಲ್ಲಿ ಒಂದು ಸೊಗಸಿದೆ. ಅಂಥ ಸೊಗಸು, ಚಿಂತನಗಳನ್ನು ಪ್ರೊ|| ದೊಡ್ಡರಂಗೇಗೌಡರ 'ಹೂವು-ಹಣ್ಣು' ಕವಿತಾ ಸಂಕಲನದಲ್ಲೂ ಕಾಣಬಹುದಾಗಿದೆ.

'ಪಯಣಿಗನ ಹಾಡು' ಕವನದಲ್ಲಿ ಕವಿಯ ಸ್ವಕಥನವಿದೆ. ಹಳ್ಳಿಯ ಹುಡುಗ, ಬಡತನದಲ್ಲಿ ಬೆಳೆದವನು. ಓದುವ ಆಸೆ. ಕಾಸಿಗೆ ಕಾಸು ಕೂಡಿಟ್ಟು ಪುಸ್ತಕಕೊಂಡು ಏಕಾಂತದಲ್ಲಿ ಓದು, ಅಭ್ಯಾಸ. ಕವಿಯಾಗುವ ಬಯಕೆ. ಅದಕ್ಕಾಗಿ ಸತತ ಪ್ರಯತ್ನ. ಅದರ ಚಿತ್ರಣ ಹೀಗಿದೆ

ಕಾವ್ಯಗಳಲ್ಲಿ ಕಣ್ಣ ಕಿತ್ತಿಟ್ಟೆ
ಪದ ಪದದಲ್ಲೂ ನನ್ನ ಮನಸಿಟ್ಟೆ
ಲಯಗಾರಿಕೆಯಲ್ಲಿ ಗಮನ ನೆಟ್ಟೆ
ರಾಗ ತಾಳಗಳ ಕುತೂಹಲ ಹುಟ್ಟಿ
ಹಾಡನು ಬರೆದೆ ಪಾಡನು ತಡೆದೆ
ದುಗುಡುವ ಗೀತೆಯ ಮಾಡುವ ಹಾಡಿದೆ
ಬೇರೆ ಬೇರೆ ಪದಗಳ ಪಟ್ಟನು ಹಿಡಿದೆ
ಮಟ್ಟಿನ ಮೇಲೆ ಮಟ್ಟು ಹೊಸತನು ಕಡೆದೆ

ಬರೆದದ್ದು ಬರದದ್ದೇ!
ಹರಿದದ್ದು ಹರಿದದ್ದೇ!

ಗೊತ್ತು ಗುರಿ ಮುಟ್ಟುವಲ್ಲಿ ಸ್ವಪ್ರಯತ್ನವೇ ಮುಖ್ಯ. ಇದಕ್ಕೆ ನೇಡಿಗರ ಸಹಕಾರವಿದ್ದರೆ ಇನ್ನು ಉತ್ತಮ. ಕೆಲವು ಗೆಳೆಯರು ನಮಗೆ ರೆಕ್ಕೆ ಪುಕ್ಕಗಳಿದ್ದಂತೆ. ಆದರೆ ಇನ್ನು ಕೆಲವು ಮಿತ್ರರು ನಮ್ಮ ರೆಕ್ಕೆಪುಕ್ಕಗಳನ್ನು ನಯವಾಗಿ ಕತ್ತರಿಸುತ್ತಾರೆ. ನಮ್ಮ ಸುತ್ತಮುತ್ತ ಇಂಥವರೇ ಹೆಚ್ಚು. 'ಸಂಕಲ್ಪ ಬಲ' ಒಂದಿದ್ದರೆ ಇಂಥ ಸಂಕಟಗಳ ಕಂದಕವನ್ನು ದಾಟಬಹುದಂತೆ-

ರೆಕ್ಕೆಯಿಲ್ಲದಿದ್ದರೇನಂತೆ? ಮನಸ್ಸಿಗೆ!
ಧೃತಿಗೆಡದ ಸಂಕಲ್ಪ ಬಲವಿದೆ ನನ್ನೊಂದಿಗೆ
ಹಾರಿ ಹಾರಿ ಬಂದು ನಿಲ್ಲುವೆ ನಿಮ್ಮ ಸಮಕ್ಕೆ
ನಿಮ್ಮ ಸಮ ಸಮಕ್ಕೆ.

ಇಂಥ ದೃಢ ಸಂಕಲ್ಪವೇ ನಮ್ಮಲ್ಲಿ ಆತ್ಮವಿಶ್ವಾಸವನ್ನು ಮೂಡಿಸುತ್ತದೆ. ಸೋತು ಸೊರಗಿದಾಗ, ಹಾದಿ ತಪ್ಪಿದಾಗ, ದಿಕ್ಕೆಟ್ಟು ಮಂಕಾದಾಗ, ತಂಟೆ ತರಲೆ ಎದುರಾದಾಗ, ಕತ್ತಲೆ ಕವಿದಾಗ ಒಳಗಿನಿಂದ ಪುಟವ ಮೂಲಭಾವವಾಗಿ, ಸಿರಿಚೇತನವಾಗಿ ಇರುವುದೇ 'ಆತ್ಮವಿಶ್ವಾಸ' ಇದರ ಬಗ್ಗೆ ಕವಿವಾಣಿ ಹೀಗಿದೆ-

ಅವರು ಇವರು ಹಂಗಿಸಿದಾಗ
ಅಂತರಂಗ ರೋದಿಸಿದಾಗ
ನೈರಾಶ್ಯ ಛೇದಿಸುವಾಗ
ಸುಪ್ತವಾಗೇ ಆಪ್ತ ನುಡಿವ
ಭಾವ ಬೆಳಕು
ಆತ್ಮ ವಿಶ್ವಾಸ!

ಬಾಹ್ಯ ಶತ್ರುಗಳ ಕಾಟ ಒಂದು ರೀತಿಯಾದರೆ, ಅಂತರಂಗ ಶತ್ರುಗಳ ಕಾಟ ಮತ್ತೊಂದು ಬಗೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ- ಇವು ಆರು ಮಾನವನ ಅಂತರಂಗದ 'ಒಳಶತ್ರು'ಗಳು. ಇವುಗಳೊಂದಿಗೆ ಮಾನವನ ಕುಸ್ತಿ ನಿಂತಿಲ್ಲ. ಇವು ನರನಾಡಿಗಳಿಗೆ ಸವಾಲಾಗಿವೆ. ಇವುಗಳನ್ನು 'ತದುಕದೆ ಏಳಿಗೆಯಿಲ್ಲ' ಇವುಗಳಿಗೆ 'ದಾಸನಾದರೆ ಬಾಳುವೆಯಿಲ್ಲ' ಭಯಂಕರವಾದ ಇವುಗಳೊಡನೆ ನಿರಂತರ ಹೋರಾಟ ಸಾಗಿದೆ. ಅಂಥ ಹೋರಾಟದ ಒಂದು ತುಣುಕು ದೃಶ್ಯ ಹೀಗಿದೆ-

ಒಬ್ಬನಂತೂ ಯಾವಾಗ ಎಲ್ಲಿಂದ ಹೇಗೆ
ಮೇಲೆದ್ದು ಭುಗಿಲಾಗುತ್ತಾನೆ
ಹೇಳಲಾರೆ ಅವನ ಮುಂದೆ
ತತ್ತರಿಸಿದರೂ ಹೊಡೆದಾಡುತ್ತೇನೆ ಪಟ್ಟುಬಿಡದೆ
ಮಾನ ಉಳಿಸಿಕೊಳ್ಳಲು
ನನ್ನತನ ಪ್ರತಿಷ್ಠಾಪಿಸಲು
ನನ್ನೆಲ್ಲ ಏಳಿಗೆಗೂ ಹಾಕುತ್ತಾನೆ ಅವನೇ ಸವಾಲು
ನಿಗ್ರಹಿಸಿ ಮೆಟ್ಟಿ
ಮುನ್ನಡೆಯುತ್ತೇನೆ ಆಗಲೂ
ಅವನು ಪ್ರತ್ಯಕ್ಷವಾಗಿ ಹೂಡುತ್ತಾ ತಕರಾರು

ಸೋಮಾರಿತನ ಒಂದು ರೋಗ. ಅದು ನಮ್ಮ ಉತ್ಸಾಹವನ್ನೆಲ್ಲ ಕಮರಿಬಿಡುತ್ತೆ, ಗುರಿ ತಪ್ಪಿಸಿಬಿಡುತ್ತೆ. ಆದ್ದರಿಂದ ಕವಿ ಎಚ್ಚರಿಕೆಯ ಬೋಧನೆ ನೀಡುತ್ತಾನೆ-

ಆಕಳಿಕೆ ಬಿಡೋ ತಮ್ಮ ಆಗದಿರು ಸೋಮಾರಿ
ಉತ್ಸಾಹ ಕಾಣೋ ತಮ್ಮ ಮುಟ್ಟು ನೀ ನಿನ್ನ ಗುರಿ

ಅಲ್ಲದೆ, ''ಸರಿಯಲಿ ತನು ತುಂಬಿದ ತಮಸ್ಸು, ಹೊಸತಾಗಲಿ ಇಂದೇ ನಿನ್ನ ಮನಸ್ಸು' ಎಂದು ಹಾರೈಸುತ್ತಾರೆ.

ಕವಿ ಆಶಾವಾದಿ. ಇಂದಲ್ಲ ನಾಳೆ ಒಳ್ಳೆಯದು ಆಗೇ ಆಗುತ್ತೆ. ಎಲ್ಲಿ ಒಳ್ಳೆಯದು ಇರುವುದೋ ಅಲ್ಲಿರುವವನು ಭಗವಂತ. ಇಂಥದಕ್ಕೆ ಸಂಕೇತವಾಗಿದೆ 'ಮಹಾಚೈತ್ರ' ಪ್ರಕೃತಿ ಚಿತ್ರಣದಲ್ಲಿ ಈ ಆಶಯವನ್ನು ಕವಿ ಹೀಗೆ ಹಾಡಿದ್ದಾನೆ-

ಕಾರೆಂಬೋ ಕತ್ತಲೆ ಮುತ್ತಿರೂನೂ
ಕಾರೆಮುಳ್ಳು ಕಾಲಿಗೆ ಚುಚ್ಚಿದರೂನೂ
ಕೆಂಬಾರೆ ಮ್ಯಾಗೆ ಚೈತ್ರ ಸ್ವಾಮಿ ಓಡಿ ಬಂದಾನೋ
ಸೂರ್ಯ ಸ್ವಾಮಿ ಬಂದೇ ಬರುತಾನೋ
ಬಾಳಿಗೆ ಹೊಂಬೆಳಕ ತಂದೇ ತರುತಾನೋ

ಭಾರತೀಯ ಸಂಸ್ಕೃತಿಯಲ್ಲಿ ಗುರುವಿಗೆ ಸರ್ವೋತ್ಕೃಷ್ಟ ಸ್ಥಾನವಿದೆ. ಕವಿಯ ಗುರುಭಕ್ತಿಯು, 'ಸದ್ಗುರುವಿಗೆ' 'ಶ್ರೀ ಗುರುವಿನ ಗುಣಗಾನ' ಎಂಬ ಕವಿತೆಗಳಲ್ಲಿ ಹೊರಹೊಮ್ಮಿದೆ.

ಕೆ.ಎಸ್. ನರಸಿಂಹಸ್ವಾಮಿ, ಚಂದ್ರಶೇಖರ ಕಂಬಾರ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಸರ್. ಎಂ. ವಿಶ್ವೇಶ್ವರಯ್ಯ ಇವರ ಬಗ್ಗೆ ಕವಿಗೆ ಅಪಾರವಾದ ಗೌರವ. ತಾವು ಕಂಡಂತೆ ಅವರ ವ್ಯಕ್ತಿತ್ವವನ್ನು ಕವಿತೆಯಲ್ಲಿ ಹೊರಚೆಲ್ಲಿದ್ದಾರೆ. ಅವರ ಪ್ರಭಾವದ ಋಣದಲ್ಲಿರುವ ಕವಿ ಅವರಿಗೆ ಕವಿತೆಯ ಮೂಲಕ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಇವುಗಳಲ್ಲಿ 'ನಮ್ಮ ಮೇಷ್ಟ್ರು' ಎಂಬ ಕವನ ಅತ್ಯುತ್ತಮವಾಗಿದೆ. ಇದರಲ್ಲಿ ಕಾಲೇಜು ಉಪನ್ಯಾಸಕರಲ್ಲಿರಬೇಕಾದ ಗುಣಗಳನ್ನು ಸಹ ತಿಳಿಸಿದ್ದಾರೆ.

'ತೆಪ್ಪೋತ್ಸವ' 'ಬಯಲು ಸೀಮೆ ಬೆಳಗು' 'ಕೋಗಿಲೆ ಕೂಗುತಾವೋ' 'ಮಹಾಚೈತ್ರ' ಮೊದಲಾದ ಕವಿತೆಗಳು ಜಾನಪದೀಯ ಶೈಲಿಯಲ್ಲಿದೆ. ಅವುಗಳನ್ನು ಹಾಡಿನಂತೆ ಗುನಿಗಿದಾಗಲೇ ರಸಾನುಭವದ ಲಾಭ.

ನಮ್ಮ ಸಂಸ್ಕೃತಿಯ ದ್ಯೋತಕ, ಜ್ಯೋತಿ. ಅದನ್ನು ಪ್ರಜ್ವಲಿಸುವ ಮೂಲಕ ಸಭೆ ಸಮಾರಂಭಗಳನ್ನು ಉದ್ಘಾಟಿಸುವುದು, ನಮ್ಮಲ್ಲಿರುವ ರೂಢಿ. ಇಂಥ ಸಂದರ್ಭಗಳಲ್ಲಿ ಅರ್ಥಪೂರ್ಣವಾಗಿ ಹಾಡಲು ಯೋಗ್ಯವಾಗಿದೆ, ಗೌಡರ, 'ಬೆಳಗೋಣ ಜ್ಯೋತಿ' ಎಂಬ ಕವಿತೆ.

ಪುಢಾರಿಗಳು, ಕುವ್ಯಕ್ತಿಗಳು ಸಹ ಈ ಕವಿಯ ಕವಿತೆಯ ವಸ್ತುವಾಗಿದ್ದಾರೆ. ದುಷ್ಟ ರಾಜಕಾರಣಿಗಳ ಹಾಗೂ ಹಂದಿಯ 'ಹುಟ್ಟುಗುಣ' ಎರಡೂ ಒಂದೇ, ಕೊಚ್ಚೆಯನ್ನು ಹುಡುಕಿಕೊಂಡು ಹೋಗುವುದು–

ಹಂದಿಗಳು ಹುಡುಕಿಕೊಂಡು ಹೋಗುತ್ತವೆ
ರಾಜಕಾರಣದ ಕೊಚ್ಚೆ
ಅದಕ್ಕೆ ದೇಶದ ತುಂಬ ರಚ್ಚೆ!

ದುರಾಸೆ, ಲಾಲಸೆಯಿಂದ ಮನುಷ್ಯ ದುಷ್ಟನಾಗುತ್ತಾನೆ, ಸಾಂಸ್ಕೃತಿಕ ಭ್ರಷ್ಟನಾಗುತ್ತಾನೆ. ಇವನೇ ಸಾಮಾಜಿಕ ರೋಗಗಳಿಗೆ ಕಾರಣೀಭೂತನಾಗುತ್ತಾನೆ–

ಎಲ್ಲ ರೋಗದ ಮೂಲ ಈ ಮಾನವನಯ್ಯ
ಇವನ ಮನಸಿನ ತಾಣ ದುರಾಸೆಯಯ್ಯ
ಇವನ ಲಾಲಸೆಗೆಲ್ಲಾ ಸ್ವಾಹಾ
ಕಾಡು ಕಡಲೂ ಕರಗಿಸೋ ದಾಹಾ

ಆದ್ದರಿಂದಲೇ ಇವನು ಎಲ್ಲವನ್ನು 'ನುಂಗು'ವ 'ನುಂಗಾಸುರ'ನಾಗಿದ್ದಾನೆ. 'ಹೊಸ ವರುಸದ

ಹಾಡು-ಪಾಡು' ಕವಿತೆಯಲ್ಲಿ ಕವಿಯ ವರ್ತಮಾನ ಕಾಲದ ಪರಿಸ್ಥಿತಿಯ ಬಗ್ಗೆ ಧ್ವನಿಪೂರ್ಣವಾಗಿ ಹೀಗೆ ಚಿಂತಿಸಿದ್ದಾನೆ-

'ಹೊಸತು ಬರಲೂ ಇಲ್ಲ
ಹಳತು ಹೋಗಲೂ ಇಲ್ಲ'

'ಬಂದೂಕ ಗುಡುಗೇ ಹೆಚ್ಚಳ
ಸತ್ತು ಹೋಯ್ತೆ ಪಾರಿವಾಳ?'

'ಪೃಥ್ವಿ ಪ್ರಗಾಥ'ದಲ್ಲಿ ಪ್ರಕೃತಿ ಬಗೆಗಿನ ಕವಿಯ ಕಾಳಜಿ ಎದ್ದು ಕಂಡಿದೆ. ಸಹಜ ಸೌಂದರ್ಯವನ್ನು ನಾಶಗೈದು, ಕೃತಕ ಅಂದಚಂದಗಳಿಗೆ ಮಾರುಹೋಗಿ ಭಾವಕೋಶವನ್ನು ಮತ್ತು ಜೀವಜಾಲವನ್ನು ಸುಡುತ್ತಿರುವ ಬುದ್ಧಿಗೇಡಿತನದ ಬಣ್ಣಣೆಯ ಒಂದು ಭಾಗ ಹೀಗಿದೆ ನೋಡಿ-

ಚೆಂಡು ಹೂ ಇಲ್ಲ; ಗೊಂಡೆ ಹೂ ಇಲ್ಲ
ಪ್ಲಾಸ್ಟಿಕ್ಕೂ ಮನೆಯಲ್ಲೆಲ್ಲಾ!
ತುಂಬೆ ಹೂ ಇಲ್ಲ; ರೆಂಬೆ ಹೂ ಇಲ್ಲ
ಚಿತ್ರವಷ್ಟೇ ಗೋಡೆಯಲೆಲ್ಲಾ!

ಬಣ್ಣದ ಮನೆಯ ಕಟ್ಟಿ ಬಣ್ಣದ ಮಾತಾಡಿದ
ಭಾವಕೋಶಕೆ ಬೆಂಕಿ ಇಟ್ಟ
ಯುಗ ಯುಗಗಳಿಂದ ಪ್ರಕೃತಿ ತಂದ
ಜೀವಜಾಲ ಒಟ್ಟಿಗೆ ಸುಟ್ಟ

'ಜಾಗತೀಕರಣ' ಜಗತ್ತಿನ ರೂಪವನ್ನೇ ಬದಲಿಸುತ್ತಿದೆ. ಅದನ್ನು ತಡೆಯುವ ಸಾಮರ್ಥ್ಯವಿಲ್ಲ. ಅದರಿಂದ ಕೆಡಕಾಗಬಹುದೆಂಬ ಸಂದೇಹ, ನಮ್ಮ ದೇಸೀತನ ಹಾಳಾಗುವುದೆಂಬ ಆತಂಕ. ಇವೆರಡನ್ನು ಹರಳುಗಟ್ಟಿಸಿದೆ ಈ ಕವಿವಾಣಿ-

'ಜಾಗತೀಕರಣ ಎಂಬ
ಹೊಸತು ಭೂತ ಮೆಟ್ಟಿದೆ'

'ಬಾಪು ತೊಟ್ಟ ದೇಸಿ ಮಂತ್ರ
ಚಿಂದಿ ಚಿಂದಿಯಾಗಿದೆ!'

ಕವಿ ದೊಡ್ಡರಂಗೇಗೌಡರಿಗೆ ದೀರ್ಘ ಕವಿತಾ ರಚನೆಯಲ್ಲಿ ಸದಭಿರುಚಿಯಿದೆ. ಕಥನ ಲವಲವಿಕೆಯಿಂದ ಮುಂದೆ ಸಾಗುತ್ತದೆ. 'ಪೃಥ್ವಿ ಪ್ರಗಾಥ' ಹಾಗೂ 'ಪರದೇಸಿ ಪ್ರಗಾಥ'ದಲ್ಲಿ ಈ ಗುಣಗಳನ್ನು ಗುರುತಿಸಬಹುದು. ಧರ್ಮ, ಸಂಸ್ಕೃತಿ, ಮಾನವ ಜೀವನದ ಉತ್ತಮಿಕೆಯಲ್ಲಿ, ಅರಿವ ನಿವಾರಣೆಯಲ್ಲಿ ಕವಿಗೆ ಅಪಾರವಾದ ಆಸ್ಥೆಯಿದೆ. ಈ ಹಿನ್ನೆಲೆಯಲ್ಲಿ ಗೌಡರು ಕಥನಕವನ ಹಾಗೂ ಖಂಡಾಯಕಾವ್ಯಗಳ ರಚನೆಯಲ್ಲಿ ತೊಡಗಿದರೆ ಹೆಚ್ಚಿನ ಯಶಸ್ಸನ್ನು ಸಾಧಿಸಬಲ್ಲರು. ಅವರು 'ಯಶಸ್ಸಿನ ಸಿದ್ಧ'ರಾಗಲಿ, ಅವರಿಗೆ 'ಹೂವು-ಹಣ್ಣು' ಗೌರವ ಪೂರ್ವಕ ಸಮರ್ಪಿತವಾಗಲಿ ಎಂದು ಶುಭ ಹಾರೈಸುತ್ತೇನೆ.

❑



# ಕಡಲನ್ನು ಕೊಡದಲ್ಲಿ ತುಂಬಿದಂತೆ....

• ಶ್ರೀಲಲಿತ

ಸುಖದ ಜೀವನವೆಂದರೆ ಸುಪ್ಪತ್ತಿಗೆಯ ಮೇಲೆ ಮಲಗಿ ನಿದ್ರಿಸುವುದೂ ಅಥವಾ ಕೆಲಸವಿಲ್ಲದಿದ್ದರೂ ತಿನ್ನಲು ಉಣ್ಣಲು ಬೇಕಾದಷ್ಟಿರುವುದೊ ಅಲ್ಲ. ಸುಖದಿಂದಿರುವುದು ತಾನು ಮಾಡುವ ಅರ್ಥಪೂರ್ಣ ಕೆಲಸಗಳಲ್ಲಿ ಎಂಬಂತೆ ಅಜಾತಶತ್ರು ಸೃಜನ ಸಂಪನ್ನರಾದಂತ ಡಾ|| ದೊಡ್ಡರಂಗೇಗೌಡರು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ವಿವಿಧ ಸಾಹಿತ್ಯ ಪ್ರಕಾರಗಳನ್ನು ರಚಿಸಿ ಚಿರಪರಿಚಿತರಾಗಿದ್ದಾರೆ. ಅವರ ಕವಿತೆಗಳು ಓದುಗರ ಮನಸ್ಸನ್ನು ಆಕರ್ಷಿಸುತ್ತವೆ. ಇಲ್ಲಿ ನಾನು ಡಾ|| ದೊಡ್ಡರಂಗೇಗೌಡರ ಇತ್ತೀಚಿನ ಕಾವ್ಯಕೃತಿ **'ಗೀತಸಿರಿ'**ಯಿಂದಾಯ್ದು ಕೆಲವು ಕವನಗಳ ಬಗ್ಗೆ ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದೇನೆ. ಈ ಕವನ ಸಂಕಲನವನ್ನು ಒಮ್ಮೆ ಓದಿದ ಓದುಗ ಅದರ ಪ್ರಭಾವದಿಂದ ತಪ್ಪಿಸಿಕೊಳ್ಳುವಂತೆಯೇ ಇಲ್ಲ. ವಿವಿಧ ರೀತಿಯ ಮೋಡಗಳು ತಮ್ಮದೇ ಆದ ವಿಶಿಷ್ಟತೆಯನ್ನು ಕಾಪಾಡಿಕೊಂಡಿರುವಂತೆ ಇಲ್ಲಿರುವ ಕವನಗಳು ತಮ್ಮದೇ ವಿಶಿಷ್ಟ ಸ್ವರೂಪದ್ದಾಗಿವೆ. ವಿವಿಧ ವಿಷಯಗಳ ಮೇಲಿನ ಚಿಂತನೆಗಳಿವೆ. ಇಲ್ಲಿ ಮೂಡಿರುವ ಕವಿತೆಗಳು ಸಾವಿರ ಸ್ಪಂದನಗಳ ಸಾಗರಗಳಾಗಿವೆ. ಒಳಗಣ್ಣನ್ನು ತೆರೆಯುವ ದಿವ್ಯ ಬೆಳಕಿನ ಹಾಗೆ ಮನಸ್ಸನ್ನು ಆಳಕ್ಕೆ ಇಳಿಸಿ ಹೊಸ ಯೋಚನೆಗಳನ್ನು ಚಿಗುರಿಸಿ ಹರ್ಷವನ್ನು ನೀಡುತ್ತವೆ. ರವಿ ಕಾಣದ್ದನ್ನು ಕವಿ ಕಂಡ ಎಂಬ ಮಾತು ಸುಳ್ಳಲ್ಲ. ಕಲ್ಪನೆಯಲ್ಲಿ ಕವಿ ಸ್ವರ್ಗಲೋಕವನ್ನು ಸೃಷ್ಟಿಸಬಹುದು. ಆದರೆ ಇಲ್ಲಿ ಲೇಖಕರು ಕಲ್ಪನೆಯ ಜೊತೆಗೆ ವಾಸ್ತವತೆಗೆ ಹೆಚ್ಚು ಬೆಲೆಯನ್ನು ಕೊಟ್ಟಿದ್ದರಿಂದ ಜನತೆಗೆ ಹತ್ತಿರವಾಗಿದ್ದಾರೆ.

ಶುಭ ನುಡಿಯಲು ಶುಭಕಾರ್ಯಕೆ
ಶುಭ ಚೇತನ ಪ್ರೇರಣೆ
ಶುಭ ಚಿಂತನ ಶುಭ ಬಾಳಿಗೆ
ಶುಭ ನಡೆಯ ಉದ್ದೀಪನೆ

ದ್ವೇಷವೆಂಬ ಕಳ್ಳಿ ಕಡಿಮೆ ಪ್ರೀತಿಯ ಸಂವರ್ಧನೆ
ಕಷ್ಟವೆಂಬ ಬೆಟ್ಟವೇರಲು ಸಿಹಿಸುಖ ಆಸ್ವಾದನೆ!

ಈ ಮೇಲಿನ ಪದ್ಯದ ಸಾಲುಗಳಲ್ಲಿ ಶುಭ ನುಡಿ ಅಂದರೆ ಯಾವಾಗಲೂ ಒಳ್ಳೆಯ ಮಾತನ್ನಾಡಬೇಕು. ಮಾತಿನಿಂದ ಬದುಕಿನಲ್ಲಿ ನಾವು ತೋರುವ ಪ್ರೀತಿ ಆಶಯ ಎಲ್ಲರ ಆಶಯವಾಗಬೇಕೇ ಹೊರತು ದ್ವೇಷದಿಂದಲ್ಲ. ಸ್ಫೂರ್ತಿಯಿಂದ ಕಾರ್ಯ ನಿರ್ವಹಿಸುವವನ ಕಾಲನ್ನು ಹಿಡಿದೆಳೆಯುವಂಥ ಮತ್ಸರ ಬುದ್ಧಿ ಬೇಡ, ಸಹೃದಯತೆಯಿಂದ ಪ್ರೋತ್ಸಾಹಿಸು. ದ್ವೇಷವನ್ನು ಮರೆತಾಗ ಮಾತ್ರ ಪ್ರೀತಿ ಉಕ್ಕುತ್ತದೆ ಕಷ್ಟವನ್ನು ಎದುರಿಸಲು ದುಃಖವನ್ನು ಸಹಿಸಲು ಸಾಧ್ಯವಾಗುತ್ತದೆ.

ಜೀವನದ ಕಡಲಲ್ಲಿ ಭೋರ್ಗರೆಯುವ ಅಲೆಗಳಂತೆ ಕಷ್ಟಗಳು ಬರುತ್ತವೆ. ಹಗಲು ರಾತ್ರಿಯಂತೆ ಸುಖ ದುಃಖಗಳು ನಮ್ಮ ಜೀವನವನ್ನು ಆವರಿಸಿಬಿಟ್ಟಿವೆ. ಎಷ್ಟೇ ಅಡೆತಡೆಗಳಿದ್ದರೂ ಅವುಗಳಿಗಂಜದ ನದಿಯಂತೆ ಮುಂದುವರಿಯಬೇಕೆಂಬ ತತ್ವವನ್ನು ಮುಂದಿನ ಸಾಲುಗಳಲ್ಲಿ ನಮಗರುಹುತ್ತಾರೆ.

ಎದುರು ಬರುವ ಅಲೆಗಳನ್ನು ಈಜಬೇಕೊ ಮನುಜ
ಅಡೆತಡೆಗಳ ಉಪಟಳವನ್ನು ದಾಟಬೇಕೊ ಸಹಜ
ಮುಳುಗಿ ತೇಲಿ ಉಳಿದುಕೊಂಡು
ಬಾಳ ಕಡಲ ಜೊತೆ ಜೊತೆ ನಾನು
ಜೀವಿಸಿದೆನು ಅಲೆಯು ಚೆನ್ನು

''ಕಾವ್ಯ ಮಯೂರಿ'' ಒಂದು ಉತ್ತಮ ಕವನ. ಇದು ಗಂಡು ಹೆಣ್ಣಿನ ಮಧುರ ಸಂಬಂಧ, ಒಂದು ಆನಂದ ತುಂಬುವ ಅವಿನಾಭಾವ ಬಂಧುತ್ವವನ್ನು ವರ್ಣಿಸುತ್ತದೆ.

ನನ್ನರಿವಿನ ಮರುಭೂಮಿಗೆ ನೀ ಚೇತನ ಲಹರಿ
ನಿನ್ನಿಂದಲೇ ನಾ ಕಂಡೆನು ಚಂದ್ರಿಕೆಯ ಚವರಿ
ನಿನ್ನೊಡನಿರೆ ನನಗಿರದು ಕಡುಕಷ್ಟದ ದಳ್ಳುರಿ....

ಒಬ್ಬರನ್ನೊಬ್ಬರು ಪರಸ್ಪರ ಅರ್ಥಮಾಡಿಕೊಂಡು ತಮ್ಮ ಜೀವನದ ರಥಕ್ಕೆ ತಾವೇ ಎರಡು ಗಾಲಿಗಳೆಂದು ತಿಳಿದಲ್ಲಿ ಬದುಕು ಅರ್ಥಪೂರ್ಣವಾಗಿರುತ್ತದೆ ಎಂದಿದ್ದಾರೆ.

ಕೆಲವೊಮ್ಮೆ ನಾವು ಎಷ್ಟು ನಿಗ್ರಹಿಸಿಕೊಂಡರೂ ಚಿಂತನೆಗಳು ನಮ್ಮ ತಲೆಯನ್ನು ಆವರಿಸಿ ಬಾಧಿಸುತ್ತಲೇ ಇರುತ್ತವೆ. ಕಗ್ಗತ್ತಲು ರಾತ್ರಿಯಲ್ಲಿ ಗಾಢಾಂಧಕಾರದ ಕೋಣೆಯೊಳಗೆ ಬೇಸರದ

ಕ್ಷಣಗಳಲ್ಲಿ ಮನಸ್ಸು ವ್ಯಾಕುಲಗೊಂಡು ವ್ಯಥೆ ಪಡುವ ಕವಿಯ ಮನಸ್ಸಿನ ತೊಡಕನ್ನು ಈ ಕೆಳಗಿನ ಸಾಲುಗಳು ಬಿತ್ತರಿಸುತ್ತವೆ.

ಹಿಂದಿನದೆಲ್ಲ ಚಿಲುಮೆ ಉಕ್ಕುಕ್ಕಿ
ಘಾಸಿ ಮಾಡಿವೆ ಬೇಸರದ ಕ್ಷಣಗಳು
ನೆನ್ನೆಗಳ ಕಾಶ ಮೇಘ ಒತ್ತೊತ್ತಾಗಿ
ಮುತ್ತಿ ತಳೂರಿವೆ ಮೈಯೆಲ್ಲಾ ಚಿಂತೆಗಳು.

ಇನ್ನೊಂದೆಡೆಯಲ್ಲಿ ಕವಿ ''ಜಾತಿಯೆಂಬ ಪಿಡುಗು'' ಎಂಬ ಕವನದ ಮೂಲಕ ಜಾತೀಯತೆಯ ವಿರುದ್ಧ ಸಿಡಿದೆದ್ದಿದ್ದಾರೆ.

ಎಲ್ಲರ ಮೈಯಲ್ಲೂ ಕೂಡ ಹರಿವುದೊಂದೆ ರಕ್ತ
ಬಿಸೋ ಗಾಳಿ ಒಂದೇ, ಕುಡಿಯೊ ನೀರು ಒಂದೇ
ಸಾವಿರ ಜಾತಿ ಯಾಕೊ?
ಪ್ರೀತಿಯೊಂದೆ ಬಾಳಿಗೆ ಸಾಕೊ! ....

- ಎಂದು ಮಾನವೀಯತೆಯನ್ನು ಗಾಳಿಗೆ ತೂರಿ ಜಾತಿಯ ಪಿಡುಗಿನಿಂದಾಗಿ ಅಮಾನವೀಯತೆಯನ್ನು ಪ್ರದರ್ಶಿಸುವ ಈ ಸಮಾಜದ ಪ್ರತಿಬಿಂಬವೇ ಕಾಣುತ್ತದೆ. ನಮ್ಮಂತೆ ಎಲ್ಲರದ್ದೂ ಅನ್ನಗತ ಶರೀರ, ಎಲ್ಲರಿಗೂ ಬೀಸುವ ಗಾಳಿ ಒಂದೇ, ಹರಿಯುವ ರಕ್ತ ಒಂದೇ, ಏಕೀ ತಾರತಮ್ಯ? ನಯ ವಿನಯ ಪ್ರೀತಿಯಿಂದ ದೀನ ದಲಿತರ, ದುಃಖಿತರ ಕಣ್ಣೀರನ್ನು ಒರೆಸುವ ಪ್ರೀತಿಯೇ ಮುಖ್ಯವಲ್ಲವೇ ಎಂಬ ತಿಳಿವಳಿಕೆ ನೀಡುತ್ತಾರೆ.

ಶಿಕ್ಷಣ, ಸಾಹಿತ್ಯ, ಚಲನಚಿತ್ರ, ಸುಗಮ ಸಂಗೀತ ಮತ್ತು ವೈಚಾರಿಕ ಕೃತಿಗಳು ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಾಧನೆ ಮಾಡಿದಂತ ಹಾಗೂ ಸೃಜನಶೀಲರಾದ ಡಾ॥ ದೊಡ್ಡರಂಗೇಗೌಡರ ಎಲ್ಲ ಕೃತಿಗಳ ಬಗ್ಗೆ ಬರೆಯುವುದೆಂದರೆ ಕಡಲನ್ನು ಕೊಡದಲ್ಲಿ ತುಂಬಲು ಪ್ರಯತ್ನಿಸುವಂತೆ ಕಷ್ಟದ ಕೆಲಸವೇ ಸರಿ. ಇನ್ನು ಅವರು ಯಾವುದೇ ಕಾರ್ಯಕ್ರಮದ ಅತಿಥಿಗಳಾದಲ್ಲಿ ಅವರ ಭಾಷಣವನ್ನು ಕೇಳುವುದೇ ಒಂದು ಸುದೈವ. ಅವರ ಪ್ರತಿ ಮಾತೂ ಮುತ್ತಾಗಿರುತ್ತದೆ. ಬಸವಣ್ಣನವರ **''ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು''** ಎಂಬ ವಚನದ ಸಾಲು ನೆನಪಾಗುತ್ತದೆ. ಭಾವಪೂರ್ಣವಾಗಿ ಮನಸ್ಸಿಗೆ ನಾಟುವಂತೆ ಆಕರ್ಷಕ ಶೈಲಿಯ ವಾಕ್‌ಚಾತುರ್ಯ ಅವರಿಗಿದೆ. ಹೊರಗಿನವರ ಭಾವನೆಗಳನ್ನು ಅವರ ಅನಿಸಿಕೆಗಳನ್ನು ಗಮನಿಸಿ ಅವಕ್ಕೆ ತಕ್ಕಂತೆ ಪ್ರವರ್ತಿಸುತ್ತಾರೆ. ಉದಯೋನ್ಮುಖ ಸಾಹಿತಿಗಳೊಡನೆ ಗೌರವದಿಂದ ನಡೆದುಕೊಳ್ಳುವುದಲ್ಲದೆ ಅವರಿಗೆ ಸಾಕಷ್ಟು ಬೆಂಬಲವನ್ನು ಮತ್ತು ಮಾರ್ಗದರ್ಶನವನ್ನು

ನೀಡುತ್ತಾರೆ ಎಂಬುವುದಕ್ಕೆ ಅವರು ಅನೇಕ ಉದಯೋನ್ಮುಖ ಲೇಖಕರ ಕವನ ಸಂಕಲನಕ್ಕೆ ಧನಾತ್ಮಕವಾಗಿ ಮುನ್ನುಡಿಗಳನ್ನು ಬರೆದಿರುವುದೇ ಸಾಕ್ಷಿ.

ಕೊನೆಯದಾಗಿ ಸರಳಜೀವಿ, ವಿನಯ ಸಂಪನ್ನರು ಹಾಗೂ ಹಿರಿಯರಾದ ಡಾ|| ದೊಡ್ಡರಂಗೇಗೌಡರು ಬದುಕಿನ ಸಾಹಿತ್ಯದ ನಾನಾ ಕ್ಷೇತ್ರಗಳಲ್ಲಿ ಕಂಡ ನಾನಾ ರೀತಿಯ ಸಿಹಿ-ಕಹಿ ಅನುಭವಗಳ ಸಾರಸತ್ವವನ್ನು ಕನ್ನಡದ ಕುಲಕೋಟಿಗೆ ಉಣಬಡಿಸಿದ್ದಾರೆ. ಭಿನ್ನವಾದ ವಿಷಯ ನಿರೂಪಣೆ, ಆಲೋಚನಾ ಕ್ರಮ, ಭಾಷಾ ಪ್ರಯೋಗಗಳಲ್ಲಿ ನೂತನತೆ ಮತ್ತು ಸೂಕ್ತ ಸಮರ್ಥನೀಯ ಕಾವ್ಯ ಕೃತಿಗಳು, ವಿಮರ್ಶೆ ಹಾಗೂ ಅನೇಕ ಸಾಹಿತ್ಯಕ ಕೃಷಿಯಲ್ಲಿ ತೊಡಗಿರುವ ಜ್ಞಾನ ವೃದ್ಧರೂ, ರಸಋಷಿಗಳೂ ಜ್ಞಾನೋಪಾಸಕರೂ ಆದ ಕವಿ ವರ್ಯರಿಗೆ 60 ವಸಂತಗಳು ಪೂರೈಸುತ್ತಿರುವ ಹಿನ್ನೆಲೆಯಲ್ಲಿ ಅವರ ಸಾಧನೆಯ ಘಟ್ಟಗಳನ್ನು ಗುರುತಿಸುವ ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ಸ್ವಾಗತಾರ್ಹ. ಈ ಶುಭ ಸಂದರ್ಭದಲ್ಲಿ ಸದಾ ಎಲ್ಲರಿಗೂ ಶುಭ ನುಡಿಯುವ ದಾರ್ಶನಿಕ ಕವಿ ಡಾ|| ದೊಡ್ಡರಂಗೇಗೌಡರಿಗೆ ಚಿಕ್ಕಂದಿನಿಂದಲೂ ಅವರ ಅಭಿಮಾನಿಯಾದ ನಾನು ಶುಭಾಶಯಗಳನ್ನು ಕೋರಿ, ಭಗವಂತನು ಆಯುರಾರೋಗ್ಯ ಭಾಗ್ಯ ಕೊಟ್ಟು ಶತಾಯುಷಿಗಳಾಗಿ ಅವರು ನಮಗೆಲ್ಲಾ ಮಾರ್ಗದರ್ಶಿಯಾಗಿರಲಿ ಎಂದು ಪ್ರಾರ್ಥಿಸುತ್ತೇನೆ.








# ಬಾನಿನಂತೆ ಕವಿಯ ಮನಸು

● ಜಯದೇವಪ್ಪ ಜೈನಕೇರಿ

ಆಧುನಿಕ ಕನ್ನಡ ಕಾವ್ಯ ಲೋಕದ ರೊಮ್ಯಾಂಟಿಕ್ ಕವಿಗಳಲ್ಲಿ ವಿಶಿಷ್ಟರಾದವರು ಪ್ರೊ॥ ದೊಡ್ಡರಂಗೇಗೌಡರು. ತಮ್ಮ ಸುಸಂಸ್ಕೃತ ಮನಸ್ಸಿನ ಭಾವನೆಗಳಿಗೆ ಸ್ಪಷ್ಟವಾದ ರೂಪುಕೊಡುವ ಗೌಡರ ಕಲೆಗಾರಿಕೆ ಅನನ್ಯವಾದದ್ದು. ಮತ್ತೆ ಮತ್ತೆ ಓದಿಸಿಕೊಳ್ಳುವ ಅವರ ಕವನಗಳು ಗೇಯತೆಯಿಂದ ಕೂಡಿ, ಹಾಡುಗಾರಿಕೆಗೆ ಸುಲಭವಾಗಿ ಬಗ್ಗಿಕೊಳ್ಳುತ್ತದೆ. ಬಾಲ್ಯದಿಂದಲೇ ಬರೆಯುತ್ತಿರುವ ಗೌಡರು, ವಿವಿಧ ಕಾಲಘಟ್ಟಗಳಲ್ಲಿ ಪ್ರಕೃತಿ, ಹೆಣ್ಣು ಪ್ರೀತಿ, ವಿರಹ, ಮುಂತಾಗಿ ಜೀವನದ ಅನಂತ ಮುಖಗಳನ್ನು ತಮ್ಮ ಕಾವ್ಯಗಳಲ್ಲಿ ಅನಾವರಣಗೊಳಿಸಿದ್ದಾರೆ. ಹತ್ತು ಸಾಲುಗಳ ಅರ್ಥಗರ್ಭಿತ ಕವಿತೆಗಳಿಂದ ಹಿಡಿದು 5 ಪುಟಗಳಷ್ಟು ದೀರ್ಘ ಕವನಗಳನ್ನು ಬರೆದಿದ್ದಾರೆ. ರೂಪಕಗಳಿಂದ ಕೂಡಿದ ಕವಿತೆಗಳಲ್ಲಿ ದೃಶ್ಯಗಳಿಗೆ ಅವರು ನೀಡುವ ತಿರುವು, ನಿರೂಪಣೆಯ ಕಲೆಗಾರಿಕೆಯಿಂದಾಗಿ ಪುನಃ ಪುನಃ ಓದಿಸಿಕೊಳ್ಳುತ್ತವೆ. ಓದುಗರಿಗೆ ರಸಾಸ್ವಾದನೆಯ ಜೊತೆಗೆ ಚಿಂತನೆಗೂ ಹಚ್ಚುತ್ತವೆ. ಜನ ಸಾಮಾನ್ಯರಿಗೂ ಪ್ರಿಯವಾಗುವ ವೈವಿಧ್ಯಮಯ ಕವಿತೆಗಳನ್ನು ಅವರು ರಚಿಸಿದ್ದಾರೆ. ಸರಳವಾದ ಪದ ಜೋಡಣೆಯಿಂದ ತಮ್ಮ ಮನದ ಭಾವನೆಗಳನ್ನು ಸಂವಹನಗೊಳಿಸುತ್ತಲೇ ಓದುಗರಿಗೆ ಆಪ್ತರಾಗುತ್ತಾರೆ. ತಮ್ಮ ಅಪೂರ್ವವಾದ ಸ್ನೇಹಮಯ ವ್ಯಕ್ತಿತ್ವದಿಂದ ಅಪಾರ ಸಂಖ್ಯೆಯ ಓದುಗರನ್ನೂ, ಅಭಿಮಾನಿಗಳನ್ನೂ ಸಂಪಾದಿಸಿದ್ದಾರೆ. ಜೀವನ ಶ್ರದ್ಧೆ, ನಿರ್ಮಲವಾದ ಜೀವನ ಪ್ರೀತಿಯನ್ನು ಬಿಂಬಿಸುವ ಕವಿತೆಗಳು ಜನಪ್ರಿಯವಾಗಿವೆ. ವಸ್ತು ವೈವಿಧ್ಯತೆ ವಿಸ್ತಾರಗಳಿಂದ ಕೂಡಿ, ಭಾಷೆಯ ವಿನೂತನ ಆವಿಷ್ಕಾರಗಳ ಜೊತೆಗೆ ಸಮೃದ್ಧವಾದ ಭಾವ ಸಾಂದ್ರತೆ, ಸಂವಹನ ಶೀಲತೆಗಳಿಂದ ಕೂಡಿದ ಅವರ ಕವಿತೆಗಳು ಕನ್ನಡಿಗರ ಸಹೃದಯ ರಸಿಕರ ಮೆಚ್ಚುಗೆ ಪಡೆದಿವೆ. ಧ್ವನಿ ಸುರುಳಿಗಳಾಗಿ ಚಲನಚಿತ್ರ ಗೀತೆಗಳಾಗಿ, ದೂರದರ್ಶನದಲ್ಲಿ ಗೌಡರ ಸಾವಿರಾರು ಕವಿತೆಗಳು ಜನಮನವನ್ನು ತಲುಪಿವೆ.

ಕವಿ ಪ್ರತಿಭೆ ಹೊರಹೊಮ್ಮಲು ಪ್ರತಿಭೆಯ ಜೊತೆಗೆ, ಮಾನಸಿಕ ಶಾಂತಿ, ಸಮತೋಲನವನ್ನು ಕಾಪಾಡಿಕೊಳ್ಳಬೇಕಾಗುತ್ತದೆ. ಮಾನಸಿಕವಾಗಿ ಸಜ್ಜುಗೊಳ್ಳಬೇಕಾಗುತ್ತದೆ. ದೇಹ, ಮನಸ್ಸುಗಳನ್ನು ಒತ್ತಡದಿಂದ ಮುಕ್ತಗೊಳಿಸಲು, ಧ್ಯಾನ ಮತ್ತು ಸಂಗೀತ ರಸಾಸ್ವಾದನೆ ಸಹಾಯಕವಾಗುತ್ತದೆ. ಉತ್ತಮವಾದ ಸಾಹಿತ್ಯ ಅಧ್ಯಯನವೂ ಮಾನಸಿಕ ಸಿದ್ಧತೆಗೆ ಸಹಕಾರಿ, ಈ ಎಲ್ಲ ಗುಣಗಳೂ ಪ್ರೊ॥ ದೊಡ್ಡರಂಗೇಗೌಡರಲ್ಲಿ ಮೇಳೈಸಿರುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು. ಅವರ ಪ್ರತಿಭೆಗೆ ಸಲ್ಲಬೇಕಾದ ಗೌರವ, ಅಧಿಕಾರಗಳಿಂದ ವಂಚಿತರಾಗಿದ್ದರೂ ಗೌಡರು ಎಲ್ಲಿಯೂ ಅದನ್ನು ಸಾರ್ವಜನಿಕ ಚರ್ಚೆಯ ವಸ್ತುವಾಗಿಸಿಲ್ಲ. ಅನೇಕ ಬಾರಿ ಅಧಿಕಾರದ ಕುರ್ಚಿಯ ಬಳಿಗೆ ಆಹ್ವಾನಿತರಾಗಿಯೂ ದಕ್ಕದಿದ್ದಾಗಲೂ, ಅದನ್ನು ಸಮತ್ವದಿಂದಲೇ ಸ್ವೀಕರಿಸಿದ ಧೀಮಂತ ಕವಿ ಶ್ರೀ ಗೌಡರು. ತಮ್ಮ ಮನಸ್ಸನ್ನು ಉನ್ನತ ಸ್ಥರದಲ್ಲಿ ಕಾಪಾಡಿಕೊಂಡಿರುವುದರಿಂದಲೇ ಅವರ ಕವಿತೆಗಳು ಓದುಗರ ಎದೆಯ ದನಿಯಾಗಿ, ಆಪ್ತವಾಗಿ ಮನಸ್ಸನ್ನು ಮುದಗೊಳಿಸುತ್ತವೆ. ಓದುಗರ ಮನಸ್ಸನ್ನು ಹಿಡಿದಿಡುವುದೇ ಒಂದು ಕವಿತೆಯ ಯಶಸ್ಸಿನ ಮಾನದಂಡ ಎನ್ನಬಹುದು.

ಕವಿತೆಗಳು ಎಲ್ಲಾ ಕಾಲಕ್ಕೂ ಸಲ್ಲುತ್ತವೆ. ಕವಿಗೆ ಕಾಲಮಿತಿ ಇದೆ. ಆದರೆ ಆತ ರಚಿಸಿದ ಕಾವ್ಯ ಅನಂತ, ನೋವು ನಲಿವು ಆಸೆ – ನಿರಾಸೆಗಳಿಗೆ ಮೀರಿದ ಧ್ವನಿಯೇ ಶ್ರೇಷ್ಠ ಕಾವ್ಯ ಅದುವೆ ಕವಿತೆಯ ಆತ್ಮ ಎನ್ನಬಹುದು. ಸಾವಿರಾರು ವರ್ಷಗಳಿಂದ ಕಾವ್ಯ ಸೃಷ್ಟಿ ನಡೆದಿದೆ. ಅನೇಕ ಕವಿಗಳು ಕಾವ್ಯ ಶಿಖರವನ್ನೇರಿ ಕಾವ್ಯ ಸೃಷ್ಟಿಸಿ ಅಜರಾಮರರಾಗಿದ್ದಾರೆ. ಆದರೂ ಮಾನವ ಜೀವನದ ಇನ್ನೆಷ್ಟೋ ಅನುಭವಗಳು ಬಾಗಿಲು ಮುಚ್ಚಿಯೇ ಕುಳಿತಿವೆ. ಅಂತಹ ನಿಗೂಢ ಸತ್ಯಗಳನ್ನು ಕಾವ್ಯದ ಮೂಲಕ ಹೊರತೆಗೆಯುವ ಕಾರ್ಯದಲ್ಲಿ ಶ್ರೀ ಗೌಡರು ತಮ್ಮದೇ ರೀತಿಯಲ್ಲಿ ತೊಡಗಿದ್ದಾರೆ. ಅವರ ದುಡಿಮೆಗೆ ಬಿಡುವಿಲ್ಲ. ಕಾಲನ ಕೃಪೆಯಿಂದ, ತಾವು ಕಂಡುಂಡ ಜೀವನಾನುಭವಗಳನ್ನೂ ಅನುಭವ ಪರಂಪರೆಗಳನ್ನು ಹೊಕ್ಕು, ಅಕ್ಷರರೂಪ ನೀಡಿ ಧ್ವನಿ ವಿಲಾಸಗಳನ್ನು ಲೇಪಿಸುವ ರಸವ್ಯಾಪಾರ ಶ್ರೀ ಗೌಡರಿಗೆ ಸಿದ್ಧಿಸಿರುವುದನ್ನು ಅವರ ಕಾವ್ಯಗಳುದ್ದಕ್ಕೂ ಕಾಣಬಹುದು. ಕಾವ್ಯ ಪ್ರಕಾರದಲ್ಲಿ ಸಾಕಷ್ಟು ಸಾಧನೆ ಮಾಡಿರುವ ಗೌಡರು ಸಾಹಸಿಗಳೂ ಹೌದು. ಬಿಡುವಿಲ್ಲದ ಅಧ್ಯಾಪನ ವೃತ್ತಿಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಲೇ ಅಗಾಧವಾಗಿ ಬೆಳೆದಿರುವ ಕವಿಗೌಡರ ಪ್ರಾಮಾಣಿಕ ದುಡಿಮೆ, ನನಗೆ  ಹಲವು ಬಾರಿ ವಿಸ್ಮಯವನ್ನುಂಟುಮಾಡಿದೆ.. ಕವನಗಳುದ್ದಕ್ಕೂ ಅವರು ಬಳಸುವ ನುಡಿಗಟ್ಟುಗಳು, ರೂಪಕಗಳು, ಉಪಮೆಗಳು, ಖಚಿತವಾಗಿ, ಹರಿತವಾಗಿ ಅದೇ ಕಾಲಕ್ಕೆ ಸಾವಧಾನವಾಗಿ ಸಾಗುತ್ತವೆ. ಅವರು ಹೇಳಬೇಕಾದ್ದನ್ನು ಪರಿಣಾಮಕಾರಿಯಾಗಿ, ಆದಷ್ಟು ಅಡಕವಾಗಿ ಹೇಳುತ್ತಾರೆ. ಗೌಡರ ಕಾವ್ಯ ಶೈಲಿಯ ಸಂಯಮ ತುಂಬ ಆರೋಗ್ಯ ಪೂರ್ಣವಾದದ್ದು, ಅರ್ಥಪೂರ್ಣವಾದದ್ದು. ಇದೇ ಅವರ ಕಾವ್ಯದ ಯಶಸ್ಸಿನ ಹಿಂದಿರುವ ಗುಟ್ಟು ಎನ್ನಬಹುದು. ಕಾವ್ಯದ ಮುಖ್ಯ ಭಾವವನ್ನು, ಪಟ್ಟು ಹಿಡಿದು ರೂಪಕಗಳಲ್ಲಿ ಕಟ್ಟಿಹಾಕುವ ಗೌಡರ ಪರಿ ಅನನ್ಯವಾದದ್ದು. ಹಲವಾರು ವೇದನೆಗಳು, ತಲ್ಲಣಗಳು ಅವರ ಕಾವ್ಯದಲ್ಲಿ ಹರಳುಗಟ್ಟಿರುತ್ತವೆ.

ಪ್ರಸ್ತುತ ಕಾಲಘಟ್ಟದ ಅನೇಕ ವೈರುಧ್ಯಗಳನ್ನು ಶ್ರೀ ಗೌಡರು ಈ ರೀತಿ ದಾಖಲಿಸುತ್ತಾರೆ. ಅವರದೊಂದು ಕವನದಲ್ಲಿ ಈ ರೀತಿ. ರಾಗಿ, ಜೋಳ ಬೆಳೆಯಬೇಕಾದಲ್ಲಿ ಬಿತ್ತಿ ಬೆಳೆದಿದ್ದೇವೆ ನಮ್ಮ ದುಷ್ಟ ಪುಢಾರಿಗಳನ್ನು ಕೆಟ್ಟ ರಾಜಕಾರಣವನ್ನು, ಆಕ್ರೋಶವನ್ನು ಸೌಮ್ಯವಾಗಿ ಆದರೆ ಪರಿಣಾಮಕಾರಿಯಾಗಿ ಕೆಲವೇ ಶಬ್ದಗಳಲ್ಲಿ ಚಿತ್ರಿಸಿದ್ದಾರೆ. ಜಾತಿಮತ, ಭಾಷೆ, ಗಡಿಗಳ ಕುರಿತು ಐಕ್ಯ ಇರಬೇಕಾದ ಭೂಮಿಯಲ್ಲಿ, ಹಿಗ್ಗಾ ಮುಗ್ಗಾ ಉರಿಸಿದ್ದೇವೆ ನಾವು, ಜಾತಿಮತಗಳ ನಡುವಿನ ದ್ವೇಷವನ್ನು, ಭಾಷೆಗಳ ಹೆಸರಲ್ಲಿ ಕಿಚ್ಚನ್ನು. ಎಂಬಲ್ಲಿ ಶ್ರೀ ಗೌಡರ ಸಾಮಾಜಿಕ ಕಳಕಳಿ, ತಲ್ಲಣಗಳು ವ್ಯಕ್ತವಾಗಿವೆ. ಪ್ರಕೃತಿ ವರ್ಣನೆಯಲ್ಲೂ ಗೌಡರು ಹಿಂದೆ ಬಿದ್ದಿಲ್ಲ, ಎಂಬುದನ್ನು ಕೆಳಗಿನ ಕವಿತೆ ಧ್ವನಿಸುತ್ತದೆ.

ಚಲಿಸುತ್ತಿವೆ ಮೋಡಗಳು, ಸರಿಯುತ್ತಿವೆ ನೆರಳುಗಳು
ಹಸಿರು ಹೊಲಗಳ ಮೇಲೆ, ಹೊಳೆವ ಬಿಸಿಲಿನ ಮಾಲೆ
ಹುಚ್ಚೆಳ್ಳು ಗಿಡಗಳ ತುಂಬ, ಹೂಗೊಂಚಲ ನಾಟ್ಯಲೀಲೆ.

ಇಲ್ಲಿ ಮೋಡ, ನೆರಳು, ಭೂಮಿ, ಬಿಸಿಲು, ನಾಟ್ಯಗಳು ರೂಪಕಗಳಾಗಿ ಓದುಗರ ಗಮನ ಸೆಳೆಯುತ್ತವೆ. ಹಾಗೆಯೇ ಸೃಷ್ಟಿಯ ಸಂಕೇತವಾಗಿ ಹುಚ್ಚೆಳ್ಳು ಹೂಗೊಂಚಲು ಕಂಡುಬರುತ್ತದೆ. ಮನುಷ್ಯ ಸಹಜವಾಗಿ ಅಲೆಮಾರಿ ಎಂಬ ಚಿತ್ರಣವನ್ನು ಗೌಡರು ತಮ್ಮ ಕವನದಲ್ಲಿ ಈ ರೀತಿ ಕಟ್ಟಿಕೊಟ್ಟಿದ್ದಾರೆ.

"ಒಂಟಿ ಅಲೆಮಾರಿ ನಾನು, ತಿರುಗಿದ ನೆಲ ಸಾಮಾನ್ಯವೇನಲ್ಲ ಒಂದೆಡೆ ನಿಂತು ನೆಲೆಯೂರಿ ಬದುಕುವುದು ನನ್ನ ಜಾಯಮಾನವೂ ಅಲ್ಲ. ಬಡವರ, ಹಸಿದವರ ತುಳಿತಕ್ಕೊಳಗಾದವರ ತಲ್ಲಣ ತಳಮಳಗಳನ್ನು ಕೆಳಗಿನ ತಮ್ಮ ಕಾವ್ಯದ ವಸ್ತುವಾಗಿಸಿದ್ದಾರೆ.

ಬೆಂಕಿ ಬಿದ್ದಿದೆ ಗುಡಿಸಲ ತುತ್ತಿನ ಚೀಲಗಳಿಗೆ
ಮೇಲೆತ್ತುವವರೇ ಇಲ್ಲ, ಬೀದಿ ತುಂಬ ಗರೀಬರ ಜಾತ್ರೆ
ಇರುಳೊಳಗೆ ಸುಖಿಸುವರು, ಬಲಾತ್ಕಾರದೊಳಗೆ ಬಲ್ಲಿದರು
ಬಿಟ್ಟಿ ಸಿಕ್ಕವರ ಮೈ ಮಾಂಸಗಳನ್ನೆಲ್ಲಾ

ಮೇಲ್ವರ್ಗದವರ ಹುನ್ನಾರಗಳ ಚಿತ್ರಣ ಮೇಲಿನ ಕಾವ್ಯದಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಬಿಸಿಲೇ ಇರಲಿ, ಮಳೆಯೇ ಬರಲಿ, ದುಡಿಯೋ ಕಾಯಕ ನನ್ನದು ಅವರ ಇವರ ಕೈಯೊಡ್ಡಿ ಬೇಡದ, ಸ್ವಂತ ಬದುಕು ನನ್ನದು ಎಂಬ ಕವನ ಅವರ ವ್ಯಕ್ತಿಗತ ಆಶಯಗಳನ್ನು ಹೊರ ಹೊಮ್ಮಿಸುತ್ತಿದೆ. ಕವಿ ಕುವೆಂಪು ಅವರಂತೆ ಗೌಡರೂ.

ಗುಡಿ, ಮಸೀದಿ ಚರ್ಚು ತೊರೆದೇ ನಡೆವ ನಿಜದ ಹಾದಿಯೊಂದೇ
ಮೌಢ್ಯಗಳಿಗೆ ಕೊಳ್ಳಿ ಹಿಡಿದು, ಮತಗಳೆಲ್ಲಕ್ಕೆ ಬೇಲಿ ಇರಿದು
ಅಂತಸ್ತಿನ ಪೊರೆ ಹರಿದು, ವ್ಯಕ್ತಿ ಪೂಜೆ ಕೋಟೆ ಬಿರಿದು

ಈ ಯುಗದ ತಪ್ತ ಜನರು ಮೊರೆದರೋ ಮೊರೆದರು ಎನ್ನುವಲ್ಲಿ ನೂರು ದೇವರ ನೂಕಾಚೆ ದೂರ ಎಂಬ ಕುವೆಂಪು ಅವರ ಧ್ವನಿಯನ್ನು ಗುರುತಿಸಬಹುದು.

ಶಕ್ತಿಶಾಲಿ ನವಯುವಕರು, ಮೆರೆದರೋ ಮೆರೆದರು
ರೊಚ್ಚಿನಿಂದ ಉಕ್ಕಿ ಉಕ್ಕಿ, ಕಿಚ್ಚಿನಿಂದ ನೆಕ್ಕಿ ನೆಕ್ಕಿ
ಕನಸು ತೊರೆದು ಜ್ವಾಲೆ ಮುಕ್ಕಿ, ಶೌರ್ಯ ತೆರೆದ ಲಾಸ್ಯ ಸಿಕ್ಕಿ
ನವ ಚಿಂತನೆ ಕೆರೆದರು ಜಡ್ಡು ಬದುಕ ತೊರೆದರು,
ಹರಿದರೋ ಹರಿದರು, ತನಿ ವಿಚಾರ ಬೀರಿದರು.

ಹೊಸ ಮನ್ವಂತರದ ಯುವಕರು ತುಳಿಯಬೇಕಾದ ದಾರಿಯನ್ನು ವಿವೇಕಾನಂದರಂತೆ ಸ್ಫೂರ್ತಿಯಿಂದ ಕರೆ ಕೊಟ್ಟಿರುವ ಗೌಡರ ಪರಿ ಅನನ್ಯವಾದದ್ದು. ಇದ್ದವರು ಆರಾಮಾಗಿರುವರಯ್ಯ, ಇಲ್ಲದವರು ನಾವೇನು ಮಾಡಬೇಕಯ್ಯ ಮುಂಜಾನೆ ಬಿಸಿಲಿಗೆ ಚಾಚುತ್ತೇವೆ ಕೈಯ ಸೋಮಾರಿ ಸೊಂಪಿಗೆ ಹರಡುತ್ತೇವೆ ಮೈಯ ಎಂಬ ಕವಿತೆ, ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ ಬಡವನಯ್ಯ ಎಂಬ ಬಸವಣ್ಣನವರ ವಚನದ ಛಾಯೆಯನ್ನು ಕಾಣಬಹುದು. ಗೌಡರು ವಚನ ಪ್ರಕಾರದ ಅನೇಕ ಕವನಗಳನ್ನು ರಚಿಸಿದ್ದಾರೆ. ಕಾಠ್ಮಂಡುವಿನ ಹಾದಿ ಕವನದಲ್ಲಿ ಅವರು ಪ್ರವಾಸದಲ್ಲಿ ಕಂಡ ಪ್ರಕೃತಿ ಗುಡ್ಡ ಬೆಟ್ಟ ಅಂಕ ಡೊಂಕು ಹಾದಿ, ಹಕ್ಕಿಗಳು, ನೀರಿನ ಝರಿಗಳು ಗಗನ ಚುಂಬಿ ವೃಕ್ಷಗಳು ಕಣ್ಣುಮುಚ್ಚಾಲೆ ಆಡುವ ಮೋಡಗಳ, ಹಿಮದ ಬೆಳ್ಳಿಬೆಟ್ಟಗಳ, ಸೇಬು ಬಣ್ಣ ದ ಕನ್ಯೆಯರ, ಮನೋಜ್ಞ ಚಿತ್ರಣ ತುಂಬ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಬಯಲು ಸೀಮೆಯ ಗ್ರಾಮೀಣ ಪರಿಸರದಲ್ಲಿ ಕಳೆದ ಅವರ ಬಾಲ್ಯದ ನೆನಪನ್ನು ತಮ್ಮದೊಂದು ಕವನದಲ್ಲಿ ಕಟ್ಟಿರುವ ರೀತಿ ಹೀಗಿದೆ.

ಮಳೆಯಿರದ ಬಯಲು ಸೀಮೆಯಲ್ಲಿ, ಅರೆಹೊಟ್ಟೆಯಲ್ಲಿ ತಂಗಳ ಸಂಗದಲ್ಲಿ, ದೊಡ್ಡ ಲಿಂಗ ಸಣ್ಣೀರನ ಸಂಗಡ, ಪಾರೋತಿ ಲಕ್ಕಪ್ಪನ ಸಂಗಡ ಸಿಂಬಳ ಸುರುಕ ಗಂಗೆಗೌರಿಯರ ಕೂಡ, ನಿಷ್ಠೆಯಿಂದ ಅಪ್ಪಮಗ ತಪ್ಪದೆ ಬೇಸಾಯ ಮಾಡುತ್ತಾರೆ, ಎಡತಾಕುತ್ತವೆ ಕ್ಷಣ ಕ್ಷಣವೂ ತಲೆಗೆ ಒಂದಿಲ್ಲೊಂದು ಬೆಂಕಿ ಬರೆಬಾಲ್ಯದಲ್ಲಿ ಕಂಡು, ಉಂಡ ಕನಸಿನ ಲೋಕದ ಅನುಭವಗಳು, ಸ್ಫುಟವಾಗಿ ಚಿತ್ರಿತವಾಗಿರುವ ಸುಂದರ ಕವಿತೆ, ಎಂಬುದು ನನ್ನ ಅನಿಸಿಕೆ. ಗೌಡರ ಕವಿತೆಗಳಲ್ಲಿರುವ ಹೊಸತನ ಸ್ವಚ್ಛಂದತೆಗಳು, ಶೈಲಿ ಸ್ವಾಗತಾರ್ಹವಾಗುತ್ತವೆ. ಕಾವ್ಯದಲ್ಲಿ ಆವಿಷ್ಕಾರಗೊಂಡ ವೈಶಿಷ್ಟ್ಯಪೂರ್ಣವಾದ ಪ್ರತಿಭೆ ಕಾವ್ಯರಸಿಕರ ಮನಸ್ಸನ್ನು ಸೆಳೆಯುತ್ತದೆ. ಸುಮಾರು ಮೂರು

ದಶಕಗಳ ಅವಧಿಯಲ್ಲಿ ಗೌಡರು ರಚಿಸಿರುವ ಕವನಗಳು ಮೈ-ಕೈ ತುಂಬಿಕೊಂಡು ತನ್ನದೇ ಆದ ನಿಶ್ಚಿತ ರೂಪು ತಳೆಯುತ್ತಾ, ಪರಿಣತಿಯತ್ತ ಸಾಗಿರುವುದನ್ನು ಗುರುತಿಸಬಹುದು. ತಮ್ಮ ಕವನಗಳಲ್ಲಿ ತಾರುಣ್ಯ ಸಹಜವಾದ ವೈಯಕ್ತಿಕ ಭಾವನೆಗಳ ಮೂಲಕ, ಸಮಸ್ಯೆಗಳೊಂದಿಗೆ ತೀವ್ರವಾದ ಹೋರಾಟ ನಡೆಸಿದ್ದಾರೆ. ನಿಜವಾದ ಕವಿ ಇಂಥ ಹೋರಾಟವನ್ನು ತನ್ನ ಅನುಭವಗಳೊಂದಿಗೆ ಸೆಣಸಾಟ ನಡೆಸಿ, ಅಂತಃಸತ್ವದ ಸಾಮರ್ಥ್ಯದಿಂದ ಮಾಡಬೇಕಾಗುತ್ತದೆ. ಗೌಡರು ತಮ್ಮ ಕಾವ್ಯಗಳಲ್ಲಿ ಲಯ, ಗೇಯತೆಗಳೊಂದಿಗೆ ಪ್ರತಿಮೆಗಳನ್ನು ಸ್ವಚ್ಛಂದವಾಗಿ ಪ್ರಯೋಗಮಾಡಿ ಸಫಲರಾಗಿದ್ದಾರೆ. ಅವರ ಬಹುಪಾಲು ಕವಿತೆಗಳಲ್ಲಿ ಎದ್ದು ಕಾಣುವ ಮತ್ತೊಂದು ಅಂಶವೆಂದರೆ ಪ್ರೀತಿ, ಪ್ರೇಮ, ವಿರಹಗಳು, ಪ್ರತಿಮಾ ಬಾಹುಳ್ಯದಿಂದ ತೀಕ್ಷ್ಣತೆ, ಭಾವನೆಗಳ ಉತ್ಕಟತೆಯಿಂದ ಕೂಡಿ, ಅನಾಯಾಸವಾಗಿ ರೂಪುಗೊಂಡಿವೆ.

ಗೌಡರು ತಮ್ಮ ಕವನಗಳಲ್ಲಿ ಬಳಸಿರುವ ಪ್ರತಿಮೆಗಳು ನೂರಾರು. ಹೆಜ್ಜೆ ಹೆಜ್ಜೆಗೆ ಎದುರಾಗುವ ಪ್ರತಿಮೆಗಳಲ್ಲಿ ಕೆಲವು ಯಾಂತ್ರಿಕವಾಗಿ ಮತ್ತು ಕೆಲವು ತೋರಿಕೆಗಾಗಿ ಕತ್ತಿ ಝಳಪಿಸುತ್ತವೆ. ಕಾವ್ಯದ ಸತ್ವ ಪ್ರಮುಖವಾಗಿ ಅವರು ಬಳಸಿರುವ ಪ್ರತಿಮೆಗಳಲ್ಲಿ, ರೂಪಕಗಳಲ್ಲಿ ಅಡಗಿದೆ. ಗೌಡರ ಕಾವ್ಯದ ವೈಶಿಷ್ಟ್ಯವೆಂದರೆ, ಕಾವ್ಯದ ಕಲಾತ್ಮಕತೆ, ಭಾವನೆಯ ಉತ್ಕಟತೆ ಹಾಗೂ ಕಲ್ಪಕತೆಗಳು ಕವಿಯ ಕಲ್ಪನಾ ವಿಲಾಸಕ್ಕೆ ಸಾಕಷ್ಟು ಸ್ವಾತಂತ್ರ್ಯ ನೀಡುತ್ತಾ ಓದುಗರನ್ನು ಚಕಿತಗೊಳಿಸಿ ಬಿಡುತ್ತವೆ. ಅನುಭವದ ಬಿಸಿ ಇದ್ದಾಗಲೇ ಕಾವ್ಯ ರಚಿಸುವ ಗೌಡರು ಅನುಭವದ ಬಿಸಿ ಆರಿದನಂತರ ದೂರದಿಂದ, ಶಾಂತವಾಗಿ, ತಟಸ್ಥನೆಲೆಯಿಂದ ನಿರ್ಲಿಪ್ತವಾಗಿ, ಪರೀಕ್ಷಿಸಿ ರೂಪಿಸುತ್ತಾರೆ. ಇದಕ್ಕೆ ಕವಿಯ ವ್ಯಕ್ತಿತ್ವ ಕಾರಣವಾಗುತ್ತದೆ. ಬಾಲ್ಯದ ಹಿಂದಿನ ಕಷ್ಟ, ನೋವುಗಳು ಕವಿಯ ಇಂದಿನ ಸಂಪತ್ತುಗಳಾಗಿ ರೂಪು ತಳೆಯುತ್ತವೆ. ಕಾವ್ಯ ಆತ್ಮನಿಷ್ಠವಾದದ್ದು. ಕವಿ ತನ್ನ ಭಾವತನ್ಮತೆಯಿಂದ ಹೊರ ಬಂದರೆ ಮಾತ್ರ ಆತನ ಕಾವ್ಯ ವಸ್ತು ನಿಷ್ಠತೆಯಿಂದ ರೂಪುತಳೆದು ಹೊಸ ಆಯಾಮವನ್ನು ದೊರಕಿಸಲು ಯತ್ನಿಸುತ್ತದೆ. ಆತ್ಮ ವಿಶ್ಲೇಷಣೆ ಆತ್ಮ ವಿಮರ್ಶೆಯಿಂದ ಕವಿ ತನ್ನ ಕವಿತೆಯಲ್ಲಿ ವಿವೇಕದ ಸ್ಥಿರವಾದ ಉನ್ನತ ಮಟ್ಟವನ್ನು ತಲುಪುತ್ತಾನೆ. ಕವಿ ತನ್ನ ಕವಿತೆಯಲ್ಲಿ ತನ್ನ ಕಳವಳ ತಳಮಳ ತಲ್ಲಣ, ರೋದನೆಗಳನ್ನು ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತಾನೆ. ಕಾವ್ಯದ ಸಂಕೀರ್ಣ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಸಂಕೀರ್ಣ ಮನಸ್ಸಿನ ಕವಿ, ಸ್ವಾಭಾವಿಕವಾಗಿ ತಾದಾತ್ಮ್ಯದ ಮೂಲಕ ಯಶಸ್ವೀ ಕಾವ್ಯ ರಚಿಸಲು ಸಾಧ್ಯ. ಗೌಡರ ಕಾವ್ಯದಲ್ಲಿ ಕಾವ್ಯ ಶಿಲ್ಪದ ಬಗ್ಗೆ, ಕಾವ್ಯ ಬಂಧದ ಬಗ್ಗೆ ಜಾಗರೂಕತೆ, ಕಾಳಜಿ ಕಂಡು ಬರುತ್ತದೆ. ಇದು ಕಾವ್ಯ ರಚಿಸಲು ಸಾಧ್ಯ. ಗೌಡರ ಕಾವ್ಯದಲ್ಲಿ ಕಾವ್ಯ ಶಿಲ್ಪದ ಬಗ್ಗೆ, ಕಾವ್ಯ ಬಂಧದ ಬಗ್ಗೆ ಜಾಗರೂಕತೆ, ಕಾಳಜಿ ಕಂಡುಬರುತ್ತದೆ. ಇದು ಕಾವ್ಯದ ಆರೋಗ್ಯದ ಕುರಿತ ಹಿತಕರ ಸಂಗತಿ. ಇದು ಕೂಡ ಅವರ ಕಾವ್ಯದಲ್ಲಿರುವ ವಸ್ತುನಿಷ್ಠತೆಯ ಸಂಕೇತ ಎನ್ನಬಹುದು. ಗೌಡರ ಕಾವ್ಯಗಳಲ್ಲಿ ಕೇಂದ್ರ ಪ್ರತಿಮೆಗಳು ಕಲಾತ್ಮಕವಾಗಿ ಬೆಳೆಯುತ್ತವೆ. ಅನುಭವದ ತಿರುಳಿಗೆ ಧಕ್ಕೆ ಬಾರದಂತೆ ಅನುಭವದ ಕೆಲವು ಅಂಶಗಳನ್ನು ರೂಪಿಸುವ ಪ್ರವೃತ್ತಿಯನ್ನು ಗೌಡರು ಬೆಳೆಸಿಕೊಂಡಿದ್ದಾರೆ.

ಸಾಮಾನ್ಯವಾದ ಮನೋಧರ್ಮಕ್ಕಿಂತ ಭಿನ್ನವಾದ, ಆದರೆ ಪಕ್ವವಾದ ಸಮತೋಲನ ಸಾಧಿಸುವ ಕಷ್ಟಸಾಧ್ಯವಾದ ಕಲೆಯನ್ನು ಗೌಡರು ಹಸ್ತಗತ ಮಾಡಿಕೊಂಡಿದ್ದಾರೆ. ಅವರ ಕವಿತೆಗಳಲ್ಲಿ ಧ್ವನಿತವಾಗುವ ಸೂಕ್ಷ್ಮ ವಿಚಾರಗಳೆಂದರೆ, ಪ್ರೀತಿ, ಪ್ರೇಮ, ಶೃಂಗಾರ ರಸಗಳು, ಹಿಂದಿನ ನೆಲೆಗಳ ನೆನಪುಗಳ ಮೇಲೆ ಸಂತೋಷ ವ್ಯಕ್ತಪಡಿಸುವ ಕವಿ, ತನ್ನ ಒಂಟಿ ತನದಲ್ಲಿಯೇ ತನ್ನ ಸುಖ ದುಃಖ ಸಂವೇದನೆಗಳನ್ನು ವ್ಯಕ್ತಪಡಿಸುವುದರಲ್ಲಿ ಪ್ರೌಢಿಮೆಯನ್ನು ಪಡೆದಿದ್ದಾರೆ. ಕವಿತೆಯ ಪ್ರಾರಂಭದಂತೆ, ಕೊನೆಯನ್ನೂ ಅತ್ಯಂತ ಆಕರ್ಷಕವಾಗಿ, ಅರ್ಥಪೂರ್ಣವಾಗಿಸುತ್ತಾರೆ. ಗೌಡರ ಮತ್ತೊಂದು ಮೌಲಿಕವಾದ ಗುಣವೆಂದರೆ, ತಮ್ಮ ಅನುಭವಕ್ಕೆ ದಕ್ಕಿದ ಸಂಗತಿಗಳನ್ನು ತಮ್ಮ ವ್ಯಕ್ತಿತ್ವದ ಭಾಗವನ್ನಾಗಿಸುವ ಅವರ ವಿಶಿಷ್ಟ ಕಲೆಗಾರಿಕೆ ಎನ್ನಬಹುದು. ಅವರದು ಅನುಭವ ಜನ್ಯ, ಹೃದಯಾಂತರಾಳದ ಅಭಿವ್ಯಕ್ತಿ, ಶ್ರೇಷ್ಠಕಾವ್ಯಕ್ಕೆ ಪೋಷಕವಾಗುವ ಸಾಮರ್ಥ್ಯ ಪಡೆದಿವೆ.

ಗೌಡರ ಕಾವ್ಯ ಪ್ರತಿಭೆ ಬಹುದೂರದ ಬೆಳಕಿನ ದಾರಿ ಕ್ರಮಿಸಿದೆ. ತನ್ನ ತೆಕ್ಕೆಗೆ ಬಂದ ಸಹೃದಯರಿಗೆ ದಾರಿ ತೋರಿದೆ, ಇನ್ನೂ ಬಹಳ ದೂರ ಕ್ರಮಿಸುವ ಪ್ರವೃತ್ತಿಯನ್ನು ತೋರಿದೆ. ಉಜ್ವಲ ಸಿದ್ಧಿಯತ್ತ ಮುಖ ಮಾಡಿರುವ ಗೌಡರು ತಮ್ಮ ಕವನಗಳಲ್ಲಿ ರೊಮ್ಯಾಂಟಿಕ್ ಆದ ಪಾತ್ರಗಳನ್ನು ದುಡಿಸಿಕೊಳ್ಳುವುದರಲ್ಲಿ ಸಮರ್ಥರಾಗಿದ್ದಾರೆ. ಬದುಕನ್ನು ಅದು ಬಂದಂತೆ ಸ್ವೀಕರಿಸುವ ಕವಿ ಮನೋಧರ್ಮ ಒಪ್ಪಿಕೊಳ್ಳುವ ಮನಃ ಸ್ಥಿತಿಯಲ್ಲಿ ಸುಂದರ ಪ್ರೇಮ ಗೀತೆಗಳು ಅರಳಿವೆ. ಗೌಡರು ತಮ್ಮ ಶೃಂಗಾರ ಕವಿತೆಗಳಲ್ಲಿ ಪ್ರೀತಿಯ ಹಲವು ಸಾಧ್ಯತೆಗಳನ್ನು ವಾಸ್ತವ ನೆಲೆಯಲ್ಲಿ ಸಿಡಿಸುತ್ತಾರೆ. ಹೆಣ್ಣಿನಲ್ಲಿರುವಂತೆ, ಗಂಡಿನಲ್ಲೂ ಇರುವ ದೌರ್ಬಲ್ಯಗಳ ಅರಿವು ಅವರಿಗಿದೆ. ಮನುಷ್ಯನಲ್ಲಿರುವ ಅಪೂರ್ಣತೆಯನ್ನು ತುಂಬುವ ಗೌಡರ ಹುಡುಕಾಟ ನಿರಂತರವಾಗಿ ಚಲನಶೀಲವಾಗಿದೆ. ಅವರ ಕಾವ್ಯಗಳಲ್ಲಿ ಗಂಡು ಹೆಣ್ಣಿನ ಸಂಬಂಧದ ಜಟಿಲತೆಯನ್ನು ಅರಿಯುವ ಪ್ರಯತ್ನ ನಿರಂತರವಾಗಿ ನಡೆಯುತ್ತದೆ. ಕಾವ್ಯದ ಆರ್ದ್ರತೆಗೆ ಬಹುಮುಖ್ಯವಾದ ಹೊಸದಾದ ನೆಲೆಯಲ್ಲಿ ವಾತ್ಸಲ್ಯ ಭಾವ ಅನಾವರಣಗೊಳ್ಳುತ್ತದೆ. ಸ್ನೇಹಭಾವದ ವಿಶ್ಲೇಷಣೆಯೂ ನಡೆಯುತ್ತದೆ. ಕವಿತೆಗೆ ಪ್ರೇಮವೊಂದೇ ವಸ್ತುವೇ? ಎಂದೂ ಕವಿ ಸಹಜವಾಗಿ ಪ್ರಶ್ನಿಸಿಕೊಳ್ಳುತ್ತಾರೆ. ಯಾಕೆಂದರೆ ಗೌಡರ ಕಾವ್ಯದ ಮೂಲ ಹೆಣ್ಣು ಮತ್ತು ಪ್ರೀತಿ ಎಂಬುದೇ ಅವರ ಪಾಲಿನ ಸತ್ಯ. ಆದ್ದರಿಂದ ಕೆಲವೇ ಕವಿತೆಗಳನ್ನು ಹೊರತುಪಡಿಸಿದರೆ ಗೌಡರ ಸಾರ್ಥಕ ಕವನಗಳಲ್ಲಿ ಪ್ರೀತಿಯೇ ಪ್ರಧಾನ ವಸ್ತು ಎಂದು ಧಾರಾಳವಾಗಿ ಹೇಳಬಹುದು. ಈ ಹುಡುಕಾಟದಲ್ಲಿ ಸಹಜವಾಗಿ ಎಂಬಂತೆ ಅನೇಕ ಸುಂದರಕವಿತೆಗಳನ್ನು ಅವರು ರಚಿಸಿದ್ದಾರೆ. ಹೊಸ ಕವಿಗಳಲ್ಲಿ ಸ್ಥಾನವನ್ನು ಪಡೆದಿದ್ದಾರೆ.

ಗೌಡರ ಕಾವ್ಯಲಹರಿ ಜಾನಪದ ಸೊಗಡಿನಿಂದಲೂ ಕೂಡಿರುತ್ತದೆ. ಅವರ ಸುಪ್ರಸಿದ್ಧ ಚಲನಚಿತ್ರ ಗೀತೆ ''ತೇರ ಏರಿ ಅಂಬರದಾಗೆ ನೇಸರು ನಗುತಾನೆ'' ಕನ್ನಡಿಗರ ಮನ, ಮನೆಗಳನ್ನು ಗೆದ್ದ ಸುಂದರ ಗೀತೆ. ಅದರಲ್ಲಿ ಬರುವ ಪ್ರಕೃತಿವರ್ಣನೆ, ಮಾವು, ಬೇವು, ತಾಳೆ, ತೆಂಗುಗಳ

ವರ್ಣನೆ ಕೇಳುಗರನ್ನು ತಮ್ಮ ಬಾಲ್ಯದ ನೆನಪಿಗೆ ಕೊಂಡೊಯ್ಯುತ್ತದೆ. ಪೇಟೆ ಪಟ್ಟಣಗಳಲ್ಲಿ ವ್ಯಾಪಕವಾಗಿ ಕಂಡುಬರುವ ವಿವಿಧ ಮಾಲಿನ್ಯಗಳು, ಜನಸಾಗರ, ಹಿಂಸೆ, ಧಾರ್ಮಿಕ ಸೋಗಲಾಡಿತನಗಳೂ ಅವರ ಕಾವ್ಯದ ವಸ್ತುಗಳಾಗಿವೆ. ನಮ್ಮೂರ ಹಾದಿಯಲ್ಲಿ ಕಲ್ಲಿಲ್ಲ ಮುಳ್ಳಿಲ್ಲ ಎಂಬ ಜನಪದ ಧಾಟಿಯಲ್ಲಿ ರಚಿಸಿದ ಕಾವ್ಯ ಈ ರೀತಿ ರೂಪುತಳೆದಿದೆ.

ನಮ್ಮೂರ ಹಾದಿಯಲ್ಲಿ ಜಂಬು ನೇರಿಲೆ ತೋಪು,  
ಬಿಮ್ಮಗೆ ಹಮ್ಮಿಕೊಂಡ ಸಾಲು ಸೀಗೆಮೆಳೆ, ಹೇರಳ ಹುಣಿಸೆ, ಹೊಂಗೆ  
ತಂಪು ಕೊಟ್ಟ ದಟ್ಟ ನೆರಳಿನ ಛಾಪು

ಪುಟ್ಟ ಬಾಳೆಸಸಿ ಒಟ್ಟಿಲು ಎಡನಿಟ್ಟಿಗೆ ಬೀಸಿ ಬೀಸಿ ಸುಳಿಗಾಳಿ ದನಿ ಇಂಪು, ಎಂಬ ಕವನ ಗ್ರಾಮೀಣ ಚಿತ್ರಣವನ್ನು ದಟ್ಟವಾಗಿ ನೀಡುತ್ತದೆ. ಗೌಡರ ಕಲ್ಪನಾ ವಿಲಾಸ ರಾಜಕಾರಣಿಗಳತ್ತಲೂ ಹರಿದಿರುವುದನ್ನು ಅವರ ಮುಖವಾಡದವರು ಎಂಬ ಕೆಳಗಿನ ಕವಿತೆ ಸಮರ್ಥವಾಗಿ ಬಿಂಬಿಸುತ್ತದೆ.

ಬಂದರೋ ಬಂದರು ಮುಖವಾಡದವರು ಬಂದರು  
ಆಸೆ ಆಮಿಷ ತೋರುವ ಖಾದಿ ಜನರು ಬಂದರು  
ನೊಂದು ಬೆಂದ ಜನರ ಕಡೆಗೆ ಬಣ್ಣದ ಮಂದಿ ಬಂದರು  
ಅವರ ನಿವರ ಆಡಿಕೊಂಡು, ತಾವು ಒಳ್ಳೆಯವರೆಂದರು.

ಆಕಾಶಕೂ ಏಣಿ ಹಾಕೋ ಈ ಕಳ್ಳ ಖದೀಮರು , ಎಂದು ರಾಜಕಾರಣಿಗಳ ಸೋಗಲಾಡಿತನವನ್ನು ಅನಾವರಣಗೊಳಿಸುತ್ತಾರೆ. ಗೌಡರು ಸಹಜ ಕವಿ. ಅವರ ಕವಿ ಕಲ್ಪನೆ ರಾಗ ರಂಜನೆಯ ಜೊತೆಗೆ ಲೋಕ ಜೀವನ ಸುಧಾರಣೆಯ ಆಶಯ ಹೊತ್ತಿವೆ... ಬದುಕಿನ ಬಗೆಯನ್ನು ಚಿತ್ರಿಸುತ್ತಲೇ ಕ್ಲಿಷ್ಟವಲ್ಲದ ಭಾವಾಭಿವ್ಯಕ್ತಿಯಾಗಿ. ಸಾಮಾನ್ಯರ ಹೃದಯವನ್ನು ತಟ್ಟುವ ಸರಳ ರಚನೆಗಳತ್ತ ಗೌಡರ ಒಲವು. ವೃತ್ತಿಯಿಂದ ಶಿಕ್ಷಕರಾದ ಗೌಡರು ಲೋಕ ಶಿಕ್ಷಣವನ್ನೂ ಕಾವ್ಯಗಳ ಮೂಲಕ ನೀಡಬಯಸುತ್ತಾರೆ. ಗ್ರಾಮೀಣ ಪರಿಸರದ ಹಿನ್ನೆಲೆ ಜೀವನದ ಅನುಭವಗಳನ್ನು ಕಸಿ ಮಾಡುತ್ತಲೇ ಸಮರ್ಥವಾಗಿ ಕಾವ್ಯವನ್ನು ದುಡಿಸಿಕೊಂಡಿದ್ದಾರೆ. ಸಮಾನತೆಯ ಹಸಿವಿನಿಂದ ಉದ್ಭವವಾದ ಸಾಹಿತ್ಯಕ ಚಳುವಳಿಗಳಲ್ಲಿ ನೇರವಾಗಿ ಭಾಗವಹಿಸದಿದ್ದರೂ, ಆ ಚಳುವಳಿಗಳ ಒಳಪದರುಗಳನ್ನು ತಮ್ಮ ಕವಿತೆಗಳಲ್ಲಿ ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ. ಮಾನವೀಯ ಸಂಬಂಧಗಳನ್ನು ಮನುಷ್ಯ ಮತ್ತು ಸಮಾಜದ ಮಧ್ಯೆ ಬದಲಾಗುತ್ತಿರುವ ಕೊಂಡಿಗಳನ್ನು ಬೆಸೆಯುತ್ತಲೇ ಪ್ರೀತಿ ಕ್ರೌರ್ಯಗಳ ಹೊಸ ಸಾಂಸ್ಕೃತಿಕ ಸಂದರ್ಭಕ್ಕೆ ಅರ್ಥೈಸುತ್ತಾರೆ. ತನ್ಮೂಲಕ ಸಮಕಾಲೀನ ಜೀವನದ ತುಡಿತಕ್ಕೆ ಶಕ್ತಿಯುತವಾದ ರೂಪಕವನ್ನೂ ನೀಡುತ್ತಾರೆ. ತನ್ನದಲ್ಲದ ಸಂಸ್ಕೃತಿಯ ಹೊರಗಿದ್ದುಕೊಂಡೇ ಹೊಸ ಕನಸುಗಳನ್ನು ಕಟ್ಟಿಕೊಡುವ ಗೌಡರ ಪರಿ ಅನನ್ಯವಾದದ್ದು.

ಸಮಕಾಲೀನ ಸಂದರ್ಭದ ಅನೇಕ ಸವಲತ್ತುಗಳು, ಜಾಗತೀಕರಣ, ಉದಾರೀಕರಣ, ಕೊಳ್ಳುಬಾಕ ನೀತಿಗಳು ಸಮಾಜದಲ್ಲಿ ತೋರಿಕೆಗೆ ಭವ್ಯವಾಗಿ ಕಂಡರೂ, ನಾವು ಕಳೆದುಕೊಂಡಿದ್ದೇನು ಮತ್ತು ಕಳೆದುಕೊಳ್ಳುತ್ತಿರುವುದೇನು? ಎಂಬುದನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಗೌಡರ ಪಾತ್ರಗಳು ಮತ್ತು ಸನ್ನಿವೇಶಗಳು ಕಾವ್ಯದಲ್ಲಿ ರೂಪಕದ ಹಂದರವನ್ನು ಕಟ್ಟಿಕೊಳ್ಳುವುದರಿಂದಾಗಿ, ವಿವಿಧ ಅರ್ಥಧ್ವನಿಗಳನ್ನು ಹೊಮ್ಮಿಸುವುದರಲ್ಲಿ ಸಫಲವಾಗಿವೆ. ಆಧುನಿಕ ಜೀವನದ ಅನೇಕ ಪಲ್ಲಟಗಳ ವಿವಿಧ ಅವಸ್ಥೆಗಳನ್ನು ಗೌಡರು ತಮ್ಮ ಕವನಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಬದಲಾವಣೆಗಳಿಗೆ ಮೂಕ ಸಾಕ್ಷಿಯಾಗಿದ್ದಾರೆ. ಸಮಕಾಲೀನ ನಾಗರೀಕತೆಯ ಬದಲಾವಣೆಗೆ ಸಿಲುಕಿರುವ ಹೃದಯವಂತನ ಇಂದಿನ ಸ್ಥಿತಿಗೆ ಪರಿಪೂರ್ಣವಾದ ರೂಪಕಗಳ ಮೂಲಕ ಜೀವ ತುಂಬುತ್ತಾರೆ. ಈ ಕಾರಣಕ್ಕಾಗಿಯೇ ಗೌಡರ ಕವನಗಳು ಸರಳವಾಗಿ, ಪಾರದರ್ಶಕವಾಗಿ, ಅರ್ಥವಿನ್ಯಾಸವನ್ನು ಒದಗಿಸುತ್ತವೆ.

ಗೌಡರ ಕವನಗಳಲ್ಲಿ ಗ್ರಾಮೀಣ ಬದುಕಿನ ಚಿತ್ರಣವಿದೆ. ಐತಿಹಾಸಿಕ ಪ್ರಜ್ಞೆ ಇದೆ. ಬದುಕಿನ ಸಂಕೀರ್ಣತೆಯ ಅರಿವಿದೆ. ಅಭಿವ್ಯಕ್ತಿಗಾಗಿ ಶಬ್ದ ಸಂಪತ್ತಿದೆ. ಅನುಭವ ಭಂಡಾರದ ಹೊಸ ಪದಗಳ ಸೃಷ್ಟಿಯೂ ಕಂಡುಬರುತ್ತದೆ. ಸಂಕೇತ ಭರಿತ ಕವನಗಳು ಒಂದೇ ಓದಿಗೆ ದಕ್ಕದಿದ್ದರೂ, ಹೃದಯಕ್ಕೆ ತಟ್ಟುವಂತಿದೆ. ಕವನದ ಸಾಲುಗಳು ಕಿವಿಯಲ್ಲಿ ಅನುಕರಣಿಸುತ್ತಿರುತ್ತವೆ. ಕವನ ಕಟ್ಟುವ ಕಲೆಗಾರಿಕೆ, ಜೀವನವನ್ನು ದರ್ಶಿಸುವ ಕ್ರಮಬದ್ಧತೆ, ಸಂವೇದನಾ ತೀವ್ರತೆ ಸಂಯಮದ ಪದ ಬಳಕೆ ದೊಡ್ಡರಂಗೇಗೌಡರ ಕಾವ್ಯದ ವೈಶಿಷ್ಟ್ಯ. ದಲಿತರ ಹೆಪ್ಪುಗಟ್ಟಿದ ನೋವುಗಳು, ಸ್ತ್ರೀಯರ ಅಸಹಾಯಕ ಅಳಲು, ಆಧುನಿಕರ ಅನಂತ ಸಮಸ್ಯೆಗಳು, ಮಾನವೀಯತೆಗೆ ಒತ್ತುಕೊಡುವ ಅನೇಕ ಅಂಶಗಳು ಅವರ ಕವನಗಳಲ್ಲಿ ಅಲ್ಲಲ್ಲಿ ಇಣುಕಿದರೂ, ಅವರು ಮುಖ್ಯವಾಗಿ ಶೃಂಗಾರ ಕವಿ, ಜೊತೆಗೆ ವೈಜ್ಞಾನಿಕ, ವೈಚಾರಿಕ ಚಿಂತಕರಾಗಿಯೂ ಕಂಡು ಬರುತ್ತಾರೆ.

ಅಸೀಮರೂಪಿ ಅಂಬರದಲ್ಲಿ ಮುಂಗಾರು ಮೂಡಿದೆ,
ವಸುಂಧರೆಯ ಹೂಮೈಯಲ್ಲಿ ಹೊನ್ನಾರು ಹೂಡಿದೆ
ಮಸೆವ ಬಿಸಿಲು ಮಾಗಿರುವಲ್ಲಿ ಮಂದ ಹಾಸ ಕೂಡಿದೆ,
ಹಸಿದ ರೈತ ಸಂಕುಲದಲ್ಲಿ ಹೊಸ ಆಸೆ ಹಾಡಿದೆ.

ಇದು ನನ್ನ ಮೆಚ್ಚಿನ ಕವಿತೆ, ನಾನು ಮೆಚ್ಚಿಕೊಂಡಿರುವ ಹೊಸ ಕವಿಗಳಲ್ಲಿ ಗೆಳೆಯ ಶ್ರೀ ದೊಡ್ಡರಂಗೇಗೌಡರೂ ಒಬ್ಬರು. ಅವರ ಅನೇಕ ಕವಿತೆಗಳನ್ನು ನಾನು ಇಷ್ಟಪಟ್ಟಿದ್ದೇನೆ. ಹಲವು ಬಾರಿ ಮೆಲಕು ಹಾಕಿದ್ದೇನೆ. ಅವರ ಕವಿತೆಗಳಲ್ಲಿ ಕಂಡುಬರುವ ಸೊಗಸು, ಸೊಬಗು, ಪ್ರಾಮಾಣಿಕತೆ ಮತ್ತು ತಾಜಾತನಗಳು ನನ್ನ ಮನಸ್ಸನ್ನು ಆರ್ದ್ರಗೊಳಿಸಿವೆ ಎಂದರೆ ಅತಿಶಯೋಕ್ತಿಯಲ್ಲ.

❑



# ಕಾವ್ಯೋದ್ಯಾನದ ಮಂದಾರ ಹೂವು

• ಎಸ್.ಆರ್. ರಾಮಸ್ವಾಮಿ

ಒಲುಮೆ ಸಿರಿಯ ಕಂಡು ಬಯಕೆ ಸಿಹಿಯ ಉಂಡು ಪ್ರೀತಿಯ ಮಾತಾಡಿ ಬಾಳು ರಂಗಾಗಿಸಿಕೊಂಡ, ಒಳ್ಳೆ ನೀತಿ ತಿಳ್ಕೊಂಡು ಎಲ್ಲಾರೂ ಮೆಚ್ಕೊಹಾಗೆ ನಡೆದ, ಜೀವಂತ ಶಿಲೆಯೊಳಗೆ ಸಂಗೀತ ಸ್ವರಸ್ವರದ ಏರಿಳಿತ ಕಂಡ, ಬದುಕಿನಾ ಕಡಲಿನಲಿ ನೆನಪಿನಾ ದೋಣಿಯಲಿ ತೇಲಿದ, ಸಾಧನೆ ತೋರಿದ ಗೆಲವಿನ ಬಂಗಾರಿಗೆ ಸಾವಿರ ವಂದನೆ ಸಲ್ಲಿಸಿದ, ನಲಿದಾಡುವ ಕಾಮನಬಿಲ್ಲಿನೊಡನೆಯೂ ಹರಿದಾಡುವ ಮುಗಿಲಿನ ಮಿಂಚಿನೊಡನೆಯೂ ಸಂವಾದ ನಡೆಸಿದ, ಬದುಕಿನ ಬಂಗಾರದ ದಿನಕ್ಕೆ ಮಾಗಿಯ ಕನಸಿನಲ್ಲಿ ನಡೆಮಡಿ ಹಾಸಿದ ನನ್ನ ಆತ್ಮೀಯ ದೊಡ್ಡರಂಗೇಗೌಡರು ಅರವತ್ತು ವರ್ಷ ದಾಟಿ ಅರವತ್ತೊಂದನೆ ವಸಂತಕ್ಕೆ ಕಾಲಿರಿಸುತ್ತಿರುವ ಸಂದರ್ಭ ನನಗೂ ನನ್ನಂಥ ಅವರ ಅಸಂಖ್ಯ ಅಭಿಮಾನಿಗಳಿಗೂ ಸಂತಸದ ಉತ್ಸವವಾಗಿದೆ.

ಹತ್ತಿರ ಹತ್ತಿರ ಮೂರೂವರೆ ದಶಕಗಳ ಹಿಂದಿನಿಂದ ದೊಡ್ಡರಂಗೇಗೌಡರ ಗೆಳೆತನದ ಭಾಗ್ಯ ನನಗೆ ದೊರೆತಿದೆ. ಮೊದಲ ಪರಿಚಯದ ವೇಳೆಗೆ ಅವರು ಆಗಷ್ಟೆ ಎಂ.ಎ. ಮುಗಿಸಿದ್ದರು. ತೀರಾ ಬಡತನದ ಹಿನ್ನೆಲೆಯಿಂದ ಬಂದ ಅವರ ವಿದ್ಯಾಭ್ಯಾಸ ಒಂದು ಹರಸಾಹಸವೇ ಆಗಿದ್ದುದನ್ನು ಗಮನಿಸಿದ್ದೆ. ಅತ್ಯಂತ ಪ್ರತಿಕೂಲ ಪರಿಸ್ಥಿತಿಗಳನ್ನು ದಿಟ್ಟತನದಿಂದೆದುರಿಸಿ ಛಲದಿಂದ ಓದು ಸಾಗಿಸಿದ್ದರೆಂಬುದು ಅವರನ್ನು ನನಗೆ ಆತ್ಮೀಯರನ್ನಾಗಿಸಿತ್ತು. ಆದರೆ ಆ ಬವಣೆಯ ಕಾಲಾವಧಿಯಲ್ಲಿಯೂ ಅವರನ್ನು ನೋಡುವಾಗ, ಅವರ ಕಣ್ಣ ಮಿಂಚನ್ನು ಗಮನಿಸುವಾಗ, ಅವರೊಳಗೆ ಒಬ್ಬ ಸಾಧಕ ಅಡಗಿ ಕುಳಿತಿದ್ದಾನೆ, ಹೊರಬರಲು ಕಾಯುತ್ತಿದ್ದಾನೆ ಎಂದು ನನಗೆ ಅನಿಸದಿರಲಿಲ್ಲ. ಆ ನಿರೀಕ್ಷೆ ಸುಳ್ಳಾಗಲಿಲ್ಲ. ಅವರ ಮೊದಮೊದಲ ರಚನೆಗಳಲ್ಲೊಂದಾದ 'ಕಣ್ಣು ನಾಲಗೆ ಕಡಲು' 1972ರಲ್ಲಿಯೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿತು. ಆಗ ಅವರಿಗೆ ಇಪ್ಪತ್ತೈದರ ಹರೆಯ. ಅದಾದ ನಾಲ್ಕೈದೇ ವರ್ಷಗಳೊಳಗೆ (1977) ರಾಜಧಾನಿ ನವದೆಹಲಿಯಲ್ಲಿ ನಡೆದ ಗಣರಾಜ್ಯೋತ್ಸವ ಸಂದರ್ಭದ ರಾಷ್ಟ್ರಮಟ್ಟದ ವಾರ್ಷಿಕ ಸರ್ವಭಾಷಾ ಕವಿಗೋಷ್ಠಿಯಲ್ಲಿ

ಕರ್ನಾಟಕವನ್ನು ಪ್ರತಿನಿಧಿಸಲು ಅವರು ಆಮಂತ್ರಿತರಾದುದು ನನಗೂ ನನ್ನ ಮಿತ್ರವರ್ಗಕ್ಕೂ ತುಂಬಾ ಆನಂದವನ್ನೂ ಹೆಮ್ಮೆಯನ್ನು ತಂದಿತು.

1972ರಲ್ಲಿ ಬೆಂಗಳೂರಿನ ಪ್ರತಿಷ್ಠಿತ ಎಸ್.ಎಲ್.ಎನ್. ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಶಿಕ್ಷಣ ಕ್ಷೇತ್ರಕ್ಕೆ ಸೇರಿಕೊಂಡ ದೊಡ್ಡರಂಗೇಗೌಡರು ಅಲ್ಲಿ ಮೂವತ್ತೆರಡು ವರ್ಷ ಕಾಲ ಸೇವೆ ಸಲ್ಲಿಸಿ ಪ್ರಾಧ್ಯಾಪಕರೂ ಕಡೆಯ ಐದು ವರ್ಷಗಳ ಅಲ್ಲಿಯ ಪದವಿಪೂರ್ವ ಕಾಲೇಜಿನ ಪ್ರಾಚಾರ್ಯರೂ ಆಗಿ ಎರಡು ವರ್ಷ ಹಿಂದೆ (2004) ನಿವೃತ್ತರಾದರು. ಇದೀಗ ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸ್ನಾತಕೋತ್ತರ ಅಧ್ಯಯನ ಪೀಠದ ನಿರ್ದೇಶಕರಾಗಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಈ ಹೊಣೆಗಾರಿಕೆಗಳ ನಡುನಡುವೆಯೇ ಅವರಿಂದ ಎಷ್ಟು ವಿಪುಲ ಸಾಹಿತ್ಯ ನಿರ್ಮಾಣಗೊಂಡಿದೆಯೆಂಬುದು ವಿಸ್ಮಯವಾಗಿದೆ.

ಅನುದಿನದ ನಡಿಗೆ ತಾಳ,
ಪಯಣವೇ ಹೆಜ್ಜೆ ಮೇಳ.
ಐರಿಳಿತ ಲಯದ ಚಹರೆ
ಹೃದ್ಗೀತ ನಾದ ಸೂರೆ!

17109

ಎಲ್ಲೆಲ್ಲೊ ಏನೊ ನೋಡಿ
ಅಂತರಾಳ ಗಾನ ಮಾಡಿ
ಹೇಗೆ ಹೇಗೊ ನಾನು ಹಾಡಿ
ಹರಿದಿಹುದು ಕಾವ್ಯ ಕೋಡಿ!

ಅವರ ಗೀತೆಗಳು ಹಾಗೂ ಕಾವ್ಯಕೃತಿ ಸಂಚಯಗಳೇ ಇಪ್ಪತ್ತೈದಕ್ಕೂ ಮಿಕ್ಕಿವೆ. ಪ್ರಬಂಧಗಳು ಮತ್ತು ಸಾಹಿತ್ಯಾವಲೋಕನಕ್ಕೂ ವಿಮರ್ಶೆಗೂ ಮೀಸಲಾದ ಗದ್ಯಕೃತಿಗಳು ಹದಿನಾರರಷ್ಟಿವೆ. ಇವಲ್ಲದೆ ಪ್ರಗಾಥಗಳು, ಭಕ್ತಿಗೀತೆಗಳು ಮೊದಲಾದವನ್ನೂ ಬರೆದಿದ್ದಾರೆ. ಅವರ 'ಪ್ರೀತಿ ಪ್ರಗಾಥ' ಮುದ್ದಣ ಕಾವ್ಯಪ್ರಶಸ್ತಿಗೆ ಪಾತ್ರವಾಯಿತು (1990). ಹೀಗೆ ಗಾತ್ರದಲ್ಲಿಯೂ ಗುಣದಲ್ಲಿಯೂ ಬೆರಗುಗೊಳಿಸುವಷ್ಟು ಪ್ರಮಾಣದ ಸಾಹಿತ್ಯಸೃಷ್ಟಿ ಅವರಿಂದ ಆಗಿದೆ. ರಾಜ್ಯೋತ್ಸವ ಪ್ರಶಸ್ತಿ (1999), ಭಕ್ತಿಗೀತೆಗಾಗಿ ಆರ್ಯಭಟ ಪ್ರಶಸ್ತಿ (1999), ಕೆಂಪೇಗೌಡ ಪ್ರಶಸ್ತಿ (2000), ವರ್ಧಮಾನ ಮಹಾವೀರ ಪ್ರಶಸ್ತಿ (2002) ಮೊದಲಾದ ಗೌರವಗಳು ಅವರನ್ನರಸಿ ಬಂದಿವೆ. ಇತ್ತೀಚೆಗೆ ಕುವೆಂಪು ಗೆಳೆಯರ ಬಳಗದ ವತಿಯಿಂದ ವಿಶ್ವಮಾನವ ಪ್ರಶಸ್ತಿಯೂ ಅವರಿಗೆ ಸಂದಿದೆ.

'ಕನ್ನಡ ನವೋದಯ ಕಾವ್ಯ' ಕುರಿತ ಸಂಪ್ರಬಂಧಕ್ಕಾಗಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಅವರಿಗೆ ಡಾಕ್ಟರೇಟ್ ಪದವಿ ಪ್ರಾಪ್ತವಾಗಿದೆ (2004).

ದೊಡ್ಡರಂಗೇಗೌಡರ 'ಗೀತವೈಭವ', 'ಕಾವ್ಯಕಾವೇರಿ' ಮೊದಲಾದ ಐವತ್ತಕ್ಕೂ ಹೆಚ್ಚು ಭಾವಗೀತ-ಧ್ವನಿಸುರಳಿಗಳು ಸುಗಮ ಸಂಗೀತ ಕ್ಷೇತ್ರದಲ್ಲಿ ಅವರ ಸ್ಥಾನವನ್ನು ಸ್ಥಿರಗೊಳಿಸಿವೆ. ಧ್ವನಿಸುರುಳಿಗಳು ಬಳಕೆಗೆ ಬರುವುದಕ್ಕೆ ಹಿಂದೆಯೇ ಅವರ 'ಮಾವು-ಬೇವು' ಲಾಂಗ್-ಪ್ಲೇ ರೆಕಾರ್ಡ್ ಮಾರಾಟದ ದಾಖಲೆ ಮಾಡಿತ್ತು.

ದೊಡ್ಡರಂಗೇಗೌಡರಿಗೆ ಅತಿಶಯ ಜನಪ್ರಿಯತೆ ಲಭಿಸಿರುವುದು ಅವರ ಚಿತ್ರಗೀತೆಗಳಿಂದಾಗಿ. ಅವರಷ್ಟು ದೊಡ್ಡ ಪ್ರಮಾಣದಲ್ಲಿ ಚಿತ್ರಗೀತಸಾಹಿತ್ಯ ರಚಿಸಿರುವವರು ಹಲವರಷ್ಟೆ ಇದ್ದಾರು. 'ಮಾಗಿಯ ಕನಸು'ವಿನಿಂದ ಹಿಡಿದು ಈಚಿನ 'ಸ್ಪರ್ಶ' ಮೊದಲಾದ ಚಿತ್ರಗಳವರೆಗೆ ಅವರು ರಚಿಸಿರುವ ಚಿತ್ರಗೀತೆಗಳ ಸಂಖ್ಯೆ ಹತ್ತಿರ ಹತ್ತಿರ ಆರುನೂರೇ ಇದ್ದೀತು. ಸ್ವಭಾವತಃ ಉತ್ತಮ ಕವಿಯಾದ ಅವರು ಚಿತ್ರಗೀತೆ ರಚನೆಯಂಥ ಕ್ಷೇತ್ರಕ್ಕೆ ಮನತೆತ್ತುದು ಚಿತ್ರರಸಿಕರ ಪಾಲಿಗೆ ಭಾಗ್ಯವಾಯಿತು. 'ಹದ್ದಿನ ಕಣ್ಣು' ಮೊದಲಾದ ಹಲವು ಚಿತ್ರಗಳಿಗೆ ಸಂಭಾಷಣೆಯನ್ನೂ ಅವರು ಬರೆದರು. ಚಿತ್ರಗೀತೆರಚನೆಯ ಕ್ಷೇತ್ರದಲ್ಲಿ ಅವರಿಗೆ ಎಷ್ಟು ಯಶ ದೊರೆಯಿತೆಂದರೆ ಅವರ ಇತರ ಮುಖಗಳ ಗಟ್ಟಿ ಕೆಲಸವನ್ನೆಲ್ಲ ಮರೆಯಿಸುವಷ್ಟು!

ಕಾವ್ಯದ ಪ್ರಕಾರ ಬೇರೆ, ಚಿತ್ರಗೀತದ ಪ್ರಕಾರ ಬೇರೆ. ಎರಡರ ಸವಾಲುಗಳು ಬೇರೆಬೇರೆಯೆ. ಗೇಯಗುಣ, ಸರಳತೆ, ಭಾಷಾಲಾಲಿತ್ಯ, ಆಡುಮಾತಿಗೆ ಸಾಮಿಪ್ಯ, ಶೀಘ್ರ ಸಂವಹನ, ವಿಶಿಷ್ಟ ಸಂದರ್ಭಬೋಧೆ, ಸನ್ನಿವೇಶ ಸ್ಫೋಟನ, ಸಾಲುಗಳ ಪರಿಮಿತಿ ಮೊದಲಾದ ಅಂಶಗಳು ಚಿತ್ರಗೀತದಲ್ಲಿ ಮುಖ್ಯವಾಗುತ್ತವೆ. ಕವಿಗಳೆಲ್ಲ ಚಿತ್ರಗೀತಕಾರರಾಗಲಾರರು. ಈ ವಾಸ್ತವತೆಯನ್ನು ಗಮನಿಸಿದಾಗ ಸ್ವತಂತ್ರ ಭಾವಗೀತಾದಿ ರಚನೆ, ಚಿತ್ರಗೀತರಚನೆ ಈ ಎರಡೂ ಕ್ಷೇತ್ರಗಳಲ್ಲಿ ದೊಡ್ಡರಂಗೇಗೌಡರಿಂದ ಮೇಲ್ಮಟ್ಟದ ಸಾಧನೆಯಾಗಿರುವುದು ಹೆಚ್ಚಿನ ಮೆಚ್ಚಿಕೆಗೆ ಅರ್ಹವಾದ ಸಂಗತಿ ಎನಿಸದಿರದು. ಚಿತ್ರಗೀತವನ್ನು ಸಾಂದರ್ಭಿಕತೆಯ ಸ್ತರದಿಂದ ಎಷ್ಟೋ ಮಜಲು ಮೇಲೇರಿಸಿದ್ದಾರೆ ಅವರು. ಮೌಲ್ಯಪ್ರಜ್ಞೆ, ಮೌಲ್ಯಾನುಸಂಧಾನಗಳನ್ನು ಶಿಥಿಲಗೊಳಿಸದ ಆಸ್ವಾದನೀಯತೆಯನ್ನು ಅವರ ಗೀತೆಗಳು ಸಾಧಿಸಿವೆ.

ಅವರ ಉತ್ಕೃಷ್ಟ ಗೀತಗಳು ಅಗ್ರಪಂಕ್ತಿಯ ಸಂಗೀತ ನಿರ್ದೇಶಕರಿಂದ (ವಿಜಯಭಾಸ್ಕರ್, ರಾಜನ್-ನಾಗೇಂದ್ರ ಇತ್ಯಾದಿ) ಸಂಯೋಜನೆಗೊಂಡು ಶ್ರೇಷ್ಠ ಗಾಯಕ-ಗಾಯಕಿಯರಿಂದ (ಎಸ್.ಪಿ. ಬಾಲಸುಬ್ರಹ್ಮಣ್ಯಂ, ಎಸ್. ಜಾನಕಿ ಇತ್ಯಾದಿ) ಮುಖೋದ್ಗತಗೊಂಡಿರುವುದು ಒಂದು ಮಣಿಕಾಂಚನ ಸಂಯೋಗವೆನ್ನಬೇಕು.

'ಪರಸಂಗದ ಗೆಂಡೆತಿಮ್ಮ' ಚಿತ್ರಕ್ಕಾಗಿ (1978) ದೊಡ್ಡರಂಗೇಗೌಡರು ನೀಡಿದ

"ನೋಟದಾಗೆ ನಗೆಯಾ ಮೀಟಿ
ಮೋಜಿನಾಗೆ ಎಲ್ಲೆಯ ದಾಟಿ
ಮೋಡಿಯ ಮಾಡಿದೋಳ ಪರಸಂಗ ಐತೆ"

"ತೇರಾ ಏರಿ ಅಂಬರದಾಗೆ ನೇಸರು ನಗುತಾನೆ
ಮರಗಿಡ ತೂಗ್ಯಾವೇ, ಹಕ್ಕಿ ಹಾಡ್ಯಾವೇ
ಬೀರ್‍ಯಾವೇ-ಚೆಲುವ ಬೀರ್‍ಯಾವೇ"

'ಆಲೆ ಮನೆ' ಚಿತ್ರಕ್ಕಾಗಿ (1982) ಅವರು ಬರೆದ

"ನಮ್ಮೂರ ಮಂದಾರ ಹೂವೇ
ನನ್ನೊಲುಮೆ ಬಾಂದಳದ ಚೆಲುವೇ
ಬಳಿ ಬಂದು ಬಾಳನ್ನು ಬೆಳಗು; ನನ್ನ
ಬರಿದಾದ ಮನದಲ್ಲಿ ಮಿನುಗು"

ಇವುಗಳಷ್ಟು ಜನಪ್ರಿಯತೆ ಗಳಿಸಿಕೊಂಡ ಚಿತ್ರಗೀತೆಗಳು ಕಳೆದು ಮೂರು ದಶಕಗಳಲ್ಲಿ ಬೆರಳೆಣಿಕೆಯಷ್ಟೆ ಇದ್ದಾವು.

"ಜನ್ಮ ನೀಡಿದಾ ಭೂಮಿತಾಯಿಯ
ನಾ ಹೇಗೆ ತಾನೆ ಮರೆಯಲಿ?
ಅನ್ನ ನೀಡಿದಾ ಈ ಮಣ್ಣನು
ನಾ ಹೇಗೆ ತಾನೆ ತೊರೆಯಲಿ?

ಈ ಗೌರಿ ಈ ಗಂಗೆ ಹಾಲು ಕುಡಿದೆ,
ಓಡೋಡಿ ನಲಿದೆ, ಊರೆಲ್ಲ ಕುಣಿದೆ.
ಕಾಳವ್ವ ಸುಬ್ಬವ್ವ ನನ್ನ ಎತ್ತಾಡಿ
ಹರಸಿದಾ ತಾಯಿಯರ ಹೇಗೆ ಮರೆಯಲಿ?"

('ಪಡುವಾರಳ್ಳಿ ಪಾಂಡವರು', 1978)

ಇಂಥ ಹತ್ತಾರು ಗೀತೆಗಳು ಸ್ವತಂತ್ರ ಕವನಗಳಾಗಿಯೂ ಮೆರೆಯಬಲ್ಲವು.

ದೊಡ್ಡರಂಗೇಗೌಡರ ಹಲವಾರು ಚಿತ್ರಗೀತೆಗಳು ಆ ವರ್ಷಗಳ ಶ್ರೇಷ್ಠ ಗೀತೆಗಳೆಂದು ಪ್ರಶಸ್ತಿ-ಪದಕಗಳನ್ನು ಪಡೆದುಕೊಂಡವು. ಅವರ 'ತೇರಾ ಏರಿ' ಗೀತ ಮಹಾರಾಷ್ಟ್ರದ ಪಠ್ಯಪುಸ್ತಕವೊಂದರಲ್ಲಿ ಸೇರ್ಪಡೆಯಾಗಿತ್ತು. ಚಿತ್ರಗೀತವೊಂದಕ್ಕೆ ಇಂಥ ಮಾನ್ಯತೆ ದೊರೆತ ನಿದರ್ಶನ ಬಹುಶಃ ಬೇರೆ ಇಲ್ಲವೇನೊ.

ಕನ್ನಡಿಗರ ಆಮಂತ್ರಣದಂತೆ ಇಂಗ್ಲೆಂಡ್, ಜರ್ಮನಿ, ಅಮೆರಿಕಗಳಲ್ಲಿ ಪ್ರವಾಸ ಮಾಡಿ ಸಾಹಿತ್ಯಕ-ಸಾಂಸ್ಕೃತಿಕ ಪ್ರಸಾರೋಪನ್ಯಾಸಗಳನ್ನು ನೀಡಿದ್ದಾರೆ, ದೊಡ್ಡರಂಗೇಗೌಡರು. 2004ರಲ್ಲಿ ಅಮೆರಿಕಾದಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದಲ್ಲಿಯೂ ರಾಜ್ಯದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು. ಅವರದು ಕ್ರಿಯಾಶೀಲ ವ್ಯಕ್ತಿತ್ವ. ಸದಾ ಒಂದಲ್ಲ ಒಂದು ರಚನಾತ್ಮಕ ಕಾರ್ಯದಲ್ಲಿ ತೊಡಗಿರುತ್ತಾರೆ. ನಾಡಿನೆಲ್ಲೆಡೆ ಅವರಿಂದ ಸಾಹಿತ್ಯೋಪನ್ಯಾಸಗಳು ವರ್ಷಗಳುದ್ದಕ್ಕೂ ನಡೆದಿವೆ. ಹಲವಾರು ಪತ್ರಿಕೆಗಳಲ್ಲಿ ಅಂಕಣಗಳನ್ನು ಬರೆದಿದ್ದಾರೆ. ಇತ್ತೀಚೆಗೆ 'ಆದಿಚುಂಚನಗಿರಿ' ಮಾಸಪತ್ರಿಕೆಯ ಸಂಪಾದಕರಾಗಿಯೂ ಹೊಣೆ ಹೊತ್ತಿದ್ದಾರೆ. ಹಲವಾರು ಸಾಹಿತ್ಯ ಪ್ರಕಟನ ಯೋಜನೆಗಳಿಗೆ ವಿಧವಿಧವಾದ ಯೋಗದಾನ ಮಾಡಿದ್ದಾರೆ. ಎಷ್ಟೋ ವರ್ಷಗಳಿಂದ ಜಾನಪದ ಸಾಹಿತ್ಯ ಸಂಗ್ರಹಣೆಗಾಗಿ ಶ್ರಮಿಸಿದ್ದಾರೆ. ಕೆಲ ಕಾಲ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಸದಸ್ಯರಾಗಿದ್ದರು. ಈಗಲೂ (2006) ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಗೌರವ ಸದಸ್ಯರಾಗಿದ್ದಾರೆ. ಅವರ ನಾಡು-ನುಡಿಯ ಸೇವೆ ಹೀಗೆ ಅವಿಶ್ರಾಂತ.

ಅವರ ಪತ್ನಿ ರಾಜೇಶ್ವರಿಗೌಡ ಅವರು ದೊಡ್ಡರಂಗೇಗೌಡರಿಗೆ ಅವರ ಕಾರ್ಯದಲ್ಲಿ ನಿರಂತರ ಸಾಹಚರ್ಯ ಒದಗಿಸಿರುವುದಲ್ಲದೆ ಸ್ವಯಂ ಲೇಖಕಿ, ಸಂಶೋಧಕಿಯಾಗಿದ್ದಾರೆ.

ದೊಡ್ಡರಂಗೇಗೌಡರ ಷಷ್ಟ್ಯಬ್ದಿ ಸಂದರ್ಭದಲ್ಲಿ ಅವರಿಗೂ ಅವರ ಪರಿವಾರಕ್ಕೂ ಎಲ್ಲ ಶ್ರೇಯಸ್ಸೂ ಕೂಡಿಬರಲೆಂದು ಹಾರೈಸುವೆ.

❑



# ದೊಡ್ಡರಂಗೇಗೌಡರ ಕಾವ್ಯದಲ್ಲಿ ನಿಸರ್ಗ ಚಿತ್ರಣ

● ಸೋಮಶಂಕರ್ ಎಸ್.

ನಿಸರ್ಗದ ರಮ್ಯ ದೃಶ್ಯಾವಳಿಗಳನ್ನು ಕಂಡು ಮನಸೋಲದ ಕವಿ ಕನ್ನಡ ನಾಡಿನಲ್ಲಿ ಬಹುಶ: ಇಲ್ಲ. ಎಲ್ಲ ಕವಿಗಳೂ ಸಾಮಾನ್ಯವಾಗಿ ಪ್ರಕೃತಿಯ ಸಹಜ ಸೌಂದರ್ಯಕ್ಕೆ ಬೆರಗಾಗಿ ತಮ್ಮ ಕವಿತೆಗಳಲ್ಲಿ ತಮ್ಮದೇ ಆದ ಧಾಟಿ ಮತ್ತು ಶೈಲಿಗಳಲ್ಲಿ ನಿಸರ್ಗವನ್ನು ಚಿತ್ರಿಸುತ್ತಾ ಬಂದಿದ್ದಾರೆ. ಹಾಗೆಯೇ ತುಮಕೂರು ಜಿಲ್ಲೆಯ ಬಯಲು ಸೀಮೆಯಿಂದ ಬಂದ ಈ ಕವಿ ಪ್ರಕೃತಿಯ ಚೆಲುವಿಗೆ ಮಾರುಹೋಗಿ ತಮ್ಮ ಕೌತುಕದ ಕಣ್ಣ ಕ್ಯಾಮರಾದಲ್ಲಿ ನಿಸರ್ಗದ ಅನನ್ಯ ಬಗೆಯ ಚಿತ್ರಣಗಳನ್ನು ಸೆರೆ ಹಿಡಿದಿದ್ದಾರೆ. ನಿಸರ್ಗದ ಚೆಲುವನ್ನು ಕಂಡು ಕವಿಯ ಅಂತರಂಗದ ಮಾತು ಇಲ್ಲಿ ಕಲಾತ್ಮಕ ಅಭಿವ್ಯಕ್ತಿಯಾಗಿ ಹರಿದಿದೆ. ಅಷ್ಟೇ ಅಲ್ಲ ಪ್ರಕೃತಿಯನ್ನು ಒಂದು ಪ್ರಯೋಜನಾತ್ಮಕ ದೃಷ್ಟಿಕೋನದಿಂದ ನೋಡುವ ರೀತಿ ಕವಿಯಲ್ಲಿ ಕಂಡುಬರುವ ವೈಶಿಷ್ಟ್ಯವಾಗಿದೆ.

''ಕಠ್ಮಂಡುವಿನ ಹಾದಿ'' ಎಂಬ ಅವರ ಕವಿತೆ ನೇಪಾಳದ ನೈಸರ್ಗಿಕ ವಿವರಗಳನ್ನು, ಅಲ್ಲಿನ ಜನ ಜೀವನದ ಸಂಸ್ಕೃತಿಯನ್ನೂ ವಿವರಿಸುತ್ತದೆ. ನೇಪಾಳದ ಸ್ಥಳೀಯ ಸಂಸ್ಕೃತಿ ಕವಿಯನ್ನು ಬೆರಗು ಮಾಡಿದಂತಿದೆ, ಆದ್ದರಿಂದ ಭಾರತದ ಪ್ರವಾಸಿಗಳು ನೇಪಾಳದ ನಿಸರ್ಗ ನೋಡಲು ಹಿಂಡು ಹಿಂಡು ಹೋಗುತ್ತಾರೆ. ಹೀಗಾಗಿ ಪ್ರವಾಸಿಗರಿಂದ ಬರುವ ಹಣದಿಂದಲೇ ನೇಪಾಳಿಯರ ಸಾಮಾನ್ಯ ಜೀವನ. ಹೀಗಾಗಿ ಕವಿ ದೊಡ್ಡರಂಗೇಗೌಡರು ಹೇಳುವ ಹಾಗೆ ''ನೇಪಾಳಕ್ಕೆ ಅದೇ ಹೊನ್ನ ಕಣಜ''

ಕಾಣುತ್ತವೆ ಪ್ರಪಾತಕ್ಕೆ ಪುಕ್ಕಟೆ ಟಿಕೇಟ್ ಕೊಡುವ ಕಂದರಗಳು
ಎದುರಾಗುತ್ತವೆ ಮಾರು ಮಾರಿಗೆ ಅಂಕುಡೊಂಕು ತಿರುವುಗಳು
ಚಳಿಗೆ ಹೆದರಿ ಹಿಮ್ಮೇಳ ಹಾಡದೆ ತೆಪ್ಪಗೆ ಕೂತ ಹಕ್ಕಿಗಳು

ಚಿಕ್ಕ ಮಕ್ಕಳ ಹಾಗೆ ಜಿಗಿಯುವ ಝರಿಗಳು
ಆಮೆ ನಡಿಗೆಯೊಳಗೆ ತೆವಳುವ ಬಸ್ಸುಗಳು
ಬಗೆ ಬಗೆಯಾಗಿ ಅಲೆ ಅಲೆಯಾಗಿ ತೇಲಿ ಬರುವ ನೋಟಗಳು
ಮೆತ್ತಗೆ ಪಿಸುಗುಡುತ್ತವೆ ಮನಸ್ಸಿನಾಳದೊಳಗೆ
(ಕಠ್ಮಂಡುವಿನ ಹಾದಿ)

ಎಂದು ನೇಪಾಳದ ಸ್ಥಳೀಯ ಸಂಸ್ಕೃತಿಯ ಬಾಹ್ಯ ನೋಟಗಳನ್ನು ಕವಿ ಅಂತರಂಗದ ಕಣ್ಣಿನಿಂದ ಸವಿಯುವ ಪ್ರಯತ್ನ ಮಾಡಿದ್ದಾರೆ. ಕಂಡದ್ದನ್ನೆಲ್ಲಾ ಕವಿತೆಯ ಮೂಲಕ ಹೇಳಿಕೊಳ್ಳುವ ಪ್ರಯತ್ನ ಈ ಕವಿತೆಯಲ್ಲಿ ಎದ್ದು ಕಾಣುತ್ತದೆ. ನೇಪಾಳಿಯರು 'ಏನನ್ನೂ ತಾನೇ ಕೃಷಿ ಮಾಡಿ ಬೆಳೆಯುವುದಿಲ್ಲ! ಬೆಳೆದದ್ದನ್ನು ಮಾರುವುದೂ ಇಲ್ಲ! ಎಲ್ಲವನ್ನೂ ಭಾರತದಿಂದಲೇ ಕೊಂಡುಕೊಂಡು ಹೋಗಿ ಭಾರತೀಯ ಪ್ರವಾಸಿಗರಿಗೇ ಮಾರಿ ತಮ್ಮ ಆರ್ಥಿಕ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳುತ್ತಾರೆ.

''ಬಾದರಗಡ'' ಎಂಬ ಕವಿತೆ ಸಮುದ್ರದ ನಡುವಿನ ಭೂ ಪ್ರದೇಶವನ್ನು ವಿವರಿಸುತ್ತದೆ. ಹಾಗೆಯೇ ಭೂ ಪ್ರದೇಶಕ್ಕೆ ಭೇಟಿ ಕೊಟ್ಟ ಕವಿಗೆ ನೇರವಾಗಿ ಆದ ಅನುಭವಗಳು ಇಲ್ಲಿ ಮಾತಿನ ಕಲಾತ್ಮಕತೆಯನ್ನು ಪಡೆದಿವೆ. ಕವಿ ಇಲ್ಲಿ ನಿಸರ್ಗವನ್ನು ಒಂದು ಪ್ರಯೋಜನಕಾರಿ ದೃಷ್ಟಿಕೋನದಿಂದ ಕಂಡರಿಸಿದ್ದಾರೆ. ನಿಸರ್ಗವನ್ನೂ ವೈಜ್ಞಾನಿಕವಾಗಿ ಚಿತ್ರಿಸುವ ರೀತಿ ಇಲ್ಲಿ ಗಮನೀಯವಾಗಿದೆ. ಆ ಮೂಲಕ ಕವಿ ಅಲ್ಲಿನ ನೈಸರ್ಗಿಕ ವಸ್ತುಗಳು ಬೇಕಾದಷ್ಟು ಪ್ರಯೋಜನಕಾರಿ ಎಂದು ಹೇಳುತ್ತಾರೆ.

ಎಷ್ಟು ತರ ಜಲಚರ? ಎಷ್ಟೊಂದು ಚೆಂದ ಪ್ರತಿಫಲಿತ ಸೂರ್ಯನಾಕಾರ!
ಬಂಡೆ ಬಂಡೆಯ ಮೇಲಿನ ಬಿಸಿಲ ಕಾಯಿಸುವ ಏಡಿಗಳ ಪಡೆ ಸಾವಿರ
ಆ ದ್ವೀಪ ಸುತ್ತಿ ಬಂದರೆ ಸಾಕು
ಸಿಕ್ಕಾವು ಕೈತುಂಬ ಪ್ರಾಸ್ಟೆರೋ-ಮಂತ್ರದಂಡ;
ಬುರುಡೆಗಳು, ಪ್ರಾಣಿ ಮೂಳೆಗಳು, ವಸ್ತು ಸಂಗ್ರಹಾಲಯಕ್ಕೆ ಯೋಗ್ಯ
ಪಳೆಯುಳಿಕೆಗಳು... ಆಯ್ದುಕೊಂಡಷ್ಟೂ ರೂಕ್ಷಭಾಗ್ಯ.
(ಬಾದರಗಡ - ಪುಟ 52)

ನನ್ನ ಮೇಲಿನ ಮಾತುಗಳನ್ನು ಈ ಸಾಲುಗಳು ದೃಢೀಕರಿಸುತ್ತವೆ ಎಂದು ಭಾವಿಸಿದ್ದೇನೆ. ಇಲ್ಲಿ ಕವಿಗೆ ಪ್ರಕೃತಿ ಎಂಬುದು ಕೇವಲ ವಿಲಾಸಕ್ಕಾಗಿ ಅಲ್ಲ; ಅದೊಂದು ಪ್ರಯೋಜನಕಾರಿಯಾಗಿ ಕಂಡುಬಂದಿದೆ. ''ಬಾದರಗಡ''ದಲ್ಲಿ ಕವಿ ಹೇಳಿರುವ ಹಾಗೆ ನೈಸರ್ಗಿಕವಾಗಿಯೇ ನಿರ್ಮಿತವಾಗಿರುವ ಪ್ರಕೃತಿಯ ಬಗೆಬಗೆಯಾದ ವಿನ್ಯಾಸಗಳಿಗೆ. ಭಾರತೀಯ ಕಾವ್ಯ

ಮೀಮಾಂಸೆಯಲ್ಲಿ ''ದೃಷ್ಟಿಯಂತೆ ಸೃಷ್ಟಿ'' ಎಂಬ ಸೂತ್ರವೊಂದಿದೆ. ಅದು ನನಗೆ ದೊಡ್ಡರಂಗೇಗೌಡರ ''ಬಾದರಗಡ'' ಕವಿತೆಯನ್ನು ಓದಿದಾಗ ಚೆನ್ನಾಗಿ ಮನದಟ್ಟಾಗಿದೆ. ಕಾಣುವ ಕಣ್ಣಲ್ಲಿದೆ ಚೆಲುವು ಪ್ರಕೃತಿಯೇ ಅಂದರೆ ಕಡಲಿಗೆ ಕಡಲೇ ತಾಡಿತವಾಗಿ ಬಂಡೆಗಳ ಬಗೆ ಬಗೆ ವಿನ್ಯಾಸ ರೂಪಿತವಾಗಿ ಜಾಮಿತಿಯ ವಿನ್ಯಾಸಗಳು ನೈಸರ್ಗಿಕವಾಗಿ ಅಯಾಚಿತವಾಗಿ ಮಾಡಿವೆ.

ಮಡಿಕೇರಿಯ ನೈಸರ್ಗಿಕ ಭೂ ಪ್ರದೇಶವನ್ನು ಕಟ್ಟಿಕೊಡುವ ಇವರ ''ಕೊಡಗಿನಂಗಳದಲ್ಲಿ'' ಎಂಬ ಕವಿತೆ, ಕೊಡಗಿನಲ್ಲಿ ಕಂಡ ಪ್ರಕೃತಿ ವ್ಯಾಪಾರಗಳಲ್ಲಿ ಕವಿ ಕವಿತೆಯನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ನಿಸರ್ಗ ಎನ್ನುವುದೊಂದು ಅಸಂಖ್ಯ ಕವಿತೆಗಳ ಆಗರ ಎಂದು ಕವಿ ಇಲ್ಲಿ ಪರಿಭಾವಿಸಿದ್ದಾರೆ. ಅಬ್ಬಿಗಳ ಸದ್ದು, ಕಿತ್ತಳೆ ತೋಟ, ರಾಜಾಸೀಟಿನಿಂದ ಕಾಣುವ ರಸ್ತೆಗಳು, ಅಲ್ಲಿನ ತರುಣ-ತರುಣಿಯರು, ಅಲ್ಲಿನ ಮಂಜು, ಅಲ್ಲಿ ಕಂಡಂಥ ಸೂರ್ಯ ಈ ಎಲ್ಲವೂ ಕವಿಗೆ ಹೊಸತಾಗಿ ಕಂಡಿದೆ. ಎಲ್ಲದರಲ್ಲೂ ಕವಿತೆಯ ರಮ್ಯವಾದ ಗಮ್ಯ ಗುಂದಿದೆ. ಕವಿ ಅಲ್ಲಿ ಕಂಡ ಕವಿತೆಗಳು

ಒಂದಲ್ಲ ಎರಡಲ್ಲ ಹತ್ತಲ್ಲ ನೂರಲ್ಲ ಎಣಿಕೆ ತಪ್ಪಿ ಮತ್ತೆ ಮತ್ತೆ ಸೊಲ್ಲ
ಚಿತ್ತರಿಸುವ ದೂರವಿದ್ದಷ್ಟೂ ಗುಂಗಾಗಿ ಕಾಡುವ
ಕೊಡಗಿನಂಗಳದಲ್ಲಿ ಕೋಟಿ ಕೋಟಿ ಕವಿತೆಗಳ ಕೇಳಿಸಿಕೊಂಡೆ
(ಕೊಡಗಿನಂಗಳದಲ್ಲಿ-ಪುಟ 68)

ಎಂದು ಕವಿಯೇ ಅಲ್ಲಿನ ನಿಸರ್ಗದ ಭವ್ಯ ಪ್ರಭಾವಗಳನ್ನು ಕೊಂಡಾಡುತ್ತಾರೆ.

ಭೂಮಿಯನ್ನು ಕುರಿತು ಬರೆದ ಕವಿತೆ ''ನಮ್ಮ ನೆಲ''. ಕವಿ ಇಲ್ಲಿ ನೆಲದ ಬಗ್ಗೆ ಮಾತಾಡುತ್ತ, ಭೂಮಿಯ ಅನನ್ಯವಾದ ವ್ಯಕ್ತಿತ್ವದ ಘನತೆಯನ್ನು ವಿವರಿಸುತ್ತಾರೆ. ಈ ಹಿಂದೆ ಹೇಳಿದ ಪ್ರಕೃತಿಯ ಎಲ್ಲ ಭವಾಳಿಗಳಿಗೂ ಈ ನೆಲವೇ ಕಾರಣ ಎಂದು ಈ ಕವಿತೆ ಧ್ವನಿಸುತ್ತದೆ. ನಮ್ಮ ನಡಿಗೆಗೆ ಅಸ್ತಿತ್ವವನ್ನು ಕೊಡುವ ಭೂಮಿಯನ್ನು ಕುರಿತು ಚಿತ್ರಕಾರರು, ಕವಿಗಳು ಹೇಳಿರುವ ಮಾತುಗಳನ್ನು ಕೇಳಿ ಈ ಕವಿ ಖುಷಿಪಟ್ಟಿರುವುದನ್ನು ಇಲ್ಲಿ ಹೇಳಿಕೊಂಡಿದ್ದಾರೆ. ಆ ಮೂಲಕ ನೆಲದ ಮೇಲೆ ಅವರಿಗಿರುವ ಅನನ್ಯವಾದ ಅಭಿಮಾನವನ್ನು ಇಲ್ಲಿ ಪರೋಕ್ಷವಾಗಿ ಅರಿಯಬಹುದಾಗಿದೆ.

ಮಾನವನ ಬದುಕಿನ ಎರಡು ಬಗೆಗಳು ಇಲ್ಲಿ ಅನಾವರಣಗೊಂಡಿವೆ. ಒಂದು ಭೂಮಿಯ ವೈಶಿಷ್ಟ್ಯದ ಬಗೆಗೆ ತಿಳಿದವರು ಅರ್ಪಿಸಿದ ಅಭಾರದ ಕಣ್ಣೆಗಳು. ಇನ್ನೊಂದು ಮಾನವ ತನ್ನ ಅಸ್ತಿತ್ವದ ಮೂಲವನ್ನೇ ಅರಿಯದೆ ಅದನ್ನು ಮರೆತು ಪ್ರಾಣ ಸದೃಶ ವರ್ತನೆಗಳ ಗೀಳು ಹಚ್ಚಿಕೊಂಡದ್ದು.

ಕವಿ ಭಾವಿಸುವಂತೆ ಭೂಮಿಯೆಂದರೆ ಅದೊಂದು ಜೀವ; ಅದೊಂದು ಭಾವ ಭೂಮಿಯನ್ನು ಚೆನ್ನಾಗಿ ನೋಡಿಕೊಂಡರೆ ಅದರಿಂದ ನಮ್ಮ ಪ್ರಾಣದುಳಿವು ಎಂದು ಹೇಳುತ್ತಾ ಕವಿ

ನುಡಿಗೆ ನಾಡಿ, ಕಲೆಗೆ ಅಂಗ, ಸಂಗೀತಕ್ಕೆ ದನಿ
ಸಿಕ್ಕುವುದನ್ನು ಯಾರು ತಾನೇ ತೆಗಳಿಯಾರು?
(ನಮ್ಮ ನೆಲ-ಪುಟ 84)

ಹೀಗೆ ಭೂಮಿಯ ಸಾರ್ವತ್ರಿಕ ಮೌಲ್ಯಗಳ ಬಗೆಗೆ ಸಹೃದಯನಿಗೆ ಎಚ್ಚರ ಮೂಡಿಸುತ್ತಾರೆ,

''ರಂಗದ ಬೆಳಗು'' ಎಂಬ ಕವಿತೆ ಸೂರ್ಯೋದಯದ ಸಂದರ್ಭವನ್ನು ವರ್ಣಿಸುತ್ತದೆ. ಕವಿಗೆ ಇಲ್ಲಿ ಸೂರ್ಯ ಎಂದರೆ ಅದೊಂದು ಚೈತನ್ಯ. ಜಗತ್ತಿನ ಎಲ್ಲ ಜೀವಿಗಳೂ ಕ್ರಿಯಾವಂತಿಕೆಯನ್ನು ಪಡೆಯೋದು ಸೂರ್ಯನ ಚೈತನ್ಯದಿಂದಲೇ. ಆದ್ದರಿಂದ ಕವಿ ಈ ಕವಿತೆಯಲ್ಲಿ ಸೂರ್ಯ ಮೂಡುವುದನ್ನು, ಹಕ್ಕಿ ಹಾರುವುದನ್ನು, ಗಾಳಿ ಬೀಸುವುದನ್ನು, ಹೂ ಅರಳುವುದನ್ನು, ಹಕ್ಕಿ ಹಾಡುವುದನ್ನು ಒಂದು ಕ್ರಿಯಾಶೀಲವಾದ ಚೈತನ್ಯವೆಂದು ಪರಿಭಾವಿಸಿದ್ದಾರೆ. ಅದಷ್ಟೇ ಅಲ್ಲ ರವಿ ಮೂಡುತ್ತ ಜಗತ್ತಿಗೆ ಚೈನತ್ಯದ ರಂಗು ಹಂಚುತ್ತಾನೆ. ಅಂಥ ರಂಗಿನ ಪ್ರಭಾವದಿಂದಾಗಿ ನಿಸರ್ಗದ ಪ್ರತಿಯೊಂದು ವಸ್ತುವಿಗೂ ಜೀವಕಳೆ ತುಂಬಿಕೊಳ್ಳುತ್ತದೆ ಎಂದೆಲ್ಲ ಕವಿ ಇಲ್ಲಿ ಪರಿಭಾವಿಸಿದ್ದಾರೆ.

ಹಕ್ಕಿಯ ಮೇಳ ಕೂಗಿ ಕೂಗಿ ಹತ್ತಿರ ಕರೆದೈತೆ
ಕುಂಕುಮ ಧೂಳಿ ಮೇಲಕ್ಕೇರಿ ಸಿಂಧೂರ ಇಟ್ಟೈತೆ
ಕಣ್ಣಾರೆ ಕಂಡ
ನೋಟದೂಟ
ಸಂತೋಷ ಸವಿದೈತೆ
(ರಂಗಾದ ಬೆಳಗು - ಪುಟ 9)

ಸೂರ್ಯೋದಯದಿಂದ ಕುಂಕುಮ ಧೂಳಿಗೂ ಜೀವೋದಯವಾಗಿದೆ. ಆ ಮೂಲಕ ಕವಿಯ ಐಂದ್ರಿಯಕವಾದ ಭಾವಾನುಭವಗಳು ಇಲ್ಲಿ ಅತ್ಯಂತ ಸೂಕ್ಷ್ಮವಾಗಿ ನಿಸರ್ಗವನ್ನು ಚಿತ್ರೀಕರಿಸಿದೆ ಎಂದು ತಿಳಿಯಬಹುದು.

ಸುಗ್ಗಿ ಕಾಲವನ್ನು ವಿವರಿಸುವ ಇನ್ನೊಂದು ಕವಿತೆ ಅವರ ''ಸಂತಸದ ಸುಗ್ಗಿ''. ಹೊಲ, ಗದ್ದೆ ತೋಟಗಳು ಮೋಪಾಗಿ ಬೆಳೆದು ಕಷ್ಟ-ಪಟ್ಟು ದುಡಿದ ಜನಕ್ಕೆ ಸಂತಸವನ್ನೀವ ಕಾಲವಿದು. ಇಂಥ ಕಾಲದಲ್ಲಿ ಹಸು, ಎಮ್ಮೆ, ಕೋಳಿ, ಕುರಿ ಸಕಲ ಜೀವಿಗಳನ್ನು ಸಾಕುವ ನೆಲದಾಯಿಗೆ ಎಲ್ಲಿಲ್ಲದ ಹಿಗ್ಗು, ಎಂದು ಕವಿ ಇಲ್ಲಿ ತಾಯಿ ಅವನಿಯನ್ನು ಕೊಂಡಾಡಿದ್ದಾರೆ.

ಸುಗ್ಗಿ ವ್ಯಾಳೆಗೆ
ಸೊಬಗೇ ಸುತ್ತ ಕಂಡು
ಭೂಮಿ ಬೀಗ್ಯೆತೆ... ಬವಣೆ ನೀಗ್ಯೆತೆ!
(ಸಂತಸದ ಸುಗ್ಗಿ - ಪುಟ11)

ಇಲ್ಲಿ ಕವಿಯು ಅಂತರಂಗ ಸುಗ್ಗಿಯ ಕಾಲ ಹೇಗೆ ಮನುಕುಲದ; ಸಕಲ ಜೀವ ಕುಲದ ಕಷ್ಟಗಳನ್ನು ನೀಗುತ್ತೆ ಎಂಬ ಸತ್ಯ ತಿಳಿದು ಆ ಮೂಲಕ ಸುಗ್ಗಿಯ ಕಾಲವನ್ನು ಕಂಡು ಸಂತೋಷಪಟ್ಟಿದ್ದಾರೆ.

"ಮೋಹಕ ಮುಂಜಾನೆ" ಅನ್ನುವ ಕವಿತೆ ನಿಸರ್ಗ ಮತ್ತು ಪ್ರೀತಿಯನ್ನು ಏಕಕಾಲಕ್ಕೆ ದುಡಿಸಿಕೊಂಡ ಕವಿತೆಯಾಗಿದೆ. ಕವಿ ತನ್ನ ಸಂಗಾತಿಯನ್ನು ಪ್ರಕೃತಿಗೆ ಆರೋಪಿಸಿ ಪ್ರಕೃತಿಯ ಮೂಲಕ ಅಳಿಯದ ಅರ್ತಿ ಕಂಡುಂಡು ಸಂತೋಷಪಟ್ಟಿದ್ದಾರೆ. ಮೈಮರೆತು ಹಾಡಿದ್ದಾರೆ. ಇಲ್ಲಿನ ಪ್ರೀತಿ ಮತ್ತು ನಿಸರ್ಗದ ಮುಖಾಮುಖಿಯಲ್ಲಿ ಕವಿ ಕಂಡುಕೊಂಡದ್ದು ಸಂತೋಷ; ಆನಂದ. ಪ್ರಕೃತಿ ಕಡೆಗೆ ಕವಿ ಮನಸ್ಸು ಎಷ್ಟು ಆಪ್ತವಾಗಿದೆ ಎಂಬುದನ್ನು ಅವರ ಈ ಸಾಲುಗಳಲ್ಲಿ ಕಾಣಬಹುದು.

ಮೋಡದ ದಂಡು ಓಡೋದ ಕಂಡು
ರಂಗೋಲಿ ವೈನಾಗಿ ಬರೆದಂಗೈತೆ;
ಆಕಾಶದ ಬದಿಗೆ, ಗುಡ್ಡದ ತುದಿಗೆ
ಹೊಂಬಿಸಿಲು ರಂಗಾಗಿ ಬೆಳಕಾಗೈತೆ
ಮೈದುಂಬಿ ಮನಸೋತು ಮೆರೆದ್ಹಂಗೈತೆ
(ಮೋಹಕ ಮುಂಜಾನೆ - ಪುಟ 16)

ಬರಗಾಲದ ತಳಹದಿಯ ಮೇಲೆ ನಿಂತು ಸಿರಿಕಾಲದ ಕನಸು ಕಾಣುವ ಕವಿತೆ ದೊಡ್ಡರಂಗೇಗೌಡ ಅವರ "ನೆಲ ಮುಗಿಲ ಚಿತ್ತಾರ". ಈ ಕವಿತೆಯಲ್ಲಿ ಇಳೆಗೆ ಮಳೆ ಬೀಳದೆ ಹೇಗೆ ಭೂಮಿ ಬೆಂಗಾಡಾಗಿದೆ, ಹೇಗೆ ಹಕ್ಕಿ-ಪಕ್ಕಿ ಕಂಗೆಟ್ಟಿದ್ದಾವೆ, ಪ್ರಾಣಿಗಳು ಹೇಗೆ ಬಡವಾಗಿವೆ, ಸಸ್ಯ ಸಂಕುಲದಲ್ಲಿ ಹೇಗೆ ಜೀವರಸವಿಲ್ಲದೆ ಬೆಂಡಾಗಿದೆ, ಬೆಳೆ ಒಣಗಿ, ಭೂತಾಳ ಕಾದು, ಹಾದಿ-ಬೀದಿ ಸುಟ್ಟು ಧೂಳೆದ್ದು ಹೇಗೆ ಪ್ರಕೃತಿ ಬರಡಾಗಿದೆ ಎಂಬುದರ ಬಗ್ಗೆ ಕವಿಗೆ ಕುತೂಹಲದ ಜೊತೆಗೆ ಇತ್ಯಾತ್ಮಕವಾದ ಪ್ರಜ್ಞೆಯೂ ಇಲ್ಲಿ ಕೆಲಸ ಮಾಡಿದೆ. 'ಚಿತ್ತಾರ ಬಿಡಿಸ್ಯಾವೆ ಮುಂಗಾರ ಮಳೆ ಮೋಡ' ಎಂದು ಹೇಳುತ್ತ ಕವಿ ತಮ್ಮ ಆಶಾಭಾವನೆಯನ್ನು ನಿಸ್ತೇಜದ ಕಾಲದಲ್ಲೂ ಕಂಡಿರುವುದು ಅವರ ಅಧಮ್ಯ ಚೈನತ್ಯವನ್ನು ಹೇಳುತ್ತದೆ.

ಇಲ್ಲಿ ನಿಸರ್ಗ ಎಂಬುದು ಕವಿಗೆ ಕೇವಲ ರಮ್ಯವಾದುದಲ್ಲ. ಅದೊಂದು ಬದುಕು ಮತ್ತು ಜೀವನಕ್ಕೆ ದಾರಿ ತೋರುವ ಬೆಳಕು ಎಂಬುದನ್ನು ಕವಿ ಇಲ್ಲಿ ಕಂಡರಿಸಿದ್ದಾರೆ

ಚಿತ್ತಾರ ಬಿಡಿಸ್ಯಾವೆ ಮುಂಗಾರ ಮಳೆ ಮೋಡ
ಒತ್ತಾಗಿ ಮುಗುಲಾಗೆ - ನಿಂತಾವೆ ಮುತ್ತಾಗೆ
ರೈತಾಪಿ ಹೈದರಿಗೆ ತೆರೆದಾವೆ ಹಾದಿ-ನೋಡಾ!
(ನೆಲಮುಗಿಲ ಚಿತ್ತಾರ - ಪುಟ 17)

ಜಡತೆಯಲ್ಲೂ ಜೀವನಸ್ಪಂದನವಿದೆ ಎಂಬುದು ಈ ಸಾಲುಗಳಿಂದ; ಈ ಕವಿತೆಯ ಅಂತರ್ಯದಿಂದ ನಮಗೆ ವೇದ್ಯವಾಗುತ್ತದೆ.

ಎಲ್ಲ ಕವಿಗಳಂತೆ ಭೂಮಿಯನ್ನು ಒಂದು ಹೆಣ್ಣು ಎಂದು ಪರಿಕಲ್ಪಿಸಿರುವುದು ಈ ಕವಿಯಲ್ಲೂ ಕಂಡುಬರುತ್ತದೆ. ಶ್ರಮಪಟ್ಟು ದುಡಿದವರಿಂದ ಹಿಡಿದು; ಕೂತುಣ್ಣುವ ಸೋಮಾರಿಗಳವರೆಗೆ ಭೂಮಿಯ ಅನನ್ಯವಾದ ಕೃಪೆಯಿದೆ ಎಂದು ಹೇಳುವ ಕವಿತೆ ಅವರ ''ಕ್ಷಮಯಾ ಧರಿತ್ರಿ''. ಭೂಮಿಗೆ ಕ್ಷಮಾಗುಣ ಎಂಬುದು ಪಾರಂಪರಿಕವಾಗಿ ಬಂದಂಥ ಔದಾರ್ಯ ಎಂದು ಕವಿತೆಯಲ್ಲಿ ಹೇಳುತ್ತಿದ್ದಾರೆ. ಬಿರಿದ ಹೂವಿನಲ್ಲೂ ಸೊಬಗ ಸಿಂಪಡಿಸಿ ಭೂಮಿತಾಯಿ ನಗುವಳು. ಅಷ್ಟೇ ಅಲ್ಲ, ಬಡವರಿಗಾಗಿ, ನೊಂದು ಬೆಂದಹಳ್ಳಿಗರಿಗಾಗಿ ಪೊಡವಿಯಲ್ಲಿ ಭೂತಾಯಿಯ ಅನನ್ಯ ಅಕ್ಕರೆಯ ಹಸಿರದಾರೆ ಇದೆ ಎಂದು ಕವಿ ಇಲ್ಲಿ

ದೀನ ದಲಿತರ ಬಲ್ಲಿದರ
ನೊಂದ ಬೆಂದ ಹಳ್ಳಿಗರ
ಎಲ್ಲ ಕಾಯುವ ಪೊಡವಿ ನಲ್ಮೆ ಇರುವುದು
(ಕ್ಷಮಯಾ ಧರಿತ್ರಿ - ಪುಟ 24)

ಇಲ್ಲಿ ಭೂಮಿಯ ಅಸೀಮವಾದ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಭೂಮಿಯನ್ನು ಸಾರ್ವತ್ರಿಕವಾಗಿ ಕಂಡ ಮನೋಧರ್ಮವನ್ನು ಈ ಕವಿತೆಯಲ್ಲಿ ಕಾಣಬಹುದು.

ನಿಸರ್ಗದಲ್ಲಿ ಬೆಳದಿಂಗಳನ್ನು ಕಂಡು ಕವಿ ನೆಲದ ಮೇಲೆ ಅದರಿಂದ ಆಗುವ ಅನುಭವಗಳನ್ನು ಕಾಲ್ಪನಿಕ ನೆಲೆಯ ಮೇಲೆ ನಿಂತು ತಮಗರಿವಿಲ್ಲದೆಯೇ ಉಂಟಾದ ಕೋಮಲ ಭಾವಗಳಿಗೆ ಇಲ್ಲಿ ಮಾತು ಮತ್ತು ಕಲಾತ್ಮಕತೆಯ ಬರಹ ರೂಪವನ್ನು ಕೊಟ್ಟಿದ್ದಾರೆ. ಬೆಳದಿಂಗಳು ಕೇವಲ ಬೆಳದಿಂಗಳಲ್ಲ; ಅದು ಭುವಿಯ ಸೌಂದರ್ಯವನ್ನು ಹೆಚ್ಚಿಸುವ ಪುಷ್ಪ ಪಲ್ಲಂಗ ಎಂದು ಕವಿ ಪರಿಕಲ್ಪಿಸಿದ್ದಾರೆ. ಅವರ ಈ ಪರಿಕಲ್ಪನೆಗೆ ಭಾವುಕತೆ ಮತ್ತು ಕಲಾತ್ಮಕತೆ ತುಂಬಿಕೊಂಡಿದೆ.

ಹಿಮಗಿರಿ ಕರಗಿ ಹಾದಿಯ ತುಂಬಿರಲು
ಪಾರಿಜಾತ ಪಲ್ಲಂಗ ಕರೆದಿಹುದು
ಕೊರೆಯುವ ಶೀತಲ ಗಾಳಿಯು ಬೀಸಿರಲು
ಇಳೆಯಲಿ ಆಮೋದ ಮೆರೆದಿಹುದು!

(ತೇಲಿ ಬಂತು ತಿಂಗಳ ನಗೆ - ಪುಟ-25)

ಕವಿ ಇಲ್ಲಿ ಚಂದ್ರನ ಬೆಳದಿಂಗಳು ಕೇವಲ ಅದು ತಂಪಾದ ಬೆಳದಿಂಗಳಷ್ಟೇ ಅಲ್ಲ; ಅದು ಅಂತರಂಗದ ಸವಿ ಆಮೋದ ಎಂದು ಬೆಳದಿಂಗಳಲ್ಲಿ ತಮ್ಮ ಆಪ್ತ ಭಾವವನ್ನು ಮೆರೆದಿದ್ದಾರೆ.

ಪ್ರಕೃತಿಯನ್ನು ಕುತೂಹಲದಿಂದ ಕಂಡ ಕವಿಗೆ ಅರಿವಾದದ್ದು ನಿಸರ್ಗದಲ್ಲಿ ಕೇವಲ ಚೆಲುವಷ್ಟೇ ಇಲ್ಲ, ಸೌಂದರ್ಯ ಅಷ್ಟೇ ಅಲ್ಲ, ಅಲ್ಲಿ ಕೇಳಿಸಿಕೊಳ್ಳುವ ಕಿವಿ ಇದ್ದರೆ ಸಾವಿರದ ಗೀತೆಯೂ ಇದೆ, ಮಾನವನ ಅನನ್ಯ ಕತೆಯೂ ಇದೆ ಎಂದು ಮಾನವ ಸಂಬಂಧಗಳನ್ನು ಪ್ರಕೃತಿಯಲ್ಲಿ ಹುಡುಕುವ ಪ್ರಯತ್ನವನ್ನು ಕವಿ ಮಾಡುತ್ತಾರೆ. ಪ್ರಕೃತಿಯ ಮಡಿಲಿನಲ್ಲಿ ಬದುಕನ್ನು ಕಾಣುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾರೆ.

ಕಿರಿ ಕಿರಿ ಗಾಳಿಯ ಕೊರಳಲಿ
ಪರಿ ಪರಿ ಗೀತದ ಗುಂಗಿದೆ
ಮಿರು ಮಿರು ಮಣ್ಣಿನ ಕಣ್ಣಲಿ
ಮುಗಿಯದ ಕಥೆಗಳ ಮೆರುಗಿದೆ

(ಸೌಮ್ಯಸೆಲೆ - ಪುಟ 48)

ಎಂದು ಹಾಡುವ ಕವಿ. ಪ್ರಕೃತಿಯ ವ್ಯಾಪಾರಗಳು ಮನುಜನ ಜೀವನ ಗಾಥೆಗಳು ಹೌದು; ಬದುಕಿನ ಕಡೆಗಳೂ ಹೌದು ಎಂದು ಮಾನವನ ಘಟನಾವಳಿಗಳನ್ನು ಪ್ರಕೃತಿಗೆ ಆರೋಪಿಸಿ ಸಮರ್ಥಿಸುತ್ತಾರೆ. ಕವಿಯ ಲೌಕಿಕ ಭಾವನೆಗಳು ಇಲ್ಲಿ ಸೌಂದರ್ಯ ಲೋಕದಲ್ಲಿ ವಿರಾಜಿಸಲು ಯತ್ನಿಸುತ್ತವೆ.

ಮುಂಜಾನೆಯ ಮಣ್ಣಿನ ಕಂಪನ್ನು ಅನುಭವಿಸಿದ ಕವಿ ಆ ಕಂಪಿನ ಮಾಧುರ್ಯವನ್ನು ತಮ್ಮ "ಬಂಗಾರ ಮುಂಜಾನೆ" ಕವಿತೆಯಲ್ಲಿ ರೂಪಿಸಿದ್ದಾರೆ. ಮುಂಜಾನೆಯ ಹೊಂಗಿರಣದ ಹೊಳೆಯಿಂದ ಮಿಂದ ಭುವಿಯ ಚೆಲುವನ್ನು ಕವಿ ಇಲ್ಲಿ "ಬಂಗಾರ ಮುಂಜಾನೆ" ಎಂದು ಉತ್ತಮವಾದ ರೂಪಕ ಕೊಟ್ಟು ಸಹೃದಯರ ಅಂತರಂಗವನ್ನು ಮುದಗೊಳಿಸುತ್ತಾರೆ.

'ಕತ್ತಲೆಯ ತೆರೆ ಸರಿಸಿ ಮೂಡುವ ಹೊಂಗಿರಣ ಹೊಲೆ ಭುವಿಯ ಮೇಲೆ ಸಂಗಾರದ ರಶ್ಮಿ

ರಂಗವಲ್ಲಿ ಬಿಡಿಸಿದೆ' ಎಂದು ಹೇಳುತ್ತ ಕವಿ ರಸದ ಔನ್ನತ್ಯವನ್ನೇ ತಮ್ಮ ಕವಿತೆಯಲ್ಲಿ ಚಿತ್ರಿಸಿದ್ದಾರೆ. ಸುಂದರವಾದ ಮೋಹಕ ಮುಂಜಾನೆಯನ್ನು ಕಂಡು

ರಂಗಾದ ಕವಿ ತಾನು ಕಂಡಂಥ ರಮ್ಯ ಝರಿ
ಕಂಪನ್ನೇ ರೂಪಿಸಲು ಕಾವ್ಯ-ಲಹರಿ
(ಬಂಗಾರ ಮುಂಜಾನೆ-ಪುಟ 59)

ಎಂದು ರಸಕಾವ್ಯವೇ ಮೋಹಕ ಮುಂಜಾನೆಯಾಯಿತು ಎಂದು ಹೇಳಿದ್ದಾರೆ. ಕವಿ ಮನ ನಿಸರ್ಗದ ಮಡಿಲಿನಲ್ಲಿ ಕವಿತೆಯನ್ನು ಹುಡುಕುವ ಹಂಬಲವನ್ನು ಇಲ್ಲಿ ನೋಡಬಹುದು.

ಕವಿಯ ಭಾವನೆಗಳ ಉಕ್ಕುವಿಕೆಗೆ ನಿಸರ್ಗವೂ ಕಾರಣ. ಅದರಲ್ಲೂ ಚೈತ್ರೋದಯದ ಕಾಲ ಕವಿಯ ಹೃತ್ಕಾಮನೆಗಳನ್ನು ಕೆರಳಿಸುತ್ತದೆ. ಹೀಗೆ ಕೆರಳಿದ ಹೃತ್ಕಾಮನೆಗಳಿಗೆ ಕವಿ ಇಲ್ಲಿ ಮಾತಿನ ರಮ್ಯ ಹೊದಿಕೆಯನ್ನು ತಂದ ಹಾಗಿದೆ ಈ ಕವಿಯ 'ಚೈತ್ರೋದಯ' ಕವಿತೆ.

ಕಾಂತಾರದ ವನಿತೆಗಿಂದು ಶೋಭೆಯ ಶೃಂಗಾರ
ಕೆರೆಯಂಗಣ ಒಣಗಿಪೂರಾ ಬಿರುಕಿನಾ ಹಂದರ;
ಕೋಗಿಲೆಯಾ ಕುಕಿಲಿನಲಿ ರಾಗೋತ್ಸವ ಸಂಚಾರ
ಮಾಗಿಯೊಸಗೆ ಮುಗಿದ ಬಳಿಕ ಚೈತಾವತಾರ!
(ಚೈತ್ರೋದಯ - ಪುಟ 60)

ಕವಿಯ ಸ್ಫೂರ್ತಿಕಾಂತೆಯನ್ನು ಕವಿ ಇಲ್ಲಿ ನಿಸರ್ಗದಲ್ಲಿ ಕಾಣುವ ಪ್ರಯತ್ನ ಮಾಡಿದ್ದಾರೆ. ಮಾಗಿಯ ಕಾಲ ಮುಗಿದ ಮೇಲೆ ಚೈತ್ರದ ಆಗಮನ ಕವಿಗೆ ಉಲ್ಲಾಸದಾಯಕವಾಗಿದೆ.

ಹೃತ್ಕಾಮನೆ ಪುಟಿದೇಳಲು ಉನ್ಮಾದ ವಿಹಾರ
ಆನಂದದ ಝರಿಯಂಕುರ ಜೀಕುತ್ತಾ ವಿಸ್ತಾರ;
ಸ್ವರ್ಗೀಯದ ಉಲ್ಲಾಸವೇ ಚಿಮ್ಮುತ್ತಿದೆ ಉತ್ತರ
ಖುಷಿ ವೈಭವ ವಿಸ್ತರಿಸಿದೆ ಮನೋಮಂದಿರ
(ಚೈತ್ರೋದಯ - ಪುಟ 60)

ಎನ್ನುವ ಕವಿಯ ಈ ಆಪ್ತ ಸಾಲುಗಳು ಚೈತ್ರೋದಯದ ಸಿರಿಯೌತಣವನ್ನು ಕಂಡ ಕವಿಯ ಅಂತರಂಗ ಖುಷಿಯ ವೈಭವವನ್ನು ಮೆರೆದಿರುವುದು; ಸಂತೋಷಪಟ್ಟಿರುವುದನ್ನು ರೇಖಿಸುವ ಮೂಲಕ ಸಹೃದಯರಿಗೂ ಮುದವನ್ನುಂಟು ಮಾಡುತ್ತದೆ.

ಈ ಕವಿ ನಿಸರ್ಗವನ್ನು ಪರಿಭಾವಿಸುವುದು ಅತ್ಯಂತ ಸುಂದರ. ಯಾಕೆಂದರೆ ಪ್ರಕೃತಿಯಲ್ಲಿ ಹಾಡನ್ನು ಕೇಳಿಸಿಕೊಳ್ಳುವುದು; ಕವಿತೆಯನ್ನು ಆಲಿಸುವುದು ಈ ಕವಿಯ ಜಾಯಮಾನ ಎಂದು ಈ ಹಿಂದಿನ ಕವಿತೆಗಳಲ್ಲಿ ನಾನು ಚರ್ಚಿಸುವ ಪ್ರಯತ್ನ ಮಾಡಿದ್ದೇನೆ. ನಿಸರ್ಗದ ಕೈಗೆ ಮನಸ್ಸು ಕೊಟ್ಟು ಹಾಡಿನ ಪ್ರತಿ ಪಲಕನ್ನೂ ಸೆರೆಹಿಡಿಯುವ ಕಾಯಕದಲ್ಲಿ ಕವಿ ನಿರಂತರವಾಗಿ ತಮ್ಮ ಗಮನವನ್ನು ಹರಿಸುತ್ತಾರೆ. ಅವರ "ಮಳೆಯು ಬಂದ ಮಾರನೇ ದಿನ" ಕವಿತೆಯಲ್ಲಿ ಇದನ್ನು ಕಾಣಬಹುದು.

ಗಿಳಿಯು ಬಣ್ಣದ ಹಸಿರು ಹಾಸಿಗೆ-
ಕೂಗಿ ಕರೆದಿದೆ ಮೆಲ್ಲಗೆ;
ಬೀಸು ಗಾಳಿಯ ಮಧುರ ಪಲುಕಿಗೆ
ನಾಟ್ಯವಾಡಿದೆ ತರುಲತೆ!
(ಮಳೆಯು ಬಂದ ಮಾರನೇ ದಿನ - ಪುಟ 27)

ಈ ಕವಿತೆಯ ಸಾಲುಗಳಲ್ಲಿ ಬೀಸುವ ಗಾಳಿ ಗೀತೆಗೆ ತರುಲತೆಗಳೆಲ್ಲ ನಾಟ್ಯವಾಡಿದೆ ಎಂದು ಪರಿಭಾವಿಸುವ ಪರಿ ಅತ್ಯಂತ ಹೊಸತಾಗಿದೆ. ಕವಿ ಹಾಡಿಗೆ, ನೃತ್ಯಕ್ಕೆ ನೀಡುವ ಬೆಲೆಯನ್ನು ಇಲ್ಲಿ ನಾವು ಅರಿಯಬಹುದು. ನಿಸರ್ಗವೆಂದರೆ ಅದೊಂದು ಕಲಾಜಗತ್ತು ಎಂದು ಕವಿ ಕಲ್ಪಿಸುತ್ತಾರೆ. ಅಲ್ಲಿ ಆ ಕಲಾಜಗತ್ತಿನಲ್ಲಿ ಹಾಡಿದೆ, ನೃತ್ಯವಿದೆ, ಕಥೆ-ಕವಿತೆ ಇದೆ ಎಂದು ಸಂತೋಷಪಡುತ್ತಾರೆ.

ಕವಿ ಮುಸ್ಸಂಜೆಯನ್ನು ನೋಡುವ, ಪರಿಭಾವಿಸುವ ಕ್ರಮವನ್ನು ಅವರ "ಮುಸ್ಸಂಜೆ" ಕವಿತೆ ವಿವರಿಸುತ್ತದೆ. ಮುಸ್ಸಂಜೆ ಎಂಬುದು ಕವಿಗೆ ಅದೊಂದು ವರ್ಣವಿನ್ಯಾಸ, ಸೌಂದರ್ಯದ ಚೌಕಟ್ಟು, ಅದೊಂದು ಗಾಂಭೀರ್ಯದ ಸ್ಥಿತಿ, ಅದೊಂದು ಲಾಸ್ಯ. ಮುಸ್ಸಂಜೆಯನ್ನು ನೋಡಲು ಕಾಯುತ್ತಾ ಕುಳಿತ ಕವಿಗೆ ರಮಣೀಯವಾದ ಉನ್ಮಾದದ, ಆಹ್ಲಾದದ ಸದ್ಭಾವಗಳನ್ನು ಚಿಮ್ಮಿಸುವ ಸೆಲೆ; ದೀಪ್ತವಾದದ್ದು.

ಸಾಗುವ ಸವಿ ಸಂಜೆಗೆ
ಉನ್ಮಾದದ ಆಹ್ಲಾದದ ಸದ್ಭಾವದ
ಸೆಲೆದೀಪ್ತಿ ನುಡಿ ರಂಗು
ಕಾತರದಿ ಕಾಯ್ದ ಕವಿ ಕಣ್ಣಿಗೆ!
(ಮುಸ್ಸಂಜೆ - ಪುಟ 64)

ಇಲ್ಲಿ ಕವಿಗೆ ಮುಸ್ಸಂಜೆ ಎಂಬುದು ಕೇವಲ ಸೌಂದರ್ಯವಷ್ಟೇ ಅಲ್ಲ ಅದು ಕವಿಯ ಸದ್ಭಾವನೆಗಳನ್ನು ಪುಟಿದೇಳಿಸುವ ಸವಿಯುಣಿಸು.

ಪ್ರಕೃತಿಗೂ ಮಾನವನ ಹಾಗೆ ಬದುಕೆಂಬುದು ಇದೆ ಎಂದು ಕವಿ ತಮ್ಮ "ಓಡುವ ನದಿಯ ತೊಡೆಯ ಮೇಲೆ" ಎಂಬ ಕವಿತೆಯಲ್ಲಿ ತುಂಬಾ ಸೊಗಸಾಗಿ ವರ್ಣಿಸಿದ್ದಾರೆ.

ಓಡುವ ನದಿಯ ತೊಡೆಯ ಮೇಲೆ
ಕಾಡು ಬೀಡು ಬಿಟ್ಟಿದೆ
ಗುಡ್ಡದ ತುದಿಯ ಮರದ ಮೇಲೆ
ಸೂರ್ಯ ಗೂಡು ಕಟ್ಟಿದೆ!

(ಓಡುವ ನದಿಯ ತೊಡೆಯ ಮೇಲೆ - ಪುಟ 69)

ಈ ಕವಿತೆ ನಿಸರ್ಗ ಜೀವನದ ಎರಡು ವಿರೋಧಾಭಾಸಗಳನ್ನು ಕಂಡರಿಸಿದೆ. ಒಂದು ಬದುಕಿನ ನಿರಂತರತೆಯನ್ನು ಪ್ರತಿನಿಧಿಸುವ ನದಿ, ಕಾಡು. ಇವಕ್ಕೆ ಚಲನೆಯಿದೆ; ಸೃಜನೆಯೂ ಇದೆ. ಇನ್ನೊಂದು ಜೀವನದ ತಾಟಸ್ಥ್ಯ ಸ್ಥಿತಿಯನ್ನು ಪ್ರತಿನಿಧಿಸುವ ಸೂರ್ಯ. ಸೂರ್ಯನಿಗೆ ಚಲನೆಯೂ ಇಲ್ಲ; ಸೃಜನೆಯೂ ಇಲ್ಲ. ಬದುಕು ಯಾವತ್ತೂ ಚಲನಶೀಲವಾದುದು ಎಂಬ ಸತ್ಯವನ್ನು ಕವಿ ಇಲ್ಲಿ ಚರ್ಚಿಸಿದಂತೆ ಕಾಣುತ್ತದೆ.

ಸೂರ್ಯನ ಬರುವಿಕೆಯಿಂದ ಭುವಿಯ ಅನನ್ಯವಾದ ಸೌಂದರ್ಯದ ಮುಖಗಳು ಕವಿಯ ಕಣ್ಣಿಗೆ ಕಂಡಿದೆ. ಇದನ್ನು ಕವಿಯ "ಬಂಗಾರ ಬೆಳಗು" ಕವಿತೆ ವಿವರಿಸುತ್ತದೆ. ಇಲ್ಲಿ ಕವಿ ಬಳಸಿಕೊಂಡ ಭಾಷೆಯೂ ಈ ಹಿಂದೆ ನೋಡಿದ ಕವಿತೆಗಳಿಗಿಂತ ಭಿನ್ನವಾದುದೇ ಆಗಿದೆ. ಇದು ತುಮಕೂರು ಜಿಲ್ಲೆಯ ಬಯಲು ಸೀಮೆಯ ದೇಶೀ ಭಾಷೆ. ಕವಿಯ ಭಾವನೆಗಳಿಗೆ ಸಹಜವಾಗಿ ಒದಗಿ ಬಂದ ಈ ಭಾಷೆಯಲ್ಲಿ ಸೂರ್ಯನ ಬಗೆಗಿರುವ ಕವಿಯ ನಮ್ರ ಭಾವನೆಗಳು ಉಜ್ವಲವಾಗಿ ಕಂಡುಬರುತ್ತದೆ. ಕವಿ ಹೇಳುವಂತೆ ಭೂಮಿಯ ಚೆಲುವು ಕಂಗೊಳಿಸುವುದು ಸೂರ್ಯನಿಂದಲೇ. ಆದ್ದರಿಂದ ಕವಿ

ಸುಯ್ಯೆಂಬೋ ತಂಗಾಳೀ ಬೀಸ್ದಾಗ ಕೊಳಲಂಗೆ
ಸಂಗೀತ ಇಂಪಾಗಿ ಹಾಡಾಗ್ಯೆತೋ....
ಕುದುರೆ ಮೇಲೇರಿ ಬಂದ
ಸೂರ್ಯ ಸಿಂಗಾರ ತಂದ

(ಬಂಗಾರ ಬೆಳಗು - ಪುಟ 18)

ಎಂದು ಪ್ರಕೃತಿಯ ಸುಂದರ ಹಾಡು ಕೇಳಿ ಅದಕ್ಕೆ ಕಾರಣನಾದ ರವಿಗೆ ಕವಿಯು ಹಾಡಿನಲ್ಲಿ

ಬಾರೋ ಬಂಗಾರ ಸೂರ್ಯ ಬಾಗಲೇ
ಕೆಂಪು ಕೆಂಪಾನೆ ಕಿರಣ ತಾರಲೇ...

ಭೂತಾಯಿ ಚೆಂದ ಕಣ್ಣಾರೆ ಕಾಣಲೇ
ಹೊತ್ತಾರೆ ಅಂದವ ಹೆಂಗೆ ನಾ ಹೇಳಲೇ!
(ಬಂಗಾರ ಬೆಳಗು - ಪುಟ 18)

ಎಂದು ಹೊಗಳಿ ಕೊಂಡಾಡುತ್ತಾರೆ. ಸೂರ್ಯನ ಬೆಳಕು ಅದು ಬಂಗಾರ ಬೆಳಕು ಎಂದು ಸೂರ್ಯಕಿರಣದ ಬೆಲೆಯ ಅರಿವನ್ನು ಸಹೃದಯದಲ್ಲಿ ಮೂಡಿಸುತ್ತಾರೆ. ಈ ಕವಿತೆಯಲ್ಲಿ ಜಾನಪದೀಯವಾದ ಮೋಹಕ ಲಯಗಾರಿಕೆಯನ್ನೂ ಕಾಣಬಹುದು.

''ಚೈತ್ರೋತ್ಸವ'' ಎಂದ ಕವಿತೆ ಕವಿ ಚೈತ್ರವನ್ನು; ಅದರ ಮೋಹಕವಾದ ಬೆಡಗನ್ನು ವಿವರಿಸುವ ಕವಿತೆ. ಕವಿ ಇಲ್ಲಿ ಚೈತ್ರಮಾಸವನ್ನು ನೋಡುವ ಬಗೆ ಕುತೂಹಲಕರವಾದುದು. ಚೈತ್ರಮಾಸದ ಪ್ರಕೃತಿ ವ್ಯಾಪಾರಗಳು ಒಂದಕ್ಕೊಂದು ಪೂರಕವಾಗಿರುವ ಕ್ರಮವನ್ನು ಈ ಕವಿತೆಯಲ್ಲಿ ಗಮನಿಸಬಹುದು

ರೆಂಬೆಗೆ ರೆಂಬೆ ಹೂವಿಗೆ ದುಂಬಿ
ಹೀರಿವೆ ಜೇನನ್ನಾ ನಂಬಿ
ಹುಣ್ಣಿಮೆ ಮೂಡಿ ತಿಂಗಳ ಹರಡಿ
ಕುಣಿದ ವಸಂತ ಪದ ಪಾಡಿ
ಮನ್ಮಥನೇ ಬಂದಿರಲು
ರತಿಯನ್ನೇ ಕಂಡಿರಲು
ಪ್ರೇಮ ಪ್ರೇಮ ರಾಗ ಭೋಗ ಸ್ಪಂದನವನ್ನೇ ಕಂಡವಯ್ಯ
(ಚೈತ್ರೋತ್ಸವ - ಪುಟ 25)

ಚೈತ್ರೋತ್ಸವ ''ಆಗುವ ಬಗೆಯನ್ನು ಅದೊಂದು ಹೃದಯ ಸ್ಪಂದನ ಎಂದು ಕವಿ ಇಲ್ಲಿ ಕಲ್ಪಿಸಿದ್ದಾರೆ. ಇಂಥ ಹೃದಯ ಸ್ಪಂದನದಲ್ಲಿ ಪ್ರೀತಿ, ಪ್ರೇಮವಿದೆ, ಭೋಗವೂ ಇದೆ. ಎಲ್ಲಕ್ಕಿಂತ ಮಿಗಿಲಾಗಿ ಮನುಜಗೆ ಪೂರಕವಾದ ಅಪಾರ ಆಪ್ತ ಭಾವನೆಗಳಿವೆ... ಹಾಡುಗಳಿವೆ.

ಎರಡು ವೈರುಧ್ಯಗಳಲ್ಲಿ ಜೀವನ ಸೌಂದರ್ಯವನ್ನು ಹುಡುಕುವ ಪ್ರಯತ್ನ ಕವಿಯ ''ಚೈತ್ರ'' ಕವಿತೆಯಲ್ಲಿ ಅನಾವರಣಗೊಂಡಿದೆ.

ಬಾನಿಗೆ ಭಾನು ಚಂದ
ಭೂಮಿಗೆ ಬೆಡಗು ಅಂದ
ಚೈತ್ರಕೆ ಬೆರಗು ಸ್ಪಂದ

ಬೆರಗಿಗೆ ಮೆರುಗು ಬಂಧ!

(ಚೈತ್ರ - ಪುಟ 57)

ಇಲ್ಲಿ ವೈರುಧ್ಯಗಳಲ್ಲಿ ಜೀವನ ಸೌಂದರ್ಯವಿದ್ದರೂ ಅವು ಯಾವುವೂ ಬಂಧ ಮುಕ್ತವಲ್ಲ ಎಂಬ ಸಾರ್ವತ್ರಿಕ ಸತ್ಯವನ್ನು ಕವಿ ಇಲ್ಲಿ ಹೇಳಲೆತ್ನಿಸಿದ್ದಾರೆ.

ಕವಿಯ ''ಋತುಗಾನ'' ಎಂಬ ಕವಿತೆ ಚೈತ್ರಕಾಲ ತಂದಂಥ ಹೊಸತನವನ್ನು ಪ್ರಕೃತಿ ಮಡಿಲಿನಿಂದ ಪಟ್ಟಿ ಮಾಡುತ್ತಾ ಹೋಗುತ್ತದೆ. 'ಚೈತ್ರ ಬಂದನೆಂದು ಲತೆ ಲತೆಯಲ್ಲೂ ಹೂಗೊಂಚಲು, ಮಲೆ ಮಲೆಯಲ್ಲೂ ವರ್ಣಮೇಳ'. ಪ್ರಕೃತಿಯ ಅನನ್ಯವಾದ ರಮ್ಯ ನೋಟಗಳು ಇಲ್ಲಿ ಕವಿಯ ಮಾತುಗಳಲ್ಲಿ ಎರಕಗೊಂಡಿದೆ.

ಮನ ಮನದಲೂ ಉನ್ಮಾದ ಮೂಡಿದೆ
ಋತು ರಂಗು ಸವಿದು ಸವಿದು,
ಕಣ ಕಣದಲೂ ಉತ್ಸಾಹ ಕಂಡಿದೆ
ರಸರಾಗ ಹರಿದು ಹರಿದು

(ಋತುಗಾನ - ಪುಟ 62)

ಎಂದು ಹೇಳುವ ಕವಿ ಚೈತ್ರ ಕಾಲದ ಪ್ರಕೃತಿ ಸಿರಿಯನ್ನು ಕಂಡು ಉನ್ಮಾದಗೊಂಡಿದ್ದಾರೆ, ಉತ್ಸಾಹಿಗಳಾಗಿದ್ದಾರೆ. ಕವಿಗೆ ಇಲ್ಲಿ ಪ್ರಕೃತಿ ಎಂಬುದು ಉತ್ಸಾಹ ಭಾವನೆಗಳನ್ನು ಉದ್ರೇಕಿಸುವುದೇ ಆಗಿದೆ.

ಹೂವುಗಳಲ್ಲೇ ಅತ್ಯಂತ ಚೆಲುವಾದ ಹೂವು ಮುತ್ತುಗದ ಹೂವು. ಮುಸ್ಸಂಜೆಯ ಹೊತ್ತಿನಲ್ಲಿ ಮುತ್ತುಗದ ಹೂಗಳ ಮೋಹಕ ಮಂದಹಾಸ ಕವಿಯ ಅಂತರಂಗವನ್ನು ಮುದಗೊಳಿಸಿದ ಪರಿಯನ್ನು ಕವಿ ತಮ್ಮ ''ಮುತ್ತುಗದ ಹೂವುಗಳು'' ಎಂಬ ಕವಿತೆಯಲ್ಲಿ ಹೇಳಿಕೊಂಡಿದ್ದಾರೆ. ಹೇಗೆ ಕತ್ತಲೆಯ ಮೃತ್ಯುವಿನಿಂದ ಸೂರ್ಯನಿಗೆ ಸಾವಿಲ್ಲವೋ ಹಾಗೆ ಮುತ್ತುಗದ ಹೂ ಚೆಲುವಿಗೆ ಸಾವಿಲ್ಲ ಎಂಬುದು ಕವಿಯ ಇಂಗಿತ. ನಿಶೆಯು ಕಾಲಿಡುವ ಸಂದರ್ಭದಲ್ಲಿ ಮೃತ್ಯುಂಜಯನಾದ ಸೂರ್ಯನ ಜೊತೆಗೆ ಮುತ್ತುಗದ ಹೂವುಗಳು ಇಲ್ಲಿ ಸಂಜೀವವಾಗಿ ಉಳಿಯುವುದನ್ನು ಕವಿ ಇಲ್ಲಿ ಬಣ್ಣಕಟ್ಟಿ ಹಾಡಿದ್ದಾರೆ.

ಕಾಲು ಹಾದಿಗಳಲ್ಲಿ
ಕೆಂಧೂಳು ಕಣಿವೆಯಲಿ
ಕೌಲಿದನ ಕಾಲೆಳೆದು ಬರುತಿರಲು

ಮುತ್ತುಗದ ಹೂವುಗಳು ಮಂಜಾದವು
ಸುತ್ತ ಕತ್ತಲೆ ಮುತ್ತಿ ಮರೆಯಾದವು!
(ಮುತ್ತುಗದ ಹೂವುಗಳು - ಪುಟ 56)

ಕವಿಯು ಈ ಹೇಳುವಿಕೆಯಲ್ಲಿ ಕಾಲನ ಉರುಳಿನಲ್ಲಿ ಸುಂದರ ಮತ್ತು ಅಸುಂದರಗಳೆಂಬುದು ಸಹಜ ವ್ಯಾಪಾರಗಳು ಎಂಬುದನ್ನು ಮಾರ್ಮಿಕವಾಗಿ ಅರಿಯಬಹುದಾಗಿದೆ.

ಪ್ರೀತಿರಸವೇ ಮೈತಳೆದಂತೆ 'ನಿಸರ್ಗ' ಎಂಬುದು ಕವಿಯ ಕಣ್ಣಿಗೆ ಕಂಡು ಬರುವುದು ಈ ಕವಿ ಪ್ರಕೃತಿಯನ್ನು ಪರಿಭಾವಿಸುವ ನೆಲೆಗಳಲ್ಲಿ ನೋಡಬಹುದು. ಅವರು ತಮ್ಮ ''ಚೈತ್ರ ಗೀತ'' ಅನ್ನುವ ಕವಿತೆಯಲ್ಲಿ ಚೈತ್ರಮಾಸದ ಸಹಜ ಕ್ರಿಯೆಗಳನ್ನು ಒಬ್ಬ ರಸವಿಜ್ಞಾನಿಯಂತೆ ಹುಡುಕುತ್ತಾರೆ.

ಟೊಂಗೆ ಟೊಂಗೆ ಹೂವಾಗಿ
ಕಂಡ ಕಣ್ಣು ಹುಚ್ಚಾಗಿ
ಕೋಗಿಲೆ ಇನಿದಾಗಿ
ಕೂಗಿ ಕೂಗಿ ಸ್ವರವಾಗಿ
ತೊನೆದಾಡಿತೋ ಹೃದಯ ಕಡಲು
ಶೃತಿಯಾಯಿತೋ ಕವಿಯ ಕೊರಳು!
(ಚೈತ್ರ ಗೀತ - ಪುಟ 97)

ಎಂದು ಪ್ರಕೃತಿಯು ಮೋಹಕತೆಗೆ ರಸವಶರಾಗಿ ಪ್ರಕೃತಿ ಉತ್ತೇಜನದಿಂದ ಕವಿಯ ಕೊರಳು ಹಾಡುವುದು ಎಂದು ಹೇಳುತ್ತಾರೆ.

ಮುಂಗಾರು ಮಳೆ ಬರುವ ಸಂದರ್ಭ ನೆನೆದು ಕವಿಗೆ ಭೂಮಿ; ಕ್ಷಿತಿಜದ ಬಗೆ ಬಗೆಯ ಪ್ರತಿಕ್ರಿಯೆಗಳು ಹೇಗೆ ತನ್ನ ಸಹಜ ಕಲಾವಂತಿಕೆಯನ್ನು ಮೆರೆಯುತ್ತವೆ ಎಂಬುದನ್ನು ಕವಿ ಇಲ್ಲಿ ಹಿಡಿದಿಡುತ್ತಾ....

ಅನನ್ಯ ಬಗೆಯ ಬಾಂದಳದಲ್ಲೂ ಸಂತೋಷ ಹೊಮ್ಮಿದೆ
ಅನಿತ್ಯ ಬದುಕ ಗೊಂದಲದಲ್ಲೂ ಉನ್ಮಾದ ಚಿಮ್ಮಿದೆ;
ಅಸಂಖ್ಯ ಹೊದರ ತರುಲತೆಯಲ್ಲೂ ಲಾವಣ್ಯ ಮಿಂಚಿದೆ
ಅನೂಹ್ಯ ಪದರ ಕಾರ್ಮುಗಿಲಲ್ಲೂ ಹೂಮಳೆಯು ಸಂಚಿದೆ
(ಮುಂಗಾರು - ಪುಟ 114)

ಕವಿಗೆ ಈ ಭಾನು, ಈ ಭೂಮಿ ಈ ಸಸ್ಯ ಸಂಕುಲ, ಈ ಮುಗಿಲು ಎಲ್ಲವೂ ಸಂತೋಷ ತರುವಂಥವೇ ಆಗಿ, ಕವಿಯ ಮನಸ್ಸು ಪ್ರಕೃತಿಯಲ್ಲಿ ಲೀನವಾಗಿದೆ.

ಮಳೆಯೆಂಬುದು ಇಳೆಗೆ ಒಲಿದು ಬರುವಂಥದು. ಅದು ಒಲಿದು ಬರುವಾಗಿನ ಪ್ರಕೃತಿಯು ಹೇಗೆ ಚಲನಶೀಲವಾದುದು ಎಂಬುದನ್ನು ಈ ಕವಿತೆ ವಿವರಿಸುತ್ತದೆ.

ಮೂಕವಾದ ಮರಗಳೆಲ್ಲ ಗೀತೆ ಹಾಡಿವೆ
ಬಿಸಿಗೆ ಬೆಂದ ಗಿರಿಗಳೆಲ್ಲ ಸ್ನಾನ ಮಾಡಿವೆ
ಮುನಿಸಿಕೊಂಡ ಮನೆಗಳೆಲ್ಲ ಮಾತನಾಡಿವೆ
ನೀರ ಮರೆತ ನದಿಗಳೆಲ್ಲ ಜಾಡಿ ಹೇಳಿವೆ
(ಋತುಗೀತ - ಪುಟ 116)

ಕವಿಗೆ ನಿಸರ್ಗದ ಬಗೆಗಿನ ಸೂಕ್ಷ್ಮವಾದ ಭಾವನೆಗಳು ಇಲ್ಲಿ ಕಲಾತ್ಮಕ ರೂಪು ಪಡೆದಿವೆ. ದೊಡ್ಡರಂಗೇಗೌಡರು ಪ್ರಾರಂಭದಲ್ಲಿ ನಿಸರ್ಗದ ಸೌಂದರ್ಯಕ್ಕೆ ಬೆರಗಾದ ರೀತಿಯನ್ನು ತಮ್ಮ ಪ್ರಾರಂಭದ ಪದ್ಯವೊಂದರಲ್ಲಿ ಹೀಗೆ ವಿವರಿಸುತ್ತದೆ

ದಡದ ಬಳಿ ಮರದ ಸಾಲು
ಮೇಲೆ ಹಸಿರು
ಕೆಳಗೆ ಕೆಸರು
ರಮ್ಯ ಬಣ್ಣ ಕೆಂಪು ನೀರು

ಹೀಗೆ ನಿಸರ್ಗವನ್ನು ಅತ್ಯಂತ ರಮ್ಯವಾಗಿ ಚಿತ್ರಿಸುತ್ತ; ನಿಸರ್ಗದಲ್ಲೇ ಬದುಕಿನ ಅನನ್ಯ ನಿಗೂಢವನ್ನು ಹುಡುಕುವುದು ಈ ಕವಿಗೆ ತುಂಬಾ ಇಷ್ಟವಾದ ಕೆಲಸವೆಂದು ತೋರುತ್ತದೆ. ಇಂಥ ಹುಡುಕಾಟದಲ್ಲಿ ಕವಿಗೆ ಪ್ರಕೃತಿ ಕೇವಲ ವಿಲಾಸದ್ದಲ್ಲ; ಕೇವಲ ರಮ್ಯವೂ ಅಲ್ಲ. ಅವರ ಅನ್ವೇಷಣೆಯ ಕೌತುಕದ ಕಣ್ಣಿಗೆ ವೈಜ್ಞಾನಿಕ ಹರಿತವಿದೆ, ಹಾಗೆಯೇ ಪ್ರಾಯೋಗಿಕ ಮತ್ತು ಪ್ರಾಯೋಜನಾತ್ಮಕ ಮನೋಧರ್ಮವಿದೆ.

❑



# ಬೆಟ್ಟಗುಡ್ಡದ ಮೌನಗಾನ

● 'ಕಿರಣ' (ಕುತ್ಯಾಳ ನಾಗಪ್ಪಗೌಡ)

ಹಾಡುಗಳನ್ನು ಬರೆದು ಖ್ಯಾತರಾಗಿರುವ ದೊಡ್ಡರಂಗೇಗೌಡರು ಕಾವ್ಯಕ್ಷೇತ್ರಕ್ಕೆ ಕಾಲಿರಿಸಿದಾಗ ನವ್ಯಕಾವ್ಯ ಚಂಡೆಮದ್ದಳೆ ಬಾರಿಸುತ್ತಿತ್ತು. ನವ್ಯ ಚಳವಳಿಯ ಗುರುಗಳಂತಿದ್ದ ಗೋಪಾಲಕೃಷ್ಣ ಅಡಿಗರು ಯುವ ಬರಹಗಾರರಿಗೂ ಗುರುಗಳಾಗಿದ್ದರು. ಪ್ರತಿಭಾಸಂಪನ್ನ ಶಿಷ್ಯರು ಕಾವ್ಯ, ವಿಮರ್ಶೆ, ಸಣ್ಣಕತೆ, ಕಾದಂಬರಿ ಪ್ರಕಾರಗಳಲ್ಲಿ ಕೃತಿಗಳನ್ನು ಪ್ರಕಟಿಸಿ ಗಮನ ಸೆಳೆಯುತ್ತಿದ್ದರು. ಹೊಸ ಶಬ್ದಬಿಂಬಗಳ ಮೂಲಕ ಅನುಭವಗಳನ್ನು ಹೇಳುವ ಧೈರ್ಯವನ್ನು ಈ ಚಳವಳಿ ಕೊಟ್ಟಿತ್ತು. ಅನೇಕ ಯುವಕರು ಮುಕ್ತದ್ವಾರದ ಮೂಲಕ ಕಾವ್ಯ ಕ್ಷೇತ್ರಕ್ಕೆ ಕಾಲಿಟ್ಟರು. ಕಾವ್ಯಕ್ಷೇತ್ರಕ್ಕೆ ಪ್ರವೇಶ ಹೇಗೆ ಮುಕ್ತವೋ ನಿರ್ಗಮನವೂ ಅಷ್ಟೇ ಮುಕ್ತ! ಯಾಕೆ ಬಂದೆ ಎಂದು ಕೇಳುವವರಿಲ್ಲ. ಯಾಕೆ ಹೋದೆ ಎಂದು ವಿಚಾರಿಸುವವರಿಲ್ಲ. ಅನೇಕರು ಈಗ ವಿಳಾಸರಹಿತರಾಗಿದ್ದಾರೆ. 'ಕಣ್ಣು ನಾಲಗೆ ಕಡಲು' (1972) ಸಂಕಲನದ ಮೂಲಕ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದ ದೊಡ್ಡರಂಗೇಗೌಡರು ಸ್ವಶಕ್ತಿಯಿಂದ ಹೊಸ ಎತ್ತರಗಳಿಗೆ ಏರಿದ್ದಾರೆ. ಈಗ ಇವರ ರಚನೆಗಳು ಜನಮಾನಸದಲ್ಲಿ ಭಾವತರಂಗಗಳಾಗಿವೆ. 'ತೇರ ಏರಿ ಅಂಬರದಾಗೆ ನೇಸರು ನಗುತಾನೆ' ಎಂದು ಹಾಡಿಕೊಂಡು ಬದುಕಿನ ಚಟುವಟಿಕೆಯಲ್ಲಿ ಭಾಗವಹಿಸುವವರನ್ನು ಕಂಡಿರುವ ನಾನು ಈ ಮಾತನ್ನು 'ದಾಖಲಿಸುತ್ತಿದ್ದೇನೆ.'

'ಕಾಲದ ಎದುರು' ಹೆಸರಿನ ಕವಿತೆ ಇವರ 'ಕಣ್ಣು ನಾಲಗೆ ಕಡಲು' ಸಂಕಲನದಲ್ಲಿದೆ.

ಮುಗಿಯದ ಜಗತ್ತಿನೆದುರು ಕೆಲವರು ಗಡಿಯಾರವಾದರೆ
ಇನ್ನು ಕೆಲವರು ಅಂಥ ಗಡಿಯಾರಗಳಿಗೆ
ಕೀ ಕೊಡುವ ಕಿಲಾಡಿಗಳಾಗುತ್ತಾರೆ.
ಜೊತೆಗೆ ಅಲಾರಾಮ್ ಇಡುವ ಚತುರರಿದ್ದಾರೆ
ಇರುವ ಕೀ ಮುರಿಯುವವರಿದ್ದಾರೆ

ಅಂದಿನ ಯುವಕವಿಯ ಚಿಂತನೆ ಇದು. ಮಾನವ ಬದುಕನ್ನು ಗಡಿಯಾರದ ಚಿತ್ರದ ಮೂಲಕ ಕಾಣಿಸುತ್ತಾ ಬದುಕಿನಲ್ಲಿ ಭಾಗವಹಿಸುವ ಸಹಜೀವಿಗಳು, ಉತ್ತೇಜಕರಿರುವಂತೆ ಭಗ್ನ ಸಂತೋಷಿಗಳೂ ಆಗಿರುವುದನ್ನು ಕವಿತೆ ಸೂಚಿಸುತ್ತದೆ. ಕೆಲವರು ರಿಪೇರಿ (ವೈದ್ಯರು!) ಮಾಡುವವರಾದರೆ ಇನ್ನು ಕೆಲವರು ಮಾರಿಕೊಳ್ಳುವವರೂ ಇದ್ದಾರೆ. ಇನ್ನು ಕೆಲವರು ತಾವೇ ದೇವರೆಂದು ನಂಬಿಸಲು ಸಮರ್ಪಕ ವ್ಯವಸ್ಥೆಗಳನ್ನು ಮಾಡಿಕೊಳ್ಳುತ್ತಾರೆ!

ಮರೆಯದ ಜಗತ್ತಿನೆದುರು ಮೊರೆಯುವ ಮಾನವರು ಎಂದಿದ್ದರೂ ಉದುರು-ಆದರೂ ಯಾರೇಕೆ ಹೆದರಿಯಾರು?

ಗಡಿಯಾರ ಮುಂದೊಂದು ದಿನ ಸ್ತಬ್ಧವಾದರೂ ಭಯಪಡಬೇಕಾಗಿಲ್ಲ. ಕಾಲವನ್ನು ಮೀರುವ ಸಂಗತಿಗಳು ಬದುಕಿನಲ್ಲೇ ಇವೆ. ದೈಹಿಕ ಸಾಹಸಗಳು ಕಾಲದ ಪದಹತಿಗೆ ಪುಡಿಯಾಗಬಹುದು. ಆದರೆ ಬೌದ್ಧಿಕ ಸಾಧನೆಗಳು ಕಾಲವನ್ನು ಮೀರಬಲ್ಲವು, ವ್ಯಾಸ, ವಾಲ್ಮೀಕಿ, ಶೇಕ್ಸ್‌ಪಿಯರ್, ನ್ಯೂಟನ್, ಐನ್‌ಸ್ಟಿನ್-ಇವರ ಕೊಡುಗೆಗಳು ಕಾಲಾತೀತ. ಇವರು ಕಾಲದೆದುರು ಸೋಲೊಪ್ಪಿಕೊಳ್ಳುವವರಲ್ಲ!

'ಏಳು ಬೀಳಿನ ಹಾದಿ' ಸಂಕಲನದ 'ವಿಸ್ಮಯ' ಕವಿತೆ ಈ ಕವಿಯ ಚಿಂತನೆಗೆ ಕೈಮರದಂತಿದೆ.

ಮಣ್ಣಿನೊಡಲಿಂದ
ಗರುಕೆ ಚಿಗುರು ಮೂಡುವುದ
ಕಂಡು ವಿಸ್ಮಯ ನನಗೆ

ಅತ್ಯಂತ ಕನಿಷ್ಠವೆಂದು ಗ್ರಹಿಸಲ್ಪಡುವುದರಲ್ಲೂ ಬಹಳ ಮುಖ್ಯವಾದ ಸಂಗತಿಗಳು ಅಡಗಿರುತ್ತವೆ. ಹುಲ್ಲನ್ನು ತುಳಿದರೂ ಮತ್ತೆ ತಲೆಯೆತ್ತುತ್ತದೆ. ಸುಟ್ಟರೂ ಚಿಗುರುತ್ತದೆ. ಬದುಕಿನ ಸೂಕ್ಷ್ಮತೆ ಮತ್ತು ನಿರಂತರತೆಯನ್ನು ಗ್ರಹಿಸಬಲ್ಲವರಿಗೆ ಇದು ಮುಖ್ಯವಾಗುತ್ತದೆ. ಹತ್ತೊಂಬತ್ತನೆಯ ಶತಮಾನದ ಅಮೆರಿಕದ ಕವಿ ವಾಲ್ಟರ್ ವಿಟ್ಮನ್‌ಗೆ ಹುಲ್ಲಷ್ಟೇ ಅಲ್ಲ, ಹುಲ್ಲಿನ ದಳವೂ ಮುಖ್ಯ. ಅದಕ್ಕೂ ಗೌರವ ಸಲ್ಲಬೇಕು, 'ಹುಲ್ಲು ಎಂದರೆ ಏನು?' ಎಂದು ಪ್ರಶ್ನಿಸುವ ಮಗುವಿಗೆ ಸ್ಪಷ್ಟ ಉತ್ತರ ನೀಡಲು ಕವಿ ಅಸಮರ್ಥನಾಗಿದ್ದಾನೆ. ಯಾಕೆಂದರೆ ಹುಲ್ಲು ಜಗದೊಡೆಯನ ಕರವಸ್ತ್ರವಾಗಿರಬಹುದು; ಗೋರಿಗಳ ಮೇಲೆ ಬೆಳೆದ ಸುಂದರ ಕೂದಲಾಗಿರಬಹುದು; ಸಾಯಲು ನಿರಾಕರಿಸುವುದರಿಂದ ಅಮರತ್ವದ ಸಂಕೇತವು ಆಗಿರಬಹುದು! ಅಥವಾ ಅದೂ ಮಗುವಾಗಿರಬಹುದು! ಹೀಗೆ ಮಾನವ ಜೀವನದೊಂದಿಗೆ ಹುಲ್ಲನ್ನು ವಿಟ್ಮನ್ ಸಮೀಕರಿಸಿ ನೋಡಿದ್ದಾನೆ. ದೊಡ್ಡರಂಗೇಗೌಡರು ಕಾಣಿಸುವ ಗರುಕೆ ಹುಲ್ಲು ತುಳಿತಕ್ಕೆ ಸೋಲದ ಇಚ್ಛಾಶಕ್ತಿಗೆ ರೂಪಕವಾಗಿದೆ.

ನವ್ಯಕಾವ್ಯದ ರೂಪಕನಿಷ್ಠೆಯನ್ನುಳಿಸಿಕೊಂಡೇ ಗೀತೆಗಳನ್ನು ಬರೆಯಲು ಸಾಧ್ಯವೆಂದು ದೊಡ್ಡರಂಗೇಗೌಡರು ತೋರಿಸಿಕೊಟ್ಟಿದ್ದಾರೆ. 'ನೇಸರು ನಗುತಾನೆ' ಕವಿತೆಯನ್ನು ಸ್ವಲ್ಪ ಸಾವಧಾನದಿಂದ ಓದಿದರೆ ಇದು ಸ್ಪಷ್ಟವಾಗುತ್ತದೆ. ಕವಿತೆಯ ಶೀರ್ಷಿಕೆಯೇ ಸೂರ್ಯನ ನಗೆಯನ್ನು ಸೂಚಿಸುತ್ತದೆ. ಇದು ಕರ್ಮ ಸಾಕ್ಷಿಯ ನಗೆ! ಸೂರ್ಯ ಕಾಣದ್ದೇನಿದೆ? ಜಗತ್ತಿನ ಜೀವಶಕ್ತಿಯ ಜನಕನಾದ ಸೂರ್ಯನನ್ನು ನೋಡದವರಿಲ್ಲ ಅವನ ನಗುವನ್ನು ಕಂಡ. ಕವಿಗೆ ಅದನ್ನು ಓದುಗನಿಗೆ ಕಾಣಿಸುವ ಉತ್ಸಾಹವಿದೆ.

ತೇರ ಏರಿ ಅಂಬರದಾಗೆ ನೇಸರು ನಗುತಾನೆ
ಮರಗಿಡ ತೂಗ್ಯಾವೆ, ಹಕ್ಕಿ ಹಾಡ್ಯಾವೆ

ಸೂರ್ಯನ ರಥಕ್ಕೆ ಕಾಲಿಲ್ಲದ ಸಾರಥಿಯೆಂದು ಪುರಾಣ ಹೇಳುತ್ತದೆ. ಆ ಸೂರ್ಯ ಎಂದಾದರೂ ನಗುನಗುತ್ತಿದ್ದನೆ? ಆದರೆ ಈ ಕವಿತೆಯಲ್ಲಿ ನಗುವ ಸೂರ್ಯನ ಜೊತೆಗೆ ಹಾಡುವ ಹಕ್ಕಿಗಳಿವೆ. ತೂಗಾಡುವ ಮರಗಿಡಗಳಿಗೆ ಅರಳಿರುವ ಬಣ್ಣಬಣ್ಣದ ಹೂವುಗಳಿವೆ. ಬಾಳೆಗಳು ತೋಳುಗಳನ್ನು ಬೀಸುತ್ತವೆ. ಪತಂಗಗಳು ಬಣ್ಣದ ಚಿತ್ರಗಳನ್ನು ಬರೆಯುತ್ತವೆ.

ಸಾಲು ಸಾಲು ಬೆಟ್ಟ ಗುಡ್ಡ ಮೌನ ತಳೆದಾವೆ
ಆ ಮೌನದ ಗಾನವೆಲ್ಲರ ಮನಸ ಸೆಳೆದಾವೆ

ಬೆಟ್ಟಸಾಲುಗಳ ಗಾನದ ಮೌನವೇ ತುಂಬಾ ಅರ್ಥಪೂರ್ಣವಾದದು. ಬೆಟ್ಟದ ಅನುಭವ ಎಷ್ಟಿರಬಹುದು! ಎಷ್ಟು ಘಟನಾವಳಿಗಳಿಗೆ ಇವುಗಳು ಸಾಕ್ಷಿಯಾಗಿರಬಹುದು! ಎಲ್ಲವನ್ನೂ ಬಲ್ಲವನ ಮೌನ ಕುತೂಹಲದ ಕೇಂದ್ರವಾಗಿರುತ್ತದೆ. ಈ ಮೌನದ ಸುತ್ತಮುತ್ತ ಮಾವು ಬೇವು ತಾಳೆ ತೆಂಗುಗಳು ಲಾಲಿ ಹಾಡುತ್ತವೆ. ಸಿಹಿಯ ಜತೆಗೆ ಕಹಿಯೂ ಸಮೂಹಗಾಯನದಲ್ಲಿ ಸೇರಿಕೊಂಡಿದೆ. ಪ್ರೀತಿ, ಸ್ನೇಹಗಳು ಕೈಕೈ ಹಿಡಿದು ನಗುನಗುತ ಬದುಕಬೇಕೆಂಬ ಆಶಯವುಳ್ಳ ಈ ಕವಿತೆ ಜನಪ್ರಿಯವಾಗಿರುವುದಷ್ಟೇ ಅಲ್ಲ, ಬಾಳಿಗೆ ಚೈತನ್ಯ ನೀಡಬಲ್ಲ ಶಕ್ತಿಯನ್ನೂ ಪಡೆದಿದೆ.

ಜೀವನಪ್ರೀತಿಯ ಕವಿ ದೊಡ್ಡರಂಗೇಗೌಡರು ನಿಸರ್ಗದಿಂದ ಕಾವ್ಯ ಸಂಪತ್ತನ್ನು ಗಳಿಸಿಕೊಂಡವರು. ಇವರ ಕಾವ್ಯದಲ್ಲಿ ನೇಸರು ನಗುತ್ತಾನೆ; ಹಕ್ಕಿಗಳು ಹಾಡುತ್ತವೆ; ಗಿಡ ಮರಗಳು ತೂಗಿ ಬಾಗುತ್ತವೆ. ಮಾವು ಬೇವುಗಳು ಲಾಲಿ ಹಾಡುತ್ತವೆ. ಮುಂಜಾನೆ ಬೆಳಕಿನ ಬಾಗಿಲು ತೆರೆಯುತ್ತದೆ; ಬಾವಿಯ ಕಪ್ಪೆ ಮದ್ದಳೆ ಬಾರಿಸುತ್ತದೆ. ಮೋಡಗಳು ಆಕಾಶದಲ್ಲಿ ಕೋಟೆ ಕಟ್ಟುತ್ತವೆ!

ಗ್ರಾಮ ಜೀವನದ ಸಮೃದ್ಧ ಅನುಭವವಿರುವ ಈ ಕವಿಗೆ ಇರದವ್ಪಗಳ (Havenots) ಕುರಿತು ಕಾಳಜಿ ಇದೆ.

ದೂರದ ನಿರಾಶ್ರಿತರ ಗುಡಿಸಲ ಮಂದಿ
ಮೋರೆ ಮೇಲೆ
ಅಳುವಿನ ಮಳೆ

ಹೀಗೆ ಅಳಲಿನ ಮಳೆ ಸುರಿಸುವವರ ದೂರನ್ನು ದಾಖಲಿಸುವ ಕವಿತೆಗಳೂ ಇವರ ಸಂಕಲನಗಳಲ್ಲಿವೆ. ಬದುಕಿನ ಬೆರಗು, ಬೆಡಗು, ಪ್ರೀತಿ, ಸೌಂದರ್ಯಗಳಿಗಷ್ಟೇ ತನ್ನ ಕಾವ್ಯ ಶಕ್ತಿಯನ್ನು ಸೀಮಿತಿಗೊಳಿಸದ ಈ ಕವಿ ಹಸಿವು, ಅಸೂಯೆ, ದರ್ಪ, ಕ್ರೌರ್ಯ, ದಬ್ಬಾಳಿಕೆಗಳಿಂದ ಬದುಕು ಅಸಹನೀಯವಾಗುವುದನ್ನು ಕಾಣಿಸುವ ಕವಿತೆಗಳೂ ಇವರ ಹೃದಯದಿಂದ ಹರಿದು ಬಂದಿವೆ. ಪ್ರಸನ್ನತೆಗಾಗಿ ಹಾತೊರೆಯುವಿಕೆಯನ್ನು ಎಲ್ಲೆಂದರಲ್ಲಿ ಗುರುತಿಸುವುದು ಕಷ್ಟವೇನಲ್ಲ.

❑



# ಅಂದಿನ ಸೃಜನಶೀಲ ಸಸಿ.... ಇಂದು ಹೆಮ್ಮರ!

• ಉಮಾದೇವಿ

ಕವಿ ಡಾ॥ ದೊಡ್ಡರಂಗೇಗೌಡರು ನಾಡಿಗೆಲ್ಲಾ ಚಿರಪರಿಚಿತರು. ಅವರ ಹಸನ್ಮುಖ ವ್ಯಕ್ತಿತ್ವ ಕನ್ನಡ ಸಾರಸ್ವತ ಲೋಕಕ್ಕೆ ಸುಪರಿಚಿತ. ಕನ್ನಡಿಗರಿಗೆ ಇಂದು ರಸದೊರತೆಯ ಕಾವ್ಯ ಚಿಲುಮೆಗಳನ್ನು ನೀಡುತ್ತಿರುವ ಈ ಹಸನ್ಮುಖದ ಕವಿ 34, 35 ವರ್ಷಗಳ ಹಿಂದೆ ನನ್ನ ಸಹಪಾಠಿಯಾಗಿದ್ದುದು ನಿಜಕ್ಕೂ ನನಗೆ ಹೆಮ್ಮೆಯ ವಿಷಯ. ಯಾರಾದರೂ ದೊಡ್ಡರಂಗೇಗೌಡರ ಬಗ್ಗೆ ಒಳ್ಳೆಯ ಮಾತುಗಳನ್ನು ಆಡುವಾಗ ಅವರು ನನ್ನ ಜೊತೆಗೆ ಓದಿದವರು ಎಂದು ನಾನು ಹೆಮ್ಮೆಯಿಂದ ಹೇಳಿಕೊಳ್ಳುವುದು ಉಂಟು.

ಗೌಡರು ನನ್ನ ಸಹಪಾಠಿಯಾಗಿದ್ದುದು ನಾನು ಎಂ.ಎ. ತರಗತಿಯಲ್ಲಿ ಓದುವಾಗ. ಎರಡು ವರ್ಷಗಳ ಅವಧಿ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ. ಆ ಸಮಯದಲ್ಲಿ ಕನ್ನಡ ಸಾಹಿತ್ಯಲೋಕದ ದಿಗ್ಗಜರಾದ ರಂ.ಶ್ರೀ. ಮುಗಳಿ, ಜಿ.ಎಸ್. ಶಿವರುದ್ರಪ್ಪ, ಎಂ.ಚಿದಾನಂದಮೂರ್ತಿ, ಚಂದ್ರಶೇಖರ ಕಂಬಾರ, ಎಸ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಮುಂತಾದವರು ಉಪಾಧ್ಯಾಯರಾಗಿದ್ದರು. ಅವರುಗಳ ತರಗತಿಯ ಪಾಠಗಳು ಇಂದಿಗೂ ನಮ್ಮ ನೆನಪಿನ ಇತಿಹಾಸದ ಪುಟಗಳು. ಈ ಎಲ್ಲಾ ಉಪಾಧ್ಯಾಯರಿಗೂ ಗೌಡರು ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದರು.

ದೊಡ್ಡರಂಗೇಗೌಡರು ಇಂದು ಹೇಗೆ ಸರಳ ಸೌಜನ್ಯದ ವ್ಯಕ್ತಿಯಾಗಿರುವರೋ ಹಾಗೆಯೇ ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿಯೂ ಇದ್ದರು. ಹುಡುಗ ಸಹಜವಾದ ಗೌಜು, ಗದ್ದಲಗಳಿಂದ ಅವರು ಸದಾ ದೂರವೇ ಉಳಿಯುತ್ತಿದ್ದರು. ಹಾಗೆಂದು ಎಲ್ಲರಿಂದ ಅವರು ಪ್ರತ್ಯೇಕವಾಗಿಯೇನೂ ಇರುತ್ತಿರಲಿಲ್ಲ. ಎಲ್ಲರ ಬಳಿಯೂ ಸಹಜವಾಗಿ ನಡೆದುಕೊಳ್ಳುತ್ತಿದ್ದರು.

ಆಗ ಎಂ.ಎ. ಎರಡನೆ ವರ್ಷದಲ್ಲಿ ಐಚ್ಛಿಕವಾಗಿ ಒಂದು ವಿಷಯವನ್ನು ಆರಿಸಿಕೊಂಡು

ಅಧ್ಯಯನ ಮಾಡಬೇಕಿತ್ತು. ಅಂದಿಗೆ, ಭಾಷಾ ವಿಜ್ಞಾನವು ಆಕರ್ಷಕವಿಷಯವಾಗಿದ್ದು ಬಹಳಷ್ಟು ವಿದ್ಯಾರ್ಥಿಗಳು ಭಾಷಾ ವಿಜ್ಞಾನವನ್ನು ಆರಿಸಿಕೊಂಡಿದ್ದರು. ನಾವು ಕೇವಲ ಎಂಟು, ಒಂಭತ್ತು ಜನಗಳಷ್ಟೇ ಜಾನಪದವನ್ನು ಆರಿಸಿಕೊಂಡಿದ್ದುದು. ಅಷ್ಟು ಜನರಲ್ಲಿ ಗೌಡರೂ ಒಬ್ಬರು. ಆ ವಿಷಯವನ್ನು ಆರಿಸಿಕೊಂಡಿದ್ದರ ಪ್ರತಿಫಲವೆಂಬಂತೆ ಅವರ ಎಷ್ಟೋ ಕವನಗಳಲ್ಲಿ ಜಾನಪದ ಸೊಗಡನ್ನು ಕಾಣಬಹುದು.

ಉದಾಹರಣೆಗೆ

"ಕೋಗಿಲೆ ಕೂಗುತಾವೋ
ನವ್ವಾಲೆ ಕುಣಿಯುತಾವೊ
ಮುಂಗಾರು ಬರುವಾಗ
ತಂಗಾಳಿ ತರುವಾಗ
ಕೋಗಿಲೆ ಕೂಗುತಾವೊ
ನವ್ವಾಲೆ ಕುಣಿಯುತಾವೊ"

(ಹೂವು-ಹಣ್ಣು 81)

ನಮ್ಮ ಜಾನಪದ ವಿಷಯದ ಉಪಾಧ್ಯಾಯರು ಮಾನ್ಯಶ್ರೀ ಚಂದ್ರಶೇಖರಕಂಬಾರರು. ಅವರ ತರಗತಿಗಳೆಂದರೆ ನಮಗೆ ಅಚ್ಚುಮೆಚ್ಚು. ಅವರು ತರಗತಿ ತೆಗೆದುಕೊಂಡರೆ ಅದು ಕೇವಲ ತರಗತಿಯಾಗುತ್ತಿರಲಿಲ್ಲ, ಬದಲಿಗೆ ಅನುಭವದ ಮೂಸೆಯಾಗುತ್ತಿತ್ತು. 'ಜೋಕುಮಾರನ ಹಾಡಿ'ನ ಬಗ್ಗೆ ವರ್ಣಿಸುವಾಗ ಅವರು ಅದನ್ನು ಹಾಡಿಯೇ ತೋರಿಸುತ್ತಿದ್ದರು. ಅವರ ಕಂಠ ಮಾಧುರ್ಯಕ್ಕೆ, ಜಾನಪದ ಸೊಗಡಿನ ಹಾಡುಗಳಿಗೆ ಮರುಳಾಗದವರಿಲ್ಲ. ನಾವು ಮುಂದಿನ ತರಗತಿಗೆ ಗೈರುಹಾಜರಾಗಿ ಅವರ ಹಾಡನ್ನು ಕೇಳುತ್ತಾ ಕುಳಿತಿದ್ದುದು ಉಂಟು. ಅದನ್ನೇ ಗೌಡರು ತಮ್ಮ 'ಕಂಬಾರರಿಗೆ' ಕವನದಲ್ಲಿ "ನಿನ್ನ ಹಳ್ಳಿ ಮೋಡಿಪದ ಶೈಲಿಗೆ ಪಟ್ಟಣದ ಪಂಡಿತಮಂಡಲಿಯೇ ತಡವರಿಸಿತು ನಿಬ್ಬೆರಗ ತೋರಿ" ಎಂದು ವರ್ಣಿಸಿರುವುದು ಉಂಟು. ಕಂಬಾರರು ಎರಡನೆಯ ವರ್ಷದ ಶೈಕ್ಷಣಿಕ ಪ್ರವಾಸಕ್ಕೆ ನಮ್ಮನ್ನೆಲ್ಲಾ ಚಿಕ್ಕನಾಯಕನ ಹಳ್ಳಿಯ 'ಹುಳಿಯಾರು' ಗ್ರಾಮಕ್ಕೆ ಕರೆದೊಯ್ದಿದ್ದರು. ಅದೂ ನಮ್ಮ ಸಹಪಾಠಿ 'ಸಿದ್ಧರಾಮಯ್ಯ'ನವರ ಊರು. ಅವರ ಮನೆಯಲ್ಲಿ ನಮಗೆಲ್ಲಾ ಜೋರಿನ ಆತಿಥ್ಯ. 'ಸೋಮನ ಕುಣಿತ', 'ಬಯಲಾಟನಾಟಕ', 'ಜಾನಪದ ಗಾಯಕರು' ಎಲ್ಲವನ್ನೂ ಅಲ್ಲಿ ನೋಡಿ ಬಂದ ನೆನಪು ಇನ್ನೂ ಹಸಿರು ಹಸಿರಾಗಿದೆ.

ಸೃಜನಶೀಲತೆಯು ಗೌಡರು ವಿದ್ಯಾರ್ಥಿಯಾಗಿದ್ದಾಗಲೇ ಅವರಲ್ಲಿ ಸಸಿಯಾಗಿ ಮೂಡಿತ್ತು. ಅವರ ಕವನಗಳನ್ನು ಆ ಸಮಯದಲ್ಲಿ ನಾನೂ ನನ್ನ ಒಬ್ಬ ಆಪ್ತಗೆಳತಿಯು ಓದುತ್ತಿದ್ದುದುಂಟು.

ಅವು ಗೇಯರೂಪದಲ್ಲಿ ಗೀತಗಳಾಗಿ ಪ್ರಕಾಶಿಸುತ್ತವೆ ಎಂಬುದು ನಮಗೆ ನಿಜವಾಗಿಯೂ ಊಹೆಗೆ ನಿಲುಕಿರಲಿಲ್ಲ. ''ನೇಸರ ನೋಡು'' ಎಂಬ ಕವನ ''ಪರಸಂಗದ ಗೆಂಡೆ ತಿಮ್ಮ'' ಎಂಬ ಚಲನಚಿತ್ರದಲ್ಲಿ ಚಿತ್ರಗೀತೆಯಾಗಿ ಹೊರಹೊಮ್ಮಿದಾಗಲೇ ನಾವು ಅದರ ಸೊಗಸನ್ನು ಕಂಡುದು. ಇಂದು ಅವರ ಎಷ್ಟೋ ಕವನಗಳು ಚಲನಚಿತ್ರಗೀತೆಗಳಾಗಿ ಹೊರಹೊಮ್ಮಿವೆ. ಗೌಡರು ಎಲ್ಲರಿಗೂ ಪರಿಚಿತವಾಗಿದ್ದಾರೆ.

ಹೀಗೆ ಗೌಡರ ಸೃಜನಶೀಲ ಸಸಿಯು ಅಂದಿನಿಂದ ಇಂದಿನವರೆಗೆ ಬೆಳೆದು ಇದೀಗ ಹೆಮ್ಮರವಾಗಿದೆ. ಆದರೆ ಈ ಸಸಿಯು ತಂಪಾದ ತಣಿವಿನ ಜಲವನ್ನುಂಡು ಸೌಖ್ಯದಿಂದ ಬೆಳೆದದ್ದಲ್ಲ. ಅತಿ ಪರಿಶ್ರಮದಿಂದ, ಕಠಿಣ ಪರಿಸ್ಥಿತಿಗಳನ್ನು ಎದುರಿಸುತ್ತ ಬೆಳೆದಿದೆ ಎಂಬುದನ್ನು ಅವರ ಕೆಲವು ಕವನಗಳನ್ನು ಓದಿ, ಅನ್ಯರಿಂದ ಕೇಳಿ ಬಲ್ಲೆ. ಅವರ ಕಾವ್ಯಶ್ರದ್ಧೆ ಎಂತಹ ಕಠಿಣ ಪರಿಸ್ಥಿತಿಗಳಲ್ಲೂ ಕುಗ್ಗಿರಲಿಲ್ಲ ಎಂಬುದಕ್ಕೆ ಅವರ 'ಪಯಣಿಗನ ಹಾಡು' ಕವನದ ಕೆಲವು ಸಾಲುಗಳನ್ನು ಉದಾಹರಿಸಬಹುದು.

''ನಗರದ ಕೊಂಪೆಯ ಸಂದಿಗಳಲ್ಲಿ
ಹಂದಿಯ ಗೂಡಿನ ಇಕ್ಕಟ್ಟಿನಲ್ಲಿ
ಈಚಲ ಚಾಪೆಯ ಮೇಲೆ ಮಲಗಿ
ರೊಟ್ಟಿ ಕಡಲೆ ತಿಂದುಕೊಂಡು
ಬೆವರ ಬಸಿಯುತ ಹಗಲಿರುಳಿನಲ್ಲಿ
ನೌಕರಿ ಚಾಕರಿ ನೀಯತ್ತಿನಲ್ಲಿ
ಪೈಸೆಗೆ ಪೈಸೆಯ ಸೇರಿಸಿ ಪಡೆದು
ಅಕ್ಷರಜ್ಞಾನಕೆ ಎದೆಯಾಸೆ ತುಡಿದು
ಒಂದೊಂದೆ ಪುಸ್ತಕ ಕೊಂಡುಕೊಂಡು
ನನ್ನದೇ ಕೋಣೆಯ ಒಳಗಡೆ ಕುಳಿತು
ಬಿಡುವಿನ ಸಮಯದಿ ಓದಿದೆ ಓದಿದೆ''

ಹೀಗೆ ಜೀವನದಲ್ಲಿ ಎದುರಾಗುವ ಕಠಿಣ ಪರಿಸ್ಥಿತಿಗಳನ್ನು ಎದುರಿಸಿಕೊಂಡು ಬೆಳವಣಿಗೆಯ ಹಾದಿಯಲ್ಲಿ ಸಾಗುವಾಗ ಇತರರ ಅಸೂಯೆ, ಮಾತ್ಸರ್ಯಗಳು ಕೆಲವೊಮ್ಮೆ ಅವರನ್ನು ಕಾಡಿದ್ದರೂ ಅವರ ಆತ್ಮವಿಶ್ವಾಸ ಅವರನ್ನು ಕುಗ್ಗಲು ಬಿಟ್ಟಿಲ್ಲ. ಅವುಗಳನ್ನು ಮೆಟ್ಟಿ ಅವರು ಮುನ್ನಡೆದಿದ್ದಾರೆ ಎಂಬುದಕ್ಕೆ ಗೌಡರ ''ಆತ್ಮ ವಿಶ್ವಾಸ'' ಎಂಬ ಕವನದ ಸಾಲುಗಳು ಸಾಕ್ಷಿಯಾಗಿವೆ.

''ಸೋತು ಸೊರಗಿ ಸೊಪ್ಪಾದಾಗ
ಹಾದಿ ತಪ್ಪಿ ಬೆಪ್ಪಾದಾಗ

ಮನಸು ಮುದುಡಿ ಮಂಕಾದಾಗ
ಒಳಗಿನೊಳಗಿಂದ ಪುಟಿವ
ಮೂಲಭಾವ ಆತ್ಮ ವಿಶ್ವಾಸ!

ಅವರು ಇವರು ಹಂಗಿಸುವಾಗ
ಅಂತರಂಗ ರೋದಿಸುವಾಗ
ನೈರಾಶ್ಯ ಛೇಡಿಸುವಾಗ
ಸುಪ್ತವಾಗೇ ಆಪ್ತ ನುಡಿವ
ಭಾವ ಬೆಳಕು ಆತ್ಮವಿಶ್ವಾಸ!''

ಈ ಆತ್ಮ ವಿಶ್ವಾಸವೇ ಬವಣೆಗಳನ್ನು ಮೀರಿ ಮುಂದೆ ನಡೆದು ಕವಿಯ ಮನದಲ್ಲಿ ಆಶಾಕಿರಣ ಮೂಡಿಸಿ ಕಾವ್ಯಾಪ್ರಚೋದನೆಯನ್ನು ನೀಡುವಲ್ಲಿ ಸಫಲವಾಗಿದೆ. ಉದಾಹರಣೆಗೆ 'ಆಶಾಕಿರಣ'ದ ಕೆಲವು ಸಾಲುಗಳು.

''ನನ್ನ ಹೆಜ್ಜೆಯು ಮರೆಯುತ್ತಿದೆ
ಬವಣೆ ದಿನಗಳ ಕಹಿವಿಭವ
ನನ್ನ ಲೇಖನಿ ಬರೆಯುತ್ತಿದೆ
ಆಶಾಕಿರಣದ ಮಾರ್ದವ''

ಈ ಆಶಾಕಿರಣದ ಬೆಳಕಿನ ಹಾದಿಯಲ್ಲಿ ನೆರವು ನೀಡಿರುವವರು ಕೆಲವರು ಹಿರಿಯರಲ್ಲದೆ, ಅವರ ಆತ್ಮಸಂಗಾತಿಯೂ ಕೂಡ ಎಂಬುದನ್ನು 'ಪ್ರೀತಿಯ ಅನುಭೂತಿ' ಕವನದ ಕೆಲವು ಸಾಲುಗಳು ಸೂಚಿಸಿವೆ.

''ಋತುಮಾನಗಳ ಸಮರಸ ತಿಳಿದು
ದುಗುಡ ದುಮ್ಮಾನ ಕಣದಲೂ ನಲಿದು
ಬೇವು ಬೆಲ್ಲ ಮೆರೆದವಳು ನನ್ನ ಸಂಗಾತಿ
ಬಾಳಲಿ ಬಿರುಗಾಳಿ ಎದ್ದಾಗ
ಯಾತನೆ ಕೂಪದಲಿ ಬಿದ್ದಾಗ
ಎಡೆ ಬಿಡದೆ ಸಾಗಿ ಬಂದ ಜೊತೆಗಾಗಿ ಆತ್ಮ ಸಂಗಾತಿ
ತಾಯಂತಿರೆ ಬದುಕು ಸುಖವಾಗದೇ''

'ಹೂವು-ಹಣ್ಣು' ಕವನಸಂಕಲನದ ಸೃಜನಶೀಲ ಆತ್ಮಾವಲೋಕನದಲ್ಲಿ ಗೌಡರು ''ಅಂದು

ಮಾವು-ಬೇವನ್ನು ಪ್ರಕಟಿಸುವ ಕಾಲಕ್ಕೆ ಭಾವಪೂರ್ಣವಾಗಿ ಪಲ್ಲವಿಸಿ ಹೂವಾಗಿದ್ದವನು ಈ ಜೀವನದಲ್ಲಿ ಸಾಕಷ್ಟು ಏಳು-ಬೀಳನ್ನು ಕಂಡು ಏನೇನೆಲ್ಲಾ ಪರಿವರ್ತನೆಗಳಾಗಿ ಈಗ ಹಣ್ಣಾಗಿದ್ದೇನೆ' ಎನ್ನುತ್ತಾರೆ. ಮಾಗಿದ ಅವರ ಸೃಜನಶೀಲ ಮನಸ್ಸು ನಾದಬ್ರಹ್ಮನ ದರ್ಶನ ಮಾಡಿದೆ. ಅದರದ್ದೇ ಫಲವಾಗಿ ಈ ಸಾಲುಗಳು ಮೂಡಿವೆ.

''ಯೋಗಂಯೋಗ ಕೂಡಿ ಬರಲು ನಾದಲೋಕ ರೋಮಾಂಚನ
ಗಾನ ಲೀನವಾಗಿ ನುಡಿಯೆ ಮಧುರ ಪಲುಭವ ತರಣ
ಗೀತದೊಳಗೆ ಐಕ್ಯವಾಗೆ ಓಂಕಾರ ಚೇತನ
ಹೃನ್ಮನ ಮೀಟಿದಂತೆ ಲಹರಿ ಲಹರಿ ಆವರ್ತನ
ವೀಣಾಪಾಣಿ ಧ್ಯಾನದಲ್ಲಿ ಗೀತಿಕೆ ಅನಾವರಣ
ತಾಳ ಮೇಳ ಸೇರಿ ಬರಲು ಅಪೂರ್ವ ಸ್ವರದ ರಿಂಗಣ
ಗಾನಗಂಧರ್ವ ಜಗದ ಅನಂತ ಸಂಜೀವನ
ಅಂತರಾತ್ಮ ಹಾಡುತಿರಲು ನಾದ ಬ್ರಹ್ಮದರ್ಶನ''

ಹೀಗೆ ದೊಡ್ಡರಂಗೇಗೌಡರು ಮಾಗಿ ಹಣ್ಣಾದ ಕವಿಯಾಗಿದ್ದಾರೆ. ಹಿಂದೆ ನನ್ನ ಸಹಪಾಠಿಯಾಗಿದ್ದಾಗ ಗೌಡರು ಹತ್ತರಲ್ಲಿ ಹನ್ನೊಂದರಂತೆ ಕಂಡವರು ಪ್ರಗತಿಯ ಪಥದಲ್ಲಿ ಹೆಜ್ಜೆಹಾಕಿ ನಾಡಿನ ಕೀರ್ತಿಶಾಲಿ ಕವಿಯಾಗಿರುವುದು ನನಗೆ ನಿಜಕ್ಕೂ ಬಹಳ ಸಂತಸಕರ ವಿಷಯ. ದೇವರು ಅವರಿಗೆ ಆಯುಸ್ಸು, ಆರೋಗ್ಯಗಳನ್ನು ನೀಡಿ ಹರಸಲಿ ಎಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ.





# ದೊ.ರಂ. ಗೌಡರ ಗೀತಾವಲೋಕನ

• ಪ್ರೊ॥ ಎಚ್.ವಿ. ಶ್ರೀನಿವಾಸ ಶರ್ಮ

ಸುಮಾರು 30-35 ವರ್ಷಗಳಿಂದ, ನಾನು, ಹತ್ತಿರದಿಂದ ನೋಡುತ್ತಿರುವ, ನನ್ನ ಆತ್ಮೀಯ ಶಿಷ್ಯ ಗೆಳೆಯರೊಬ್ಬರ ಬದುಕಿನ ಆಗುಹೋಗುಗಳು, ಅವರ ಮನೋಧರ್ಮ, ಮೃದು ಸ್ವಭಾವ, ಮಾನವೀಯತೆ ತುಂಬಿದ ಪ್ರೀತಿ, ವಿಶ್ವಾಸಗಳ ನಿಜ ಜೀವನವೇ, ಕಾವ್ಯವಾಗಿ ಹೊರಬಂದಿರುವ ಭಾವಗೀತೆಗಳ ಒಂದು ಅವಲೋಕನ, ಈ ಲೇಖನ. ಪ್ರತಿಯೊಬ್ಬ ಬರಹಗಾರನಿಗೂ, ತನ್ನದೇ ಆದ ಅಭಿರುಚಿ, ಧೋರಣೆ, ಲೋಕ ವೀಕ್ಷಣೆ, ವೈಚಾರಿಕತೆಗಳಿದ್ದು 'ತನ್ನತನ'ವನ್ನು ಉಳಿಸಿಕೊಂಡೇ, ಭಾವನೆಗಳನ್ನು ಅಭಿವ್ಯಕ್ತಗೊಳಿಸುವ ಸ್ವಾತಂತ್ರ್ಯವಿರುತ್ತದೆ. ಅಂತಹವರಲ್ಲಿ ದೊಡ್ಡರಂಗೇಗೌಡರೂ ಒಬ್ಬರು.

ಈಗಾಗಲೆ ಕರ್ನಾಟಕದ ಜನತೆಗೆ ಇವರು ಚಿರಪರಿಚಿತರಾಗಿರುವ ಕವಿ. ಚಲನಚಿತ್ರ ಗೀತೆಗಳ ಮೂಲಕ ಕವಿಯಾಗಿ, ರಸಿಕರ ಮನಸ್ಸಿನಲ್ಲಿ ನೆಲೆಯಾಗಿದ್ದಾರೆ. 'ಸಿನಿಮಾಗೀತೆ' ಎಂದೊಡನೆ ಅದರ ರಚನೆಯ ಅನುಭವ ಕಷ್ಟಕರವಾದುದೆಂದು ಹೇಳಬಹುದು. ಆದರೂ ಇವರ ಕವನಗಳು ಸಿನಿಮಾ ಹಾಡೆಂದು ಕರೆಸಿಕೊಂಡಿದ್ದೂ ಉಂಟು. ಆದರೆ, ಅವು ಕೇವಲ ಸಿನಿಮಾ ಹಾಡುಗಳೆಂದು ನಾನು ಕರೆಯಲು ಇಷ್ಟಪಡುವುದಿಲ್ಲ. ಅದು ಶುದ್ಧ ಸಾಹಿತ್ಯ, ಕಾವ್ಯ ಸಾಹಿತ್ಯ. ಕಾಟಾಚಾರಕ್ಕೆ ಸಾಂದರ್ಭಿಕವಾಗಿ ಬರೆದ ಪದ್ಯಗಳಲ್ಲಿ. ಕಾವ್ಯದ ಕಸುರಿನಿಂದ ಕೂಡಿರುವ ಪದ್ಯಗಳೇ ಎನ್ನಬಹುದು.

ಇವರು ಮೂಲತಃ ಕವಿ ಹಾಗೂ ಸಹೃದಯಿ. ರಮ್ಯ ಕಾವ್ಯ ಹಾಗೂ ನವ್ಯ ಕಾವ್ಯ-ಈ ಎರಡರ ಕ್ಷೇತ್ರದಲ್ಲಿ ದುಡಿದವರು. ಎಲ್ಲಕ್ಕಿಂತ ಮಿಗಿಲಾಗಿ ಒಬ್ಬ ಹೆಸರಾಂತ ಕನ್ನಡ ಪ್ರಾಧ್ಯಾಪಕರು. ಎಸ್.ಎಲ್.ಎನ್. ಕಾಲೇಜಿನಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಕನ್ನಡ ಕಲಿಸಿದವರು. ಆಳವಾದ ವಿದ್ವತ್ತಿನಿಂದ ಅಪಾರ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬೇರೂರಿನಿಂತ ಪ್ರಾಚಾರ್ಯರು.

ಇಂತಹ ಪ್ರಖ್ಯಾತ ಕವಿ, ಸಾಹಿತಿಯೊಬ್ಬರ ಕಾವ್ಯಾವಲೋಕನ ಮಾಡಲು ಪ್ರಯತ್ನಿಸುವುದು ನನ್ನ ಸದ್ಯದ ಗುರಿಯಾಗಿರುತ್ತದೆ. ಇದು ಒಟ್ಟು ಕೃತಿಗಳ ಸಮಗ್ರ ಪರಿಚಯವಾಗದಿದ್ದರೂ,

ಕೃತಿಗಳಲ್ಲಿ ಸೂಕ್ಷ್ಮಾವಲೋಕನ ಮಾಡಿದ ಪ್ರಧಾನ ಅಂಶಗಳ ಒಂದು ಕಿರುಪರಿಚಯದ ಲೇಖನ ಎಂದೂ ಹೇಳಬಹುದು.

ಬಾಲ್ಯ, ಹರೆಯ, ದಾಂಪತ್ಯ - ಈ ಕಾಲಾನುಕ್ರಮದಲ್ಲಿ ಬೆಳೆದುಬಂದ ಒಬ್ಬ ಸಹೃದಯ ಕವಿಯ ಆಂತರಿಕ ಬೆಳವಣಿಗೆಯನ್ನು ಗುರುತಿಸಿದಾಗ, ಲೋಕದ ಅನೇಕಾನೇಕ ವ್ಯಾಪಾರಗಳಲ್ಲಿ ಕೇಂದ್ರೀಕರಿಸಿದ ಪ್ರಧಾನ ವಲಯಗಳೆಂದರೆ, ನಿಸರ್ಗ, ಪ್ರೇಮ-ವಿರಹ, ನಾಡು ನುಡಿಗಳಾಗುತ್ತವೆ.

''ಜೀವನದ ಪ್ರತಿಯೊಂದು ಕ್ಷಣವನ್ನು ಅರ್ಥಪೂರ್ಣವಾಗಿಸಬೇಕು ಎಂದು ಹಂಬಲಿಸುವವನು ನಾನು, ಬದುಕಿನ ಬಲೆಯುಲ್ಲಿ ಒಳ್ಳೆಯ ಹಾಗೂ ಒಳ್ಳೆಯದಲ್ಲದ ಎರಡುಬಗೆಯ ಎಳೆಗಳಿವೆ. ಸಾಧ್ಯವಾದಷ್ಟು ನಾನು ಒಳ್ಳೆಯ ಎಳೆಹಿಡಿದು, ಭಾವದ ಹಂದರಹಬ್ಬಿರುವ ಪ್ರಯತ್ನವನ್ನೇ ಮಾಡುತ್ತೇನೆ. ಮೋಹಕ ಬಾಲ್ಯದ ಮುಂಜಾನೆಯಿಂದ ನಾನು ನಡೆಯುತ್ತಾ ಬಂದಹಾದಿ ಇದು'' ಎಂಬ ಕವಿ ತನ್ನ ಧೋರಣೆ, ಧ್ಯೇಯಗಳಿಂದಲೇ ಕವಿ ಕರ್ಮವನ್ನು ಆರಂಭಿಸುತ್ತದೆ.

'ಜಗಲಿ ಹತ್ತಿ ಇಳಿದು' ನವ್ಯ ಕಾವ್ಯ ಸಂಕಲನದಿಂದ ಆರಂಭಗೊಂಡ ಕವಿ ಚೇತನ, ಭಾವಾಭಿವ್ಯಕ್ತಿಯ ಸಾಧನೆಯಲ್ಲಿ ಹತ್ತಿ-ಇಳಿಯುವ; ಈ ಸರತ್ತಿನಲ್ಲೇ, 'ಹತ್ತಿ ನಿಲ್ಲುವ' ಮತ್ತೆ 'ಇಳಿಯದಿರುವ', ಕವಿತಾಮಾರ್ಗವೊಂದನ್ನು ಕಂಡುಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಾರೆ ಎನ್ನಿಸುತ್ತದೆ. ''ಮೂವತ್ತು ಯುಗಾದಿಗಳು ಉರುಳಿವೆ ಇನ್ನಾದರೂ ನನ್ನ ಹೆಜ್ಜೆ ತುಳಿತಕ್ಕೊಂದು ಗತಿ ಕಾಣಿಸಲು ಈಗ ಪಿಲಿಪಿಲಿ ಒದ್ದಾಡುತ್ತೇನೆ. ಸವೆಸಿದ ದಾರಿ ಎಲ್ಲವನ್ನು ಮರೆತು, ಮತ್ತೆ ಬೇರೆ ಹಾದಿ ತುಳಿಯುವಾಸೆ; ಕಣ್ಣಲ್ಲಿನ ನವೀನ ಗುರಿಯನೆಡುವಾಸೆ. ಶ್ರದ್ಧೆ ಸಂಯಮ ಬಿತ್ತಿ ಹೊಸಬೆಳೆತೆಗೆಯುವಾಸೆ'' - (ಮೌನಸ್ಪಂದನ 1981)

ಈ ನಿರ್ಧಾರ ನೋಡಿದರೆ ನವ್ಯ ಕಾವ್ಯ ಮಾರ್ಗ ಕವಿಗನುಸಾರ ತುತ್ತಾಗಿರಬೇಕು. ಮೂಲ ಧೋರಣೆಗೆ ವಿರುದ್ಧವಾಗಿ, ಸತ್ಯದ ಬಿಸಿ ಅಲೆಗೆ ಸಿಕ್ಕಿ ಬರೆದ ಚಿತ್ರ ಹರಿಯಲಾಗಿದೆ. ಬೇರೆ ಚಿತ್ರ ಬರೆಯಲಾಗದೆ; ಮನಸ್ಸಿಗೆ ಇಬ್ಬಂದಿಯಾಯ್ತು ಎಂಬ ಮಾನಸಿಕ ಗೊಂದಲ, ತೂಗುಯ್ಯಾಲಾಟ ಆರಂಭಿಸಿತು. ಮತ್ತೊ ಯೋಚಿಸಿ, ಒಳಗೊಳಗೆ ಆಕ್ರಾಂತನಾಗಿ, ''ಸೃಜಿಸಲಾಗದೆ, ವಿರಮಿಸಲಾಗದೆ, ವಿಕೃತಿಗಳ ಹೆತ್ತ ಲೇಖನಿಯ ಕುಕ್ಕಿದೆ...'' ಎನ್ನುತ್ತಾರೆ.

ಹೀಗೆ ಪಶ್ಚಾತ್ತಾಪ ಪಡುವ ಕವಿಮನ, 'ಸಮಾಧಿಗಿಳಿದ ಸ್ಮೃತಿಗಳೇ, ಬೂದಿಯಾದ ಭಾವಗಳೇ, ಮತ್ತೆ ಮೇಲೆದ್ದು ಬನ್ನಿ' ಎಂಬ ಅಂತರಂಗದ ಕೂಗು ಒತ್ತಿಹೇಳುತ್ತದೆ. ಕವಿ, ಭಾವ, 'ಗೀತೆ'ಯ ಮಾರ್ಗವನ್ನು ಹಿಡಿದು ಕಲ್ಪನೆಗಳು ಸ್ವಚ್ಛಂದವಾಗಿ, ಸರಳ ಪದಗುಂಫನವಾಗಿ, ಪ್ರಸಯುಪ್ರಾಸಗಳೊಡಗೂಡಿ, ಒಳಗೋಡಿ ಗುನುಗುನಿಸಿ ಹಾಡಿಕೊಳ್ಳುವ ಧಾಟಿ, ಬಾಲ್ಯದ ಧ್ಯೇಯಕ್ಕೆ ಒತ್ತಾಯಿಸುತ್ತದೆ.

ಬದುಕು-ಬರಹಗಳ ನಡುವೆ ನಡೆದ ಹೋರಾಟ, ನಗರ ಜೀವನ, ಸತ್ಯದ ಕಸರತ್ತಿನಿಂದ, ಬೇಸರಗೊಂಡ ಕವಿಮನಸ್ಸು ನಗರದಿಂದ ಕಣ್ಣ ಕೀಳಬೇಕು. ಈ ಮಣ್ಣ ಮುಗಿಲ, ಹಕ್ಕಿ, ಪಕ್ಕಿ, ಜನರ, ಗಿಡಗಂಟೆ ಹೊದರ, ನೋಡುತ್ತ ಹಾಡಬೇಕು, ಇಲ್ಲಿಂದ ಓಡಬೇಕು ಎಂಬ ನಿರ್ಧಾರಕ್ಕೆ ಬರುತ್ತದೆ.

## 2

ಕವಿ ದೊಡ್ಡರಂಗೇಗೌಡರ ಪ್ರಭಾವಬೀರಿದ ಹಿರಿಯ ಕವಿಗಳು, ಬೇಂದ್ರೆ, ಕುವೆಂಪು, ಕೆ.ಎಸ್.ನ. ಮತ್ತು ಅಡಿಗರು ಪ್ರಧಾನರಾದವರೆಂದು, ಅವರ ಭಾವಗೀತೆಗಳನ್ನು ಓದಿದಾಗ ನಮಗೆ ವೇದ್ಯವಾಗದೆ ಇರದು. ಇವರೊಡನೆ ಬೆಟ್ಟಗುಡ್ಡ ಕಾಡುಮೇಡು, ಗಿಡಗಂಟೆ, ಸುತ್ತಾಡಿದ್ದಾರೆ. ಆಗ - ವಿಚಿತ್ರ ಸಂದರ್ಭಗಳಿಗೆ ಸ್ಪಂದಿಸಿದ್ದಂತೆ. ಪ್ರೇಮ-ಪ್ರೀತಿ-ವಿರಹ. ಶೃಂಗಾರ ಸಂದರ್ಭಗಳು, ಓದುಗನ ಹಳೆಯ ಅನುಭವಗಳಿಗೆ ಮುಖಾಮುಖಿಯಾಗುತ್ತದೆ. ದುತ್ತನೆದುರಾದಂತೆ ಜಾರಿಹೋದಂತೆ. ತೇಲಾಡಿದಂತೆ ಮತ್ತೆ ಮರುಕಳಿಸುತ್ತವೆ. ಜೀವನದಲ್ಲಿ ಕಂಡು ಉಂಡ ನೋವು-ನಲಿವು, ಪ್ರಕೃತಿಯ ವಿಚಿತ್ರ ಸನ್ನಿವೇಶಗಳಿಗೆ ಆಕರ್ಷಿತರಾದಾಗ, ಎದ್ದ ನೂರಾರು, ಭಾವದ ಅಲೆಗಳಲ್ಲಿ ತೇಲುವಾಗಿನ, ನಿಸರ್ಗದ ರಹಸ್ಯಗಳನ್ನು ಭೇದಿಸುವಲ್ಲಿ, ಸೂಕ್ಷ್ಮಾನುಭವ ಒಂದು ದೃಷ್ಟಿಯಾದರೆ, ಹೆಣ್ಣು ಗಂಡಿನ ಸಂಬಂಧದ ನವಿರು ಭಾವಗಳು, ಸುಖ ದುಃಖಗಳಿಗೆ ತುಡಿಯುವ, ಶೃಂಗಾರ, ವಿರಹಗಳಾಗಿ ಹೊರ ಮಿಡಿಯುವ ಸಂದರ್ಭಗಳು, ಇವರ ಸಮಗ್ರ ಭಾವಗೀತೆಗಳ ಸ್ಥಾಯೀ ಭಾವಗಳಾಗಿ ವ್ಯಾಪಕತೆ ಪಡೆಯುತ್ತವೆ ಎನ್ನಿಸುತ್ತದೆ.

'ತೇರ ಏರಿ ಅಂಬರದಾಗೆ ನೇಸರು ನಗುತಾನೆ' 'ನಮ್ಮೂರ ಮಂದಾರ ಹೂವೆ,' 'ನೋಟದಾಗೆ ನಗೆಯ ಮೀಟಿ' ಮುಂತಾದ ಸಿನಿಮಾ ಹಾಡುಗಳಿಂದ, ನಾಡಿನಾದ್ಯಂತ, ಮನೆಮನೆಯ ನಾಲಿಗೆಯಲ್ಲಿ ಗುನುಗುಟ್ಟುತ್ತಿದ್ದ, ಕತೆಗಳು ಗೌಡರಲ್ಲಿ ಅಡಗಿದ್ದ 'ಕವಿ'ಯನ್ನು ನಾಡಿನ ಹಿರಿಯ ಕಿರಿಯ ವ್ಯಕ್ತಿಗಳು ಗುರುತಿಸಿದುದನ್ನು ಕಂಡಿದ್ದೇನೆ. ಸಿನಿಮಾ ಹಾಡೆಂದರೆ, ಏನು ಬೇಕಾದರೂ ಗೀಚಬಹುದು ಎಂಬುದಕ್ಕೆ ಆ ದಿನದಿಂದ ಇತ್ತೀಚಿನವರೆಗೆ ಸಹಸ್ರಾರು ಹಾಡುಗಳು ಹುಟ್ಟಿಸಾಯುತ್ತಿರುವುದೇ ಸಾಕ್ಷಿ. ಹೆಸರಾಂತ ನಾಡಿನ ಹಿರಿಯ ಕವಿಗಳ ಕವನಗಳು ಸಿನಿಮಾ ಹಾಡಾದಾಗ, ಜನತೆಯ ಹೃದಯವನ್ನು ತುಂಬಿದಾಗ, ಕವಿಗಳ ಹೆಸರು ಕಾರಣವಲ್ಲ, ಆಯಾ ಗೀತೆಗಳು ಕಾರಣ ಎಂದೆನಿಸುವುದಿಲ್ಲವೆ! ಎಲ್ಲಿಂದಬಂದರೂ ಕಾವ್ಯದ ಮುಸುಕಿನಲ್ಲೇ ಬೆಳಗುತ್ತವೆ.

ಭಾಷೆಯು ಒಟ್ಟು ನವಿರಾದ ಸುಮಧುರ ಮಂದಾನಿಲ, ಮೈ ಸೋಕುವ ಪದ ಗುಂಫನ, ಪ್ರಾಸ ಅನು ಪ್ರಾಸ, ಸುಲಭವಾಗಿ ಮನ ಸೆಳೆವ ಉಪಮೆ, ಗೇಯತೆ, ಕವನಗಳ - ಬಲು ಸಮಯ ಮನದಾಳದಲ್ಲಿ ಹಿಡಿದು ನಿಲ್ಲಿಸುವ ಶಕ್ತಿ, ಅನೇಕಾನೇಕ ಕವನಗಳಲ್ಲಿ ವ್ಯಕ್ತವಾಗುತ್ತದೆ.

ಆದರೂ, ಅಂದಿನಿಂದ ಇಂದಿನವರೆಗೆ ತನ್ನ ಕಾವ್ಯದ ಬಗ್ಗೆ ಅನಿರೀಕ್ಷಿತವಾದ 'ಹಿಂಜರಿಕೆ' 'ಸೌಜನ್ಯಭಾವ' ಎನ್ನುವಂತಹ ಧ್ವನಿ ಎತ್ತಿ ತಮ್ಮನ್ನು ತಾವು ಸಮರ್ಥಿಸಿಕೊಳ್ಳುವಿಕೆ ಧಾಟಿ ಹತ್ತಿರದಿಂದ ಗ್ರಹಿಸುತ್ತಿರುವವರ ಅನುಭವವಾಗುತ್ತದೆ. 'ಪ್ರಕೃತಿ ಗೀತೆಗಳು,' ಇವರ ಕವನ ಸಂಕಲನಗಳ ಪ್ರಧಾನವಸ್ತು. ವಸ್ತುವಿನಲ್ಲಿ 'ಏಕತಾನ' ವಿದ್ದರೂ, ಒಂದೊಂದರ ಅಭಿವ್ಯಕ್ತಿರೂಪ ಬೇರೆ ಬೇರೆ, ಅವು ತಳೆದ ಗೀತ ರೂಪ, ಒಂದೊಂದು ನಿತ್ಯ ಸ್ವರೂಪವಾಗಿ ಮೈತಳೆದಿವೆ. 26 ವಸಂತಾಗಮನ, 39 ಚೈತ್ರಶ್ರೀ, 40 ಸ್ಫೂರ್ತಿ ಋತು, 45 ರಾಗರಂಜಿತ, 52 ಚೈತ್ರೋನ್ಮಾದ, 55 ಚೆಲುವಿನಂಗಳ, 10 ಚೈತ್ರ ಸಿರಿ. ಈ ಕವನಗಳನ್ನು ಉದಾಹರಿಸಬಹುದು.

ಸಾಮಾನ್ಯವಾಗಿ ಋತುವರ್ಣನೆ, ಅದರಲ್ಲು 'ವಸಂತ'ಕ್ಕೆ ಎಲ್ಲ ನವೋದಯ ಕವಿ ಮಾರುಹೋಗುವುದು ಸಹಜ, ಕವಿ ಕಂಡ 'ವಸಂತ' ಸೌಂದರ್ಯ ಹಲವಾರು:- 1 ವಸಂತಾಗಮನ, 2 ಚೈತ್ರಶ್ರೀ, 3 ಸ್ಫೂರ್ತಿ ಋತು, 4 ರಾಗರಂಜಿತ, 5 ಚೈತ್ರೋನ್ಮಾದ, 6 ಚೈತ್ರಸಿರಿ' – ಭಿನ್ನ ಸ್ವರೂಪಗಳನ್ನು ಕಾಣುವ ಕವಿ ಕಣ್ಣೋಟ ಇದು.

1. ಟೊಂಗೆ ಟೊಂಗೆಗೂ ಮಿಡಿಗಳೊಡೆದು
ಗೊಂಚಲು ಗೊಂಚಲು ಅಂಜೂರಹಿಡಿದು (ವಸಂತಾಗಮನ)

2. ಸಪ್ತವರ್ಣದ. ಮೇಳ ಇಳೆಯ ಸಿರಿ ಮುಡಿಯಲ್ಲಿ
ಸಸ್ಯ ಶ್ಯಾಮಲ ಕತ್ತಲ ಇಳೆಯ ಹೊಮ್ಮೈಯಲ್ಲಿ (ಚೈತ್ರಶ್ರೀ)

3. ಮಾವು ಮಲ್ಲಿಗೆ ಮಾತನಾಡಿವೆ
ಚೈತ್ರ ಪುರುಷನ ಠೀವಿಗೆ.

ಸ್ಫೂರ್ತಿ ನೀಡುವ ಚೈತ್ರಮಾಸವು
ಸೌಂದರ್ಯ ಬರೆದ ಭಾಷ್ಯವು (ಸ್ಫೂರ್ತಿ ಋತು)

4. ಕೋಗಿಲೆ ಇಂಚರ ಮೂಡಿಸಿ ಪುಸ್ತಕ
ಎಲ್ಲೆಡೆ ಚೈತ್ರಗೀತ (ರಾಗರಂಜಿತ)

5. ರಾಗರಸಿಕತೆ ಕವಿಯ ಜೀವಕೆ
ರಮ್ಯಗೀತೆಯ ಹೊಳಪು
ಗಾನಗಂಗೆ ತಾಳಲಯಕೆ
ಮುಕ್ತ ಕಾವ್ಯದ ಹರಹು (ಚೈತ್ರೋನ್ಮಾದ)

6. ವಸುಮತಿಗೆ ಈಗಂತೂ ನವ ಶೃಂಗಾರ
ಋತುವಸಂತ ಬಂದು ಇಳೆಯೇ ಇಸರಿ ಸುಂದರ (ರಮ್ಯ ಚೈತ್ರ)

ಛಂದಸ್ಸಿನ ವೈವಿಧ್ಯತೆ, ಮಾತಿನ ಬೆಡಗು, ಅರ್ಥಭೇದಗಳಿಂದ ಪ್ರಕೃತಿ ಚಿತ್ರ. ಹೀಗೆ ನೂರಾರು ರಮ್ಯ ಚಿತ್ರಗಳಿಗೆ ಸಾಕ್ಷಿಗಳಿವೆ.

ಕಂಡು ಉಂಡ ಅನುಭವ ವೈವಿಧ್ಯತೆಯಲ್ಲೇ ಪ್ರತಿಬಿಂಬಿತವಾಗುತ್ತದೆ ಎಂಬ ಅನಿಸಿಕೆ ಬಂದು, ಪ್ರತಿರೂಪ ತಾಳುವುದಿಲ್ಲ ಎಂಬ ಭಾವನೆ ಉಳಿದುಬಿಡುತ್ತದೆ. ಕ್ಯಾಮರ ಕಂಡ ಚಿತ್ರ ಪ್ರತಿರೂಪವಲ್ಲ; ಪ್ರತಿಬಿಂಬ ಮಾತ್ರ ಎನ್ನಿಸುತ್ತದೆ. ನವೋದಯ ಕಾವ್ಯ ಧರ್ಮ, ಕವಿಯನ್ನು ಬಿಟ್ಟುಬಿಡದ ಹಿಡಿತದಲ್ಲಿಯೇ ಜಗ್ಗಾಡುವುದನ್ನು ಕಾಣಬಹುದು.

ಬಿಗಿಹಿಡಿತದಿಂದ ಪಾರಾಗಲು ಅಲ್ಲಲ್ಲಿ ಪ್ರಯತ್ನವಿದ್ದರೂ, ಅದರ ಮೂಲ ಸ್ವರೂಪ ಹಳೆಯ ಹಾದಿಗೆ ಸೆಳೆದು ಬಿಡುವ ಅಪಾಯದ ಸಂದರ್ಭಗಳಿಗೂ ಅವಕಾಶವಿರುತ್ತದೆ.

ಪ್ರೇಮಗೀತೆ :- ಪ್ರೇಮವೆಂಬ ಜಾದು ಹೊಕ್ಕು
ಕಲ್ಪನೆಯ ಕಡಲಾಯ್ತು ಬದುಕು
ಒಳಗಿನೊಳಗಿನ ಪ್ರೀತಿ ಮೊರೆಮೊರೆದು
ರಾಗದೊಳಗಿನ ರಾಗ ರಂಗಾಯ್ತು (ರಾಗದೊಳಗಿನ ರಾಗ)

ರೋಮಾಂಚ ತುಂಬಿ-ಬಾನಾಡಿ ಹಾಡಿ
ಸಂಗೀತವಾಯ್ತು-ಇಂಚರವು ತೇಲಿ
ಶ್ರೀಗಂಧ ಕಂಪು-ಪರಿಮಳವ ನೀಡಿ
ಶೃಂಗಾರವಾಯ್ತು-ಗಿಡಬಳ್ಳಿ ಸೇರಿ
ಪ್ರೀತಿ ಹೂವಾಗಿದೆ-ಅರಳಿ ಕಣ್ಮುಂದಿದೆ (ಹೃದಯಗೀತೆ)

ಒಳ್ಳೆಗಳಿಗೆ ಗಲ್ಲ ಮೀಟಿ ಒಲವಿನೆಲ್ಲ ಬೆಲ್ಲ ಉಣಿಸಿ
ಕಣ್ಣ ಬಿಂಬದಲ್ಲೂ ತುಂಟ ಕೀಟಲೆಯ ಮಧು ಕುನಿಸಿ
ಹಗಲು ಇರುಳು ಬೇಟದಲ್ಲಿ ಒಡಲ ತಾಪಸುಧೆಯ ಮಣಿಸಿ
ಕರಾಳ ಕೊರಳ ಕೂಟದಲ್ಲೂ ಸ್ಥಿರವಾಯಿತೋ ಬಂಧಬೆರಸಿ
(ಪ್ರೀತಿ-ರತಿ)

ಇವು ಅಲ್ಲಲ್ಲಿ ಕಂಡ ಪ್ರೇಮಗೀತೆ, ದಾಂಪತ್ಯಗೀತೆಗಳು.

'ತ್ರಿ.ನಂ.ಶ್ರೀ'ಯ ಮೊಟ್ಟ ಮೊದಲ ಪ್ರೇಮಗೀತೆ ಸಂಕಲನ 'ಒಲುಮೆ' ನಂತರ, ಹಲವು ಕವಿಗಳು ತಮ್ಮ ಬದುಕಿನ ದಾಂಪತ್ಯ ಪೂರ್ವ ಹಾಗೂ ನಂತರದ ಗೀತೆಗಳನ್ನು ಹಾಡಿದ್ದಾರೆ. ಆದರೆ ಈ ಕವಿ ಗೌಡರಿಗೆ ಈ ಗೀತೆಗಳ ಹರವು, ವಿಸ್ತಾರಗಳು ಹಲವು ಸಂಕಲನಗಳಲ್ಲಿ ತುಂಬಿತುಳುಕಾಡುತ್ತವೆ, ಇವು ಹಲವು ಬಂಧಗಳ ಪರಿಧಿಯಲ್ಲಿ ರೂಪಿತವಾದರೂ ಪರಿಣಾಮದಲ್ಲಿ ಗೆಲುವು-ಸೋಲುಗಳು ಸಾಮಾನ್ಯವೆನ್ನಿಸುತ್ತದೆ.

ಹೀಗಾಗಿ, ಭಾವಗೀತಾತ್ಮಕ ಅಭಿವ್ಯಕ್ತಿಯೇ ಅವರ ಮನೋಧರ್ಮವಾಗಿದ್ದು, ಕಾವ್ಯ ಕಟ್ಟುವ ಶೈಲಿ ಅವರಿಗೆ ಕರತಲಾಮಲಕ. ಈ ಮನೋಧರ್ಮಕ್ಕಿರುವ ಸಾಧ್ಯತೆಯ ಮಿತಿಗಳನ್ನು ಕಂಡುಕೊಳ್ಳಲಿಲ್ಲ ಎಂಬ ಅನಿಸಿಕೆ ನನ್ನದು. ಬಲು ಸೀಮಿತ ಆಶಯಗಳನ್ನು ಪಡೆದ ವ್ಯಕ್ತಿತ್ವ ಕವಿಯದು. ನಿರ್ಮಲ, ಸ್ವಚ್ಛಂದ, ನಿಷ್ಕಲ್ಮಶ, ತೆರೆದ ಮನದ ಭಾವನೆಗಳ ಪೂರವಿದ್ದರೂ ನೂರಾರು ಬಗೆಯಲ್ಲಿ, ಸೆರೆ ಹಿಡಿದಿರುವ ನಿಸರ್ಗ ಸೌಂದರ್ಯಾನುಭವ ತಂದು ಕೊಡುವಲ್ಲಿಯ ಸೋಲು ಗೆಲುವುಗಳಿಗಿಂತ, ವೈಯಕ್ತಿಕ ಬದುಕಿನ ಪ್ರೇಮ-ಪ್ರೀತಿ, ವಿರಹಗಳ ಚಿತ್ರಣದ ಸೋಲು-ಗೆಲವು ಹೃದಯಂಗಮವಾಗಿರುವುದು ಸಾರ್ವತ್ರಿಕ ಎನ್ನಿಸುತ್ತದೆ. ಅಲ್ಲದೆ ಬುದ್ಧಿ-ಭಾವಗಳ ಸಂಯೋಗ ತಪ್ಪಿ, ಪ್ರೀತಿ-ಪ್ರೇಮ, ಕೆಲವೆಡೆ ಮಿಡಿತವಾಗಿ, ಕೆಲವೆಡೆ ತುಡಿತವಾಗಿ, ಕೇವಲ ಉತ್ಕಟ ಭಾವನೆಗಾಗಿ, ಗೀತೆಗಳು ದುಡಿಯುವುದೂ ಸಾಮಾನ್ಯವಾಗಿದೆ. ಆದರೆ ಸಮಗ್ರ ಸಂಕಲನಗಳಲ್ಲಿ ಎಲ್ಲಿಯೂ ಕಾಮದ ಸ್ಪರ್ಶವೇ ಇಲ್ಲದ ಕವನಗಳಾಗಿ ಮೂಡಿರುವುದು ಒಂದು ವಿಶೇಷತೆ.

ಮೃದು ಮಧುರ ಮಾರ್ದವ ಶಬ್ದಗಳ ಬಳಕೆಯಲ್ಲಿ, ಪ್ರಕೃತಿಯಲ್ಲಿ ಕಾಣುವ ಸುಮಧುರ ಸಂದರ್ಭದಲ್ಲಾಗಲಿ, ಪ್ರೇಮಗೀತೆಗಳಲ್ಲಾಗಲೀ, ಕವಿಗೆ ಎದುರಾಗಿ ಮಿಂಚಿಹೋಗುವ, ಬಂದು ಅಪ್ಪುವ ಬದುಕಿಗೆ ನೆರವಾಗುವ, ಸರ್ವಸ್ವವಾಗುವ, ಸಖಿಯೊಬ್ಬಳನ್ನು ಪ್ರಧಾನವಾಗಿ ಗಮನಿಸಬಹುದಾಗಿದೆ.

ಕೊನೆಗೆ ''ಇಹದ ಬೇಗೆಗೆ ಬಳಲಿ ಬೆಂದರೂ, ಸೃಷ್ಟಿ ಸೊಬಗೆ ಮಣಿಯಿತು''. ಎನ್ನುವ ನನ್ನ ಗೀತೆ ನನ್ನ ಹೃದಯದ ಭಾಷೆ. ತನ್ಮೂಲಕ ನಾಡಿನ ಅಗಣಿತ ಸಹೃದಯರ ಭಾವ ಬಾಗಿಲ ತಟ್ಟಿದ್ದೇನೆ. ಅದೇ ನನ್ನ ಖುಷಿ'' ಎನ್ನುವ ಕವಿಗೆ ತೃಪ್ತಿ ತರುವುದಿಷ್ಟೇ ಎನ್ನುವುದಾದರೆ, ಈ ತೃಪ್ತಿಯಲ್ಲೇ ಕಾವ್ಯದ ನಡೆ ನಿಂತನೀರಾಗಬಾರದು. ಕಾವ್ಯದ ಜೊತೆ ಜೊತೆಗೆ ಕವಿ ಬೆಳೆಯುತ್ತಲೇ ಹೋಗಬೇಕು, ಬದಲಾಗುತ್ತಿರುವ ಕಾಲ, ಬದಲಾದ ಪರಿಸರ, ಬದಲಾದ ಸಮಾಜ, ಬದಲಾದ ಋತು ವ್ಯವಹಾರಗಳನ್ನು ಕಾಣುವ ಮುಂದಿನ ಹಂಬಲವನ್ನು ಮೈಗೂಡಿಸಿಕೊಂಡು ಬದಲಾದ 'ಅಭಿವ್ಯಕ್ತಿಮಾರ್ಗ' ಕವಿಯದಾಗಲಿ! ಸರ್ವತೋಮುಖ ಆಶಯವಾಣಿಯಾಗಿ ನಿಲ್ಲಲಿ! ಎಂಬ ಆಶಯದೊಡನೆ ಈ ಲೇಖನವನ್ನು ಮುಗಿಸಲು ಇಚ್ಛಿಸುತ್ತೇನೆ.





# ಅಮೃತವಾಹಿನಿ ಹರಿಸುವ ಡಾ॥ ದೊಡ್ಡರಂಗೇಗೌಡ

● ಪ್ರೊ॥ ಸಿ. ಹನುಮೇಗೌಡ

ಸನ್ಮಾನ್ಯ ದೊಡ್ಡರಂಗೇಗೌಡರ ಮಧುರೋಕ್ತಿ, ಚಿತ್ತಸ್ಥೈರ್ಯ ಹಾಗೂ ಸಮೃದ್ಧವಾಗಿ ಅವರಲ್ಲಿ ಬೆಳೆದು ಬಂದಿರುವ ಪ್ರಜ್ಞಾಬಲ ನನ್ನನ್ನು ಬಹಳ ಮಟ್ಟಿಗೆ ಆಕರ್ಷಿಸಿತು. ಅವರಲ್ಲಿ ಮೊಳಕೆಯಾಗಿ ಅವತರಿಸಿ ಧೀಮಂತವಾಗಿ ಬೆಳೆದಿರುವ ಕಲೆ ಹಾಗೂ ಸಾಹಿತ್ಯದ ಸವಿಯನ್ನು ಇಂದಿನ ಪೀಳಿ ಮಾತ್ರವಲ್ಲದೆ ಮುಂದಿನ ಪೀಳಿಗೆಯೂ ಸವಿಯುವುದರಲ್ಲಿ ಸಂಶಯವಿಲ್ಲ. ಅವರು ಬರೆದಿರುವ ಹಾಡುಗಳಲ್ಲಿ ಅವರು ಕಾಣುವ ಭಾವನಾತ್ಮಕ ಜಗತ್ತನ್ನು ನಾವು ಕಾಣಬಹುದು. ಅವರಲ್ಲಿ ಹುದುಗಿದ್ದ ಭಾವನೆಗಳು ಓದುಗರ ಮನದಲ್ಲಿ ಬೆಡಗಿನಿಂದ ನರ್ತಿಸುತ್ತ ನಲಿಯುತ್ತಿದೆ. ಅವರ "ದೇಸಿ ಗೀತೆ"ಗಳಲ್ಲಿ ಅಡಗಿರುವ ಭಾವನೆಗಳನ್ನು ಅವರು ನಿರ್ಭೀತಿಯಿಂದ ವ್ಯಕ್ತಪಡಿಸಿರುವುದನ್ನು ನಾವು ಕಾಣಬಹುದು.

ಹಳ್ಳಿಗರ ಹಾಡಿನ ಸೊಬಗಿನ ಸೊಗಡನ್ನು ಪ್ರಕೃತಿಯ ಸೌಂದರ್ಯವನ್ನು "ಗ್ರಾಮೀಣ ಗೀತೆ"ಯಲ್ಲಿ ಕಾಣಬಹುದು. ಇದರಡಿ ಇರುವ ಹಾಡಿನಲ್ಲಿ ದೀಪ್ತಿಮಯ ಸೊಬಗನ್ನು ಕಾಣುತ್ತೇನೆ.

"ತೇರ ಏರಿ ಅಂಬರದಾಗೆ ನೇಸರು ನಗುತಾನೆ.
ಭೇದ ಭಾವ ಮುಚ್ಚು ಮರೆ ಒಂದೂ ಮಾಡ್ದೇನೆ
ಆ ಸೂರ್ಯ ಒಂದೇ ಬೆಳಕ ನಮಗೆ ನೀಡ್ಯಾನೆ"
ಗಾಳಿ ನೀರು ಎಲ್ಲಾ ಕೊಟ್ಟು ಜಗವ ನಡೆಸ್ಯಾನೆ
("ತೇರ ಏರಿ ಅಂಬರದಾಗೆ ನೇಸರು ನಗುತಾನೆ.")

ಈ ಗೀತೆಯಲ್ಲಿ ಮುಗ್ಧರಾದ ಹಳ್ಳಿಯ ಜನರು ಪರಮಾತ್ಮನ ಚೈತನ್ಯಾಂಶವನ್ನು ತಮ್ಮ ಮುಗ್ಧ ಭಾಷೆಯಲ್ಲಿ ಎಷ್ಟು ಮನೋಜ್ಞವಾಗಿ ಚಿತ್ರರಿಸಿದ್ದಾರೆ ಎಂಬುದು ವ್ಯಕ್ತವಾಗುತ್ತದೆ.

''ಏನು ಚೆಲುವಿದೊ ಇಳೆಯು ಏನು ಚೆಲುವಿದೊ''
''ಇಳಾಗೀತ''

ಈ ಗೀತೆಯಲ್ಲಿ ಪ್ರಕೃತಿಯ ನಿತ್ಯ ಸೌಂದರ್ಯವನ್ನು ಕವಿಯು ಮನಸಾರ ಹೊಗಳಿದ್ದಾರೆ.

ಬಾನಲ್ಲಿ ಹಕ್ಕಿ ಹಾರಿ
ಬರೆದವರಲ್ಲಿ ರಂಗವಲ್ಲಿ
ಅಲ್ಲಿ ಇಲ್ಲಿ ಮುಗಿಲ ಚೆಲ್ಲಿ
ದಿವ್ಯ ಶಿಲ್ಪಿಯ ಚಿತ್ರದಲ್ಲಿ
(''ಏನು ಚೆಲುವಿದೋ ಇಳೆಯು ಏನು ಚೆಲುವಿದೋ'')

ಪ್ರಕೃತಿಯಲ್ಲಿ ಕವಿಯು ಕಂಡುಂಡ ಸೊಬಗನ್ನು, ಭುವಿಯಲ್ಲಿ ನಭದಲ್ಲಿ ನಡೆಯುವ ಚಿತ್ರ ವಿನ್ಯಾಸವನ್ನು ಭಾವ ಜೀವಿಯಾದ ಕವಿ ವರ್ಣಿಸಿದ್ದಾರೆ.

''ಕಡು ಕೋಪ ನೀ ಮರೆತು ಚಂದ್ರ ಮುಖಿಯಾಗು
ಗುಡುಗಾಯ್ತು ಸಿಡಿಲಾಯ್ತು ಮುಂಗಾರ ಮಳೆಯಾಗು
ಬಿಡು ಬಿಂಕ ಸೆಟೆಯುವಿಕೆ ನಗೆ ಹೊನಲು ನೀನಾಗು,
ನಿಶೆ ಅಳಿದ ಮೇಲೂನು ಮೂಡದೇ ಹೊಸ ಬೆಳಗು.
(''ನಲ್ಮೆ ನಿಕ್ಷೇಪ'')

ದಾಂಪತ್ಯ ಜೀವನದಲ್ಲಿ ವಿರಸಮಯ ಗಾಡಾಂಧತೆಯಿದ್ದರೆ ಪ್ರೀತಿ ಪ್ರೇಮಗಳು ಹೃನ್ಮನದಿ ಮೂಡಲೆಂದು ಆಶಿಸುತ್ತಾರೆ.

ದೀಪ್ತಿಮಯ ಕಲೆ, ಸಾಹಿತ್ಯದ ಸೌಂದರ್ಯ ಸೌರಭದ ಸೊಬಗನ್ನು ಇವರು ಬರೆದಿರುವ ಹಾಡುಗಳಲ್ಲಿ ಕಾಣಬಹುದು. ಅಷ್ಟೇ ಅಲ್ಲದೆ ಅವುಗಳಲ್ಲಿರುವ ಸರಳತೆ, ನಿರ್ಮಲ ಭಾವ ಎಲ್ಲರನ್ನೂ ಪುಳಕಿತರನ್ನಾಗಿ ಮಾಡುತ್ತವೆ.

''ದೂರದಲ್ಲಿ ತೆಂಗಿನ ತೋಟಗಳು
ಜೀಕಿ ಜೀಕಿ ಜಿಗಿಯುವ ಕೋತಿಗಳು

ಬಿಕ್ಕೆ ಹಣ್ಣು ಮರ ಗಿಡ ತೂಗಿರಲು
ಪಂಚರಂಗಿ ಗಿಳಿಗಳು ಹಾರಿರಲು.''
("ಗ್ರಾಮೀಣ ಗೀತೆ")

ಕವಿಯ ಮನಸ್ಸಿನ ಮೇಲೆ ಬಿದ್ದಿರುವ ಹಳ್ಳಿಗಾಡಿನ ಅಚ್ಚಳಿಯದ ಪ್ರಭಾವ ಇಲ್ಲಿ ಪ್ರಕಟವಾಗಿದೆ.

ಹೀಗೆ ಈ ಕವನದಲ್ಲಿ ಮನಸ್ಸಿನಲ್ಲಿ ಮೂಡಿರುವ ಭೇದ ಭಾವ ರಹಿತವಾದ ಭಾವನೆಯ ಕವಿಯ ಮನಸ್ಸಿನಲ್ಲಿ ಪುಂಖಾನು ಪುಂಖವಾಗಿ ಹೊರ ಹೊಮ್ಮಿರುವುದು ವೇದ್ಯವಾಗುತ್ತದೆ. ಕವಿಯು ಪ್ರಕೃತಿಯ ಆರಾಧಕರು ಎಂಬುದು ವಿಧಿತವಾಗಿ ಕಾಣುತ್ತದೆ.

'''ಗರಿಯ ಕೆದರಿ ನಿಂತ ತೆಂಗು
ದವಳ ತೆರೆದು ಬಿರಿದ ಹೂವು
ನಿತ್ಯ ನಿತ್ಯ ಚೆಲ್ಲು ಚೆಲುವು
ಕಣ್ಮನಗಳ ಭಾವ ತುಂಬಿ ಸಂತೋಷ ತಂದವೋ
ಹೃದಯ ಕಡಲ ಅಲೆಗಳುಕ್ಕಿ ಕವಿತೆ ಬರೆದವೋ''
("ವಸಂತಾಗಮನ")

ಕವಿಯ ಭಾವನಾತ್ಮಕ ವಿಚಾರಗಳು ಇಲ್ಲಿ ಬುಗ್ಗೆಯಂತೆ ಚಿಮ್ಮಿರುವುದನ್ನು ನಾವು ಈ ಕವನದಲ್ಲಿ ಕಾಣಬಹುದು.

"ಮೂರು ತಿಂಗಳಿನ ಬಿಸಿಲ ದರ್ಬಾರು
ಮುಕ್ತಾಯವಾಗಿತ್ತೋ
ಮುಂಗಾರ ಮಳೆ ರಾಜ್ಯಭಾರ ನಡೆಸಿತ್ತೊ''
("ಬೇಸಿಗೆ ಮುಗಿದಾಗ")

ಜೀವವಿಲ್ಲದ ಪ್ರಕೃತಿಗೆ ಜೀವ ಕೊಟ್ಟು ಬೇಸಿಗೆ ಹಾಗೂ ಮಳೆಗಾಲದಲ್ಲಿ ಹೇಗೆ ಜೀವನ ನಡೆಸುತ್ತಾರೋ ಹಾಗೆಯೇ ಅವುಗಳಲ್ಲಿ ಕವಿಯು ಬೆರೆತಿದ್ದಾನೆ.

"ಅಮ್ಮ ಮೈದಡವಿದರೆ
ಬೆಳ್ದಿಂಗಳು ಸೋಕಿದಂತೆ
ಅಮ್ಮ ಮಾತಾಡಿದರೆ ಶಾರದೆಯೆನುಡಿದಂತೆ''
("ಬಾಳ ಬೆಳದಿಂಗಳು")

ತನ್ನ ಅಕ್ಕನರೆಯ ತಾಯಿ ಬಗ್ಗೆ ಕವಿಯು ವಾತ್ಸಲ್ಯ ಪೂರ್ವಕವಾಗಿ ಆಡಿರುವ ಮಾತುಗಳಿವು. ಇವರ ಹೃದಯವು ಅಮೃತವಾಹಿನಿಯನ್ನು ಸಿಂಚಿಸುವ ಸಾಗರವಾಗಿದೆ. ಭೂಮಿಗಿಂತ ಭಾರವಾಗಿರುವ ತಾಯ ಹೃದಯವನ್ನರಿತ ಕವಿಯು ಅವರ ಬಗ್ಗೆ ವಾತ್ಸಲ್ಯ ಭಾವದಿಂದ ಆಡಿರುವುದು ಸ್ಪಷ್ಟವಾಗಿ ಕಾಣುತ್ತದೆ.

''ಹಸಿರು ನಗುವ ಹೊಲಗಳಲ್ಲಿ
ಕೋಡುಗಲ್ಲು ತುದಿಗಳಲ್ಲಿ
ರವಿಯು ಚಿತ್ರ ಬರೆದ ಬೆಡಗು
ರಮ್ಯವಾಯ್ತು ಇಳೆಯ ಸೊಬಗು''

(''ನಸುಕು ಹರಿದ ಬೆಳಗಿನಲ್ಲಿ'')

ಪ್ರಕೃತಿಯ ಆರಾಧಕರಾದ ಕವಿಯು ವರ್ಣಮಯ ಪೃಥ್ವಿಯ ಸೊಬಗನ್ನು ನೋಡಿ ಪುಳಕಿತರಾಗಿ ಬರೆದ ಕವನವಿದು.

ರಟ್ಟೆ ಮುರಿದು ದುಡಿದರೂ
ಹಾಸಲಿಲ್ಲ ಹೊದಿಯಲಿಲ್ಲ
ರೋಗಕಿತ್ತು ಬಂದರೂ
ದುಡಿಯದೆ ಬೇರೆ ದಾರಿಯಿಲ್ಲ
ಕೂಲಿ ಜನಗಳು ನಾವು; ಕೂಲಿ ಜನಗಳು

(''ಕೂಲಿ ಪಾಡು'')

ಸುಖದ ಸುಪ್ಪತ್ತಿಗೆಯಲ್ಲಿ ಕುಳಿತು ಸುಖ ಭೋಗವನ್ನನುಭವಿಸುವ ಜನರೊಂದು ಕಡೆ; ಕಷ್ಟ ಸಂಕಷ್ಟಗಳಿಗೆ ಸಿಕ್ಕಿ ಮುಂಜಾನೆಯಿಂದ ಮುಸ್ಸಂಜೆಯುವರೆವಿಗೆ ದುಡಿದರೂ ಹೊದಿಯಲು ಹಚ್ಚಡವಿಲ್ಲ, ಮಲಗಲು ಹಾಸಿಗೆಯಿಲ್ಲ. ತುತ್ತನ್ನಕ್ಕಾಗಿ ದುಡಿಯುವವರ ಫಲ ಶ್ರೀಮಂತರಿಗೆ, ಎಂಬುದನ್ನು ಹೃನ್ಮನ ತುಂಬಿ ಕವಿ ಹೇಳಿರುವ ಮಾತಿದು.

''ರೋಮಾಂಚನ ತುಂಬಿ, ಬಾನಾಡಿಹಾಡಿ
ಸಂಗೀತವಾಯ್ತು, ಇಂಚರವು ತೇಲಿ
ಶ್ರೀಗಂಧ ಕಂಪು, ಪರಿಮಳವ ನೀಡಿ
ಸಿಂಗಾರವಾಯ್ತು ಗಿಡ ಬಳ್ಳಿ ಸೇರಿ

ಕಂಗೊಳಿಸಿದೆ ಕಾಡು ಕಣ್ಣಾಗಿದೆ."

("ಹೃದಯಗೀತೆ")

ಹೃದಯದ ಭಾಷೆ ಪಲ್ಲವಿಸಿದೆ ಹಸಿರಾಗಿದೆ.... ಅದ್ಭುತವಾದ ರೋಮಾಂಚನ ರಸಧಾರೆ ಕವಿಯ ಮನದಲ್ಲಿ ಭೋರ್ಗರೆವ ಪ್ರವಾಹದಂತೆ ಹರಿದಿದೆ, ಹಕ್ಕಿಗಳ ಇಂಚರವ ಕೇಳಿ ಕವಿ ನಲಿಯುತಿಹರು.

ಇವರಿಗೆ ಸರ್ವತೋಮುಖವಾದ ವ್ಯಕ್ತಿತ್ವವಿದೆ. ಆಶುಭಾಷಣ ಮಾಡುವುದರಲ್ಲಿ, ಆಶು ಸಾಹಿತ್ಯ ರಚನೆಯಲ್ಲಿ, ಇವರ ಹಾಗೂ ಭಾವನಾತ್ಮಕ ಆಲೋಚನೆಗಳು ನಿರಂತರವಾಗಿ, ನಿರರ್ಗಳವಾಗಿ, ಹೃನ್ಮನದಿಂದ ಹರಿದು ಬರುತ್ತದೆ. ಇವರು ಬರೆದಿರುವ ಹಾಗೂ ಬರೆಯುವ ಕವನಗಳು ಪ್ರಕೃತಿಗೆ ಸಂಬಂಧಿಸಿದ್ದಾಗಿವೆ. ಹಳ್ಳಿಯ ಜನರ ಜೀವಕ್ಕೆ ಸಂಬಂಧಿಸಿದ್ದಾಗಿವೆ. ಮಾತೃವಿನ ಮೇಲಿರುವ ಪ್ರೀತಿ, ವಾತ್ಸಲ್ಯಕ್ಕೆ ಸಂಬಂಧಿಸಿದ್ದಾಗಿವೆ. ಜಾನಪದ ಸಾಹಿತ್ಯವನ್ನು ತುಚ್ಛವಾಗಿ ಕಾಣದೆ ಹೊಸ ಸಾಹಿತ್ಯಕ್ಕೆ ಸಂಪೂರ್ಣವಾಗಿ ಶರಣಾಗದೆ, ಇವೆರಡನ್ನೂ ಸಮತೋಲನಮಾಡಿ ನವ್ಯತೆಯ ಭಾವನೆಯನ್ನು ನವೋದಯ ಸಾಹಿತ್ಯದಲ್ಲಿ ಬೆರೆಸಿ ಅದರ ಮುಂಬೆಳಕಿನಲ್ಲಿ ತಮ್ಮ ಸಾಹಿತ್ಯ ಜೀವನವನ್ನು ಸಾಗಿಸುತ್ತಿದ್ದಾರೆ. ಇವರು ಸಿನಿಮಾಕ್ಕೆ ಬರೆದಿರುವ ಹಾಡುಗಳಲ್ಲಿ ಅಡಕವಾಗಿರುವ ಭಾವನೋಜ್ವಲತೆ ಉಕ್ಕಿ ಹರಿಯುತ್ತಿದೆ. ಇವರಿಗೆ ದೈವದತ್ತವಾಗಿ ದೊರೆತಿರುವ ಕಂಚಿನ ಕಂಠಧ್ವನಿ, ನಿರರ್ಗಳವಾಗಿ ಹರಿಯುತ್ತಿರುವ ಭಾವನೆಗಳು, ಇವರ ಸಾಹಿತ್ಯಕ್ಕೆ ಮೆರಗು ಕೊಟ್ಟಿವೆ. ಇವರ ಕಂಠದಿಂದ ಹೊರಹೊಮ್ಮುವ ಪುಂಗಿ ನಾದಕ್ಕೆ ಬೆರಗಾಗಿ, ಹೆಡೆಯೆತ್ತಿ ನರ್ತಿಸುವ ನಾಗಗಳಂತೆ ಎಂತಹವನನ್ನೂ ಮರುಳುಗೊಳಿಸುತ್ತವೆ.

ಶ್ರೇಷ್ಠ ಕವಿಗಳು ಸಾಮಾನ್ಯರಿಗರ್ಥವಾಗದ ಭಾಷೆಯಲ್ಲಿ ಬರೆದು ಬಹುಶ್ರುತರೆಂದು ಕೀರ್ತಿ ಪಡೆಯುವರು. ಮತ್ತೆ ಕೆಲವು ಕಾವ್ಯಗಳು ಅತ್ಯುತ್ತಮವಾಗಿ ಬೆಳೆದು ಬೆಳಕನ್ನು ಕಂಡಿದ್ದರೂ ಅವುಗಳೆಲ್ಲ ಸಾಮಾನ್ಯರ ಮನ ಮುಟ್ಟಿಲ್ಲ. ಇವು ಅವರ ಹೃದಯ ಮುಟ್ಟುವುದಂತೂ ಸಾಧ್ಯವೇ ಇಲ್ಲ. ಅವು ದೊಡ್ಡ ದೊಡ್ಡ ಗ್ರಂಥಗಳಲ್ಲಿರುವ ವಿಚಾರ ಧಾರೆ ಮತ್ತೊಬ್ಬ ಪ್ರತಿಭಾವಂತ ಸಾಹಿತಿ ಜನ್ಮ ತಾಳುವವರೆವಿಗೂ ಹಾಗೆಯೇ ಉಳಿದಿರುತ್ತವೆ. ಅವುಗಳ ಹೆಸರು ಪ್ರಚಲಿತವಾಗಿದ್ದರೂ, ಶ್ರೇಷ್ಠ ಕವಿಗಳ ಭಾವನೆಗಳು ಗ್ರಂಥಗಳಲ್ಲೇ ಉಳಿದಿರುತ್ತವೆ. ಆದರೆ ಡಾ|| ದೊಡ್ಡರಂಗೇಗೌಡರ ಸಾಹಿತ್ಯವು ಸಾಮಾನ್ಯ ಜನರ ಹೃದಯವನ್ನು ಮುಟ್ಟುತ್ತದೆ. ಶತಶತಮಾನಗಳವರೆವಿಗೂ ಅಚ್ಚ ಹಸುರಾಗಿಯೇ ಉಳಿಯುತ್ತದೆ.

ಆಡು ಮುಟ್ಟದ ಸೊಪ್ಪಿಲ್ಲ ಎಂಬ ಗಾದೆಯಂತೆ ಇವರ ವಿಚಾರಕ್ಕೆ, ಆಲೋಚನೆಗೆ ಸಿಲುಕದ ವಸ್ತು ಯಾವುದೂ ಇಲ್ಲ. ಇವರಿಗೆ ಸರ್ವತೋಮುಖವಾದ ಪ್ರತಿಭೆಯಿದೆ, ಸಾಹಿತ್ಯಿವಿದೆ.

ಜನಮನಸ್ಸಿಗೆ ಮುಟ್ಟಿಸಬೇಕೆಂಬ ಉತ್ಕಟಾಕಾಂಕ್ಷೆಯಿದೆ. ಭಾವ, ಸಾಹಿತ್ಯ ಹಾಗೂ ಹಾಡುವ ಕಲೆಗಳನ್ನು ಮೈಗೂಡಿಸಿಕೊಂಡಿದ್ದಾರೆ. ಇವರು ಬರೆದಿರುವ ಪ್ರತಿಯೊಂದು ಕವನದಲ್ಲೂ ಒಂದೊಂದು ವೈವಿಧ್ಯತೆಯಿದೆ, ಸಾಹಿತ್ಯದ ಸೊಗಡಿದೆ. ಭಾವನಾತ್ಮಕ ವಿಚಾರಧಾರೆಯಿದೆ. ಯಾವ ಸನ್ನಿವೇಶಕ್ಕೆ ಬೇಕಾದರೂ ಅದಕ್ಕೆ ಸಂಬಂಧಿಸಿದಂತೆ ಸಾಹಿತ್ಯ ರಚಿಸುವ ಕಲೆಯನ್ನು ಮನದಟ್ಟು ಮಾಡಿಕೊಂಡಿದ್ದಾರೆ. ಇದರಿಂದಲೇ ಇವರಿಗೆ ದೇಶವಿದೇಶಗಳಿಂದ ಕರೆಗಳು ನಿರಂತರವಾಗಿ ಹರಿದು ಬರುತ್ತಿವೆ.

ಇವರು ಸ್ವಭಾವತಃ ನಿಷ್ಕಲ್ಮಶ ಹೃದಯಿಗಳು. ಇವರ ವದನದಲ್ಲಿ ಸದಾ ಹರ್ಷ ಎದ್ದು ಕಾಣಿಸುತ್ತದೆ. ಎಂತಹ ಕಠಿಣವಾದ ಸಮಸ್ಯೆಗಳು ಎದುರಾದರೂ ಅವು ಕುಟುಂಬಕ್ಕೆ ಸಂಬಂಧಿಸಿದವಾಗಲಿ ಅಥವಾ ತಮ್ಮ ಕರ್ತವ್ಯ ಕ್ಷೇತ್ರಕ್ಕೆ ಸಂಬಂಧಿಸಿದವಾಗಲಿ, ನಗುನಗುತ ಅವುಗಳನ್ನು ಪರಿಹರಿಸುವ ಕಲೆಯು ಸ್ವಾಭಾವಿಕವಾಗಿಯೇ ಇವರಲ್ಲಿ ಕಂಡು ಬರುತ್ತದೆ. ಬಹುಶಃ ಇವರಿಗೆ ಇದು ಅನುವಂಶೀಯವಾಗಿ ಬಂದಿರುವ ವರಪ್ರಸಾದ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

**ಸಾಧನೆಗಳ ಸರಮಾಲೆ**

ಡಾ|| ದೊಡ್ಡರಂಗೇಗೌಡರು ಒಬ್ಬ ಧೀಮಂತ ವ್ಯಕ್ತಿ "Smiles are blossoms, Frown are thorns. Hence we must smile while we sip the bitter tonic of the fate". ಇದಕ್ಕನುಗುಣವಾಗಿ ಎಂದಿಗೂ ಅವರು ಮುಖವನ್ನು ಗಂಟು ಹಾಕಿಕೊಂಡವರಲ್ಲ, ಸದಾ ಹಸನ್ಮುಖಿಗಳು, ಶಿಕ್ಷಣ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಅಪಾರ ಅನುಭವವನ್ನು ಪಡೆದಿದ್ದಾರೆ. ಚಲನಚಿತ್ರ ಇವರ ಜೀವನ ಕ್ಷೇತ್ರ. ಸುಗಮ ಸಂಗೀತ ಮತ್ತು ಕಲೆ ಇವರಿಗೆ ನೆಮ್ಮದಿಯನ್ನು ಆನಂದವನ್ನು ತಂದ ಗಂಧರ್ವವರಗಳು. ಈ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಪ್ರೌಢಿಮೆಯನ್ನು ಪಡೆದ ಇವರು ಅಪರೂಪದ ವ್ಯಕ್ತಿಗಳು. ಅಹರ್ನಿಶೆ ಮಾತೆ ಸರಸ್ವತಿಯ ಲೋಕದಲ್ಲಿ ಸಂಚರಿಪ ಗಾಯಕರು. ನಿರರ್ಗಳವಾಗಿ ಘಂಟೆಗಟ್ಟಲೆ ಸಾಹಿತ್ಯದ ಬಗ್ಗೆ ಮಾತನಾಡುವ ಸಾಹಿತಿಗಳು. ಅನೇಕ ಕವಿಗೋಷ್ಠಿಗಳಲ್ಲಿ ಮಾತನಾಡಿದ್ದಾರೆ. ಶ್ರೇಷ್ಠ ಉಪನ್ಯಾಸಗಳನ್ನು ನೀಡಿದ್ದಾರೆ.

ಇವರು ಭಾವನೋಜ್ವಲರಾಗಿ ಆಡುವ ಅಕ್ಕರೆಯ ಸವಿನುಡಿಯನ್ನು ಸಕ್ಕರೆಯ ಸವಿದಂತೆ ಕಿಕ್ಕಿರಿದು ಕೇಳುವರು ಆ ಬಾಲವೃದ್ಧರು. ಇವರ ಕಂಠ ಮಾಧುರ್ಯ ಗಂಟಾನಾದದಂತೆ ಭಾವ ಬುಗ್ಗೆಯನ್ನು ಹೃದಯದ ಅಂತರಾಳದಿಂದ ಹೊರಚಿಮ್ಮುತ್ತದೆ.

ಇವರ ಮಾಧುರ್ಯದಿಂದ ಕೂಡಿದ ಮುಕ್ತ ಮಾತುಗಳು ಕೇಳುವವರ ಹೃದಯದ ಅಂತರಾಳವನ್ನು ತಲುಪುತ್ತದೆ. ಇವರ ಜೀವನವೇ ಬೇವು ಬೆಲ್ಲದಂತೆ ಇದೆ. ಭೋರ್ಗರೆವ ಕಷ್ಟಗಳ ಸರಮಾಲೆ ಅಲೆಗಳು ಬಂದು ಸಾಗರದ ಮಧ್ಯದಲ್ಲಿ ದಿಟ್ಟತನದಿಂದ ತಲೆ ಎತ್ತಿ ನಿಂತಿರುವ

ಬಂಡೆಯನ್ನು ಬಡಿದರೂ ಅದು ಅಚಲವಾಗಿ ನಿಂತಿರುವಂತೆ, ಕಷ್ಟಗಳ ಸರಮಾಲೆ ಅಲೆ ಅಲೆಗಳಾಗಿ ಬಂದು ಇವರನ್ನು ಅಪ್ಪಳಿಸಿದರೂ ಅಲುಗಾಡದಂತೆ ನಿಂತು ಧೃಢತೆಯಿಂದ ತನ್ನ ಗುರಿಯನ್ನು ಸಾಧಿಸುವ ಧೀಮಂತ ವ್ಯಕ್ತಿಗಳು.

ಸಮಾಜ ಒಂದು ಹೂದೋಟದಂತೆ, ಸುಗಂಧವನ್ನು ಸೂಸುವ, ಸೌರಭವನ್ನು ಬೀರುವ ಪುಷ್ಪಗಳು, ಕೆಂಪು, ಬಿಳುಪು, ಕಂದು ಬಣ್ಣಗಳ ಪುಷ್ಪಗಳು ಹೂದೋಟದ ಸೊಬಗನ್ನು ಹೆಚ್ಚಿಸುತ್ತವೆ. ಹಾಗೆಯೇ ಸಮಾಜದಲ್ಲಿ ವಿಜ್ಞಾನಿಗಳು ದೇಶ ಭಕ್ತರು, ಕವಿ ಪುಂಗವರುಗಳು, ಸಮಾಜ ಸುಧಾರಕರು, ಜನ್ಮ ತಾಳಿ ಈ ಸಮಾಜವನ್ನು ಸುಂದರಗೊಳಿಸಿದ್ದಾರೆ ಎಂಬುದನ್ನು ಇವರು ತಮ್ಮ ಕವನಗಳಲ್ಲಿ ಸುಂದರವಾಗಿ ಬಣ್ಣಿಸಿದ್ದಾರೆ. ಇವರು ಭಾವೋನ್ಮುಖರಾದಾಗ ಇವರ ಹೃದಯದ ಅಂತರಾಳದಿಂದ ಭಾವನೆಗಳು ಅಡೆತಡೆಗಳಿಲ್ಲದೆ ಹೊರ ಚಿಮ್ಮುತ್ತವೆ.

ಇವರು ಬಿರುದುಗಳನ್ನು ಬಯಸಿ ಅವುಗಳನ್ನು ಹಿಂಬಾಲಿಸಿದವರಲ್ಲ. ಇವರನ್ನು ಬಿರುದುಗಳೇ ಹಿಂಬಾಲಿಸಿ ಬಂದಿವೆ; ಬರುತ್ತಿವೆ. ಇವರು ಒಂದಲ್ಲ ಹತ್ತಾರು ಬಿರುದುಗಳ ಸರದಾರರಾಗಿದ್ದಾರೆ. ಕೇವಲ ತಮ್ಮ ಕ್ಷೇತ್ರದಿಂದ ಮಾತ್ರವಲ್ಲ, ಕೇವಲ ಕರ್ನಾಟಕದಿಂದ ಮಾತ್ರವಲ್ಲದೆ ಪಾಶ್ಚಾತ್ಯ ರಾಷ್ಟ್ರಗಳಿಂದಲೂ ಇವರಿಗೆ ಕಾರ್ಯಕ್ರಮಗಳ ಕರೆಗಳು ನಿರಂತರವಾಗಿ ಬರುತ್ತಿವೆ. ಇವರು ಕಾರ್ಯಕ್ರಮಗಳನ್ನು ಬಿಡಲು ಇಚ್ಛಿಸಿದರೂ ಅವು ಇವನರುನ್ನು ಬಿಡಲೊಲ್ಲವು.

**ಭಾವಗೀತೆಗಳ ಧ್ವನಿ ಸುರಳಿಗಳು**

ಧ್ವನಿ ಸುರಳಿಗಳಿಗೂ ಇವರಿಗೂ ಇರುವ ಸಂಬಂಧವನ್ನು ಯಾವ ರೀತಿಯಲ್ಲೂ ಬೇರ್ಪಡಿಸಲು ಸಾಧ್ಯವಿಲ್ಲ.

ಇವರ ಕೀರ್ತಿಯನ್ನು ದೇಶ ವಿದೇಶಗಳಲ್ಲಿ ಹರಡಿದವು ಧ್ವನಿ ಸುರಳಿಗಳು. ಅವುಗಳಲ್ಲಿ ಕೆಲವನ್ನು ಇಲ್ಲಿ ಸ್ಮರಿಸಬಹುದು.

ಮಾವು-ಬೇವು, ಗೀತ ವೈಭವ, ಕಾವ್ಯ ಕಾವೇರಿ, ತಂಗಾಳಿ, ಪ್ರೀತಿ-ಭಾವನೆ, ಪ್ರೇಮ ಪಯಣ, ಹೃದಯದ ಹಕ್ಕಿ, ಹೋಳಿ ಹುಣ್ಣಿಮೆ, ಯುಗಾದಿ, ಚೈತ್ರೋತ್ಸವ, ಮಾವು-ಮಲ್ಲಿಗೆ, ಭೂಮಿ-ಭಾನು, 'ಸಿರಿ-ಸಂವರ್ಧನ' ಇವುಗಳಲ್ಲಿರುವ ಸಾಹಿತ್ಯ ಮತ್ತು ಸಂಗೀತಗಳು ನಮ್ಮನ್ನು ಭೂಮಿಯಿಂದ ವ್ಯೋಮಕ್ಕೆ ಹೊತ್ತೊಯ್ಯುವುದು ಮಾತ್ರವಲ್ಲದೆ ಸಾಹಿತ್ಯದ ಸೌಂದರ್ಯವನ್ನು ಉಜ್ವಲಗೊಳಿಸಿದೆ. ಇವರು ಸಾಹಿತ್ಯಾಕಾಶದಲ್ಲಿ ಕಂಗೊಳಿಸುವ ನಕ್ಷತ್ರದಂತಿದ್ದಾರೆ ಎಂದರೆ ಅದು ಅತಿಶಯೋಕ್ತಿಯಾಗಲಾರದು.

ಇವರು ತಮ್ಮ ಕವನಗಳಲ್ಲಿ ರಸಿಕತೆಯ ಕಡಲನ್ನು ಹರಿಸಿದ್ದಾರೆ, ರತಿಯ ಸರ್ವಾಂಗ ಸೌಂದರ್ಯದ ವರ್ಣನೆಯನ್ನು ರಸಮಯವಾಗಿ ವರ್ಣಿಸಿದ್ದಾರೆ. ಕವಿಯು ಕೇವಲ ಇವುಗಳಲ್ಲೇ ಮಗ್ನರಾಗಿಲ್ಲ. ತಮ್ಮ ಕವನಗಳಲ್ಲಿ ಪಾರಮಾರ್ಥಿಕ ಪರಮಾನ್ನ ಬಡಿಸಿದ್ದಾರೆ. ಉದಾಹರಣೆಗೆ ಕಾವ್ಯಾಂಜಲಿ, ಶ್ರೀ ಗುರುಚರಣದಲ್ಲಿ, ಶ್ರೀ ಅಯ್ಯಪ್ಪಸ್ವಾಮಿ ಕುಸುಮಾಂಜಲಿ, ಭಕ್ತಿ ಶರಣಾಂಜಲಿ, ಶ್ರೀ ಸಿದ್ದೇಶ್ವರ ಸ್ತುತಿ, ಸಪ್ತ ಮಾತಾಗೀತಾಂಜಲಿ, ಶ್ರೀ ಅಷ್ಟದೇವಿ ಗೀತಾಮಾಲ, ಶ್ರೀ ಹಿಮವದ್ ವೇಣುಗೋಪಾಲಸ್ವಾಮಿ ಭಕ್ತಿ ಗೀತೆಗಳು, ಶಿವಯೋಗಿ, ಭಕ್ತಿ ಕುಸುಮಾಂಜಲಿ, ಚಿರಂತನ, ಚೈತನ್ಯ, ಶ್ರೀ ಗುರು ಸಂಕೀರ್ತನ ಗಂಗಾ ತರಂಗ, ಚಿನ್ಮಯಿ ತಾಯಿ ಚೌಡೇಶ್ವರಿ, ವಚನವಾಹಿನಿ ಹೀಗೆ ಇವರ ಭಕ್ತಿ ಗೀತೆಗಳು ಓದುಗರನ್ನು ಮರ್ತ್ಯಲೋಕದಿಂದ ಭಾವ ಲೋಕಕ್ಕೆ ಸೆಳೆದು ಬ್ರಹ್ಮವನವಿಹಾರಿಗಳನ್ನಾಗಿ ಮಾಡಿವೆ. ಆನಂದದ ಅಬ್ಧಿಯಲ್ಲಿ ತೇಲಿಸುತ್ತವೆ.





# ಸಾಹಿತ್ಯ ಲೋಕದ ನಿರಂತರ ಪಯಣಿಗ

● ಎಸ್. ಗೀತಾಂಜಲಿ

ಪ್ರಕೃತಿ ಯಾರ ಮೇಲೆ ತನ್ನ ಪ್ರಭಾವ ಬೀರಿಲ್ಲ?

ನಿಸರ್ಗದ ಅಗಾಧತೆಗೆ ಮಣಿಯದವರೇ ಇಲ್ಲ. ಅದರಲ್ಲೂ ಸೂಕ್ಷ್ಮ ಮನಸ್ಸಿನ ಸೃಜನಶೀಲರಿಗೆ, ಭಾವುಕರಿಗೆ ಅನುಪಮ ಪ್ರೇರಣೆಯನ್ನು ನೀಡಿ, ಕವಿಯನ್ನಾಗಿಸುತ್ತದೆ.

ಅಂದು ಪಂಪ ಬನವಾಸಿಯನ್ನು ಕಂಡು ಮೈಮರೆತು, ಮನದಣಿಯೆ ಹಾಡಿದ್ದ. ಅನಂತರ ಅನೇಕಾನೇಕ ಕವಿಗಳು ಪ್ರಕೃತಿ-ಸೌಂದರ್ಯವನ್ನು ಕಂಡು, ಅಂದು ತಂದುಕೊಟ್ಟ ಅನುಭವದಲ್ಲಿ ತಮ್ಮ ಮನೋಧರ್ಮಕ್ಕೆ ಅನುಗುಣವಾದ ಸ್ವಂತಿಕೆಯಲ್ಲಿ ತತ್ವದರ್ಶನದೊಂದಿಗೆ ಕವಿತೆಗಳನ್ನು ರಚಿಸಿದ್ದಾರೆ.

ಇಂದು ದೊಡ್ಡರಂಗೇಗೌಡರವರು ಇದೇ ಪಥದಲ್ಲಿ ಸಾಗಿ ಪ್ರಕೃತಿಯಿಂದ ತಾವು ಪಡೆದ ಸಮೃದ್ಧ ಅನುಭವಗಳನ್ನು ತಮ್ಮ ಕವನಗಳ ಮೂಲಕ ಸಹೃದಯರಿಗೆ ಉಣಬಡಿಸಿದ್ದಾರೆ.

ಇಂಥ ಒಂದು ವಿಶಿಷ್ಟ ಕವಿತೆ ''ಹೂವು-ಹಣ್ಣು'' ಕವನ ಸಂಕಲನದ ''ಪೃಥ್ವಿ ಪ್ರಗಾಥ''. ಇದರಲ್ಲಿ ಕವಿ ತಾನು ಚಿಕ್ಕಂದಿನಿಂದ ಕಂಡ ಪ್ರಕೃತಿ ಸೊಬಗನ್ನು ತನ್ನ ವೃದ್ಧಾಪ್ಯದಲ್ಲಿ ಕಾಣದಾಗಿ ಬಹಳ ವಿಷಾದದಿಂದ ತನ್ನಲ್ಲಿಯೇ ತಾನು ಉತ್ತರವನ್ನು ಹುಡುಕುತ್ತಾರೆ. ಆ ಹೊತ್ತು ಸುಂದರ ಪ್ರಕೃತಿ, ಕಾಡು-ಮೇಡು, ಬೆಟ್ಟ-ಗುಡ್ಡ, ಪಶು-ಪಕ್ಷಿ, ನದಿ-ನದ, ಜಲಧಾರೆ, ಕೆರೆ-ಕೊಳ ಇವುಗಳಿಂದ ಕೂಡಿದ್ದ ಜಾಗವು ಇಂದೇಕೆ ಮರುಭೂಮಿಯಾಗಿದೆ ಎನ್ನುವುದರ ಹಿನ್ನಲೆ ಹುಡುಕುತ್ತಾ ಹೋದ ಕವಿಗೆ ಮನುಜರ ಸ್ವಾರ್ಥದ ಹಿನ್ನಲೆ ಅರಿವಾಗಿ ಮಮ್ಮಲ ಮರುಗುತ್ತಾರೆ.

''ಎಲ್ಲಿ ಹೋಯ್ತು ಬೆರಗು?
ಎಲ್ಲಿ ಹೋಯ್ತು ಮಿರುಗು?

ನೆನೆದರೆಲ್ಲ ಈಗ ದಿಗಿಲು!

----------------

ಆ ಬಿನದವಿಲ್ಲ, ನಿನಾದವಿಲ್ಲ
ಎತ್ತ ಹೋಯ್ತು ನೆಲದ ಆ ಮೋದ?

ಈ ಒಂದು ವಿಷಾದದ ಹಿನ್ನಲೆಯಲ್ಲಿ ಕವಿ, ತಮ್ಮ ವಿಚಾರವಂತಿಕೆಯಿಂದ, ಹಾಳಾಗುತ್ತಿರುವ ಪ್ರಕೃತಿಗೆ ಕಾರಣಗಳನ್ನು ಒಂದೊಂದಾಗಿ ವಿಶ್ಲೇಷಿಸುತ್ತಾರೆ. ಇಂತಹ ಕಡೆ ಕವಿ ಚಿಂತನೆ, ವೇದನೆಯಿಂದ ಕೂಡಿದ ಪದಪುಂಜಗಳಲ್ಲಿ ಘನೀಭೂತವಾಗಿ ಅಭಿವ್ಯಕ್ತವಾಗಿದೆ. ನಿದರ್ಶನಕ್ಕೆ ನಾವು ಪ್ರಗಾಥದ ಈ ಸಾಲುಗಳನ್ನು ಪರಾಮರ್ಶಿಸಿ ನೋಡಬಹುದು.

''ಬಣ್ಣದ ಮನೆಯ ಕಟ್ಟಿ ಬಣ್ಣದ ಮಾತಾಡಿದ
ಭಾವ ಕೋಶಕೆ ಬೆಂಕಿ ಇಟ್ಟ
ಯುಗ-ಯುಗಗಳಿಂದ ಪ್ರಕೃತಿ ತಂದ
ಜೀವ ಜಾಲ ಒಟ್ಟಿಗೆ ಸುಟ್ಟ''

ಇಂಥ ಕ್ರೂರವಾದ ಸಂಗತಿಯನ್ನು ಕಣ್ಣಾರೆ ನೋಡಿದ ಕವಿ ಇದಕ್ಕೆಲ್ಲಾ ಕಾರಣಗಳೇನು ಎಂದು ಶೋಧಿಸುತ್ತಾ, ತಾರ್ಕಿಕವಾಗಿ ಉತ್ತರವನ್ನು ಕಂಡುಕೊಳ್ಳುತ್ತಾ, ಕವಿತೆಯನ್ನು ಮುಂದುವರಿಸುತ್ತಾರೆ.

''ಮಣ್ಣ ಮನುಷ್ಯನೇಕೆ ಹಣದ ಮನುಷ್ಯನಾದ?
ಹೆಣವಾದಳೇ ತಾಯಿ ಅವನಿಗೆ?''

ಹೀಗೆ ಪ್ರಶ್ನಿಸುತ್ತಲೇ, ಹಣದ ಗುಲಾಮನಾದ ಮನುಜ ವಿಶ್ವವನ್ನು ವಿನಾಶದೆಡೆಗೆ ದೂಡುತ್ತಿರುವುದನ್ನು ಕಂಡು ಪರಿತಪಿಸುವ ಪರಿ ''ಪೃಥ್ವಿ ಪ್ರಗಾಥ'ದಲ್ಲಿ ಮನ-ಕಲುಕುವಂತೆ ಮೂಡಿಬಂದಿದೆ.

ಇದಕ್ಕೆ ಪೂರಕವಾದ ಇನ್ನು ಕೆಲವು ಕವನಗಳನ್ನು ''ಹೂವು-ಹಣ್ಣು'' ಕವನ ಸಂಕಲನದಲ್ಲಿ ಕಾಣಬಹುದಾಗಿದೆ. ಅದರಲ್ಲಿ ನನಗಿಷ್ಟವಾದ ಕವಿತೆ ''ಪಕ್ಷಿ-ಪ್ರಗಾಥ.''

ಸುಂದರ ಪ್ರಕೃತಿಗೆ ಜೀವಂತಿಕೆ ತಂದುಕೊಡುವುದು ಪಕ್ಷಿ ಸಂಕುಲ. ನಿಸರ್ಗದ ಹಿನ್ನಲೆಯಲ್ಲಿ ಬಗೆ-ಬಗೆಯ ಪಕ್ಷಿಗಳ ಕೂಗು-ಕಲರವ ಸುಮಧುರ ಸಂಗೀತದಂತೆ ಗಂಧರ್ವ ಲೋಕವನ್ನು ಸೃಷ್ಟಿಸುತ್ತದೆ. ಅಂತಹ ಒಂದು ಪರಿಕಲ್ಪನೆಯನ್ನು ಈ ಸಾಲು ಬಿಂಬಿಸುತ್ತದೆ;

"ಹಸಿರ ಜಾಗರವಿತ್ತು, ಪ್ರಾಣಿ ಆಗರವಿತ್ತು.
ಬದಿಗೆ ನಾಗರವಿತ್ತು, ಜೊತೆಗೆ ಸಾಗರವಿತ್ತು.
ಕಣಿವೆ ಕಾನನವಿತ್ತು ನಗುವ ಹೂ ಬನವಿತ್ತು.
ಕಳವೆ ಗದ್ದೆಯೂ ಇತ್ತು, ಬವಣೆ ಬಂಕಗಳಿತ್ತು.
ಆಗ ಕೇಕೆ ಇತ್ತು. ಮೋಹಕ ಕುಣಿತವಿತ್ತು.
ರಾಗ ಭೋಗವೂ ಇತ್ತು. ತ್ಯಾಗ ಯೋಗವೂ ಇತ್ತು."

ಈಗ ಇಂದೇನಾಗಿದೆ? ಇಂತಹ ಸುಂದರ ಅನುಭವಗಳಿಂದ ಶ್ರೀ-ಸಾಮಾನ್ಯ ವಂಚಿತನಾಗಿದ್ದಾನೆ.

ಅಂದು ಕವಿ ದೊ.ರಂ.ಗೌಡರವರಿಗೆ ಕಂಡ ಪ್ರಕೃತಿ-ವೈಭವ-ಪ್ರೇರಣೆ, ಇಂದು ಅವರಿಗೇ ಅಲಭ್ಯವಾಗಿದೆಯೆಂದರೆ, ಮುಂದಿನ ಪೀಳಿಗೆಗೆ ಕೇವಲ ಕನಸಾಗಿ, ಕಲಾವಿದರ ಚಿತ್ರಗಳಲ್ಲಿ ಮಾತ್ರವೇ ಕಾಣುವ ವಸ್ತುವಾಗುತ್ತದೆ. ಈ ದುರಂತವನ್ನು ಮನಗಂಡ ಕವಿ ಹೀಗೆ ಹೇಳುತ್ತಾರೆ:-

"ಬಂತೋ ಬಂತೋ ಎಂಥ ಕಾಲ?
ಕೊಂಪೆ ಕೊಂಪೆ ಈಗ ಕಂಗಾಲ!
ಇನ್ನೆಲ್ಲಿ ಚಿಂತನ? ಇನ್ನೆಲ್ಲಿ ನರ್ತನ?
ಉಕ್ಕೀತೇ ಇಂಪಿನ ತಾನ?
ಹರಿದೀತೇ ಗಾನ-ವಿತಾನ?
ತೆರೆದೀತೇ ರಸಿಕತೆ ಹೃನ್ಮನ?

ಇಂಥ ಅನರ್ಥಗಳನ್ನು ಸೃಷ್ಟಿಸುವನಾರು?

ಅವನೇ "ನುಂಗಾಸುರನಾದ ಮನುಜ"

ಇದ್ದ ಭೂಮಿ ನುಂಗಿದ, ಬೆಟ್ಟ ಬೆಟ್ಟ ನುಂಗಿದ
ಕಾಡು ನುಂಗಿದ ಕಡಲ ಮಡಿಲೂ ನುಂಗಿದ
ಚೆಂದ ಒಡಲೂ ನುಂಗಿ ಹಸಿರ ಮಡಿಲೂ ನುಂಗಿ
-----------

ಇನ್ನೆಲ್ಲಿ ಸೌಂದರ್ಯ ಸಹಜ?
ಬಂದೀತೇ ನನಗೆ ತೇಜ?
ಕಂಡೀತೇ ಹಸಿರ ಕಣಜ?

ಇದರಿಂದ ಕವಿ ದೊಡ್ಡರಂಗೇಗೌಡರವರು ಜಾಗೃತಿಗೊಳಿಸುವುದೇನೆಂದರೆ, ಪ್ರಕೃತಿ ನಾಶದಿಂದ ಜಗತ್ತಿನ ನಾಶ. ನಂತರ ಬರುವ ಮುಂದಿನ ಪೀಳಿಗೆ ಪ್ರಕೃತಿಯ ಸೊಬಗಿನಿಂದ ಮನುಜ ಪಡೆಯುವ ಆನಂದ, ಆಹ್ಲಾದ, ಮನೋವಿಕಾಸ ಚಿಂತನಶೀಲತೆ. ತಾತ್ವಿಕ ದರ್ಶನಗಳಿಂದ ವಂಚಿತರಾಗಿ ಕೇವಲ ಯಾಂತ್ರಿಕ ಜೀವಿಗಳಾಗುತ್ತಾರೆ.

ಹಲವು ಕಲೆಗಳಿಗೆ ತಾಯ್ನೆಲೆಯಾದ ಪ್ರಕೃತಿಯೇ ನಾಶವಾದರೆ ಕಲೆ ಮತ್ತು ಸಂಸ್ಕೃತಿ ಬರಡಾದ ಮರುಭೂಮಿಯಾಗುತ್ತದೆ. ಬರುಬರುತ್ತ ಮಾನವತೆ ಮರೆಯಾಗುತ್ತದೆ.

ಹೀಗಾಗಿ ಹಣಕ್ಕೇ ಹೆಚ್ಚು ಪ್ರಾಮುಖ್ಯತೆ ಕೊಟ್ಟ ಮನುಷ್ಯನಿಂದ ಮಾನವೀಯ ಮೌಲ್ಯಗಳು ನಶಿಸಿ, ರಾಕ್ಷಸೀ ಗುಣಗಳೇ ಹುಟ್ಟುತ್ತದೆ, ತನ್ಮೂಲಕ ವಿಕೃತಿಯ ಚಿತ್ರವನ್ನೇ ಕಟ್ಟುತ್ತವೆ.

ಇದೇ ಅವರು ನಮ್ಮಲ್ಲಿ ಮೂಡಿಸುವ ಜಾಗೃತಿ! ಕವಿ ಸಮಾಜದ ರೂವಾರಿ, ಅನಧಿಕೃತ ಶಾಸಕ ಎಂದು ಇಂತಹ ಬರವಣಿಗೆಯ ಮೂಲಕ ರುಜುವಾತಾಗುತ್ತದೆ. ಇವರ ಅನನ್ಯ ಆದರ್ಶಗಳ ವ್ಯಕ್ತಿತ್ವದಲ್ಲಿ ಪ್ರಕೃತಿಗೆ ಸಂಬಂಧಿಸಿದಂತೆ ಮಾತ್ರ ಇಲ್ಲಿ ವಿಮರ್ಶಿಸಿದ್ದೇನೆ.





# ಲೋಕಾಯಣದ ಕವಿ

• ಎಂ.ಎಸ್. ವೆಂಕಟರಾಮಯ್ಯ

"ಹೊಲದ ಸಿರಿ ತಾಯಿ ಕದಪು
ಹರಿವ ಝುರಿ ಬಳುಕು ಒನಪು
ತೆನೆಯ ಗರಿ ಕುಲುಕೂ ಪೆಂಪು
ತಿರೆಯ ಮಿರೆ ಮಿನುಗೂ ಸೊಂಪು!"
(ಅಭಿವಂದನೆ-ಹೊಸಹೊನಲು)

ಎಂಥ ಚಂದದ ವರ್ಣನೆಯಲ್ಲಿ ತೊಯ್ದಿದೆ ನಿಸರ್ಗ. ಕವಿ ಪ್ರೊ॥ ದೊಡ್ಡರಂಗೇಗೌಡರ ಲೇಖನಿಯಿಂದ ನಮಗೊಲಿದ ಭಾವಗೀತೆಗಳು, ನವ್ಯಕಾವ್ಯ ಕೃತಿಗಳು, ಭಕ್ತಿಗೀತೆಗಳು, ಪ್ರಗಾಥಗಳು, ಮುಕ್ತಕಗಳು ಹೀಗೆ ಎಲ್ಲ ಕಾವ್ಯ ಪ್ರಕಾರಗಳೂ ಅಪ್ಯಾಯಮಾನವೆನಿಸುವುವು. ಇವೆಲ್ಲಕ್ಕೆ ಕಿರೀಟದಂತೆ ಅತ್ಯಂತ ಜನಪ್ರಿಯತೆ ಗಳಿಸಿದ ಅದೆಷ್ಟೋ ಚಿತ್ರಗೀತೆಗಳು ಮನೆಮಾತಾಗಿವೆ ಅಲ್ಲಮನ ಹಾಡಾಗಿದೆ. ಬಹಳ ಕಾಲದವರೆಗೆ ಅವರನ್ನು ಸಾರಸ್ವತ ಲೋಕ ಸಿನಿಮಾ ಗೀತೆ ಕವಿಯೆಂದು ಹಣೆಪಟ್ಟಿ ಕಟ್ಟಿತ್ತು. ಅವರ ಸಾಧನೆ, ಜನ ಮಾಧ್ಯಮ ಸಂಪರ್ಕ, ಚಿತ್ರಗೀತೆ ರಚನೆಯನ್ನೂ ಕಾವ್ಯ ಪ್ರಕಾರವೆಂದು ಗುರುತಿಸುವ ಮಟ್ಟಿಗೆ, ಅದ್ಭುತವಾಗಿ ಬೆಳೆದ ಕಾರಣ ಅವರನ್ನು ಗಂಭೀರವಾಗಿ ಪರಿಗಣಿಸುವಂತಾದುದು ಸತ್ಯ. ಪ್ರೊ॥ ದೊಡ್ಡರಂಗೇಗೌಡರ ಅನೇಕ ಮಾನವೀಯ ಗುಣಗಳಲ್ಲಿ ಇತರರಲ್ಲಿನ ಪ್ರತಿಭೆಗೆ ಬೆಲೆ ಕೊಡುವುದು ಹಾಗೂ ಅದನ್ನು ಪೂರ್ವಕಲ್ಪಿತ ಅಭಿಪ್ರಾಯಕ್ಕೆ ಅತೀತವಾಗಿ ಪ್ರಶಂಸಿಸುವುದು ಗಮನಾರ್ಹವೆನಿಸುವುವು. ತಮ್ಮ ಸರಳತೆ ಹಾಗೂ ಆತ್ಮೀಯತೆಗಳಿಂದ ಅಪಾರ ಮಂದಿ ಸ್ನೇಹಿತರನ್ನು ಅವರು ಸೃಷ್ಟಿಸಿಕೊಂಡಿದ್ದಾರೆ. ಎಷ್ಟೋ ಸಾವಿರ ಮಂದಿ ಶಿಷ್ಯವರ್ಗದ ಪ್ರೀತಿಗೆ ದಕ್ಕಿದ್ದಾರೆ. ಒಮ್ಮೆ ಪರಿಚಿತರಾದವರು ಎಲ್ಲೇ ಸಿಕ್ಕಲಿ ನಗುಮುಖದಿಂದ ತಮ್ಮತ್ತ ಸೆಳೆದು ಕುಶಲೋಪರಿ ವಿಚಾರಿಸುತ್ತಾರೆ.

"ಮಣ್ಣ ಮಡಿಲಲಿ ಆಡಿಬೆಳೆದ
ನದಿ ನದಿಗಳು ಮುದ ನೀಡಿದ

ಮರಬಳ್ಳಿಗಳು ಲಾಲಿ ತೂಗಿದ
ಹೊಲ ಗದ್ದೆಗಳು ಕಾವಲು ಕಾಯ್ದ
ನನ್ನೂರ ಅಕ್ಕರೆ ದಿನಗಳು ಇಂದು ಸಕ್ಕರೆ ಕನಸುಗಳು''
(ನೆನಪಿನ ನದಿ-ಹೊಸ ಹೊನಲು)

ಮಹಾನಗರದಲ್ಲಿನ ವಾಸ ದಶಕಗಳದ್ದಾದರೂ, ಬಾಲ್ಯದ ನೆನಪುಗಳು ಹಳ್ಳಿಯ ಬದುಕಿನ ಸುಂದರ ಕ್ಷಣಗಳನ್ನು ಜೀವಂತವಿರಿಸಿ ಮನೋಲ್ಲಾಸಕ್ಕೆಡೆ ಮಾಡಿಕೊಡುವುದು ಇಲ್ಲಿನ ವಿಶೇಷ ನಗರ ಜೀವನದ ಏಕತಾನತೆ, ದಿನದಿನವೂ ಹೆಚ್ಚುತ್ತಾ ಹೋಗುವ ನಾಗರೀಕ ಸಮಸ್ಯೆಗಳು ಮನಸ್ಸನ್ನು ದುಗುಡದಲ್ಲಿಯೇ ಇರಿಸುವುದನ್ನು ಹೇಳಿರುವ ರೀತಿ-

''ಅಲ್ಲಿ ಮುಳ್ಳಿದ್ದರೂ ನೆಲವಿತ್ತು
ಇಲ್ಲಿ ಬಸ್ಸಿದ್ದರೂ ದಂಡಿ ದಂಡಿ ಗುಂಡಿಯಾಪತ್ತು...''
(ನೆನಪಿನ ನದಿ-)

ದೈನಂದಿನ ಪೇಚಾಟಕ್ಕೆ ಹಿಡಿದ ಕನ್ನಡಿಯಂತಿದೆ.

''ನಾವು ಇಳೆಗೆ ಬಂದ ಮೇಲೆ
ಹೋರಾಟ ಇರುವುದೇನೆ!
ಸಂಘರ್ಷ ಕಡಲ ತೂಗುಯ್ಯಾಲೆ
ಸಹಿಸೆ ಬದುಕು ಸುಖದ ಜೇನೆ!''
(ಈಜುವುದೊಂದೇ ದಾರಿ-ಹೊಸಹೊನಲು)

ಇದು ಸಿದ್ಧವಾಕ್ಯದಂತೆ, ಜೀವನದ ನಿಷ್ಕರ್ಷೆಯಂತೆ ತೋರಿಬರುವುದು. ಅವರು ಜೀವನದ ಅನಿವಾರ್ಯತೆಗಳತ್ತ ಮನಸ್ಸನ್ನು ಹದಗೊಳಿಸುವ ಪರಿ, ಹೃದಯದಲ್ಲಿ ಹೊಸರಾಗವೊಂದರ ಹುಟ್ಟಿಗೆ ಕಾರಣವಾಗುವುದನ್ನು ಮನೋಜ್ಞವಾಗಿ ನಿರೂಪಿಸುತ್ತಾರೆ. ಹೀಗೆ ಉದಯಿಸಿದ ರಾಗಕ್ಕೆ ಅವರು ಜೋಡಿಸುವ ಶಬ್ದಗಳು ತಾಯಿ ಶಾರದೆಯ ಕೃಪೆಗೆ ಎಂದು ನಂಬುತ್ತಾರೆ. ಪ್ರೊ॥ ದೊಡ್ಡರಂಗೇಗೌಡರ ಕವಿತೆಗಳಲ್ಲಿ ಗೇಯತೆಗೆಷ್ಟು ಸ್ಥಾನವಿರುವುದೋ ಅಷ್ಟೇ ಅಥವಾ ಇನ್ನೂ ಹೆಚ್ಚು ಪ್ರಾಮುಖ್ಯತೆ ವಾಗರ್ಥಕ್ಕೆ, ಭಾವ ಸ್ಫುರಣಕ್ಕೆ ದೊರಕಿರುವುದನ್ನು ಕಾಣಬಹುದು. ಅವರು ಹಿಂದಿನ ಕವಿಗಳ ಅಭಿಪ್ರಾಯಗಳಿಗೆ ಹೊರತಾಗಿ, ಪ್ರಕೃತಿಯ ಮಡಿಲಲ್ಲಿ ಏಕಾಮತವಾಗಿಯೇ ಬಿದ್ದು ಬಿಡದೆ, ಜನಜೀವನದ ರಸ್ತೆ, ಬಸ್‌ಸ್ಟಾಪ್, ಸಭೆ, ಉತ್ಸವಗಳಲ್ಲಿ ಪಾಲ್ಗೊಂಡು ಜನಮುಖಿಯಾಗಿ ಅತ್ಯುತ್ತಮ ರಚನೆಗಳನ್ನು ನೀಡುತ್ತಾ ಬಂದಿದ್ದಾರೆ. ಯಾವುದು

ಮುದ ಕೊಡುವುದೋ, ಯಾವುದು ಆತ್ಮತೃಪ್ತಿಗೆ ಕಾರಣವಾಗುವುದೋ ಅಂತಹದನ್ನು ಕವಿತೆಗಳಲ್ಲಿ ಕಟ್ಟಿಕೊಡುತ್ತಾರೆ.

"ಮಧುರ ಸ್ವರಗಳ ಮಿಡಿದು
ದಿವ್ಯ ಕಲ್ಪನೆ ಕಡೆದು
ಸಂಗೀತ ಗಂಗೆಯ ಮಿಂದು
ಸರಸ್ವತಿಯ ವರ ಪಡೆದು...."

(ಕೆನ್ ಜೆಕರ್‌ಮೆನ್ ಸಂಗೀತ ಕೇಳಿ - ಲೋಕಾಯಣ)

ಹೀಗೆ ಅವರ ರಚನೆಗಳು ಮೂಡುತ್ತಿರುವಂತೆಯೇ ಸಂಗೀತ ಲೋಕವೊಂದು ನಮ್ಮ ಮನಸ್ಸಿನಲ್ಲಿ ಸೃಷ್ಟಿಯಾಗುವುದು ಅವರ ಕೈಚಳಕ. ಗೀತೆ, ರಾಗ, ಸಂಗೀತ ಎಲ್ಲವೂ ಅವರಿಗೆ ಸಾಹಿತ್ಯೋಪಾಸನೆಯ ಮಜಲುಗಳಂತೆ. ಅವರು ಅನೇಕ ಬಾರಿ ಗೀತ ರಚನೆಕಾರರಿಗಿಂತ ಮಿಗಿಲಾಗಿ ಗೀತಮಾಂತ್ರಿಕರಂತೆ ತೋರುತ್ತಾರೆ. ಎಷ್ಟೊಂದು ರಚನೆಗಳು ಹಾಡುವವರ ಬಾಯಲ್ಲಿ ಅದ್ಭುತ ಗೀತೆಗಳಾಗಿ ಹೊರಬಂದುವೋ ಲೆಕ್ಕವಿಟ್ಟವರಾರು.

'ಲೋಕಾಯಣ'ದ ಎಂಬತ್ತಕ್ಕೂ ಹೆಚ್ಚಿನ ಕವಿತೆಗಳಿಂದ ನಾವು ಅಮೆರಿಕ, ಇಂಗ್ಲೆಂಡ್, ಯೂರೋಪ್ ದೇಶಗಳನ್ನು ಸುತ್ತು ಹಾಕಿದ ಅನುಭವವಾಗುತ್ತದೆ. ಡಾ॥ ಸರಜೂ ಕಾಟ್ಕರ್‌ರ 'ಮುಕ್ಕಾಂ ಪೋಸ್ಟ್ ಲಂಡನ್' ಪ್ರವಾಸ ಕಥನ ಓದಿದವರಿಗೆ ಲಂಡನ್ ನಗರದ ಸಂಪೂರ್ಣ ಪರಿಚಯ ಉಂಟಾಗುವ ಬಗೆಯಲ್ಲಿಯೇ 'ಲೋಕಾಯಣ'ದಲ್ಲಿನ ಕವಿತೆಗಳಿಂದ ಆ ದೇಶಗಳ ಸಂಸ್ಕೃತಿ, ಪರಿಸರ, ಜೀವನ ಶೈಲಿ, ಕಲೆ ಹಾಗೂ ತುಡಿತಗಳು ನಮಗೆ ಅತ್ಯಂತ ಸಮರ್ಪಕ ರೀತಿಯಲ್ಲಿ ಉಣಬಡಿಸಿದ ಅನುಭವವಾಗುವುದು.

ಪ್ರೊ॥ ದೊಡ್ಡರಂಗೇಗೌಡರ ಕವಿತೆಗಳಲ್ಲಿ ಎಲ್ಲಿಯೂ ಘರ್ಷಣೆಯಿಲ್ಲ. ತಮ್ಮನ್ನು ಆಸ್ತಿಕರೆಂದು ಕರೆದುಕೊಳ್ಳುವುದು ಹೆಮ್ಮೆಯ ವಿಷಯವೆಂದೇ ಅವರ ಭಾವನೆ. ವಿಚಾರವಾದಿಯ ಮುಖವಾಡ ಹೊತ್ತ ನಾಸ್ತಿಕತೆಯ ಗೊಂದಲಗಳು, ಪಲಾಯನಗಳು ಅವರಲ್ಲಿ ಕಾಣಸಿಗುವುದಿಲ್ಲ. ಹಾಗೆಂದು ವೈಚಾರಿಕತೆಯನ್ನು ಗೌಣವಾಗಿರಿಸಿದುದೂ ಇಲ್ಲ. ಕ್ರಿಯಾಶೀಲತೆಯನ್ನು ನಿತ್ಯಕರ್ಮದಂತೆ ಸಂವೇದನೆಯೊಂದಿಗೆ ಉಳಿಸಿಕೊಂಡು ಬಂದಿರುವುದು ಅವರ ವಿಶಿಷ್ಟ ಗುಣ. ದಿನ ದಿನಕ್ಕೆ ಜನಸಂಪರ್ಕವನ್ನು ವೃದ್ಧಿಸಿಕೊಂಡು ಬರುತ್ತಿರುವುದು, ಅನೇಕರಲ್ಲಿ ಕಾಣಸಿಗದ, ಅವರ ಜಾಯಮಾನ.

'ಸೃಜನ ಸಂಪನ್ನ', 'ಸಮಾಜ ಮುಖಿ', 'ಸಾಹಿತ್ಯ ಸಂಪದ' ಮುಂತಾದ ಸಂಭಾವನಾ ಗ್ರಂಥಗಳ ಪಟ್ಟಿಗೆ ಮತ್ತಷ್ಟು ಸೇರುವುದು ನನ್ನ ಆಶಯ. ಕನ್ನಡ ಸಾಹಿತ್ಯ ಪರಿಷತ್ತು ಹಾಗೂ

ಕರ್ನಾಟಕ, ಕೇಂದ್ರ ಸಾಹಿತ್ಯ ಅಕಾಡೆಮಿಗಳ ಗೌರವ ಸದಸ್ಯತ್ವ ಮತ್ತು ನಾಡಿನ ವಿಶ್ವವಿದ್ಯಾನಿಲಯಗಳಿಂದ ಗೌರವ ಡಾಕ್ಟರೇಟ್ ಅವರಿಗೆ ಲಭಿಸುವುದು ಸಾಕಾರವಾಗಲಿ. ಮಾನವೀಯ ಮೌಲ್ಯವುಳ್ಳ ಆಚಾರ-ವಿಚಾರಗಳಿಂದ ಪ್ರೊ॥ ದೊಡ್ಡರಂಗೇಗೌಡರು 'ಆದರ್ಶ ಸಾಹಿತಿ'ಯಾಗಿ ನಮ್ಮ ಮುಂದೆ ನಿಲ್ಲುತ್ತಾರೆ. ದುರಭಿಪ್ರಾಯ, ಕುಟಿಕೆಗಳಿಂದ ಅಸ್ಪಷ್ಟರಾಗಿರುವ ಅನೇಕ ಮಂದಿ ಲೇಖಕರನ್ನು ಜನರು ಮರೆತು, ಜನಾನುರಾಗವನ್ನು ತಮ್ಮ ರಾಗಭರಿತ ಕವಿತೆಗಳಿಂದ ಗಳಿಸಿದ ಪ್ರೊ॥ ದೊಡ್ಡರಂಗೇಗೌಡರನ್ನು ಸದಾಕಾಲ ಪ್ರೀತಿಸುತ್ತಾರೆ ಎಂದು ಹೇಳುವಲ್ಲಿ ಯಾವ ಸಂಕೋಚವೂ ಇಲ್ಲ.

"ಜಗದ ಚೆಲುವೆಲ್ಲಾ ಇಲ್ಲಿ...
ಶ್ರೇಣಿ ಶ್ರೇಣಿಯಲ್ಲಿ
ಮೈ ತಳೆದವೇನು ಪರ್ವತಗಳಾಗಿ?
ಇಂದ್ರ ನಂದನವೆಲ್ಲಾ ಇಲ್ಲಿ...
ಮುದ್ದು ಮುದ್ದಾಗಿ
ಮಾತಾಡುತ್ತಾ ನಿಂತವೇನು
ಹಸಿ ಹಸಿರು ಮರಗಿಡಗಳಾಗಿ?
ಚಂದ್ರನ ಕಾಂತಿ ಕದಿರೆಲ್ಲಾ
ಇಲ್ಲಿ ಅಲೆ ಅಲೆಯಾಗಿ
ತೇಲಾಡೋ ಮೋಡದೆಳೆ ಎಳೆ
ಹೊಳೆಯಾಗಿ ಹರಿದಾಡಿವೆಯೇನು
ಆವಿ ಬಲೆ ಬಲೆಯಾಗಿ?

ಎನ್ನುವಲ್ಲಿ ಅವರು 'ಸ್ವಿಸ್ ಅಂಚಿನಲ್ಲಿ' ಹೇಳಿರುವುದೇ ಯಾರಿಗಾದರೂ ಕಾಶ್ಮೀರ ಪ್ರವಾಸದಲ್ಲಿ ಅನುಭವವಾಗುವಂತೆ ರಚಿಸುವುದು ಅವರ ಕಾವ್ಯದ ಮೋಡಿ.





# ತೇರನೇರಿದಾ ಗೌಡರು

• ಡಾ|| ರಾಜೇಗೌಡ ಹೊಸಹಳ್ಳಿ

ಡಾ|| ದೊಡ್ಡರಂಗೇಗೌಡರು ನನಗೆ ವೈಯಕ್ತಿಕವಾಗಿ ಇಲ್ಲಿಯವರೆಗೂ ಪರಿಚಯ ಇಲ್ಲದಿದ್ದರೂ 'ತೇರಾನೇರಿ ಅಂಬರದಾಗೆ ನೇಸರ ನಗುತಾನೆ' ಎಂಬ ಆಹ್ವಾನದಲ್ಲಿ ಪರಿಚಯವುಂಟು. ಅವರ ಗರಿಮೆಗೊಂದು ಸನ್ಮಾನ ಹಮ್ಮಿಕೊಂಡ ಅಭಿಮಾನಿಗಳು ಅವರ ಕೃತಿಗಳ ಬಗ್ಗೆ ಲೇಖನವೊಂದನ್ನು ಬರೆಯಲೇನೋ ಕೊಟ್ಟರು. ಇನ್ನು ಬರೆಯಬೇಕಲ್ಲ ಎಂದು ಅವರ ಕೃತಿಗಳನ್ನು ಅವರ ವಿಸ್ತಾರವನ್ನು ಓದಿ ನೋಡಿದೆ. ಅವರು ಪ್ರಕೃತಿ ಪ್ರಿಯರೆಂದು, ಪ್ರಕೃತಿಯ ಪ್ರತಿರೂಪವಾದ ಹೆಣ್ಣನ್ನು ಇಷ್ಟಪಟ್ಟು ಮದುವೆಯಾದವರೆಂದು ಗೊತ್ತಾಯಿತು. ಪ್ರೀತಿ-ಪ್ರೇಮ ಅಕ್ಕತಂಗಿಯರಿದ್ದಂತೆ; ಭಾವನಿಗೆ ಅಕ್ಕನ ಮೇಲಿನ ಪ್ರೀತಿಯಷ್ಟೇ ನಾದಿನಿಯ ಬಗ್ಗೆ ಸರಸವುಂಟು. ಈ ಪ್ರೀತಿ ಮತ್ತು ಸರಸ ಅವರ ಕವಿತಾ ಭಾವನೆಗಳಲ್ಲಿ ಕಂಡುಬರುತ್ತದೆ. ಅವರಪ್ಪ ಮೇಷ್ಟರಾಗಿದ್ದವರು. ಇವರೂ ಅಪ್ಪನಂತೆ ಮೇಷ್ಟರು. ಕನ್ನಡ ಓದಿ ಅರಗಿಸಿಕೊಂಡವರು. ಮಡದಿ ಮಕ್ಕಳೆಲ್ಲ ಕನ್ನಡ ಸ್ನಾತಕೋತ್ತರ ಪದವಿ ಪಡೆದವರು. ಹೀಗಾಗಿ ಅವರದೊಂದು ಕನ್ನಡ ನೆಲದಲ್ಲಿ ಸಂಪೂರ್ಣ ಕನ್ನಡಮನೆ.

ಬಯಲು ಸೀಮೆಯ ಹುಡುಗನಾಗಿ; ಅವರ ಕವಿತಾ ಮಾತಿನಲ್ಲೇ ಹೇಳಿರುವಂತೆ ಇವರು 'ಉಡುಗೆ ಸರಿ ಇರದವನು ತುಡುಗಲ್ಲೇ ಬೆಳೆದವನು, ಉಡಾಫೆ ಗೊತ್ತಿರದವನು, ಹುಡುಗಿ ಸ್ನೇಹಸಿಕ್ಕಿ ದಂಗಾದೆನು' ಎಂದು ಹೇಳಿರುವುದನ್ನು ಗಮನಿಸಿದರೆ ಗೌಡರು ಸಾಂಪ್ರದಾಯಿಕ ಚೌಕಟ್ಟು ಮುರಿದು ಜಾತಿ ವರ್ಣ ಧಾಟಿ ನೈಜ ಪ್ರೀತಿಗೆ ಒಲಿದವರು. ಇವರು ಹೊಲಗದ್ದೆ ಹಳ್ಳಕೊಳ್ಳ, ತೋಟ ತುಡಿಕೆಯ ಸಮೃದ್ಧ ಹೂವು ಹಣ್ಣು ಇವುಗಳ ನಡುವಿನಿಂದ ಹೊರಬರುವಾಗ, ಬದುಕಿನಾಸರೆ ಧಾಟುವಾಗ ಹಾಡಿನ ಮೇಲೆ ಹಾಡು ಬರೆದು ವಿಶ್ವ ಮುಖೀ ಪ್ರಜ್ಞೆಯ ಕಡೆ ಧಾಟಿ ಸಂಸಾರವನ್ನು ತೆಕ್ಕೆಗೆ ತೆಗೆದುಕೊಂಡವರೆಂದು ಅವರ ಬರವಣಿಗೆಯಿಂದ ತಿಳಿಯುತ್ತದೆ.

ಇವರು ಹೇಳುತ್ತಾರೆ: ನಿನ್ನ ಕಂಡ ಗಳಿಗೆಯಲ್ಲೆ ಪ್ರೇಮಾಕ್ಷರ ಕಲಿತೆ' ಎಂದು. ಪ್ರೀತಿ-ಪ್ರೇಮ-ಪ್ರಣಯಗಳೇ ಹೀಗೆ! ಹರೆಯದ ಗಳಿಗೆಗಳನ್ನು ಅಳೆಯುವ ಮಂತ್ರಗಳು. ಈ

ಪ್ರೀತಿ ಪ್ರೇಮಕ್ಕೂ ಭುವಿ-ಭಾನು ಮಿಲನಕ್ಕೂ ಅಪಿನಾವ ಸಂಬಂಧವುಂಟು. ಇವರು ಮತ್ತೊಂದೆಡೆ ಹೇಳುತ್ತಾರೆ: 'ಮುಂಜಾನೆ ಬಾನೊಳು ರಂಗೋಲಿ ಬರೆದನು, ಹೊಂಗಿರಣ ನೇಯುವ ಭಾಸ್ಕರ.' ಮನಸ್ಸು ರಂಗೋಲಿ ಬರೆಯುವಾಗ ಭುವಿ-ಭಾನುಗಳ ಚೈತನ್ಯ ಕಾಣುತ್ತದೆ. ಈ ನಿಟ್ಟಿನಲ್ಲಿ ಗೌಡರ ಸಂಸಾರ ಜಗದ ಸಂಸಾರದೊಳಗೆ ರಂಗೋಲಿ ಬರೆಯುತ್ತಿದೆ ಎಂದೇ ಭಾವಿಸೋಣ.

ಇವರು ತಾಯಿಯ ಬಗ್ಗೆ ಬಹು ಸೂಕ್ಷ್ಮ ಪ್ರತಿಮಾ ಸ್ವರೂಪ ಹೇಳುವಾಗ "ಕಮಲದ ಮೊಗ್ಗಿನ ಹಾಗೆ ನನ್ನಮ್ಮ ಹೆಚ್ಚು ಮೊಗಂ;" ಎಂದು ಹೇಳುತ್ತಾ ಶ್ರೀರಂಗನಾಥ ಅವಳ ಆತ್ಮಬಂಧು ಎನ್ನುತ್ತಾರೆ. ಗ್ರಾಮೀಣ ಹೆಣ್ಣು ಒಂದು ಯಂತ್ರ, ಬಾಳಕಂದುಗಳಂತೆ ಮಕ್ಕಳು ಹೆರುತ್ತಾ ಜಗತ್ತಿಗೆ ಜೀವ ತುಂಬುತ್ತಿದ್ದರೆ, ಜೀವವಿರುವ ಯಂತ್ರದಂತೆ ದುಡಿದೂ ದುಡಿದೂ ಜಗತ್ತಿನ ಒಳಿತಿಗೆ ಮಕ್ಕಳನ್ನು ನೂಕುತ್ತಾಳೆ. ಶ್ರೀರಂಗ ಇವರ ಅಮ್ಮನ ದೈವ, ಇವರ ಹೆಸರು ವಿಷ್ಣು ಮೂಲದ್ದು. ಆಮತ ಭಾರತದಗಲ ಶಿವತತ್ವಕ್ಕೆ ಇದಿರಾದ ದೈವ ಮತದ್ದು. ಶಿವನೂ ಅರ್ಥಾತ್ ರಂಗನೂ ಭಾರತದಗಲ ಗುದ್ದಾಡಿದ್ದಾರೆ. ಶಂಕರ ತತ್ವ-ರಾಮಾನುಜನ ತತ್ವ ಇದಿರು ಬದಿರಾಗಿರುವುದುಂಟು. ರಂಗೇಗೌಡರು ದೊಡ್ಡರಂಗೇಗೌಡರಾಗಿ ಇವೆರಡನ್ನು ಲೀನಗೊಳಿಸಿಕೊಂಡಿದ್ದಾರೆ. ಹಾಗಾಗಿಯೇ ಅವರಿಗೆ ಸಂಘರ್ಷವಾಗಲೀ ಮತಮಾನ್ಯಗಳಾಗಲೀ ವ್ಯಾಜ್ಯವೂ ಅಲ್ಲ, ತ್ಯಾಜ್ಯವೂ ಅಲ್ಲ ಎಂದು ಅವರನ್ನು ಓದಿದಾಗ ಅನಿಸುತ್ತದೆ. ಇದು ಸೌಮ್ಯತೆಯ ಲಕ್ಷಣವೂ ಹೌದು. ವರ್ಷಧಾರೆ ಕುರಿತು ಬರೆಯುವಾಗ "ನೀಲನಭವ ಜ್ವಾಲೆ ಉರಿದು, ಕೊಂಬೆ ರೆಂಬೆ ಗೀತ ಉಲಿದು, ನೆಲದ ನಗೆಯ ಮುಗಿಲು ಸವಿದು, ಹಿಂಡು ಹಿಂಡು ಮೋಡವೊಡೆದು, ಬಂತು ಬಾನ ವರ್ಷಸುರಿದು." ಎಂದು ವರ್ಣಿಸುವಾಗ ನಭವು ಮುಗಿಲು ಸೇರುವ ಕ್ರಿಯೆಯನ್ನು ಬಹು ಸೂಕ್ಷ್ಮವಾಗಿ ಕಾವ್ಯಮಯವಾಗಿ ಬಿಚ್ಚಿಡುತ್ತಾರೆ. ಇದು ಕವಿಯ ಅನುಭವದಿಂದ ಸುರಿವ ಪರಿ ಹೌದು.

17109

ರಾಜಕೀಯ ಅದೋಗತಿ ಬಗ್ಗೆ ಬರೆಯುವಾಗ, ಕಾರ್ಮಿಕರ ಬಗ್ಗೆ ಬರೆಯುವಾಗ, ಸಾಮಾಜಿಕ ಮೌಲ್ಯಗಳ ಕ್ಷೀಣತೆ ಬಗ್ಗೆ ಬರೆಯುವಾಗ ತುಸು ಕೋಪ ತಾಳುತ್ತಾರೆ. ಸೌಮ್ಯವಾದವರಿಗೆ ಕೋಪ ಕಡಿಮೆ. ಕೋಪ ಬಂದರೆ ಕೆಂಡ ಜಾಸ್ತಿ. ಒಟ್ಟಿನಲ್ಲಿ ಗೌಡರ ಕಾವ್ಯಗಳನ್ನು ಗಮನಿಸಿದಾಗ ಒಟ್ಟಾರೆ ಕಂಡುಬರುವ ಅಂಶವೆಂದರೆ ಅವರು ಕವಿಯಾಗಿ ಸಾಧನೆ ಮಾಡಿದ್ದಾರೆ. ಅವರಲ್ಲೂ ಸಿನಿಮಾ ರಂಗದಲ್ಲಿ ಪ್ರಖರಗೊಂಡಿದ್ದಾರೆ. ಅಲ್ಲಿ ಹಿಂದೆ ಕವಿತೆಗೆ ಸಂಗೀತ ಸೇರಿಸುತ್ತಿದ್ದರು. ಈಗ ಸಿನಿಮಾದಲ್ಲಿ ಸಂಗೀತಕ್ಕೆ ಕವಿತೆ ಸೇರಿಸಬೇಕು. ಈ ತಿರುಗು ಮುರುಗು ಕ್ರಮವು ಪ್ರತಿಭೆಯನ್ನು ಹೊರಹೊಮ್ಮಿಸುವುದಿಲ್ಲ ಎಂಬ ಮಾತು ಸರಿ. ಹೀಗಾಗಿ ಗೌಡರ ಕಾವ್ಯ ಸಂಗೀತಮಯವಾಗುತ್ತದೆಯೇ ಹೊರತು ಕಾವ್ಯಮಯವಾಗುವುದಿಲ್ಲ ಎನ್ನುವುದೂ ಸರಿ. ಇವೆಲ್ಲದರ ನಡುವೆ ಅವರು ಹದಮಾಡಿಕೊಳ್ಳುತ್ತಾರೆಂಬ ಆಸೆ ನಮಗುಂಟು. ಗದ್ಯಲವೇ

ಗುಣವಾಗಿ ಬೆಳೆಯುತ್ತಿರುವ ಇಂದು ಗೌಡರಾಗಲೀ ನಾವಾಗಲೀ ಏನು ಮಾಡಲಾದೀತು! ಹೇಳಿ.

ಗೌಡರು ಕವಿತೆ ಬರೆಯುತ್ತಾ ಸಾಹಿತ್ಯ ಓದಿಕೊಳ್ಳುತ್ತಾ ಕವಿಗಳನ್ನು ಮಹಾಕವಿಗಳನ್ನು ಅಭ್ಯಾಸಮಾಡಿರುವುದು ಅಷ್ಟೇ ಸಹಜತಾನೆ! ಕುವೆಂಪು ಅವರನ್ನು ಅಭಿನವವಾಲ್ಮೀಕಿಯಾಗಿ ನೋಡಿದ್ದಾರೆ. ಅವರ ವಿಶ್ವಮಾನವ ಪ್ರಜ್ಞೆಗೆ ಸ್ಪಂದಿಸಿದ್ದಾರೆ. ಶೂದ್ರ ಸಮುದಾಯದಲ್ಲಿ ಹುಟ್ಟಿ ಅಂತರ್‌ಜಾತಿ ವಿವಾಹವುಂಡು ಪುರೋಹಿತ ಶೂದ್ರತತ್ವಗಳನ್ನು ಸಮ್ಮಿಲನಗೊಳಿಸಿದ್ದಾರೆ, ಅಥವಾ ಅವರಾಕೆ ಶೂದ್ರತ್ವವನ್ನು ಐಕ್ಯಗೊಳಿಸಿಕೊಂಡಿದ್ದಾರೆ. ಏನಾದರಿರಲಿ ರಾಮತ್ವದಲ್ಲಿ ಸರ್ವವೂ ಮಿಲನವಾಗಬೇಕೆಂಬುದೇ ಕುವೆಂಪು ತತ್ವತಾನೆ! ಇದು ಆರ್ಯ ದ್ರಾವಿಡ ಮಿಲನ. ಕಪ್ಪು ಬಿಳುಪು ಮಿಲನ, ಹಗಲು ರಾತ್ರಿ ಮಿಲನ. ಪೂರ್ವ ಪಶ್ಚಿಮ ಮಿಲನ. 'ಜಗದೇಕ ತತ್ವ'ದ ಕಡೆ ಚಲಿಸುವ ವಿಧಾನವೂ ಹೌದು. ಹೀಗಾಗಿ ಗೌಡರಿಗೆ ಪೂವ-ಪಶ್ಚಿಮಗ[illegible]ರ ಪುರಸ್ಕಾರಗಳು ದೊರೆತಿವೆ. ರಾಜ್ಯ, ರಾಷ್ಟ್ರದ ಅಂತರಾಷ್ಟ್ರೀಯ ಮಟ್ಟದ ಪುರಸ್ಕಾರಗಳು ಅ[illegible]ನ್ನು ಸೆಳೆಯುವುದು ದಿಟ.

ಗೌಡರನ್ನು 2006ರಲ್ಲಿ ಅಭಿಮಾನಿಗಳು ಗೌರವಿಸಿ ಸನ್ಮಾನಿಸಿ ಗ್ರಂಥವೊಂದನ್ನು ಸಮರ್ಪಿಸುತ್ತಿರುವುದು ಸಾಹಿತ್ಯ ಲೋಕದ ಸಂಪ್ರದಾಯದಲ್ಲೊಂದು. ಅದು ಗಾಂಭೀರ್ಯ ಹೊಂದಿರಬೇಕು ಎಂದು ಸಾಹಿತ್ಯಾಭಿಮಾನಿಗಳು ಗಮನಿಸುತ್ತಾರೆ. ಅದು ಗೌಡರಿಗೆ ದಕ್ಕಿದೆ ಎಂದೇ ಹೇಳಬೇಕು. ಸಾಹಿತ್ಯದ ತೇರನೇರಿದಾ ಗೌಡರಿಗೆ ಶುಭವಾಗಲಿ.

❑



# ಜಾನಪದ ಸೊಗಡಿನ ಕಹಳೆ

● ಗೀತಪ್ರಿಯ

"ತೇರಾನೇರಿ ಅಂಬರದಾಗೆ ನೇಸರ ನಗುತಾನೆ" ಪರಸಂಗದ ಗೆಂಡೆತಿಮ್ಮ ಚಿತ್ರದ ಹಾಡನ್ನು ಕೇಳಿ ಮೆಚ್ಚದವರೇ ಇಲ್ಲ. ಕನ್ನಡ ಚಿತ್ರಗೀತೆಗಳಲ್ಲಿ ಕನ್ನಡ ಜಾನಪದ ಸೊಗಡಿನ ಕಹಳೆಯೂದಿತು. ಮೊದಲಿನ ರೀತಿಯ ಸಾಂಪ್ರದಾಯಿಕ ಗೀತ ಚೌಕಟ್ಟನ್ನು ಬಿಟ್ಟು ಚಿತ್ರಗೀತೆಗೆ ಹೊಸ ಸೊಗಡನ್ನು ಕೊಟ್ಟವರು ಕವಿ ಡಾ॥ ದೊಡ್ಡರಂಗೇಗೌಡರು. ನನ್ನ ಅವರ ಪರಿಚಯ ಮೂವತ್ತು ವರ್ಷಗಳಿಗೂ ಮೇಲ್ಪಟ್ಟಿದ್ದು. ಕನ್ನಡ ಚಿತ್ರರಂಗದ ಖ್ಯಾತ ಸಂಗೀತ ನಿರ್ದೇಶಕರೂ, ನನ್ನ ಆತ್ಮೀಯ ಗೆಳೆಯರೂ, ನನ್ನನ್ನು ಕನ್ನಡ ಚಿತ್ರರಂಗಕ್ಕೆ ಗೀತ ಲೇಖಕನಾಗಿ ಪರಿಚಯಿಸಿದ ಶ್ರೀ ವಿಜಯಭಾಸ್ಕರ್‌ರವರು ಶ್ರೀ ದೊಡ್ಡರಂಗೇಗೌಡರನ್ನು ಮದರಾಸಿನಲ್ಲಿ ಪರಿಚಯ ಮಾಡಿದರು. ಅವರು ಹೊಸತಾಗಿ ಚಿತ್ರರಂಗಕ್ಕೆ ಪರಿಚಯವಾಗಿದ್ದರು. ಅಂದಿನ ಸೌಜನ್ಯತೆ, ಸ್ನೇಹಪರತೆಯನ್ನು ಇಂದೂ ಅವರಲ್ಲಿ ಕಾಣುತ್ತೇನೆ.

ಅನಂತರ ನಾನು ನಿರ್ದೇಶಿಸಿದ ಕೆಲವು ಚಿತ್ರಗಳಿಗೂ ಅವರಿಂದ ಹಾಡುಗಳನ್ನು ಬರೆಸಿದೆ. ನನ್ನ ನಿರ್ದೇಶನದ 'ಸುವರ್ಣ ಸೇತುವೆ' ಚಿತ್ರದ 'ಮಲೆನಾಡಿನ ಮೂಲೆನಾಗೆ ಇತ್ತೊಂದು ಸೋಮನಹಳ್ಳಿ' ಇಂದೂ ಜನಮರೆತಿಲ್ಲ, ಹೀಗೆ ಚಿತ್ರಗೀತೆಗಳನ್ನು ಬರೆಯುವ ಸಂದರ್ಭಗಳಲ್ಲೂ ಅಥವಾ ಇನ್ನೂ ಬೇರೆ ಬೇರೆ ಸಂದರ್ಭಗಳಲ್ಲಿ ಅವರೊಡನೆ ಭೇಟಿ, ಅವರ ಕಾವ್ಯ ಪ್ರತಿಭೆಯ ಅರಿವಾಗಲು ನನಗೆ ಸಹಾಯವಾಯಿತು. ಚಿತ್ರರಂಗಕ್ಕೆ ಪ್ರವೇಶಿಸುವುದಕ್ಕೆ ಮೊದಲೇ ಅವರು ಅನೇಕ ಕವಿತೆಗಳನ್ನು ಬರೆದಿದ್ದರು. ಕಾವ್ಯರಂಗದಿಂದ ಚಿತ್ರರಂಗಕ್ಕೆ ಬಂದು, ಚಿತ್ರ ಸಂಗೀತದೊಡನೆ ತಮ್ಮ ಕಾವ್ಯಾತ್ಮತೆಯನ್ನು ಅತ್ಯಂತ ಪ್ರಭಾವಶಾಲಿಯಾಗಿ ಬಳಸಿಕೊಂಡು ಹೆಚ್ಚು ಪ್ರಸಿದ್ಧಿ ಪಡೆದವರು ಗೌಡರೆ ಎನ್ನಬಹುದು. ಏಕೆಂದರೆ ಒಬ್ಬ ಕವಿಯು ಒಂದು ಕವಿತೆಯನ್ನು ಬರೆಯಬೇಕಾದರೆ ಸ್ವತಂತ್ರವಾಗಿ ಯೋಚಿಸಿ, ತನ್ನ ಕಲ್ಪನೆಯನ್ನು ಪದಪುಂಜಗಳಲ್ಲಿ ಅಳವಡಿಸಲು ಬೇರೊಬ್ಬರು ಹಾಕಿಕೊಟ್ಟ ಚೌಕಟ್ಟು ಇರುವುದಿಲ್ಲ. ಆದರೆ ಚಿತ್ರಗೀತೆಯನ್ನು ಬರೆಯಬೇಕಾದರೆ, ಕಥೆಗಾರ-ನಿರ್ದೇಶಕ ನಿರ್ಧರಿಸಿರುವ ಸನ್ನಿವೇಶ, ಪಾತ್ರ ಪ್ರೇರಣೆ, ಚಿತ್ರೀಕರಣ ರೀತಿ, ಹಾಗೂ ಸಂಗೀತ ನಿರ್ದೇಶಕರು ಮೊದಲೇ ರೂಪಿಸಿರುವ ರಾಗ ಸಂಯೋಜನೆಗೆ ತಕ್ಕಂತೆ, ಗೀತ ರಚನೆಕಾರ

ತನ್ನ ಪ್ರತಿಭೆಯನ್ನು ನಿರೂಪಿಸಬೇಕಾಗುತ್ತದೆ. ದೊಡ್ಡರಂಗೇಗೌಡರು ತಂತ್ರದಲ್ಲೂ ಪಳಗಿ ತಮ್ಮ ಕಾವ್ಯಕ್ರೀಡೆ, ಕಾವ್ಯ ಕೃಷಿಯಲ್ಲಿ ಮಿಂಚಿದ್ದಾರೆ ಎನ್ನುವುದಕ್ಕೆ ಅವರು ಬರೆದು ಜನಪ್ರಿಯವಾಗಿರುವ ಅನೇಕ ಚಿತ್ರಗೀತೆಗಳೇ ಸಾಕ್ಷಿ

ಆಲೆಮನೆ ಚಿತ್ರದ 'ನಮ್ಮೂರ ಮಂದಾರ ಹೂವೆ, ನನ್ನೊಲುಮೆ ಬಾಂದಳದ ಚೆಲುವೆ' - 'ಎಂಥಾ ಮರುಳಯ್ಯ ಇದು ಎಂಥಾ ಮರುಳೊ' ಪರಸಂಗದ ಗೆಂಡೆತಿಮ್ಮ - ನೋಟದಾಗೆ ನಗೆಯಾಮೀಟಿ. ಮೋಜಿನಾಗೆ ಎಲ್ಲೆ ಥಾಟಿ', ಬಂಗಾರದ ಜಿಂಕೆ - 'ಒಲುಮೆ ಸಿರಿಯಾ ಕಂಡು', ಅರುಣ ರಾಗದ - 'ನಾನೊಂದು ತೀರ ನೀನೊಂದು ತೀರ', ಜನುಮದ ಜೋಡಿ - 'ಕೋಲುಮಂಡೆ ಜಂಗಮ ದೇವ', ಅಶ್ವಮೇಧ ಚಿತ್ರದ - ಹೃದಯ ಸಮುದ್ರ ಕಲಕಿ ಹೊತ್ತಿದೆ ದ್ವೇಷದ ಬೆಂಕಿ ಇವು ಕೆಲವು ಉದಾಹರಣೆಗಳು ಮಾತ್ರ. ಸ್ವತಂತ್ರ ಕಾವ್ಯ ರಚನೆಯಂತೆ ಚಿತ್ರಗೀತೆಗಳಲ್ಲೂ ಇವರು ತಮ್ಮ ತನವನ್ನು ಮೆರೆದಿದ್ದಾರೆ.

ಭಾಷೆಯಲ್ಲಿ ಅಚ್ಚಕನ್ನಡದ ಸೊಗಡು, ಪದ ಪ್ರಯೋಗದಲ್ಲೂ ತಮ್ಮದೇ ಆದ ವೈವಿಧ್ಯತೆ. ಅದೇ ಅವರ ಕವನಗಳ ಗುಣ.

> 'ದುಗುಡ ಹಾಡಾಗಿ ಕವಿ ಹೃದಯದೊಳಗೆ
> ಬೆಂಕಿ ಭುಗಿಲಾಗಿ ಹರಿಯುತ್ತದೆ'

ಎಂದು ತಮ್ಮ 'ಮೌನ ಸ್ಪಂದನ'ದಲ್ಲಿ ಸ್ಪಂದಿಸಿದ ಈ ಕವಿಯ ಹೃದಯ ಶೋಷಿತರ ನಿರ್ಗತಿಕರ ಜೀವನ ಕಂಡು ಮರುಗುತ್ತದೆ, ಮಿಡಿಯುತ್ತದೆ, ಅದನ್ನೆಲ್ಲಾ ವರ್ಣಿಸುವ ಅವರ ಪದಪಂಕ್ತಿಗಳು ಕ್ರಾಂತಿಯ ಕಿಡಿಗಳಾಗಿ ಸಿಡಿದೇಳುತ್ತವೆ.

> ಶೋಷಕ ವರ್ಗದ ದಬ್ಬಾಳಿಕೆಯ ಹಾರಾಟ
> ಶೋಷಿತ ಜನರ ಆಕ್ರಂದನ ಚೀರಾಟ

ಈ ಮೇಲು-ಕೀಳು ಭಾವನೆಗಳ ನಿಲ್ಲದ ಹೋರಾಟಕ್ಕೆ ಅವರ ಲೇಖನಿಯಿಂದ

> 'ನೊಂದು ಬೆಂದ ಜನರೆ ಏಳಿ
> ಹೊಸ ಕ್ರಾಂತಿ ಗೀತೆಯ ಹೇಳಿ
> ಎಲ್ಲಿತನಕ ಸಹನೆಯ ಲಾಲಿ?
> ಶೋಷಣೆ ಸಹಿಸದೆ ಎದ್ದೇಳಿ'

ಎಂದು, ಯುಗವಾಣಿಯಲ್ಲಿ ಕ್ರಾಂತಿಕಹಳೆ ಮೊಳಗಿಸಿದ್ದಾರೆ. ಇಂತಹ ವೈಚಾರಿಕ ಕ್ರಾಂತಿ

ಕಹಳೆ ಮೊಳಗುವುದು ಎಂದು? ಎಂದು ನಮ್ಮನ್ನು ವಿಚಾರಕ್ಕೆ ಹಚ್ಚಿದ್ದಾರೆ. ಹಾಗೆಯೇ ಕವಿದ ಕತ್ತಲೆಯ ಓಡಿಸುವ

ಮೆರೆದ ಮೌಢ್ಯಗಳ ತೊಲಗಿಸುವ....
ಬೆಳ್ಳಿ ದೀಪಗಳ ಮೆರವಣಿಗೆ
ಬಂದೀತು ಈ ನಾಡಿಗೆ ಎಂದಿಗೆ?
ಎಂದು ಪ್ರಶ್ನಿಸಿದ್ದಾರೆ.

ಭೇದಭಾವದ ಬೇಲಿಯನ್ನು ತುಂಡರಿಸಲು ತುಡಿಯುತ್ತದೆ ಅವರ ಕವಿ ಹೃದಯ. ಪದ್ಯಗಳ ಪ್ರತಿಪದದಲ್ಲೂ ಪ್ರಗತಿಯ ಧೋರಣೆ ನಾಡು ನುಡಿಯ ಬಗ್ಗೆ ಸದಾಶಯ ಕಾಣುತ್ತೇವೆ.

'ಕಾಡುತ್ತಿವೆ ಅಪಶೃತಿಯ ಹಾಡುಗಳು
ನಡುಗುತ್ತಿವೆ ಲೋಲುಪ್ತತೆ ಬೀಡುಗಳು
ದುಡುಕುತ್ತಿವೆ ರಾಜಕೀಯ ನುಡಿಕಲಿತ ಗೂಳಿಗಳು
ಕೊರಗುತ್ತಿವೆ ನರಸತ್ತ ಅಗಣಿತ ಸಾಮಾನ್ಯ ಸಹೃದಯಗಳು'

ದೊಡ್ಡರಂಗೇಗೌಡರ ಇಂತಹ ನಿತ್ಯ ಸತ್ಯವನ್ನು ತೆರೆದಿಡುವ ದಿಟ್ಟ ಭಾವನೆಗಳೇ ನನ್ನನ್ನು ಸೆಳೆದಿದ್ದು.

ಇವರು ಬರೀಭಾವ ಜೀವಿಯಲ್ಲ
ವೈಚಾರಿಕ ಭಾವನಾ ಜೀವಿ.

ಭಾರತೀಯ ತರುಣರ ಬಗ್ಗೆ ಬರೆಯುತ...
ದಾರಿದ್ರ್ಯ ಬೀಡಿನಿಂದ ಅಜ್ಞಾನದ ಜಾಡಿನಿಂದ
ವಿಕ್ಷಿಪ್ತತೆ ಮಾಡಿನಿಂದ, ವಿಪರ್ಯಾಸ ಹಾಡಿನಿಂದ
ಅತೃಪ್ತಿಯ ಅಳಲಿನಿಂದ, ತಳಮಳದ ಭುಗಿಲಿನಿಂದ
ಆಕ್ರಂದನದ ಹೊಲಬಿನಿಂದ, ನಿರುದ್ಯೋಗ ಕಂಡುನೊಂದ
ಭಾರತೀಯ ತರುಣರು, ಬಂದರೋ ಬಂದರು. ಎಂದಿದ್ದಾರೆ ಹಾಗೆಯೇ

ಓ! ಕನ್ನಡ ಬಂಧು ಮಲೆತು ನಿಂತಿತೇ ನಿನ್ನಭಿಮಾನದ ಸಿಂಧು. ನಿನ್ನ ನೆಲದಲ್ಲೇ ನಿನ್ನಿರುವು ಅನಾಥ! ಚಿಂತಿಸಲಾರೆಯಾ ನೀನಿಂದು? ಎಂದು ಕನ್ನಡಿಗರನ್ನೆ ಎಚ್ಚರಿಸಿದ್ದಾರೆ.

ಬಾಳಿನ ಯಾವುದೇ ಭಾವ ರಸವನ್ನಾಗಲಿ ಭೇದವೆಣಿಸದೆ ಆಸ್ವಾದಿಸಿ ಅದನ್ನು ವಿಮರ್ಶಿಸಿ

ತಮ್ಮದೇ ರೀತಿಯಲ್ಲಿ ಪ್ರತಿಪಾದಿಸುವ ಕವಿ ಮಿತ್ರರಿವರು. ಮೌಲಿಕ ವಾಸ್ತವಿಕ ವೈಚಾರಿಕ ವಿಷಯಗಳನ್ನು ವ್ಯಕ್ತಪಡಿಸುವುದರಲ್ಲಿ ಸ್ವಂತಿಕೆಯುಳ್ಳವರು.

'ಕವಿ ಸ್ವಭಾವದಂತೆ ಕಾವ್ಯ' ಎನ್ನುವ ಮಾತುಂಟು. ಅದು ಸತ್ಯವೆನಿಸುತ್ತದೆ, ದೊಡ್ಡರಂಗೇಗೌಡರ ಪರಿಚಯುದವರಿಗೆ ಅತ್ಯಂತ ಸರಳ-ಸೌಮ್ಯ ವ್ಯಕ್ತಿ. ಆದರೆ ಮಾತಿನಲ್ಲಿ ಖಂಡಿತವಾದಿ. ಒಂದೊಂದು ವಿಷಯವನ್ನೂ ಅತ್ಯಂತ ಸಮರ್ಪಕವಾಗಿ ಅರ್ಥೈಸುವ ರೀತಿಯೆ ಅವರ ವಿಮರ್ಶಾತ್ಮಕ ದೃಷ್ಟಿಗೆ ಸಾಕ್ಷಿ.

ಸಭಿಕರನ್ನು ಹಿಡಿದಿಡುವ ಅವರ ಭಾಷಣಾ ವೈಖರಿಯೂ ವಿಶಿಷ್ಟ. ಅವರು ಭಾವಪೂರ್ಣವಾಗಿ ಹಾಡುವುದನ್ನೂ ಕೇಳಿ ಆಶ್ಚರ್ಯಪಟ್ಟು ಆನಂದಿಸಿದ್ದೇನೆ. ಸಮಾಜಕ್ಕೆ ಕನ್ನಡಿ ಹಿಡಿವ ಅವರ ಕಾವ್ಯನಿಷ್ಠೆ ಮುನ್ನಡೆಯಲಿ ಎಂದು ಕವಿಮಿತ್ರರಿಗೆ ಹಾರೈಸುತ್ತಾ, ಅವರ ಅಭಿನಂದನಾ ಗ್ರಂಥಕ್ಕೆ ನನ್ನ ಒಂದು ಲೇಖನವನ್ನು ಅರ್ಪಿಸಲು ಹೆಮ್ಮೆ ಪಡುತ್ತೇನೆ.

❑



# ಅರವತ್ತರ ತರುಣ

**• ಟಿ.ಎಸ್. ನಾಗಾಭರಣ**

ಗೌಡರು ಹುಟ್ಟಿದ ಮನೆ ಕಾವ್ಯ. ಅವರು ಕಟ್ಟಿದ ಮನೆ ಸಿನಿಮಾ ಸಾಹಿತ್ಯ. ಆಡು ಮುಟ್ಟದ ಸೊಪ್ಪಿಲ್ಲ, ಜಗದೀಶನ ಮುಡಿಯೇರದ ಹೂವಿಲ್ಲ ಎನ್ನುವಂತೆ, ಗೌಡರ ಲೇಖನಿ ಸಾಗಿರದ ಸಾಹಿತ್ಯ ಪ್ರಕಾರವಿಲ್ಲ. ಸಾಹಿತ್ಯ ಕ್ಷೇತ್ರ ಅವರನ್ನು ತನ್ನೆಲ್ಲಾ ಪ್ರಕಾರಗಳಲ್ಲೂ ದುಡಿಸಿಕೊಂಡಿದೆ. ಅವರ ದುಡಿಮೆಯಲ್ಲಿ ಗಾಢವಾದ ಸಾಮಾಜಿಕ ಕಳಕಳಿ ಮತ್ತು ತೀಕ್ಷ್ಣವಾದ ಚಿಂತನೆ ಕಾಣಿಸಿಕೊಳ್ಳುತ್ತವೆ. ಸಮಾಜದ ಅಂಕು-ಡೊಂಕುಗಳನ್ನು ನೇರಗೊಳಿಸುವ, ಕೊಂಕುಗಳನ್ನು ತಿದ್ದಿ, ಬಿರುಕು ಬಿಡದಂತೆ, ಬಿಟ್ಟಿದ್ದರೆ ಬೆಸೆಯುವಂತೆ ಮಾಡುವ ಅವರ ಪ್ರಯತ್ನ ಪ್ರಾಮಾಣಿಕ, ಆ ನಿಟ್ಟಿನಲ್ಲಿ ಅವರು ವಹಿಸುವ ಮುತುವರ್ಜಿ ಪ್ರಬಲ.

ತಮ್ಮಂತೆಯೇ ಇತರರು ಎಂದು ಬಗೆಯುವ ಗೌಡರು ಎಲ್ಲರ ಭಿನ್ನತೆಯಲ್ಲೂ ಸಮಾನತೆ ಕಾಣುವುದು ಮತ್ತು ಎಲ್ಲರಲ್ಲೂ ಸಜ್ಜನಿಕೆ, ಸಂಯಮವನ್ನು ಬಯಸುವುದು ಸಂಬಂಧ ಕಟ್ಟುವುದು ಅವರ ಸರಳ ಮನಸ್ಸನ್ನು ಪ್ರತಿಫಲಿಸುತ್ತವೆ. ಮಣ್ಣ ಮನುಜನು ನಾನು ನಿಮ್ಮೆಲ್ಲರಂಥವನು ಎಂಬ ಮುಕ್ತಕವೊಂದರ ಸಾಲು ಅವರ ಗೀತೆಯಲ್ಲಿರುವ ಮಾಧುರ್ಯದಂತೆಯೇ, ಶಿಷ್ಯ-ಸ್ನೇಹಿತ-ಗುರು ಸಂಬಂಧವನ್ನು ಪ್ರತಿಯೊಬ್ಬರೊಡನೆ ಸದಾ ಕೆಡದಂತೆ ಕಾಪಾಡಿಕೊಂಡು ಹೋಗುವುದೇ ಗೌಡರು ಸಿದ್ಧಿಸಿಕೊಂಡಿರುವ ಸರಳ ಸಜ್ಜನಿಕೆ ಎಂದು ಸಾರುತ್ತದೆ. ಬಣ್ಣವೇ ಬದುಕೆನುವವನು ಎಂಬ ಅವರ ಮತ್ತೊಂದು ಮಾತಿನ ಮೂಲಕ, ನೋವಿಲ್ಲದಿದ್ದರೆ ನಲಿವಿನ ಅನುಭವವೇ ಆಗದಿರಬಹುದು, ನೋವುಗಳ ನಡುವೆ ಸಿಕ್ಕುವ ನಲಿವೇ ನಿಜವಾದ ನಲಿವೆಂದು ಹಂಬಲದಿಂದ ತಿಳಿಸುತ್ತಾರೆ.

ಪ್ರಕೃತಿ ಪುರುಷ ಸಂಬಂಧವನ್ನು ಸೂಕ್ಷ್ಮದರ್ಶಕದಿಂದ ಕಂಡು, ಚಿಕಿತ್ಸೆಗೊಡ್ಡಿ, ಬಾಚಿ ತಬ್ಬಿದ ಭಾವನೆಗಳನ್ನೇ ಇತರರಲ್ಲೂ ಹದವಾಗಿ ಪಡಿ ಮೂಡಿಸುವುದು, ಭಾವನೆಗಳು ಒಡಮೂಡದಿದ್ದಲ್ಲಿ ಬಡಿದೆಬ್ಬಿಸುವುದು ಗೌಡರ ಭಾವುಕತೆಯ ಪ್ರಭಾವ, ಸಹಜ ಸ್ವಭಾವ. ಇದ್ದುದನ್ನು ಇರಿಸಿ,

ಇರಬೇಕಿಲ್ಲದುದನ್ನು ಸರಿಸಿ, ಇರುವುದನ್ನು ಸ್ಮರಿಸಿ, ಇರುವುದರಲ್ಲೇ ಸಾವರಿಸಿ, ಒಲವು ಮೂಡಿಸುವ ಒಡಲ ಭಾವುಕತೆಯೇ ಅವರ ಚಿತ್ರಕ ಶಕ್ತಿ. ಈ ಚಿತ್ರಕ ಶಕ್ತಿ, ಒಂದೆಡೆ ಪದ್ಯ ರೂಪದಲ್ಲಿ ಓದುಗನನ್ನು ಪ್ರಭಾವಿಸಿ, ಸಾಹಿತ್ಯ ಸಾಗರಕ್ಕೇ ವಿಶಿಷ್ಟ ಕೊಡುಗೆಯಾಗಿದ್ದರೆ, ಮತ್ತೊಂದೆಡೆ ದೃಶ್ಯ ಮಾಧ್ಯಮಕ್ಕೆ ಥಟ್ಟನೆ ಪ್ರಸಾದಿಸುವ, ಕ್ಶಾರುಣ್ಯದ ಕೊಡುಗೈಯಾಗಿರುತ್ತದೆ.

ಗೌಡರಲ್ಲಿ ನನಗಿಷ್ಟವಾಗುವ, ನಾನು ಬಯಸುವ ಅನೇಕ ಅಂಶಗಳಲ್ಲಿ, ಅವರ ಗ್ರಾಮೀಣ ಪರಿಸರದ ನೇರ ಪರಿಚಯ, ಅನುಭವ, ಅವರ ರಚನೆಗಳಲ್ಲಿನ ಜಾನಪದೀಯ ಸೊಗಡು, ಸಾಮಾಜಿಕ ಚಿಂತನೆ, ಪರಿಸರ ಪ್ರೇಮ ಮತ್ತು ಪ್ರಕೃತಿಯ ಸಾಕಾರವಾದ ಮಹಿಳೆಗೆ ದೊರಕಬೇಕಿರುವ ಅರ್ಹ ಗೌರವಗಳು ಮುಖ್ಯವಾದವುಗಳು. ನನ್ನಲ್ಲೂ ಇರುವ ಈ ಅಂಶಗಳನ್ನು ನನ್ನ ಮಾಧ್ಯಮದಲ್ಲಿ ನಾನು ಗುರುತಿಸಿಕೊಂಡಿರುತ್ತೇನೆ. ನನ್ನ ಮತ್ತು ಗೌಡರ ನಡುವೆ ಇರುವ ಈ ಸಾಮ್ಯವೇ ಬಹುಶಃ ನಮ್ಮಿಬ್ಬರ ನಡುವೆ ಸಾಮರಸ್ಯ ಮತ್ತು ಆತ್ಮೀಯತೆಯನ್ನು ಬೆಸೆದಿರುತ್ತದೆ.

ಚಿತ್ರಿಸಿ ಅಣಕಿಸುವುದು, ಆಡಿ ತೋರಿಸುವುದು, ಬರೆದು ದೂಷಿಸುವುದು ಇವೆಲ್ಲಾ ಸಮಕಾಲೀನ ಸಮಾಜವನ್ನು ನಾವು ದುರ್ಬೀನು ಹಿಡಿದು ನೋಡುವ ರೀತಿ. ಗೌಡರ ಅಂತಹ ಸಾಮಾಜಿಕ ಚಿಂತನೆ ಇವರು ನಮ್ಮವರು ಎಂಬ ಕವನದಲ್ಲಿ ಘನೀಭವಿಸಿದೆ. ಅಕ್ಷರಕ್ಷರದಲ್ಲೂ ಹಾವರಕ್ಕಿಳಿದವರು, ವಿಶ್ವಾಸ ಮೈತ್ರಿಗಳ ಹೆಸರಿನಲ್ಲೇ ಬೆಣ್ಣೆ ಮಾತಾಡುವವರು, ಸಿಕ್ಕ ಸಿಕ್ಕ ಕುರಿಗಳ ಸುಣ್ಣಗೆ ಸವರುವವರು. ಇವರು ಖಂಡಿತಾ ನಮ್ಮವರು, ಭಂಡರು, ಜಗಮೊಂಡರು! ದೇಶೋದ್ಧಾರ ಕಿರೀಟ ಹೊತ್ತ ತಾಯಿಗ್ಗಂಡರು. ಮೆತ್ತಗಿದ್ದರೆ, ಮೊಣಕೈಯಿಂದಲೇ ಅಗೆಯುವ, ಬಗಲಲ್ಲೇ ಕತ್ತರಿ ಹಾಕುವ, ಬೆನ್ನಲ್ಲಿ ಚೂರಿ ಇರಿಯುವ, ನಂಬಿಸಿ ದ್ರೋಹ ಎಸಗುವ ಹಿತಶತ್ರುಗಳಿಂದ ತುಂಬಿರುವ ಸಮಾಜದಲ್ಲಿಯೇ ನಾವು ಬದುಕಬೇಕು. ಹಾಗೆ ಬದುಕಿ, ಬಂದೊದಗುವ ಬವಣೆಯಿಂದ ಪಾರಾಗುವ ದಾರಿಯನ್ನು ನಾವು ಅರಿತಿರಬೇಕೆಂದು ಸಮಾಜಮುಖಿ ಸೌಜನ್ಯ ಕವಿ, ಗುಡುಗಿದ್ದಾರೆ. ಬಣ್ಣವೇ ಬಣ್ಣದಕೆನ್ನುವಷ್ಟು ಸಂಯಮಶೀಲ, ಸೌಜನ್ಯ ಮೂರ್ತಿಯೂ ಕೂಡ, ಕಿಡಿಗೆಂಡ ಕನಲಿ ಕಾಡ್ಗಿಚ್ಚಾಗುವುದು ಅನಿವಾರ್ಯವಾಗಬಹುದು ಎಂದು ಸೂಚ್ಯವಾಗಿ ತಿಳಿಸುತ್ತಾರೆ.

ಸಮಾಜ ಎಂದಕೂಡಲೇ ಮನೆಯ ಗೋಡೆಗಳಾಚೆ ಯೋಚಿಸುವುದು ಸಹಜ. ಆದರೆ ಮನೆಯೊಳಗೂ ಒಂದು ಸಮಾಜವಿದೆ. ಅದೂ ಅಂದವಾಗಿರಬೇಕು. ಅದು ಅಂದವಾಗಿರಬೇಕಾದರೆ, ಹೆಣ್ಣು ಗಂಡುಗಳ ನಡುವೆ ಸಮಾನತೆಗೂ ಮೀರಿದ ಮಹಿಳಾ ಸಬಲೀಕರಣ ಮಾತ್ರ ಸಾಲದು. ಮಹಿಳೆಗೆ ಹೆಚ್ಚಿನ ಗೌರವ ನೀಡುವುದು ಅವಶ್ಯಕ ಎಂಬ ಅವರ ಆಶಯ ಎಂಥಲ್ಲಿ ಕೊಟ್ಟೆ ಹಡೆದವ್ವ ಲೇಖನದಲ್ಲಿ ಮೂಡಿಬಂದಿರುತ್ತದೆ. ಭಾರತೀಯ ನಾರಿಯರ ಬದುಕು ಸೂತ್ರ ಕೀಳದೆ ಗೋತ ಹೊಡೆದ ಗಾಳಿ ಪಟ... ಹರುಷ ಕಾರಂಜಿಯಂತೆ ಇರಬೇಕಾದ

ಗಂಡನ ಮನೆ ಕ್ಷಣಕ್ಷಣ ತನ್ನನ್ನು ಜೀವಂತ ನರಳಿಸುವ ಸೆರೆಮನೆ.... ಈ ನೆಲದಲ್ಲಿ ಹೆಣ್ಣು ಪಡುತ್ತಿರುವ ಬವಣೆ ಭಾರತೀಯ ಹೆಣ್ಣು ಅಂತರಂಗದಲ್ಲೇ ಮೌನವಾಗಿ ಕೊತ ಕೊತ ಕುದಿಯುತ್ತಿರುವ ಕುಲುಮೆ. ಕವಿಯ ಒಡಲ ಆಳದಲ್ಲಿ ಲಾಗ ಹಾಕುವ, ದೊಂಬರಾಟ ಆಡುವ, ಹಸಿಯಾಗಿ, ಬಿಸಿಯಾಗಿ, ಭಾವನೆಗಳು ಬೆಂದು ನುಡಿಗೊಂಡು, ಭಾರತೀಯ ಮಹಿಳೆಯ ಬದುಕನ್ನು ಬಯಲು ಮಾಡಿ, ಹೆಣ್ಣನ್ನು ಶೋಷಿಸುವ ಸಮಾಜ ಸಮಾಜವೇ ಅಲ್ಲ, ಅಂತಹ ಸಮಾಜ ಬದಲಾಗಬೇಕೆಂದು ಕಿಡಿಗಾರುತ್ತಾರೆ ಸಂಯಮ ಕವಿ. ಮಹಿಳೆ ನೋಯಬಾರದು, ನಲುಗಬಾರದು, ಬದಲಿಗೆ ನೋವಿನಲ್ಲಿ ನಲಿವನ್ನು ನೇಯುವಳಾಗಬೇಕು, ನೋವನ್ನು ನವಿರಾಗಿ ನೀಗುವಳಾಗಬೇಕು, ಮತ್ತು, ಹಾಗಾಗಬೇಕಾದರೆ ಮಹಿಳೆಗೆ ಒಳ, ಹೊರ ಸಮಾಜವೆರಡರಲ್ಲೂ ಗೌರವ ದೊರೆಯಬೇಕೆಂದು ಆಶಿಸುತ್ತಾರೆ.

ತಮ್ಮ ಗಟ್ಟಿ ಅನುಭವಗಳ ಅಮೃತವನ್ನು ಎಲ್ಲರಿಗೂ ಉಣಬಡಿಸುವ ಗೌಡರು, ಯಾವ ಇಸಮ್‌ಗೂ ಒಳಗಾಗದೆ, ಅಂದರೆ, ಸಿನಿಮಾ ಸಾಹಿತಿ, ಜನಪದ ಸಾಹಿತಿ, ಗ್ರಾಮ್ಯ ಸಾಹಿತಿ, ಶೃಂಗಾರ ಕವಿ, ಹೀಗೆ ಯಾವುದೇ ಯಾವುದೇ ಹಣೆಪಟ್ಟಿಗೆ ಅಂಟಿಕೊಳ್ಳದೆ, ಬದುಕಿನ ಒಳಪದರ ಹೊಕ್ಕು, ತಮ್ಮ ಸ್ವೋಪಜ್ಞತೆಯನ್ನು ಮಿದುಳು ಮಿದುಳಿಗೂ ಮುಟ್ಟಿಸುತ್ತಾರೆ, ಬದುಕಿಗೆ ಹತ್ತಿರವಾಗುತ್ತಾರೆ.

ಗೌಡರು ಕಟ್ಟಿಕೊಡುವ ನುಡಿಕಟ್ಟುಗಳು ಸಾಮಾನ್ಯ ಕಣ್ಣಿಗೆ ಕಾಣದಿರುವ, ಸಾಧಾರಣವಾಗಿ ಮೂಡದ ಇಮೇಜರಿಯಾಗಿರುತ್ತದೆ. ಗೌಡರು ಚಿತ್ರ ಸಾಹಿತ್ಯ ರಚನೆಗೆ ತೊಡಗಿದಂದಿನಿಂದ ಚಿತ್ರ ಗೀತೆಗೆ ವಿಶಿಷ್ಟ ಧ್ವನಿ, ಲಯ, ನುಡಿಜಾಲಗಳು ಲೇಪಗೊಂಡು ಅವು ಬುಗ್ಗೆ ಬುಗ್ಗೆಯಾಗಿ ಉಕ್ಕುತ್ತಲೇ ಇವೆ, ಕಾರಂಜಿಯಾಗಿ ಚಿಮ್ಮುತ್ತಲೇ ಇವೆ.

ಹೊಸತನ್ನು ಹುಡುಕುವುದು ಗೌಡರ ಸ್ವಭಾವ. ಅವರು ತಮ್ಮ ಸತತ ಪರಿಶ್ರಮದಿಂದ ನಡೆಸುವ ಪ್ರಯೋಗಗಳ ಜೊತೆಜೊತೆಗೇ ಚಿತ್ರ ಸಾಹಿತ್ಯ ಸಿದ್ಧಿ ಪಡೆದಿರುತ್ತಾರೆ. ವಿವಿಧ ರಂಗಗಳ ಆಗರವಾದ ಚಿತ್ರರಂಗ ಬಹಳ ಪ್ರಭಾವೀ ಮಾಧ್ಯಮವಾಗಿರುವುದರಿಂದ, ಇಂದಿನದು ನಾಳೆಗೆ ಹಳತಾಗಿಬಿಡುವುದು ಸಹಜ. ತನ್ನತನ, ಗಟ್ಟಿತನ ಉಳಿಸಿಕೊಂಡು, ಹೊಸತನವನ್ನೇ, ತಾಜಾತನವನ್ನೇ, ಪ್ರಯೋಗಶೀಲತೆಯನ್ನೇ ಸ್ವರೂಪವಾಗಿಸಿಕೊಂಡು ಬೆಳೆಯುತ್ತಿರುವ ಚಿತ್ರ ಸಾಹಿತ್ಯ, ವಿಸ್ತಾರ ಸಾಹಿತ್ಯ ಸಮುದ್ರದಲ್ಲಿ ವಿಲೀನಗೊಂಡು ತನ್ನಿಂತಾನೇ ಲಂಗರು ಹಾಕಿರುವುದು ಗೌಡರ ವಿಪುಲ ಸಾಹಿತ್ಯ ಸಾಧನೆಯ ಪ್ರತಿಫಲವಾಗಿರುತ್ತದೆ, ಅನುಕರಣೀಯವಾಗಿರುತ್ತದೆ ಹಾಗೂ ವಿಶ್ವವಿದ್ಯಾಲಯದಲ್ಲಿ ಸಂಶೋಧನೆಗೆ ತಕ್ಕುದಾಗಿರುತ್ತದೆ.

ಗೌಡರು ಸೃಜನ ಸಂಪನ್ನ, ಗೀತಗಾರುಡಿಗ, ಸಮಾಜಮುಖಿ. ಪ್ರತಿಯೊಬ್ಬರೊಡನೆಯೂ ಅವರು ನಡೆದುಕೊಳ್ಳುವ ರೀತಿ ವಿಶಿಷ್ಟ. ಅವರು ಶಿಷ್ಯರಾಗಿ ಕಲಿಯುತ್ತಾರೆ, ಸ್ನೇಹಿತರಾಗಿ

ಜೊತೆಗಿರುತ್ತಾರೆ, ಗುರುವಾಗಿ ದಾರಿದೋರುತ್ತಾರೆ. ಇದರಿಂದ ಅವರು ಸುತ್ತಲ ಪರಿಸರಕ್ಕೇ ಹತ್ತಿರವಾಗಿಬಿಡುತ್ತಾರೆ.

ಅರವತ್ತರಲ್ಲಿ ಅರ್ಧ ಜಾರಿದ ತರುಣರಂತೆ ಚಟುವಟಿಗರಾಗಿರುವ ದೊಡ್ಡರಂಗೇಗೌಡರು ನೂತನ ಕೃತಿಗಳನ್ನು ರಚಿಸಲಿ, ಅವರ ವಿನೂತನ ಪ್ರಯೋಗಗಳಿಗೆ ಯಶಸ್ಸು ದೊರೆಯಲಿ, ಅವರ ಹುಡುಕಾಟ ಮುಂದುವರೆದು, ಕನ್ನಡ ಭಾಷೆಗೆ, ಕನ್ನಡಿಗರಿಗೆ ಹೊಸ ತಿರುವು ಸಿಕ್ಕಲಿ, ಮತ್ತು, ಗೌಡರ ಇಚ್ಛೆ ರೂಪದ ಬೇರಿನಿಂದ ಬೆಳೆದ, ಸತತ ಗಟ್ಟಿ ಪ್ರಯೋಗ, ಪ್ರಯತ್ನದ ಕಾಂಡಗಳಿಂದ ಕವಲೊಡೆದ ರೆಂಬೆ ಕೊಂಬೆಗಳಲ್ಲಿ ಹೆಚ್ಚಿನ ಹೂಗಂಪು, ಹಣ್ರುಚಿ ಲಭಿಸಲಿ.

❑



# ಮೋಡಿಯ ಮಾಡಿದೋರ ಪರಸಂಗವು

• ಎ. ಮನೋಹರ್

ತೇರಾ ಏರಿ ಅಂಬರದಾಗೆ ನೇಸರ ನಗುತಾನೇ....।
ಮರಗಿಡ ತೂಗ್ಯಾವೇ। ಹಕ್ಕೀ ಹಾಡ್ಯಾವೇ।

ಕೇಳ್ತಾ ಕೇಳ್ತಾ 1978ಕ್ಕೆ ಹೋಗೋಣ - ನಿಮ್ಮ ಹಾದಿಗೆ ಇನ್ನೊಂದು ಹಾಡು ಎದುರಾಗುತ್ತದೆ. '' ನೋಟದಾಗೆ ನಗೆಯಾ ಮೀಟಿ। ಮೋಜಿನಾಗೆ ಎಲ್ಲೆದಾಟೀ। ಮೋಡೀಯ ಮಾಡಿದೋಳ ಪರಸಂಗ ಐತೇ। ಪರಸಂಗಾ ಐತೆ॥''

ಇಡೀ ಕರ್ನಾಟಕವನ್ನು ನಲಿಸಿದ, ರಂಜಿಸಿದ ಇಂಪಾದ ಹಾಡುಗಳಿವು. ಇದರ ವಿಶೇಷತೆ - ಸಾಹಿತ್ಯ ಮತ್ತು ಶೈಲಿ. ಮೊದಲಬಾರಿಗೆ ಪೂರ್ಣ ಪ್ರಮಾಣದಲ್ಲಿ ಗ್ರಾಮೀಣ ಸೊಗಡಿನಲ್ಲಿ ಶ್ರೀ ದೊಡ್ಡರಂಗೇಗೌಡರು 'ಪರಸಂಗದ ಗೆಂಡೆತಿಮ್ಮ'ಕ್ಕಾಗಿ ಪೂರ್ತಿ ಹಳ್ಳಿ ಭಾಷೆಯಲ್ಲೇ ಬರೆದು ಜನಮನವನ್ನು ಮೋಡಿಗೊಳಿಸಿದರು. ಅದಕ್ಕೂ ಹಿಂದೆ 1975ರಲ್ಲೇ ಮಾಗಿಯ ಕನಸು, ನಂತರ ಪಡುವಾರಳ್ಳಿ ಪಾಂಡವರು ಚಿತ್ರದ ''ಏಸು ವರ್ಷ ಆಯ್ತೇ ನಿಂಗೆ ನನ್ನ ಬಂಗಾರೀ'' ಸ್ವಲ್ಪ ಮಟ್ಟಿಗೆ ಹಳ್ಳಿ ಸೊಗಡಿನ ಹಾಡಾದರೂ ಅದರ ಹಿನ್ನೆಲೆ ಸಂಗೀತ, ರಾಗ, ಧಾಟಿ ಸಿನಿಮಾ ಶಿಷ್ಟತೆ ಮೀರಿರಲಿಲ್ಲ. ಆದರೆ 'ಪರಸಂಗದ ಗೆಂಡೆತಿಮ್ಮ' ಹಾಡು ಕೇಳಿದರೆ ಧಾಟಿಗಾಗಿ ಗೌಡರು ಬರೆದರೋ ಅಥವಾ ಅವರು ಬರೆದುದಕ್ಕೆ ರಾಜನ್-ನಾಗೇಂದ್ರ ರಾಗ ಹಾಕಿದರೊ ಎಂಬಷ್ಟು ಅನ್ಯೋನ್ಯ ಮಿಳಿತ ಅವುಗಳಲ್ಲಿವೆ. ಅಲ್ಲಿವರೆಗೂ ನಾವೆಲ್ಲ ಒಂದು ಸಿನಿಮಾ ಸಂಪ್ರದಾಯದಂತೆ ಹಾಡು ಹೀಗೇ ಇರಬೇಕು, ಸಾಹಿತ್ಯ ಹೀಗೆ ಇರಬೇಕು ಎಂಬ ಚೌಕಟ್ಟೊಳಗೆ ಇರುವ ಹಾಡುಗಳನ್ನೇ ಕೇಳಿ ಈ ವಿಭಿನ್ನ ಹಾಡು ಕೇಳಿದಾಗ ಗ್ರಾಮೀಣ ಭಾಷೆಯ ಸೊಗಸು, ಸೊಗಡು, ಸವಿ ಎಲ್ಲರ ಕಿವಿಗಾಯ್ತು. ಈ ಶೈಲಿ ಮುಂದೆ ಸಿನಿಮಾ ಸಂಗೀತದಲ್ಲೂ ಗೀತೆರಚನೆಯಲ್ಲೂ ಒಂದು ತಿರುವನ್ನೇ ತೋರಿಸಿತು. 1978ರಿಂದ ಇಲ್ಲಿವರೆಗೆ ಈ 28 ವರ್ಷದ ಹಾದಿಯಲ್ಲಿ 'ಗೆಂಡೆತಿಮ್ಮ' ಸ್ಫೂರ್ತಿಯಿಂದ ಜಾನಪದ ಧಾಟಿಯಲ್ಲಿ ಬಂದ ಹಾಡುಗಳು ಅದೆಷ್ಟೋ! 1997ರ ಜನುಮದ

ಜೋಡಿಯಲ್ಲಿ ಇದೇ ಮೇಷ್ಟ್ರು, ಅಂದ್ರೆ ನಮ್ಮ ಗೌಡರು "ಕೋಲುಮಂಡೆ ಜಂಗಮ ದೇವರು ಗುರುವೇ" ಅಂತ ಕಂಸಾಳೆ ಶೈಲಿಯಲ್ಲಿ ಹಾಡುಬರೆದು ಮತ್ತೊಮ್ಮೆ ಇಡೀ ಕರ್ನಾಟಕವನ್ನು ಕುಣಿಸಿ ಕುಪ್ಪಳಿಸುವಂತೆ ಮಾಡಿದರು. 'ಈ ಕೋಲುಮಂಡೆ' ಹಾಡಿನ ವಿಶೇಷತೆಯನ್ನು ಮುಂದಕ್ಕೆ ತಿಳಿಸುತ್ತೇನೆ. ಇಂಥಾ ಸಾವಿರಾರು ಗರಿಗಳ ಕಿರೀಟಧಾರಿ ನನ್ನ ಮೆಚ್ಚಿನ ಮೇಷ್ಟ್ರು ಈ ದೊ.ರಂ.ಗೌ. ವೃತ್ತಿಯಲ್ಲಿ ಮೇಷ್ಟ್ರು. ಇವರಿಂದ ಪಾಠಕಲಿತ ಮಕ್ಕಳು ಪುಣ್ಯವಂತರು. ಗ್ರಾಮೀಣ ಸಾಹಿತ್ಯದಲ್ಲಿ ಸಾಕಷ್ಟು ಪಾಂಡಿತ್ಯವಿದ್ದುದರಿಂದ ಮತ್ತು ಆ ಶೈಲಿಯನ್ನು ಚಲನಚಿತ್ರಕ್ಕೆ ತರಲೇಬೇಕೆಂಬ ಕಾಳಜಿಯಿಂದಲೇ ಗೌಡರು ಆರಂಭದ ದಿನಗಳಲ್ಲೇ ಅಂಥಾ ಧಾಟಿಯಲ್ಲಿ ಗೀತೆ ಬರೆಯಲು ಶುರುಮಾಡಿದರು. ಮಾಗಿಯ ಕನಸು ಆದಮೇಲೆ 'ಗಂಡತಿಮ್ಮ' ಗೌಡರಿಗೆ ಮೂರೋ, ನಾಲ್ಕನೇದೋ ಚಿತ್ರ. ಸಾಧಾರಣವಾಗಿ ಹೊಸ ಶೈಲಿಗೆ ನಿರ್ದೇಶಕರು ಒಪ್ಪಿಗೆ ಸೂಚಿಸುವುದಿಲ್ಲ. ಅಂಥಾದ್ದರಲ್ಲಿ ಹೊಸಬರಾಗಿ ತನ್ನದೇ ಶೈಲಿಯನ್ನು, ತನ್ನ ಛಾಪನ್ನು ಮೂಡಿಸಬೇಕೆಂಬ ಮಹತ್ವಾಕಾಂಕ್ಷೆ, ಜಾನಪದ ಕಲೆಯ ಪ್ರೀತಿ, ಹಾಗಾಗಿ ದೃಢವಾಗಿ ಅದೇ ಶೈಲಿಯಲ್ಲಿ ಬರೆದುದಲ್ಲದೆ ಯಶಸ್ವಿಯಾಗಿ ಚಿತ್ರಗೀತೆಗಳ ವೇಷವನ್ನೇ ಬದಲಿಸಿದರು. "ಮೋಡಿಯ ಮಾಡಿದೋಳ ಪರಸಂಗ ಐತೆ" ಮತ್ತು "ತೇರಾ ಏರಿ ಅಂಬರದಾಗೆ ನೇಸರ ನಗುತಾನೇ" ಹಾಡುಗಳು ನಮ್ಮನ್ನು ರಂಜಿಸಿ ಕುಣಿಸಿದವು. ದೊ.ರಂ.ಗೌ. ಹೀಗೆ ಎಲ್ಲರಿಗೂ ಪರಿಚಿತರಾದರು.

ಈಗ ನಾನು ಅವರಿಗೆ ಪರಿಚಯವಾಗಿ ಸ್ನೇಹಿತನಾದ ಬಗ್ಗೆ ಹೇಳಬೇಕು. ಅದು 'ಏಳುಸುತ್ತಿನ ಕೋಟೆ' ಚಿತ್ರದ ಮೂಲಕ. ಅದಕ್ಕೆ ನನ್ನ ಆತ್ಮೀಯರಾಗಿದ್ದ ಗೌರಿಶಂಕರ್‌ರವರ ನಿರ್ದೇಶನ, ಛಾಯಾಗ್ರಹಣವಿತ್ತು, ಸಾ.ರಾ. ಗೋವಿಂದು ಅವರು ನಿರ್ಮಾಪಕ. 1986ರಲ್ಲಿ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ದೊ.ರಂ.ಗೌ., ಡಾ॥ ಸಿದ್ದಲಿಂಗಯ್ಯ, ರುದ್ರಮೂರ್ತಿ ಶಾಸ್ತ್ರಿ ಇವರ ಜೊತೆ ಇವರೆಲ್ಲರಿಗಿಂತಲೂ ಕಿರಿಯ, ಅನನುಭವಿಯಾದ ನಾನು - ಆ ಚಿತ್ರಕ್ಕೆ ಹಾಡುಗಳನ್ನು ಬರೆದೆವು. ನನಗಾಗ ಇವರನ್ನೆಲ್ಲ ಕಂಡಾಗ ಧನ್ಯತೆ. ನಾನು ಆಗತಾನೇ ಅನುಭವ, ಆರಂಭ ಚಿತ್ರಗಳ ಮೂಲಕ ಪದಾರ್ಪಣೆ ಮಾಡಿದ್ದೆ. ದೊ.ರಂ.ಗೌ. ಹಾಡುಗಳನ್ನು ಕೇಳಿ ಆನಂದಿಸಿದವನು ನಾನು. ಆದ್ದರಿಂದ ಅವರ ಮುಂದೆ, ಅವರ ಜೊತೆ ನಾನೂ ಹಾಡು ಬರೆಯುವುದು ಅಂದರೇನು? ಆದರೆ ದೊ.ರಂ.ಗೌ, ಅಂದೇ ಆತ್ಮೀಯರಾಗಿ ಬಿಟ್ಟರು. ಆಮೇಲೆ ಸುಲಭವಾಗಿ ತಿಳಿಯಿತು. ದೊ.ರಂ.ಗೌ ಒಬ್ಬ ನಿಗರ್ವಿ, ಸರಳ, ಸಜ್ಜನ, ಮೃದು ಸ್ವಭಾವದವರು ಎಂದು. ಮುಂದಿನ ದಿನಗಳಲ್ಲಿ ಶಂಕರ್‌ಗಣೇಶ್, ರಾಜನ್ ನಾಗೇಂದ್ರ, ಎಲ್. ವೈದ್ಯನಾಥನ್ ಸಂಗೀತವಿರುವ ಚಿತ್ರಗಳಿಗೆ ಅವರ ಹೆಸರ ಜೊತೆ ಸಾಹಿತಿಯಾಗಿ ನನ್ನ ಹೆಸರೂ ಸೇರ್ಪಡೆಯಾಯ್ತು. ಅಷ್ಟೇ ಅಲ್ಲ, ಹೋಟೆಲ್ ಕೊಠಡಿಗಳಲ್ಲಿ ಸಂಗೀತ ನಿರ್ದೇಶಕರ ಮುಂದೆ ನಾವು ಜೊತೆಯಲ್ಲಿ ಕುಳಿತೇ ಹಾಡು ಬರೆಯುತ್ತಿದ್ದೆವು - ಅನೇಕಸಲ, ನನಗೆ ಬೇಕಾದ ಪದವನ್ನು ಅವರಿಂದ ಕೇಳಿ ಪಡೆಯುತ್ತಿದ್ದೆ. ಒಮ್ಮೆ ಇಳಯರಾಜ ಹೇಳಿದ್ದರು "ನಿಮ್ಮ ಕನ್ನಡ ಸಿನಿಮಾಗಳಲ್ಲಿ ಮಾತ್ರ ಹೀಗೆ ಸಾಹಿತಿಗಳೆಲ್ಲಾ ಒಂದೇ ಕಡೆ ಕೂತು ಹಾಡು ಬರೀತೀರಿ, ನಮ್ಮಲ್ಲಿ ಹೀಗೆ ಯಾರೂ ಸೇರೋದೇ ಇಲ್ಲ - ಒಂಟೊಂಟಿಯಾಗಿ ಬೇರೆಬೇರೆ ದಿನ ಬಂದು ಬರೆದುಕೊಟ್ಟು

ಹೋಗ್ತಾರೆ' ಎಂದು. ಹೌದು, ನಾವು ಎಲ್ಲಾ ಸಾಹಿತಿಗಳು ಒಟ್ಟಾಗಿ ಕುಳಿತು ಬರೆಯಬಲ್ಲೆವು - ಒಬ್ಬರ ಸಾಹಿತ್ಯ ಇನ್ನೊಬ್ಬರು ಓದಿ ಪರಸ್ಪರ ಚರ್ಚೆ, ಪ್ರಶಂಸೆ, ವಿಮರ್ಶೆ ಮಾಡಿಕೊಳ್ಳಬಲ್ಲೆವು - ಇಂಥಾ ಸ್ನೇಹಮಯ ವಾತಾವರಣ ಬೇರೆ ಭಾಷೆ ಚಿತ್ರರಂಗದಲ್ಲಿ ಇಲ್ಲವೇ ಇಲ್ಲ. ಬರಬರುತ್ತಾ ದೊ.ರಂ.ಗೌ. ನನಗೆ ಆತ್ಮೀಯರಾಗಿ ಬಿಟ್ಟರು. ಮುಂದೆ ನಾನೇ ಸಂಗೀತ ನಿರ್ದೇಶಕನಾದಾಗ ದೊ.ರಂ.ಗೌ. ಅವರನ್ನು ಮರೆಯದೆ ಆಗಾಗ ಅವರಿಂದ ಹಾಡುಬರೆಸುವ ಭಾಗ್ಯ ನನಗಾಯಿತು. ಒಮ್ಮೆ ಇಳಯರಾಜಾ ಬೆಂಗಳೂರಿಗೆ ಬಂದಾಗ ಶ್ರವಣಬೆಳಗೊಳ ಮತ್ತು ಕೆಲವು ಕ್ಷೇತ್ರಗಳನ್ನು ನೋಡಲು ದೊ.ರಂ.ಗೌ. ಅವರನ್ನು ಕರೆದೊಯ್ದಿದ್ದರು. 'ಶಿವಸೈನ್ಯ' ಎಂಬ ಚಿತ್ರಕ್ಕೆ ನಾನು ದೊ.ರಂ.ಗೌ. ಜತೆ ಮದರಾಸಿಗೆ ಹೋಗಿ ಇಳಯರಾಜಾರ ಸಮ್ಮುಖದಲ್ಲಿ ಹಾಡು ಬರೆದು ಬಂದೆವು. ಇಳಯರಾಜಾ ಅವರಿಗೂ ದೊಡ್ಡರಂಗೇಗೌಡರೆಂದರೆ ಗೌರವ, ಪ್ರೀತಿ. ಯುವಪೀಳಿಗೆಯ ಅನೇಕ ಹೊಸ ಸಂಗೀತ ನಿರ್ದೇಶಕರ ಸಂಯೋಜನೆಗೂ ದೊಡ್ಡ ರಂಗೇಗೌಡರು ಹಾಡುಗಳನ್ನು ಬರೆದಿದ್ದಾರೆ. ಕಿರಿಯರ ಮುಂದೆ ಎಂದೂ ಮುಜುಗರ ಪಟ್ಟವರಲ್ಲ. ಯಾರನ್ನೂ ನೋಯಿಸುವವರಲ್ಲ.

ನನ್ನ ರಾಗ ಸಂಯೋಜನೆ ಇರುವ 'ರಾಯರ ಮಗ' 'ಮಾವನ ಮಗಳು,' 'ಸೂರ್ಯ ವಂಶ', 'ಜನುಮದ ಜೋಡಿ' ಮೊದಲಾದ ಚಿತ್ರಗಳಿಗೆ ಅರ್ಥಪೂರ್ಣವಾಗಿ ಗೀತೆಗಳನ್ನು ಬರೆದಿದ್ದಾರೆ. ಜನುಮದ ಜೋಡಿಯ 'ಕೋಲುಮಂಡೆ ಜಂಗಮದೇವ' ಹಾಡಂತೂ ಕರ್ನಾಟಕದ ಜನಮನ ಕುಣಿಸಿರುವುದು ಒಂದು ಐತಿಹಾಸಿಕ ದಾಖಲೆ. ಈ ಹಾಡಿನ ವಿಶೇಷವೆಂದರೆ ಇದೊಂದು ಒಗಟುಗಳನ್ನೊಳಗೊಂಡ ಪ್ರೇಮಗೀತೆ. ಕಂಸಾಳೆ ಶೈಲಿಯಲ್ಲಿದೆ. ಆದರೆ ಸಾಮಾನ್ಯವಾಗಿ ಕಂಸಾಳೆ ಪದ, ಮಲೆ ಮಾದೇಶ್ವರನ ಭಕ್ತಿಗೀತೆಯಾಗಿರುತ್ತದೆ. ಭಕ್ತಿಗೀತೆಯನ್ನು ಅದೇ ಶೈಲಿಯಲ್ಲಿ ಪ್ರೇಮಗೀತೆಯನ್ನಾಗಿ ಮಾಡಿ ಸನ್ನಿವೇಶಕ್ಕೆ ತಕ್ಕ ಹಾಗೆ ಪ್ರೇಮಿ ತನ್ನ ಸಂದೇಶವನ್ನು ಪ್ರೇಯಸಿಗೆ ಹೇಗೆ ಪರೋಕ್ಷವಾಗಿ ತಲುಪಿಸುತ್ತಾನೆ ಅನ್ನುವುದು ದೊ.ರಂ.ಗೌ. ಅವರ ಜಾಣ್ಮೆಯನ್ನು ತೋರಿಸುತ್ತದೆ.

ಮೂರು ದಶಕಗಳಿಂದ ಅನೇಕ ಜನಪ್ರಿಯ ಗೀತೆಗಳನ್ನು ಚಿತ್ರರಸಿಕರಿಗೆ ನೀಡುವುದು ಸಾಮಾನ್ಯ ವಿಷಯವಲ್ಲ - ಅವೆಲ್ಲವೂ ಕೇವಲ ಸಂಗೀತ ನಿರ್ದೇಶಕರ ರಾಗಸಂಯೋಜನೆಯಿಂದ ಮಾತ್ರವಲ್ಲ, ಸಾಹಿತ್ಯದ ಶಕ್ತಿಯಿಂದಲೂ ಜನರ ಹೃದಯವನ್ನು ಮುಟ್ಟಿ ನೆಲೆನಿಂತವು. ತನ್ನ ಕಾವ್ಯಾತ್ಮಕ ಗುಣವನ್ನು ಉಳಿಸಿಕೊಂಡು ಹಾಗೇ ಓದಿದರೆ ಅದೊಂದು ಕವನದ ರೀತಿಯೂ ತೋರುವ ಕೃತಿಗಳೇ ಎಲ್ಲ. ಹೀಗಾಗಿ ಸಿನಿಮಾದ ಒಳಗೂ ಹೊರಗೂ ಗೌಡರು ಕವಿಯಾಗಿಯೇ ಉಳಿದಿದ್ದಾರೆ. ಅವರ ದಾಖಲೆಯ ಭಂಡಾರದಲ್ಲಿ ಅನೇಕ ಮುತ್ತು ರತ್ನಗಳಿವೆ - ಅದಕ್ಕೆ ಇನ್ನೂ ಅನೇಕ ಕೃತಿ ರತ್ನಗಳ ಸೇರ್ಪಡೆಯಾಗಲಿ, ನಿಸರ್ಗದೇವಿಯು ಗೌಡರಿಗೆ ಆಯುರಾರೋಗ್ಯ ನೆಮ್ಮದಿ ಕರುಣಿಸಲಿ.

❑



# ಒಂದೇ ದೋಣಿಯ ಪಯಣಿಗರು

● ಎಂ.ಎಸ್. ವ್ಯಾಸರಾವ್

ದೊಡ್ಡರಂಗೇಗೌಡರು ಸಂಭಾವಿತ ಕವಿ. ಎಪ್ಪತ್ತರ ದಶಕದಿಂದಲೂ ನಾನು ಅವರನ್ನು ಬಲ್ಲೆ. ಕವಿಯಾಗಿ, ಅಧ್ಯಾಪಕರಾಗಿ ಸಹೃದಯ ವ್ಯಕ್ತಿಯಾಗಿ ಬಹಳ ಸಮೀಪದಿಂದ ದೊಡ್ಡರಂಗೇಗೌಡರನ್ನು ನೋಡಿದ್ದೀನಿ. ಜಾನಪದ ಕಾವ್ಯಗಳನ್ನು, ಪಂಪ ಕುಮಾರವ್ಯಾಸರನ್ನೂ, ಹಾಗೂ ನವೋದಯ ಕಾವ್ಯಗಳನ್ನು ಓದಿಕೊಂಡಿರುವ ದೊಡ್ಡರಂಗೇಗೌಡರು ತಮ್ಮ ಕಾವ್ಯಗಳಲ್ಲಿ ಅವುಗಳನ್ನು ಮಿಳಿತಗೊಳಿಸಿ ಹದಗೊಳಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ದೊಡ್ಡರಂಗೇಗೌಡರು ಗ್ರಾಮೀಣ ಪರಿಸರದಿಂದ ಬಂದಿರುವುದರಿಂದ ಅವರ ಕಾವ್ಯದಲ್ಲಿ ಹೆಚ್ಚು ಗ್ರಾಮೀಣ ಅನುಭವಗಳು, ಪದಗಳು, ಪದಾರ್ಥಗಳು ಅಡಕವಾಗಿರುವುದನ್ನು ನಾವು ಕಾಣಬಹುದು. ಭಾರತೀಯ ಸಂಸ್ಕೃತಿಯನ್ನು, ಕನ್ನಡ ಪರಂಪರೆಯನ್ನು ದೊಡ್ಡರಂಗೇಗೌಡರು ಅತ್ಯಂತ ಪ್ರೀತಿಯಿಂದ ತಮ್ಮ ಕಾವ್ಯ, ಉಪನ್ಯಾಸಗಳ ಮೂಲಕ ಅಂತರರಾಷ್ಟ್ರೀಯ ಪ್ರವಾಸದ ಸಂದರ್ಭದಲ್ಲಿ ಪ್ರಚಾರ ಮಾಡಿರುವುದು ಹೆಮ್ಮೆಪಡಬೇಕಾದ ವಿಷಯವೆಂದು ಭಾವಿಸಿದ್ದೀನಿ.

ದೊಡ್ಡರಂಗೇಗೌಡರ ಒಲವಿರುವುದು ಕಾವ್ಯದ ಕಡೆ. ಗದ್ಯ ಬಹಳ ಕಡಿಮೆ ಎಂದೇ ಹೇಳಬೇಕು. ಕಾವ್ಯವನ್ನೇ, ಅವರು ತಮ್ಮ ಮಾಧ್ಯಮವನ್ನಾಗಿ ಮಾಡಿಕೊಂಡಿರುವುದರಿಂದ ಅವರ ಎಲ್ಲ ಚಿಂತನೆಗಳೂ ಕಾವ್ಯದ ಮುಖಾಂತರವೇ ಅಭಿವ್ಯಕ್ತಗೊಂಡಿವೆ. ಅವರ ಮೊಟ್ಟಮೊದಲ ಕವನ ಸಂಕಲನ 1969ರಲ್ಲಿ ಪ್ರಕಟವಾದ "ಜಗಲಿ ಹತ್ತಿ ಇಳಿದು" ವಿನಿಂದಲೂ ನಾನು ಗಮನಿಸುತ್ತಾ ಬಂದಿದ್ದೀನಿ. ಏಳು ಜೀಳಿನ ಹಾದಿಯಲ್ಲೂ ಸಹ ಒಂದು ರೀತಿಯ ತಟಸ್ಥ ಮನೋಭಾವದ ಋಷಿಯ ನಿರ್ಲಿಪ್ತಭಾವ ಇದೆ. ಅಬ್ಬರವಿಲ್ಲ, ಗದ್ದಲವಿರದ ಶಾಂತವಾಗಿ ಹರಿಯುವ ನದಿಯ ಪ್ರಶಾಂತತೆಯನ್ನು ಹೊಂದಿದೆ. ಮೂಲತಃ ದೊಡ್ಡರಂಗೇಗೌಡರ ಸ್ವಭಾವವೂ ಇದೇ ಆಗಿರುವುದರಿಂದ ಸಹಜವಾಗಿ ಅವರ ಕಾವ್ಯದಲ್ಲೂ ಈ ಗುಣ ಬಂದಿದೆ. ಆದರೆ

ದೊಡ್ಡರಂಗೇಗೌಡರ ಸ್ವಭಾವ ಹೊಸದನ್ನು ಅನ್ವೇಷಿಸುವುದರ ಕಡೆ ಇದೆ. ಅದೆಂದರೆ ಸಿದ್ಧವಾಗಿರುವ ಪರಂಪರೆ (?)ಯನ್ನು ಧಿಕ್ಕರಿಸದಿದ್ದರೂ ಅದನ್ನು ಮೀರಿ ಹೋಗುವ ಪ್ರಯತ್ನದಲ್ಲಿ ಇವರ ಮನಸ್ಸು ಕೆಲಸಮಾಡುತ್ತದೆ. ನವ್ಯಕಾವ್ಯ ಪ್ರಖರವಾಗಿದ್ದ ಕಾಲದಲ್ಲಿ ದೊಡ್ಡರಂಗೇಗೌಡರು, ಕಂಬಾರ ಮತ್ತು ಸಿಂಹ ಕೊಳ್ಳೆಗಾಲ ಇವರೊಂದಿಗೆ ಕೂಡಿ 'ಅಕಾವ್ಯ' ಎನ್ನುವ ತ್ರೈಮಾಸಿಕ ಪತ್ರಿಕೆಯನ್ನು ತಂದದ್ದು. ಅದು ಹೆಚ್ಚು ಕಾಲ ಉಳಿಯದಿದ್ದರೂ ಹೊಸ ಧ್ವನಿಗಳನ್ನು ಹುಟ್ಟು ಹಾಕಿದ್ದಂತೂ ನಿಜ. ಇಂತಹ ಹೊಸ ಹೊಸ ಚಿಂತನ ಕೆಲಸದಲ್ಲಿ ದೊಡ್ಡರಂಗೇಗೌಡ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಗಮನಿಸಬಹುದು. ಇಷ್ಟಾದರೂ ದೊಡ್ಡರಂಗೇಗೌಡರು ಪ್ರತಿಭಟನಾ ಪ್ರವೃತ್ತಿಯ ಕವಿಯಲ್ಲ. ಪರಂಪರೆಯಲ್ಲೇ ಅರಳಿದ ಕವಿ. ಹೀಗಾಗಿ ಮೇಲೆ ಹೇಳಿರುವಂತೆ ಗಂಭೀರವಾಗಿ ಹರಿಯುವ ನದಿ. ವೈಚಾರಿಕತೆ, ಸಾಮಾಜಿಕ ಪ್ರಜ್ಞೆ. ಗ್ರಾಮೀಣ ಸೊಗಡು- ಹೀಗೆ ಹಲವಾರು ಆಶಯಗಳನ್ನು ದೊಡ್ಡರಂಗೇಗೌಡರು ತಮ್ಮ ಕಾವ್ಯಗಳಲ್ಲಿ ಕಾವು ಬತ್ತದಂತೆ ಉಳಿಸಿಕೊಂಡಿರುವುದರಿಂದಲೇ ಎಲ್ಲರಿಗೂ ಪ್ರಿಯರಾಗಿದ್ದಾರೆ.

ನನಗೆ ಆಶ್ಚರ್ಯವಾಗಿದ್ದೆಂದರೆ ಇವರು 'ಮಣ್ಣಿನ ಮಾತುಗಳು' ಎನ್ನುವ ಮುಕ್ತಕಗಳನ್ನು ಬರೆದಿರುವುದು. ತಕ್ಷಣ ನನಗೆ ಈತ ಎಲ್ಲಿ ಕಾಲಜ್ಞಾನನಂತೆ ಆಗಿಬಿಡುತ್ತಾರೊ ಎನ್ನುವ ಭಯವಿತ್ತು! ಆದರೆ ಹಾಗಾಗಲಿಲ್ಲ. ಯಾಕೆಂದರೆ ಸಂಸಾರವನ್ನು ತೊರೆಯುವ ಸ್ವಭಾವ ದೊಡ್ಡರಂಗೇಗೌಡರದಲ್ಲ! ಹೆಂಡತಿ ರಾಜೇಶ್ವರಿ ಈತನ ಎಲ್ಲ ಸಾಧನೆಯ ಹಿಂದೆ ಇದ್ದಾರೆ. ಅಷ್ಟು ಪ್ರೀತಿಯ ದಂಪತಿಗಳು. ದೊಡ್ಡರಂಗೇಗೌಡರು ತಮ್ಮ ಬದುಕಿನ ಉದ್ದಕ್ಕೂ ಕಂಡುಂಡ ಹಾಗೂ ಅನುಭವದ ಮೂಸೆಯಲ್ಲಿ ಪಾಕಗೊಂಡ ಚಿಂತನೆಗಳನ್ನು ಚೌಪದಿಯ ರೂಪದಲ್ಲಿ ಕಡೆದು ನಿಲ್ಲಿಸಿರುವ 'ಮಣ್ಣಿನ ಮಾತು'ಗಳಲ್ಲಿ ಅವರ ಮನೋವಿಚಾರಗಳನ್ನು ಗುರುತಿಸಬಹುದಾಗಿದೆ. ಚೌಪದಿ ಎಂದರೆ ಅದು ಚೌಪದಿಯೇ ಅಲ್ಲ, ಇವು ಮುಕ್ತವಾಗಿರುವ ಮುಕ್ತಕಗಳು.

ಇಂದು ಇಲ್ಲಿದ್ದವರು ನಾಳೆ ಇನ್ನೆಲ್ಲೋ!
ಅಂದು ಹೊಂದಿದ್ದವರು ಇಂದು ಏನಿಲ್ಲೋ!
ನೊಂದು ಬೆಂದವರಿಗೆ ಗೆಲ್ಲುವ ಛಲವೆಲ್ಲೋ?
ಸಂದಷ್ಟೇ ನಮ್ಮದು - ಮಣ್ಣಿನ ಮಗ

ಬದುಕಿನ ವಿವಿಧ ಮುಖಗಳನ್ನು ಸೂಕ್ಷ್ಮವಾಗಿ ಹೇಳುತ್ತಾ ಮನುಷ್ಯನ ವಶಕ್ಕೆ ದಕ್ಕುವುದಷ್ಟೇ ಅವನದು ಎನ್ನುವ ತತ್ವವಿಚಾರವನ್ನು ತಿಳಿಸುವ ದೊಡ್ಡರಂಗೇಗೌಡರ ''ಹೃದಯದ ಮಾತು'' ಮುಕ್ತಕದಲ್ಲಿ ಕಲೆಯನ್ನು ಕುರಿತು ಹೀಗೆ ಹೇಳುತ್ತಾರೆ.

ಬರೆದ ಬರಹಗಳಲ್ಲಿ ಕಾವ್ಯವಾಗುವುದಿಲ್ಲ
ಕೊರೆದ ಕಲ್ಲುಗಳೆಲ್ಲ ಶಿಲ್ಪವಾಗುವುದಿಲ್ಲ

ಮೊರೆದ ಶಬ್ದಗಳೆಲ್ಲ ಗೀತವಾಗುವುದಿಲ್ಲ
ಹೃದಯದ ಮಾತೆಲ್ಲ ಸೃಜನಶೀಲ ಮಣ್ಣಿನ ಮಗ

ಹೃದಯದ ಮಾತು ಸೃಜನಶೀಲವಾಗಿರುತ್ತದೆ. ಉಳಿದೆಲ್ಲವು ಕಲಾತ್ಮಕತೆಯ ಪ್ರತಿಭೆಗೆ ಸಂಬಂಧಪಟ್ಟದ್ದು-ಎಂದು ದೊಡ್ಡರಂಗೇಗೌಡರು ಹೇಳುವುದರಲ್ಲಿ ಅರ್ಥವಿದೆ. ಇಂತಹ ಅನೇಕ ವಿಷಯಗಳನ್ನು ಹೊಂದಿದ **'ಮಣ್ಣಿನ ಮಾತುಗಳು'** ಒಂದು ದೃಷ್ಟಿಯಿಂದ ದೊಡ್ಡರಂಗೇಗೌಡರು ಅವರ ವ್ಯಕ್ತಿತ್ವಕ್ಕೆ ಕನ್ನಡಿ ಎನ್ನಬಹುದು. ನನಗನ್ನಿಸುತ್ತದೆ ಇವರಿಗೆ ಕಾವ್ಯ ಎನ್ನುವುದು ಭರವಸೆಯ ವ್ಯವಸಾಯಕ್ಕಿಂತ ಅಸಲು ಕಸುಬು ಎಂದು. ಅಷ್ಟು ಸಲೀಸಾಗಿ ಬರೆದು ಬಿಡಬಲ್ಲ ವ್ಯಕ್ತಿ. ನಿರಂತರವಾದ ಕಾವ್ಯ ಕೃಷಿಯಲ್ಲಿ ತೊಡಗಿಸಿಕೊಂಡ ಕೆಲವೇ ಕೆಲವರಲ್ಲಿ ದೊಡ್ಡರಂಗೇಗೌಡರು ಒಬ್ಬರಾಗಿದ್ದಾರೆ. ಜೀವನ ಪ್ರೀತಿಯುಳ್ಳ ಮನುಷ್ಯ.

ಕವಿತೆಗಳನ್ನು ಭಾಷೆಯ ಸಂಧಾನದ ಜೊತೆ ನಿರ್ಮಿಸುವುದು ದೊಡ್ಡರಂಗೇಗೌಡರಿಗೆ ಅನಿವಾರ್ಯವೆನಿಸುತ್ತದೇನೊ. ಬರೆದದ್ದೆಲ್ಲವೂ ಆತನ ನಡಿಗೆಯ ಜೊತೆಯಲ್ಲೇ ಪಯಣಿಸುತ್ತಾ ಅವನಲ್ಲಿ ವಿಮರ್ಶಕತನವನ್ನು ಬಿತ್ತುತ್ತಾ ಹೋಗುವುದು ಕವಿಯ ಮುಂದಿನ ಹೆಜ್ಜೆಗೆ ದೃಢತೆಯನ್ನು ನೀಡಲು. ದೊಡ್ಡರಂಗೇಗೌಡರು ತಮ್ಮ ಕಾವ್ಯಕರ್ಮದುದ್ದಕ್ಕೂ ಅಳವಡಿಸಿಕೊಂಡೇ ನಡೆದಿದ್ದಾರೆ. ಹೀಗಿರುವುದರಿಂದಲೇ ದೊಡ್ಡರಂಗೇಗೌಡರ ಸ್ನೇಹ ಬಳಗ ತುಂಬಾ ದೊಡ್ಡದಾಗಿದೆ. ವಿನಯವಂತ, ಸ್ನೇಹಪರ ಎಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಭಾವಗೀತೆಗಳು ಇವರ ಕಾವ್ಯಕೃಷಿಯಲ್ಲಿ ನವ್ಯಕಾವ್ಯದ ಜೊತೆಜೊತೆಗೆ ಬಂದಂಥವು. ಗೀತ ಗಾರುಡಿಯಿಂದ ಗೀತ ಗಂಗೋತ್ರಿಯ ತನಕ ಸುಮಾರು ಎಂಟು ಸಂಕಲನಗಳನ್ನು ತಂದಿದ್ದಾರೆ. ಇವರ ಗೀತೆಗಳನ್ನು ಹಾಡದ ಗಾಯಕರೇ ಇಲ್ಲ! ಲಯಗಾರಿಕೆಯಲ್ಲಿ ಮೋಡಿ ಹಾಕಿ ಬಿಡುವ ದೊಡ್ಡರಂಗೇಗೌಡರ **'ಮಾವು ಬೇವು'** ಇವತ್ತಿಗೂ ಆಕರ್ಷಕವಾದ ಕೆಸೆಟ್ ಎನ್ನಬಹುದು. ಇವು ಅವರ ವ್ಯಕ್ತಿತ್ವದ ಒಂದು ಮುಖ. ಇನ್ನೊಂದು ಅವರ ಚಲನಚಿತ್ರಗೀತೆಗಳು. ದೊಡ್ಡರಂಗೇಗೌಡ ಹಾಗೂ ನಾನೂ ಇಬ್ಬರೂ ಚಿತ್ರ ಪ್ರಪಂಚಕ್ಕೆ ಹೆಚ್ಚೂ ಕಡಿಮೆ ಒಂದೇ ಕಾಲದಲ್ಲಿ ಬಂದವರು. ನಾನು ಶುಭಮಂಗಳದ ಮೂಲಕ ರವಿಯವರಿಂದ ಪರಿಚಯಿಸಲ್ಪಟ್ಟೆ. ದೊಡ್ಡರಂಗೇಗೌಡರು ಅನಂತರ ಬಂದ **'ಮಾಗಿಕನಸು'** ಮೂಲಕ ಬಂದರು. ಅದರಲ್ಲಿ ದೊಡ್ಡರಂಗೇಗೌಡರ ಜೊತೆ ನಾನು ಒಂದು ಹಾಡು ಬರೆದೆ. ಚಿತ್ರರಂಗದಿಂದ ಹೊರಗೂ ನಾವಿಬ್ಬರೂ ಗೆಳೆಯರಾಗಿದ್ದೆವು. ಚಿತ್ರರಂಗದಲ್ಲೂ ನಾವಿಬ್ಬರೂ ಒಟ್ಟಾಗಿಯೆ ಹಲವಾರು ಚಿತ್ರಗಳಿಗೆ ಗೀತೆಗಳನ್ನು ಬರೆದೆವು. ನನಗಿಂತ ಹೆಚ್ಚು ಗೀತೆಗಳನ್ನು ದೊಡ್ಡರಂಗೇಗೌಡರು ಬರೆದಿದ್ದಾರೆ. ನಾವು ಬರೆಯುತ್ತಿದ್ದ ಕಾಲದಲ್ಲಿ ರೆಕಾರ್ಡಿಂಗ್ ಸ್ಟುಡಿಯೋಗಳು ಬೆಂಗಳೂರಿನಲ್ಲಿ ಇರಲಿಲ್ಲ(ಎಪ್ಪತ್ತರ ದಶಕದಲ್ಲಿ). ಹಾಡು ಬರೆಯುವುದು ರೆಕಾರ್ಡಿಂಗ್ ಆಗುವುದು-ಎಲ್ಲವೂ ಮದರಾಸಿನಲ್ಲೆ. ಸಾಮಾನ್ಯವಾಗಿ ನಾವು ಶನಿವಾರ ರಾತ್ರಿಯ ಬಸ್ಸು ಹತ್ತುತ್ತಿದ್ದೆವು. ನಮಗಾಗಿ ಎರಡು ಟಿಕೆಟ್‌ಗಳನ್ನು ಪ್ರೊಡ್ಯೂಸರ್ ಪ್ರೊಡೆಕ್ಷನ್ ಮ್ಯಾನೇಜರ್ ಕೈಲಿ ಕೊಟ್ಟು ನಮಗೆ ಕೊಡಲು

ಹೇಳುತ್ತಿದ್ದರು. ರಾತ್ರಿ ರೈಲಿನ ಪ್ರಯಾಣ ಕಡಿಮೆ ಎಂದೇ ಹೇಳಬೇಕು. ನಮಗೆ ರೈಲಾದರೆ ನಿದ್ದೆ ಮಾಡಬಹುದು. ಬೆಳಗಿನ ಹೊತ್ತಿಗೆ ಲವಲವಿಕೆ ತುಂಬಿರುತ್ತದೆ ಎನ್ನುವ ಆಸೆ. ನಮಗೂ ರೈಲಿಗೂ ಅದೇನು ವೈರತ್ವವೋ! ಎರಡು ಮೂರು ವರ್ಷಗಳಲ್ಲಿ ಒಂದೆರಡು ಸಲ ಮಾತ್ರ ರೈಲಿನ ಟಿಕೇಟ್ ಸಿಕ್ಕಿದ್ದು! ಉಳಿದೆಲ್ಲವೂ ಬಸ್ ಟಿಕೆಟ್‌ಗಳೆ! ಬರ್ರ್ ಎನ್ನುವ ಬಸ್ಸಿನ ವೇಗದ ಸದ್ದಿಗೆ ನಿದ್ರೆ ಎಲ್ಲಿ ಬರಬೇಕು? ಕಣ್ಣು ಮುಚ್ಚಿದರೆ ಸಾಕು ಇಂಜಿನ್ ಸದ್ದಿನ ಆರ್ಭಟ! ಗಕ್ಕನೆ ಕಣ್ಣು ಬಿಡುವುದು. ಹೀಗೆ ಕಣ್ಣು ತೆರೆದು ಮುಚ್ಚುವ ನಡುವೆ ಗಂಟೆ ಎಷ್ಟಾಯಿತೆಂದು ನೋಡುವುದು. ಆಕಳಿಸುವುದು-ಹೀಗೆ ಸಾಗುತ್ತಿತ್ತು. ದಾರಿಯುದ್ದಕ್ಕೂ ಬೆಳಗ್ಗೆ ತಲುಪಿದ ಕೂಡಲೆ ಆಟೋ ಹಿಡಿಯುವುದು. ಇಬ್ಬರಿಗೂ ತಮಿಳುಬಾರದು. ಹೋಟೆಲ್ ಹೆಸರು ಮಾತ್ರ ಗೊತ್ತಿರುತ್ತಿತ್ತು. ಹೋಟೆಲ್ ಹೆಸರು ಹೇಳುವುದು ಆಟೋದಲ್ಲಿ ಕೂರುವುದು, ಅಲ್ಲಿಂದ ಆಟೋ ಹೊರಡುವುದು ಮಾತ್ರ ಗೊತ್ತಿತ್ತು. ಎಲ್ಲೆಲ್ಲಿ ಹೋಗುತ್ತಿದ್ದ ಯಾವ ಯಾವ ಬೀದಿಗಳನ್ನು ಸುತ್ತುತ್ತಿದ್ದ ಯಾವುದೂ ನಮಗೆ ಗೊತ್ತಾಗುತ್ತಿರಲಿಲ್ಲ, ನಾವು ಹೇಳಿದ ಹೋಟೆಲ್ ಬಂದ ಕೂಡಲೆ ಆಟೋ ಡ್ರೈವರ್ ಇಳಿಯಲು ಹೇಳುತ್ತಿದ್ದ. ನಾವು ಇಳಿದಾಗ ಎಪ್ಪತ್ತರಿಂದ ನೂರರ ತನಕ ಕೇಳುತ್ತಿದ್ದ. ನಮಗೆ ಪ್ರೊಡಕ್ಷನ್ ಮ್ಯಾನೇಜರ್ ಆಟೋಗೆ ಅಂತ ಇಪ್ಪತ್ತೈದು ರೂಪಾಯಿ ಮಾತ್ರ ಕೊಟ್ಟಿರುತ್ತಿದ್ದ! ಉಳಿದದ್ದು ನಾವಿಬ್ಬರೇ ಭರಿಸುತ್ತಿದ್ದೆವು. ಆಮೇಲೆ ಗೊತ್ತಾಯಿತು ಪ್ರೊಡೆಕ್ಷನ್ ಮ್ಯಾನೇಜರ್ ಕೈಲಿ ನಮಗೆ ಕೊಡಲೆಂದು ಪ್ರೊಡ್ಯೂಸರ್ ಇನ್ನೂರು ರೂಪಾಯಿ ಕೊಟ್ಟಿದ್ದರೆಂದು! ಇದು ನಮ್ಮ ಮೊದಲ ಅನುಭವ. ಅನಂತರದ ಪ್ರಯಾಣದಲ್ಲಿ ದಾರಿಯುದ್ದಕ್ಕೂ ಅಂತ್ಯಾಕ್ಷರಿ ಹೇಳುತ್ತಾ ಸಾಗುತ್ತಿದ್ದೆವು. ಪದಗಳಿಗೆ ಪ್ರಾಸ ಜೋಡಿಸುತ್ತಿದ್ದೆವು. ಇಂಗ್ಲೀಷ್ ಬೋರ್ಡುಗಳು ಕಂಡಾಗ ಅವನ್ನು ಕನ್ನಡಕ್ಕೆ ತರ್ಜುಮೆ ಮಾಡುತ್ತಿದ್ದೆವು. ನಿದ್ದೆಗಾಗಿ ಇಷ್ಟೆಲ್ಲಾ ಹೋರಾಟ! ಆದರೂ ನಿದ್ರೆ ನಮ್ಮ ಬಳಿ ಸುಳಿಯುತ್ತಿರಲಿಲ್ಲ. ಹೋಟೆಲನ್ನು ಸೇರಿ ಕೊಂಚ ನಿದ್ದೆ ಮಾಡೋಣವೆಂದರೆ ಎಂಟುಗಂಟೆ ಆಗುವುದೇ ತಡ ಯಾರಾದರೂ ಬಂದು ಬಾಗಿಲು ಬಡಿಯುತ್ತಿದ್ದರು. ಅಲ್ಲಿಗೆ ನಮ್ಮ ನಿದ್ದೆ ಬಂದ್! ಒಂಭತ್ತು ಗಂಟೆಗೆ ಸಂಗೀತ ನಿರ್ದೇಶಕರು ಬರುತ್ತಿದ್ದರು. ಚಿತ್ರ ನಿರ್ದೇಶಕರು ಬಂದ ಕೂಡಲೆ ರಾಗ ಸಂಯೋಜನೆ ಶುರುವಾಗುತ್ತಿತ್ತು. ನಮ್ಮ ಅದೃಷ್ಟವೆಂದರೆ ಅದೇ ದಿನ ನಾವು ಹಾಡು ಬರೆವುದನ್ನು ಮುಗಿಸಿ, ಅದೇ ರಾತ್ರಿ ಬೆಂಗಳೂರಿನ ಬಸ್ ಹತ್ತುತ್ತಿದ್ದೆವು! ಮತ್ತೆ ಬಸ್ ಟಿಕೇಟಿಗಾಗಿ ಪರದಾಟ. ಕಡೇ ಸೀಟಿನಲ್ಲಿ ಎಷ್ಟೋ ಸಲ ಕೂತು ಬಸ್ ಟಾಪಿಗೆ ತಲೆ ಬಡಿಸಿಕೊಂಡು ಬಂದಿದ್ದೇವೆ. ಬೆಂಗಳೂರಿಗೆ ಬಂದೆವೆಂದರೆ ಅದೇನೋ ಸಂತೋಷ! ಯಾಕೆಂದರೆ ಯಾರ ಹಂಗೂ ಇಲ್ಲದೆ ನಿದ್ದೆ ಮಾಡಬಹುದಲ್ಲ ಎಂದು!

ಹೆಚ್ಚೂ ಕಡಿಮೆ ತಿಂಗಳಿಗೆ ಎರಡು ಮೂರು ಸಲ ನಾವು ಮದರಾಸಿಗೆ ತೆರಳುತ್ತಿದ್ದೆವು. ಹೋಗಿ ಬರುವಾಗಲೆಲ್ಲಾ ಇದೇ ಅನುಭವ. ಒಂದು ಸಲ ನಾವು ಒಟ್ಟಿಗೆ ಒಂದೇ ರೂಮಿನಲ್ಲಿದ್ದೆವು. ಪಕ್ಕದ ರೂಮಿನಲ್ಲಿ ನಾವು ಬರೆಯುತ್ತಿದ್ದ ಚಿತ್ರಕ್ಕೆ ಸಂಬಂಧಪಟ್ಟ ಜನರಿದ್ದರು. ಅವರು ಸಂಗೀತ ವಾದ್ಯ ನುಡಿಸುವರಷ್ಟೆ ಎಂದು ನೆನಪು. ನಮಗಿನ್ನೂ ಲೆಕ್ಕಾಚಾರ ಗೊತ್ತಿರದ ದಿನಗಳು. ನಮ್ಮ

ರೂಮು ಎಂದರೆ ನಾವಿಬ್ಬರು ಎಂದರ್ಥ. ನಾವಿಬ್ಬರೂ ನಮ್ಮ ರೂಮಿನಲ್ಲಿ ತಿಂದು ಉಂಡಿದ್ದಕ್ಕೆ ಜವಾಬ್ದಾರರು. ರೂಮಿನ ಕೀಲಿ ಕೈ ತೋರಿಸಿದರೆ ಅದನ್ನು ಬಿಲ್ಲಿನಲ್ಲಿ ಬರೆದು ಕೌಂಟರಿಗೆ ಕಳುಹಿಸುತ್ತಿದ್ದುದು ವಾಡಿಕೆ. ನಾವು ಎಷ್ಟು ತಿಂದರೆ ಹೆಚ್ಚೋ? ಎಷ್ಟು ಸಲ ಕಾಫಿ ಕುಡಿದರೆ ನಿರ್ಮಾಪಕರಿಗೆ ದುಬಾರಿ ಎನಿಸುತ್ತದೋ ಎಂದು ಹೆದರಿ ಆದಷ್ಟೂ ಕಡಿಮೆ ಖರ್ಚಿನಲ್ಲಿ ಮುಗಿಸಲು ಪ್ರಯತ್ನಿಸುತ್ತಿದ್ದೆವು. ಪಕ್ಕದ ಕೋಣೆಯಲ್ಲಿದ್ದವರು ವಾದ್ಯ ವೃಂದದ ಕೆಲವರು ನಮ್ಮ ಕೋಣೆಗೆ ಬೆಳಗ್ಗೆ ಬಂದರು. ಅವರೆಲ್ಲ ಚಿತ್ರರಂಗದಲ್ಲಿ ನಮಗಿಂತ ಹಳಬರೆಂದು ಹೇಳಬಹುದು. ಪರಸ್ಪರ ಪರಿಚಯವಾಯಿತು. ನಂತರ ರೂಮ್‌ಬಾಯ್ ಬಂದ. ಟಿಫನ್ ಏನು ಬೇಕು ಎಂದು ಕೇಳಿದ. ನಾವು ಅನುಮಾನಿಸುತ್ತಾ ಇದ್ದೆವು. ಅಷ್ಟರಲ್ಲಿ ಅಲ್ಲಿದ್ದ ಪಕ್ಕದ ರೂಮಿನ ಜನ (ನಾಲ್ವರು) ತಮಗೆ ಏನೇನು ಬೇಕೆಂದು ಆರ್ಡರ್ ಮಾಡಿದರು. ಪೊಂಗಲ್, ಮಸಾಲೆ, ಕೇಸರಿ ಬಾತ್, ಇಡ್ಲಿವಡೆ ಇತ್ಯಾದಿ (ಪ್ರತಿಯೊಬ್ಬರಿಗೂ ಇಷ್ಟೂ). ಅದನ್ನು ಕೇಳಿಯೇ ನಾವು ದಂಗುಬಡಿದಿದ್ದೆವು. ಇನ್ನು ನಾವೇನು ಹೇಳಬೇಕು? ಬರಿ ಎರಡು ಇಡ್ಲಿ ಒಂದು ವಡೆಗೆ ನಮ್ಮನ್ನು ಸೀಮಿತಗೊಳಿಸಿಕೊಂಡೆವು. ಸ್ವಲ್ಪ ಸಮಯದ ನಂತರ ತಿಂಡಿ ಪ್ಲೇಟುಗಳ ಕರಗ ಹೊತ್ತು ಬಂದ ಮಾಣಿ ಟೀಪಾಯಿ, ಮಂಚ ಕುರ್ಚಿಗಳ ಮೇಲೆ ಇಡುತ್ತಿದ್ದ ಹಾಗೆ ಆ ನಾಲ್ಕು ಜನ ರಪ್ಪನೆ ಎರಗಿ ಗಪಗಪ ತಿನ್ನತೊಡಗಿದರು. ನಾನು ದೊಡ್ಡರಂಗೇಗೌಡರು ಇಬ್ಬರೂ ನಮ್ಮ ಇಡ್ಲಿ ವಡೆ ತಟ್ಟೆ ಹಿಡಿದು ಕೂತೆವು. ಬಾಯಿಗೆ ಹಾಕಿಕೊಂಡರೂ ಗಂಟಲಿಗೆ ಇಳಿಯಲಿಲ್ಲ. ಏಕೆಂದರೆ ಮುಂದೆ ಮಾಣಿ ತರುವ ಬಿಲ್ಲೆ ತಲೆಯಲ್ಲಿ ಆವರಿಸಿತ್ತು! ತಿಂಡಿಯಾದ ಮೇಲೆ ಅವರ್‍ಯಾರು ಕಾಫಿ ಕುಡಿಯಲಿಲ್ಲ. ನಮ್ಮಿಬ್ಬರನ್ನು ಬಿಟ್ಟು! ಎಲ್ಲರೂ ಬೋರನ್‌ವೀಟಾನೇ ಕುಡಿದು ತೇಗಿದರು! ಬಿಲ್ ಬರುವ ಸಮಯ ಹತ್ತಿರವಾದಂತೆ ಎದೆ ಡವಗುಟ್ಟುತ್ತಿತ್ತು. ಎಷ್ಟಾಗುವುದು! ಬಿಲ್ಲಿಗೆ ಯಾರು ಸಹಿ ಹಾಕುವುದು? ಅವರೊ? ನಾವೊ? ನಮ್ಮ ರೂಮಿಗೆ ಬಿಲ್ ಬರುವುದರಿಂದ ನಾವೇ ಹಾಕಬೇಕಾದರೆ ಗತಿ? ಕಡೆಗೂ ಬಂತು ನಾವು ಕಾಯುತ್ತಿದ್ದ ಘಳಿಗೆ! ಮಾಣಿ ಬಿಲ್ಲು ಹಾಗೂ ಡಾಟ್‌ಪೆನ್ನು ಕೊಟ್ಟ. ಇನ್ನೂರು ರೂಪಾಯಿ ಆಗಿತ್ತು! ರೂಮಿನಲ್ಲಿರುವುದು ನಾವಿಬ್ಬರೆ! ಇದು ಬೆಳಗಿನ ಟಿಫನ್ ಬಿಲ್ಲು. ಇನ್ನೂ ಮಧ್ಯಾಹ್ನ ಊಟ, ಸಂಜೆ ತಿಂಡಿಕಾಫಿ, ರಾತ್ರಿ ಮತ್ತೆ ಊಟ ಆಗಬೇಕು! ಈ ಮಹಾಶಯರೂ ಮೂರು ಹೊತ್ತು ನಮ್ಮ ಜೊತೆಯಲ್ಲೇ ಇದ್ದು ಇಲ್ಲೆ ಎಲ್ಲಾ ಮುಗಿಸಿದರೆ ಬಿಲ್ಲಿನ ಮೀಟರ್ ಎಷ್ಟು ಏರಬಹುದು! ಅದನ್ನು ನೆನಸಿಕೊಂಡೇ ಮೈಜ್ವರ ಬಂದಂತಾಯಿತು. ಆದರೂ ದೊಡ್ಡರಂಗೇಗೌಡರು ಮಾಣಿ ತಂದ ಬಿಲ್ಲಿಗೆ ಸಹಿಹಾಕಿದರು. ಅವನು ಹೋದ ಹಾಗೆ ಪಕ್ಕದ ರೂಮಿನ ವ್ಯಕ್ತಿಗಳೂ ಹೊರಟು ಹೋದರು. ನಾವಿಬ್ಬರೆ ಉಳಿದೆವು. ನಿರ್ದೇಶಕರು ಬಂದರು. ನಿರ್ಮಾಪಕರು ಬಂದರು. ಸಂಗೀತ ನಿರ್ದೇಶಕರು ಬಂದರು. ಆದರೂ ನಮ್ಮ ತಲೆ ತಿಂಡಿ ಬಿಲ್ಲಿನ ಕಡೆಗೇ ಇತ್ತು. ಹಾಡಿನ ಕಡೆ ಲಕ್ಷ್ಯ ಇರಲಿಲ್ಲ! ಏನು ಮಾಡೋಣ, ಇದೆಲ್ಲ ಸೂಕ್ಷ್ಮ ವಿಚಾರ. ಹೇಳಬೇಕೋ ಬೇಡವೋ ಎನ್ನುವ ಜಿಜ್ಞಾಸೆಗೆ ಒಳಗಾದೆವು. ಕಡೆಗೆ ರಾಗ ಸಂಯೋಜನೆ ಶುರುವಾಯಿತು. ಅದರಲ್ಲಿ ಮುಳುಗಿ ಬಿಟ್ಟೆವು. ನಮ್ಮ

ಮನಸ್ಥಿತಿಯಂತೆಯೆ ರಾಗವೂ ಇದ್ದುದರಿಂದ (Pathos) ವಿಷಾದದ ದನಿಗೆ ಸೂಕ್ತವಾಗಿ ಪದಗಳು ಪುಟಿದು ಬಂದವು! ಒಂದು ಸಮಾಧಾನದ ಸಂಗತಿ ಎಂದರೆ ಮಧ್ಯಾಹ್ನದ ಊಟ ನಮ್ಮ ರೂಮಿನಲ್ಲೆ ನಡೆದು ಸುಮಾರು 15 ಜನ ಊಟಮಾಡಿದ್ದರಿಂದ ನಿರ್ಮಾಪಕರೇ ಬಿಲ್ಲಿಗೆ ಸಹಿ ಹಾಕಿದ್ದು!

ಈ ಘಟನೆ (ಬೆಳಗಿನದು)ಯನ್ನು ಯಾರ ಮುಂದೆ ಹೇಳಿಕೊಳ್ಳಬೇಕು? ಅದನ್ನು ಯಾರು ಗಂಭೀರವಾಗಿ ತೆಗೆದುಕೊಳ್ಳುತ್ತಾರೆ ಎನ್ನುವ ಪ್ರಶ್ನೆ ಸಂಜೆ ಕಾಡತೊಡಗಿತು. ಮತ್ತೆ ವಾದ್ಯವೃಂದದ ''ಗೆಳೆಯರು'' ಎಲ್ಲಿ ಬಂದುಬಿಡುತ್ತಾರೊ ಎಂದು ಹೆದರಿ ಸಂಜೆ ಯಾರಿಗೂ ಹೇಳದೆ ಕೇಳದೆ ಬೀಚಿಗೆ ಹೊರಟು ಹೋದೆವು. ರಾತ್ರಿ ಊಟವನ್ನು ಮಾಡದೆ ಅಲ್ಲೇ ಸಿಕ್ಕಿದ್ದನ್ನು ತಿಂದು ವಾಪಸ್ ಬಂದೆವು. ಸಮುದ್ರದ ಮೊರೆತದಲ್ಲಿ ಬೀಸುವ ಗಾಳಿಯಲ್ಲಿ ಸಾಗುವ ದೋಣಿಯಲ್ಲಿ ನಮ್ಮ ಅಂತರಾಳದ ಮಾತುಗಳನ್ನು ತುಂಬಿ ಕಳಿಸಿದೆವು. ಅದು ಸಂಬಂಧಪಟ್ಟವರಿಗೆ ತಲುಪಿಸಿತ್ತೇನೋ? ಮಾರನೆಯ ದಿನ ನಮ್ಮ ರೂಮಿಗೆ ಯಾರೂ (ಪಕ್ಕದರೂಮಿನ ಗೆಳೆಯರು) ಸುಳಿಯಲಿಲ್ಲ.

ನಮ್ಮ ಈ ಸಂಕೋಚವನ್ನು ದೂರಮಾಡಿದವರು ದಿವಂಗತ ಉದಯಶಂಕರ್. ಅವರು ತಮ್ಮ ಕೋಣೆಗೆ ನಮ್ಮನ್ನು ಕರೆದಿದ್ದರು. ಅಲ್ಲಿ ನಮಗೆ ತಿಂಡಿ ಕಾಫಿ ಕೊಡಿಸಿದರು. ಆಗ ನಮ್ಮನ್ನು ಕಾಡುತ್ತಿದ್ದ ವಿಷಯವನ್ನು ಅವರ ಮುಂದೆ ಹೇಳಿದಾಗ ಗಟ್ಟಿಯಾಗಿ ನಕ್ಕುಬಿಟ್ಟರು. ''ನೀವು ಇಷ್ಟು ಸಂಕೋಚದಿಂದ ಇದ್ದರೆ ನೀವು ಚಿತ್ರರಂಗಕ್ಕೆ ನಾಲಾಯಕ್ಕು!'' ಎಂದು ಬುದ್ದಿ ಹೇಳಿದರು. ಲಕ್ಷಾಂತರ ಹಣ ತೊಡಗಿಸುವ ಈ ಚಿತ್ರರಂಗದಲ್ಲಿ ತಿಂಡಿ ಊಟ ಕಾಫಿ ಖರ್ಚು ಯಾವಲೆಕ್ಕ! ಅದಕ್ಕೆಲ್ಲ ತಲೆಕೆಡಿಸಿಕೊಳ್ಳಬೇಡಿ. ಹಾಡು ಬರೆಯುವುದರ ಕಡೆ ಗಮನ ಕೊಡಿ'' ಬಹುಶಃ ಆ ಹಿರಿಯರು ನಮಗೆ ಆ ದಿನ ಹೇಳಿದ ಮಾತು ನಮ್ಮಲ್ಲಿ ಸಾಕಷ್ಟು ಧೈರ್ಯ ತುಂಬಿದ್ದಲ್ಲದೆ ಚಿತ್ರರಂಗದ ಹಲವು ದಿಕ್ಕುಗಳನ್ನು ತೋರಿಸಿತು. ಹೀಗಾಗಿ ನಾವೂ ಉಳಿದವರಂತೆ ಆಗದಿದ್ದರೂ ನಮ್ಮ ಇತಿಮಿತಿಯನ್ನು ಕೊಂಚದಾಟುವಂತಾಯಿತು!

ಈಗಿನಂತೆ ಆಗ ಹೊಸಬರಿಗೆ ಅದರಲ್ಲೂ ಕವಿಗಳಿಗೆ ಪ್ರಾಶಸ್ತ್ಯ ಹೆಚ್ಚಿರಲಿಲ್ಲ. ಪ್ರೊಡಕ್ಷನ್ ಮ್ಯಾನೇಜರ್‌ನಿಂದ ಹಿಡಿದು ಸಹ ನಿರ್ದೇಶಕನವರೆಗೂ ನಮ್ಮ ಬಗ್ಗೆ ಏನೇನೂ ಗೊತ್ತಿರುತ್ತಿರಲಿಲ್ಲ. ಅದರಿಂದಾಗಿ ಅನೇಕ ರೀತಿಯ ಆಭಾಸ ಆಗುತ್ತಿದ್ದುದೂ ಉಂಟು. ಸಂಗೀತ ನಿರ್ದೇಶಕರು ಹಾಗೂ ಸಿನಿಮಾ ನಿರ್ದೇಶಕರಿಗೆ ನಾವು ಯಾರೆಂಬುದು ತಿಳಿದಿರುತ್ತಿತ್ತು. ಪ್ರೊಡೆಕ್ಷನ್ ಮ್ಯಾನೇಜರ್ ಪೋನ್‌ಮಾಡಿ ಹೋಟೆಲಿಗೆ ಕರೆಸುತ್ತಿದ್ದರು. ಸಹ ನಿರ್ದೇಶಕರು ನಮ್ಮ ಮುಖವನ್ನೂ ನೋಡಿದವರಲ್ಲ. ನಾನು ಒಂದು ಸಲ ಹೋದಾಗ ನನ್ನನ್ನು ಆತ್ಮೀಯವಾಗಿ ಬರಮಾಡಿಕೊಂಡ ಸಹ ನಿರ್ದೇಶಕ ಹೀಗೆ ಹೇಳಿದ. ''ನಿಮಗೆ ಸಂಗೀತ ನಿರ್ದೇಶಕರು ಇನ್ನೊಂದು ರೂಮಿನಲ್ಲಿ ಕಾಯ್ತಾ ಇದ್ದಾರೆ ಸಾರ್. ನೀವು ಹೋಗಿ ಎಂದು ರೂಮ್‌ನಂಬರ್ ಹೇಳಿ, ನಂತರ ಈಗ ತಾನೆ,

ವ್ಯಾಸರಾವ್ ಫೋನ್ ಬಂದಿತ್ತು. ಅವರೂ ಬರ್ತಾ ಇದ್ದಾರೆ. ಅವರಿಗೆ ಮಧ್ಯಾಹ್ನದ ಮೇಲೆ ಬರೋಕೆ ಹೇಳ್ಬೇಕು. ನೀವು ಹೋಗಿರಿ ಸಾರ್. ಆಮೇಲೆ ನಾನು ವ್ಯಾಸರಾವ್‌ನ ಕಳಿಸಿ ಬರ್ತೀನಿ'' ಅಂದ. ''ಅಯ್ಯ ನಾನೇ ವ್ಯಾಸರಾವ್, ಈಗ ಫೋನ್ ಮಾಡಿದವರು ದೊಡ್ಡರಂಗೇಗೌಡರು'' ಎಂದಾಗ ಅವನು ಹುಳ್ಳಗೆ ನಕ್ಕ.

ಇಂಥ ಪ್ರಸಂಗಗಳು ನನ್ನ ಮತ್ತು ದೊಡ್ಡರಂಗೇಗೌಡರ ನಡುವೆ ಸಾಕಷ್ಟು ನಡೆದಿವೆ. ಒಂದು ಸಂತೋಷದ ಸಂಗತಿ ಎಂದರೆ ನಾವು ಯಾವತ್ತೂ ಪರಸ್ಪರ ಹುಬ್ಬುಗಂಟು ಹಾಕಿದವರಲ್ಲ! ಒಟ್ಟಿಗೆ ಕೂತು ಶಬ್ದಗಳನ್ನು ಹಂಚಿಕೊಂಡು (ಕೆಲವು ಸಲ) ಹಾಡುಗಳನ್ನು ಬರೆದವರು. ಕೆಲವು ವರ್ಷಗಳ ನಂತರ ನಮ್ಮ ಜೊತೆಗೆ ದಲಿತ ಕವಿ ಸಿದ್ದಲಿಂಗಯ್ಯ ರುದ್ರಮೂರ್ತಿಶಾಸ್ತ್ರಿ ಶ್ಯಾಮಸುಂದರ ಕುಲಕರ್ಣಿ, ಪಿ. ಮನೋಹರ್ ಹಾಗೂ ಉಪೇಂದ್ರ, ನಾಗತಿಹಳ್ಳಿ ಚಂದ್ರಶೇಖರ್ ಕೂಡ ಸೇರಿದರು. ಕೆ. ಕಲ್ಯಾಣ್ ಎಷ್ಟೋ ವರ್ಷಗಳ ನಂತರ ಬಂದರು. ಅವರೆಲ್ಲರ ಜೊತೆ ನಾನೂ ಕೂಡ ಸೇರಿದಾಗ ಅದೊಂದು ಕವಿಗೋಷ್ಠಿಯ ರೀತಿ ಇರುತ್ತಿತ್ತು. ನಮ್ಮನ್ನು ಆತ್ಮೀಯವಾಗಿ ಕವಿಗೋಷ್ಠಿಗೆ ಬನ್ನಿ ಎಂದು ಕರೆಯುತ್ತಿದ್ದವರು ದಿವಂಗತ ಉಪೇಂದ್ರಕುಮಾರ್. ಪ್ರೀತಿಯೇ ಪ್ರಧಾನವಾಗಿದ್ದ ಕಾಲದಲ್ಲಿ ನಾವುಗಳು ಅತ್ಯಂತ ಆಪ್ತರಾಗಿ, ಆತ್ಮೀಯರಾಗಿ ಒಂದೇ ಕುಟುಂಬದವರಂತೆ ಇರುತ್ತಿದ್ದೆವು. ಚಿ. ಉದಯಶಂಕರ್ ಒಂದು ಸಲ ಹಾಸ್ಯ ಮಾಡಿದ್ದರು : ''ನಿಮ್ಮ ದಾಸ ಕೂಟದಲ್ಲಿ ನಾನಿಲ್ಲವೇನಪ್ಪ'' ಎಂದು ಅಷ್ಟು ಜನಪ್ರಿಯವಾಗಿತ್ತು ನಮ್ಮ ಕವಿಕುಟುಂಬ. ಆರ್.ಎನ್. ಜಯಗೋಪಾಲ್ ಇದ್ದುದು ಮದರಾಸಿನಲ್ಲಿ. ಆದುದರಿಂದ ಅವರ ಸಂಪರ್ಕ ನಮಗೆ ಕಡಿಮೆ. ಯಾವಾಗಲೋ ಬಂದು ಹಾಡು ಬರೆದು ಹೊರಟುಹೋಗುತ್ತಿದ್ದರು. ಹೀಗಾಗಿ ಅವರ ಜೊತೆ ನಾವು ಕಳೆದದ್ದು ಬಹಳಕಡಿಮೆ.

ಆರಂಭದ ಕಾಲದಿಂದ ಎಷ್ಟೋ ವರ್ಷಗಳ ತನಕ ನಾವು ಚಿತ್ರರಂಗದಲ್ಲಿ ಸಂಪಾದಿಸಿದ್ದು ಪ್ರೀತಿ ವಿಶ್ವಾಸ ಹಾಗೂ ಗೌರವ. ಹಣ ಇರಲಿಲ್ಲವೆಂದಲ್ಲ, ಇತ್ತು. ಆದರೆ ಅದು ಎದ್ದು ಕಾಣಿಸುತ್ತಿರಲಿಲ್ಲ. ಒಮ್ಮೆ ನನಗೂ ದೊಡ್ಡರಂಗೇಗೌಡರಿಗೂ ಒಬ್ಬ ನಿರ್ಮಾಪಕರು ಅವರಸರದಲ್ಲಿ ಬಂದು ನಮ್ಮ ಅಂಗೈಯಲ್ಲಿ ನೋಟುತುರುಕಿ ಮುಷ್ಟಿ ಮುಚ್ಚಿಬಿಟ್ಟು ಹೇಳಿದರು. ದಯವಿಟ್ಟು ಇಲ್ಲಿ ನೋಡಬೇಡಿ. ಊರು ಸೇರಿದ ಮೇಲೆ ನೋಡಿ ಎಂದರು. ಹಾಗೆ ಹೇಳಿ ಹೊರಟು ಹೋದರು. ನಮಗೋ ಕುತೂಹಲ! ಅವರು ಹೊರಟು ಹೋದಮೇಲೆ ಅವರ ಮಾತನ್ನು ಮೀರಿ ಅಂಗೈ ಬಿಚ್ಚಿದೆವು. ಇಬ್ಬರ ಕೈಗಳಲ್ಲೂ ಒಂದೊಂದು ನೂರು ರೂಪಾಯಿನ ನೋಟುಗಳು!!

ಇದು ಆಗ ಪಿಚ್ಚೆನಿಸಿತ್ತು. ಈಗ ಅನುಭವದ ಮೂಸೆಯಲ್ಲಿ ಕರಗಿ ನಗುತರಿಸುತ್ತದೆ. ಬಡತನದ ಹಾಸಿನಲ್ಲೇ ನಾವು ಚಿತ್ರ ರಂಗದಲ್ಲಿ ಬೆಳೆದು ಬಂದವರು. ''ಹಣವೇ ಮುಖ್ಯವಲ್ಲ'' ಎಂದು ಹೇಳುತ್ತಲೇ ಹಾಡು ಬರೆಸಿದವರು ಇದ್ದಾರೆ. ಅಂತಹ ಜನರಲ್ಲಿ ಅಪಾರ ವಿಶ್ವಾಸವಿತ್ತು. ಆ

ವಿಶ್ವಾಸ ನಮ್ಮನ್ನು ಇಲ್ಲಿಯ ತನಕ ಬೆಳೆಸಿದೆ. ಇದು ನನ್ನ ಹಾಗೂ ದೊಡ್ಡರಂಗೇಗೌಡ ಚಿತ್ರರಂಗದಲ್ಲಿನ ಸಹ ಪ್ರಯಾಣದ ಅನುಭವಗಳು.

ಈ ಲೇಖನವನ್ನು ಬರೆಯುತ್ತಾ ಪ್ರಾರಂಭದಲ್ಲಿ ದೊಡ್ಡರಂಗೇಗೌಡರನ್ನು ನನ್ನ ಬಹುವಚನದಿಂದ ಆರಂಭಿಸಿ ಎಡರನೆಯ ಭಾಗ ಶುರುವಾದಂತೆ ಏಕವಚನಕ್ಕೆ ಧುಮುಕಿರುವೆ, ಈ ಬದಲಾವಣೆ ಬಹುಶಃ ನನ್ನ ಅವನ ನಡುವಿನ ಆತ್ಮೀಯತೆ ಸೂಚಿಸುತ್ತದೆ ಎಂದು ಭಾವಿಸಿರುವೆ. ಓದುಗರು ಅದರಂತೆ ಭಾವಿಸಬೇಕೆಂದು ವಿನಂತಿ.





# ಮೋಜಿನಾಗೆ ಎಲ್ಲೆಯ ದಾಟಿ

• ಚಂದ್ರಶೇಖರ ಆಲೂರು

ಕವಿಗಳು ಚಿತ್ರಗೀತೆ ಬರೆಯುವುದು ಅವರ ಘನತೆಗೆ ತಕ್ಕುದಲ್ಲ ಎಂಬ ಭಾವನೆ ಬಲವಾಗಿದ್ದ ಕಾಲದಲ್ಲೇ ಕವಿ ದೊಡ್ಡರಂಗೇಗೌಡರು ಗೀತ ರಚನಕಾರರಾದರು. ಈಗ ಕಾಲ ಬದಲಾಗಿದೆ. ಕವಿಗಳು ಸಿನಿಮಾಕ್ಕೆ ಹಾಡು ಬರೆಯಲು ಅಷ್ಟೇನೂ ಹಿಂಜರಿಯುವಂತೆ ಕಾಣುತ್ತಿಲ್ಲ.

ದೊ.ರಂ.ಗೌ. ಚಿತ್ರರಂಗಕ್ಕೆ ಬಂದಾಗ ಮೊದಲ ತಲೆಮಾರಿನ ಗೀತ ರಚನಕಾರರು ಹೆಚ್ಚು ಕಮ್ಮಿ ನಿವೃತ್ತರಾಗಿದ್ದರು. ನಮ್ಮ ಚಿತ್ರರಂಗ ಕಂಡ ಎರಡನೇ ತಲೆಮಾರಿನ ಪ್ರಮುಖ ಗೀತ ರಚನಕಾರರಾದ ವಿಜಯನಾರಸಿಂಹ, ಉದಯಶಂಕರ್ ಆರ್.ಎನ್. ಜಯಗೋಪಾಲ್ ಬಿಡುವಿಲ್ಲದ ಲೇಖಕರಾಗಿದ್ದರು.

ಇಂಥ ಸಮಯದಲ್ಲಿ ಅದೇ ತಾನೇ ಭಾವಗೀತ ಪ್ರಕಾರದಲ್ಲಿ ಹೆಸರು ಮಾಡುತ್ತಿದ್ದ ದೊಡ್ಡರಂಗೇಗೌಡರು ಚಿತ್ರರಂಗಕ್ಕೆ ಧುಮುಕಿದರು. ಅವರು ''ಮಾಗಿಯ ಕನಸು'' ಚಿತ್ರಕ್ಕಾಗಿ ಬರೆದ ಮೊದಲ ಗೀತೆ ''ಬಂದಿದೆ ಬದುಕಿನ ಬಂಗಾರದಾ ದಿನ'' ಅಷ್ಟೇನೂ ಜನಪ್ರಿಯವಾಗಲಿಲ್ಲ. ನಂತರ ದೊಡ್ಡರಂಗೇಗೌಡರು ''ಪರಸಂಗದ ಗೆಂಡೆ ತಿಮ್ಮ'' ಚಿತ್ರಕ್ಕಾಗಿ ಬರೆದ ಗೀತೆಗಳು ಅವರಿಗೆ ದಿಢೀರ್ ಜನಪ್ರಿಯತೆ ತಂದು ಕೊಟ್ಟವು.

ಬಹುಶಃ ಮೂವತ್ತೈದು ವರ್ಷದ ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಕರೀಂಖಾನ್‌ರನ್ನು ಬಿಟ್ಟರೆ, ಬೇರು ಬಿಟ್ಟ ಮೊದಲ ಅಬ್ರಾಹ್ಮಣ ಗೀತರಚನಕಾರ ಎಂದರೆ... ದೊರಂಗೌ ಒಬ್ಬರೇ. ಇವರು ಮುಖ್ಯವಾಗಿ ತಮ್ಮ ಹಾಡುಗಳಲ್ಲಿ ಗ್ರಾಮ್ಯ ಭಾಷೆಯ ಸೊಗಡನ್ನು ತಂದರು.

ನೋಟದಾಗೆ ನಗೆಯ ಮೀಟಿ
ಮೋಜಿನಾಗೆ ಎಲ್ಲೆಯ ದಾಟಿ
ಮೋಡಿಯ ಮಾಡಿದೋಳ
ಪರಸಂಗ ಐತೆ!

ಇವರೂ ಸಹ ಹಿಂದಿನ ಗೀತರಚನಕಾರರಂತೆ ಅದೇ ಕೋಗಿಲೆ, ಕಮಲ ಹಂಸಗಳನ್ನು ಗೀತೆಗಳಲ್ಲಿ ಬಳಸಿದರೂ ಅವರುಗಳು ಇಲ್ಲಿ ಬೇರೆಯೇ ಆದ "ಧ್ವನಿ"ಯಲ್ಲಿ ಕೇಳುತ್ತಿದ್ದವು.

ಕೊರಳಾಗೆ ಇನಿದನಿ ಕೋಗಿಲೆ ಸ್ವರವೈತೆ
ನಡೆಯಾಗೆ ತುಳುಕುವಾ ಹಂಸದಾ ಬಳುಕೈತೆ;
ಮುಖದಾಗೆ ತಾವರೆ ಹೊಳಪೇ ಚೆಲ್ಲೈತೆ
ನನ್ನ ರಾಣಿ ನಿಜ ರೂಪು ರಂಗನ್ನೇ ಹಣಿಸೈತೆ

ಇದೇ ಚಿತ್ರಕ್ಕಾಗಿ ದೊಡ್ಡರಂಗೇಗೌಡರು ಬರೆದ "ನಿನ್ನಾ ರೂಪು ಎದೆಯ ಕಲಕಿ ಕಣ್ಣು ಮಿಂದಾಗ" ಮತ್ತು "ತೇರಾ ಏರಿ ಅಂಬರದಾಗೆ ನೇಸರು ನಗುತಾನೆ" ಹಾಡುಗಳು ಒಳ್ಳೆಯ ಭಾವಗೀತೆಗಳೂ ಕೂಡ.

ಮನಸಿನಾ ಚಿಲುಮೆಯಾಗೆ ಮುಗಿಯದಾಸೆ ಚಿಮ್ಮೈತೆ
ಹೃದಯದಾ ಕುಲುಮೆಯಾಗೆ ನೂರು ಬಯಕೆ ಸಿಡಿದೈತೆ;
ತೆರೆಯದಾ ಬಯಕೆ ಬಾನು ದೂರ ದೂರ ಸರಿದೈತೆ
ಹರೆಯದಾ ಹಂಬಲ ಗಂಗೆ ಬಾಗಿ ಬಳುಕಿ ಹರಿದೈತೆ!

ನಿಜಕ್ಕೂ ದೊರಂಗೌಡರ ಈ ಹಾಡುಗಳಲ್ಲಿ ಒಂದು ಹೊಸತನ ಇತ್ತು.

ಇಲ್ಲಿಯವರೆಗೂ ಕನ್ನಡ ಚಿತ್ರರಂಗ ಕಾಣದ ಹೊಸ ಭಾಷೆ, ಲಯ, ಸ್ಪಂದನ, ದೊರಂಗೌಡರ ಹಾಡುಗಳಲ್ಲಿತ್ತು.

ತುಂಬು ಲವಲವಿಕೆ, ಚೈತನ್ಯದಿಂದ ಕೂಡಿರುವ "ತೇರ ಏರಿ ಅಂಬರದಾಗೆ ನೇಸರು ನಗುತಾನೆ" ಕನ್ನಡ ಅತ್ಯುತ್ತಮ ಚಿತ್ರಗೀತೆಗಳಲ್ಲಿ ಒಂದು.

ಬೇಲಿ ಮ್ಯಾಗೆ ಬಣ್ಣ ಬಣ್ಣದ ಹೂವು ಅರಳ್ಯಾವೆ
ಆ ಹೂವಿನ ತುಂಬಾ ಸಣ್ಣ ಚಿಟ್ಟೆ ಕುಂತಾವೆ
ಬಾಗಿ ಬೀಗಿ ಅತ್ತ ಇತ್ತ ಬಾಳೆ ಬಳುಕ್ಯಾವೆ
ಆ ಬಾಳೆ ವನವೇ ನಕ್ಕು ಹಣ್ಣು ತಂದಾವೆ!

ಮುಂದೆ ಕವಿ ದೊರಂಗೌಡರ ಕಾವ್ಯ ಅರಳುತ್ತದೆ;

"ಸಾಲು ಸಾಲು ಬೆಟ್ಟಗುಡ್ಡ ಮೌನ ತಳೆದಾವೆ" ಎನ್ನುವಾಗ ಅಲ್ಲ... ಇನ್ನೂ ಮುಂದಿನ ಚೆಂದದ ಸಾಲುಗಳಲ್ಲಿ ಕಾವ್ಯ ಪಲ್ಲವಿಸಿದೆ.

ಆ ಮೌನದ ಗಾನ ಎಲ್ಲರ ಮನಸಾ ಸೆಳೆದಾವೆ
ಭಾವ ಬಿರಿದು
ಪತ್ರಿರ ಕರೆದು
ಮಾವು-ಬೇವು, ತಾಳೆ-ತೆಂಗು..ಲಾಲಿ ಹಾಡ್ಯಾವೆ!

''ಆಲೆಮನೆ'' ಚಿತ್ರದ ತುಂಬಾ ಜನಪ್ರಿಯ ಹಾಡು - ''ನಮ್ಮೂರ ಮಂದರ ಹೂವೆ....'' ಗಮನಿಸಬಹುದು. ಹಿತವಾಗಿ ಆರಂಭವಾಗುವ ಹಾಡಿನಲ್ಲಿ ನಂತರ ಬರುವುದು ''ಸಂಗಾತಿ-ಸಂಪ್ರೀತಿ ಸೆಳೆದೆ''; ''ಸಮ್ಮೋಹ-ಸಂಬಂಧ-ಮಿಡಿದೆ!'' ಇಂಥ ಶಬ್ದ ಚಮತ್ಕಾರಗಳು. ''ಅನುಪಮಾ'' ಚಿತ್ರದ ''ಒಲುಮೆ ಪೂಜೆಗೆಂದೇ'' ಹಾಡಿನಲ್ಲೂ ಇದೇ.

ರಾಗ-ತಾನ-ಪ್ರೇಮಗಾನ-ಸಂಜೀವನಾ!

ಇವರು ಬರೆದಿರುವ ಕೆಲವು ಚಿತ್ರಗೀತೆಗಳಲ್ಲಿ 'ಪ್ರತಿಭೆ' ಹೆಚ್ಚೇ ಮಿಂಚಿದೆ ಅನ್ನಿಸುತ್ತೆ.

ಹೊತ್ತಾರೆ ಸೂರ್ಯನ್ಹಂಗೆ
ಪತ್ತೂರ ತೂರನ್ಹಂಗೆ...
ಚಿತ್ತವ ಕಲಕಿ ನಿಂತ ಗೆಣೆಕಾರ
ಹತ್ತಿರ ಬಾರೋ ನನ್ನ ಜೊತೆಗಾರ!
ಬಾನಿನಾ ಚಂದ್ರನ್ಹಂಗೆ
ಓಡುವ ಜಿಂಕೆಯ್ಹಂಗೆ...
ಸುತ್ತಲು ಸುಳಿದೆ ನೀನು ಗೆಣೆಕಾತಿ
ಹತ್ತಿರ ಬಾರೇ ನೀನು ಜೊತೆಗಾತಿ!

ಕಾಡಾನೆ, ಚೇಂಗುದುರೆ, ಸಾರಂಗ, ಮುಂಗಾರು ನವಿಲು, ನಾಡಾಡಿ, ಹುಲಿ ಮುಂತಾಗಿ ಇಲ್ಲಿ ಬರುವ ವನ್ಯಲೋಕದಿಂದ ಈ ಗೀತೆ ಸಮೃದ್ಧವಾಗಿದೆ.

ಅಷ್ಟೇನೂ ಜನಪ್ರಿಯವಲ್ಲದ ''ಸುಬ್ಬಿ ಸುಬ್ಬಕ್ಕ ಸುವ್ವಲಾಲಿ'' ಎಂಬ ಚಿತ್ರದ ''ಮುಸುಕಾದ ಮನಸಿನ ಆಕಾಶಕೆ'' ಎಂಬ ಹಾಡು ಕೂಡ ಅರ್ಥವತ್ತಾಗಿದೆ...

ಮುಸುಕಾದ ಮನಸಿನಾ ಆಕಾಶಕೇ
ಮಿಂಚುವ ಚುಕ್ಕಿಯಂಗೆ ನೀ ಬಂದೆ;
ತುಂಬಿ ಬಂದ ಹರೆಯದಾ ಅಂಗಳದಾಗ
ತಿಂಗಳಾ ಬೆಳಕಿನಂಗೆ ನೀ ಬಂದೆ!

ಪ್ರಕೃತಿಯ ದಿನಚರಿಯಿಂದ ಸ್ಫೂರ್ತಿ ಪಡೆದ ಈ ಗೀತೆಯಲ್ಲಿ ಬರುವ ಬಿರುದು ನಿಂತ ಭೂಮಿಗೆ

ಭರಣಿ ಮಳೆ ಬಂದ್ಹಾಂಗೆ!
ಬರಿದಾದ ಹೃದಯಕೆ-
ಪ್ರೀತಿ ಗಂಗೆ ನಾ ತರುವೆ!

ಮುಂತಾದ ಕವಿ ದೊರಂಗೌಡರು ಬರೆದಿರುವ ಸಾಲುಗಳು ಬಲು ಸೊಗಸಾಗಿವೆ. ಕಡೆಯಲ್ಲಿ ''ಯಾರು ಏನೆ ಅಂದರೂ ಕಾಡಾನೆ ನಡೆವ್ಹಂಗೆ ನಡೆವೆ'' ಎನ್ನುವಾಗ ಅಲ್ಲಿಂದ ಮುಂದೆ-

ಯಾವತ್ತೂ ಜೊತೆ ಬಿಟ್ಟು ಹೋಗದ್ಹಾಂಗೆ
ಪುಟ್ಟಂಪುರ್ಲೆ ಅಂಟ್ಕೊಂಡ್ಹಂಗೆ ಅಂಟಿಕೊಳ್ಳುವೆ!''
ಎಂಬಲ್ಲಿ ಗ್ರಾಮ್ಯದ ನೈಜ ಸೊಗಡಿದೆ.

ಹೀಗಾಗಿ ಅನೇಕ ದೌರ್ಬಲ್ಯಗಳ ನಡುವೆಯೂ ಕವಿ ದೊಡ್ಡರಂಗೇಗೌಡರು ನಮ್ಮ ಪ್ರಮುಖ ಗೀತ ರಚನಕಾರರಲ್ಲಿ ಒಬ್ಬರು. ಏಕತಾನತೆ ಪಡೆಯುತ್ತಿದ್ದ ಕನ್ನಡ ಚಿತ್ರಗೀತೆಗಳಿಗೆ ಹೊಸ ತಿರುವು ನೀಡಿದವರು. ಚಿ.ಉ., ವಿ.ನಾ., ಆರ್.ಎನ್.ಜೆ. ಮುಂತಾದವರು ಪ್ರಬಲರಾಗಿದ್ದ ಕಾಲದಲ್ಲಿ ಚಿತ್ರರಂಗ ಪ್ರವೇಶಿದ ದೊಡ್ಡರಂಗೇಗೌಡರು ಅಷ್ಟು ಶಕ್ತಿ ಶಾಲಿ ಅಲ್ಲದಿದ್ದರೆ ಗೀತರಚನಕಾರರಾಗಿ ನಿಲ್ಲುವುದು ಸಾಧ್ಯವೇ ಆಗುತ್ತಿರಲಿಲ್ಲ. ದೊರಂಗೌಡರು ನಿಜಕ್ಕೂ ಒಳ್ಳೆಯ ಹಾಡುಗಳನ್ನು ನೀಡಬಲ್ಲರು ಎಂಬುದಕ್ಕೆ ಮತ್ತೊಂದು ಉದಾಹರಣೆ ನೋಡಿ....

ಮುಂಜಾನೆ ಮೂಡಿದ ಹಾಗೆ
ತಂಗಾಳಿ ತೀಡಿದ ಹಾಗೆ...
ಹೊಂಬಾಳೆ ತೂಗಿದ ಹಾಗೆ
ಕೆಂದಾವರೆ ನೀನು ನನಗೆ...

ಹೀಗೆ ತಮಗಿರುವ ಶಕ್ತಿಯನ್ನು ನೀಡುವಂತಾಗಲಿ ಜಾಣ್ಮೆಯಿಂದ ಬಳಸಿಕೊಳ್ಳುವ ದೊ.ರಂ.ಗೌ ಇನ್ನೂ ಹೆಚ್ಚಿನ ಒಳ್ಳೆಯ ಹಾಡುಗಳನ್ನು ನೀಡುವಂತಾಗಲಿ.

❑



# ಜಾನಪದ ಸೊಗಡಿನ ಜೋಪಾನಕಾರ

• ಅ.ನಾ. ಪ್ರಹ್ಲಾದರಾವ್

ಕನ್ನಡ ಸಾಹಿತ್ಯ ಕ್ಷೇತ್ರದ ಸಹೃದಯ ಕವಿ ಪ್ರೊ. ದೊಡ್ಡರಂಗೇಗೌಡರು ವಿರಳ ವ್ಯಕ್ತಿತ್ವದ ಭಾವಜೀವಿ. ಮೇಲ್ನೋಟಕ್ಕೆ ಇವರಲ್ಲಿನ ಸರಳ ಸಜ್ಜನಿಕೆ ಅನಾವರಣಗೊಳ್ಳುವುದು. ವಿಶಿಷ್ಟ ವ್ಯಕ್ತಿತ್ವದ ಇವರು ಸದಾ ಹಸನ್ಮುಖಿ, ಅಪಾರ ಪಾಂಡಿತ್ಯದ ಗಣಿ. ಸರಳ ಮನಸ್ಸಿನ ಹಾಗೂ ಮೆದು ನಡೆಯ ಇವರದು ಸಂಮೋಹನಗೊಳಿಸುವ ಗುಣ. ಉಪನ್ಯಾಸಕರಾಗಿ ವೃತ್ತಿ ಜೀವನಕ್ಕೆ ಹಾಗೂ ಕವಿಯಾಗಿ ಹವ್ಯಾಸಕ್ಕೆ ಸಮಾನ ನ್ಯಾಯ ದೊರಕಿಸಿಕೊಟ್ಟ ಶಿಸ್ತುಗಾರ. ಅದೇ ರೀತಿ ಸಾಹಿತ್ಯ ಕ್ಷೇತ್ರದಲ್ಲೂ ಭಾವಕವಿಯಾಗಿ ಜೊತೆ ಜೊತೆಗೆ ಚಿತ್ರಲೋಕದ ಗೀತ ರಚನೆಕಾರರಾಗಿ ಸಮರ್ಥವಾಗಿ ಗುರುತಿಸಿಕೊಂಡ ಅಪರೂಪದ ಸಾಹಿತಿ. ಇವರ ಭಾವಗೀತೆಗೆ ಕೇಳುಗನನ್ನು ತನ್ಮಯಗೊಳಿಸುವ ಶಕ್ತಿಯಿದ್ದರೆ, ಭಕ್ತಿಗೀತೆ ಪಾರಮಾರ್ಥ ಲೋಕಕ್ಕೆ ಕೊಡೊಯ್ದು ಮುಕ್ತಿಯ ಆನಂದವನ್ನು ನೀಡಬಲ್ಲದು. ಹಾಗೆಯೇ ಇವರು ರಚಿಸಿದ ಚಿತ್ರಗೀತೆಗಳು ಚಿರಂಜೀವಿ. ದಶಕಗಳು ಸುರಿದರೂ ಕನ್ನಡಿಗನ ಮನದಾಳದಿಂದ ಮಾಸದ ಉತ್ತಮ ಚಿತ್ರಗೀತೆಗಳು ಕನ್ನಡ ಚಲನಚಿತ್ರ ಲೋಕಕ್ಕೆ ಸಿಕ್ಕ ವರವೆಂದೇ ಹೇಳಬಹುದು. ಪ್ರೊ. ದೊಡ್ಡರಂಗೇಗೌಡರು ಕೈ ಆಡಿಸದ ಸಾಹಿತ್ಯ ಕ್ಷೇತ್ರ ಯಾವುದಿದೆ ಎಂದರೆ ಹುಡುಕಾಡಬೇಕಷ್ಟೆ. ಭಾವಗೀತೆ, ನವ್ಯಕಾವ್ಯ, ಭಕ್ತಿಗೀತೆ, ಪ್ರಗಾಥ, ಮುಕ್ತಕ, ಗದ್ಯ, ವಿಮರ್ಶೆ, ರೂಪಕ ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳು ಇವರ ಲೇಖನಿಯಲ್ಲಿ ಹೊಳಪುಗೊಂಡು ಪ್ರಜ್ವಲಿಸಿವೆ.

ಪ್ರೊ. ದೊಡ್ಡರಂಗೇಗೌಡರು ರಚಿಸಿರುವ ಚಲನಚಿತ್ರಗೀತೆಗಳು ಜನಪ್ರಿಯಗೊಂಡು, ಚಿರಂತನವಾಗಿ ಕನ್ನಡಿಗನ ಎದೆಯಾಳದಲ್ಲಿ ಮನೆ ಮೂಡಿರಬೇಕಾದರೆ ಅಲ್ಲೊಂದು ತೆರೆದ ರಹಸ್ಯವಿದೆ. ಅದೆಂದರೆ ಇವರ ಚಿತ್ರಗೀತೆಗಳು ಜಾನಪದ ಸೊಗಡಿನಲ್ಲಿ ರೂಪುಗೊಂಡವು. ಅಲ್ಲಿ ಗ್ರಾಮೀಣ ಮುಗ್ಧತೆಯಿದೆ, ನಮ್ಮ ಸಂಸ್ಕೃತಿಯ ಬೇರುಗಳನ್ನು ಭದ್ರವಾಗಿ ಕಾಪಾಡಿಕೊಂಡು ಬಂದಿರುವ ಹಳ್ಳಿಯ ಸಂಭ್ರಮದ ವಿಜೃಂಭಣೆಯಿದೆ. ಪ್ರೊ. ದೊಡ್ಡರಂಗೇಗೌಡರು ತಮ್ಮ

ಕವನಗಳಲ್ಲಿ ನಮ್ಮ ಮೂಲ ಸಂಸ್ಕೃತಿಯ ರಾಯಭಾರಿಯಂತೆ ಕಾಣಿಸುತ್ತಾರೆ. ಜನಪದ ಸಾಹಿತ್ಯ ಮರೆತು, ಆ ಪ್ರಕಾರ ಅಳಿದು ಹೋಗುವ ಭಯವಿರುವಾಗ ಗೌಡರು ತಮ್ಮ ಸಾಹಿತ್ಯದಲ್ಲಿ ಅದನ್ನು ಅನಾಯಾಸವಾಗಿ ಜೋಪಾನ ಮಾಡಿದ್ದಾರೆ. ಮುಂದಿನ ಪೀಳಿಗೆಯೂ ಮೆಲುಕು ಹಾಕುವಂತಹ ಸಾಹಿತ್ಯ ಸೃಷ್ಟಿಸಿದ್ದಾರೆ. ಜನಮದ ಜೋಡಿ ಚಿತ್ರಕ್ಕಾಗಿ ಇವರು ರಚಿಸಿದ ಎರಡು ಸುಂದರ ಗೀತೆಗಳಲ್ಲಿ ಅಡಗಿರುವ ಜಾನಪದ ಹೂರಣವನ್ನು ಸವಿದು ಸಂಭ್ರಮಿಸದ ಕನ್ನಡಿಗನೇ ಇಲ್ಲ ಎನ್ನಬಹುದು. ನಮ್ಮ ಜಾನಪದದಲ್ಲಿ ಹಾಸುಹೊಕ್ಕಾಗಿ ಶತ ಶತಮಾನಗಳಿಂದ ಜನರಲ್ಲಿ ಮನೆ ಮಾಡಿರುವ ಕಂಸಾಳೆ ಪದವನ್ನು ಪ್ರೊ. ದೊಡ್ಡರಂಗೇಗೌಡರು ಸೊಗಸಾಗಿ ಚಲನಚಿತ್ರ ಗೀತೆಯಾಗಿ ಬಳಸಿಕೊಂಡಿದ್ದಾರೆ. ಕೋಲುಮಂಡೆ ಜಂಗಮ ದೇವರು ಗುರುವೇ ಕೋರಣ್ಯಕ್ಕೆ ದಯಮಾಡವರೇ, ಕೋರಣ್ಯ ನೀಡವ್ವ ಕೋಡುಗಲ್ಲ ಮಾದೇವನಿಗೆ ಎಂದು ಆರಂಭಿಸಿರುವ ಈ ಗೀತೆಯಲ್ಲಿ ಚಲನಚಿತ್ರ ಕಥೆಯು ಸಾಂದರ್ಭಿಕ ಸನ್ನಿವೇಶಕ್ಕೆ ಅನುಗುಣವಾಗಿ ಸಂದರ್ಭೋಚಿತವಾಗಿ ಕಂಸಾಳೆ ಪದವನ್ನು ಬಳಸಿಕೊಂಡಿರುವ ಪ್ರೊ. ದೊಡ್ಡರಂಗೇಗೌಡರ ಪ್ರಸ್ತುತತೆ ಅತ್ಯಂತ ಜಾಣ್ಮೆಯಿಂದ ಕೂಡಿದೆ. ಈ ಹಾಡಿನಲ್ಲಿ ಮುಂದುವರೆದ ಸಾಲುಗಳು ಅದೆಷ್ಟು ಮೋಹಕವಾಗಿದೆ ಎಂಬುದನ್ನು ಗಮನಿಸಬಹುದು. ತಾಯಿ ಅಂದರೆ ತಾಯಿ ಆಗಬೇಕಿಲ್ಲ ತಾಯಿ, ಲಗ್ನ ಆಗದೆ ಇರೋ ಹೆಣ್ಣು ಮಗಳು ತಾಯಿ, ಭಿಕ್ಷೆ ನೀಡಿದರೆ ಬಾಳು ಬಂಗಾರ ತಾಯಿ ಎನ್ನುತ್ತಾ ನಾಯಕಿಯನ್ನು ಕಥಾ ಘಟ್ಟಕ್ಕೆ ತರುವ ಸನ್ನಾಹ ಮಾಡುತ್ತಾರೆ. ಈ ಸುಳಿವಿಂದಲೂ ನಾಯಕಿ ಬರದಿದ್ದಾಗ ಹುಡುಗಿ ಅಂದರೆ ಚಿಕ್ಕ ಹುಡುಗಿ ಅಲ್ಲ ತಾಯಿ, ಕಂಕಣ ಭಾಗ್ಯ ಬರೋ ಕನ್ಯಾಮಣಿ ತಾಯಿ, ಭಿಕ್ಷೆ ನೀಡಿದರೆ ಸಿರಿ ಸಿಂಗಾರ ತಾಯಿ ಎಂದು ಹೇಳಿ ನಾಯಕಿಗೆ ಅರಿವು ನೀಡುವಂತಹ ಸನ್ನಿವೇಶವನ್ನು ಸೃಷ್ಟಿಸುತ್ತಾರೆ. ನಾಯಕಿ ನಾಯಕನ ಮುಂದೆ ಬಂದು ನಿಂತಾಗ ಅವಳಿಗೆ ಸಂದೇಶವನ್ನು ನೀಡುವ ಕೆಲಸವನ್ನು ಅಷ್ಟೇ ಸೊಗಸಾಗಿ ಮಾಡಿದ್ದಾರೆ ಪ್ರೊ. ದೊಡ್ಡರಂಗೇಗೌಡರು. ಶುಭವಾಗುತ್ತೈತಮ್ಮೋ, ಶುಭವಾಗುತ್ತೈತಮ್ಮೋ, ಹೆತ್ತೋರ ಪುಣ್ಯವೋ ಮುತ್ತಾಗಿ ಬಂತಮ್ಮೋ, ಮುತ್ತಂತ ಭಾಗ್ಯವಾ ಬಾಗಿಲಿಗೆ ತಂತಮ್ಮೋ ಎನ್ನುತ್ತಾ ದ್ಯಾವರ ಗುಡ್ಡಕ್ಕೆ ಬಂದು ಭಕ್ತಿಯಿಂದ ಶಿವನ ನೆನೆದು ತನ್ನನ್ನು ಸೇರಲು ಹೇಳುವ ನಾಯಕ ಕೋಡ್ಗಲ್ಲ ಗುಟ್ಟೆ ಮ್ಯಾಲೆ ಮಾದೇವ ಬಂದೇ ಬರುತ್ತಾನೆ ಎಂಬ ಭರವಸೆ ನೀಡುತ್ತಾನೆ. ಇಲ್ಲಿ ಜಾನಪದ ಸೊಗಡು ಮಾತ್ರವಲ್ಲದೆ ಕವಿಯ ಜಾಣ್ಮೆ ಪದ ಪದದಲ್ಲೂ ಅಡಗಿದೆ. ಅಲ್ಲದೆ ಕಥಾ ಹಂದರಕ್ಕೆ ಸೂಕ್ತವಾದ ಸಮಯಪ್ರಜ್ಞೆ ಇದೆ. ಇಂತಹ ಸೋಜಿಗ ಪ್ರೊ. ದೊಡ್ಡರಂಗೇಗೌಡರ ಬಹಳಷ್ಟು ಗೀತೆಗಳಲ್ಲಿ ಕಾಣಬಹುದಾಗಿದೆ. ಜನುಮದಜೋಡಿ ಚಿತ್ರದಲ್ಲೇ ಅಳವಡಿಸಲಾಗಿರುವ ಮತ್ತೊಂದು ಗೀತೆ ಭಕ್ತಿ ಹಾಗೂ ಜಾನಪದ ಸೊಗಡನ್ನು ಮೈತಳೆದುಕೊಂಡು ಗ್ರಾಮೀಣ ಪರಿಸರದ ಸುಂದರ ಚಿತ್ರವನ್ನು ನೀಡುತ್ತದೆ. ಆರತಿ ಅಣ್ಣಮ್ಮಂಗೆ, ಆರತಿ ಮಾರಮ್ಮಂಗೆ, ಊರಿನ ನಾರಿರೆಲ್ಲ ಪೂಜೆಗೆ ಬನ್ನಿರೇ ಎಂದು ಆರಂಭವಾಗುವ ಈ ಹಾಡಿನಲ್ಲಿ ಹಳ್ಳಿಯ ಮುಗ್ಧ ದೈವಭಕ್ತಿಯನ್ನು ಅರ್ಥವತ್ತಾಗಿ ಚಿತ್ರಿಸಿದ್ದಾರೆ.

ಎಪ್ಪತ್ತರ ದಶಕದಲ್ಲಿ ಅಂದರೆ 1978ರಲ್ಲಿ ಬಿಡುಗಡೆಯಾದ ಪರಸಂಗದ ಗೆಂಡೆತಿಮ್ಮ ಚಿತ್ರದಲ್ಲಿ ಅಳವಡಿಸಲಾದ ನಾಲ್ಕೂ ಹಾಡುಗಳನ್ನು ಪ್ರೊ. ದೊಡ್ಡರಂಗೇಗೌಡರು ರಚಿಸಿದರೆಂಬುದು ಗಮನಾರ್ಹ. ಅಂದಿನಿಂದ ಇಂದಿನವರೆಗೂ ಅವರ ರಚನೆಗಳಲ್ಲಿ ಏಕಪ್ರಕಾರವಾದ ರಸಸ್ವಾದ ಅಡಗಿರುವುದು ಈ ಕವಿಯಲ್ಲಿನ ಕರ್ತೃತ್ವಶಕ್ತಿಯನ್ನು ತೆರೆದಿಡುತ್ತದೆ. ತೇರಾ ಏರಿ ಅಂಬರದಾಗೆ ನೇಸರ ನಗುತಾನೆ ಎಂಬ ಸಾಲಿನಲ್ಲೇ ತುಂಬಿರುವ ಅದ್ಭುತ ಕಲ್ಪನೆ ಹಾಡು ಹರಿಯುತ್ತಾ ಹೋದಂತೆ ಪರಿಸರ ಸೌಂದರ್ಯದ ಬೆಡಗನ್ನು ತೆರೆದುಕೊಳ್ಳುತ್ತಾ ಹೋಗುತ್ತದೆ. ನೋಟದಾಗೆ ನಗೆಯ ಮೀಟಿ ಎಂದು ಆರಂಭಗೊಳ್ಳುವ ಹಾಡಿನಲ್ಲಿ ಭಾವಾಭಿವ್ಯಕ್ತಿಯ ಅನನ್ಯತೆಯನ್ನು ಅರ್ಥೈಸಲಾಗಿದೆ ಈ ಹಾಡನ್ನು ಸಂಭ್ರಮ ಹಾಗೂ ವಿಷಾದ ಈ ಎರಡೂ ಭಾವಭಂಗಿಯಲ್ಲಿ ಚಿತ್ರಿಸಿರುವ ಅದ್ಭುತ ಕಲ್ಪನೆಯೂ ಅಸಾಮಾನ್ಯ. ಹೆಣ್ಣಿನ ಸೌಂದರ್ಯದ ಚಿತ್ರಣವನ್ನು ಕವಿಹೃದಯ ನಾನಾ ರೀತಿಯಲ್ಲಿ ವರ್ಣಿಸಿಕೊಂಡು ಬಂದಿದೆ. ನಿನ್ನಾ ರೂಪು ಎದೆಯ ಕಲಕಿ ಕಣ್ಣು ಮಿಂದಾಗ ಎಂಬ ಹಾಡಿನಲ್ಲಿನ ಆರ್ದ್ರಭಾವ ಅಸಾಮಾನ್ಯ.

ಪ್ರೊ. ದೊಡ್ಡರಂಗೇಗೌಡರಲ್ಲಿನ ಸರಳತೆ, ಸೌಜನ್ಯ ವರ್ಣಿಸದಳ. ನಾನು ಹನುಮಂತನಗರದಲ್ಲಿ ವಾಸವಿದ್ದಾಗ ಒಂದು ಚಿಕ್ಕ ದ್ವಿಚಕ್ರವಾಹನ ಬಳಸುತ್ತಿದ್ದೆ. ಮೂರುನಾಲ್ಕು ಬಾರಿ ವಾಹನ ಏರಿ ಬರುತ್ತಿರುವಾಗ ರಾಮಕೃಷ್ಣಾಶ್ರಮ ಬಸ್‌ಸ್ಟಾಪ್ ಬಳಿ ಬಸ್‌ಗಾಗಿ ಕಾಯುತ್ತಿದ್ದ ಪ್ರೊ. ದೊಡ್ಡರಂಗೇಗೌಡರನ್ನು ಕಂಡು ನನ್ನ ವಾಹನ ಏರಿಸಿಕೊಂಡು ಎಸ್.ಎಲ್.ಎನ್. ವಿದ್ಯಾಸಂಸ್ಥೆ ಬಳಿ ಬಿಟ್ಟಿದ್ದೇನೆ. ಮೇಲಕ್ಕೇರಿದ್ದರೂ ಎಂದೂ ಸರಳತೆಯಿಂದಿರುತ್ತಿದ್ದ ಇವರು ನನ್ನ ಜೊತೆ ಲೋಕಾಭಿರಾಮವಾಗಿ ಮಾತನಾಡುತ್ತಾ ಬರುತ್ತಿದ್ದರು. ಅಭಿಮಾನಿ ಸಮೂಹ ಸಂಸ್ಥೆಗಳ ಒಡೆಯರಾದ ಟಿ. ವೆಂಕಟೇಶ್ ಅವರ ಕಚೇರಿಯಲ್ಲಿ ಹಲವು ಬಾರಿ ನಾವು ಭೇಟಿಯಾಗಿದ್ದೂ ಉಂಟು. ಈ ಭೇಟಿಯ ಸಂದರ್ಭಗಳಲ್ಲೂ ಅವರ ಚರ್ಚೆ ಸಾರಸ್ವತ ಲೋಕದ ಕಡೆಗೇ ಇರುತ್ತಿತ್ತು. ಈ ಸಜ್ಜನ ಕವಿಯ ವಿಚಾರಧಾರೆ ಎಂದೂ ಭಾವಪೂರ್ಣವಾಗಿರುವುದೇ ಇವರ ಕಾವ್ಯ ಸಂಪತ್ತು ಸಮೃದ್ಧತೆಯಲ್ಲಿ ಮೀಯುಲು ಕಾರಣ ಎಂಬುದನ್ನು ಎಲ್ಲರೂ ಒಪ್ಪಬಲ್ಲರು.

❑



# ಡಾ॥ ದೊಡ್ಡರಂಗೇಗೌಡರ ಚಿತ್ರಗೀತೆಗಳು ಒಂದು ಸಮೀಕ್ಷೆ

• ಡಿ. ಭರತ್

ಕನ್ನಡ ಚಲನಚಿತ್ರ ಗೀತೆಗಳಿಗೆ ಮತ್ತಷ್ಟು ಸೊಬಗು, ಮೆರುಗು, ಅರ್ಥಪೂರ್ಣತೆ, ಮಾಧುರ್ಯ, ನೂತನ ಪದ ಶೈಲಿಯ ಮೋಡಿಯನ್ನು ಮಾಡಿದವರು ಕವಿ ಹಾಗೂ ಗೀತರಚನೆಕಾರ ಡಾ॥ ದೊಡ್ಡರಂಗೇಗೌಡರು. ವೃತ್ತಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಇವರು 1977ರಲ್ಲಿ ಕನ್ನಡ ಚಿತ್ರರಂಗ ಪ್ರವೇಶಿಸಿದರು. ಅಲ್ಲಿಂದ ಇಲ್ಲಿಯವರೆವಿಗೂ ಸುಮಾರು ಐನೂರಕ್ಕೂ ಹೆಚ್ಚು ಚಿತ್ರಗೀತೆಗಳನ್ನು ರಚಿಸಿ ಕರ್ನಾಟಕದ ಮನೆಮನೆಗೂ ಪರಿಚಿತರಾಗಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ನಮ್ಮ ದೇಶದ ಹೆಮ್ಮೆಯ ಸಾಹಿತಿಯಾಗಿ ವಿಶ್ವವಿಖ್ಯಾತರಾಗಿದ್ದಾರೆ.

''ಮಾಗಿಯ ಕನಸು'' ಚಿತ್ರದ ''ಬಂದಿದೆ ಬದುಕಿನ ಬಂಗಾರದಾ ದಿನ' ಗೀತೆಯಿಂದ ಹಿಡಿದು ''ತಂದೆಗೆ ತಕ್ಕ ಮಗ' ಚಿತ್ರದ ''ಕಾವೇರಿ ಸೀಮ್ಯಾಗ''ದವರೆಗೆ ಇವರ ಪ್ರತಿಭೆಯಿಂದ, ಕಲ್ಪನೆಯಿಂದ, ಭಾವಸ್ಫೂರ್ತಿಯಿಂದ, ಲೇಖನಿಯಿಂದ ಮೂಡಿಬಂದ ಹಾಡುಗಳಲ್ಲಿ ವೈವಿಧ್ಯತೆಯಿದೆ. ವಿಚಾರ ತೀಕ್ಷ್ಣತೆ ಇದೆ. ಪ್ರೀತಿ ಸೆಲೆಯಿದೆ, ಭಾವೈಕ್ಯತೆಯ ಕರೆ ಇದೆ. ಕತ್ತಿಯ ಮೊನಚಿನಷ್ಟು ಚೂಪಾದ ವಿಮರ್ಶಾ ಪ್ರಜ್ಞೆಯಿದೆ. ಪರಿಸರ ಪ್ರೇಮದ ಅರಿವಿದೆ, ಗ್ರಾಮೀಣ ಸೊಗಡಿನ ಚೆಲುವಿದೆ. ನಮ್ಮ ನಾಡಿನ ಸಂಸ್ಕೃತಿಯನ್ನು ಮರೆಸುವ, ಕಾಣುವ ದೃಷ್ಟಿಯಿದೆ.

ದೇವರು, ದೇಶ, ಭಾಷೆ, ಭಕ್ತಿ, ಪ್ರೀತಿ, ಮದುವೆ, ಸಂತೋಷ, ಹಬ್ಬ ಉತ್ಸವ, ಛಲ, ಕ್ರೀಡೆ, ವಿರಹ, ದುಃಖ, ಹುಟ್ಟು-ಸಾವು, ಪರಿಸರ, ತಾಯಿಯ ವಾತ್ಸಲ್ಯ, ಸಂಸಾರ ಮುಂತಾದ ವಿಚಾರಗಳ ವಸ್ತು ಇವರ ಹಾಡುಗಳಲ್ಲಿ ಕಂಡು ಬರುತ್ತವೆ. ಸರಳವಾದ ಬರವಣಿಗೆಯಲ್ಲೂ ವಿಚಾರ ಪ್ರೌಢತೆಯನ್ನು ಛಾಪಿಸುವ ಶೈಲಿಯ ಗಮ್ಮತ್ತು ಡಾ॥ ದೊಡ್ಡರಂಗೇಗೌಡರ ಹಾಡುಗಳಲ್ಲಿವೆ. ಸ್ವರ ಸಂಯೋಜನೆಗೆ ತಕ್ಕ ಹಾಗೆ ಗೀತೆಗಳನ್ನು ರಚಿಸಿರುವ ಇವರ ಎಷ್ಟೋ

ಹಾಡುಗಳು ಕೇವಲ ಚಿತ್ರಗೀತೆಯ ಚೌಕಟ್ಟಿಗೆ ಒಳಪಡದೆ ಅದನ್ನೂ ಮೀರಿ ಶ್ರೇಷ್ಠ ಕವಿತೆಗಳಾಗುತ್ತವೆ; ಉತ್ತಮ ಭಾವಗೀತೆಗಳೂ ಆಗುತ್ತವೆ. ಈ ನನ್ನ ಲೇಖನದಲ್ಲಿ ಡಾ|| ದೊಡ್ಡರಂಗೇಗೌಡರ ಎಲ್ಲಾ ಹಾಡುಗಳ ಬಗ್ಗೆ ಪ್ರಸ್ತಾಪ ಮಾಡಲಾಗದಿದ್ದರೂ ಕೆಲವು ಹಾಡುಗಳ ಬಗ್ಗೆ ಒಂದು ಇಣುಕು ನೋಟದ ಪ್ರಯತ್ನವಿದೆ.

ಡಾ|| ದೊಡ್ಡರಂಗೇಗೌಡರು ರಚಿಸಿದ ಮೊಟ್ಟಮೊದಲ ಹಾಡು ಎಲ್ಲರ ಗಮನ ಸೆಳೆಯುತ್ತಿದೆ. ವಿಜಯಭಾಸ್ಕರ್ ಸಂಗೀತ, ವಾಣೀ ಜಯರಾಂ ಗಾಯನದ ಈ ಗೀತೆಯು ಮದುವೆಯ ಹಾಡಾಗಿದೆ. ತಮ್ಮ ಮದುವೆಯ ವಾರ್ಷಿಕ ದಿನಾಚರಣೆಯಂದೇ ಕನ್ನಡ ಚಿತ್ರಕ್ಕಾಗಿ ಗೌಡರು ಸಂಗೀತ ಸ್ವರ ಪ್ರಸ್ತಾರಕ್ಕೆ ಬರೆದ ಸೃಜನಶೀಲ ಗೀತೆಯಾಗಿರುವುದು ಇದರ ವಿಶೇಷವಾಗಿದೆ.

" ಬಂದಿದೆ ಬದುಕಿನ ಬಂಗಾರದಾ ದಿನ
ಮದುವೆಯೇ ಮನುಜನ ಮೊದಲನೇ ಬಂಧನ"
(ಮಾಗಿಯ ಕನಸು - 1977)

ವರಪೂಜೆ, ಮಂಗಳ ಸ್ನಾನ, ಮಾಂಗಲ್ಯಧಾರಣೆ ಮುಂತಾಗಿ ನಡೆಯುವ ಮದುವೆಯ ಕಾರ್ಯವನ್ನು, ಮಾನವನ ಜೀವನದಲ್ಲಿ ಮದುವೆ ಪಡೆಯುವ ಪಾತ್ರವನ್ನು, ಹೊಸ ವಧು-ವರರ ಭಾವನೆಗಳನ್ನು, ಅಲ್ಲಿನ ಸಂತೋಷ, ಸಡಗರಗಳನ್ನು ಕವಿ ತಮ್ಮ ಹಾಡಿನಲ್ಲಿ ತಿಳಿಸಿದ್ದಾರೆ. ಗಂಡು-ಹೆಣ್ಣಿಗೆ ಅವರ ಬದುಕಿನಲ್ಲಿ ಮರೆಯಲಾಗದ ಶುಭದಿನವಾಗಿ, ಗೃಹಸ್ಥ ಜೀವನಕ್ಕೆ ಸಪ್ತಪದಿ ತುಳಿದು ಸತಿ-ಪತಿಗಳಾಗಿ ಕಾಲಿಡುವ ಆ ದಿನ ಅವರಿಗೆ 'ಬಂಗಾರದ ದಿನ'ವಾಗಿದೆ. ಸಂಸಾರವೆಂಬ ಜವಾಬ್ದಾರಿಯುತ ಸಾಮಾಜಿಕ ಬಂಧನಕ್ಕೂ, ಪರಸ್ಪರ ಪ್ರೀತಿ ಅನ್ಯೋನ್ಯತೆಯ ಬಂಧನಕ್ಕೂ ಸತಿಪತಿಗಳನ್ನು ಒಳಪಡಿಸುವ ಶುಭಕಾರ್ಯವೇ ಮದುವೆಯಾಗಿದೆ ಎಂಬ ವಿಚಾರ ಈ ಗೀತೆಯಲ್ಲಿದೆ. 1977ರ ಜನಪ್ರಿಯ ಹಾಡುಗಳಲ್ಲಿ ಇದೂ ಸಹ ಒಂದಾಗಿದೆ.

ತಮ್ಮ ಎರಡನೇ ಗೀತೆಯನ್ನು ದೊಡ್ಡರಂಗೇಗೌಡರು ಬರೆದಿದ್ದು ಮತ್ತೆ ವಿಜಯಭಾಸ್ಕರ್ ಸಂಗೀತವಿರುವ "ದೀಪ" ಚಿತ್ರಕ್ಕಾಗಿ. ಇದೊಂದು ಸುಂದರ ಯುಗಳ ಗೀತೆ. ಎಸ್.ಪಿ. ಬಾಲಸುಬ್ರಹ್ಮಣ್ಯಂ ಮತ್ತು ವಾಣೀಜಯರಾಂ ಹಾಡಿದ್ದಾರೆ.

"ಕಂಡ ಕನಸು ನನಸಾಗಿ
ಇಂದು ಮನಸು ಹಗುರಾಗಿ ಹಾರಾಡುವಾ.. ತೇಲಾಡುವಾ..
ರಾಗ ತಾನ ಸೇರಿದಂತೆ
ತಾಳ ಮೇಳ ಕೂಡಿದಂತೆ"
(ದೀಪ - 1977)

ಪ್ರೇಮಿಗಳಿಬ್ಬರ ಸುಂದರ ಕನಸು ನನಸಾಗಿರುವ ಸಡಗರದ ಚಿತ್ರವಿದೆ. ನಲ್ಲ-ನಲ್ಲೆಯ ಪರಸ್ಪರ ಪ್ರೀತಿಯ ಸೊಬಗಿದೆ. ಉತ್ಸಾಹದ ಚಿಲುಮೆಯಿದೆ. ರಾಗತಾನದ ತಾಳ ಮೇಳಗಳ ಅಂಟು ನಂಟಿನಂತೆ ಅವರ ಸಂಬಂಧವಿದೆ. ಇದು ಒಂದು ಸುಂದರ ಪ್ರೇಮಗೀತೆಯಾಗಿದೆ. ನವಿರಾದ ಪ್ರೀತಿ ಭಾವನೆಗಳನ್ನು ಕವಿ ಈ ಹಾಡಲ್ಲಿ ತಂದಿದ್ದಾರೆ. ಇದು ಸಹ 1977ರ ಜನಪ್ರಿಯ ಗೀತೆ.

ಡಾ|| ದೊಡ್ಡರಂಗೇಗೌಡರು ನಂತರ 1978ರಲ್ಲಿ ಪುಟ್ಟಣ್ಣ ಕಣಗಾಲ್ ನಿರ್ದೇಶನದ ''ಪಡುವಾರಳ್ಳಿ ಪಾಂಡವರು'' ಚಿತ್ರಕ್ಕೆ ಮೂರು ಹಾಡುಗಳನ್ನು ಬರೆದದ್ದು ಅವರ ಪ್ರತಿಭೆಯ ಸಾಮರ್ಥ್ಯಕ್ಕೆ ಕಾವ್ಯಶಕ್ತಿಗೆ ಸಾಕ್ಷಿಯಾಗಿವೆ. ಒಂದೊಂದು ಒಂದಕ್ಕಿಂತ ಒಂದು ಭಿನ್ನವಾಗಿದೆ. ಈ ಹಾಡುಗಳಿಗೆ ಸಂಗೀತ ನೀಡಿದವರು ವಿಜಯಭಾಸ್ಕರ್. ಈಗಲೂ ನಮ್ಮ ಮನಸ್ಸನ್ನು ಮುಟ್ಟುವ, ಇಂದಿಗೂ ಜನಪ್ರಿಯವಾಗಿರುವ ಹಾಡು ಎಂದರೆ - ಈ ಚಿತ್ರದ

''ಜನ್ಮ ನೀಡಿದ ಭೂತಾಯಿಯ
ನಾ ಹೇಗೆ ತಾನೆ ಮರೆಯಲಿ
ಅನ್ನ ನೀಡಿದ ಈ ಮಣ್ಣನು
ನಾ ಹೇಗೆ ತಾನೆ ತೊರೆಯಲಿ''

(ಪಡುವಾರಳ್ಳಿ ಪಾಂಡವರು - 1978)

ಎಸ್.ಪಿ. ಬಾಲಸುಬ್ರಹ್ಮಣ್ಯಂ ಗಾಯನದ ಈ ಹಾಡು ಕವಿಯ ಸ್ವಾನುಭಾವದಿಂದ ಬಂದ ಹಾಡಾಗಿದೆ. ಹಳ್ಳಿಯಲ್ಲಿ ಜನಿಸಿದ, ಅಲ್ಲಿಯೇ ಆಡಿ, ಬೆಳೆದ, ದೊಡ್ಡರಂಗೇಗೌಡರು ತಾವು ಕಂಡ ಅನುಭವಿಸಿದ ಬಾಲ್ಯ ಸಂಗತಿಗಳ ವಿವರವನ್ನೇ ಚಿತ್ರದ ಕಥಾ ವಸ್ತುವಿನ ಸನ್ನಿವೇಶಕ್ಕೂ ಅರ್ಥಗರ್ಭಿತವಾಗುವಂತೆ ಈ ಹಾಡಲ್ಲಿ ತಿಳಿಸಿರುವುದು ವಿಶೇಷವಾಗಿದೆ. ವಿದ್ಯಾಭ್ಯಾಸಕ್ಕಾಗಿ ಹುಟ್ಟೂರನ್ನು ಬಿಟ್ಟು ಬೆಂಗಳೂರಿನಲ್ಲಿ ನೆಲೆಸಬೇಕಾದ ಅನಿವಾರ್ಯತೆ ದೊಡ್ಡರಂಗೇಗೌಡರಿಗೆ ಬಂದಿದ್ದರಿಂದ ಸಹಜವಾಗಿಯೇ ತನ್ನ ಹುಟ್ಟಿದ ಹಳ್ಳಿಯ ಬಗ್ಗೆ ಮಿಡಿದ ಭಾವನೆ ಇಲ್ಲಿ ಮಹತ್ವಪಡೆದಿದೆ. ತನ್ನನ್ನು ಎತ್ತಿ ಆಡಿಸಿದ ಕಾಳೀರಜ್ಜಿ, ಸಾಕಮ್ಮಜ್ಜಿಯವರನ್ನು ಗೌಡರು ನೆನಸಿಕೊಂಡಿರುವುದರ ಬಗ್ಗೆ ನಮಗೆ ಕವಿಯ ಬಗ್ಗೆ ಮತ್ತಷ್ಟು ಗೌರವ ಬೆಳೆಯಲು ಕಾರಣವಾಗುತ್ತದೆ. ಹಳ್ಳಿಯ ಜೀತ ಪದ್ಧತಿಗೆ ಸಿಲುಕಿ ಮುಗ್ಧರಾಗಿ ಅಸಹಾಯಕರಾದ ಜನರ ಪರಿಸ್ಥಿತಿಯನ್ನು ಹಾಡಿನ ಕೊನೆ ಚರಣದಲ್ಲಿ ತಿಳಿಸಿದ್ದಾರೆ. ''ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿಗರೀಯಸಿ'' (ತಾಯಿ, ತಾಯಿನಾಡು ಸ್ವರ್ಗಕ್ಕಿಂತಲೂ ಹೆಚ್ಚು) ಎಂಬ ವಿಚಾರವಿಲ್ಲಿದೆ. ಯಾರೇ ಆಗಲಿ ತಾಯನ್ನು ನಾಡನ್ನು ಮರೆಯಬಾರದೆಂಬ ಆಶಯವೂ ಇಲ್ಲಿದೆ.

1978ರಲ್ಲಿಯೇ ''ಪರಸಂಗದ ಗೆಂಡೆತಿಮ್ಮ'' ಚಿತ್ರಕ್ಕಾಗಿ ಎಲ್ಲಾ ಹಾಡುಗಳನ್ನು

ಡಾ॥ ದೊಡ್ಡ ರಂಗೇಗೌಡರು ಬರೆದರು. ಚಿತ್ರದ ವಸ್ತು ಹಳ್ಳಿಯುವಕನೊಬ್ಬನ ಬದುಕಿನದ್ದು. ರಾಜನ್-ನಾಗೇಂದ್ರ ಸಂಗೀತವಿರುವ ಈ ನಾಲ್ಕು ಹಾಡುಗಳಲ್ಲೂ ಗ್ರಾಮೀಣ ಭಾಷಾ ಶೈಲಿಯನ್ನು, ದೇಶೀಯತೆಯ ಸೊಗಡನ್ನು, ರೂಪಕಗಳನ್ನು ಹೆಚ್ಚಾಗಿಯೇ ಬಳಸಿದ ದೊಡ್ಡರಂಗೇಗೌಡರು ಇನ್ನಷ್ಟು ವಿಶೇಷವಾಗಿಯೇ ಅವರನ್ನು ಗುರುತಿಸುವಂತೆ ಮಾಡಿಕೊಂಡರು. ಚಿತ್ರದ ನಾಲ್ಕು ಹಾಡುಗಳು ಇಂದಿಗೂ ಸೂಪರ್‌ಹಿಟ್ ಗೀತೆಗಳೇ. ಚಿತ್ರಗೀತೆಗಳಾಗಿ ಉಳಿಯದೇ ಇವು ಉತ್ತಮ ಕಾವ್ಯಗಳು ಆಗುತ್ತವೆ.

ಈ ಹಾಡುಗಳಲ್ಲಿ ಕವಿಯ ನಿಸರ್ಗ ಪ್ರೀತಿಗೆ ಅಚ್ಚಳಿಯದ ಸಾಕ್ಷಿಯಾಗಿ ಎಸ್.ಪಿ. ಬಾಲಸುಬ್ರಹ್ಮಣ್ಯಂ ಹಾಡಿರುವ ಹಾಡು ''ತೇರಾ ಏರಿ ಅಂಬರದಾಗೆ ನೇಸರು ನಗುತಾನೆ'' ದೊಡ್ಡರಂಗೇಗೌಡರಿಗೆ ದೊಡ್ಡ ಜನಪ್ರಿಯತೆಯನ್ನೇ ತಂದಿತು. ಹಳ್ಳಿಯ ಮುಗ್ಧ ಗೆಂಡೆತಿಮ್ಮ ತನ್ನ ವಸ್ತುಗಳನ್ನು ಸುತ್ತಮುತ್ತಲ ಹಳ್ಳಿಗಳಿಗೆ ಮಾರಲು ಹೋಗುವಾಗ ದಾರಿಯಲ್ಲಿ ಕಂಡ ಸೂರ್ಯ, ಬೆಟ್ಟ ಗುಡ್ಡ, ಗಿಡ-ಮರ, ಹಕ್ಕಿ, ಹೂವು - ಚಿಟ್ಟೆ, ಬಳ್ಳಿ, ಬಾಳೆ ಮುಂತಾದ ಪ್ರಕೃತಿ ಸೊಬಗನ್ನು ಸವಿದು ವರ್ಣಿಸುತ್ತಾನೆ. ಸೂರ್ಯನಂತೆ ಜಾತಿಭೇದ ಮಾಡದೆ ಮಾನವರೆಲ್ಲರೂ ಪರಸ್ಪರ ಸಾಮರಸ್ಯ, ಪ್ರೀತಿ, ವಿಶ್ವಾಸ, ಸ್ನೇಹ, ಸಮಭಾವದಿಂದ ಇರಬೇಕೆನ್ನುವ ವಿಚಾರ ತಿಳಿಸಿರುವುದು ಮೂರನೇ ಚರಣದಲ್ಲಿ ಉಲ್ಲೇಖವಾಗಿರುವುದು ಗಮನಾರ್ಹವಾಗಿದೆ. ಪರಿಸರ ಎಂದಿಗೂ ಮನುಷ್ಯನಿಗೆ ಸಂತೋಷವನ್ನೇ ಕೊಡುತ್ತದೆ ಎಂಬ ಅರಿವು ಇಲ್ಲಿದೆ. ಮಹಾರಾಷ್ಟ್ರ ಸರ್ಕಾರ ಏಳನೇ ತರಗತಿಯ ಪಠ್ಯಪುಸ್ತಕದಲ್ಲಿ ಈ ಗೀತೆಯನ್ನು ಅಳವಡಿಸಿಕೊಂಡಿರುವುದು ಮಹತ್ವದ ಸಂಗತಿಯಾಗಿದೆ.

''ತೇರಾ ಏರಿ ಅಂಬರದಾಗೆ
ನೇಸರು ನಗುತಾನೆ
ಮರ ಗಿಡ ತೂಗ್ಯಾವೆ
ಚಿಲಿಪಿಲಿ ಹಕ್ಕಿ ಹಾರ್ಯಾವೆ
ಬೀರ್ಯಾವೇ ಚೆಲುವ ಬೀರ್ಯಾವೇ.. ಬಾ..
ನೋಡಿ ನಲಿಯೋಣ ತಮ್ಮ
ನಾವ್ ಹಾಡಿ ಕುಣಿಯೋಣ ತಮ್ಮ''

(ಪರಸಂಗದ ಗೆಂಡೆತಿಮ್ಮ - 1978)

1980ರಲ್ಲಿ ತೆರೆಕಂಡ 'ಬಂಗಾರದ ಜಿಂಕೆ' ಚಿತ್ರದ ವಿಜಯಭಾಸ್ಕರ್ ಸಂಗೀತದ ಎಲ್ಲಾ ಹಾಡುಗಳ ರಚನಕಾರ ಡಾ॥ ದೊಡ್ಡರಂಗೇಗೌಡರು. ಅವುಗಳಲ್ಲಿ ಎಸ್.ಪಿ. ಹಾಡಿದ

''ಒಲುಮೆ ಸಿರಿಯ ಕಂಡು
ಬಯಕೆ ಸಿಹಿಯ ಉಂಡು

ಪ್ರೀತಿ ಮಾತಾಡಿದೆ ಬಾಳು ರಂಗಾಗಿದೆ''
(ಬಂಗಾರದ ಜಿಂಕೆ - 1980)

ಮತ್ತೆ ಮತ್ತೆ ಕೇಳುಗರನ್ನು ಕಾಡಿಸಿದ ಗೀತೆಯಾಗಿದೆ. ಆ ವರ್ಷದ ಜನಪ್ರಿಯ ಗೀತೆಯಾಗಿದೆ. ಪ್ರೀತಿಯ ಪರಾಕಾಷ್ಠೆಯನ್ನೂ ಅತ್ಯಂತ ಪ್ರಭಾವೀಶಾಲಿಯಾಗಿ, ಭಾವುಕರಾಗಿ ನವಿರಾಗಿ, ಮಾರ್ದವತೆಯಿಂದ ಸೂಚಿಸಿರುವ ಸಾಹಿತ್ಯವಿಲ್ಲದೆ ತನ್ನ ಪ್ರೀತಿಯನ್ನು ನಲ್ಲೆಗೆ ತಿಳಿಸುವ ನಲ್ಲನ ಪರಿಯಿದೆ. ಪದಮಾಧುರ್ಯವೂ ರಾಗ ಮಾಧುರ್ಯವೂ ಸೊಗಸಾಗಿ ಬಂದಿದೆ. ಪ್ರೀತಿಯೊಂದನ್ನೇ ಸಿಹಿಯಾಗಿ, ಸಿರಿಯಾಗಿ ಪಡೆದ ಕಳೆದ ಕಾಲವನ್ನು ಅವಳಿಗೆ ಮನವರಿಕೆ ಮಾಡಲು ಯತ್ನಿಸುವ ನಲ್ಲನ ಕಾರ್ಯವನ್ನಿಲ್ಲಿ ಕಾಣಬಹುದಾಗಿದೆ. ಒಂದು ಸುಂದರ ಪ್ರೇಮಗೀತೆಯಾಗಿದೆ. ಜನ್ಮಾಂತರ ಸಂಬಂಧ ಈ ಪ್ರೀತಿಯೆಂಬುದು ಎಂಬ ಭಾವವಿಲ್ಲಿದೆ. ಕಥಾ ಸನ್ನಿವೇಶಕ್ಕೆ ಬಹಳ ಸರಿಯಾಗಿಯೇ ಈ ಸಾಹಿತ್ಯ ದೊಡ್ಡರಂಗೇಗೌಡರಿಂದ ಮೂಡಿ ಬಂದಿದ್ದು ಶ್ಲಾಘನೀಯವಾಗಿದೆ.

ಮುಂದೆ 1981ರಲ್ಲಿ ಅಶ್ವಥ್-ವೈದಿ ಸಂಗೀತವಿರುವ ''ಆಲೆಮನೆ'' ಚಿತ್ರದ ಹಾಡುಗಳನ್ನು ಡಾ|| ದೊಡ್ಡರಂಗೇಗೌಡರು ರಚಿಸಿದರು. ಎಸ್.ಪಿ. ಹಾಡಿರುವ

''ನಮ್ಮೂರ ಮಂದಾರ ಹೂವೇ
ನನ್ನೊಲುಮೆ ಬಾಂದಳದ ಚೆಲುವೆ''
(ಆಲೆಮನೆ - 1981)

ಇವತ್ತಿಗೂ ಜನಪ್ರಿಯವಾಗಿದೆ. ಲಿಸನರ್ ರಿಕ್ವೆಸ್ಟ್‌ನ ಮೋಸ್ಟ್ ಡಿಮ್ಯಾಂಡ್ ಸಾಂಗ್ ಆಗಿ ಉಳಿದಿದೆ. ನವೋದಯ ಸಾಹಿತ್ಯದ ಕವಿತೆಯಂತಿರುವ ಈ ಹಾಡು ಅತ್ಯಂತ ಸುಂದರವಾದ, ಶ್ರೇಷ್ಠವಾದ ಪ್ರೇಮಗೀತೆಯಾಗಿದೆ. ಅತ್ಯುತ್ತಮ ಭಾವಗೀತೆಯೂ ಆಗಿರುವ ಈ ಹಾಡಲ್ಲಿ ಪ್ರೀತಿಯ ನಿಜ ಅಭಿವ್ಯಕ್ತಿಯಿದೆ. ಪದಗಳ ಆಕರ್ಷಕ ಶೈಲಿಯಿದೆ. ಇಂಪಾದ ಮಾಧುರ್ಯದ ಮೋಡಿಯಿದೆ. ಈ ಹಾಡು ದೊಡ್ಡರಂಗೇಗೌಡರ ಜನಪ್ರಿಯತೆಯನ್ನು ಮತ್ತಷ್ಟು ಹೆಚ್ಚಿಸಲು ಕಾರಣವೂ ಆಗಿದೆ.

ಆದರೆ ಇದೇ ಚಿತ್ರದ ಮತ್ತೊಂದು ಹಾಡು, ಸ್ವತಃ ಸಂಗೀತ ನಿರ್ದೇಶಕ ಸಿ. ಅಶ್ವಥ್‌ರವರು ಹಾಡಿರುವ ಹಾಡು ದೊಡ್ಡರಂಗೇಗೌಡರ ಚಿತ್ರ ಜೀವನದಲ್ಲೊಂದು ಮೈಲಿಗಲ್ಲಾಗಿ ಉಳಿಯಿತು. ತತ್ವಪದವೇ ಆದ ಈ ಹಾಡು ಎಲ್ಲಾ ಕಾಲಕ್ಕೂ ಸದಾ ಅನ್ವಯಿಸುವಂತಿದೆ.

''ಎಲ್ಲ ಮೇಲುಕೀಳು
ಸುಳ್ಳು ಭೇದ ಭಾವ

ಬಗೆದಾ ಮನುಜ ಕಾಣೋ''

(ಆಲೆಮನೆ - 1981)

ಅತ್ಯಂತ ಕಡಿಮೆ ವಾದ್ಯಸಂಗೀತದ ಅತ್ಯಂತ ಪರಿಣಾಮಕಾರಿ ಸಾಹಿತ್ಯವಿದು. ಈ ಹಾಡಲ್ಲಿ ಸಾಮಾಜಿಕ ವಿಮರ್ಶೆ ಇದೆ. ಮೌಲ್ಯವಿದೆ. ಭಾವೈಕ್ಯತೆಯ ಸಂದೇಶವಿದೆ. ನೀತಿ ಸಾರವಿದೆ. ಕರ್ನಾಟಕ ರಾಜ್ಯ ಸರ್ಕಾರವು ''1981ರ - ವರ್ಷದ ಅತ್ಯುತ್ತಮ ಗೀತರಚನೆಕಾರ ಪ್ರಶಸ್ತಿ''ಯನ್ನು, ಬೆಳ್ಳಿಪದಕವನ್ನು, ಡಾ|| ದೊಡ್ಡರಂಗೇಗೌಡರಿಗೆ ಮೊಟ್ಟಮೊದಲ ಬಾರಿಗೆ ನೀಡಲು ಕಾರಣವಾಗಿರುವುದು ಇದೇ ಹಾಡು. ಇದೇ ಭಾವೈಕ್ಯ ಗೀತೆಯಾಗಿದೆ.

1981ರಲ್ಲಿಯೇ ತೆರೆಕಂಡ ''ಅನುಪಮಾ'' ಚಿತ್ರದ ಎಲ್ಲಾ ಹಾಡುಗಳನ್ನು ರಚಿಸಿದವರು ಡಾ|| ದೊಡ್ಡರಂಗೇಗೌಡರು. ಇದರಲ್ಲೂ

''ಒಲುಮೆ ಪೂಜೆಗೆಂದೆ
ಕರೆಯ ಕೇಳಿ ಬಂದೆ''

(ಅನುಪಮಾ - 1981)

ಹಾಡು ನಮ್ಮ ಮನಸ್ಸು ಸೆಳೆಯುತ್ತದೆ. ಶಾಸ್ತ್ರೀಯ ರಾಗಧಾಟಿ ಇರುವ ಈ ಹಾಡಲ್ಲಿ ಪ್ರೀತಿಯ ಸಂವೇದನೆ; ಸಮರ್ಪಣಾ ಭಾವಶೈಲಿ ಹಿಡಿಸುತ್ತದೆ. ಎಸ್.ಪಿ. ಮತ್ತು ಎಸ್. ಜಾನಕಿ ಹಾಡಿರುವ ತುಂಬಾ ಮಧುರವಾದ ಸಾಹಿತ್ಯ-ಸಂಗೀತವಿರುವ ಯುಗಳ ಗೀತೆಯಾಗಿದೆ. ಇದರ ಜೊತೆಗೇ

''ಬರ್ತಾಳೆ ಕನಸಿನ ರಾಣಿ
ತರ್ತಾಳೆ ಮಿಂಚಿನ ವಾಣಿ''

(ಅನುಪಮಾ - 1981)

ಈ ಹಾಸ್ಯಭರಿತ ಹಾಡು ಕೇಳಲು ತಮಾಷೆಯಾಗಿದೆ. ಸಿ. ಅಶ್ವಥ್ ಮತ್ತು ಸಂಗಡಿಗರು ಹಾಡಿರುವ ಈ ಹಾಡಿನಲ್ಲಿ ಪ್ರೇಮಿಗೆ ಅವನ ಪ್ರಿಯತಮೆಯನ್ನು ಹಾಸ್ಯ ಶೈಲಿಯಲ್ಲಿಯೇ ಸ್ನೇಹಿತರು ವರ್ಣಿಸುವಂತಹ ಸಾಹಿತ್ಯವಿರುವುದು ಕವಿಯ ಹಾಸ್ಯಪ್ರಜ್ಞೆ ತೋರಿಸುತ್ತದೆ. ಮಕ್ಕಳಿಗೂ ಹಿಡಿಸುವ ಗೀತೆಯಾಗಿರುವುದು ಇದರ ವಿಶೇಷ.

ಇವರು ಮಕ್ಕಳಿಗಾಗಿಯೇ ಬರೆದ ಹಾಡು ವಿಜಯಭಾಸ್ಕರ್ ಸಂಗೀತದ 1982ರಲ್ಲಿ ತೆರೆಕಂಡ ''ಸುವರ್ಣ ಸೇತುವೆ'' ಚಿತ್ರದಲ್ಲಿದೆ, ವಾಣಿಜಯರಾಂ ಹಾಡಿದ್ದಾರೆ. ಕಥನಕವನ ಕವಿದು.

"ಮಲ್ನಾಡಿನ್ ಮೂಲೆನಾಗೆ
ಇತ್ತೊಂದು ಸೋಮ್ನಳ್ಳಿ"

(ಸುವರ್ಣ ಸೇತುವೆ - 1982)

ಸೋಮನಹಳ್ಳಿ ಮುದುಕಿಯ ಗರ್ವಭಂಗದ ಜನಪದ ಕತೆಯನ್ನು ಅತ್ಯಂತ ಸೊಗಸಾಗಿ ಹಾಡಿನ ರೂಪದಲ್ಲಿ ಕವಿ ದೊಡ್ಡರಂಗೇಗೌಡರು ರಚಿಸಿರುವುದು ನಮಗೆ ಮುಖ್ಯವಾಗುತ್ತದೆ. ನೀತಿ ಸಂದೇಶವನ್ನೂ ಇಲ್ಲಿ ತಿಳಿಸಿದ್ದಾರೆ. ಮನುಷ್ಯನಿಲ್ಲದಿದ್ದರೂ ಜಗತ್ತು ನಡೆಯುತ್ತದೆ. ಬೆಳಕನ್ನು ಕೊಡುವ ಸೂರ್ಯ, ಚಂದ್ರರಿಗೆ ಯಾವುದೇ ಅಹಂಕಾರವಿಲ್ಲ; ಹಾಗಿದ್ದ ಮೇಲೆ ಮನುಷ್ಯ ಅಹಂಕಾರ ಏಕೆ ಪಡಬೇಕು? ಅಹಂಕಾರ ಅರ್ಥಹೀನವೆಂಬ ವೈಚಾರಿಕತೆ ಇಲ್ಲಿದೆ. ಸರಳವಾದ, ಲಯವಾದ, ಕುಣಿತಕ್ಕೆ ತಕ್ಕುದಾದ ಸಾಹಿತ್ಯ ರಚನೆ ಮತ್ತು ಮಕ್ಕಳ ಮನರಂಜನೆಗೆ ಕಾರಣವಾಗಿ ಇರುವುದು ಈ ಹಾಡಿನ ಮಹತ್ವವಾಗಿದೆ.

1986ರಲ್ಲಿ ತೆರೆಕಂಡ "ಅರುಣರಾಗ" ಚಿತ್ರದ ಹಾಡುಗಳನ್ನು ರಚಿಸಿದವರು ದೊಡ್ಡರಂಗೇಗೌಡರು. ವೀಣಾ ಪರಿಣಿತರಾದ ಎಂ. ರಂಗರಾವ್ ಸಂಗೀತ ನೀಡಿದ್ದಾರೆ. ಇದರಲ್ಲಿ ಜನಮೆಚ್ಚುಗೆ ಪಡೆದು 'ಚಿತ್ರರಸಿಕರ ಪ್ರಶಸ್ತಿ'ಯನ್ನು ಕವಿಗೆ ತಂದ ಹಾಡು 'ನಾನೊಂದು ತೀರ' ಕೆ.ಜೆ. ಯೇಸುದಾಸ್ ಮತ್ತು ಚಿತ್ರ ಹಾಡಿದ್ದಾರೆ. ಶ್ರೇಷ್ಠ ವಿರಹ ಗೀತೆಯಾಗಿದೆ.

"ನಾನೊಂದು ತೀರ
ನೀನೊಂದು ತೀರ
ಮನಸು ಮನಸು ದೂರ
ಪ್ರೀತಿ ಹೃದಯ ಭಾರ"

(ಅರುಣರಾಗ - 1986)

ತುಂಬಾ ಸರಳ ಪದಗಳಲ್ಲಿಯೇ ಮನಸಿನ ಮೇಲೆ ಪರಿಣಾಮ ಬೀರುವಂತಹ ಸಾಹಿತ್ಯ ರಚಿಸಿರುವ ಡಾ॥ ದೊಡ್ಡರಂಗೇಗೌಡರ ಪ್ರತಿಭೆಯನ್ನು ಕಾಣಲು ಇದು ನಮಗೆ ಉತ್ತಮ ಉದಾಹರಣೆಯಾಗಿದೆ. ಇಂದಿಗೂ ಜನಪ್ರಿಯವಾಗಿ ಉಳಿದ ಹಾಡಿದು. ನಾಯಕ-ನಾಯಕಿಯ ಅಗಲಿಕೆಯನ್ನು ಪ್ರೀತಿಯ ಅಂತರವನ್ನು, ಒಡೆದ ಮನಸ್ಸಿನ ಭಾವವನ್ನು ದೂರ ದೂರದ ತೀರಗಳಿಗೆ ಹೋಲಿಸಿ ಹೇಳಿದ ದೊಡ್ಡರಂಗೇಗೌಡರ ಪರಿ ಇಷ್ಟವಾಗುತ್ತದೆ. ಕನ್ನಡದ ಪ್ರಪ್ರಥಮ 70 ಎಂ.ಎಂ ಚಿತ್ರವಾದ "ಶರವೇಗದ ಸರದಾರ" ಚಿತ್ರದ ಎಲ್ಲಾ ಗೀತೆಗಳನ್ನು ಬರೆದವರು ಡಾ॥ ದೊಡ್ಡರಂಗೇಗೌಡರು. ಸಂಗೀತ ಎಸ್.ಪಿ. ವೆಂಕಟೇಶ್ (ಸಂಗೀತ ರಾಜ) ಅವರದು. ಈ ಚಿತ್ರದ ಹಾಡುಗಳಲ್ಲಿ ವಿಶೇಷವಾಗಿ ನಮ್ಮ ಗಮನ ಸೆಳೆದು ಮೆಚ್ಚುಗೆಗೆ ಪಾತ್ರವಾಗಿರುವುದು ಹೊಯ್ಸಳ

ಸಾಮ್ರಾಜ್ಯ ನಿರ್ಮಾಣದ ವಸ್ತುವಿನ ಹಾಡು. ತುಂಬಾ ಸುದೀರ್ಘವಾದ, ಕಥನ ಕವನವಾದ ಈ ಹಾಡನ್ನು ಎಸ್.ಪಿ. ಬಾಲಸುಬ್ರಹ್ಮಣ್ಯಂ ಹಾಡಿದ್ದಾರೆ.

"ಕನ್ನಡ ನಾಡಿನ ರನ್ನದ ರತುನ
ಕೇಳ್ರೋ ಕತೆಯನ್ನ-ನಾ ಹೇಳ್ರೋ ಕತೆಯನ್ನ
ಹೆಮ್ಮೆಯ ಪಡೆದ ಹೊಯ್ಸಳ ವಂಶ
ಹುಟ್ಟಿದ ಕತೆಯನ್ನ - ನಾಡನು
ಕಟ್ಟಿದ ಕತೆಯನ್ನ"

(ಶರವೇಗದ ಸರದಾರ - 1988)

ನಮ್ಮ ಭಾರತದ ಭವ್ಯ ಸಂಸ್ಕೃತಿಯನ್ನು, ಹೊಯ್ಸಳ ಸಾಮ್ರಾಜ್ಯ ಸ್ಥಾಪನೆಯ ಚರಿತ್ರೆಯ ವಿವರವನ್ನು, ಕನ್ನಡಿಗರ ಶೌರ್ಯ, ಸಾಹಸ, ಕರ್ನಾಟಕದ ಶಿಲ್ಪ ಕಲೆ ಸಾಹಿತ್ಯಕ್ಕೆ ಹೊಯ್ಸಳರು ನೀಡಿದ ಕೊಡುಗೆಯ ಮಹತ್ವವನ್ನು ಅತ್ಯಂತ ಸುಂದರವಾಗಿ ಹಾಡಿನ ರೂಪದಲ್ಲಿ ಡಾ॥ ದೊಡ್ಡರಂಗೇಗೌಡರು ರಚಿಸಿರುವುದು ವಿಶೇಷವಾಗಿದೆ. ಲಯಬದ್ಧವಾದ ಸಾಹಿತ್ಯ ಶೈಲಿಯ ಸೊಗಸು ನಮ್ಮ ಗಮನ ಸೆಳೆಯುತ್ತದೆ! ಜನಪ್ರಿಯ ಗೀತೆಯೂ ಆಗಿದೆ.

1990ರಲ್ಲಿ ಬಿಡುಗಡೆಯಾದ "ಅಶ್ವಮೇಧ" ಚಿತ್ರದಲ್ಲಿ ಡಾ॥ ದೊಡ್ಡರಂಗೇಗೌಡರ ಗೀತರಚನೆ, ಸಂಗೀತ ರಾಜರ ಸಂಗೀತವಿದೆ. ಇಡೀ ಚಿತ್ರದ ಯಶಸ್ಸು "ಅಶ್ವಮೇಧ ಶೀರ್ಷಿಕೆ ಗೀತೆ"ಯಿಂದಲೇ ಆದದ್ದು ಗಮನಿಸಬೇಕಾದ ಅಂಶ. ಡಾ॥ ರಾಜ್‌ಕುಮಾರ್ ಮೊದಲ ಬಾರಿಗೆ ಕವಿ ದೊಡ್ಡರಂಗೇಗೌಡರು ರಚಿಸಿದ ಈ ಚಿತ್ರಗೀತೆಯನ್ನು ಹಾಡಿರುವುದು ಮಹತ್ವವಾಗುತ್ತದೆ.

"ಹೃದಯ ಸಮುದ್ರ ಕಲಕಿ
ಹೊತ್ತಿದೆ ದ್ವೇಷದ ಬೆಂಕಿ"

(ಅಶ್ವಮೇಧ - 1990)

ಮೌಲ್ಯಯುಕ್ತವಾದ ಸಾಹಿತ್ಯರಚನೆ ಈ ಹಾಡಲ್ಲಿದೆ. ತನ್ನ ಒಂದು ಕುದುರೆಯು ತೀರಿಕೊಂಡಾಗ ಅದಕ್ಕೆ ಕಾರಣಕರ್ತರಾದವರ ದಮನ ಮಾಡಲು ನಾಯಕನು ದುಃಖಭರಿತನಾಗಿ, ರೋಷಾವೇಶಗಳಿಂದ ಪ್ರತಿಜ್ಞೆಮಾಡುವ ಸನ್ನಿವೇಶದ ವಿವರ ಈ ಹಾಡಲ್ಲಿದೆ. ನಾಯಕನ ಪ್ರೀತಿ ಪಾತ್ರವಾದ ಕುದುರೆಯನ್ನು ವಿಶಿಷ್ಟವಾದ "ಅಶ್ವಮೇಧ ಯಾಗದ ಕುದುರೆ"ಯ ದೃಷ್ಟಿಯಿಂದ ನೋಡುವ ರೀತಿಯು ವರ್ಣನೆ ಸತ್ವಭರಿತವಾಗಿದೆ. ನಮ್ಮ ಭಾರತೀಯ ಪುರಾತನ ಪರಂಪರೆಯಲ್ಲಿನ ಅಶ್ವಮೇಧದ ಆಚರಣೆಯ ವಿವರಗಳನ್ನು ಹಾಡಿನಲ್ಲಿ ತಿಳಿಸಿರುವ ಡಾ॥ ದೊಡ್ಡರಂಗೇಗೌಡರ ರೀತಿ ತುಂಬಾ ಪರಿಣಾಮಕಾರಿಯಾಗಿದೆ. ಮತ್ತೆ ಮತ್ತೆ ಕೇಳುತ್ತಲೇ

ಇರಬೇಕು ಎನಿಸುವ ಹಾಡಾಗಿ, ಅತೀ ಜನಪ್ರಿಯತೆ ಪಡೆದ ಹಾಡಾಗಿದೆ. ದೊಡ್ಡರಂಗೇಗೌಡರಿಗೂ ಹೆಸರು ತಂದ ಹಾಡು ಇದಾಗಿದೆ.

1990ರಲ್ಲಿಯೇ ತೆರೆಗೆ ಬಂದ "ಗಣೇಶನ ಮದುವೆ" ಚಿತ್ರಕ್ಕೆ ರಾಜನ್-ನಾಗೇಂದ್ರರ ಸಂಗೀತವಿರುವ ಈ ಸಿನಿಮಾಕ್ಕೆ ದೊಡ್ಡರಂಗೇಗೌಡರು ಹಾಡೊಂದನ್ನು ಬರೆದರು. ಎಸ್. ಜಾನಕಿ ಹಾಡಿದ ಈ ಗೀತೆಗೆ ಕರ್ನಾಟಕ ರಾಜ್ಯ ಸರ್ಕಾರವು ಎರಡನೇ ಬಾರಿಗೆ ಗೌಡರಿಗೆ ಅತ್ಯುತ್ತಮ ಗೀತರಚನೆಕಾರ ಪ್ರಶಸ್ತಿ ನೀಡಿದೆ.

"ಅನುರಾಗ ತೋಟದಲ್ಲಿ
ಹೂವಂತೆ ನಾನು"
(ಗಣೇಶನ ಮದುವೆ - 1990)

ಅತ್ಯುತ್ತಮವಾದ ಪ್ರೇಮಗೀತೆಯಿದು. ಹೃದಯಾಂತರಾಳದ ಒಲವನ್ನು ಅಭಿವ್ಯಕ್ತಿಸುವ ನಲ್ಲೆಯ ಭಾವ ವೈಖರಿಯ ವರ್ಣನೆ ಈ ಹಾಡಲ್ಲಿದೆ. ವಿಪ್ರಲಂಭ ಶೃಂಗಾರದ ಅಬಿಸಾರಿಕೆಯ ಸುಂದರ ಗೀತೆ ಇದಾಗಿದೆ. ಪ್ರಕೃತಿಯಲ್ಲಿರುವ ಅವಿನಾಭಾವ ಸಂಬಂಧಗಳಾದ ಸೂರ್ಯ-ತಾವರೆ, ವಸಂತಮಾಸ-ಕೋಗಿಲೆ, ಬಳ್ಳಿ-ಮರ, ಹಕ್ಕಿಗಳ (ಜೋಡಿ) ಪ್ರಣಯದ ಕಾರ್ಯ... ಇವುಗಳನ್ನು ವೀಕ್ಷಿಸುತ್ತ ನಲ್ಲನ ಪ್ರತೀಕ್ಷೆಯಲ್ಲಿರುವ ನಲ್ಲೆಯ ಭಾವನೆಗಳನ್ನು ಮನ ಮುಟ್ಟುವಂತೆ ರಚಿಸಿದ ದೊಡ್ಡರಂಗೇಗೌಡರ ಸಾಹಿತ್ಯ ಮೆಚ್ಚುಗೆಯಾಗುತ್ತದೆ. 1990ರಲ್ಲಿಯೇ ತೆರೆಕಂಡ "ಬೆಳ್ಳಿಕಾಲುಂಗುರ" ಚಿತ್ರಕ್ಕೆ ಡಾ॥ ದೊಡ್ಡರಂಗೇಗೌಡರು ಹಂಸಲೇಖ ಸಂಗೀತ ನಿರ್ದೇಶನದಲ್ಲಿ ಕನ್ನಡಿಗರೆಂದಿಗೂ ನೆನಪಿಸಿಕೊಳ್ಳಲೇಬೇಕಾದ "ಕನ್ನಡದ ಗೀತೆ"ಯನ್ನು ರಚಿಸಿದ್ದಾರೆ. ಕನ್ನಡಿಗರ ಅಭಿಮಾನದ ಹಾಡಾಗಿ ಇಂದಿಗೂ ಜನಪ್ರಿಯವಾದ ಈ ಹಾಡನ್ನು ಹಾಡಿದ್ದಾರೆ ಎಸ್.ಪಿ. ಬಾಲಸುಬ್ರಹ್ಮಣ್ಯಂ ಮತ್ತು ಚಿತ್ರಾ.

"ಕೇಳಿಸದೆ ಕಲ್ಲು ಕಲ್ಲಿನಲಿ ಕನ್ನಡ ನುಡಿ?
ಕಾಣಿಸದೆ ಹೊನ್ನ ಚರಿತೆಯಲಿ ಹಂಪೆಯ ಗುಡಿ?
(ಬೆಳ್ಳಿಕಾಲುಂಗುರ - 1990)

ಹಾಳು ಹಂಪೆಯನ್ನು ಸಮರ್ಥವಾಗಿ ಚಿತ್ರಿಸುವ ಉದ್ದೇಶದಿಂದ ಡಾ॥ ದೊಡ್ಡರಂಗೇಗೌಡರ ಅಂತರಾಳದಿಂದ ಹೊಮ್ಮಿಬಂದ ಅತ್ಯುತ್ತಮ ಪ್ರಾಮಾಣಿಕ ನುಡಿಗಳಿವು. ಕನ್ನಡಾಭಿಮಾನವನ್ನು ಸುವರ್ಣ ಸಾಮ್ರಾಜ್ಯವೆಂದು ಚರಿತ್ರೆಯಲ್ಲಿ ಹೆಸರಾದ ವಿಜಯನಗರ ಸಾಮ್ರಾಜ್ಯದ ಅಸ್ತಿತ್ವವಾದ ಹಂಪೆಯ ಕಲೆಯ ಸಿರಿ ವೈಭವವನ್ನು, ಅಲ್ಲಿಯ ಶಿಲ್ಪ ಕಲಾ ಜೀವಂತಿಕೆಯನ್ನು ಹಾಗೆಯೇ ಹಂಪೆಯಲ್ಲಿನ ಹೆಣ್ಣೊಬ್ಬಳು ತನ್ನ ಪ್ರೀತಿಯನ್ನು ನಲ್ಲನಿಗೆ ಸಾರಿ ಹೇಳುವ ಭಾವವನ್ನು ಕವಿ

ದೊಡ್ಡರಂಗೇಗೌಡರು ತುಂಬಾ ಸುಂದರವಾಗಿ ಈ ಹಾಡಲ್ಲಿ ವರ್ಣಿಸಿದ್ದಾರೆ. ಚಲನಚಿತ್ರದಲ್ಲಿ ಈ ಹಾಡು ಎರಡು ಬಾರಿ ಬಳಕೆಯಾಗುತ್ತದೆ. ಮತ್ತೆ ಮತ್ತೆ ಕೇಳಲು ಮಧುರವಾಗಿದೆ. 1990ರಲ್ಲಿಯೇ ಬಿಡುಗಡೆಯಾದ ''ಕೃಷ್ಣರುಕ್ಮಿಣಿ'' ಚಿತ್ರಕ್ಕಾಗಿ ಎರಡು ಹಾಡುಗಳನ್ನು ಬರೆದರು. ಚಿತ್ರಕ್ಕೆ ಕೆ.ವಿ. ಮಹಾದೇವನ್ ಸಂಗೀತ ನೀಡಿದ್ದಾರೆ. ದೊಡ್ಡರಂಗೇಗೌಡರ ಎರಡು ಗೀತೆಗಳಲ್ಲಿ ತುಂಬಾ ಮನಮೋಹಕವಾದ ಪ್ರೇಮಗೀತೆ. ಎಸ್.ಪಿ. ಬಾಲಸುಬ್ರಹ್ಮಣ್ಯಂ ವಾಣಿಜಯರಾಂ ಹಾಡಿರುವ

''ನಾ ಕಂಡೆ ನಿನ್ನ ಮಧುರ ಮಧುರ ಘಳಿಗೆಯಲಿ
ನೀ ತಂದೆ ಲಾಸ್ಯ ಪಲುಕು ಪಲುಕು ಹೆಜ್ಜೆಯಲಿ''
(ಕೃಷ್ಣರುಕ್ಮಿಣಿ - 1990)

ಹಾಡು ನಮ್ಮ ಗಮನ ಸೆಳೆಯುತ್ತದೆ. ಮೋಹನರಾಗದ ಸ್ವರಪ್ರಸ್ತಾರಕ್ಕೆ ಲಯಕ್ಕೆ ಶಾಸ್ತ್ರೀಯ ದಾಟಿಗೆ ಅತ್ಯುತ್ತಮ ಪದಗಳೊಂದಿಗೆ ಮರೆಯಲಾಗದ ಸುಂದರ ಪ್ರೇಮಗೀತೆಯನ್ನು ನಮಗೆ ರಚಿಸಿಕೊಟ್ಟಿದ್ದಾರೆ ಡಾ|| ದೊಡ್ಡರಂಗೇಗೌಡರು. ನಲ್ಲ-ನಲ್ಲೆಯರು ಪರಸ್ಪರ ತಮ್ಮ ಪ್ರೇಮವನ್ನು ಒಬ್ಬರಿಗೊಬ್ಬರಿಗೆ ತಿಳಿಸುತ್ತಿರುವ, ಆಕರ್ಷಿತರಾಗಲು ಕಾರಣ ಕೊಟ್ಟಿರುವ ವಿವರಗಳು ವಿಶೇಷವಾಗಿವೆ.

1995ರಲ್ಲಿ ತೆರೆಕಂಡ ''ಕಾವ್ಯ'' ಚಿತ್ರವು ಅಷ್ಟು ಯಶಸ್ವಿಯಾಗದಿದ್ದರೂ ಅದರ ಒಂದು ಗೀತೆ ಸೂಪರ್‌ಹಿಟ್‌ಆಗಿ ಜನಮನ ಸೆಳೆಯಿತು. ಅದುವೇ ಎಸ್.ಪಿ. ಬಾಲಸುಬ್ರಹ್ಮಣ್ಯಂ ಹಾಡಿದ-ಹಾಡು

''ವಂದನೆ ವಂದನೆ
ಸಾವಿರ ವಂದನೆ
ಸಾಧನೆ ತೋರಿದ ಜಾಣೆಗೆ''
(ಕಾವ್ಯ - 1995)

ಇದರ ರಚನೆಕಾರರು ಡಾ|| ದೊಡ್ಡರಂಗೇಗೌಡ. ಪ್ರೇಮಿಯು ತಾನು ಮೆಚ್ಚಿದ ಪ್ರಿಯತಮೆ ಮಾಡಿದ ಸಾಧನೆಯನ್ನು ಅಭಿನಂದಿಸುವ ಭಾವನಾತ್ಮಕ ಶೈಲಿ ಈ ಹಾಡಲ್ಲಿದೆ. ಅದರೊಂದಿಗೆ ತನ್ನ ಪ್ರೀತಿಯನ್ನು ನಿವೇದಿಸಿಕೊಂಡಿರುವ ರೀತಿಯಿದೆ. ಸಾಧುಕೋಕಿಲ ಸಂಗೀತ ನೀಡಿರುವ ಈ ಹಾಡು ಡಾ|| ದೊಡ್ಡರಂಗೇಗೌಡರಿಗೆ ಕರ್ನಾಟಕ ರಾಜ್ಯಸರ್ಕಾರದಿಂದ ಮೂರನೇ ಬಾರಿಗೆ ಅತ್ಯುತ್ತಮ ಗೀತರಚನೆಕಾರ ಪ್ರಶಸ್ತಿ ಪಡೆಯಲು ಕಾರಣವಾಯಿತು. ಪ್ರೇಮಗೀತೆಯಾಗಿ, ಭಾವಗೀತೆಯೂ ಆಗಿ ಬಹುಕಾಲ ನೆನಪಲ್ಲಿ ಉಳಿಯುವ ಮಧುರವಾದ, ಇಂಪಾದ ಗೀತೆ

ಇದಾಗಿದೆ. 1996ರಲ್ಲಿ ಬಿಡುಗಡೆಯಾದ ಇಳಯರಾಜ ಸಂಗೀತ ನಿರ್ದೇಶನದ ಎರಡು ಚಿತ್ರಗಳಾದ ''ಶಿವಸೈನ್ಯ'' ಹಾಗೂ ''ನಮ್ಮೂರ ಮಂದಾರ ಹೂವೇ''ಗಳಲ್ಲಿ ಡಾ॥ ದೊಡ್ಡರಂಗೇಗೌಡರು ಒಂದೊಂದು ಗೀತೆ ರಚಿಸಿದ್ದಾರೆ. ಈ ಎರಡೂ ಗೀತೆಗಳು ಒಂದು ರೀತಿಯ ವಿಶೇಷತೆ ಪಡೆದಿವೆ. ಹೇಗೆಂದರೆ

(1) ನಮ್ಮ ದೇಶದ ಪ್ರಮುಖ ಮಹಾನ್ ಸಂಗೀತ ನಿರ್ದೇಶಕರಲ್ಲಿ ಒಬ್ಬರಾದ ಇಳಯರಾಜ ವೈವಿಧ್ಯತೆಗೆ ಹೆಸರಾದವರು. ಅವರ ಸಂಗೀತದ ಯಾವುದೇ, ತಮಿಳು, ತೆಲುಗು, ಮಲೆಯಾಳಂ, ಕನ್ನಡ, ಹಿಂದೀ ಭಾಷೆಗಳ ಹಾಡುಗಳನ್ನು ಕೇಳಿದಾಗ ಎಲ್ಲವೂ ವಿಭಿನ್ನವಾಗಿಯೇ ಇವೆ. ಒಟ್ಟಿನಲ್ಲಿ ಸದಾ ಹೊಸತಿನ ಪ್ರಯೋಗಶೀಲರಾದ ಅವರು ''ಶಿವಸೈನ್ಯ'' ಚಿತ್ರಕ್ಕೆ 150ಜನ ಸಮೂಹ ಗಾಯಕ-ಗಾಯಕಿಯರನ್ನು ಸೇರಿಸಿ ವಿಶಿಷ್ಟವಾದ ಸಮೂಹಗೀತೆ ಹಾಡಿಸಿದ್ದಾರೆ. ಚಿತ್ರದ ಶೀರ್ಷಿಕೆಯ ಗೀತೆಯಾಗಿಯೂ ಇದು ಮೂಡಿಬಂದಿದೆ. ಬಹಳ ಪರಿಣಾಮಕಾರಿಯಾಗಿ ಬಂದ ಈ ಗೀತೆಯ ರಚನೆ ಮಾಡಿದವರು ಡಾ॥ ದೊಡ್ಡರಂಗೇಗೌಡ.

''ಯುವ ಕ್ರಾಂತಿಯ ಮಾಡಲು ಬರುತಿದೆ
ಸೈನ್ಯವು... ಶಿವಸೈನ್ಯವು...''
(ಶಿವಸೈನ್ಯ - 1996)

ನಮ್ಮ ದೇಶದ ವಾಸ್ತವ ಸ್ಥಿತಿಯ ವಿಶ್ಲೇಷಣೆಯನ್ನೇ ಮಾಡಿರುವುದು ಈ ಗೀತರಚನೆಯ ವಿಶಿಷ್ಟತೆಯಾಗಿದೆ. ವೈಚಾರಿಕತೆಯನ್ನು ನಾವಿಲ್ಲಿ ಗಮನಿಸಬಹುದಾಗಿದೆ.

(2) 'ಆಲೆಮನೆ' ಚಿತ್ರದ ದೊಡ್ಡರಂಗೇಗೌಡರ ಗೀತೆಯಾದ ''ನಮ್ಮೂರ ಮಂದಾರ ಹೂವೆ'' ಹಾಡನ್ನು ಮೆಚ್ಚಿದ ಕೋಟ್ಯಾಂತರ ಶ್ರೋತೃವರ್ಗದಲ್ಲಿ ನಿರ್ದೇಶಕ ಸುನಿಲ್ ಕುಮಾರ್ ದೇಸಾಯಿಯೂ ಒಬ್ಬರು. ದೊಡ್ಡರಂಗೇಗೌಡರ ಅಭಿಮಾನಿಗಳಲ್ಲಿ ಒಬ್ಬರಾದ ದೇಸಾಯಿ 1996ರ ತಮ್ಮ ಹೊಸ ಚಿತ್ರಕ್ಕೆ ಈ ಹಾಡಿನ ಮೊದಲ ಸಾಲನ್ನೇ ಶೀರ್ಷಿಕೆಯಾಗಿ ಇಟ್ಟರು. ಕನ್ನಡ ಸಿನಿಮಾಕ್ಕೆ ಹಾಡುಗಳ ಸಾಲನ್ನು ಟೈಟಲ್ ಆಗಿಕೊಡುವ ಒಂದು ಟ್ರೆಂಡ್ ಹೀಗೆ ಆರಂಭವಾಯಿತು.

''ನಮ್ಮೂರ ಮಂದಾರ ಹೂವೇ'' ಚಿತ್ರಕ್ಕಾಗಿ ಡಾ॥ ದೊಡ್ಡರಂಗೇಗೌಡರು ಬರೆದ ಪ್ರೇಮಗೀತೆ ಯಶಸ್ವಿಯೂ ಆಗಿದೆ. ಎಸ್.ಪಿ. ಬಾಲಸುಬ್ರಹ್ಮಣ್ಯಂ-ಚಿತ್ರಾ ಹಾಗೂ ಸಂಗಡಿಗರು ಹಾಡಿರುವ ಈ ಹಾಡು ಕೇಳಲು ಇಂಪಾಗಿದೆ. ಸಾಹಿತ್ಯವು ಸಂಪಾಗಿದೆ.

''ಮನದಾಸೆ ಹಕ್ಕಿಯಾಗಿ
ಮುಗಿಲಾಗೆ ತೇಲಿ ತೇಲಿ

ಬನದಾಗೆ ಸುತ್ತಿ ಸುಳಿದು
ಬಯಲಾಗೆ ಜೀಕಿ ಜೀಕಿ''
(ನಮ್ಮೂರ ಮಂದಾರ ಹೂವೆ - 1996)

ಯುಗಳ ಪ್ರೇಮಗೀತೆಯಾಗಿರುವ ಈ ಹಾಡಿನಲ್ಲಿ ಪ್ರೇಮವನ್ನು ಪ್ರಕೃತಿಯೊಂದಿಗೆ ಸಂಚಯಿಸಿ ತಿಳಿಸುವ ವಿಧಾನ ಮೆಚ್ಚುಗೆಯಾಗುತ್ತದೆ.

1997ರಲ್ಲಿ ಬಿಡುಗಡೆಯಾದ ಟಿ.ಎಸ್. ನಾಗಾಭರಣ ನಿರ್ದೇಶಿಸಿದ 'ಜನುಮದ ಜೋಡಿ' ಚಿತ್ರಕ್ಕೆ ಡಾ॥ ದೊಡ್ಡರಂಗೇಗೌಡರು ಎರಡು ಗೀತೆಗಳನ್ನು ಬರೆದಿದ್ದಾರೆ. ಈ ಗೀತೆಗಳೆರಡು ವಿಶೇಷವಾದ ಮೌಲಿಕತೆ ಪಡೆದಿವೆ. ವಿ. ಮನೋಹರ್ ಸಂಗೀತ ನೀಡಿದ್ದಾರೆ. ಒಂದು ದೇವರ ಉತ್ಸವದ ಗೀತೆಯಾದರೆ, ಇನ್ನೊಂದು ಭಕ್ತಿ ಮತ್ತು ಪ್ರೀತಿಗಳೆರಡನ್ನೂ ಒಳಗೊಂಡದ್ದು.

''ಆರತಿ ಅಣ್ಣಮ್ಮಂಗೆ
ಆರತಿ ಮಾರಮ್ಮಂಗೆ
ಹೊಂಬಾಳೆ ಕಳಸನ್ನೆಲ್ಲಾ ಹೊತ್ತು ತನ್ನಿರೋ''
(ಜನುಮದ ಜೋಡಿ - 1997)

ಎಂಬ ಹಾಡು. ಪ್ರಧಾನವಾಗಿ ದೇವಿ ಅಣ್ಣಮ್ಮತಾಯಿಯನ್ನು, ದಂಡಿನ ಮಾರಮ್ಮ ತಾಯಿಯನ್ನು ಸ್ತುತಿಸುವ ಈ ಹಾಡಿನಲ್ಲಿ ದೇವಿ ಉತ್ಸವದ ಆಚರಣೆಯ ವಿವರಗಳಿವೆ. ಹಳ್ಳಿಯಲ್ಲಿ ನಡೆಯುವ ದೇವತಾರಾಧನೆಯನ್ನು (ಗ್ರಾಮ್ಯ) ದೇಸೀ ಶೈಲಿಯಲ್ಲಿಯೇ ದೊಡ್ಡರಂಗೇಗೌಡರು ವರ್ಣಿಸಿರುವ ರೀತಿ ಮೆಚ್ಚುಗೆಗೆ ಕಾರಣವಾಗುತ್ತದೆ. ತುಮಕೂರು ಜಿಲ್ಲೆಯ ಜನಪದ ಸಂಸ್ಕೃತಿಯ ಭಕ್ತಿ, ಹರಕೆ, ನಂಬಿಕೆ, ಆಚರಣೆಗಳ ಪ್ರಭಾವ ಈ ಹಾಡಲ್ಲಿ ಗೋಚರಿಸುತ್ತದೆ. ಗ್ರಾಮೀಣ ವಾದ್ಯಗಳನ್ನೆ ಹಿನ್ನೆಲೆ ಸಂಗೀತಕ್ಕೆ ಬಳಸಿರುವುದರಿಂದ ಮತ್ತೆ ಮತ್ತೆ ಈ ಹಾಡನ್ನು ಕೇಳಲು ಇಷ್ಟವಾಗುತ್ತದೆ. ಸಾಹಿತ್ಯ ಮತ್ತು ಸಂಗೀತದಲ್ಲಿ ಮುಖ್ಯವಾಗಿ ಶುದ್ಧ ಭಕ್ತಿಗೀತೆಯಾಗಿದೆ.

(2) ಎಲ್.ಎನ್. ಶಾಸ್ತ್ರಿ ಮತ್ತು ಸಂಗಡಿಗರು ಹಾಡಿರುವ ದೊಡ್ಡರಂಗೇಗೌಡರು ಬರೆದ ಮನೋಹರ್ ಸಂಗೀತದ ಹಾಡು

''ಕೋಲುಮಂಡೆ ಜಂಗುಮದೇವರು
ಕ್ವಾರಣ್ಯಕ್ಕೆ ದಯಮಾಡವ್ರೇ.....
ಶುಭವಾಗುತ್ತೈತಮ್ಮೋ.. ಶುಭವಾಗುತ್ತೈತಮ್ಮೋ'' ಹಾಡು.
(ಜನುಮದ ಜೋಡಿ - 1997)

ಆ ವರ್ಷದ ತುಂಬಾ ಜನಪ್ರಿಯತೆ ಪಡೆದ ಹಾಡಿದು. ಜನರನ್ನು ಹುಚ್ಚೆಬ್ಬಿಸಿ ಕುಣಿಸಿದ ಹಾಡಿದು. ಗೀತೆಯನ್ನು ಕೇಳಿ ಆಸ್ವಾದಿಸಿ ಮತ್ತೆ ಮತ್ತೆ ಜನಮನ ಸಂತೋಷದಿಂದ ನಲಿದ ಹಾಡಿದು. ''ಜನುಮದ ಜೋಡಿ'' ಚಿತ್ರದ ಪ್ರಚಂಡ ದಾಖಲೆಯ ಯಶಸ್ಸಿಗೆ ಮೂಲ ಕಾರಣಾಧಾರವಾದ ಹಾಡಿದು. ಡಾ॥ ದೊಡ್ಡರಂಗೇಗೌಡ ಅವರಿಗೆ ಅಭೂತಪೂರ್ವ ಯಶಸ್ಸನ್ನು ಕೊಟ್ಟ ಹಾಡಿದು. ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲರ ಬಾಯಲ್ಲೂ ಗುನುಗುಡುವಂಥ ಜಾನಪದೀಯ ಶೈಲಿಯಲ್ಲಿ ಈ ಸಾಹಿತ್ಯ ರಚಿಸಿದ ದೊಡ್ಡರಂಗೇಗೌಡರು ಮೋಡಿಯನ್ನೇ ಮಾಡಿದ್ದಾರೆ. ಸರಳವಾದ ಹಳ್ಳಿಯ ಧಾಟಿಯಲ್ಲಿ ಪ್ರಿಯನು ತನ್ನ ಪ್ರಿಯೆಗೆ ಪ್ರೀತಿಯನ್ನು ಅಭಿವ್ಯಕ್ತಿಸುವ ಪ್ರೇಮಗೀತೆಯಾಗಿಯೂ, ನೀಲಗಾರರ ಕಂಸಾಳೆ ಪದಗಳೊಂದಿಗಿನ ಮಾದೇಶ್ವರನನ್ನು ಸ್ತುತಿಸಿದ ಭಕ್ತಿಗೀತೆಯಾಗಿಯೂ ಬರೆದ ರೀತಿ ಮೆಚ್ಚುಗೆಗೆ ಪಾತ್ರವಾಗುತ್ತದೆ. ಒಂದು ರೀತಿಯ ಹೊಸತನ, ಉತ್ಸಾಹದ ಭಾವಗಳು ಹಾಡಿನಲ್ಲಿ ಕಾಣುತ್ತದೆ. ಇಡೀ ಕರ್ನಾಟಕದಾದ್ಯಂತ ಹಲವು ಚಿತ್ರಮಂದಿರಗಳಲ್ಲಿ ಪ್ರೇಕ್ಷಕರು ಎರಡು-ಮೂರು ಬಾರಿ ಈ ಹಾಡನ್ನು ಇಷ್ಟಪಟ್ಟು ಒತ್ತಾಯಿಸಿ ತೆರೆಯ ಮೇಲೆ ಮರುಪ್ರದರ್ಶನ ಆಗುವಂತೆ ಮಾಡಿ ನೋಡಿ ಕುಣಿದದ್ದು ದಾಖಲೆಯಾದ ಘಟನೆಯೇ. 1997ರಲ್ಲಿ ಡಾ॥ ದೊಡ್ಡರಂಗೇಗೌಡರಿಗೆ ಕರ್ನಾಟಕ ರಾಜ್ಯ ಸರ್ಕಾರದಿಂದ ನಾಲ್ಕನೇ ಬಾರಿಗೆ ಈ ಹಾಡಿನ ರಚನೆಗಾಗಿ ವಿಶೇಷ ಗೀತರಚನೆಕಾರ ಪ್ರಶಸ್ತಿ-ಪದಕ ದೊರಕಿತು. ಇಂದಿಗೂ ಸೂಪರ್‌ಹಿಟ್ ಆಗಿರುವ ಗೀತೆಯಾಗಿದೆ. ಹೆಚ್ಚು ಮೌಲಿಕವಾದ ಹಾಡಾಗಿದೆ.

2000ನೇ ವರುಷದಲ್ಲಿ ತೆರೆಕಂಡ ಹಂಸಲೇಖ ಸಂಗೀತದ ''ಸ್ಪರ್ಶ'' ಚಿತ್ರದಲ್ಲಿ ಎರಡು ಹಾಡುಗಳನ್ನು ಡಾ॥ ದೊಡ್ಡರಂಗೇಗೌಡರು ಬರೆದಿದ್ದಾರೆ. ಅದರಲ್ಲಿ ನಮಗೆ ವಿಶೇಷವಾಗಿ ಕಾಣಿಸುವುದು, ಸವಾಲ್-ಜವಾಬ್ ಶೈಲಿಯ ಹಾಡು. ಯುಗಳ ಗೀತೆಯಾದ ಹಾಡು ಇದು ಸೊಗಸಾಗಿದೆ.

''ಕನಸಲಿ ಕಾಡುವ ಹುಡುಗಿ ಬಾರೇ''
(ಸ್ಪರ್ಶ - 2000)

ಕೇಳಲು ಮನರಂಜಿಸುತ್ತದೆ. ಸಾಹಿತ್ಯ ರಚನೆಯಲ್ಲಿ ವೈವಿಧ್ಯವಿದೆ ನವೀನತೆಯಿದೆ; ಉಲ್ಲಾಸ ಭಾವಶೈಲಿಯಿದೆ.

ಇನ್ನೂ ತೆರೆಕಾಣಬೇಕಾಗಿರುವ ಹೊಸ ಚಿತ್ರಗಳಾದ ''ರಮ್ಯಚೈತ್ರಕಾಲ'' (ಸಂಗೀತ - ಎಸ್. ಶ್ಯಾಮಸುಂದರ್) ಮತ್ತು ''ತಂದೆಗೆ ತಕ್ಕ ಮಗ'' (ಸಂಗೀತ-ಎಸ್.ಎ. ರಾಜ್‌ಕುಮಾರ್) ಇವುಗಳಲ್ಲಿ ದೊಡ್ಡರಂಗೇಗೌಡರು ಎರಡೆರಡು ಗೀತೆಗಳನ್ನು ರಚಿಸಿದ್ದಾರೆ. ಇವುಗಳಲ್ಲೂ ನಾವು ಗಮನಿಸಬಹುದಾದ ವಿಶೇಷರೀತಿಯ ರಚನೆಗಳಿವೆ.

"ರಮ್ಯಚೈತ್ರಕಾಲ" ಚಿತ್ರದ "ಮೂಡಣ ಮಡಿಲಾಗೆ" ಹಾಡು (ಗಾಯನ ಉದಿತ್ ನಾರಾಯಣ್ ಮತ್ತು ಸಂಗಡಿಗರು) ಮನಸಿಗೆ ಕೇಳಿದಾಗ ಮುದ ಕೊಡುತ್ತದೆ. ಪ್ರಕೃತಿಯನ್ನು ಕುರಿತು ಹಳ್ಳಿಯ ಭಾಷೆ ಶೈಲಿಯಲ್ಲಿ ವರ್ಣಿಸಿರುವ ಸೊಗಸುಗಾರಿಕೆಯನ್ನು ಮತ್ತೊಮ್ಮೆ ದೊಡ್ಡರಂಗೇಗೌಡರು ಮಾಡಿ ಮೆಚ್ಚುಗೆಗೆ ಕಾರಣರಾಗುತ್ತಾರೆ. ಇನ್ನೊಂದು "ಭಲ್ಲೆ ಭಲ್ಲೆ ನಾ ಹಾಡಿ ಕುಣಿಯಭಲ್ಲೆ" ಹಾಡು (ರಾಜೇಶ್ ಕೃಷ್ಣನ್, ಸಂಗೀತಾ ಕಟ್ಟಿ, ಸಂಗಡಿಗರು ಹಾಡಿದ್ದಾರೆ.)ಹಳೇ ಕಾಲದ ಪ್ರೇಮಗೀತೆಯನ್ನು ನೆನಪಿಸುವಂತಹ ಸಾಹಿತ್ಯ ಶೈಲಿ ಪಡೆದಿದೆ. ದೇಸೀಯತೆಯ ಚೆಲುವನ್ನೂ ಪಡೆದಿದೆ. ಪುಟ್ಟ ಮಕ್ಕಳೂ ಕುಣಿದು ಕುಪ್ಪಳಿಸುವಂತಹ ಪದ ಮೋಡಿಯನ್ನೇ ತಮ್ಮ ಪ್ರತಿಭೆಯಿಂದ ಮತ್ತೊಮ್ಮೆ ದೊಡ್ಡರಂಗೇಗೌಡರು ಮಾಡಿದ್ದಾರೆ. ಮತ್ತೆ ಮತ್ತೆ ಕೇಳುವಂತಹ ಗೀತೆಗಳಿವು.

"ತಂದೆಗೆ ತಕ್ಕ ಮಗ" ಚಿತ್ರದ 'ಕಾವೇರಿ ಸೀಮ್ಯಾಗೆ' ಹಾಡನ್ನು ಎಸ್.ಪಿ. ಬಾಲಸುಬ್ರಹ್ಮಣ್ಯಂ ಹಾಡಿದ್ದಾರೆ. ತಂದೆಗೆ ಮಗನ ಮೇಲಿರುವ ಪ್ರೀತಿ ವಾತ್ಸಲ್ಯವನ್ನು ಅಭಿವ್ಯಕ್ತಿಸುವ ಹಾಡನ್ನು ಬರೆದ ದೊಡ್ಡರಂಗೇಗೌಡರು ಅತ್ಯುತ್ತಮ ಪದಗಳ ವಿಶೇಷತೆಯನ್ನೇ ಬಳಸಿ ಸುಮಧುರವಾದ ಗೀತೆಯಾಗಿಸಿದ್ದಾರೆ. ಹೀಗೆ-ನಮ್ಮೆಲ್ಲರ ಮೆಚ್ಚುಗೆಗೆ ಮತ್ತೆ ಮತ್ತೆ ಪಾತ್ರರಾಗುತ್ತಲೇ ದೊಡ್ಡರಂಗೇಗೌಡ ಎಂದೂ ಮರೆಯಲಾಗದ ಗೀತರಚನೆಕಾರರಾಗಿದ್ದಾರೆ.





# ಅಂದಿಗೂ... ಇಂದಿಗೂ... ಎಂದೆಂದಿಗೂ...!

• ಬುಕ್ಕಾಪಟ್ಟಣ ವಾಸು

ಐವತ್ತರ ಐಸಿರಿಯ ಸಂದರ್ಭ ''ಸೃಜನ ಸಂಪನ್ನ'' ಅಭಿನಂದನಾ ಗ್ರಂಥಕ್ಕೆ ಸಂಪಾದಕನಾಗಿ ನನ್ನ ಪ್ರೀತಿಯ ಮೇಷ್ಟ್ರು ಬಗ್ಗೆ-ಬದುಕು ಬರಹದ ಬಗ್ಗೆ ಲೇಖಗಳನ್ನು ಸಂಗ್ರಹಿಸಲು ಹೊರಟೆ. ನಾಡಿನ ಮೂಲೆ ಮೂಲೆಗಳಿಂದ ಲೇಖನಗಳ ಮಹಾಪೂರ....

ಸಾಹಿತಿಗಳು, ವಿಮರ್ಶಕರು, ಗುರುವಿನ ಗುರುಗಳು, ಸ್ನೇಹಿತರು, ಶಿಷ್ಯರು, ಅಭಿಮಾನಿಗಳು, ಮಹೋನ್ನತ ಸಂಸ್ಕೃತಿಯ ಔನ್ನತ್ಯದ ದಾರ್ಶನಿಕ ಶ್ರೀ ದೊಡ್ಡರಂಗೇಗೌಡ ಅವರ ಬದುಕಿನ ಬನದ ಸ್ವಾರಸ್ಯವನ್ನು ಪ್ರತಿಬಿಂಬಿಸಿದಾಗ ನಿಜಕ್ಕೂ ದಂಗಾಗಿ ಹೋದೆ.

ಹಿರಿಯ ಕಲಾವಿದರೊಬ್ಬರು ''ಸಾರಸ್ವತ ಸಾಲಿಗ್ರಾಮ'' ಎಂದು ಬಣ್ಣಿಸಿದರೆ, ಕೃತಿಗೆ ಮುನ್ನುಡಿ ಬರೆದ ಹಿರಿಯ ಚೇತನ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರು ಐವತ್ತರ ಐಸಿರಿ ಬೆಳೆಯುತ್ತಾ ನೂರರ ಮೇರೆ ಮೀರಿ ದಾಖಲೆಗಳನ್ನು ಸಾಧಿಸಲಿ. ''ದೊಡ್ಡ'' ಎಂಬ ಹೆಸರು ರಂಗೇಗೌಡರಿಗೆ ಅನ್ವರ್ಥವಾಗಲಿ ಎಂದರು. ಸರ್ವ ಪ್ರಕಾರಗಳಲ್ಲಿಯೂ ಅಭಿಜ್ಞತೆ ಗಳಿಸಿದ ''ಕರುನಾಡ ಮೂರ್ಧನ್ಯ ಕವಿ'' ಎಂದು ಬರೆದ ಸಮೇತನ ಹಳ್ಳಿ ರಾಮರಾಯರಂಥ ಅನೇಕ ಹಿರಿಯರ ಲೇಖನಗಳನ್ನು ಸಂಕಲಿಸುತ್ತಾ... ಅಕ್ಷರ ಲೋಕದ ಅರಮನೆಯಲ್ಲಿ ಸೋಪಜ್ಞತೆಯನ್ನು ಮೆರೆದು ಶಾಶ್ವತ ಸ್ಥಾನ ಗಳಿಸಿ ನೆಲೆ ನಿಂತು ರಾರಾಜಿಸಿದ ಡಾ॥ ದೊಡ್ಡರಂಗೇಗೌಡರ ಸಮೃದ್ಧ ಅನುಭವ ದಾಖಲಿಸಿ ಗುರುವಂದನೆ ಸಲ್ಲಿಸಿ ಹೂವಿನಿಂದ ನಾರು ಅನ್ನೋ ಹಾಗೆ ಅಭಿನಂದನಾ ಕೃತಿಯಲ್ಲಿ ಭಾಗಿಯಾದೆ.

ವಿದ್ಯಾರ್ಥಿ ಜೀವನದಲ್ಲಿ ಆದರ್ಶ ಗುರುಗಳು ಸಿಗುವುದೂ ಒಂದು ಸೌಭಾಗ್ಯ. ಆ ಮಟ್ಟಿಗೆ ನಾನು ಅದೃಷ್ಟವಂತ. ಮೇಷ್ಟ್ರು ಎಂದೂ ಪಠ್ಯ ಚೌಕಟ್ಟಿಗೆ ಸೀಮಿತವಾಗಿ ಪಾಠ ಮಾಡಿದವರಲ್ಲ, ಜೀವನ ರೂಪಿಸಿಕೊಳ್ಳುವ ಜವಾಬ್ದಾರಿ ವಿಷಯಗಳನ್ನು ಮನಸ್ಸಿಗೆ ಮುಟ್ಟುವ ಹಾಗೆ ಅದೂ ಒಂದು ಸುಂದರ ಕಾವ್ಯದಂತೆ ವರ್ಣಿಸುತ್ತಿದ್ದರು.

ಅವರ ಜೊತೆ ನನ್ನ ಶಿಷ್ಯವೃತ್ತಿ ಇಂದಿಗೂ ಸವಿರುಚಿ. ಕಾಲೇಜಿದ್ದರೆ ಹತ್ತಿರದ ಹೋಟೆಲ್‌ನಲ್ಲಿ ಬೈಟು ಕಾಫಿ. ಗಾಂಧಿನಗರಕ್ಕೆ ಹೊರಟರೆ ಜಿಲೇಬಿ, ರವೆ ಇಡ್ಲಿ ಬಾದಾಮಿ ಹಾಲು... ಆಟೋ ಹತ್ತುತ್ತಿದ್ದುದು ಅನಿವಾರ್ಯವಾದಾಗ ಮಾತ್ರ... ಬಸ್ಸಿನಲ್ಲಿ ತಳ್ಳಾಟ, ಜಗ್ಗಾಟ ಸಹಿಸದೆ "ನಡ್ಕೊಂಡು ಹೋಗೋಣ ವಾಸು" ಎಂದು ಹೊರಟೇ ಬಿಡುತ್ತಿದ್ದರು. ದಾರಿಯುದ್ದಕ್ಕೂ ತಮ್ಮ ಅನುಭವ, ಓದಿದ ಪುಸ್ತಕ, ಓದಬೇಕಾದ ಪುಸ್ತಕಗಳ ಬಗ್ಗೆ ಮಾತು... ನನಗರಿವಿಲ್ಲದೆ ತಲುಪಬೇಕಾದ ಸ್ಥಳ ತಲುಪಿ ಬಿಟ್ಟಿರುತ್ತಿದ್ದೆವು. ಅವರು ಸಿನಿಮಾಕ್ಕೆ ಹಾಡುಗಳನ್ನು ಬರೆಯುವಾಗ ಅನೇಕ ಸಲ ಅವರ ಜೊತೆ ಸ್ಟುಡಿಯೋಗಳಿಗೆ ಹೋಗಿದ್ದೇನೆ. ಪು.ತಿ.ನ., ಸತ್ಯಕಾಮರಂಥ ಅನೇಕ ಹಿರಿಯರ ದರ್ಶನ ಸೌಭಾಗ್ಯಕ್ಕೆ ಭಾವ ಸ್ಪಂದನಕ್ಕೆ ಮೇಷ್ಟ್ರು ಜೊತೆಗಿನ ಶಿಷ್ಯವೃತ್ತಿಯೇ ಕಾರಣ.

"ಕುಂಕುಮ ಭಾಗ್ಯ" ಧಾರಾವಾಹಿಯ ಬಗ್ಗೆಯೂ ಹೆಮ್ಮೆಯಿಂದ ಹೇಳುವ ಒಂದು ಮಾತಿದೆ. ಶಿಷ್ಯ ನಿರ್ದೇಶಕನೆಂದು ಹಾರೈಸಿ "ವಾಸು, ಕ್ರಿಯಾಪದದಿಂದ ಹಾಡು ಪ್ರಾರಂಭ ಮಾಡ್ತೀನಿ, ಖಂಡಿತಾ ಒಳ್ಳೆಯದಾಗುತ್ತೆ". ಅಂದ ಮಾತು 700 ಕಂತುಗಳನ್ನು ದಾಟಿ ಮುನ್ನಡೆದಿದೆ. ಒಂದು ವೇಳೆ 1000 ಕಂತು ಪೂರೈಸಿದರೆ ಅದೂಒಂದು ದಾಖಲೆಯೇ. ಒಂದೇ ಹಾಡು ಸಾವಿರ ಸಂಚಿಕೆಗಳಲ್ಲಿ ಪ್ರಸಾರವಾದ ಕೀರ್ತಿ ಸಲ್ಲುತ್ತದೆ. ಡಿ.ಆರ್.ಜಿ., ಸದಾ ಹೇಳುವ "ಆಗೋದೆಲ್ಲ ಒಳ್ಳೆದಕ್ಕೆ" ಅನ್ನುವ ಮಾತು ಯಾವತ್ತೂ ಮರೆಯೋ ಹಾಗಿಲ್ಲ.

ಕೈ ಚಾಚುವ, ಪ್ರಚಾರದ ಹಂಗಿಗೆ ಬೀಳುವ, ಅಧಿಕಾರಕ್ಕಾಗಿ ಗುದ್ದಾಡುವ, ವ್ಯಾಪಾರಸ್ಥ ಮನೋಭಾವ ಮೇಷ್ಟ್ರಿಗೆ ಇಲ್ಲದ ಸದ್ಗುಣ. ಒಪ್ಪಿಕೊಂಡ ಕೆಲಸದ ಬಗ್ಗೆ ಅಪಾರ ಪ್ರೀತಿ, ಗೌರವ. ದೇಹ ದಣಿದರೂ ಬಿಡದ, ಹಸಿವಿನ ಹಂಗನ್ನೂ ತೊರೆದ, ಪ್ರಾಮಾಣಿಕರು... ಈ ಚೈತನ್ಯದ ಭಾವಶಕ್ತಿಯಿಂದಲೇ ವೃತ್ತಿಯಿಂದ ನಿವೃತ್ತರಾದರೂ, ಪ್ರವೃತ್ತಿಯಿಂದ 'ಕಾಯಕವೇ ಧರ್ಮ ಎಂದ ಕರ್ಮಯೋಗಿ."

ನೂರಾರು ಪ್ರಶಸ್ತಿ, ಪ್ರಶಂಸೆಗೆ ಪಾತ್ರರಾಗಿ ದೇಶ-ವಿದೇಶ ಸುತ್ತಿ ಮಾಗಿದ ಅನುಭವ ಮಹತ್ವವಾದ ಮತ್ತೊಂದು ಕೃತಿಗೆ ಪ್ರೇರಣೆಯಾಗಲಿ... ಜನಗಳ ನಡುವೆಯೇ ಇದ್ದು ಜನರಿಗಾಗಿ ಜಾನಪದ ಸಿಹಿ ಹಂಚಿದ ಜನಪರ ವ್ಯಕ್ತಿಗೆ **"ಜಾನಪದ ಜಂಗಮ"** ಅನ್ವರ್ಥನಾಮ.

ಈ ಶುಭ ಸಂದರ್ಭಕ್ಕೆ ಕಾರಣರಾದ, ಭಾಗಿಯಾದ ಎಲ್ಲರನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತಾ ಗುರುನಮನ ಸಲ್ಲಿಸುತ್ತಿದ್ದೇನೆ...

❑



# ಸಾಹಿತ್ಯ ಲೋಕದ ಜೀವನದಿ

● ಸಬ್ಬಕೆರೆ ವೆಂಕಟೇಶ್

ಡಾ॥ ದೊಡ್ಡರಂಗೇಗೌಡರ ಅಸಾಧಾರಣ ಜನಪ್ರಿಯತೆಗೆ ಬಹುಮುಖ್ಯ ಕಾರಣವೆಂದರೆ ಅವರಲ್ಲಿನ ಸೇವಾ ಮನೋಭಾವ ಮತ್ತು ಪರೋಪಕಾರಿಗುಣ, ಜಾತ್ಯಾತೀತ ಪ್ರದೇಶಾತೀತವಾದ, ವರ್ಗಾತೀತವಾದ ಅವರ ಹೃದಯವಂತ ಮನಸ್ಸು, ಪ್ರಯತ್ನ ನಿರ್ಧಾರ ಕವಿ ಹೃದಯ ಹಾಗೂ ಎದೆಗುಂದದ ಹೋರಾಟಗಳು, ನೆನಪಿನಲ್ಲಿ ಉಳಿಯುತ್ತವೆ. ಇವರ ಸಾಹಿತ್ಯ ಕೃಷಿ ಹಲವಾರು ವಿದ್ಯಾಕಾಂಕ್ಷಿಗಳಿಗೆ ಜೀವನದ ಬೆಳಕು ಮೂಡಿಸಿರುವ ಇವರು ಎಷ್ಟೇ ದೂರದಲ್ಲಿದ್ದರೂ ಕೃತಜ್ಞತೆಯಿಂದ ಸಾವಿರಾರು ಮನಸ್ಸುಗಳು ಮನದಲ್ಲೇ ಸದಾ ವಂದಿಸುತ್ತಿವೆ.

ಇವರ ಸಾಹಿತ್ಯದ ಆಳದಲ್ಲಿ ಸಂಗೀತದ ಜಲಹರಿಯುತ್ತಿರುತ್ತದೆ. ಮನುಷ್ಯನ ಇಂದ್ರಿಯ ಸ್ಪಂದನ ಹಾಗೂ ನಿಸರ್ಗದ ಬೆರಗು ಇವುಗಳ ನಡುವಿನ ಅಂತರ್ ಸಂಬಂಧವನ್ನು ಚೆಲುವಿನೊಳಗೆ ಬೆರಸಿ ಕೃತಿರಚಿಸುವ ವಿಶಿಷ್ಟತೆಯಿಂದಾಗಿಯೇ ಇವರ ಕವಿತೆಗಳು ಜನರ ಮನಸ್ಸನ್ನು ಮುಟ್ಟುವಲ್ಲಿ ಯಶಸ್ವಿಯಾಗುತ್ತವೆ.

ಕೆ.ಎಸ್.ನ. ನಂತರ ಅಷ್ಟೇ ತೀವ್ರವಾಗಿ ಪ್ರೇಮಗೀತೆಗಳನ್ನು ರಚಿಸಲು ಹೊರಟವರಲ್ಲಿ ದೊಡ್ಡರಂಗೇಗೌಡರು ಪ್ರಮುಖರಾಗಿದ್ದಾರೆ. ''ಮನುಷ್ಯನನ್ನು ತಲುಪಲು ಮನುಷ್ಯನಿಗಷ್ಟೇ ಸಾಧ್ಯ'' ಎಂಬಂತೆ ಇವರ ಜೀವನಾನುಭವ ಪಾರದರ್ಶಕ ಭಾಷೆಯ ಕಾವ್ಯ, ಸಿನಿಮಾ ಮಾಧ್ಯಮದ ಮೂಲಕ ಜನರ ಎದೆಯನ್ನು ತಲ್ಲಣಗೊಳಿಸಿದ್ದಾರೆ. ಇವರು ತಮ್ಮ ಗೀತೆಗಳೊಳಗೆ ಮನುಷ್ಯ ಭಾವನೆಗಳ ನೈಜತೆಯನ್ನು ತೀವ್ರವಾಗಿ ಅಭಿವ್ಯಕ್ತಿಸಿದ್ದಾರೆ. ಇವರ ಒಂದೊಂದು ಹಾಡೂ ಚಲನಚಿತ್ರರಂಗದಲ್ಲಿ ವಿಭಿನ್ನತೆಯನ್ನು ಗಳಿಸಿಕೊಂಡಿವೆ. ಐದು ಕೋಟಿ ಕನ್ನಡಿಗರ ಹೃದಯವನ್ನು ತಮ್ಮ ಸಾಹಿತ್ಯ ಶಕ್ತಿಯಿಂದ ಲೂಟಿಮಾಡಿವೆ ಇವರ ಗೀತೆಗಳು. ಕನ್ನಡ ಭಾಷೆಯಿರುವವರೆಗೂ ಜನರ ಎದೆಯೊಳಗೆ ಮೆಲುಕು ಹಾಕುತ್ತಿರುತ್ತವೆ. ''ತೇರ ನೇರಿ ಅಂಬರದಾಗೆ ನೇಸರ ನಗುತಾನೆ''ಯಂಥ ಅಪೂರ್ವ ಗೀತೆಗಳನ್ನೊಳಗೊಂಡ ''ಪರಸಂಗದ ಗೆಂಡೆತಿಮ್ಮ'' ಚಿತ್ರದ

ಜೀವ ಅನೇಕ ಸಲ ಇದರ ಗೀತೆಗಳಲ್ಲೇ ಅಡಗಿದೆಯೆನ್ನಿಸುತ್ತದೆ. ಉತ್ತಮ ಗೀತೆ ರಚಿಸಿದ ಇವರ ಸೃಜನಶೀಲತೆ ಪ್ರಶಂಸನೀಯ. ಈ ಹಾಡು ನವೋದಯ ಸಂದರ್ಭದಲ್ಲಿ ಸೂರ್ಯೋದಯವನ್ನು ಕುರಿತು ಬರೆದ ಬೇಂದ್ರೆ, ಕುವೆಂಪು ಕವಿತೆಗಳಂತೆಯೇ ವಿಶಿಷ್ಟ ಆಯಾಮವನ್ನು ಹೊಂದಿದೆ.

''ನಮ್ಮೂರ ಮಂದಾರ ಹೂವೆ, ನಾನೊಂದು ತೀರ ನೀನೊಂದು ತೀರ...'' ಇತ್ಯಾದಿ ನೂರೆಂಟು ಗೀತೆಗಳು ಕನ್ನಡ ಚಲನಚಿತ್ರಂಗದಲ್ಲಿ ಅನನ್ಯತೆಯನ್ನು ಪಡೆದು ಇಂದಿಗೂ ಅಲೆಯೆಬ್ಬಿಸುತ್ತಿರುವುದನ್ನು ಕಾಣುತ್ತಿದ್ದೇವೆ. ಕೆಲವು ವರ್ಷಗಳ ಹಿಂದೆ ಬಂದಂತಹ ''ಜನುಮದ ಜೋಡಿ'' ಚಲನಚಿತ್ರಕ್ಕೆ ರಚಿಸಿದ ಇವರ ''ಕೋಲುಮಂಡೆ ಜಂಗಮ ದೇವರು''... ಗೀತೆ ಕನ್ನಡಿಗರನ್ನು ಬಹಳ ಆಕರ್ಷಿಸಿತು. ಜಾನಪದೀಯ ಲಯಗಳನ್ನು ವರ್ತಮಾನದ ಸಂಕೀರ್ಣತೆಗಳಿಗೆ ಒಗ್ಗಿಸಿಕೊಂಡು ರಚಿಸಿದ ಈ ಗೀತೆ ಅವರ ಕಲೆಗಾರಿಕೆ ಮತ್ತು ಪ್ರೇಮದ ಪರಿಕಲ್ಪನೆಯಿಂದ ಜನರ ತಲೆಯೊಳಗೆ ಕುಣಿದಾಡಿತು.

ಜಾನಪದ ಎಂದ ತಕ್ಷಣ ತಲೆದೂಗುವುದು ಕಷ್ಟ ಯಾಕೆಂದರೆ ಅದು ಏಕತಾನತೆಯ ಜಡತೆಯ ಕವಚವನ್ನು ಹಾಕಿಕೊಂಡಿರುತ್ತದೆ. ಈ ಗುಣವಿರುವ ಜಾನಪದವನ್ನು ವರ್ತಮಾನದ ಉಡುಪಿನಿಂದ ಕಾಣಲು ಹೋದಾಗ ವಿಚಿತ್ರ ಅನುಭವಗಳಾಗುತ್ತವೆ. ಇಂತಹ ವರ್ತಮಾನದ ಉಡುಪನ್ನು ಸೃಷ್ಟಿಸಬಲ್ಲವನೇ ನಿಜವಾದ ಕವಿ ಲೇಖಕನಾಗುತ್ತಾನೆ. ಡಾ॥ ದೊಡ್ಡರಂಗೇಗೌಡರು ಜಾನಪದವನ್ನು ಮನುಷ್ಯನ ಭಾವನೆಯ ಮೊತ್ತವಾಗಿ ಗ್ರಹಿಸಿ ಈ ಕಾಲಕ್ಕೆ ತಕ್ಕದಾದ ಉಡುಪನ್ನು ಸೃಷ್ಟಿಸಿದವರಲ್ಲಿ ಮೊದಲಿಗರು. ಇದರ ಫಲವೇ ''ಜನುಮದ ಜೋಡಿ''ಯ ಗೀತೆ.

ಲೇಖಕ ಯಾವುದಾದರೊಂದು ಪಂಥಕ್ಕೆ ಅಂಟಿಕೊಳ್ಳಬೇಕೆಂಬ ಭಾವನೆಯಿಂದ ಸಂಪೂರ್ಣ ಅಂತರವನ್ನು ಕಾಪಾಡಿಕೊಂಡಿರುವ ಇವರು ಸೃಜನಶೀಲತೆಯ ಹೂಗೊರಳಿಗೆ ಶುಷ್ಕ ಸಿದ್ಧಾಂತ, ತರ್ಕಗಳ ಕಲ್ಲನ್ನು ಹೊರಲು ಪ್ರಯತ್ನಿಸಿದಂತೆ ಎಲ್ಲಿಯೂ ಕಂಡುಬರುವುದಿಲ್ಲ. ಅದಕ್ಕಾಗಿಯೇ ಇಡೀ ಮನುಕುಲ ಜೀವರಾಶಿ ನಿಸರ್ಗವನ್ನು ಇವರ ಕೃತಿಗಳು ಹೃದಯವನ್ನಾಗಿಸಿಕೊಂಡಿವೆ.

ಜಾನಪದದಲ್ಲಿ ಧರ್ಮ ಒಂದು ಮೂಲಭೂತ ತತ್ವವಾಗಿದೆ. ಈ ಧರ್ಮವನ್ನು ದೊಡ್ಡರಂಗೇಗೌಡರು ತಮ್ಮ ಬರಹದಲ್ಲಿ ಕಾಣಿಸುವುದುಂಟು. ಹಾಗಾಗಿಯೇ ಭಕ್ತಿ ಗೀತೆಗಳ ರಚನೆ ಅವರಿಗೆ ಸಾಧ್ಯವಾಗಿದೆ. ಆದ್ದರಿಂದ ಇವರನ್ನು ಒಬ್ಬ ಜನಪದ ಕವಿಯಾಗಿಯೂ ಗುರುತಿಸಬಹುದು.

ಇವರ ಸುಂದರ ರಸಾನುಭವದ ಅಭಿವ್ಯಕ್ತಿಯ ಸಾಹಿತ್ಯ, ವಿಮರ್ಶೆ, ಚಿಂತನೆ, ಕಾಲಘಟ್ಟದಲ್ಲಿ ಎಂದೂ ಕರಗದ ಜೀವಂತ ನದಿಯಾಗಿ ಹರಿದು ಮುಂದಿನ ಯುವ ಸಮುದಾಯಕ್ಕೆ ಆದರ್ಶವಾಗಿದೆ.

❑



# ಚಿತ್ರಗೀತೆಗಳು ಸಾಗಿ ಬಂದ ಹಾದಿ

● ಪಿ.ಜಿ. ಶ್ರೀನಿವಾಸಮೂರ್ತಿ

ಚಿತ್ರ ಸಾಹಿತ್ಯವೆಂದರೆ ಅಗ್ಗದ ಸಾಹಿತ್ಯ ಎಂದು ಶಿಷ್ಟ ಸಾಹಿತಿಗಳು ಮೂಗು ಮುರಿಯುತ್ತಿದ್ದ ಕಾಲವೊಂದಿತ್ತು. ಎಪ್ಪತ್ತು ವರ್ಷಗಳ ಇತಿಹಾಸ ಹೊಂದಿರುವ ಕನ್ನಡ ಚಿತ್ರರಂಗದಲ್ಲಿ ಗೀತರಚನೆ ಕಾರ್ಯ ಹಲವು ಮಜಲುಗಳನ್ನು ದಾಟಿ ಬಂದಿದೆ. ವಾಕ್ಚಿತ್ರ ಯುಗ ಪ್ರಾರಂಭವಾದ ದಿನಗಳಿಂದಲೂ ನಮ್ಮ ಹಲವು ಶ್ರೇಷ್ಠ ಸಾಹಿತಿಗಳು ತಮ್ಮನ್ನು ಚಿತ್ರ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಚಲನಚಿತ್ರ ಮಾಧ್ಯಮದ ಶಕ್ಯತೆ-ಸಾಧ್ಯತೆಗಳನ್ನು ಗುರುತಿಸಿದ ಪ್ರಗತಿಪರ ಸಾಹಿತಿಗಳು ಈ ದಿಶೆಯಲ್ಲಿ ಆಸಕ್ತಿ ವಹಿಸಲಾರಂಭಿಸಿದ್ದು ಎಪ್ಪತ್ತರ ದಶಕದಲ್ಲಿ. ಈ ಅಭಿನಂದನಾ ಗ್ರಂಥದ ಕಾರಣಕರ್ತರಾದ ಡಾ॥ ದೊಡ್ಡರಂಗೇಗೌಡರು ಚಿತ್ರಗೀತೆಗಳ ರಚನೆ ಪ್ರಾರಂಭಿಸಿದ್ದು ಈ ಕಾಲಘಟ್ಟದಲ್ಲಿಯೇ. ಈ ಸಂದರ್ಭದಲ್ಲಿ ಚಿತ್ರಗೀತೆಗಳ ರಚನೆ ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಹೊಸ ಹೊಸ ಆಯಾಮಗಳನ್ನು ಪಡೆದುಕೊಂಡ ಬಗೆಗೆ ಒಂದು ಸಿಂಹಾವಲೋಕನ.

ಚಲನಚಿತ್ರ ಉದ್ಯಮ ಪ್ರಾರಂಭವಾದದ್ದು ಒಂದು ಮನರಂಜನಾ ಸಾಧನವಾಗಿ. ಕಾಲಕ್ರಮೇಣ ಅದರ ಇತರ ಸಾಧ್ಯತೆ ಶಕ್ಯತೆಗಳ ಅರಿವಾಗಿ ಅದು ಒಂದು ಕಲಾ ಪ್ರಕಾರವಾಗಿ ಬೆಳೆದು ಬಂತು. ಕನ್ನಡದಲ್ಲಿ ಪ್ರಾರಂಭಿಕ ಚಲನಚಿತ್ರಗಳು ರಂಗಭೂಮಿ ನಾಟಕಗಳನ್ನು ಆಧರಿಸಿ ತಯಾರಾದವು. ಅಷ್ಟೇ ಏಕೆ ಆ ನಾಟಕಗಳ ಚಿತ್ರೀಕೃತ ರೂಪವೇ ಚಲನಚಿತ್ರಗಳಾಗಿ ರೂಪುಗೊಂಡವು ಎಂದು ಹೇಳಬಹುದು. ಪ್ರಾರಂಭಿಕ ಚಿತ್ರಗಳು ಬಹುತೇಕವಾಗಿ ಪೌರಾಣಿಕ, ಭಕ್ತಿಪ್ರಧಾನ ನಾಟಕಗಳನ್ನು ಆಧರಿಸಿದ್ದವು. ಹಾಗಾಗಿ ಆಗ ಜನಪ್ರಿಯವಾಗಿದ್ದ ರಂಗ ಗೀತೆಗಳೇ ಚಿತ್ರಗೀತೆಗಳಾದವು. ಈ ಗೀತೆಗಳು ಶಾಸ್ತ್ರೀಯ ಸಂಗೀತವನ್ನೇ ಆಧರಿಸಿದ್ದವು. ಆ ದಿನಗಳಲ್ಲಿ ಹಿನ್ನಲೆ ಗಾಯನ ಪದ್ಧತಿ ಬಳಕೆಗೆ ಬಂದಿರಲಿಲ್ಲವಾಗಿ ಕಲಾವಿದರೇ ಹಾಡಿಕೊಂಡು ಅಭಿನಯಿಸಬೇಕಾಗಿತ್ತು.

ಮೊದಲೆರಡು ಚಿತ್ರಗಳ (ಸತಿಸುಲೋಚನ, ಭಕ್ತಧ್ರುವ) ಸಾಹಿತಿಗಳು ವೃತ್ತಿ ರಂಗಭೂಮಿಯ

ನಾಟಕಕಾರರಾಗಿದ್ದ ಆಸ್ಥಾನ ವಿದ್ವಾನ್ ಬೆಳ್ಳಾವೆ ನರಸಿಂಹ ಶಾಸ್ತ್ರೀ ಮತ್ತು ಶ್ರೇಷ್ಠ ಲೇಖಕರಾಗಿದ್ದ ದೇವುಡು ನರಸಿಂಹ ಶಾಸ್ತ್ರಿಗಳು. ಹಾಗಾಗಿ ಅವರು ಕನ್ನಡ ಚಿತ್ರರಂಗದ ಪ್ರಥಮ ಸಾಹಿತಿಗಳಾದರು. ಆ ದಿನಗಳಲ್ಲಿ ಹಾಡುಗಳನ್ನು ಬರೆದ ಮತ್ತೊಬ್ಬ ಹಿರಿಯರು ನೃತ್ಯ, ಗಾಯಕರೂ, ನುರಿತ ನಟರೂ. ಕನ್ನಡದ ಪ್ರಥಮ ಚಿತ್ರ 'ಸತಿಸುಲೋಚನಾ'ದ ಸಂಗೀತ ನಿರ್ದೇಶಕರೂ ಆದ ಆರ್. ನಾಗೇಂದ್ರರಾಯರು ಹಾಗೂ ಪ್ರಪ್ರಥಮ ಸಾಮಾಜಿಕ ಚಿತ್ರವನ್ನು ನಿದೇಶಿಸಿದ ಹೆಚ್.ಎಲ್.ಎನ್. ಸಿಂಹ ಅವರು. ಇವರೆಲ್ಲ ನಾಟಕ ರಂಗದ ಹಿನ್ನಲೆಯಿಂದ ಬಂದವರು. ನಾಗೇಂದ್ರರಾಯರು ರಚಿಸಿದ 'ಇದೇ ಮಹಾ ಸುದಿನ', 'ಮರುಳಾದೆ ಸಖೀ ಈ ಮುರಳೀ ನಾದಕೆ ನಾ' ಮುಂತಾದ ಗೀತೆಗಳು ಹಾಗೂ ಬೆಳ್ಳಾವೆ ನರಸಿಂಹ ಶಾಸ್ತ್ರಿಗಳು 'ಮಹಾಕವಿ ಕಾಳಿದಾಸ' ಚಿತ್ರಕ್ಕಾಗಿ ರಚಿಸಿದ 12 ನಿಮಿಷಗಳ ಸುಧೀರ್ಘ ಗೀತೆ ''ರಾಜೇಂದ್ರ ನಾ ರಚಿಸಿದೆನ್ನೈ ಪ್ರಭು ರಂಜಿಪ ಮಹಾಕಾವ್ಯಗಳು'' ಮುಂತಾದ ಗೀತೆಗಳು ಗೀತ ಸಾಹಿತ್ಯದ ದೃಷ್ಟಿಯಿಂದ ಗಮನ ಸೆಳೆಯುವಂಥವಾದರೂ ಇವರುಗಳು ಪೂರ್ತಿಯಾಗಿ ತಮ್ಮನ್ನು ಚಿತ್ರಗೀತ ರಚನಕಾರರಾಗಿ ತೊಡಗಿಸಿಕೊಳ್ಳಲಿಲ್ಲ. ಗಮಕಿ ರಾಮಕೃಷ್ಣ ಶಾಸ್ತ್ರಿ ಸಾಹಿತಿ-ಪತ್ರಕರ್ತ ಬಿ. ಪುಟ್ಟಸ್ವಾಮಯ್ಯ ಅವರೂ ಇದೇ ಸಾಲಿಗೆ ಸೇರಿದರು.



''ವಸಂತ ಸೇನಾ'' ಚಿತ್ರಕ್ಕೆ ಸಂಗೀತ ನೀಡಿದ ಎನ್. ರಾಜೇಶ್ವರರಾವ್ ಶಾಸ್ತ್ರೀಯ ಸಂಗೀತದೊಡನೆ ಜಾನಪದ ಧಾಟಿಯನ್ನು ಮಿಶ್ರಮಾಡಿ ಹೊಸ ಪ್ರಯೋಗ ಮಾಡಿದರು. ಹೀಗೆ ಕಾಲಕ್ರಮದಲ್ಲಿ ಅನೇಕ ಸಂಗೀತ ನಿರ್ದೇಶಕರು ಹಾಗೂ ಗಾಯಕ ಗಾಯಕಿಯರು ಚಿತ್ರಗೀತೆಗಳನ್ನು ಜನಪ್ರಿಯಗೊಳಿಸಿರುವರಾದರೂ ಈ ಲೇಖನ ಚಿತ್ರಗೀತೆಗಳ ರಚನೆಗೆ ಮಾತ್ರ ಸೀಮಿತವಾದುದರಿಂದ ಈ ಬಗೆಗೆ ಇಲ್ಲಿ ಪ್ರಸ್ತಾಪಿಸುತ್ತಿಲ್ಲ.

ಈ ವೇಳೆಗೆ ಆಕಾಶವಾಣಿಯಲ್ಲಿ ಚಿತ್ರಗೀತೆಗಳು ಪ್ರಸಾರವಾಗಿ ಜನಪ್ರಿಯವಾಗತೊಡಗಿದವು. ಕ್ರಮೇಣ ಗ್ರಾಮಫೋನ್ ತಟ್ಟೆಗಳು ಬಂದು ಚಿತ್ರಗೀತೆಗಳ ಜನಪ್ರಿಯತೆ ಅಪಾರವಾಗಿ ಹೆಚ್ಚಾಯಿತು. ಈ ಕಾಲಘಟ್ಟದಲ್ಲಿ ಚಿತ್ರ ಸಾಹಿತ್ಯಕ್ಷೇತ್ರ ಪ್ರವೇಶಿಸಿದ ಕು.ರ. ಸೀತಾರಾಮಶಾಸ್ತ್ರಿ ಮುಂದೆ ಉತ್ತಮ ಸಾಹಿತ್ಯ ಮೌಲ್ಯದ ಚಿತ್ರಗೀತೆಗಳನ್ನು ರಚಿಸಿದರು. ಮುಂದೆ ನಿರ್ದೇಶಕರಾಗಿ ತಮ್ಮನ್ನು ತೊಡಗಿಸಿಕೊಂಡರು.

ಈ ವೇಳೆಗೆ ಹಿನ್ನೆಲೆ ಗಾಯನ ಪದ್ಧತಿ ಬಳಕೆಗೆ ಬಂತು. ಸುಗಮ ಸಂಗೀತ ಕ್ಷೇತ್ರದ ಪ್ರವರ್ತಕ ಪಿ. ಕಾಳಿಂಗರಾವ್ ಅವರು ಪ್ರಥಮ ಬಾರಿಗೆ 'ಕೃಷ್ಣಲೀಲಾ' ಚಿತ್ರದಲ್ಲಿ ವಾದ್ಯವೃಂದ ಬಳಸಿದರು. ಈ ಚಿತ್ರದ ಮೂಲಕ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡವರು ಹುಣಸೂರು ಕೃಷ್ಣಮೂರ್ತಿ ಮತ್ತು ಕಣಗಾಲ್ ಪ್ರಭಾಕರ ಶಾಸ್ತ್ರಿ. ಹುಣಸೂರರು ರಂಗಭೂಮಿ ಹಿನ್ನೆಲೆಯಿಂದ ಬಂದವರಾದರೂ ಪ್ರಗತಿಪರ ಮನೋಭಾವ ಹೊಂದಿದವರಾಗಿದ್ದು ಗ್ರಾಂಥಿಕವಾಗಿದ್ದ ಚಿತ್ರ

ಸಾಹಿತ್ಯಕ್ಕೆ ಆಡುಮಾತಿನ ಸ್ವರೂಪ ನೀಡಿದರು. ಪ್ರಾಚೀನ, ಅರ್ವಾಚೀನ ಸಾಹಿತ್ಯವನ್ನು ಸಾಕಷ್ಟು ಆಳವಾಗಿ ಅಧ್ಯಯನ ಮಾಡಿದ್ದ ಹುಣಸೂರು ಕೃಷ್ಣಮೂರ್ತಿ ತಮ್ಮ ರಚನೆಗಳಲ್ಲಿ, ಮುಖ್ಯವಾಗಿ ಪೌರಾಣಿಕ ಹಾಗೂ ಭಕ್ತಿಪ್ರಧಾನ ಚಿತ್ರಗಳಲ್ಲಿ ದಾಸ ಸಾಹಿತ್ಯ, ವಚನಗಳು, ಮರಾಠಿ ಅಭಂಗಗಳ ಪ್ರತಿಮೆ ಮತ್ತು ಸಾಧ್ಯತೆಗಳನ್ನು ಬಳಸಿಕೊಂಡರು.

'ಕೃಷ್ಣಗಾರುಡಿ', ಚಿತ್ರದ 'ಬೊಂಬೆಯಾಟವಯ್ಯ'; 'ಭಕ್ತ ಕುಂಬಾರ' ಚಿತ್ರದ 'ಹರಿನಾಮವೇ ಚಂದ', 'ಮಾನವಾ ದೇಹವು ಮೂಳೆ ಮಾಂಸದ ತಡಿಕೆ', 'ವೀರಸಂಕಲ್ಪ' ಚಿತ್ರದ 'ಹಾಡು ಬಾ ಕೋಗಿಲೆ' ಕೆಲವು ಉದಾಹರಣೆಗಳು.

ಇವರಂತೆಯೇ ಸಾಹಿತಿ, ನಿರ್ದೇಶಕ, ನಿರ್ಮಾಪಕರಾಗಿ ತಮ್ಮನ್ನು ತೊಡಗಿಸಿಕೊಂಡ ಕು.ರ.ಸೀ. ಕೆಲವು ಅರ್ಥಪೂರ್ಣ ಗೀತೆಗಳನ್ನು ಬರೆದರು. 'ಭೂಕೈಲಾಸ' ಚಿತ್ರದ 'ರಾಮನ ಅವತಾರ'; 'ಜೇನುಗೂಡು' ಚಿತ್ರದ 'ಜೇನಿರುಳು ಜತೆಗೂಡಿರಲು'; 'ವೀರ ಕೇಸರಿ' ಚಿತ್ರದ 'ಮೆಲ್ಲುಸಿರೇ ಸವಿಗಾನ', 'ಬೆರೆತ ಜೀವ' ಚಿತ್ರ 'ಅಂದದ ಪರದೆ ಜಾರಿದ ಮೇಲೆ' ಮುಖ್ಯವಾದ ಗೀತೆಗಳು ಕು.ರ.ಸೀ. ಅವರ ಕಾವ್ಯಪ್ರಜ್ಞೆಗೆ ಕೆಲವು ಉದಾಹರಣೆಗಳು.

ಇವರ ಸಮಕಾಲೀನರಾದ ಕಣಗಾಲ್ ಪ್ರಭಾಕರ ಶಾಸ್ತ್ರಿ ಅತ್ಯಂತ ಜನಪ್ರಿಯ ಗೀತೆಗಳನ್ನು ರಚಿಸಿದರು. ಅವರ ಗೀತೆಗಳಲ್ಲಿ ಪ್ರಾಸಕ್ಕೆ ಪ್ರಾಧಾನ್ಯ, ಸಂಸ್ಕೃತ ಭೂಯಿಷ್ಠವಾದ ಪದಗಳು ಹೇರಳ. 'ಕುಲವಧು' ಚಿತ್ರದ 'ಒಲವಿನ ಪ್ರಿಯಲತೆ', 'ಸ್ಕೂಲ್ ಮಾಸ್ಟರ್' ಚಿತ್ರದ 'ರಾಧಾಮಾಧವ ವಿನೋದ ಹಾಸ', ಮತ್ತು 'ಭಾಮೆಯ ನೋಡಲು ತಾ ಬಂದ'; 'ರತ್ನಗಿರಿ ರಹಸ್ಯ'ದ 'ಅಮರ ಮಧುರ ಪ್ರೇಮ'; 'ಕೃಷ್ಣದೇವರಾಯ' ಚಿತ್ರದ 'ಬಹುಜನ್ಮದ ಪೂಜಾಫಲ' ಮುಂತಾದ ಗೀತೆಗಳು ಇದಕ್ಕೆ ಉದಾಹರಣೆ. ಅವರ ರಚನೆಗಳಲ್ಲಿ 'ಒಲವು' ಪದ ಧಾರಾಳವಾಗಿ ಬಳಕೆಯಾಗುತ್ತಿತ್ತು. ಪ್ರಾಸಕ್ಕಾಗಿ ಶಬ್ದಗಳ ಜಾಲವನ್ನೇ ಹೆಣೆಯುತ್ತಿದ್ದರು. ಒಮ್ಮೊಮ್ಮೆ ಅದು ವಿಪರೀತಾರ್ಥಕ್ಕೆ ಎಡೆಮಾಡುತ್ತಿದ್ದರೂ ಗೀತೆಗಳ ಗೇಯತೆಗೆ, ಮಾಧುರ್ಯಕ್ಕೆ ಅಡ್ಡಿಯಾಗುತ್ತಿರಲಿಲ್ಲ.

ಅದೇ ಸಮಯದಲ್ಲಿ ಆಗ ತಾನೇ ಕಾಲೇಜ್ ವಿದ್ಯಾಭ್ಯಾಸದಿಂದ ಹೊರಬಂದಿದ್ದ ನರೇಂದ್ರ ಬಾಬು "ಭಾರತಿ" ಚಿತ್ರದಲ್ಲಿ ಅತ್ಯುತ್ತಮ ಗೀತೆಗಳನ್ನು ಬರೆದಿದ್ದರು. ಕಾಲೇಜ್‌ನಲ್ಲಿದ್ದಾಗ ಬರೆದ ಕವಿತೆಗೆ ಬಿ.ಎಂ.ಶ್ರೀ. ಸ್ಮಾರಕ ಚಿನ್ನದ ಪದಕ ಗೆದ್ದಿದ್ದ ನರೇಂದ್ರ ಬಾಬು ಮುಂದೆ ಸಂಭಾಷಣೆಕಾರರಾಗಿಯೇ ಹೆಚ್ಚು ಪ್ರಸಿದ್ಧರಾದರು. ದೇಶಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭ ಕುರಿತಾಡಲು 'ಭಾರತಿ' ಚಿತ್ರದಲ್ಲಿ ಅವರು ಬರೆದ 'ಭೋ ಎಂದು ಜಯಭೇರಿ ಕೊಂಡಾಡ ಮನಸಾರ ಚೆಲ್ಲಾಡಲಿ ನಭೋನೆಲದೆ ತ್ರಿವರ್ಣಾಂಚಿತ ಚಿತ್ರ ಪತಾಕೆ' ಹಾಗೂ "ದಿನಕರನುದಯಸುತಾ" ಅತ್ಯುತ್ತಮ ಗೀತೆಗಳು.

ಮಹಾತ್ಮ ಪಿಕ್ಚರ್ಸ್ ಅವರ ಬಹುತೇಕ ಚಿತ್ರಗಳಿಗೆ ಸಂಗೀತ ನೀಡಿದ ಪಿ. ಶಾಮಣ್ಣ ಜನಪ್ರಿಯ ಹಿಂದೀ ಚಿತ್ರಗೀತೆಗಳ ಟ್ಯೂನನ್ನು ಹಾಗೆಯೇ ಬಳಸುತ್ತಿದ್ದರು. ಈ ಟ್ಯೂನ್‌ಗಳಿಗೆ ಮಾತು ಜೋಡಿಸುವುದಷ್ಟೆ ಗೀತರಚನಾಕಾರರ ಕೆಲಸವಾಗಿತ್ತು. ಆ ಹಾಡುಗಳು ಜನಪ್ರಿಯವಾದವು.

50ರ ದಶಕದಲ್ಲಿ ಸಂಗೀತ ನಿರ್ದೇಶಕರಾಗಿ ಬಂದ ರಾಜನ್-ನಾಗೇಂದ್ರ, ವಿಜಯ ಭಾಸ್ಕರ್, ಜಿ.ಕೆ. ವೆಂಕಟೇಶ್ ಹಾಗೂ ಟಿ.ಜಿ. ಲಿಂಗಪ್ಪ ಕನ್ನಡ ಚಿತ್ರ ಸಂಗೀತಕ್ಕೆ ಹೊಸ ಆಯಾಮ ನೀಡಿದರು. ಟ್ಯೂನ್‌ಗೆ ಸಾಹಿತ್ಯ ಮಾಡುವ ಕೆಲಸ ಆಗ ವ್ಯಾಪಕವಾಗಿ ನಡೆಯುತ್ತಿದ್ದರೂ, ಸಾಧ್ಯವಾದಲ್ಲೆಲ್ಲ ಈ ಸಂಗೀತ ನಿರ್ದೇಶಕರು ಗೀತೆಯನ್ನು ಮೊದಲು ಬರೆಸಿ ಅನಂತರ ಅದಕ್ಕೆ ರಾಗ ಸಂಯೋಜಿಸುತ್ತಿದ್ದರು.

'ಬೇಡರ ಕಣ್ಣಪ್ಪ' ಚಿತ್ರಕ್ಕೆ ಹಾಡುಗಳನ್ನು ಬರೆದವರು ಲಾವಣಿಕಾರ ನಂಜಪ್ಪ (ನಂಜುಕವಿ). ಈ ಚಿತ್ರದ ಗೀತೆಗಳಾದ 'ಶಿವಪ್ಪ ಕಾಯೋ ತಂದೆ', 'ದಯಾಮಯ ಈಶಾ', ಹಾಗೂ 'ಸುಂದರಾಂಗಾ ಬಾರೋ ಬೇಗನೇ' ಅತ್ಯಂತ ಜನಪ್ರಿಯ ಗೀತೆಗಳು.

ಈ ಕಾಲಘಟ್ಟದಲ್ಲಿಯೇ ನಟ ವಿಷ್ಣುವರ್ಧನ್ ಅವರ ತಂದೆ ಎಚ್.ಎಲ್. ನಾರಾಯಣರಾವ್, ಸಾಹಿತಿ ನಾಡಿಗೇರ್ ಕೃಷ್ಣರಾವ್, ಎಂ.ಎನ್. ಆರಾಧ್ಯ, ಪಿ. ಗುಂಡುರಾವ್, ನಟ ಟಿ.ಎನ್. ಬಾಲಕೃಷ್ಣ ಹಲವು ಚಿತ್ರಗಳಿಗೆ ಗೀತೆಗಳನ್ನು ರಚಿಸಿದರು.

ಬಿ.ಆರ್. ಪಂತುಲು ಅವರ ''ಮೊದಲ ತೇದಿ'' ಚಿತ್ರದ ಮೂಲಕ ಚಿತ್ರರಂಗಕ್ಕೆ ಬಂದ ಬಿ. ಸದಾಶಿವಯ್ಯ ಆ ಚಿತ್ರದ ''ಒಂದರಿಂದ ಇಪ್ಪತ್ತರವರೆಗೂ'' ಗೀತೆಯಲ್ಲಿ ತಿಂಗಳ ಸಂಬಳ ನಂಬಿ ಬದುಕುವ ಮಧ್ಯಮ ವರ್ಗದ ಜನರ ಬವಣೆಗಳನ್ನು ಸರಳ ಪದಗಳಲ್ಲಿ ವಿವರಿಸಿದ್ದಾರೆ. ಸ್ವ ನಾಟಕಕಾರರೂ ಆಗಿದ್ದ ಸದಾಶಿವಯ್ಯ 'ಚೆಲುವಾಂತ ಚೆನ್ನಿಗ' (ಅಮರ ಶಿಲ್ಪಿ ಜಕಣಾಚಾರಿ); ''ಕನಸಿನಾ ದೇವಿ'' (ಪ್ರತಿಜ್ಞೆ) ಮುಂತಾದ ಕೆಲವು ಒಳ್ಳೆಯ ಗೀತೆಗಳನ್ನು ರಚಿಸಿದ್ದಾರೆ.

ಕನ್ನಡ ಚಿತ್ರರಂಗದ ಹೆಸರಾಂತ ಸಾಹಿತಿ, ನಿರ್ದೇಶಕ ಜಿ.ವಿ. ಅಯ್ಯರ್ 'ಸೋದರಿ' ಚಿತ್ರದ ಮೂಲಕ ಗೀತ ರಚನೆಯಲ್ಲಿ ತೊಡಗಿಕೊಂಡರು. ಸ್ವತಃ ನಿರ್ದೇಶಕರೂ ಆಗಿರುವ ಅಯ್ಯರ್ ಚಿತ್ರದ ಸನ್ನಿವೇಶಗಳಿಗೆ ತಕ್ಕಂತೆ ಗೀತೆಗಳನ್ನು ರಚಿಸಿದ್ದಾರೆ. ''ನನ್ಯಾಕೆ ನೀ ಹಂಗೆ'' (ಗಾಳಿ ಗೋಪುರ); ' ಬಂಗಾರದೊಡವೆ ಬೇಕೆ' (ಕಣ್ತೆರೆದು ನೋಡು) ಮುಂತಾದ ಗೀತೆಗಳು ಅವರ ರಚನಾ ಶೈಲಿಗೆ ಕೆಲವು ಉದಾಹರಣೆಗಳು. ಹಾಸ್ಯ ಪಾತ್ರಗಳಿಗೆ ಒಗ್ಗುವಂತೆ 'ರಾತ್ರಿಯಲಿ ಮಳೆಬಂದ್ರೂ' (ಅಮ್ಮ) ಮುಂತಾದ ಗೀತೆಗಳನ್ನು ಅವರು ಬಂದಿದ್ದಾರೆ. ನಾಡು-ನುಡಿ ಬಗೆಗೆ ಅಭಿಮಾನ ಮೂಡಿಸುವಂತ 'ಕಲಿಯಿರೊಂದು ಪಾಠವನ್ನು'; 'ಕನ್ನಡದ ಕುಲದೇವಿ'; 'ಕನ್ನಡದ

ಮಕ್ಕಳೆಲ್ಲ ಒಂದಾಗಿ ಬನ್ನಿ'; 'ಬಾ ತಾಯೆ ಭಾರತಿ'ಯಂಥಾ ಗೀತೆಗಳು ಅವರ ಲೇಖನಿಯಿಂದ ಹೊರಹೊಮ್ಮಿವೆ.

'ಸ್ವರ್ಣ ಗೌರಿ' ಚಿತ್ರಕ್ಕೆ ಸಂಭಾಷಣೆ ಬರೆದ ಜಾನಪದ ತಜ್ಞ ಎಸ್.ಕೆ. ಕರೀಂಖಾನ್ ಚಿರಕಾಲ ಉಳಿಯುವಂಥ ಸುಂದರ ಗೀತೆಗಳನ್ನು ಬರೆದಿದ್ದಾರೆ. 'ನಟವರ ಗಂಗಾಧರ'; 'ಬಾರೇ ನೀ ಚೆಲುವೆ' ಮುಂತಾದ ಉತ್ತಮ ರಚನೆಗಳನ್ನು ನೀಡಿದ ಕರೀಂಖಾನ್ ಅವರನ್ನು ಕನ್ನಡ ಚಿತ್ರರಂಗ ಸರಿಯಾಗಿ ಬಳಸಿಕೊಳ್ಳಲಿಲ್ಲ. ಅವರ ರಚನೆಗಳಲ್ಲಿ ನಾದಮಾಧುರ್ಯ ಪ್ರಧಾನವಾಗಿತ್ತು. ರಂಗಭೂಮಿ ಹಿನ್ನೆಲೆಯಿಂದ ಬಂದ ನಟ-ಸಾಹಿತಿ - ಅಶ್ವಥ್ ಅವರ ರಚನೆಗಳಲ್ಲಿ 'ಕಠಾರಿ ವೀರ' ಚಿತ್ರದ 'ಚೆಂಗು ಚೆಂಗೆಂದು ಹಾರುವ ರಂಗು ರಂಗಿನ ಈ ಜಿಂಕೆ'; 'ನಂದಾದೀಪ' ಚಿತ್ರದ 'ನಾಡಿನಿಂದ ಈ ದೀಪಾವಳಿ' ಹಾಗೂ 'ನಲಿವ ಮನ' ಸರಳ ಸುಂದರ ಗೀತೆಗಳು.

'ಸತಿ ಸುಕನ್ಯ' ಚಿತ್ರದ 'ಮಧುರ ಮಧುರವೀ ಮಂಜುಳ ಗಾನ' ಗೀತೆಯನ್ನು ರಚಿಸಿದ ಎಂ.ಎನ್. ಆರಾಧ್ಯ ಕೆಲವು - ಗೀತೆಗಳನ್ನು ರಚಿಸಿದ್ದಾರೆ.

'ಈ ದೇಹದಿಂದ ದೂರವಾದೆ ಏಕೆ ಆತ್ಮನೆ' ಎಂಬ ಅತ್ಯುತ್ತಮ ವಿಷಾದ ಗೀತೆಯನ್ನು ರಚಿಸಿದ ವಿಜಯ ನಾರಸಿಂಹ ಕನ್ನಡ ಚಿತ್ರರಂಗದ ಮತ್ತೊಬ್ಬ ಪ್ರಮುಖ ಗೀತರಚನಕಾರರು. ಕೆಲವು ಸನ್ನಿವೇಶ, ಪಾತ್ರಗಳಿಗೆ ತಕ್ಕಂತೆ ಗೀತೆಗಳನ್ನು ರಚಿಸಿರುವ ವಿಜಯನಾರಸಿಂಹ ಪುಟ್ಟಣ್ಣ ಕಣಗಾಲ್ ಮತ್ತು ಬಿ.ಆರ್. ಪಂತುಲು ಅವರ ಬಹುತೇಕ ಚಿತ್ರಗಳಿಗೆ ಅತ್ಯುತ್ತಮ ಗೀತೆಗಳನ್ನು ರಚಿಸಿದ್ದಾರೆ. 'ಪಂಚಮವೇದ ಪ್ರೇಮದ ನಾದ'; 'ಸಂಗಮ ಸಂಗಮ'; 'ಹಾವಿನ ದ್ವೇಷ ಹನ್ನೆರಡು ವರುಷ'; 'ಹದಿನಾಲ್ಕು ವರ್ಷ'; ಹಾಗೂ 'ಉಪಾಸನೆ' ಚಿತ್ರದ 'ಭಾರತ ಭೂಶಿರ ಮಂದಿರ' ವಿಜಯನಾರಸಿಂಹ ಅವರ ಕೆಲವು ಉತ್ತಮ ರಚನೆಗಳು.

'ಶ್ರೀರಾಮ ಪೂಜಾ' ಚಿತ್ರದ ಮೂಲಕ ಗೀತರಚನೆಗೆ ಕೈಹಾಕಿದ ಗೀತಪ್ರಿಯ (ಲಕ್ಷ್ಮಣ್ ಮೋಹಿತ್) ಬಹುತೇಕ ಗದ್ಯದ ಶೈಲಿಯಲ್ಲಿ ಗೀತೆಗಳನ್ನು ರಚಿಸಿದ್ದಾರೆ.

'ಆಡುತಿರುವ ಮೋಡಗಳೇ' (ಬೆಟ್ಟದ ಹುಲಿ); '' ನೀನೆಲ್ಲಿ ನಡೆವೆ ದೂರ' (ಒಂದೇ ಬಳ್ಳಿಯ ಹೂವು); 'ಬರೆಯದ ಕೈಗಳು ಬರೆಯುತಿವೆ' (ಮಣ್ಣಿನ ಮಗ)' 'ಬೆಳುವಲದ ಮಡಿಲಲ್ಲಿ ಬೆವರ ಹನಿ ಬಿದ್ದಾಗ' (ಬೆಳುವಲದ ಮಡಿಲಲ್ಲಿ) ಮುಂತಾದ ಗೀತೆಗಳಲ್ಲಿ ಅವರು ನಿರ್ದೇಶಕರಾಗಿ ತಮ್ಮ ಅಗತ್ಯಕ್ಕೆ ತಕ್ಕಂತೆ ಪದಗಳನ್ನು ಬಳಸಿದ್ದಾರೆ. 'ಕಲ್ಯಾಣಿ' ಚಿತ್ರದ 'ವೀಣಾ ನಿನಗೇಕೋ ಈ ಕಂಪನ' ಗೀತೆಯ ಮೂಲಕ ತಾವು ಕಾವ್ಯಮಯ ಗೀತೆಗಳನ್ನು ಬರೆಯಬಹುದೆಂದು ಗೀತಪ್ರಿಯ ನಿರೂಪಿಸಿದ್ದಾರೆ.

'ಪ್ರೇಮದ ಪುತ್ರಿ' ಚಿತ್ರದ ಮೂಲಕ ಸಾಹಿತಿಯಾಗಿ ಪ್ರವೇಶಿಸಿದ ಆರ್.ಎಸ್. ಜಯಗೋಪಾಲ್ ಆ ಚಿತ್ರದ 'ತ್ರಿಭುವನ ಜನನೀ ಜಗನ್ಮೋಹಿನಿ' ಗೀತೆಯ ಮೂಲಕ ಗಮನ ಸೆಳೆದರು. ಭಾವ ಗೀತೆಗಳ ಶೈಲಿಯಲ್ಲಿ ಹಾಡುಗಳನ್ನು ರಚಿಸುವಲ್ಲಿ ಅವರು ಸಿದ್ಧಹಸ್ತರು. ಅವರ ರಚನೆಗಳಲ್ಲಿ ಕೆ.ಎಸ್. ನರಸಿಂಹಸ್ವಾಮಿ ಅವರ ಪ್ರೇಮಗೀತೆಗಳ ಪ್ರಭಾವವನ್ನು ಅವರ ರಚನೆಗಳಲ್ಲಿ ಕಾಣಬಹುದು. ಅವರ ಉತ್ತಮ ರಚನೆಗಳಲ್ಲಿ ಯುಗಳ ಗೀತೆಗಳೇ ಹೆಚ್ಚು. 'ಬೆಳ್ಳಿಮೋಡ' ಚಿತ್ರದ 'ಬೆಳ್ಳಿ ಮೋಡದ ಅಂಚಿನಿಂದ' ಮತ್ತು 'ಇದೇ ನನ್ನ ಉತ್ತರ' ; 'ಸ್ವಯಂವರ' ಚಿತ್ರದ 'ನಿನ್ನ ಕಣ್ಣ ಕನ್ನಡಿಯಲ್ಲಿ' ; 'ಕಸ್ತೂರಿ ನಿವಾಸ' ಚಿತ್ರದ 'ನೀ ಬಂದು ನಿಂತಾಗ'; 'ನಾಂದಿ' ಚಿತ್ರದ 'ಹಾಡೊಂದ ಹಾಡುವೆ' ಅವರ ಉತ್ತಮ ರಚನೆಗಳಲ್ಲಿ ಕೆಲವು.

ಚಿ. ಉದಯಶಂಕರ್ ಕನ್ನಡ ಚಿತ್ರರಂಗದ ಅತ್ಯಂತ ಜನಪ್ರಿಯ ಸಾಹಿತಿ. 350ಕ್ಕೂ ಹೆಚ್ಚು ಚಿತ್ರಗಳಿಗೆ ಸಾಹಿತ್ಯ ಒದಗಿಸಿರುವ ಅವರು ಸಾವಿರಾರು ಜನಪ್ರಿಯ ಗೀತೆಗಳನ್ನು ರಚಿಸಿದ್ದಾರೆ.

ಪ್ರಾಚೀನ ಕಾವ್ಯಗಳಿಂದ ಹಿಡಿದು ದಾಸರು, ಶರಣರು ಹಾಗೂ ಆಧುನಿಕ ಕವಿಗಳ ರಚನೆಕಾರ ಅಂಶಗಳನ್ನು ಬಳಸಿಕೊಂಡು ಗೀತೆಗಳನ್ನು ರಚಿಸಿ, ಸರಳ, ಸುಂದರ ಪದಪುಂಜಗಳನ್ನು ತಮ್ಮ ರಚನೆಗಳಲ್ಲಿ ಬಳಸಿಕೊಂಡು ಅತ್ಯಂತ ಜನಪ್ರಿಯ ಗೀತೆಗಳನ್ನು ಅವರು ಬರೆದಿದ್ದಾರೆ.

''ಗುಟ್ಟೊಂದ ಹೇಳುವೆ ಪುಟಾಣಿ ಮಕ್ಕಳೇ'' ಇಂಥ ಸರಳ ಗೀತೆಗಳಿಂದ ಹಿಡಿದು, 'ನ್ಯಾಯವೇ ದೇವರು' ಚಿತ್ರದ 'ಎಂದೆಂದು ನೀವು ಸುಖವಾಗಿರಿ'; 'ದೇವರ ಗುಡಿ' ಚಿತ್ರದ ''ಮಾಮರವೆಲ್ಲೋ ಕೋಗಿಲೆಯೆಲ್ಲೋ, ಏನೀ ಸ್ನೇಹ ಸಂಬಂಧ' ಮುಂತಾದವು ಅವರ ಉತ್ತಮ ರಚನೆಗಳಲ್ಲಿ ಕೆಲವು. 'ಕಸ್ತೂರಿ ನಿವಾಸ'ದ 'ಆಡಿಸಿ ನೋಡು ಬೀಳಿಸಿ ನೋಡು' ಒಂದು ಅರ್ಥಪೂರ್ಣ ರಚನೆ.

ವಿಜಯನಾರಸಿಂಹ, ಉದಯಶಂಕರ್, ಜಯಗೋಪಾಲ್ ಈ ಮೂವರೂ ಮೂರು ದಶಕಗಳಿಗೂ ಹೆಚ್ಚುಕಾಲ ಅತ್ಯಂತ ಪ್ರಭಾವೀ ಲೇಖಕರಾಗಿದ್ದರು.

ಕಾವ್ಯಪ್ರಿಯ ನಿರ್ದೇಶಕ ಎಸ್.ಕೆ.ಎ. ಚಾರಿ 'ಗೌರಿ' ಚಿತ್ರದಲ್ಲಿ ಕುವೆಂಪು, ಕೆ.ಎಸ್.ನ. ಅವರ ಗೀತೆಗಳನ್ನು ಬಳಸಿಕೊಂಡು ಹೊಸ ಪರಂಪರೆಯನ್ನು ಪ್ರಾರಂಭಿಸಿದರು. ಅವರ ಬಹುತೇಕ ಚಿತ್ರಗಳಲ್ಲಿ ಕನ್ನಡದ ಶ್ರೇಷ್ಠ ಕವಿಗಳ ಭಾವಗೀತೆಗಳನ್ನು ಬಳಸಿಕೊಳ್ಳಲಾಗಿದೆ. ಮುಂದೆ ಇತರ ಚಿತ್ರ ನಿರ್ಮಾಪಕರು ತಮ್ಮ ಚಿತ್ರಗಳಲ್ಲಿ ಕವಿಗಳ ಕವನಗಳನ್ನು ಬಳಸಿಕೊಂಡಿದ್ದಾರೆ. ಸ್ವತಃ ದ.ರಾ. ಬೇಂದ್ರೆ ಅವರೇ ಒಂದೆರಡು ಚಿತ್ರಗಳಿಗೆ ಹಾಡುಗಳನ್ನು ಬರೆದಿದ್ದಾರೆ.

ಕನ್ನಡ ಚಿತ್ರ ಗೀತೆಗಳಲ್ಲಿ ಗ್ರಾಮ್ಯ ಭಾಷೆಯ ಸೊಗಡನ್ನು ತಂದ ಸಾಹಿತಿ ದೊಡ್ಡರಂಗೇಗೌಡ ಹೊಸ ಪರಂಪರೆಯನ್ನು ಪ್ರಾರಂಭಿಸಿದರು. ಶಿಕ್ಷಣ, ಸಾಹಿತ್ಯ, ಸುಗಮ ಸಂಗೀತ ಮುಂತಾದ

ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡ ಸೃಜನಶೀಲ ವ್ಯಕ್ತಿ ದೊಡ್ಡರಂಗೇಗೌಡ ವಿದ್ಯಾರ್ಥಿ ದೆಸೆಯಲ್ಲೇ ಕಥೆ, ಕವನ, ವಿಮರ್ಶೆಗಳನ್ನು ಬರೆಯುತ್ತಿದ್ದರು. 'ಮಾಗಿಯ ಕನಸು' (1979) ಚಿತ್ರದಲ್ಲಿ 'ಬಂದಿದೆ ಬದುಕಿನ ಬಂಗಾರದಾ ದಿನ' ಗೀತೆಯ ಮೂಲಕ ಚಿತ್ರರಂಗ ಪ್ರವೇಶಿಸಿದರು. 'ಪರಸಂಗದ ಗೆಂಡೆತಿಮ್ಮ' ಚಿತ್ರದ 'ತೇರಾನೇರಿ ಅಂಬರದಾಗೆ ನೇಸರ ನಗುತಾನೆ' - ಗ್ರಾಮ್ಯ ಭಾಷೆಯ ಸೊಗಡಿನ ಈ ಗೀತೆ ಅತ್ಯಂತ ಜನಪ್ರಿಯವಾಯಿತು. ಸುಮಾರು 400ಕ್ಕೂ ಹೆಚ್ಚು ಚಿತ್ರಗೀತೆಗಳನ್ನು ಬರೆದಿರುವ ದೊಡ್ಡರಂಗೇಗೌಡ 'ಆಲೆಮನೆ' ಚಿತ್ರದ 'ನಮ್ಮೂರ ಮಂದಾರ ಹೂವೆ'; 'ಗಣೇಶನ ಮದುವೆ' ಚಿತ್ರದ ಅನುರಾಗ ತೋಟದಲ್ಲಿ'; 'ಕಾವ್ಯ' ಚಿತ್ರದ 'ವಂದನೆ ವಂದನೆ' ಹಾಗೂ 'ಜನುಮದ ಜೋಡಿ' ಚಿತ್ರದ 'ಕೋಲುಮಂಡೆ ಜಂಗಮ ದೇವ' ಗೀತೆಗಳಿಗೆ ನಾಲ್ಕು ಬಾರಿ ರಾಜ್ಯ ಪ್ರಶಸ್ತಿ ಗಳಿಸಿರುವುದು ಗಮನಾರ್ಹ.

1960ರ ದಶಕದಲ್ಲಿ ಸಾಹಿತಿ, ನಟ, ನಿರ್ದೇಶಕರಾಗಿ ಬಂದ ಸಿ.ವಿ. ಶಿವಶಂಕರ್ ಹಲವು ಜನಪ್ರಿಯ ಗೀತೆಗಳನ್ನು ರಚಿಸಿದ್ದಾರೆ. 'ಬೆಳೆದಿದೆ ನೋಡ ಬೆಂಗಳೂರು ನಗರ' ದಂಥ ಜನಪ್ರಿಯ ಗೀತೆ ಬರೆದ ಶಿವಶಂಕರ್ ಅವರ ರಚನೆಗಳಲ್ಲಿ ಕನ್ನಡ ನಾಡು, ಭಾಷೆ ಬಗೆಗೆ ಅತಿರೇಕದ ಅಭಿಮಾನ ಪ್ರಧಾನ.

'ಶುಭ ಮಂಗಳ' ಚಿತ್ರದ 'ನಾಕೊಂದ್ಲ ನಾಕು' ಗೀತೆಯ ಮೂಲಕ ಗಮನ ಸೆಳೆದ ರಮ್ಯ ಕವಿ ಎಂ.ಎನ್. ವ್ಯಾಸರಾವ್ ಉತ್ತಮ ಸಾಹಿತ್ಯಕ ಮೌಲ್ಯಗಳನ್ನೊಳಗೊಂಡ ಹಲವು ಚಿತ್ರಗೀತೆಗಳನ್ನು ರಚಿಸಿದ್ದಾರೆ.

ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ 'ಬೆಸುಗೆ' ಚಿತ್ರದ 'ಯಾವ ಹೂವು ಯಾರ ಮುಡಿಗೋ' ಗೀತೆಯ ಮೂಲಕ ಗಮನ ಸೆಳೆದು ಹಲವು ಚಿತ್ರಗೀತೆಗಳನ್ನು ರಚಿಸಿದ್ದಾರೆ.

ಗೀತ ರಚನಕಾರರೇ ಸಂಗೀತ ನಿರ್ದೇಶಕರಾಗಿಯೂ ಇರುವ ಹೊಸ ಪರಂಪರೆಯನ್ನು ತಂದು ಹಾಕಿದವರು ಹಂಸಲೇಖ. ಅಸಾಧಾರಣ ಪ್ರತಿಭೆಯ ಹಂಸಲೇಖಾ 'ನೀನಾ ಭಗವಂತ' ಗೀತೆಯ ಮೂಲಕ ಗಮನ ಸೆಳೆದರು. ಆಡು ಮಾತಿನಲ್ಲಿ ಹಾಡುಗಳನ್ನು ರಚಿಸಿ ಅಲ್ಲಲ್ಲಿ ಇಂಗ್ಲೀಷ್ ಬೆರೆಸಿ 'ನೋಡಮ್ಮ ಹುಡುಗಿ ಕೇಳಮ್ಮ ಸರಿಯಾಗಿ' ಗೀತೆಯಲ್ಲಿ 'ನಾನ್ ತುಂಬ ಕಟ್‌ನಿಟ್ಟು ತಲೆ ಕೆಟ್ರೆ ಕಿಕ್ ಔಟ್'- ಇಂತಹ ಪದಗಳನ್ನು ಬಳಸಿದ್ದರೆ 'ನಾನು ನನ್ನ ಹೆಂಡ್ತಿ' ಚಿತ್ರದಲ್ಲಿ 'ಯಾರೆ ನೀನು ಚೆಲುವೆ' ಯಂಥ ಮಧುರ ಗೀತೆಗಳನ್ನು ಬರೆದಿದ್ದಾರೆ. 'ಸ್ವಾತಿ ಮುತ್ತಿನ ಮಳೆ ಹನಿಯೇ'; 'ನಮ್ಮೂರ ಯುವರಾಣಿ ಕಲ್ಯಾಣವಂತೆ' ಮುಂತಾದ ಕಾವ್ಯಮಯ ಗೀತೆಗಳನ್ನು ರಚಿಸಿರುವ ಹಂಸಲೇಖ ಅವರ ರಚನೆಗಳಲ್ಲಿ ಕೆಲವೊಮ್ಮೆ ಅತಿಯಾದ ಪ್ರಾಸಪ್ರಿಯತೆ ಎದ್ದು ಕಾಣುತ್ತದೆ. ದ್ವಂದ್ವಾರ್ಥ ಗೀತೆಗಳನ್ನು ಬರೆದ ಸಂದರ್ಭಗಳೂ ಇವೆ. ಒಂದು ದಶಕಕ್ಕೂ ಹೆಚ್ಚು ಕಾಲ ಅಂದು ಅನಭಿಷಿಕ್ತ ಸಾಮ್ರಾಟರಾಗಿ ಮೆರೆದರು. ಅವರ ಶಿಷ್ಯರೇ ವಿ. ಮನೋಹರ್

'ಅನುಭವ' ಚಿತ್ರದ 'ಹೋದೆಯ ದೂರ ಓ ಜೊತೆಗಾರ' ಗೀತೆಯ ಮೂಲಕ ಗೀತ ರಚನೆ ಪ್ರಾರಂಭಿಸಿದರು. 'ಮಲಗು ಮಲಗು ಚಾರುಲತೆ'; 'ಓ ಮಲ್ಲಿಗೇ'; 'ಸೇವಂತಿಯೇ ಸೇವಂತಿಯೇ' ಮೊದಲಾದ ಜನಪ್ರಿಯ ಗೀತೆಗಳನ್ನು ಬರೆದಿದ್ದಾರೆ.

ಸಾಹಿತಿ, ಅಧ್ಯಾಪಕ ನಾಗತಿಹಳ್ಳಿ ಚಂದ್ರಶೇಖರ್ 'ಕಾಡಿನ ಬೆಂಕಿ' ಚಿತ್ರಕ್ಕೆ ಸಂಭಾಷಣೆ-ಹಾಡುಗಳನ್ನು ರಚಿಸುವ ಮೂಲಕ ಚಿತ್ರರಂಗ ಪ್ರವೇಶಿಸಿ ಮುಂದೆ ನಿರ್ದೇಶಕರಾಗಿಯೂ ಹೆಸರು ಮಾಡಿದರು. 'ಬಾನಲ್ಲಿ ಮಧು ಚಂದ್ರಕೆ', 'ಅಮೇರಿಕಾ ಅಮೇರಿಕಾ' ಮುಂತಾದ ಚಿತ್ರಗಳಿಗೆ ಗೀತೆಗಳನ್ನು ರಚಿಸಿದ್ದಾರೆ.

ಸಂಗೀತ ನಿರ್ದೇಶಕ-ಗೀತರಚನೆಕಾರ, ಈ ಎರಡೂ ಕ್ಷೇತ್ರಗಳಲ್ಲಿ ಯುವ ಪ್ರತಿಭಾವಂತರಾದ ಕೆ. ಕಲ್ಯಾಣ್, ಗುರುಕಿರಣ್ ಜನಪ್ರಿಯರಾಗಿದ್ದಾರೆ. ಈ ಪರಂಪರೆಯಲ್ಲಿ ಮುಂದುವರೆಯುತ್ತಿರುವ ಮತ್ತೊಬ್ಬ ಗೀತರಚನೆಕಾರ ನಾಗೇಂದ್ರ ಪ್ರಸಾದ್, ಕವಿರಾಜ್ ಗೀತರಚನಕಾರರಾಗಿ ಗಮನ ಸೆಳೆದಿದ್ದಾರೆ.





# ಸೊಬಗಿನ ಸಮೀಕ್ಷೆ

● ಎಂ. ಉದಯಕುಮಾರಿ

ಹೊಸ ಹೊಸದನ್ನು ಕಾಣವ ಕಟ್ಟುವ ಅದಕ್ಕೆ ಜೀವ ತುಂಬುವ ಪ್ರತಿಭೆಯುಳ್ಳವನೇ ಕವಿ. ಲೋಕ ವ್ಯಾಪಾರದಲ್ಲಿ ಸಾಧಾರಣವೆನಿಸುವ ವಸ್ತುಸಂಗತಿಗಳು ಕವಿಯ ಮನೋವ್ಯಾಪಾರದಲ್ಲಿ ವಿಶಿಷ್ಟವೆನಿಸುತ್ತದೆ. ವಿಶಿಷ್ಟ ಹೊಳಹನ್ನು ಪಡೆದು ಪ್ರಕಾಶಿಸುತ್ತವೆ. ಕವಿಯಾದವನು ಹೀಗೆಯೇ ಸಾಮಾನ್ಯ ಸಂಗತಿಗೆ ಜೀವತುಂಬಿ ವಿಶಿಷ್ಟಪಾಕದೊಂದಿಗೆ ಹದವಾಗಿಸಿ ಮತ್ತೆ ಸಹೃದಯ ಜಗತ್ತಿಗೆ ಉಣಬಡಿಸುತ್ತಾನೆ.

ಕಾವ್ಯ ರಚನೆಯಲ್ಲಿ ನಲವತ್ತು ವಸಂತಗಳನ್ನು ಕಂಡಿರುವ ಕವಿ ದೊರಂಗೌ ಅವರು ಇಂದು ಕನ್ನಡ ಸಾರಸ್ವತ ಜಗತ್ತು ಕಂಡ ಕೆಲವೇ ಶ್ರದ್ಧಾವಂತ ಬರಹಗಾರರಲ್ಲಿ ಒಬ್ಬರು. ಅರವತ್ತರ ದಶಕದಲ್ಲಿ ಹೊರತಂದ ಪ್ರಥಮ ಕವನ ಸಂಕಲನ 'ಜಗಲಿ ಹತ್ತಿ ಇಳಿದು' ಕವಿಯು ಮುಂದೆ ಏರಬಹುದಾದ ಮಜಲುಗಳ ಸೂಚನೆಯನ್ನು ನೀಡಿತ್ತು. ಈ ಸುಧೀರ್ಘ ಕಾವ್ಯ ಸಂಸರ್ಗದಲ್ಲಿ ಗೌಡರ ಕಾವ್ಯಕಾವೇರಿ ವಿವಿಧ ಮಜಲುಗಳಲ್ಲಿ ಹರಿದಿದ್ದಾಳೆ. ತೊರೆಯಾಗಿ ಝುರಿಯಾಗಿ ಕೆಲವೊಮ್ಮೆ ಜಲಪಾತವಾಗಿ ಭೋರ್ಗರೆದಿದ್ದಾಳೆ. ಪ್ರಶಾಂತ ಹೊಳೆಯಾಗಿ ಮಗದೊಮ್ಮೆ ಮನ ತಣಿಸಿದ್ದಾಳೆ. ಈ ಕಾವ್ಯನದಿ ಬತ್ತದಂತೆ ರಸದೊರತೆ ಹಿಂಗದಂತೆ ಕಾಯ್ದು ಬಂದಿರುವ ಗೌಡರ ಕಾವ್ಯಶ್ರದ್ಧೆ ಅಭೂತಪೂರ್ವವಾದುದು. ಪ್ರಸ್ತುತ 'ಹೂವು-ಹಣ್ಣು' ಕವನ ಸಂಕಲನ ವಿಭಿನ್ನ ವಸ್ತು ಆಶಯಗಳನ್ನು ಹೊಂದಿರುವ ಕೆಲವು ಕವಿತೆಗಳ ಸಂಗ್ರಹ. ನಿಸರ್ಗ ಪ್ರೇಮದಿಂದ ಹಿಡಿದು ಕೌಟುಂಬಿಕ ಪ್ರೇಮ. ಸಮಕಾಲೀನ ಸಮಾಜಿಕ ವಿಡಂಬನೆ, ಗುರುವಂದನೆ, ಹೀಗೆ ವಿಭಿನ್ನ ವಸ್ತುವಿನವರೆಗೆ ಕಾವ್ಯಹಂದರ ವ್ಯಾಪ್ತಿಯಿದೆ.

ಧ್ಯಾನಕೆ ಇಳಿದರೆ ನೆಮ್ಮದಿ ಬನವು ಕೈಬೀಸಿ ಕರೆಯುವುದು
ಬೇಟೆಗೆ ಹೋರಟರೆ ಬಯಕೆಯ ಕಡಲು ಪ್ರಕ್ಷುಬ್ಧ ಮೊರೆಯುವುದು

ಮೇಲಿನ ಸಾಲುಗಳಲ್ಲಿ ಲೌಕಿಕ ಜಗತ್ತಿನ ಆಕರ್ಷಣೆ ಧ್ಯಾನ ಶಾಂತಿಯ ನಡುವೆ ತುಯ್ದಾಡುವ

ಮನಸ್ಥಿತಿಯು ಚಿತ್ರಣವಿದೆ. ಈ ಹೊಯ್ದಾಟ 'ಸಂಸಾರ' ಕವಿತೆಯಲ್ಲೂ ಕಟಿಯಾಗಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಹಾಗೆಯೇ ನವೋದಯ ಪರಂಪರೆಯ ಎಲ್ಲ ಕಟ್ಟುಗಳನ್ನು ದಾಟಲಾರದ ಕವಿ 'ನಾನು ನನ್ನ ಪರಿಧಿ' ಕವಿತೆಯಲ್ಲಿ ಈ ಸಂದಿಗ್ಧತೆಯನ್ನು ಒಪ್ಪಿಕೊಳ್ಳುತ್ತಾರೆ.

> ನನ್ನ ಬಾಳು ಬರೆದ ಪರಿಧಿ ದಾಟುವುದರಲ್ಲಿದೆ ಸಂತೋಷದ ಸನ್ನಿಧಿ,
> ದಾಟಲಾಗದು ಎಂದೂ....!

ಈ ಸಾಲುಗಳಲ್ಲಿ ತಾನೇ ಹಾಕಿಕೊಂಡ ಪರಿಧಿಯೊಳಗೆ ಬದುಕುವ ಅನಿವಾರ್ಯತೆ. ಅದರಾಚೆಗೆ ಸಂತೋಷದ ಸನ್ನಿಧಿ ಇದಿ ಎಂಬ ಅರಿವಿದ್ದಾಗ್ಯೂ ಪರಿಧಿ ದಾಟಲಾಗದ ಅಸಹಾಯಕತೆ, ಅದರೊಳಗೇ ನೆಮ್ಮದಿಯನ್ನು ಕಂಡುಕೊಳ್ಳುವಿಕೆ ಓದುಗನಿಗೆ ವ್ಯಕ್ತವಾಗುತ್ತದೆ. ಬೇಂದ್ರೆಯವರ 'ಮನದನ್ನೆ' ಕವಿತೆಯನ್ನು ನೆನಪಿಸುವ 'ನಿನ್ನ ಹೊರತು ಬದುಕೇ ಬೆಂಕಿ' ಅನಂತಸುಖಿ. 'ಯಾಕೆ ಹೀಗೆ' 'ನೀ ಒಲಿಯೆ ನಾ ಭಾಗ್ಯಸುಖಿ' ಕವಿತೆಗಳು ಭಾವಗೀತಾತ್ಮಕ ಗುಣದಿಂದ ಕೂಡಿ ರಮ್ಯತೆಯಿಂದ ಓದುಗನ ಗಮನ ಸೆಳೆಯುತ್ತದೆ. ಈ ಕವಿತೆಗಳಲ್ಲಿ ಸಂಗಾತಿಯು ಪ್ರೇಮಮುಖಿಯಾಗಿ, ರಂಗಮುಖಿಯಾಗಿ, ತಾಯಾಗಿ ಬಿಂಬಿತಗೊಂಡಿದ್ದಾಳೆ.

> ಪ್ರಣಯವೇ ಪರಮಾನ್ನ ಪ್ರೀತಿ ಗುಂಗಿಗೆ
> ಒಮ್ಮೆ ಪ್ರೇಮ ತೀರ್ಥದಲಿ ಮಿಂದರೆ ಸಾಲು
> ಪ್ರೇಮವೇ ಪಾದೋದಕ ಪ್ರೇಮವೇ ಪವಿತ್ರ ಪ್ರಸಾದ.

ಪ್ರೇಮದ ಮಹತ್ವವನ್ನು ಕವಿ ಜಗತ್ತಿಗೆ ಸಾರುವ ಬಗೆ ಹೀಗೆ. ನಮ್ಮ ಜಾನಪದ ಕಾವ್ಯ ಹಾಗೂ ನವೋದಯ ಕಾವ್ಯದ ಹದವಾದ ಪಾಕವನ್ನು ದೊರಂಗೌ ಅವರ ನಿಸರ್ಗ ಕವಿಗೆಗಳಲ್ಲಿ ಪ್ರೇಮಕವಿತೆಗಳಲ್ಲಿ ಯಥೇಚ್ಛವಾಗಿ ಸವಿಯಬಹುದಾಗಿದೆ.

ದೊರಂಗೌ ಕಾವ್ಯಕ್ಕೆ ಚಿರಂತನ ಸ್ಫೂರ್ತಿಯ ಚಿಲುಮೆ ನಿಸರ್ಗ. ನಿಸರ್ಗದ ಸಮಸ್ತ ಕ್ರಿಯೆಯೂ ಕವಿ ಮನೋಭೂಮಿಕೆಯಲ್ಲಿ ಮಡುಗಟ್ಟಿ ಶಬ್ದ ಚಿತ್ರಗಳಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಇಳೆ ಧರಿಸುವ ವಿವಿಧ ಋತುಮಾನದ ಉಡುಗೆ-ತೊಡುಗೆಗಳು ಕವಿಯ ಸೂಕ್ಷ್ಮದೃಷ್ಟಿಗೆ ಬಾರದೇ ಹೋಗುವುದಿಲ್ಲ, ಹೇಮಂತದ ಸೊಗಸು, ಮಾಗಿ ಕಳೆದು ಲಗ್ಗೆಯಿಡುವ ಮಾಂದಳಿರ ಸಂತೆ ಇವೆಲ್ಲಾ ಕವಿಯ ಕಲ್ಪನಾ ಮೂಸೆಯಲ್ಲಿ ಶಬ್ದ ಚಿತ್ರಗಳಾಗಿ ರೂಪುಗೊಂಡು ಓದುಗನ ಹೃದಯಕ್ಕೆ ದಾಳಿ ಇಡುತ್ತವೆ. ಉದಾಹರಣೆಗೆ ಸೃಜನ ಸುರಭಿ. ಹೇಮಂತ ಇತ್ಯಾದಿ ಕವಿತೆಗಳು.

ಪ್ರಸ್ತುತ ಸಂಕಲನದಲ್ಲಿ ನಿಸರ್ಗ-ಪ್ರೇಮ ಎಂಬ ಸಾರ್ವಕಾಲಿಕ ವಸ್ತುವನ್ನು ಕೇಂದ್ರವಾಗಿ ಉಳ್ಳ ಕವಿತೆಗಳ ಜೊತೆಗೇ ಸಮಕಾಲೀನ ವಸ್ತು ಸ್ಥಿತಿಯ ಬಗೆಗೂ ಕನ್ನಡಿ ಹಿಡಿಯುವ ಕವಿತೆಗಳಿವೆ. ನಗರೀಕರಣ, ತೋರಿಕೆಯ ಢಾಂಭಿಕ ವ್ಯಕ್ತಿತ್ವದ ನಿಯಮ ಸಾಹಿತ್ಯದ ದೊಂಬರಾಟದ ವ್ಯಂಗ್ಯ ವಿಡಂಬನೆ. ವಿಪರ್ಯಾಸ ಇವು ಕೆಲವು ಕವಿತೆಗಳಿಗೆ ವಸ್ತುವಾಗಿದೆ. ಸ್ವಾತಂತ್ರ್ಯೋತ್ತರ ಭಾರತದ ನೈತಿಕ ಅಧಃಪಾಃತ ಕವಿಯ ಆಕ್ರೋಶದ ಕುಲುಮೆಯ ತಿದಿಯೊತ್ತಿ ತಿದಿಯೊತ್ತಿ ಬರಹವನ್ನು ಕಟುವಾಗಿಸಿದೆ. ದೇಶ ಮತ್ತು ಸ್ವಾತಂತ್ರ್ಯದ ಬಗೆಗಿನ ಗೌಡರ ವಿಡಂಬನಾತ್ಮಕ ಕವಿತೆಗಳು ಓದುಗನಿಗೆ ತಲುಪಿಸಬೇಕಾದ ಸಂದೇಶವನ್ನು ಸರಳವಾಗಿ ತಲುಪಿಸುತ್ತವೆ. ಸಮಕಾಲೀನ ಸಾಮಾಜಿಕ ಸ್ಥಿತಿಯ ಬಗೆಗಿನ ಸ್ಪಷ್ಟ ಅರಿವಿರುವ ದೊರಂಗೌ ಅದನ್ನು ತಮ್ಮ ಕವಿತೆಯಲ್ಲಿ ಗುರುತಿಸುತ್ತಾರೆ. 'ಯಾರಿಗೆ ಬೇಕು ಕವನ' ಕವಿತೆಯಲ್ಲಿ ಹಸಿವು-ಬಡತನ, ಅನಕ್ಷರತೆ' ತುಂಬಿರುವ ನಮ್ಮ ದೇಶಕ್ಕೆ ಬೇಕಾಗಿರುವುದು ಕವನವಲ್ಲ, ಹಸಿದ ಹೊಟ್ಟೆಗೆ ಅನ್ನ ಎಂಬ ಕಟುವಾಸ್ತವ ಸತ್ವವನ್ನು ಒಪ್ಪಿಕೊಳ್ಳುತ್ತಾರೆ. ಸ್ವಾತಂತ್ರ್ಯ-ಸ್ವೇಚ್ಛಾಚಾರದ ನಡುವೆ ವ್ಯತ್ಯಾಸವರಿಯದ ಇಂದಿನ ಸಮುದಾಯದ ಎಡಬಿಡಂಗಿತನ ಗೌಡರನ್ನು ಘಾಸಿಗೊಳಿಸುತ್ತದೆ. ಮುಗ್ಧಜನರ ಒಳ್ಳೆಯತನವನ್ನು ಬಂಡವಾಳ ಮಾಡಿಕೊಂಡು ಬಡಾಯಿ ಕೊಚ್ಚುವ ಬೊಗಳೆ ಬಿಡುವ ಕಾಗದದ ಹುಲಿಗಳಂತವರು ಗೌಡರ ಕಾವ್ಯಕ್ಕೆ ವಸ್ತುವಾಗಿದ್ದಾರೆ. ಇದರೊಂದಿಗೆ ವ್ಯಕ್ತಿ ಚಿತ್ರಗಳಾಗಿ ನಿಲ್ಲುವ ಕವಿತೆಗಳು ಗೌಡರು ಶ್ರದ್ಧೆಯಿಂದ ನೆನಸುವ ಕೆಲವು ಹಿರಿಯ ಚೇತನಗಳನ್ನು ಕುರಿತದ್ದಾಗಿದೆ. ಗೌಡರ ಕಾವ್ಯದ ವಸ್ತುವಿನ ಪರಿಧಿ ವಿಸ್ತಾರವಾಗಿದೆ. ಪ್ರಸ್ತುತ ಸಂಕಲನದ ಕವತೆಗಳನ್ನು ಗಮನಿಸಿದಾಗ ಗೌಡರ ಕವಿತೆಗಳಲ್ಲಿ ಸಾಮಾನ್ಯವಾಗಿ ಕಾಣಬರುತ್ತಿದ್ದ ಸ್ನಿಗ್ಧ ನಿಸರ್ಗ ಪ್ರೇಮ, ಕೌಟುಂಬಿಕ ಪ್ರೇಮದ ಸರ್ವವ್ಯಾಪಕತೆಯೊಂದಿಗೆ ಆಧ್ಯಾತ್ಮ ಸೆಳೆತದ ಸ್ಪಷ್ಟ ಎಳೆಯೊಂದು ಓದುಗನಿಗೆ ಮತ್ತೆ ಮತ್ತೆ ಗೋಚರಿಸುತ್ತಾ ಹೋಗುತ್ತದೆ. ಗೌಡರ ಕಾವ್ಯದ ಜಾಡು ಹೆಚ್ಚೆಚ್ಚು ಆಧ್ಯಾತ್ಮದತ್ತ ಹೊರಳಿಸಿಕೊಳ್ಳುವ ಸಣ್ಣ ಸೂಚನೆಯು ಪ್ರಸ್ತುತ ಕವಿತೆಗಳಲ್ಲಿ ಸೂಚ್ಯವಾಗುತ್ತದೆ. ಒಟ್ಟಿನಲ್ಲಿ ನಿಸರ್ಗದ ಬಗೆಗಿನ ಸಂವೇದನಶೀಲತೆ, ಅನುಭವರಮ್ಯತೆ. ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ತುಡಿತ, ಸಮೃದ್ಧ ಪ್ರೀತಿಯ ಪರಿಪೂರ್ಣ ಬದುಕಿನ ಆದರ್ಶ ಚಿತ್ರಣ, ಕಾವ್ಯದುದ್ದಕ್ಕೂ ಓದುಗನಿಗೆ ಜೊತೆಯಾಗುತ್ತದೆ. ಹೃದಯಾಳದಲ್ಲಿ ಉಳಿಯುತ್ತದೆ.

❑



# ಸಿರಿ ಸಿರಿ ಪುವ್ವ

● ಮದನ್

'ಪರಸಂಗದ ಗೆಂಡತಿಮ್ಮ' ಚಿತ್ರದ ''ತೇರಾನೇರಿ ಅಂಬರದಾಗೆ' 'ನೋಟದಾಗೆ ನಗೆಯ ಮೀಟಿ' ಹಾಡುಗಳನ್ನು ಕೇಳಿದಾಗ ಗ್ರಾಮೀಣ ಸೊಗಡನ್ನು ಚಲನಚಿತ್ರಲೋಕಕ್ಕೆ ಪಸರಿಸುವ ಅಪ್ಪಟ ಗ್ರಾಮೀಣ ಪ್ರತಿಭೆ ಉದಯಿಸಿದೆ ಅನ್ನಿಸಿತು. ಈ ಹಾಡುಗಳನ್ನು ಬರೆದವರಾರು ಎಂದು ರೆಕಾರ್ಡ್‌ನ ಹೊದಿಕೆ ನೋಡಿದಾಗ ''ದೊಡ್ಡರಂಗೇಗೌಡ'ರ ಹೆಸರನ್ನು ನೋಡಿ ನನ್ನ ಅನಿಸಿಕೆ ಪಕ್ಕಾ ಆಯಿತು. ನಮ್ಮ ಮದನ್ ಮಲ್ಲು 'ಸೌಂಡ್-ಎನ್-ಮ್ಯೂಸಿಕ್' ಆರ್ಕೆಸ್ಟ್ರಾದಲ್ಲಿ ನನ್ನ ತಮ್ಮ ಮಲ್ಲು (ಮದನ್ ಪಟೇಲ್) ಹಳ್ಳಿಯವರಂತೆ ಚಡ್ಡಿ ಧರಿಸಿ ಮಂಕರಿ ಹೊತ್ತು ಕಿವಿಗೆ ಹೂಮಾಲೆ ನೇತಾಡಿಸಿಕೊಂಡು ''ತೇರಾನೇರಿ ಅಂಬರದಾಗೆ'' ಹಾಡನ್ನು ಕುಣಿಯುತ್ತಾ ಹಾಡುವಾಗ ಜೊತೆಗೆ ಇನ್ನಿಬ್ಬರು ತಾಳವಾದ್ಯ ಬಾರಿಸುತ್ತ ಕುಣಿಯುತ್ತಿದ್ದರು. ಆಗಿನ ಕಾಲಕ್ಕೆ ಈ ಹಾಡು ಒಳ್ಳೆ ಮನರಂಜನೆ ನೀಡಿ ನಮಗೂ ಸಹ ಹೆಸರುಗಳಿಸಿಕೊಟ್ಟಿತ್ತು. ಗ್ರಾಮ್ಯ ಸೊಗಡಿನ ಹಾಡುಗಳು ಕೇಳುಗರಿಗೆ ಮುದ ನೀಡಿದವು.

ಡಾ॥ ದೊಡ್ಡರಂಗೇಗೌಡರನ್ನು ಕಾಣುವ ಸೌಭಾಗ್ಯ ಲಭಿಸಿದ್ದು ಟೈಗರ್ ಪ್ರಭಾಕರ್‌ರವರ 'ಗಂಡಿನ ಬಲ ಹೆಣ್ಣಿನ ಛಲ' ಚಿತ್ರಕ್ಕೆ ಸಂಗೀತ ನಿರ್ದೇಶನ ಮಾಡುವಾಗ. ಆ ಚಿತ್ರದ ಚಿತ್ರೀಕರಣ ಸಂಪೂರ್ಣ ಮುಗಿದಿದ್ದು, ಹಾಡುಗಳ ಚಿತ್ರೀಕರಣ ಮಾತ್ರ ಬಾಕಿ ಉಳಿದಿತ್ತು. ನಾವು ರಾಗಸಂಯೋಜನೆ ಮುಂಚೆಯೇ ಮಾಡಿದ್ದರೂ ಧ್ವನಿಗ್ರಹಣ ಕೇಂದ್ರಗಳು ಬಹಳ ಬ್ಯುಸಿ ಆಗಿದ್ದು ತಿಂಗಳುಗಟ್ಟಲೆ ಬುಕ್ ಆಗಿರುತ್ತಿದ್ದುದರಿಂದ ತರಾತುರಿಯಲ್ಲಿ ನಾಲ್ಕು ಹಾಡುಗಳ ಧ್ವನಿಮುದ್ರಣ ಮುಗಿಸಿ ಬ್ಯಾಲೆನ್ಸಿಂಗ್ ಮುಗಿಸಿ 'ನಾಗ್ರ' ಧ್ವನಿಯಂತ್ರಕ್ಕೆ ವರ್ಗಾಯಿಸಬೇಕಾಗಿತ್ತು. ಸಂಜೆ ಏಳುಗಂಟೆಗೆ ನಾಲ್ಕು ಹಾಡುಗಳ 'ಟ್ರ್ಯಾಕ್' ಮುಗಿದಿತ್ತು. ದೊಡ್ಡರಂಗೇಗೌಡರು ರಾಗಮುಟ್ಟಿನ ತತ್ಕಾರ ಬರೆದುಕೊಂಡು ಸನ್ನಿವೇಶಕ್ಕೆ ತಕ್ಕಂತೆ ನಮ್ಮ ಸಂಗೀತ ಸಂಯೋಜನೆಗೆ ಒಪ್ಪುವಂತೆ ಚಕಚಕನೆ ಹಾಡುಗಳನ್ನು ಬರೆಯುತ್ತಿದ್ದರು. ಈ ಕಡೆ ಸಾಹಿತ್ಯ ಸಿದ್ಧವಾಗುತ್ತಿದ್ದಂತೆ

ಆಕಡೆ ಚಿತ್ರಾ, ರಾಜೇಶ್ ಕೃಷ್ಣನ್, ಬಿ.ಆರ್. ಮಂಜುಳಾರವರ ಧ್ವನಿಯನ್ನು ಮುದ್ರಿಸುತ್ತಿದ್ದೆವು. ಈ ಅನಿವಾರ್ಯತೆಯಲ್ಲಿ ನಿರ್ಮಾಪಕ ಮಿತ್ರರಿಗೆ ಕಟ್ಟುಬಿದ್ದು ನಾನೊಂದು ಅಣ್ಣ-ತಂಗಿಯ ಸಂವೇದನಾ ಗೀತೆಯನ್ನು ಬರೆದಿದ್ದೆ. ಆ ಹಾಡಿಗೆ ರಾಜೇಶ್ ಕೃಷ್ಣನ್ ಹಾಗೂ ಬಿ.ಆರ್. ಮಂಜುಳಾರವರು ಧ್ವನಿ ನೀಡುತ್ತಿದ್ದರು. ಆ ಗೀತೆಯ ಚರಣದ ಎರಡು ಸಾಲುಗಳು ಪುನರುಕ್ತಿಯಾಗುವುದು, ಬೇಡ. ಇನ್ನೆರಡು ಸಾಲುಗಳನ್ನು ಬೇರೆಯದೆ ಬರೆಯಿರಿ ಎಂದು ನಿರ್ದೇಶಕರು ನನಗೆ ಹುಕುಂ ಮಾಡಿದರು. ಆದರೆ ಆಗಿದ್ದ ಕೆಲಸಗಳ ಒತ್ತಡದಲ್ಲಿ ಬೇರೆ ಸಾಲುಗಳು ನನ್ನಿಂದ ಮೂಡಲಿಲ್ಲ. ಆಗ ಗೌಡರು ''ಮದನ್‌ರವರೇ ಇಲ್ಲಿ ಕೊಡಿ'' ಎಂದು ಹೇಳಿ ತಮ್ಮ ಸುಂದರ ಕೈ ಬರಹದಿಂದ ಅದ್ಭುತವಾದ ಶಬ್ದಗಳಿಂದ ಆ ಹಾಡಿಗೆ ಜೀವ ತುಂಬಿದರು. ನಮ್ಮ ಚಿತ್ರತಂಡದವರು ಸಂತಸದಿಂದ ಬೀಗಿದರು. ಮಾನವೀಯ ಗುಣದ ನನ್ನ ಮೆಚ್ಚಿನ ಕವಿಗಳಾದ ಸಹೃದಯಿ- ಡಾ॥ ದೊಡ್ಡರಂಗೇಗೌಡರನ್ನು ಇಂದಿಗೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನಾಡಗೀತೆ, ಪ್ರೇಮಗೀತೆ, ಶೋಕಗೀತೆ ಅಥವಾ ಹಿನ್ನೆಲೆ ಹಾಡು ಯಾವುದಾದರೂ ಆಗಿರಲಿ ಸಂಗೀತ ನಿರ್ದೇಶಕ, ಚಿತ್ರ ನಿರ್ದೇಶಕನ ಪರಿಕಲ್ಪನೆಗೆ ಸರಿಹೊಂದುವಂತೆ ಹಲವಾರು ಸ್ವರ ಸಂಯೋಜನೆಗಳಿಂದ ಒಂದನ್ನು ಆರಿಸಿ ಅದನ್ನು ಇಂಪ್ರೂವೈಸ್ ಮಾಡಿ ಅಂತಿಮಗೊಳಿಸುತ್ತಾನೆ. ನಂತರ ಸಾಹಿತ್ಯ ಬರೆಸಲು ಗೀತರಚನಾಕಾರರನ್ನು ಕರೆಸುತ್ತಾರೆ. ಅವರುಗಳು ಸಂಗೀತದ ಮಟ್ಟುಗಳಿಗೆ ತಕ್ಕಂತೆ ತತ್ಕಾರ ಬರೆದುಕೊಂಡು ಸಾಹಿತ್ಯ ರಚಿಸುತ್ತಾರೆ. ಕೆಲ ಗೀತರಚನಾಕಾರರು ತಮ್ಮ ಸಾಹಿತ್ಯದ ಅಳತೆಗೆ ಒಂದೆರಡು ಅಕ್ಷರಗಳನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಲು ಕೋರುತ್ತಾರೆ. ಸಂಗೀತ ನಿರ್ದೇಶಕ ತನ್ನ ಸಂಯೋಜನೆಗೆ ಕುತ್ತು ಬಾರದಂತಿದ್ದರೆ ಒಪ್ಪುತ್ತಾನೆ ಅಥವಾ ತನ್ನ ಟ್ಯೂನನ್ನು ಸ್ವಲ್ಪ ಮಟ್ಟಿಗೆ ಬದಲಾಯಿಸುತ್ತಾನೆ. ಇದು ಸರ್ವೆ ಸಾಮಾನ್ಯ ವಿಷಯ. ಆದರೆ, ನಾನು ಕಂಡಂತೆ ಡಾ॥ ದೊಡ್ಡರಂಗೇಗೌಡರು ತತ್ಕಾರದ ಅಳತೆಗೆ ವ್ಯತ್ಯಾಸ ಬಾರದಂತೆ ಸಂಗೀತದ ಸಂಯೋಜನೆಗೆ ಚ್ಯುತಿ ಬಾರದಂತೆ ಚಿತ್ರ ನಿರ್ದೇಶಕನ ಪರಿಕಲ್ಪನೆಗೆ ಹಾಗೂ ಸನ್ನಿವೇಶಕ್ಕೆ ತಕ್ಕಂತೆ ಸಾಹಿತ್ಯ ರಚಿಸುತ್ತಾರೆ. ಹಾಡಿನ ಸಾಲು ನಮಗೆ ಒಪ್ಪದಿದ್ದರೆ (ಬಹಳ ಅಪರೂಪ) ತಕ್ಷಣವೇ ಬೇರೆ ಪದಗಳಿಂದ ಇನ್ನೊಂದು ಸಾಲು ರೂಪುಗೊಳ್ಳುತ್ತದೆ. ಅದು ಗೌಡರಿಗೇ ಹಿಡಿಸದಿದ್ದಲ್ಲಿ ಬೇರೆಯೆ ಬರೆದುಕೊಡುತ್ತಾರೆ. ಜತೆಗೆ ತಾವೇ ಹಾಡಿ ತೋರಿಸುತ್ತಾರೆ. ಸ್ವರ ಸಂಯೋಜನೆಗೆ ಪೂರಕವಾಗಿ ಒತ್ತಾಕ್ಷರ, ಧೀರ್ಘಾಕ್ಷರಗಳು ಸುಲಲಿತವಾಗಿ ಹಾಡಲು ಗಾಯಕರಿಗೆ ಸುಲಭವಾಗುತ್ತದೆ. ಇವರು ಬರೆದ ಹಾಡುಗಳನ್ನು ಗುನಗಬೇಕಾಗಿಲ್ಲ. ಹಾಡಿನ ಸಾಹಿತ್ಯವೇ ಬಾಯಿಗೆ ಬರುವಷ್ಟು ಇಂಪಾಗಿರುತ್ತವೆ. ಕೇಳುಗರಿಗಷ್ಟೆ ಅಲ್ಲ ಹಾಡುವವರಿಗೂ ಅಪ್ಯಾಯಮಾನ. ಇದು ದೊಡ್ಡರಂಗೇಗೌಡರ ಸಾಹಿತ್ಯಕ್ಕೆ ಸಾಕ್ಷಿ ಹಾಗೂ ಸತ್ಯ.

ಪ್ರಖ್ಯಾತ ಆಡಿಯೋ ಕಂಪನಿಯಾದ ಸಿ.ಬಿ.ಎಸ್. ಸಂಸ್ಥೆಯಿಂದ 'ಅಷ್ಟ ಲಕ್ಷ್ಮಿ ಭಕ್ತಿಮಾಲ' ಎಂಬ ಕನ್ನಡ, ತೆಲಗು ಹಾಗೂ ತಮಿಳು ಭಾಷೆಗಳಿಂದ ಧ್ವನಿಸುರುಳಿಗಳನ್ನು ಹೊರತರಲು

ಯೋಜಿಸಿ, ಅದರ ಸಂಪೂರ್ಣ ಜವಾಬ್ದಾರಿಯನ್ನು ನಮಗೆ ವಹಿಸಿದ್ದರು. ನಮ್ಮ ಸಂಗೀತ ನಿರ್ದೇಶನದಲ್ಲಿ ಎಂಟು ಹಾಡುಗಳ ಟ್ರ್ಯಾಕ್ ಸಿದ್ಧವಾಗಿತ್ತು. ಕನ್ನಡದಲ್ಲಿ ಸಾಹಿತ್ಯ ರಚಿಸಲು ಡಾ॥ ದೊಡ್ಡರಂಗೇಗೌಡರನ್ನು ಕೇಳಿಕೊಂಡೆವು. ಸಾಮಾನ್ಯ ಜನರಿಗೂ ಅರ್ಥವಾಗುವಂತೆ ವಿಶಿಷ್ಟ ಪದಗಳನ್ನು ಬಳಸಿ ಗೌಡರು ರಚಿಸಿಕೊಟ್ಟರು. ನಂತರ ಅದೇ ಎಂಟು ಹಾಡುಗಳ ಟ್ರ್ಯಾಕ್‌ಗೆ ತೆಲುಗು ಭಾಷೆಯಲ್ಲಿ ಪಂಡಿತರೊಬ್ಬರಿಂದ ಹಾಗೂ ತಮಿಳು ಭಾಷೆಯಲ್ಲಿ ವಾದ್ಯಾರ್‌ರೊಬ್ಬರಿಂದ ಸಾಹಿತ್ಯ ಬರೆಯಿಸಿದೆವು. ಈ ಮೂರು ಭಾಷೆಯ ಹಾಡುಗಳನ್ನು ಗಾನಕೋಗಿಲೆ ಪಿ. ಸುಶೀಲಾರವರು ಹಾಡಿದರು. ನನ್ನ ತಾಯ್ನುಡಿ ಕನ್ನಡ ಭಾಷೆಯ ಒಲವಿನಿಂದ ಗಾಯಕಿ ಪಿ. ಸುಶೀಲಾರವರನ್ನು ತಮಿಳಿನಲ್ಲಿ ಕೇಳಿದೆ "ಮೇಡಂ, ಈ ಮೂರು ಭಾಷೆಗಳಲ್ಲಿ ಹಾಡುವಾಗ ನಿಮಗೆ ಸರಾಗವಾಗಿ ಹಾಡಿದ ಅನುಭವ ಯಾವ ಭಾಷೆಯಲ್ಲಿ ಆಯಿತು" ಎಂದು . ಆಗ ಆಕೆ "ಕನ್ನಡಂ" ಎಂದರು. ನನಗೆ ಸ್ವರ್ಗದಲ್ಲಿ ತೇಲಿದಂತಾಗಿ ಕಣ್ಣು ತೇವವಾಯಿತು. ಗೌಡರ ಆ ಎಂಟು ಗೀತೆಗಳು ಭಕ್ತಿ ಭಾವ ರಸ ತುಂಬಿ ಕಿವಿಗೆ ಬಲು ಇಂಪಾಗಿದ್ದವು.

ಈ ಮೂರು ಭಾಷೆಯ "ಅಷ್ಟಲಕ್ಷ್ಮಿ ಭಕ್ತಿಮೂಲ" ಮಾರುಕಟ್ಟೆಗೆ ಬಿಡುಗಡೆಯಾಯ್ತು. ನನ್ನ ಹಿರಿಯ ಮಿತ್ರರಾದ ಶ್ರೀಮಾನ್ ಪಾರ್ವತಿ ಸುತರವರಿಗೆ ಕನ್ನಡ ಹಾಗೂ ತೆಲುಗು ಭಾಷೆಯ ಕ್ಯಾಸೆಟ್‌ಗಳನ್ನು ಕಳುಹಿಸಿದೆ. ನಂತರ ಅವರನ್ನು ಭೇಟಿಯಾದಾಗ ಹಾಡುಗಳ ಬಗ್ಗೆ ವಿಚಾರಿಸಿದೆ. ಪಾರ್ವತಿಸುತರವರು ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ಅಗಾಧ ಜ್ಞಾನ ಉಳ್ಳವರು. ದೊಡ್ಡರಂಗೇಗೌಡರ ಸಾಹಿತ್ಯದ ಬಗ್ಗೆ ಬಹಳವಾಗಿ ಹೊಗಳಿ ದೀರ್ಘವಾದ ವ್ಯಾಖ್ಯಾನವನ್ನೇ ನೀಡಿದರು. ನನಗೆ ತಮಿಳು ಚೆನ್ನಾಗಿ ಬರುವುದರಿಂದ ಪಿ. ಸುಶೀಲಾರವರು ತಮಿಳು ಭಾಷೆಯಲ್ಲಿ ಹಾಡುವಾಗಲೆ ಅದರ ಸಾಹಿತ್ಯ ಅಷ್ಟಕ್ಕಷ್ಟೆ ಅಂತ ಗೊತ್ತಾಗಿತ್ತು. ಇದು ಡಾ॥ ದೊಡ್ಡರಂಗೇಗೌಡರ ಸಾಹಿತ್ಯದ "ಗಟ್ಟಿತನ"ಕ್ಕೆ ಜ್ವಲಂತ ಸಾಕ್ಷಿ.

ಹ್ಯಾಟ್ರಿಕ್ ಹೀರೊ ಶಿವರಾಜ್‌ಕುಮಾರ್ ಹಾಗೂ ಕುಮಾರ್ ಬಂಗಾರಪ್ಪ ಸ್ವತಃ ಹಾಡಿರುವ "ಯೌವನ ಬಂದಾಗ" ಧ್ವನಿ ಸುರಳಿಗೆ ದೊಡ್ಡರಂಗೇಗೌಡರದು ಸಾಹಿತ್ಯ, ನಮ್ಮದೇ ಸಂಗೀತ. ಈ ಧ್ವನಿ ಸುರಳಿಯಲ್ಲಿ ಒಂದು ಹಾಡು ಹಂಸಧ್ವನಿ ರಾಗದಲ್ಲಿ ಪಾಶ್ಚಾತ್ಯ ಧಾಟಿಯಲ್ಲಿ ಮಿಶ್ರ ತಾಳಗಳು ಮಿಳಿತವಾಗಿ ಸಂಯೋಜಿಸಿದ್ದೆ. ಆ ಗೀತೆಗೆ ಕೆಲವೇ ನಿಮಿಷಗಳಲ್ಲಿ ಸಂಯೋಜನೆಗೆ ತಕ್ಕಂತೆ ಸಾಹಿತ್ಯ ರಚಿಸಿ ಬೆರಗುಗೊಳಿಸಿದರು ನಮ್ಮ ದೊಡ್ಡರಂಗೇಗೌಡರು.

ಆದಿಚುಂಚನಗಿರಿ ಪುಣ್ಯಕ್ಷೇತ್ರದ ಹಾಗೂ ಮಹಾ ಮಹಾಜಗದ್ಗುರುಗಳಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಬಗೆಗಿನ ಧ್ವನಿ ಸುರಳಿಗಳಿಗೆ ಎಲ್ಲಾ ಗೀತೆಗಳನ್ನು ದೊಡ್ಡರಂಗೇಗೌಡರೇ ರಚಿಸಿದ್ದರು. ಭಕ್ತಿರಸಪೂರ್ಣವಾದ ಭೈರವೇಶ್ವರರ ಹಾಡುಗಳು ಮತ್ತು ಜಾನಪದ ಸೊಗಡಿನ ಕ್ಷೇತ್ರದರ್ಶನ ಗೀತೆಗಳನ್ನು ಕೇಳುವಾಗ ಕಿವಿ ಕಣ್ಣಾಗುತ್ತವೆ.

ನನ್ನ ಮಿತ್ರ ಪ್ರಭುದೇವ್ ಅಂತ ಧ್ವನಿಮುದ್ರಣ ಇಂಜಿನಿಯರ್ ಒಬ್ಬರಿದ್ದರು. ಅವರು ತಮಿಳಿಗರು. ಅವರು ದೊಡ್ಡರಂಗೇಗೌಡರನ್ನು 'ಸಿರಿ ಸಿರಿ ಪುವ್ವ' (ಗೌಡರಿಲ್ಲದಿರುವಾಗ) ಎಂದು ಕರೆಯುತ್ತಿದ್ದರು. ತಮಿಳಿನಲ್ಲಿ 'ಸಿರಿ ಸಿರಿ ಪುವ್ವ' ಎಂದರೆ 'ನಗು ನಗು ಹೂವೆ' ಅಂತ. ಹೌದು, ಇದು ಗೌಡರಿಗೆ ಸರಿಯಾಗಿ ಅನ್ವಯವಾಗುತ್ತದೆ. ತಾವು ಬರೆದ ಹಾಡುಗಳನ್ನು ಕೇಳಲು ರಿಕಾರ್ಡಿಂಗ್ ಥೇಟರಿಗೆ ಕನ್‌ಸೋಲ್ ಕೊಠಡಿಯನ್ನು ಪ್ರವೇಶಿಸುವಾಗಲೇ ನಗುತ್ತಲೆ ಒಳಬರುತ್ತಿದ್ದರು. ಎಲ್ಲರೊಂದಿಗೆ ನಗುನಗುತ್ತಲೆ ಮಾತಾಡುವರು. ನಗುನಗುತ್ತಲೆ ತಮ್ಮ ಅಭಿಪ್ರಾಯ ಸೂಚಿಸುವರು. ಎಲ್ಲಕ್ಕೂ ಮುಂಚೆ ನಗು. ನಗು ಬೆರೆಸಿಯೇ ಮಾತನಾಡುವರು. ಅವರ ನಿಷ್ಕಳಂಕ ಸುಂದರವಾದ ನಗು ಅವರ ಇಂಪಾದ ದನಿಯೊಡನೆ ಹಾಲಿಗೆ ಸಕ್ಕರೆ ಬೆರೆತಂತೆ ಇರುತ್ತದೆ.

''ಸಿರಿ ಸಿರಿ ಪುವ್ವ'' - ನಗು ನಗುವ ಹೂವು ಎನ್ನುವುದು ಅವರಿಗೆ ಒಪ್ಪವಾಗಿ ಒಪ್ಪುವುದು.

ಡಾ॥ ದೊಡ್ಡರಂಗೇಗೌಡರ ಸಾಹಿತ್ಯ-ಸಂಗೀತ ಸೇವೆ ಕನ್ನಡನಾಡಿಗೆ ಕನ್ನಡಿಗರಿಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಸಲ್ಲಲು ಅವರು ತುಂಬು ಜೀವನ ಬಾಳಿ 'ನಗು ನಗು ಹೂ'ವಾಗಿರಲಿ. ಅವರಿಗೆ ನಮ್ಮ ಆತ್ಮೀಯ ಅಭಿನಂದನೆಗಳು.





# ಬೆಳ್ಳಿ ತೆರೆಯಾಚೆಗೂ....

• ಎಸ್. ಜಗನ್ನಾಥರಾವ್ ಬಹುಳೆ

ಡಾ॥ ದೊಡ್ಡರಂಗೇಗೌಡರನ್ನು ಕುರಿತು ಮಾತನಾಡುವುದೆಂದರೆ, ಅಥವಾ ಬರೆಯುವುದೆಂದರೆ, ಒಂದು ಮಧುರ ಅನುಭವವೇ ಹೌದು. ಕನ್ನಡ ಭಾಷೆಯ ಮಹತ್ವದ ಆಯಾಮವೊಂದು ತೆರೆದುಕೊಂಡದ್ದು ಗೆಂಡೆತಿಮ್ಮನ ಹಾಡುಗಳಿಂದ. ನಿಸ್ಸಂಶಯವಾಗಿಯೂ ಕನ್ನಡ ಚಿತ್ರಗೀತೆಗಳಿಗೆ ಜನಪದ ಹಾಗೂ ಗ್ರಾಮೀಣ ಸೊಗಡಿನ ರಮ್ಯತೆ ಮಿಳಿತಗೊಂಡಿದ್ದು ಸಹ ಗೌಡರಿಂದಲೇ. ಅಂದಿನಿಂದಲೂ ದೊಡ್ಡರಂಗೇಗೌಡರ ಗೀತೆಗಳೆಂದರೆ ಕೇಳುಗನಿಗೆ ಒಂದು ವಿಭಿನ್ನ ಸಾಹಿತ್ಯದ ಪಲುಕು ದೊರೆಯುತ್ತಲೇ ಬಂತು. ಉಪನ್ಯಾಸಕರಾಗಿ-ಕವಿಯಾಗಿ ಗೌಡರು ಬಹು ದೊಡ್ಡ ಕೆಲಸ ಮಾಡಿದ್ದರೂ ಜನಮಾನಸಕ್ಕೆ ಹತ್ತಿರದ ಕವಿಯಾಗಿದ್ದು ಮಾತ್ರ ಬೆಳ್ಳಿ ತೆರೆಯ ಜನಪ್ರಿಯತೆಯಿಂದಲೇ ಎಂಬುದನ್ನು ಒಪ್ಪಬೇಕಾಗುತ್ತದೆ. ಆದರೆ ಬೆಳ್ಳಿ ತೆರೆಯಾಚೆಗೂ ವಿಸ್ತರಿಸಿದ ಅವರ ಪ್ರಕಾಂಡ ಸಾಹಿತ್ಯ ಸೃಷ್ಟಿ ಅವರು ಎಲ್ಲೆಡೆ ಸಲ್ಲುವ ಅಂತಃಶಕ್ತಿಯುಳ್ಳ ಗಟ್ಟಿ ನೆಲೆಯ ಸಾಹಿತಿ ಎಂಬುದನ್ನು ಧೃಢ ಪಡಿಸಿತು.

ನಾನವರನ್ನು ಮೊದಲು ಭೇಟಿಯಾದದ್ದು ಅವರ - ಎಸ್.ಎಲ್.ಎನ್. ಕಾಲೇಜಿನಲ್ಲಿ. ಪ್ರಜಾಮತ ಪತ್ರಿಕೆಯಲ್ಲಿ ಕನ್ನಡ ಸಾಹಿತಿಗಳು ಕಂಡ ನಟಸಾರ್ವಭೌಮ ಮಾಲಿಕೆಗಾಗಿ 1991ರಲ್ಲಿ ಸಂದರ್ಶಿಸಿದ್ದೆ. ಅವರ ಕೊಠಡಿಯಲ್ಲಿ ಕುಳ್ಳಿರಿಸಿಕೊಂಡು ಡಾ॥ ರಾಜ್‌ರ ಬಗ್ಗೆ ಬಹಳ ಮೌಲಿಕವಾದ ಬರಹವನ್ನು ಅಲ್ಲಿಯೇ ಬರೆದು ಕೊಟ್ಟರು. ನನ್ನ ಕಾರ್ಯವನ್ನು ಶ್ಲಾಘಿಸಿ ಇದು ಮುಂದೆ ಒಳ್ಳೆಯ ದಾಖಲೆಯಾಗುತ್ತದೆಂದು ಹರಸಿದರು. ಅವರ ಹಾರೈಕೆಯಂತೆಯೇ 'ವರನಟ' ಎಂಬ ಹೆಪ್ಪೊತ್ತಗೆಯನ್ನು ಹೊರತರುವಲ್ಲಿ ನನಗೆ ದೈವ ಸಹಾಯವೂ ಆಯಿತು. ಕೃತಿಗೆ ಪ್ರಶಸ್ತಿಗಳು ಲಭಿಸಿದವು. ನನ್ನ ಕಾರ್ಯ ಶ್ಲಾಘನೆಗೆ ಒಳಗಾಯಿತು.

ಆ ಬಳಿಕ ಗೌಡರನ್ನು ಅವರ ಸಾಹಿತ್ಯದಿಂದಷ್ಟೇ ಬಲ್ಲವನಾಗಿದ್ದ ನನಗೆ 2001ರಲ್ಲಿ ಮೊದಲ

ಕವನ ಸಂಕಲನ ಹೊರತರುವ ಅಭಿಲಾಷೆ ಉಂಟಾದಾಗ ನನ್ನ 63 ಪದ್ಯಗಳಿಗೆ ಯಾರಿಂದ ಮುನ್ನುಡಿ ಬರೆಸಬೇಕೆಂಬ ಹಂಬಲ ಟಿಸಿಲೊಡೆಯಿತು. ನನ್ನ ಸ್ಮೃತಿಗೆ ಬಂದದ್ದೇ ಮೊದಲಿಗೆ ಶ್ರೀಮಾನ್ ದೊಡ್ಡರಂಗೇಗೌಡರು. ಅವರ ಆಪ್ತರಾಗಿದ್ದ ಕನ್ನಡ ಕಣ್ಮಣಿ ಪ್ರಕಾಶನದ ಗೋವಿಂದಳ್ಳಿ ದೇವೇಗೌಡರಲ್ಲಿ ಪ್ರಸ್ತಾಪಿಸಿದೆ. ಅವರೂ ಸಹ ದೊಡ್ಡರಂಗೇಗೌಡರಿಗೆ ವಿಷಯ ತಿಳಿಸಿದರು.

ನನ್ನ ಮೊದಲ ಕೃತಿಯ ಮುನ್ನುಡಿ ಬರೆದದ್ದು ಅರ್ಥಾತ್ ನನ್ನನ್ನು ಕೃತಿಯ ಮೂಲಕ ಲೇಖಕನೆಂದು ಅಧಿಕೃತ ಮುದ್ರೆ ಒತ್ತಿ 'ಸಾರಸ್ವತ ಲೋಕಕ್ಕೆ ಪರಿಚಯಿಸಿದವರು ಗೌಡರು ಎಂಬ ನಿತ್ಯ ಸತ್ಯವು ನನ್ನ ಬಾಳಿನಲ್ಲಿ ಎಂದಿಗೂ ಅನುರಣಿಸುತ್ತಲೇ ಇರುತ್ತದೆ. ಒಬ್ಬ ಉದಯೋನ್ಮುಖ ಕವಿಯನ್ನು ಪರಿಚಯಿಸುವ ಅವರ ಪ್ರೋತ್ಸಾಹದ ಮುನ್ನುಡಿ ಬಹುಶಃ ಎಲ್ಲ ಯುವ ಕವಿಗಳಿಗೂ ಸ್ಫೂರ್ತಿದಾಯಕವೇ ಹೌದು. ಕೃತಿಯನ್ನು ಅವರಿಂದಲೇ ಬಿಡುಗಡೆಗೊಳಿಸಬೇಕೆಂಬ ಮಹದಾಸೆ ನನ್ನದಾಗಿತ್ತು. ಅಲ್ಲಿಯೂ ಅವರು ಔದಾರ್ಯತೆಯನ್ನು ತೋರಿ ತಾ.ಸಿ. ತಿಮ್ಮಯ್ಯ ಎಂಬ ಮತ್ತೊಬ್ಬ ಕವಿಯಿಂದ ಬಿಡುಗಡೆ ಮಾಡಿಸಿ ಎಂದು ಕಿವಿ ಮಾತು ಹೇಳಿದರು. ಅವರ ಅಭಿಪ್ರಾಯದಂತೆಯೇ ನಾನು ತಾ.ಸಿ. ತಿಮ್ಮಯ್ಯನವರಿಂದಲೇ ಮೊದಲ ಕೃತಿ 'ಮುತ್ತಿನ ಹನಿಗಳು' ಕವನ ಸಂಕಲನವನ್ನು ಬಿಡುಗಡೆ ಮಾಡಿಸಿದೆ.

ಗೌಡರು ಮತ್ತೊಮ್ಮೆ ಬೆಂಗಳೂರು ನಗರ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಆಕಸ್ಮಿಕವಾಗಿ ಸಿಕ್ಕರು. ಅವರೊಂದಿಗೆ ಧರ್ಮಪತ್ನಿ ಇದ್ದರು. ಅಷ್ಟೇನೂ ಪರಿಚಯ ಹಿಡಿಯುವರೊ ಇಲ್ಲವೊ ಎಂದು ನಮಸ್ಕರಿಸಿದೆ. ನನ್ನ ಹೆಸರು ತಿಳಿಸಿದೆ. ಅವರ ಮೊಗವರಳಿತು. ಧರ್ಮ ಪತ್ನಿಗೆ ಪರಿಚಯ ಮಾಡಿಸಿದರು. ಕವಿ, ಸಾಹಿತಿ ಎಂದು ಇತ್ತೀಚೆಗೆ 'ವರನಟ' ಎಂಬ ದೊಡ್ಡ ಪುಸ್ತಕ ರಚಿಸಿದ್ದಾರೆಂದು ತಿಳಿಸಿ ಆತ್ಮೀಯತೆ ತೋರಿದರು. ಸಮ್ಮೇಳನಾಧ್ಯಕ್ಷ ಎಚ್.ಎಸ್. ದೊರೆಸ್ವಾಮಿಯವರಿಗೂ ನನ್ನನ್ನು ಪರಿಚಯಿಸಿ ಕೊಟ್ಟರು. ಪುರಭವನದ ಆ ದೊಡ್ಡ ಜನಜಂಗುಳಿಯಲ್ಲಿ ನನ್ನಂತಹ ಕಿರಿಯ ಲೇಖಕನನ್ನು ಅವರು ಗುರುತಿಸಿ ನಡೆಸಿಕೊಂಡ ರೀತಿ ಅವರ ದೊಡ್ಡತನಕ್ಕೆ ಸಾಕ್ಷಿ.

ಮತ್ತೊಮ್ಮೆ ಡಾ॥ ರಾಜ್‌ಕುಮಾರ್ ಕುರಿತ ವಿಚಾರ ಸಂಕಿರಣ ಒಂದರಲ್ಲಿ ಭಾಗವಹಿಸಿ ಮಾತನಾಡಲಿದ್ದ ಗೌಡರು ನನ್ನನ್ನು ದೂರವಾಣಿ ಮೂಲಕ ಸಂಪರ್ಕಿಸಿ 'ವರನಟ' ಕೃತಿಯ ಪ್ರತಿ ಬೇಕಾಗಿದೆ. ನನಗೆ ಭಾಷಣ ಮಾಡಲು ಕೃತಿ ಸಹಕಾರಿಯಾಗಲಿದೆ ಎಂದರು. ನನಗಾದರೋ ಸಖೇದಾಶ್ಚರ್ಯ. ನನ್ನ ಕೃತಿ ಒಬ್ಬ ದೊಡ್ಡ ಸಾಹಿತಿಗಳಿಗೆ ನೆರವಾಗುವುದಾದರೆ ಅದಕ್ಕಿಂತ ಭಾಗ್ಯವೇನಿದೆ ಎಂದು ಕೂಡಲೇ ಪುಸ್ತಕವನ್ನು ಅವರಿಗೆ ಕಳುಹಿಸಿ ಕೊಟ್ಟೆ.

ಗೌಡರ ಸ್ನೇಹ ವಲಯ ಬಹಳ ದೊಡ್ಡದು. ಅವರಿಗೆ ಆಪ್ತರು ಎಂದರೆ ಸಾರಸ್ವತರೇ. ಮೃದುಭಾಷಿ, ಸರಳ ನಡೆ, ದೂರದೃಷ್ಟಿ ಕಿರಿಯರಿಗೆ ಮಾರ್ಗದರ್ಶಿಯಾಗಿ ಅವರು ವಿಭಿನ್ನವಾಗಿ

ನಿಲ್ಲುತ್ತಾರೆ. ಅವರ ಸಾಹಿತ್ಯ ಸೇವೆಗೆ ಸಿಗಬೇಕಾಗಿರುವ ಅವಶ್ಯ ಮನ್ನಣೆಗಳು ಶೀಘ್ರ ಸಿಗುವಂತಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುವೆನು. ಅವರೊಂದು ಹೆಮ್ಮರ. ಅವರ ನೆರಳಿನಲ್ಲಿ ನನ್ನಂತಹ ಅನೇಕರು ನಮ್ಮನ್ನು ತಿದ್ದಿಕೊಂಡಿದ್ದೇವೆ, ತೀಡಿಕೊಂಡಿದ್ದೇವೆ. ಕನ್ನಡಿಗರಿಗೆ ಸ್ಫೂರ್ತಿದಾತರಾಗಿ ನಮ್ಮೆಲ್ಲರ ಮೆಚ್ಚಿನ ದೊಡ್ಡರಂಗೇಗೌಡರು ನೂರ್ಕಾಲ ಬಾಳಲಿ.

❑



# ಅಪ್ಪಟ ಗ್ರಾಮೀಣ ಪ್ರತಿಭೆ

• ಡಾ॥ ಕೆ. ನಾಗಭೂಷಣ್

ಆಗ ನಾನಿನ್ನೂ ಹುಡುಗ, ಹೈಸ್ಕೂಲು ಓದುತ್ತಿದ್ದ ವಯಸ್ಸು. ನಮ್ಮೂರಿನ ಸ್ಥಿತಿವಂತರ ಮನೆಯಲ್ಲಿನ ದೊಡ್ಡ ಹಳೇ ಬ್ಯಾಂಡ್ ರೇಡಿಯೋದಲ್ಲಿ 'ಬಂಗಾರದ ಜಿಂಕೆ' ಚಿತ್ರದ 'ಒಲುಮೆ ಸಿರಿಯ ಕಂಡು' ಎನ್ನುವ ಹಾಡು ಅಲೆಅಲೆಯಾಗಿ ತೇಲಿ ಬರುತ್ತಿತ್ತು. ನನ್ನಣ್ಣ ಪದವಿ ಓದುತ್ತಿದ್ದವನು ನನಗೆ ಬಿಡಿಸಿ ಹೇಳುತ್ತಿದ್ದ 'ಈ ಹಾಡು ಬರೆದವರು ನಮ್ಮ ಕುರುಬರ ಹಳ್ಳಿ ರಂಗೇಗೌಡ್ರು ಮೇಷ್ಟ್ರು ಮಗ ದೊಡ್ಡರಂಗೇಗೌಡ ಅಂತ. ಚಲನ ಚಿತ್ರಕ್ಕೆ ಹಾಡು ಬರೆದಿದ್ದಾರೆ ಎಷ್ಟು ಚೆನ್ನಾಗಿದೆ ಅಲ್ಲವೆ?' ಎಂದಾಗ ಇಡೀ ಹಳ್ಳಿಯ ಜನಕ್ಕೆಲ್ಲ ಆಶ್ಚರ್ಯ. ನನ್ನಲ್ಲಿ ಗೌಡ್ರ ಬಗೆಗಿನ ಕುತೂಹಲ ಮೂಡತೊಡಗಿತು. ಸಿನಿಮಾ ಎಂದರೆ ಯಕ್ಷಲೋಕದಂತೆ ಕಂಡಿದ್ದ ನನಗೆ ಮತ್ತು ನಮ್ಮ ಹಳ್ಳಿಯ ಜನಕ್ಕೆ, ನಮ್ಮ ಪಕ್ಕದ ಹಳ್ಳಿಯ ವ್ಯಕ್ತಿ, ಸಿನಿಮಾ ಜಗತ್ತಿಗೆ ಪ್ರವೇಶಿಸಿ ಹಾಡು ಬರೆಯುವಷ್ಟರ ಮಟ್ಟಿಗೆ ಬೆಳೆದಿದ್ದಾರೆ ಎಂದರೆ, ನನ್ನ ಆ ಚಿಕ್ಕವಯಸ್ಸಿನ ಮನಸ್ಸಿಗೆ ಗೌಡರು ಒಂದು ರೀತಿಯ ವಿಸ್ಮಯವಾಗಿ ಕಂಡರು. ಗೌಡರ ಊರಾದ ಕುರುಬರಹಳ್ಳಿ ಮತ್ತು ನನ್ನೂರು ರಂಗನಾಯಕನರೊಪ್ಪಕ್ಕೆ ಮೂರು ಕಿಲೋಮೀಟರುಗಳ ಅಂತರ. ಕಾರಣಾಂತರಗಳಿಂದ ಕುರುಬರ ಹಳ್ಳಿಗೆ ಹೋದಾಗ ಒಂದು ಐತಿಹಾಸಿಕ ಸ್ಥಳವನ್ನು ನೋಡುವಷ್ಟೇ ಆಸ್ಥೆಯಿಂದ ಆ ಊರನ್ನು ಗಮನಿಸುತ್ತಿದ್ದೆ. ಎಂದಾದರೊಂದು ದಿನ ಅವರನ್ನು ಭೇಟಿಯಾಗಿ ಮಾತನಾಡಿಸಲು ಕಾತುರನಾಗಿರುತ್ತಿದ್ದೆ.

ಮಧುಗಿರಿಯಂತಹ ಬಯಲು ಬೆಟ್ಟಗುಡ್ಡಗಳಿಂದ ಕೂಡಿದ ಸೀಮೆಯಲ್ಲಿ, ತುಂಬೇ ಗಿಡ, ಬೇಲಿ, ಅನ್ನೆ ಕಡ್ಡಿಯಂತಹ ಕುರುಚಲು ನಾಡಿನಲ್ಲಿ ಒಬ್ಬ ಕವಿ, ಸಾಹಿತಿ, ಚಿತ್ರಗೀತಾ ರಚನೆಕಾರ ಹುಟ್ಟಲು ಸಾಧ್ಯವಿಲ್ಲ ಎನ್ನುವಂತಹ ಸಂದರ್ಭದಲ್ಲಿ ಪ್ರತಿಭೆಗಳು ಜನ್ಮತಾಳುವುದೇ ಹಳ್ಳಿಯಲ್ಲಿ ಎಂಬ ನಂಬಿಕೆಯನ್ನು ಮತ್ತೊಮ್ಮೆ ಗೌಡರು ಸಾಧ್ಯಮಾಡಿ ತೋರಿಸಿದರು. ಮಧುಗಿರಿಯ ಪ್ರದೇಶದಲ್ಲಿ ಬಳಕೆಯಾಗುವ ಭಾಷಾ ಸೊಗಡನ್ನು ತಮ್ಮ ಕಾವ್ಯ-ಹಾಡುಗಳಲ್ಲಿ ದುಡಿಸಿಕೊಂಡು

ಅದನ್ನು ಇಡೀ ಕರ್ನಾಟಕಕ್ಕೆ ಪರಿಚಯ ಮಾಡಿಕೊಟ್ಟವರು. ತಮ್ಮ ಊರಿನ ಎದುರಿಗೆ ಕಾಣುವ ಕೋಟೆ ಕಲ್ಲಪ್ಪನ ಬೆಟ್ಟವಾಗಲೀ, ಊರಿನ ದಾರಿಯ ಪಕ್ಕದಲ್ಲಿ ತಲೆದೂಗುವ ಬಾಳೆ ತೋಟ, ಬೇಲಿಯಾಗಲೀ ಎಲ್ಲವು ಅವರ ಕಾವ್ಯದ ಜೀವದ್ರವ್ಯವಾಗಿ ಬಂದವುಗಳು. ಒಬ್ಬ ಒಡ ಮೇಷ್ಟ್ರು-ಜೊತೆಗೆ ರೈತರೂ ಆದ ರಂಗೇಗೌಡರ ಮಗನಾಗಿ ಜನಿಸಿ, ಬೇಸಾಯದೊಂದಿಗೆ ಬೆಳೆಯುತ್ತ, ವ್ಯವಸಾಯೀ ಬದುಕಿನ ಗುಂಗಿಗೆ ತಲೆದೂಗಿ ಬೆಳೆಯುತ್ತ, ತಮ್ಮ ಕಾವ್ಯದ ಬದುಕಿಗೆ ಹಳ್ಳಿಯ ಬದುಕಿನಲ್ಲಿ ಆಳವಾಗಿ ಕವಿಪ್ರಜ್ಞೆಯ ಬೇರುಗಳನ್ನು ಇಳಿಸುತ್ತಾ ಹೋದವರು. ಕಾಲೇಜು ವ್ಯಾಸಂಗದ ಸಂದರ್ಭದೊಳಗೇ ತನ್ನೊಳಗಿನ ಕವಿಗೆ ಸ್ಪಷ್ಟ ಅಭಿವ್ಯಕ್ತಿ ನೀಡಿದ ಪರಿಣಾಮವಾಗಿ ಅವರ ಕಾವ್ಯ ಬದುಕು ಪ್ರಾರಂಭಗೊಂಡಿತು.

ನಾನು ಮೊದಲಿಗೆ ಗೌಡರನ್ನು ಕಂಡದ್ದು ಮಧುಗಿರಿಯ ಟಿ.ವಿ.ವಿ. ಪದವಿ ಕಾಲೇಜಿನ ಅಧ್ಯಯನದ ಸಂದರ್ಭದಲ್ಲಿ. ನಂತರ ತುಮಕೂರಿನ ಸ್ನಾತಕೋತ್ತರ ಕೇಂದ್ರದಲ್ಲಿ ಪರಸ್ಪರ ಮೊದಲ ಬಾರಿಗೆ ಪರಿಚಯವಾಯಿತು. ಮೊದಲ ಪರಿಚಯದಲ್ಲಿಯೇ ಅವರ ಆತ್ಮೀಯ ಮಾತುಕತೆ ನನ್ನ ಮನ ಸೆಳೆಯಿತು. ಎಂತಹ ಚಿಕ್ಕವರನ್ನೂ ಪ್ರೀತಿಯಿಂದ ಕಾಣುವ ಭಾವುಕತೆಯ ಆಕರ್ಷಕ ವ್ಯಕ್ತಿತ್ವದವರು. ಹೀಗೆ ಪ್ರಾರಂಭವಾದ ನನ್ನ ಅವರ ಪರಿಚಯ ನಾನು ಪಿ.ಎಚ್.ಡಿ. ಪದವಿಗಾಗಿ ಸಂಶೋಧನೆಯನ್ನು ನಡೆಸುತ್ತಿರುವ ಸಂದರ್ಭದಲ್ಲಿ ಮತ್ತಷ್ಟು ಗಾಢವಾಯಿತು. ನನ್ನ ಮಾರ್ಗದರ್ಶಕರಾದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್‌ರವರು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿದ್ದರು. ಪುಸ್ತಕ ಪ್ರಾಧಿಕಾರ ಈ ಹಿಂದೆ ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನ ಪಕ್ಕದಲ್ಲಿತ್ತು. ಆಗ ಗೌಡರು ಕೆ.ಆರ್. ಮಾರುಕಟ್ಟೆಯಲ್ಲಿರುವ ಎಸ್.ಎಲ್.ಎನ್. ಪಿಯು ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದರು. ಪ್ರೊ॥ ಕಿ.ರಂ. ನಾಗರಾಜುರವರು ಬಸವನಗುಡಿಯ ಡಿ.ವಿ.ಜಿ. ರಸ್ತೆಯ ಮನೆಯಲ್ಲಿದ್ದರು. ಮೆಜೆಸ್ಟಿಕ್‌ನಿಂದ ಹೊರಟು, ಕೆ.ಆರ್. ಮಾರುಕಟ್ಟೆಯಲ್ಲಿಳಿದು ಮೊದಲಿಗೆ ಎಸ್.ಎಲ್.ಎನ್. ಕಾಲೇಜಿಗೆ ಹೋಗಿ ಗೌಡರನ್ನು ಭೇಟಿಯಾಗಿ ಹಾಗೆಯೇ ನಡೆಯುತ್ತ, ಪುಸ್ತಕ ಪ್ರಾಧಿಕಾರಕ್ಕೆ ಹೋಗಿ, ನಮ್ಮ ಮಾರ್ಗದರ್ಶಕರೊಂದಿಗೆ ಸಮಾಲೋಚಿಸಿ, ಹಾಗೆಯೇ ಸ್ವಲ್ಪ ದೂರ ಮುಂದುವರೆದು, ಡಿ.ವಿ.ಜಿ. ರೋಡಿಗೆ ಹೋಗಿ, ಕಿ.ರಂ. ಮೇಷ್ಟ್ರನ್ನು ಭೇಟಿಯಾಗಿ ಬರುತ್ತಿದ್ದೆ. ಆ ಸಂದರ್ಭದಲ್ಲಿ ಗೌಡ್ರ ಮತ್ತು ನನ್ನೊಂದಿಗಿನ ಸಂಬಂಧಗಳು ಮರೆಯಲಾರದಂತವುಗಳು. ಬೆಂಗಳೂರಿಗೆ ಬಂದಾಗಲೆಲ್ಲಾ ಗೌಡರನ್ನು ಕಾಣದೇ ಹೋದರೆ ಯಾವುದೋ ಒಂದು ಅತೃಪ್ತಿ ಕಾಡುತ್ತಿತ್ತು. ಹಳ್ಳಿಯಿಂದ ಬೆಂಗಳೂರಿಗೆ ಬಂದಾಗ ಎಸ್.ಎಲ್.ಎನ್ ಕಾಲೇಜಿಗೆ ಹೋಗಿ ಮುಖ ತೋರಿಸಿದೊಡನೆ ಆತ್ಮೀಯತೆಯಿಂದ ಮುಖವರಳಿಸಿ 'ಬನ್ನಿ' ಎಂದು ಸ್ವಾಗತಿಸುತ್ತ ಯೋಗ ಕ್ಷೇಮ ವಿಚಾರಿಸುತ್ತಾ ಹಳ್ಳಿಯಲ್ಲಿ ಮಳೆ ಬೆಳೆ ಆಗುತ್ತಿದೆಯೇ ಎಂದು ತಾವು ಹುಟ್ಟಿ ಬೆಳೆದ ಪರಿಸರದ ಬಗೆಗೆ ಅವರಿಗಿರುವ ಕಾಳಜಿಯನ್ನು ವ್ಯಕ್ತಪಡಿಸುತ್ತಿದ್ದರು. ಹಾಗೆ ಮಾತನಾಡುತ್ತಲೇ ನನ್ನನ್ನು ಪಕ್ಕದ

ಹೋಟೆಲ್‌ಗೆ ಕರೆದೊಯ್ದು ಪ್ರೀತಿಯ ಒತ್ತಾಯದಿಂದ ಉಪಾಹಾರವನ್ನು ಮಾಡಿಸುತ್ತಿದ್ದರು. ಅಲ್ಲದೇ ನನ್ನ ಸಂಶೋಧನಾ ವಿಚಾರವನ್ನು ಬಹಳ ಆಸಕ್ತಿ ಕುತೂಹಲಗಳಿಂದ ಗಮನಿಸುತ್ತಾ ಸಮಯಕ್ಕೆ ತಕ್ಕಂತೆ ಸೂಕ್ತ ಸಲಹೆ ಮಾರ್ಗದರ್ಶನ ಮಾಡಿದರು. ಬರವಣಿಗೆಯ ಬಗ್ಗೆ ಸೋಮಾರಿಯಾದ ನನ್ನ ಮೇಲೆ ಪ್ರೀತಿಯ ಒತ್ತಾಸೆಯನ್ನು ಹೇರಿ ಅನೇಕ ಲೇಖನಗಳ ಬರವಣಿಗೆಗೆ ಕಾರಣಕರ್ತರಾದರು.

ಯಾವುದೇ ಒಬ್ಬ ಕವಿ, ಲೇಖಕ, ಸಹೃದಯನಿಗೆ ತಾನು ಹುಟ್ಟಿ ಬೆಳೆದ ಪರಿಸರ ನಿಜಕ್ಕೂ ಕಾಡುವ ಸಂವೇದನೆಯಾಗಿ ಎದೆಯಲ್ಲಿ ಸದಾ ಜೀವಂತವಿರುತ್ತದೆ. ಬದುಕಿನ ಅನಿವಾರ್ಯ ತಿರುವುಗಳಲ್ಲಿ ಜೀವನವನ್ನರಸಿ ಮನುಷ್ಯ ಬದುಕಿನ ನೆಲೆಯನ್ನು ಹುಡುಕಿಕೊಂಡು ಎಷ್ಟೇ ಹೊರ ಜಗತ್ತಿಗೆ ಹೋದರೂ ಆತನ ಮೂಲ ಬೇರುಗಳು ಹಳ್ಳಿಯಲ್ಲಿಯೇ ಇರುತ್ತವೆ. ತಾನು ಹುಟ್ಟಿದ ಕಡೆಯೇ ಸಾರ್ಥಕತೆಯನ್ನು ಕಂಡುಕೊಳ್ಳಬೇಕೆಂದು ವಿವಿಧ ಕನಸುಗಳನ್ನು ಕಂಡಿದ್ದ ವ್ಯಕ್ತಿಗೆ ಬದುಕಿನ ಅನಿವಾರ್ಯತೆಯಿಂದ ಆ ಪರಿಸರವನ್ನು ಬಿಟ್ಟು ದೂರ ಹೋಗಬೇಕಾಗಿ ಬಂದಾಗ ಅಥವಾ ಹೊರಗಡೆ ದೊಡ್ಡವ್ಯಕ್ತಿಯಾಗಿ ಮತ್ತೆ ಹಳ್ಳಿಗೆ ಹಿಂದಿರುಗಿದಾಗ, ಅಲ್ಲಿನ ಪ್ರತಿಯೊಂದು ವಸ್ತು, ಬೀದಿ, ಮನೆ, ಬಾಲ್ಯದ ಗೆಳೆಯರೆಲ್ಲರೂ ನೆನಪಿಗೆ ಬಂದು ಹೃದಯ ಹಿಂಡಿದ ಅನುಭವವಾಗುತ್ತದೆ. ಇಂತಹ ಸಂವೇದನೆಗಳನ್ನು ಗೌಡರ ಕಾವ್ಯಗಳಲ್ಲಿ ಹಾಗೂ ಚಲನಚಿತ್ರಗಳ ಹಾಡುಗಳಲ್ಲಿ ಕಾಣಬಹುದು. ''ಪಡುವಾರಳ್ಳಿ ಪಾಂಡವರು'' ಚಿತ್ರದ ''ಜನ್ಮ ನೀಡಿದ ಭೂತಾಯಿಯ ನಾ ಹೇಗೆ ತಾನೆ ತೊರೆಯಲಿ'' ಎನ್ನುವ ಹಾಡು ನನ್ನನ್ನು ಮತ್ತೆ ಮತ್ತೆ ಕಾಡುತ್ತದೆ. ಬಾಳಿ ಬದುಕಿದ ಊರನ್ನು, ಸಾಕಿದವರನ್ನು, ಗೆಳೆಯರನ್ನು ತೊರೆಯುವಾಗ ಯಾವುದೇ ಹೃದಯವಿರುವ ಮನುಷ್ಯನಿಗೆ ಹೃದಯ ತುಂಬಿ ಬಂದು ಕಂಠ ಗದ್ಗದಿತವಾಗುತ್ತದೆ. ಅಂತಹ ಸಮಯದ ಸಮರ್ಥ ಅಭಿವ್ಯಕ್ತಿಯಾಗಿ ಈ ಹಾಡು ಕಾಣಿಸುತ್ತದೆ. ಬಹುಶಃ ಇದು ಮೂಲತಃ ಗೌಡರಿಗೆ ಕಾಡಿದ್ದ ಸಂವೇದನೆ ಎಂದು ಹೇಳಿದರೆ ತಪ್ಪಾಗಲಾರದು.

ಎಪ್ಪತ್ತರ ದಶಕ ಕನ್ನಡ ಚಲನಚಿತ್ರ ಚರಿತ್ರೆಯಲ್ಲಿ ಒಂದು ಮುಖ್ಯವಾದ ಘಟ್ಟ. ಹೊಸ ಅಲೆಯ ಚಿತ್ರಗಳು ಕನ್ನಡ ಚಿತ್ರರಂಗದಲ್ಲಿ ಬರಲಾರಂಭಿಸಿದ್ದು ಈ ಕಾಲದಲ್ಲಿಯೇ. ಪುಟ್ಟಣ್ಣ ಕಣಗಾಲರಂತಹ ಸಮರ್ಥ ನಿರ್ದೇಶಕರು ವಿಭಿನ್ನ ಅಭಿರುಚಿಯ ಚಿತ್ರಗಳನ್ನು ಕನ್ನಡದ ಜನತೆಗೆ ನೀಡಿದ ಕಾಲವದು. ಅದುವರೆವಿಗೂ ಬಂದ ಚಿತ್ರಗಳಲ್ಲಿ ಸಂಗೀತ ಮತ್ತು ಆದರ ನಾದಮಯತೆಗೆ ಪ್ರಾಶಸ್ತ್ಯ ನೀಡುತ್ತಿದ್ದು ಕನ್ನಡ ಸಾಹಿತ್ಯವನ್ನು ಓದಿಕೊಂಡಿದ್ದ ಸಾಹಿತಿಯ ಪ್ರವೇಶ ಅಗತ್ಯವಾಗಿತ್ತು. ಸಂಗೀತ ಮತ್ತು ನಾದಮಯತೆಯ ನಡುವೆ ಸಾಹಿತ್ಯದ ಮಿಳಿತವನ್ನು ಬೆಸೆಯಬೇಕಾಗಿದ್ದಂತಹ ಕೆಲಸವನ್ನು ಗೌಡರು ನಿರ್ವಹಿಸಿದರು. ಚಲನಚಿತ್ರಕ್ಕೆ ಗೀತೆ ಬರೆಯುವವರನ್ನು ಗಂಭೀರವಾಗಿ ಪರಿಗಣಿಸದೇ ಚಿತ್ರ ಸಾಹಿತಿ ಎಂದು ತೇಲಿಸುವ ಸಂದರ್ಭದಲ್ಲಿ ಚಲನಚಿತ್ರ ಗೀತೆಗಳಿಗೆ ಸಾಹಿತ್ಯ ಘನತೆಯ ಸ್ವರೂಪವನ್ನು ತಂದುಕೊಟ್ಟವರಲ್ಲಿ ಗೌಡರು ಮೊದಲಿಗರು.

ಚಲನಚಿತ್ರಗೀತೆಗಳಲ್ಲಿ ಅದುವರೆವಿಗೂ ಶಿಷ್ಟ ಸಾಹಿತ್ಯ ರಚನೆಯಾಗುತ್ತಿತ್ತು. ಅಂತಹ ಶಿಷ್ಟತೆಯ ಬಂಧನದಿಂದ ಬಿಡಿಸಿ ಜನಪದ ನೆಲೆಯ ಪರಿಚಯವನ್ನು ಗೌಡರು ಮಾಡಿದರು. ಜನರಾಡುವ ಗ್ರಾಮೀಣ ಸೊಗಡಿನಿಂದ ಕೂಡಿರುವ ಜನಪದ ನುಡಿಗಟ್ಟುಗಳನ್ನು ವಿಶಿಷ್ಟವಾಗಿ ಗೀತೆಗಳಲ್ಲಿ ಅಳವಡಿಸುವ ಮೂಲಕ ಹಳ್ಳಿಯ ಭಾಷೆಯೇ ಚಿತ್ರಗೀತೆಯ ಸಾಹಿತ್ಯವಾಗಿ ಪ್ರವೇಶ ಪಡೆಯಿತು. ಒಬ್ಬ ಬಯಲು ನಾಡಿನ ಹಳ್ಳಿಯ ಮುಗ್ಧ ಸೂರ್ಯೋದಯವನ್ನು ಹಾಗೂ ಪ್ರಕೃತಿಯ ವಿದ್ಯಮಾನವನ್ನು ಅನುಭವಿಸಿ ಹಾಡುವ **'ತೇರ ಏರಿ ಅಂಬರದಾಗೆ ನೇಸರ ನಗುತಾನೆ'** ಎನ್ನುವ ಹಾಡು ಹಳ್ಳಿಯ ಲಕ್ಷಾಂತರ ಅನಕ್ಷರಸ್ಥ ಜನತೆಯ ಭಾವನೆಗಳಿಗೆ ದನಿಯಾಗಿದೆ. ಜನಪದ ಮಹಾಕಾವ್ಯಗಳಲ್ಲೊಂದಾದ ಮಲೆ ಮಾದೇಶ್ವರ ಕಾವ್ಯದ ಜನಪದ ಹಾಡುಗಾರಿಕೆಯ ಶೈಲಿಯನ್ನು 'ಜನುಮದ ಜೋಡಿ'ಯ **'ಕೋಲು ಮಂಡೆ ಜಂಗಮ ದೇವ'** ಎಂಬ ಹಾಡಿನಲ್ಲಿ ಪುನರ್‌ರಚಿಸುವ ಮೂಲಕ ಜನಪದ ಕಾವ್ಯ ಶೈಲಿಯನ್ನು ಸಮೂಹ ಮಾಧ್ಯಮಕ್ಕೆ ತಂದ ಕೀರ್ತಿ ಗೌಡರದು. ಕನ್ನಡ ಚಲನಚಿತ್ರರಂಗದ ಇತಿಹಾಸದಲ್ಲಿಯೇ ಸಿನಿಮಾ ಮಂದಿರಗಳಲ್ಲಿ ಹಾಡೊಂದನ್ನು ಪ್ರೇಕ್ಷಕರ ಒತ್ತಾಯದ ಮೇರೆಗೆ ಮತ್ತೆ ಮತ್ತೆ ಪುನರಾವರ್ತಿಸಿದ ಇತಿಹಾಸವಿಲ್ಲ. ಆದರೆ ಈ ಹಾಡು ಆ ಇತಿಹಾಸವನ್ನು ನಿರ್ಮಿಸಿತು. ಸಿನಿಮಾ ಮಂದಿರಗಳಲ್ಲಿ ನಾಲ್ಕೈದು ಬಾರಿ ಈ ಹಾಡನ್ನು ಪ್ರೇಕ್ಷಕರು ಭಾವೋನ್ನತ್ತರಾಗಿ ಆಸ್ವಾದಿಸಿದ ಇತಿಹಾಸ ನಮ್ಮ ಕಣ್ಣ ಮುಂದಿದೆ. ಹಾಗೆಯೇ ಇಂದಿನವರೆಗೂ ಕೂಡ ಗ್ರಾಮೀಣ ಪ್ರದೇಶಗಳಲ್ಲಿ ಪ್ರಚಲಿತವಿರುವ ಗ್ರಾಮ್ಯ ಸಂಸ್ಕೃತಿಯ ಮುಖ್ಯ ಆಚರಣೆಯಾದ ಮುಖ್ಯ ಗ್ರಾಮದೇವತೆ ಮಾರವ್ವನ ಉತ್ಸವ, ಮಾರಿಹಬ್ಬ ಹಳ್ಳಿಯ ಜನಜೀವನದಲ್ಲಿ ರಕ್ತಗತವಾಗಿ ಆಚರಿಸಿಕೊಂಡು ಬರುತ್ತಿರುವ ಒಂದು ಸಂಪ್ರದಾಯಬದ್ಧ ಆಚರಣೆ. ಇಂತಹ ಆಚರಣೆಯ ಬಗ್ಗೆ ಇದೇ ಚಿತ್ರದಲ್ಲಿ 'ಓ ತಾಯಿ ಚಾಮುಂಡಿ ಅಡ್ಡಬಿದ್ದೆವಮ್ಮ, ಮಾತಾಯಿ ಕೊಂತ್ಯಮ್ಮ ಎಡೆ ತಂದೆವಮ್ಮ' ಎನ್ನುವಂತಹ ತಳಮೂಲ ಸಂಸ್ಕೃತಿಯ ಪರಿಚಯವನ್ನು ತನ್ಮಯ ಭಾವದಿಂದ ತಮ್ಮ ಗೀತೆಯಲ್ಲಿ ತಂದಿದ್ದಾರೆ. ಇದೇ ಹಾಡಿನಲ್ಲಿ 'ದಂಡಿನ ಮಾರಮ್ಮನ'ನ ಪ್ರಸ್ತಾಪವೂ ಬರುತ್ತದೆ. ಇದು ಗೌಡರು ಹುಟ್ಟಿ ಬೆಳೆದ ನಮ್ಮ ದಂಡಿನ ಮಾರಮ್ಮನೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಆದ್ದರಿಂದ ಒಬ್ಬ ಕ್ರಿಯಾಶೀಲ ಸೂಕ್ಷ್ಮದೃಷ್ಟಿಯ ಕವಿಚೇತನ ಹೇಗೆ ತನ್ನ ಸುತ್ತಮುತ್ತಲ ಜನಪದ ಅಂಶಗಳನ್ನು ಅರಗಿಸಿಕೊಂಡು ಅದನ್ನು ಬಹು ಜನ ಸಂಸ್ಕೃತಿಗೆ ಚಿತ್ರಗೀತೆಯ ಮೂಲಕ ಪರಿಚಯ ಮಾಡಿಕೊಡುತ್ತದೆ ಎಂಬುದರಲ್ಲಿ ಗೌಡರ ಹಿರಿಮೆಯಿದೆ.

ಗೌಡರ ಸಾಹಿತ್ಯದಲ್ಲಿಯಾಗಲೀ, ಅಥವಾ ಚಿತ್ರ ಸಾಹಿತ್ಯದಲ್ಲಾಗಲೀ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಪದವೆಂದರೆ ''ಒಲುಮೆ''. ಬದುಕಿನ ಬಗೆಗೆ ಗಂಡು-ಹೆಣ್ಣಿನ, ಮನುಷ್ಯ-ಮನುಷ್ಯರ ಸಂಬಂಧಗಳ ಬಗೆಗೆ ಅವರು ಹೆಚ್ಚು ಹೆಚ್ಚು ಮಾತನಾಡುತ್ತಾ ಹೋದಂತೆ, ಅವರ ಸ್ಥಾಯಿಭಾವ ಒಲುಮೆಯಾಗಿರುತ್ತದೆ. ಮನುಷ್ಯನಾಗಿ ಹುಟ್ಟಿದ ಮೇಲೆ ಪ್ರೀತಿಸಬೇಕು; ಪ್ರೀತಿಯಿಂದ ಈ ಬದುಕಿಗೆ ಸೊಗಸಿದೆ, ಎಂಬುದನ್ನು ಮಾನವೀಯ ನೆಲೆಯಲ್ಲಿ ಅರ್ಥೈಸುವಲ್ಲಿ

ಗೌಡರದು ಎತ್ತಿದ ಕೈ. ಅಂತೆಯೇ ಅವರ ಕಾವ್ಯನಾಮ ಕೂಡ ''ಮನುಜ'' ಎಂಬುದಾಗಿದ್ದು ಇದಕ್ಕೊಂದು ಅರ್ಥಪೂರ್ಣತೆ ಲಭಿಸುತ್ತದೆ.

ಕವಿಯಾಗಿ ಮೂವತ್ತಕ್ಕೂ ಹೆಚ್ಚು ಕವನ ಸಂಕಲನಗಳನ್ನು ಹಾಗೂ ಅನೇಕ ವಿಮರ್ಶಾ ಸಂಕಲನಗಳನ್ನು ಸಾಹಿತ್ಯಲೋಕಕ್ಕೆ ಗೌಡರು ಕೊಡುಗೆಯಾಗಿ ನೀಡಿದ್ದಾರೆ. ಇಷ್ಟೇ ಅಲ್ಲದೇ ತಮ್ಮ ಇಳೀ ವಯಸ್ಸಿನಲ್ಲಿಯೂ ತಮ್ಮ ಸಂಶೋಧನಾ ತುಡಿತದ ಫಲವಾಗಿ ತಮಗೆ ಸದಾ ಪ್ರೇರಣೆಯಾಗಿರುವ ನವೋದಯ ಸಾಹಿತ್ಯವನ್ನು ಕುರಿತು ಅದರ ಪುನರ್ ಮೌಲ್ಯೀಕರಣವನ್ನು ಸಮರ್ಥವಾಗಿ ಮಾಡಿ ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡವರು. ಆದರೆ ನಮ್ಮ ಸಾಹಿತ್ಯಕ ವಲಯದ ದುರಂತವೆಂದರೆ ಗೀತರಚನಾಕಾರರಾಗಿ, ಗೌಡರನ್ನು ಜನ ಹೆಚ್ಚು ಹೆಚ್ಚು ಸ್ವೀಕರಿಸಿದಂತೆಲ್ಲಾ ''ಜನಪ್ರಿಯ ಸಾಹಿತಿ'' ಎಂಬ ಪಟ್ಟವನ್ನು ಕಟ್ಟಿ ಈ ಸಾಹಿತ್ಯಕ ವಲಯದಲ್ಲಿನ ಗುಂಪುಗಾರಿಕೆಯ ಜನ ಗೌಡರ ಸಾಹಿತ್ಯಕ ಕೃತಿಗಳನ್ನು ಚರ್ಚಿಸಲೇ ಇಲ್ಲ. ವ್ಯಕ್ತಿಗತ ಟೀಕೆಗೆ ಒತ್ತು ನೀಡಿ ಅವರ ಕೃತಿಗಳನ್ನು ನಿರ್ಲಕ್ಷ್ಯಕ್ಕೆ ಗುರಿಮಾಡಿದುದರ ಬಗೆಗಿನ ನೋವು ಅವರನ್ನು ಅನೇಕ ವೇಳೆ ಕಾಡಿದ್ದುಂಟು. ಅದೇನೇ ಇದ್ದರೂ ನಮ್ಮ ನಡುವಿನ ಹಳ್ಳಿಯ ಮಣ್ಣಿನ ಮಗನಾಗಿ, ಒಬ್ಬ ಕವಿ - ಸಾಹಿತಿಯಾಗಿ, ಚಲನಚಿತ್ರ ಗೀತ ರಚನಕಾರರಾಗಿ, ಶಿಷ್ಯರ ಪ್ರೀತಿಯ ಮೇಷ್ಟ್ರಾಗಿ, ಹಿರಿಯ ಗೆಳೆಯರಾಗಿ, ಎಲ್ಲಕ್ಕಿಂತ ಹೆಚ್ಚಾಗಿ 'ಮನುಜ'ನಾಗಿ ಈ ನಾಡಿಗೆ ಅವರ ಕೊಡುಗೆ ಅಪಾರ. ಇನ್ನು ಮುಂದೆಯೂ ಅವರಿಂದ ಹೆಚ್ಚು ಹೆಚ್ಚು ಸೃಜನಶೀಲ ಕೃತಿಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲುವಂತಾಗಿ ಗೌಡರು ನೂರ್ಕಾಲ ಬಾಳಲಿ ಎಂಬುದೇ ಈ ಕಿರಿಯನ ಹಾರೈಕೆ.

❑



# ಮುನ್ನುಡಿಯ ಬೆನ್ನುಹತ್ತಿ

• ಡಾ. ಮುರಳಿಧರ ದೇಶಪಾಂಡೆ

1989ರ ಕಾಲ. ನಾನು ನನ್ನ ಮೊದಲನೆ ಕವನ ಸಂಕಲನ 'ಈ ಬೆಳಗು ಏಕಾಯಿತು' ಪುಸ್ತಿಕೆಗಾಗಿ ಮುನ್ನುಡಿ ಬರೆದು ಕೊಡಲು ಶ್ರೀ ದೊಡ್ಡರಂಗೇಗೌಡರನ್ನು ಬಿಟ್ಟು ಬೇರೆ ಯಾರಿಗೂ ಕೇಳಲೇ ಇಲ್ಲ. ಅದಕ್ಕಾಗಿ ಸೇಡಮ್ಮಿನಿಂದ ನನ್ನ ಸ್ನೇಹಿತ ಹಾಗೂ ಪ್ರಕಾಶಕ ಪ್ರಭಾಕರ ಜೋಷಿ ಕೂಡಿಕೊಂಡೆ ಬೆಂಗಳೂರಿಗೆ ಹೋದೆವು. ಅಲ್ಲಿ ಮೊದಲು ಅವರ ಕಾಲೇಜಿಗೆ ಹೋದರೆ ಅಲ್ಲಿ ಗೌಡರು ಇರಲಿಲ್ಲ. ಒಬ್ಬ ನಂಬಿಕಸ್ಥ ಹುಡುಗ ಅವರು ರಜೆಯ ಮೇಲಿದ್ದಾರೆ, ಅವರು ತಮಗೆ ಹೊಸಕೋಟೆಯಲ್ಲಿ ಸಿಗಬಹುದು ಎಂದು ಸೂಚಿಸಿದ. ಅಲ್ಲಿಂದ ನಾವಿಬ್ಬರೂ ನೇರವಾಗಿ ಹೊಸಕೋಟೆಗೆ ಹೋದೆವು. ಬಸ್‌ನಿಂದ ಇಳಿದ ಕೂಡಲೆ ನಮಗೆ ಅವರ ವಿಳಾಸ ಬೇಗ ಸಿಗಲಿಲ್ಲ. ಪ್ರಯತ್ನ ಪಟ್ಟು ಒಂದು ಪೇಪರ್ ಮತ್ತು ಪುಸ್ತಕದ ಅಂಗಡಿ ಹುಡುಕಿದೆವು. ಅಲ್ಲಿರುವ ಹುಡುಗನಿಗೆ ಗೌಡರ ಮನೆಯ ಬಗ್ಗೆ ಕೇಳಿದಾಗ ಪಾಪ ನೇರವಾಗಿ ದೊಡ್ಡರಂಗೇಗೌರ ಮನೆಗೇ ಕರೆದುಕೊಂಡು ಹೋದ. ಒಂದೈದು ನಿಮಿಷ ಹೊರಗೆ ಕಾದು 'ನಾಯಿ ಇಲ್ಲ' ಎಂದು ಖಾತರಿ ಮಾಡಿಕೊಂಡು ಗೇಟು ತೆಗೆದು ಒಳಗೆ ಹೋದೆವು. ಬಾಗಿಲು ಸದ್ದು ಮಾಡಿದೆವು. ಕೂಡಲೆ ಒಬ್ಬ ಸುಶಿಕ್ಷಿತ ಹೆಣ್ಣುಮಗಳು ಬಂದು ಬಾಗಿಲು ತೆರೆದು ನಮ್ಮನ್ನು ಒಳಬರಮಾಡಿಕೊಂಡು ಆಸನಗಳಲ್ಲಿ ಕೂಡಲು ಹೇಳಿ ನಂತರ ತಾವು ಯಾರು ಎಂದು ಕೇಳಿದಳು. ನಮ್ಮ ವಿಚಾರ ಹೇಳಿಕೊಂಡೆವು. ಆ ಮೇಲೆ ಆ ಹೆಣ್ಣು ಮಗಳು ಒಳ ಹೋದಳು.

ಮುಂದೆ ಒಂದೆರಡು ನಿಮಿಷಗಳಲ್ಲಿ ಗೌಡರು ಹೊರಗೆ ಬಂದು ಮೊದಲು ತಾವೇ 'ನಮಸ್ಕಾರ' ಎಂದು ಹೇಳಿ ಒಂದೆಡೆ ಕುಳಿತರು. ನಾವು ಅವರನ್ನು ಮುಂಚೆ ನೋಡಿರಲೇ ಇಲ್ಲ. ಏನೋ ಫೋಟೋದಲ್ಲಿ ನೋಡಿದ ನೆನಪು. ಇವರೇ ದೊಡ್ಡರಂಗೇಗೌಡರೆಂದು ಅನ್ನಿಸಿ ನಮ್ಮ ಪೂರ್ತಿ ಪರಿಚಯ ಮಾಡಿಕೊಂಡೆವು. ಜೊತೆಗೆ ನಮ್ಮ ಬರುವಿಕೆಯ ಕಾರಣವನ್ನೂ ತಿಳಿಸಿದೆವು. ಮುಂಚೆ ಮುಂಚೆ ಒಂದೆರಡು ನಿಮಿಷ ಮೀನ ಮೇಷ ಮಾಡುತ್ತಾ ತಪ್ಪಿಸಿಕೊಳ್ಳಲು ಯತ್ನಿಸಿದರು. ನಮ್ಮ ಮುಖಗಳು ಸ್ವಲ್ಪ ಬಾಡಿದಂತಾಗಿರುವುದನ್ನು ನೋಡಿ ತಾವೇ ಮತ್ತೊಮ್ಮೆ ಪರಾಮರ್ಶ

ಮಾಡಿಕೊಂಡು 'ತಾವು ಸೇಡಮ್ಮಿನಿಂದ ಇಷ್ಟು ದೂರ ಬಂದಿದ್ದೀರಿ, ನಿಮಗೆ ನಿರಾಶೆ ಮಾಡುವ ಮನಸ್ಸಿಲ್ಲ, ಸ್ವಲ್ಪ ಸಮಯಕೊಟ್ಟರೆ ಬರೆದುಕೊಡುವೆ'ನೆಂದು ಹೇಳಿದರು. ನನ್ನ ಕೈಯಿಂದ ಹಸ್ತ ಪ್ರತಿಗಳನ್ನು ಕೈಗೆತ್ತಿಕೊಂಡು ಕಣ್ಣಾಡಿಸ ಹತ್ತಿದರು. ಆಗಾಗ ನನ್ನ ಮುಖವನ್ನು ನೋಡುತ್ತಿದ್ದರು. ಕೆಲವೊಮ್ಮೆ ದಿಟ್ಟಿಸಿ ನೋಡುತ್ತಿದ್ದರು. ನನಗೇಕೋ ಒಂದು ಕಡೆ ಭಯ ಇನ್ನೊಂದು ಕಡೆ ಮುಜುಗರ. ಅಲ್ಲಿಯೇ ಇರುವ ಪೇಪರ್ ಕೈಗೆತ್ತಿಕೊಂಡು ಓದುವಂತೆ ನಟಿಸಹತ್ತಿದೆ. ಒಮ್ಮೆ ನನ್ನ ನೋಡಿ 'ನೀವು ಡಾಕ್ಟ್ರೇ ಎಂ.ಬಿ.ಬಿ.ಎಸ್. ಡಾಕ್ಟ್ರೇ' ಎಂದು ಕೇಳಿದರು. ಅಂದರೆ ಡಾಕ್ಟರ್‌ಗೆ ಈ ಹುಚ್ಚು ಹಿಡಿಯಿತೋ ಎಂಬರ್ಥವೋ, ಡಾಕ್ಟರಾಗಿ ಇಷ್ಟಾದರೂ ಬರೆದಿದ್ದೀರಲ್ಲ ಎಂಬರ್ಥವೋ ತಿಳಿಯದಾಯಿತು. ಕೊನೆಯಲ್ಲಿ ''ಪರವಾಗಿಲ್ಲ ಕವನಗಳು ಚೆನ್ನಾಗಿವೆ. ಕೆಲವು ಕವನಗಳು ಹೊಸ ವಿಷಯಗಳಿಂದ ಕೂಡಿವೆ. ಅಂಥ ವಿಷಯಗಳ ಮೇಲೆ ಯಾರೂ ಕವನ ಬರೆದದ್ದು ನಾನು ಓದಿಲ್ಲ'' ಎಂದರು. ನನಗೆ ಸ್ವಲ್ಪ ಧೈರ್ಯಬಂತು. ಅಮ್ಮಾವರು ಕಾಫಿ ತರುವುದರೊಳಗಾಗಿ ತಮ್ಮ ಕವನ ಸಂಕಲನಗಳ ವಿಷಯ, ಹಾಕಿದ್ದ ದುಡ್ಡು ವಾಪಸ್ ಬರಲಾರದ ಬವಣೆ, ಹೆಂಡತಿಯಿಂದ ಅನಿಸಿಕೊಂಡ ಆ ಚುಚ್ಚು ಮಾತುಗಳನ್ನು ಮಂದಸ್ಮಿತದಲ್ಲಿಯೇ ವಿವರಿಸಿದರು. ಅವರ ಜೀವನಾನುಭವ, ಕಾವ್ಯಾನುಭವ ಮತ್ತು ಸಾಹಿತ್ಯ ಸೇವಾನುಭವ ಕೂಲಂಕುಷವಾಗಿ ತೆರೆದಿಟ್ಟರು. ಕೊನೆಯಲ್ಲಿ ಇನ್ನೂ ಕೆಲವೇ ದಿನಗಳಲ್ಲಿ ಮುನ್ನುಡಿ ಬರೆದು ಕಳುಹಿಸುತ್ತೇವೆಂದು ಹೇಳಿ ಗೇಟಿನವರೆಗೆ ಬಂದು ನಮ್ಮನ್ನು ಆತ್ಮೀಯವಾಗಿ ಬೀಳ್ಕೊಟ್ಟರು.

ಮುನ್ನುಡಿ ಬಂದಿತು. ಕೆಲವೇ ದಿನಗಳಲ್ಲಿ ಪುಸ್ತಕ ಪ್ರಕಟವಾಯಿತು. ಮುಂದೆ 1990ರಲ್ಲಿ ನನ್ನ ಈ ಪುಸ್ತಕ 'ಈ ಬೆಳಗು ಏಕಾಯಿತು'. ಗುಲಬರ್ಗ ವಿಶ್ವವಿದ್ಯಾಲಯದಿಂದ ಪ್ರಶಸ್ತಿ ಮತ್ತು ಪುರಸ್ಕಾರ ಪಡೆಯಿತು. ಇದಕ್ಕೆ ಮುಖ್ಯಕಾರಣ ಗೌಡರ ಮುನ್ನುಡಿ ಎಂದು ನಾನು ಭಾವಿಸುತ್ತೇನೆ. ಆ ಮುನ್ನುಡಿಯು ಸಾಹಿತ್ಯವಾಗಿ ವಿಮರ್ಶಾತ್ಮಕವಾಗಿ ಮತ್ತು ಆತ್ಮೀಯವಾಗಿ ಹಾಗೂ ಪ್ರೋತ್ಸಾಹದಾಯಕವೂ ಆಗಿತ್ತು. ಕೃತಿಯನ್ನು ಬಿಡುಗಡೆ ಮಾಡಿದ ಶ್ರೀ ಕೆ.ವಿ. ತಿರುಮಲೇಶ ಅವರು ಕೂಡ ಮುನ್ನುಡಿಗೆ ಮೆಚ್ಚುಗೆ ತೋರಿಸಿದ್ದಲ್ಲದೇ ಬೆನ್ನುಡಿ ಬರೆದುಕೊಟ್ಟಿದ್ದರು.

ಈ ಪುರಸ್ಕಾರ ಪ್ರಶಸ್ತಿಗಳಿಂದ ನನಗೂ ನನ್ನ ಕುಟುಂಬದವರಿಗೂ ನನ್ನ ಸ್ನೇಹಿತರಿಗೂ ಮತ್ತು ನನ್ನ ಸರ್ವ ಸಾಹಿತ್ಯಾಸಕ್ತರಿಗೂ ತುಂಬಾ ಸಂತೋಷವಾಯಿತು. ಅಭಿನಂದನೆಗಳ ಸುರಿಮಳೆಯಾಯ್ತು.

ನಮ್ಮ ಸಂತೋಷದ ಪ್ರತಿಯೊಂದು ಕ್ಷಣದಲ್ಲಿ ಮತ್ತು ಅಭಿನಂದನೆಗಳ ಪ್ರತಿಯೊಂದು ಶಬ್ದದಲ್ಲಿ ನನಗೆ ಗೌಡರು ಆ ಮುನ್ನುಡಿಯ ವಿಮರ್ಶಾ ಕೌಶಲ ಮತ್ತು ಅವರು ಬೆನ್ನು ಚಪ್ಪರಿಕೆಯ ಸ್ಪರ್ಶ ನೆನಪು ಬರುತ್ತಿದ್ದವು. ಪ್ರಶಸ್ತಿ ಬಂದಾಗ ಅವರಿಗೆ ಪತ್ರದ ಮೂಲಕ ತಿಳಿಸಿದೆ. ಅದಕ್ಕೆ ಅವರು ತುಂಬ ಸಂತೋಷದಿಂದ ಉತ್ತರಿಸಿದ್ದು... ನನಗೆ ಬಂದ ಆ ಪ್ರಶಸ್ತಿಗೆ ನನ್ನ

ಕಾವ್ಯವನ್ನು ಸರಿಯಾಗಿ ಬಿಚ್ಚಿ ತೋರಿಸಿರುವ ಮತ್ತು ಸಹೃದಯರಿಗೆ ಓದುವಂತೆ ಪ್ರಚೋದಿಸುವ ಆ ಮುನ್ನುಡಿಯೇ ಕಾರಣವೆಂದೆನ್ನುವಂತೆ ಅನಿಸ್ತಾ ಇತ್ತು. ಇದರಿಂದಾಗಿ ಅದರ ಮೇಲೆ ನನ್ನ ಅಭಿಮಾನವೂ ಗೌರವವೂ ಹೆಚ್ಚಾಯಿತು.

ಒಮ್ಮೆ ಇದಕ್ಕೆ ಪೂರಕವಾಗುವಂತೆ ಇನ್ನೊಂದು ಪ್ರಸಂಗ ಜರುಗಿತು. ಯಾವುದೋ ಕಾರಣಕ್ಕಾಗಿ ಅವರು ಸೇಡಮ್ಮಿಗೆ ಬರುವವರಿದ್ದರು. ಆ ಕಾರ್ಯಕ್ರಮದ ಅಧ್ಯಕ್ಷರಾಗಿ ಮಾತನಾಡುತ್ತ ತಮ್ಮ ಭಾಷಣದಲ್ಲಿ 'ನಾನು ಈ ಊರಿಗೆ ಬರಬೇಕೆಂದು ಕೇಳಿಕೊಂಡಾಗ ನನಗೆ ಮೊಟ್ಟಮೊದಲ ಹೆಸರು ನೆನಪಿಗೆ ಬಂದಿದ್ದು ಡಾ|| ದೇಶಪಾಂಡೆಯುವರದು. ಅವರ ಪರಿಚಯವಾಗಿ ಸುಮಾರು ಹತ್ತು ಹನ್ನೆರಡು ವರ್ಷವಾಗಿ ಅವರಿಗೆ ಮತ್ತೊಮ್ಮೆ ಭೇಟಿಯಾಗೋಣ ಎಂದು ಬಂದಿದ್ದೇನೆ' ಎಂದರು. ಇಷ್ಟು ಕೇಳಿದ ಮೇಲೆ ನನ್ನ ಮನಸ್ಸು ಆಕಾಶದಲ್ಲಿ ತೇಲಿ ಹಾರಾಡುವಂತಿರುವಂತಾಯಿತು. ಆ ಅನುಭವ ಇನ್ನು ನನ್ನ ಹೃದಯದಲ್ಲಿ ಅವಿತುಕೊಂಡಿದೆ.

ಶ್ರೀ ದೊಡ್ಡರಂಗೇಗೌಡರ ಸ್ನೇಹಪರ ವ್ಯಕ್ತಿತ್ವ ಆಳವಾದ ಅಧ್ಯಯನ ಉತ್ತುಂಗದ ಬುದ್ಧಿ ಮತ್ತೆ ಇವು ಎಲ್ಲ ಸಾಹಿತ್ಯ ಮತ್ತು ಸಾಹಿತ್ಯೇತರ ಜನ ಮನದಲ್ಲಿ ಸ್ಥಿರವಾಗಿ ಉಳಿಯುವಂತೆ ಮಾಡಿವೆ. ಈ ಉಳಿಯುವಿಕೆ ಮುಪ್ಪಾಗದಿರಲಿ ಎಂದು ದೇವರಲ್ಲಿ ಬೇಡಿಕೆ. ಹೌದು ದೊಡ್ಡರಂಗೇಗೌಡರು ದೊಡ್ಡವರು.

❑



# ಬಾಲ್ಯ ಸಂಪದ್ಭರಿತವಾದರೆ ಭವಿಷ್ಯಭಂಡಾರ

• ಇಂದಿರಾ ಹೆಗ್ಗಡೆ

ಕವಿಯೊಬ್ಬ ದಾರ್ಶನಿಕ. ಕಣ್ಣುಕಂಡಂತೆಲ್ಲ ಮನಸ್ಸು ಮಥಿಸುವುದು, ಮನಸ್ಸು ಮಥಿಸಿದಂತೆಲ್ಲ ನವನೀತ ತೇಲುವುದು. ತಾನು ಹುಟ್ಟಿ ಬೆಳೆದ ಪರಿಸರದೊಂದಿಗೆ ತಾದಾತ್ಮ್ಯಗೊಳ್ಳುತ್ತ ಬೆಳೆಯುವ ಕವಿಮನಸ್ಸಿನ ಅಂತಃ ಚಿಲುಮೆ ಒಂದು ಅಮೂರ್ತಗಳಿಗೆಯಲ್ಲಿ ಸೆಲೆಯಾಗಿ ಹೊರಚಿಮ್ಮುತ್ತದೆ. ಯಾವುದೇ ದೇಶೀ ಸಂಸ್ಕೃತಿಯನ್ನು ಸುಲಭವಾಗಿ ಗ್ರಹಿಸುವ ಕವಿ ತಮ್ಮ ಪರಿಸರ ಸಂಸ್ಕೃತಿಯ ಶ್ರೀಮಂತಿಕೆಯಿಂದ ತನ್ನ ಕಾವ್ಯ ಕಟ್ಟುವುದರಲ್ಲಿ ಆನಂದ ಪಡುತ್ತಾನೆ. ತಾನು ಕಂಡಿದ್ದ ಜಾನಪದ ಹಾಡಿನ ಸೊಗಡು, ಅದರ ಲಯ, ಅದರ ಗೇಯತೆ-ಇವು ಕವಿಯನ್ನು ಕಟ್ಟಿಕೊಡುತ್ತವೆ. ನಿಗೂಢ ಸೃಷ್ಟಿಯ ವೈಚಿತ್ರ್ಯ ಮತ್ತು ಸೊಬಗನ್ನು ಕಂಡಾಗ ಮನಸ್ಸಿನಲ್ಲಿ ಮೂಡುವ ಅಚ್ಚರಿ, ವಿಸ್ಮಯ, ಸಂತೋಷ-ಇತ್ಯಾದಿ ಭಾವನೆಗಳನ್ನು ಕವಿತೆಯಲ್ಲಿ ಕಟ್ಟುವ ಪ್ರಯತ್ನ ಕವಿಯದು. ಪ್ರಕೃತಿಯನ್ನು ಬದುಕಿನೊಂದಿಗೆ ಸಾಂಗತ್ಯಗೊಳಿಸುವ ಪ್ರಯತ್ನದಲ್ಲಿ ಕವಿಗೆ ನೆರವಾಗುವುದು ಬಾಲ್ಯದ ನೆನಪಿನ ತರಂಗಗಳು. ಬಾಲ್ಯ ಸಂಪದ್ಭರಿತವಾದರೆ ಭವಿಷ್ಯದ ಭಂಡಾರವಾಗುತ್ತದೆ. ದೊಡ್ಡರಂಗೇಗೌಡರ ಪಾಲಿಗೆ ಭವಿಷ್ಯದ ಭಂಡಾರವನ್ನು ಅವರ ಬಾಲ್ಯ ತುಂಬಿ ಕೊಟ್ಟಿದೆ, ಅವರ ಯಶಸ್ಸಿನ ಗುಟ್ಟು ಅವರ ಸಂಪದ್ಭರಿತ ಬಾಲ್ಯದಲ್ಲಿ ಇದೆ.

ನಾನು ಬಹಳ ವರುಷಗಳಿಂದ ದೊಡ್ಡರಂಗೇಗೌಡರನ್ನು ಕವಿಯಾಗಿ ಬಲ್ಲೆ. ಆದರೆ ಕವಿಯನ್ನು ನೋಡಿರಲಿಲ್ಲ. ಒಂದೇ ಒಂದು ಬಾರಿ ಅವರನ್ನು ಭೇಟಿಯಾಗಿದ್ದೆ. ಒಂದು ಕವಿಗೋಷ್ಠಿಯಲ್ಲಿ ನಾನು ಕವಿಯಾಗಿ ಭಾಗವಹಿಸಿದ್ದೆ, ಅವರು ಆ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಅಲ್ಲೂ ಆ ಕವಿಮನವನ್ನು ನನ್ನ ಕವಿತೆ ಎಷ್ಟರ ಮಟ್ಟಿಗೆ ತಟ್ಟಿರಬಹುದು ಎಂದು ನಾನು ತಿಳಿದಿಲ್ಲ, ಆದರೆ ಒಂದೆರಡು ವರ್ಷದಿಂದ ಅವರನ್ನು ಮೂರ್‍ನಾಲ್ಕು ಬಾರಿ ಮಾತನಾಡಿಸುವ ಸಂದರ್ಭ ಬಂದಿತ್ತು. ನಾವು ಆಡಿದ ಮಾತು ಲೋಕಾಭಿರಾಮ ಆದರೂ ನನ್ನ ಮನಸ್ಸಲ್ಲಿ ನಾನು ಅಪ್ಪಟ ಕವಿಯೊಂದಿಗೆ ಮಾತನಾಡುತ್ತಿದ್ದೇನೆ ಎಂಬ ಒಳ ತುಡಿತ ಇತ್ತು.

ದೊಡ್ಡರಂಗೇಗೌಡರು ಸುಮಾರು 60/70 ಕಥೆಗಳನ್ನು ಬರೆದಿದ್ದಾರೆ. ಅವರ ಗದ್ಯ ಬರಹ ಇದೆ. ಸುಮಾರು 314 ಅಂಕಣಬರಹಗಳನ್ನು ಬರೆದಿದ್ದಾರೆ. 60 ಕೃತಿಗಳನ್ನು ತಂದಿದ್ದಾರೆ. ಆದರೂ ಅವರು ಕವಿಯಾಗಿಯೇ ಸಹೃದಯರಿಗೆ ಹೆಚ್ಚು ಪರಿಚಿತರಾಗಿದ್ದಾರೆ. ಯಾಕೆ ಹೀಗೆ? ನನ್ನನ್ನು ಕಾಡಿದ ಈ ಪ್ರಶ್ನೆಗೆ ಕವಿ ದೊಡ್ಡರಂಗೇಗೌಡರಿಗೆ ಅಭಿನಂದನೆ ಮಾಡುವ ಈ ಸಂದರ್ಭದಲ್ಲಿ ಅವರಿಂದಲೇ ಉತ್ತರ ಪಡೆಯಲು ಅವರನ್ನು ಹುಡುಕಿ ಹೋದೆ.

ಅವರದೇ ಮಾತುಗಳಲ್ಲಿ ಕೇಳಿ : ನಾನು ಬಾಲ್ಯದಲ್ಲಿ ಕಂಡ ಪರಿಸರ-ನಾಟಿ ಮಾಡುವಾಗ ನನ್ನವರು ಮತ್ತು ಇತರರು ಹಾಡುತ್ತಿದ್ದ ಹಾಡಿನ ತರಂಗಗಳು ಈಗಲೂ ನನ್ನ ಕಿವಿಯೊಳಗೆ ಅಲೆ ಅಲೆಯಾಗಿ ಅನುರಣಿಸುತ್ತಿದೆ. ದೇಶೀ ಸಂಸ್ಕೃತಿಯ ಸಮೃದ್ಧ ವಾತಾವರಣದಲ್ಲಿ ಎಲ್ಲರೂ ದೇಶೀ ಹಾಡುಗಳನ್ನು ಗುನುಗುವವರೇ. ಅಮ್ಮನಿಂದ ಹಿಡಿದು ಅವಿಭಕ್ತ ಕುಟುಂಬದ ಪುರುಷ ಸದಸ್ಯರೂ ಮಹಿಳಾ ಸದಸ್ಯರೂ ಜೊತೆಗೆ ನಾಟಿಯಲ್ಲಿ, ಇತರ ಕೆಲಸಗಳಲ್ಲಿ ತೊಡಗುತ್ತಿದ್ದ ಹಳ್ಳಿಯ ಜನ – ಎಲ್ಲರೂ ಲಯಬದ್ಧವಾಗಿ ಗುನುಗುವವರೇ. ಅವರೊಂದಿಗೆ ನಾನೂ ಗುನುಗುತ್ತಿದ್ದೆ. ಗದ್ದೆಯ ಪೈರಿನ ನಾಟಿಯಲ್ಲಿ, ಬೆಟ್ಟದ ಮೇಲಿನ ನೋಟದಲ್ಲಿ, ಹೊಳೆನೀರ ಝುರಿಯಲ್ಲಿ – ಎಲ್ಲವೂ ನಾದಮಯ. ಅಲ್ಲಿ ಇದ್ದುದು ಏಕತಾನತೆ. ಅದೇ ಏಕತಾನತೆ ಇಂದೂ ನನ್ನ ಕಿವಿಯಲ್ಲಿ ಮಾರ್ದನಿಗೊಳ್ಳುತ್ತಿದೆ. ಅಲ್ಲಿ ಹಾಡು ಹುಟ್ಟುವುದು ಸ್ವಾಭಾವಿಕ. ಪೆನ್ನು ಹಿಡಿಯದೆ ಅಕ್ಷರ ತಿದ್ದದೆ ಹಾಡು ಕಟ್ಟಿ ಹಾಡುವ ಜನಪದರ ಮಧ್ಯೆ ಬೆಳೆದು ಅಕ್ಷರ ಕಲಿತ ನಾನು ಅದೇ ಪೌಷ್ಟಿಕ ಗೊಬ್ಬರವನ್ನು ಬಳಸಿ ಅದೇ ಮೋಡಿಯಲ್ಲಿ ಶಿಷ್ಟ ಭಾಷೆಯಲ್ಲಿ ಪ್ರಯೋಗಗಳನ್ನು ಪ್ರಾರಂಭಿಸಿದೆ. ನಿಸರ್ಗದ ಮಡಿಲಲ್ಲಿ ಬೆಳೆದು ನಿಸರ್ಗಕ್ಕೆ ಪ್ರತಿಕ್ರಿಯಿಸುವುದು ತಾಯಿ ಮಡಿಲಿನಲ್ಲಿ ಆಡಿದಂತೆ. ನಾನು ಬಳಸಿದ ಭಾಷೆ ಶಿಷ್ಟ ಆದರೂ ಮೆರಗು ಅದೇ ಹಳ್ಳಿಯ ಭಾಷೆಯದ್ದೇ. ಹಳ್ಳಿಯ ಹಾಡುಗಳು ಕಟಕಿ, ವ್ಯಂಗ, ಮೋಸ ಮುಂತಾದುವನ್ನು ಸುಂದರ ಭಾಷೆಯ ಮೂಲಕ ಹೇಳುತ್ತಾರೆ. ಮುಗ್ಧತೆ, ಸ್ನೇಹ ಪ್ರೀತಿಯನ್ನು ಸರಳವಾಗಿ ಹೇಳುತ್ತಾರೆ. ಎಲ್ಲವೂ ಇತ್ಯಾತ್ಮಕ, ನೇತ್ಯಾತ್ಮಕವಲ್ಲ.

ಕವಿ ಮನಸ್ಸು ಹಳ್ಳಿಯ ನಿರ್ಮಲ ಪರಿಸರವನ್ನು ಗ್ರಹಿಸಿದ ರೀತಿ ಇದು. ಈಗಲೂ ತಾನು ಕಟ್ಟುವ ಕವಿತೆಯನ್ನು ಗುನುಗುತ್ತಲೇ ಕಟ್ಟುತ್ತಾರೆ. ಸುಗ್ಗಿಯ ಹಳ್ಳಿಯನ್ನು ಕಂಡ ಶಿಷ್ಟಕವಿ ಮನಸ್ಸು ದೇಶೀ ಸೊಗಡನ್ನು ಹೀಗೆ ಮೈಗೂಡಿಸಿ ಸ್ಪಂದಿಸಿದೆ:

'ಸುಗ್ಗಿವ್ಯಾಳೆಗೆ
ಸೊಬಗೇ ಸುತ್ತಾ ಕಂಡು
ಭೂಮಿ ಬೀಗೈತೆ... ಬವಣೆ ನೀಗೈತೆ
ರಾಗಿ ಹೊಲಗಳು ತೂಗುವ ಒನಪಿಗೆ ಬೆಡಗೇ ಮಿಂಚೈತೆ

ಹುಚ್ಚೆಳ್ಳು ಸಾಸಿವೆ ಅವರೆ-ಸೊಗಡೂ ಕಂಪು ಹರಡೈತೆ
ಕಡಲೆ ಕಬ್ಬು ಮೋಪಾಗಿ ಬೆಳೆದು ರಾಶೀ ಬಿದ್ದೈತೆ
ಜೋಳಾ ನವಣೆ ಹುರುಳಿ ತೊಗರೀ ಕಣ್ಣು ಕುಕ್ಕೈತೆ!
ಭೂಮಿ ಬಸಿರಾಗಿ ಹೊಳೆಯುವ ಹೊತ್ತಿಗೆ ಬನವೇ ಬಿರಿದೈತೆ
ದ್ಯಾವ ಲೋಕದ ವರವೇ ಫಲವಾಗಿ ತನಿ ತನಿ ತೂಗೈತೆ.
ಮಣ್ಣೇ ಹೊನ್ನಾಗಿ ಕಣವೇ ಗಣೆಯಾಗಿ ದವಸ ಸೇರೈತೆ.
ಬಾಳಿ ಬದುಕಲು ತಾಯಿ ಕರುಣಿಸಲು ಹಿಗ್ಗ ಮೂಡೈತೆ.

ಅವರ ಗೀತ ವೈಭವ ಕವನ ಸಂಕಲನದಲ್ಲಿ ಇರುವ ಬಂಗಾರ ಭೂಮಿ ಕೂಡ ಇಂತಹುದೇ ಕವನ. ಹೀಗೆ ಹಲವಾರು ಕವನಗಳ ಮೂಲಕ ಪರಿಸರಕ್ಕೆ ಸ್ಪಂದಿಸಿ ದೇಶೀ ಸೊಗಡನ್ನು ಉಳಿಸಿದವರು ಶಿಷ್ಟಕವಿ ದೊಡ್ಡರಂಗೇಗೌಡರು.

ಗುನುಗಿದ್ದೆಲ್ಲ ಕವಿತೆಯಾಗಿಲ್ಲ. ಬರೆದದ್ದೆಲ್ಲ ಕವನವಾಗಿಲ್ಲ ಎನ್ನುವ ಕವಿ, ಕಾವ್ಯ ವಿಚಾರ ಅಲ್ಲ. ಮನಸ್ಸು ಗ್ರಹಿಸಿದ್ದು ಭಾವತೀವ್ರತೆಗೆ ಇಳಿದಾಗ ಪದ್ಯವಾಗುತ್ತದೆ ಎನ್ನುತ್ತಾರೆ. ಬಾಲ್ಯದಿಂದಲೇ ಇವರು ಕವಿತಾ ರಚನೆಯನ್ನು ಮಾಡುತ್ತಾ ಬಂದು ಸುಮಾರು 20 ಕವನ ಸಂಕಲನಗಳನ್ನು ತಂದಿದ್ದಾರೆ. ಹಾಗೆಯೇ ಭಾಷೆಯೊಂದಿಗೆ ಆಟವಾಡುತ್ತಾ ಬಂದಿದ್ದಾರೆ. 'ಆಸೆ ಬೆಂಕಿಯಾಯಿತು' 'ಪ್ರೀತಿಯ ಗಂಗೆ ಮಿಂದು ಪಾವನ' 'ಓಡುವ ನದಿಯ ತೊಡೆಯ ಮೇಲೆ' - ಈ ರೀತಿ ದೊಡ್ಡರಂಗೇಗೌಡರು ಪದಗಳೊಂದಿಗೆ ಆಟವಾಡುತ್ತಾ ಕಾವ್ಯ ಕಟ್ಟುತ್ತಾರೆ. ನವ್ಯ ವಾಹಿನಿಯ ಜೊತೆಗೂ ಸಾಗಿದ ಈ ಕವಿ 'ಜಗತಿ ಹತ್ತಿ ಇಳಿದು' ಎಂಬ ನವ್ಯ ಕವಿತೆಗಳ ಸಂಗ್ರಹವನ್ನೂ ತಂದಿದ್ದಾರೆ. ಇವರ 'ಕಣ್ಣು ನಾಲಗೆ ಕಡಲು' ನವ್ಯ ಕವಿತೆಗಳ ಸಂಕಲನಕ್ಕೆ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಮಾವು ಬೇವು ಕವನ ಸಂಕಲನ ಇವರಿಗೆ ಹೆಸರನ್ನು ತಂದಿತ್ತಿದೆ. ಆದರೆ ಇವರಿಗೆ ಹಾಡಿನಲ್ಲಿ ಇರುವುದು ಸಹಜ ಒಲವು; ಹಾಡುತ್ತಾ, ಗುನುಗುತ್ತಾ ಭಾವನೆಗಳನ್ನು ಲೇಖನಿಗಿಳಿಸುವುದರಲ್ಲಿ ಕವಿಗೆ ದೊರೆಯುತ್ತದೆ ಆನಂದ. ಹೀಗಾಗಿ ಇವರು ಹಲವಾರು ಕ್ಯಾಸೆಟ್‌ಗಳನ್ನೂ ತಂದಿದ್ದಾರೆ.

ಕವಿಯ ದೈಹಿಕ ಬೆಳವಣಿಗೆಗೆ ತಕ್ಕಂತೆ ಕಾವ್ಯದ ಬೆಳವಣಿಗೆಯೂ ಆಗಿದೆ. ಹರೆಯದವರೆಗೆ ನಿಸರ್ಗಕ್ಕೆ ಸ್ಪಂದಿಸಿದ ಕನವಗಳು, ಹರಯಕ್ಕೆ ಬಂದ ಮೇಲೆ ಸಹಜವಾಗಿ ಪ್ರೀತಿ, ಪ್ರೇಮಕ್ಕೆ ಸ್ಪಂದಿಸಿದ ಕನವಗಳು, ಮುಂದೆ ಸಾಮಾಜಿಕ ಜವಾಬ್ದಾರಿ ಇಟ್ಟುಕೊಂಡು ಬರೆದವುಗಳು. ಕವಿ ವಿಚಾರವಾದಿಯಾಗಲು ಸಾತ್ರೆಯೂ ಕಾರಣ ಎನ್ನುತ್ತಾರೆ. ಸಾತ್ರೆಯ ಜೀವನ ಧೋರಣೆಗಳು You are the sculpter of for your live ಎಂಬ ಮಾತು ಇವರ ಮೇಲೆ

ಪರಿಣಾಮ ಬೀರಿವೆ. ಕನ್ನಡದಲ್ಲಿ ಕುವೆಂಪು ಮತ್ತು ಶಿವರಾಮ ಕಾರಂತರು ಕೂಡಾ ಅಷ್ಟೇ ಪ್ರಭಾವ ಬೀರಿದ್ದಾರೆ.

ಹರೆಯ ಮಾಗುತ್ತಾ ಇವರ ಆಸಕ್ತಿ ಆಧ್ಯಾತ್ಮದತ್ತ ಹೊರಳುತ್ತಿದೆ. ಅದು ಸಹಜವೂ ಕೂಡ. ಮಾಗಿದ ಬದುಕು ಆಧ್ಯಾತ್ಮಿಕ ಚಿಂತೆಯತ್ತ ಎಳೆಯಿತು ಎನ್ನುತ್ತಾರೆ ಕವಿ. ತರ್ಕಕ್ಕೆ ಮಿತಿ ಇದೆ, ವಿಚಾರಕ್ಕೆ ಮಿತಿ ಇದೆ. ಈ ಸೃಷ್ಟಿ ನಿಗೂಡ! ಹುಟ್ಟು ಸಾವು ಗೆಲ್ಲಲಾಗದ ಸೃಷ್ಟಿ ನಿಯಮ! ಅಣುವಿನೊಳಗಿಂದ ಅಲ 500 ಎಕ್ರೆ ಮಿಗಿಲಾಗಿ ಪ್ರದೇಶವನ್ನು ಆಕ್ರಮಿಸಿವುದೇ ಸೃಷ್ಟಿಯ ಗರ್ಭ ರಹಸ್ಯ. ಯಾರಿಂದಲೂ ಭೇದಿಸಲಾಗದ ರಹಸ್ಯ.

ಗಾಳಿಗೊಡ್ಡುವ ದೀಪದಂತೆ ನಮ್ಮ ಬಾಳುವೆ
ಆಗಲೋ ಈಗಲೋ ಆರುವ ತೀರುವ ಬಾಳುವೆ

ಬದುಕಿನ ಅರುವತ್ತು ಸಂವತ್ಸರಗಳನ್ನು ತುಂಬಿಕೊಳ್ಳುತ್ತಿರುವ ಸಂತೃಪ್ತ, ಸಮೃದ್ಧ ಬದುಕಿನ ಡಾ॥ ದೊಡ್ಡರಂಗೇಗೌಡರಿಗೆ

ವಂದನೆ ಅಭಿನಂದನೆ ಶುಭವಂದನೆ
ದೇಶೀ ಕೂಸಿಗೆ, ಅನುಭವ ಮೂಸೆಗೆ
ವಂದನೇ ಅಭಿನಂದನೆ

❏



# ಜನಪದ ಹಾಡುಗಳ ಸರದಾರ!

● ಎಚ್.ಎನ್. ಸಿದ್ಧಗಂಗಪ್ಪ

ಕಾಲೇಜು ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿದರೆ ಸಾಹಿತಿಯಾಗಿ, ಕವಿಯಾಗಿ, ವಿದ್ವಾಂಸರ ವಿಮರ್ಶಕರ ಗಮನ ಸೆಳೆದರೆ, ಜನಪದ ದಾಟಿಯ ಸಿನಿಮಾ ಹಾಡುಗಳ ರಚನಕಾರರಾಗಿ, ಜನಸಾಮಾನ್ಯರ ಹೃದಯದಲ್ಲಿ ವಿಶಿಷ್ಠ ಸ್ಥಾನವನ್ನು ಪಡೆದಿರುವ ಪ್ರೊ॥ ದೊಡ್ಡರಂಗೇಗೌಡರು ಎಲ್ಲರ ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದಾರೆ.

ಪ್ರೊ॥ ದೊಡ್ಡರಂಗೇಗೌಡರು ಅರವತ್ತನೆ ವಸಂತದ ಬೇವು-ಬೆಲ್ಲವನ್ನು ಸವಿಯುವ ಶುಭಸಂದರ್ಭದಲ್ಲಿ ಅವರು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಗೌರವಿಸಿ ಅವರ ಅಭಿಮಾನಿಗಳು, ಹಿತೈಷಿಗಳು, ವಿದ್ಯಾರ್ಥಿ ಬಳಗ ಅಭಿನಂದನ ಸಮಾರಂಭ ನಡೆಸಲು ಸಿದ್ಧತೆ ನಡೆಸಿದ್ದು, ಆ ಸಂದರ್ಭದಲ್ಲಿ ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಒಬ್ಬ ಸಾಹಿತಿ, ಕವಿ ಸಮಾಜಕ್ಕೆ ಸಲ್ಲಿಸಿದ ಸೇವೆಗೆ ಸಮಾಜ ಸಲ್ಲಿಸಬೇಕಾದ ಕರ್ತವ್ಯವೂ ಹೌದು; ಗೌರವವೂ ಹೌದು.

ಡಾ॥ ದೊಡ್ಡರಂಗೇಗೌಡರನ್ನ ಕುರಿತು ನಾಲ್ಕು ನುಡಿಗಳನ್ನು ಬರೆದುಕೊಡುವಂತೆ ಅಭಿನಂದನಾ ಸಮಿತಿಯಿಂದ ಪತ್ರ ಬಂದಾಗ ನಿಜಕ್ಕೂ ಸಂತೋಷವಾಯಿತು. ಕಾರಣ ಅವರು ನನಗೆ ಅನೇಕ ಕಾರಣಗಳಿಂದ ಇಷ್ಟವಾಗುತ್ತಾರೆ. ಒಂದು; ಹುಟ್ಟಿದ ನೆಲದ ಸಂಬಂಧ; ಅವರು ನನ್ನ ಜಿಲ್ಲೆಯ ನೆಲದಿಂದ ಅರಳಿದ ಅಪ್ಪಟ ಪ್ರತಿಭೆಯೆಂಬ ಅಭಿಮಾನ. ಮತ್ತೊಂದು ನನಗೆ ಅತ್ಯಂತ ಪ್ರಿಯವಾದ, ಆಸಕ್ತಿ ಕ್ಷೇತ್ರವಾದ ಜಾನಪದದ ಪ್ರಭಾವ ಅವರ ಕಾವ್ಯಗಳಲ್ಲಿ, ಹಾಡುಗಳಲ್ಲಿ ಗಾಢವಾಗಿ ಮೂಡಿ ಬಂದಿರುವುದು. ಡಾ॥ ಗೌಡರ ಕಾವ್ಯ, ಹಾಡುಗಳಲ್ಲಿ ಗ್ರಾಮೀಣರ ಜನಜೀವನ, ಪರಿಸರ, ಬೆಟ್ಟ ಗುಡ್ಡಗಳು ಆಕಾಶ, ಸೂರ್ಯ, ಚಂದ್ರ ನಕ್ಷತ್ರಗಳು ಸ್ವಚ್ಛಂದವಾಗಿ ಹಾರಾಡುವ ಪಕ್ಷಿಗಳು, ಅವುಗಳ ಕಲರವನಾದ, ತುಂಬಿ ಹರಿಯುವ ಹಳ್ಳಕೊಳ್ಳಗಳು ಇವೆಲ್ಲದರ

ವರ್ಣನೆ ಸಹಜವಾಗಿ, ಸರಳವಾಗಿ ಅರಳಿರುವುದರಿಂದ ಅವರ ಕವನಗಳು, ಚಲನಚಿತ್ರಗೀತೆಗಳು ಸದಾ ಹಚ್ಚ ಹಸಿರಾಗಿವೆ.

ಡಾ॥ ದೊಡ್ಡರಂಗೇಗೌಡರ ಕಾವ್ಯ, ಕಾವ್ಯಾಸಕ್ತರ, ವಿದ್ವಾಂಸರ, ವಿಮರ್ಶಕರ ಮೇಲೆ ಮೋಡಿ ಮಾಡಲು ಕಾರಣ ಅವರ ಗೀತೆಗಳಲ್ಲಿ ಕಂಡು ಬರುವ ಜೀವನ ಸ್ಪಂದನ, ಅವರು ರಚಿಸಿದ ಹಾಡುಗಳನ್ನು ಕಲಾವಿದರ ಸಿರಿ ಕಂಠದಲ್ಲಿ ಕೇಳುತ್ತಿದ್ದರೆ ನಮ್ಮನ್ನು ನಾವು ಮರೆಯುತ್ತೇವೆ. ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಬಹುದಾದ ಅವರ ಗೀತೆಗಳು ಸಹೃದಯರ ಹೃದಯಕ್ಕೆ ಲಗ್ಗೆ ಹಾಕುತ್ತವೆ.

ನಾನು ಡಾ॥ ದೊಡ್ಡರಂಗೇಗೌಡರಲ್ಲಿ ಕಂಡ, ಅಪಾರವಾಗಿ ಮೆಚ್ಚಿಕೊಂಡ ಗುಣವೆಂದರೆ ಅವರಲ್ಲಿ ಮನೆಮಾಡಿಕೊಂಡಿರುವ ಸರಳತೆ, ಸಜ್ಜನಿಕೆ, ಸಹೃದಯತೆ, ಎನಗಿಂತ ಕಿರಿಯರಿಲ್ಲ ಎಂಬ ವಿನೀತ ಭಾವ. ನಮ್ಮ ನಾಡಿನ ಪ್ರಸಿದ್ಧ ಕವಿಗಳಲ್ಲಿ ಒಬ್ಬರಾಗಿ, ಜನಪ್ರಿಯತೆಯ ಉತ್ತುಂಗಕ್ಕೇರಿದ್ದರೂ, ಎಂದೂ ಬಿಗುಮಾನದ ಮನೆಯಲ್ಲಿ ಬಂಧಿತರಾದವರಲ್ಲ; ದರ್ಪವನ್ನು ತೋರಿಸಿಕೊಂಡವರಲ್ಲ, ಶ್ರೇಷ್ಠ ಸಾಹಿತಿಯೆಂದು ಬೀಗಿದವರಲ್ಲ. ಬಹುಶಃ ಇದಕ್ಕೆ ಕಾರಣ ಅವರು ಬೆಳೆದು ಬಂದ ಪರಿಸರ; ಜೊತೆಗೆ ಜೀವನಾನುಭವ. ಅವರು ನಡೆದು ಬಂದ ದಾರಿ, ಏರಿದ ಎತ್ತರ ನಿಜಕ್ಕೂ ಅಚ್ಚರಿ ಮೂಡಿಸುವಂತಹದು. ಅವರೆಂದೂ ಕೀರ್ತಿಗಾಗಿ, ಪ್ರಶಸ್ತಿಗಾಗಿ ಹಂಬಲಿಸಿದವರಲ್ಲ, ಅವೇ ಅವರ ಬೆನ್ನತ್ತಿ ಬಂದವು. ಬೇಡವೆಂದರೂ ಬಿಡಲಿಲ್ಲ. ಅಕಾಡಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಅನೇಕ ಪ್ರತಿಷ್ಠಿತ ಪ್ರಶಸ್ತಿ, ಗೌರವಗಳು ಅವರಿಗೆ ದೊರೆತಿರುವುದು ಅವರೊಳಗಿನ ಕಾವ್ಯಪ್ರತಿಭೆಗೆ ಸಂದ ಗೌರವ.

ನನಗೆ ಪ್ರೊ॥ ದೊಡ್ಡರಂಗೇಗೌಡರ ಪರಿಚಯುವಾದದ್ದು ಮೂವತ್ತು ವರ್ಷಗಳ ಹಿಂದೆ . ಆಗ ನಾನು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಜಾನಪದ ವಿಭಾಗದ ರಾಜ್ಯ ಸಂಚಾಲಕನಾಗಿ ಹಾಗೂ ಪರಿಷತ್ತಿನ ಮುಖವಾಣಿಯಾದ 'ಕನ್ನಡ ನುಡಿ' ಪಾಕ್ಷಿಕದ ಸಹ ಸಂಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದೆ. ಒಂದು ದಿನ ಚಿತ್ರ ನಿರ್ಮಾಪಕ, ನಿರ್ದೇಶಕ ಮಾರುತಿ ಶಿವರಾಂರೊಂದಿಗೆ ಶ್ರೀ ದೊಡ್ಡರಂಗೇಗೌಡರು ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣ ಅವರನ್ನು ಭೇಟಿ ಮಾಡಲು ಬಂದಿದ್ದರು. ಅವರು ಭೇಟಿ ಮಾಡಲು ಬಂದ ಉದ್ದೇಶ ಮಾರುತಿ ಶಿವರಾಂ ಅವರು 'ಪರಸಂಗದ ಗೆಂಡೆತಿಮ್ಮ' ಚಿತ್ರ ನಿರ್ಮಾಣದ ಸಿದ್ಧತೆ ನಡೆಸುತ್ತಿದ್ದು ಅದಕ್ಕೆ ಹಾಡುಗಳನ್ನು ರಚಿಸಿಕೊಡಲು ದೊಡ್ಡರಂಗೇಗೌಡರನ್ನು ವಿನಂತಿಸಿಕೊಂಡಿದ್ದರು. 'ಪರಸಂಗದ ಗೆಂಡೆತಿಮ್ಮ' ಗ್ರಾಮೀಣ ವಸ್ತುವನ್ನು ಆಧರಿಸಿದ ಚಿತ್ರವಾಗಿದ್ದರಿಂದ ಹಾಡುಗಳ ಹಿನ್ನೆಲೆ ಸಂಗೀತಕ್ಕೆ ಜನಪದ ವಾದ್ಯಗಳನ್ನು ಬಳಸಿಕೊಳ್ಳಬೇಕೆಂಬ ಉದ್ದೇಶದಿಂದ ಶ್ರೀ ಜಿ. ನಾರಾಯಣ ಅವರನ್ನು ಭೇಟಿ ಮಾಡಲು ಬಂದಿದ್ದರು.

ಶ್ರೀ ಜಿ. ನಾರಾಯಣರು ಅಧ್ಯಕ್ಷರಾದ ಮೇಲೆ ಜನಪದ ಕಲೆಗಳ ಸಂರಕ್ಷಣೆಗೆ ವಿಶೇಷ ಕಾಳಜಿ ವಹಿಸಿದರು. ಕಲೆಯನ್ನು ಉಳಿಸಿ ಬೆಳೆಸಲು ಹಲವಾರು ಯೋಜನೆಗಳನ್ನು ರೂಪಿಸಿ ನಿವೃತ್ತ ಐ.ಎ.ಎಸ್. ಅಧಿಕಾರಿಯಾಗಿದ್ದ ಹಿರಿಯ ಜಾನಪದ ವಿದ್ವಾಂಸರಾದ ಡಾ॥ ಎಚ್.ಎಲ್. ನಾಗೇಗೌಡರ ಅಧ್ಯಕ್ಷತೆಯಲ್ಲಿ, ಮತ್ತೊಬ್ಬ ಜಾನಪದ ವಿದ್ವಾಂಸರಾದ ಗೊ.ರು. ಚನ್ನಬಸಪ್ಪ ಅವರ ಪ್ರಧಾನ ಸಂಚಾಲಕತ್ವದಲ್ಲಿ - ಅನುಷ್ಠಾನಗೊಳಿಸುವುದರ ಮೂಲಕ ಜನಪದ ಕಲೆಗಳಿಗೆ ಪ್ರೋತ್ಸಾಹ ನೀಡಿದರು. ಯೋಜನೆಯ ಅಂಗವಾಗಿ ಜಿಲ್ಲಾ ಮಟ್ಟದಲ್ಲಿ ನಡೆಸುತ್ತಿದ್ದ ಕಲಾಮೇಳದ ಧ್ವನಿ ಮುದ್ರಿಸಿಕೊಳ್ಳುವುದು ಅದಕ್ಕಾಗಿಯೇ ಪರಿಷತ್ತಿನಲ್ಲಿ ಧ್ವನಿ ಮುದ್ರಣ ವಿಭಾಗವನ್ನು ಸ್ಥಾಪಿಸಲಾಗಿತ್ತು.

ಜಾನಪದ ಧ್ವನಿ ಭಂಡಾರದಲ್ಲಿದ್ದ ಕಂಸಾಳೆ, ಕರವಾಲ, ನೀಲಗಾರರು, ಗೊರವರು, ಮೊದಲಾದ ವೃತ್ತಿಗಾಯಕರ ವಾದ್ಯಗಳ ಧ್ವನಿ ಮುದ್ರಣ ಮಾಡಿಕೊಳ್ಳಲು ಜಿ. ನಾರಾಯಣ ಅವರ ಅನುಮತಿ ಕೇಳಿದಾಗ ಸಂತೋಷದಿಂದ ಒಪ್ಪಿ ಆ ಕೆಲಸವನ್ನು ನನಗೆ ವಹಿಸಿದರು. ಶ್ರೀ ಮಾರುತಿ ಶಿವರಾಂ ಹಾಗೂ ದೊಡ್ಡರಂಗೇಗೌಡರನ್ನು ಧ್ವನಿ ಮುದ್ರಣ ವಿಭಾಗಕ್ಕೆ ಕರೆದುಕೊಂಡು ಹೋಗಿ ಅವರಿಗೆ ಬೇಕಾದ ಜನಪದ ವಾದ್ಯಗಳ ಧ್ವನಿ ಮುದ್ರಣವನ್ನು ಕೇಳಿಸಿ ಪ್ರತಿ ಮಾಡಿಸಿಕೊಟ್ಟೆ. ಆ ಸಂದರ್ಭದಲ್ಲಿ ಶ್ರೀ ದೊಡ್ಡರಂಗೇಗೌಡರ ನೇರ ಪರಿಚಯವಾಯಿತು. - ಅವರಲ್ಲಿನ ದೊಡ್ಡ ಗುಣಗಳಿಗೆ ಮಾರುಹೋದೆ. ಪರಸಂಗದ ಗೆಂಡೆತಿಮ್ಮ ಚಿತ್ರದಲ್ಲಿ ಬಳಸಿಕೊಂಡ ಹಾಡುಗಳಿಗೆ ಜನಪದ ವಾದ್ಯಗಳ ಸಂಗೀತವನ್ನು ಹಿನ್ನೆಲೆಯಾಗಿಟ್ಟುಕೊಂಡಿದ್ದರಿಂದ ಹಾಡುಗಳು ಪ್ರೇಕ್ಷಕರ ಹೃದಯಕ್ಕೆ ಲಗ್ಗೆ ಹಾಕಿದವು. ಹಾಡುಗಳಿಂದ ಚಿತ್ರ ನಿರೀಕ್ಷೆಗೂ ಮೀರಿ ಯಶಸ್ವಿಯಾಯಿತು. ಆಯಶಸ್ಸಿಗೆ ಪ್ರೊ॥ ದೊಡ್ಡರಂಗೇಗೌಡರು ರಚಿಸಿದ ಹಾಡುಗಳು ಕಾರಣ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ಎಂದು ಭಾವಿಸಿದ್ದೇನೆ. ಆ ಚಿತ್ರದೊಂದಿಗೆ, ಹಾಡುಗಳೊಂದಿಗೆ ಶ್ರೀ ದೊಡ್ಡರಂಗೇಗೌಡರ ಹೆಸರು ಮನೆಮಾತಾಯಿತು. ಆ ಮೂಲಕ ಚಿತ್ರರಸಿಕರ ಹೃದಯದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡರು. 'ಪರಸಂಗದ ಗೆಂಡೆತಿಮ್ಮ' ಚಿತ್ರದ ನಂತರ ನೂರಾರು ಚಿತ್ರಗೀತೆಗಳನ್ನು ರಚಿಸಿ ಪ್ರೇಕ್ಷಕರ ಹೃದಯವನ್ನು ಗೆದ್ದಿದ್ದಾರೆ. ಅವರು ರಚಿಸಿದ ಬಹುತೇಕ ಗೀತೆಗಳು ಜಾನಪದ ಸೊಗಡಿನಿಂದ ಕೂಡಿದ್ದು ಬಹುಕಾಲ ಜನರ ಮನಸ್ಸಿನಲ್ಲಿ ಉಳಿಯುವಂತಾಗಿವೆ. ಭಾವಗೀತೆಗಳನ್ನು ರಚಿಸುವಷ್ಟೇ ಸಮರ್ಥವಾಗಿ ಚಿತ್ರಗೀತೆಗಳನ್ನು ರಚಿಸುತ್ತಿರುವುದು ಅವರೊಳಗಿನ ಪ್ರತಿಭೆಯ ದ್ಯೋತಕ. ಡಾ॥ ದೊಡ್ಡರಂಗೇಗೌಡರ ಲೇಖನಿಯಿಂದ ಸಾವಿರ ಸಾವಿರ ಭಾವಗೀತೆಗಳು, ಚಿತ್ರಗೀತೆಗಳು ಮೂಡಿಬರಲಿ, ಮತ್ತಷ್ಟು ಪ್ರತಿಷ್ಠಿತ ಪ್ರಶಸ್ತಿಗಳು ಅವರನ್ನು ಅರಸುತ್ತಾ ಬರಲಿ ಎಂದು ಹೃದಯ ತುಂಬಿ ಹಾರೈಸುತ್ತೇನೆ.

❑



# ಕಾಲದ ಬೊಗಸೆಯಲ್ಲಿ ಕರಗದ ಕವಿ

• ಹನುಮಂತಯ್ಯ

ಮನುಷ್ಯ ತನ್ನ ಬದುಕನ್ನು ತೀವ್ರವಾಗಿ ಅನುಭವಿಸುತ್ತ, ಪ್ರತಿಕ್ರಿಯಿಸುತ್ತಾ ತನ್ನೊಳಗೆ ಮರುಹುಟ್ಟು ಪಡೆಯಲು ಸಾಧ್ಯವಾದರೆ ಸೃಜನಶೀಲನಾಗುತ್ತಾನೆ. ಕವಿಯಾಗಿಯೊ, ಕಲಾವಿದನಾಗಿಯೋ ರೂಪುಗೊಳ್ಳುತ್ತಾನೆ. ಇಂಥ ಕವಿ ಸದಾ ಕಾಲದ ಬೊಗಸೆಯನೇರಲು ತುಡಿಯುತ್ತಾನೆ. ಹೀಗೆ ಕಾಲದ ಬೊಗಸೆಯಲ್ಲಿ ಕರಗದೆಯಿರುವ ಕವಿಗಳಲ್ಲಿ ದೊಡ್ಡರಂಗೇಗೌಡರೂ ಒಬ್ಬರು.

7-2-1946ರಲ್ಲಿ ಮಧುಗಿರಿ ತಾ॥ ಕುರುಬರಹಳ್ಳಿಯಲ್ಲಿ ಜನಿಸಿದ ಇವರು ಹಳ್ಳಿಯ ಸೃಜನಶೀಲತೆ, ಮಾನವೀಯತೆ, ವಿನಯುಗಳಂತಹ ಮೌಲ್ಯಗಳನ್ನು ತನ್ನೊಳಗೆ ಕಾಪಾಡಿಕೊಳ್ಳುತ್ತಲೇ ಶಿಕ್ಷಣವನ್ನು ಕಲಿತವರು.

1970ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಬಿ.ಎ. ಆನರ್ಸ್ ಪದವಿ ಪಡೆದು 1972ರಲ್ಲಿ ಜಾನಪದ ಅಧ್ಯಯನದಲ್ಲಿ ಎಂ.ಎ. ಪದವಿ ಪಡೆದ ದೊಡ್ಡರಂಗೇಗೌಡರು ನವೋದಯ ಮತ್ತು ನವ್ಯದ ಮುಖಾಮುಖಿ ಸಂದರ್ಭದಲ್ಲಿ ಕವಿಯಾಗಿ ಚಿಗುರಿದರು. ಜಗಲಿ ಹತ್ತಿ ಇಳಿದು, ಕಣ್ಣು ನಾಲಗೆ ಕಡಲು, ನೆಲವಿಲ್ಲದೆ ಬೇರಿಲ್ಲ, ಮೌನಸ್ಪಂದನ, ಗೀತಗಾರುಡಿ, ಹೋಳಿ ಹುಣ್ಣಿಮೆ, ಏಳು ಜೀಳಿನ ಹಾದಿ, ತೀರದ ತುಡಿತ, ಪ್ರೇಮಾಂಜಲಿ, ಕುದಿಯುವ ಕುಲುಮೆ, ಪ್ರೀತಿ ಪ್ರಗಾಥ, ಮಣ್ಣಿನ ಮಾತುಗಳು, ಶ್ರೀ ಸಿದ್ದೇಶ್ವರ ಸ್ತುತಿ, ಸಪ್ತಶೃಂಗ, ಕಾವ್ಯಕಲ್ಯಾಣಿ, ಭಕ್ತಿ ಕುಸುಮಾಂಜಲಿ, ತಾಳಮೇಳ, ಮಾವು ಬೇವು, ಚದುರಂಗದ ಕುದುರೆಗಳು, ಯುಗವಾಣಿ, ಗೀತಗಂಗೋತ್ರಿ, ಹರಿದ ಹೊನಲು, ಮುಕ್ತಕಾವ್ಯ, ರಾಗತರಂಗಿಣಿ ಮುಂತಾದ ಕೃತಿಗಳನ್ನು ಬರೆದು ಹೆಮ್ಮರವಾಗಿ ಬೆಳೆದರು.

ಇವರ ಸಾಹಿತ್ಯದ ಆಳದಲ್ಲಿ ಸಂಗೀತದ ಜಲ ಹರಿಯುತ್ತಿರುತ್ತದೆ. ಮನುಷ್ಯನ ಇಂದ್ರಿಯ

ಸ್ಪಂದನ ಹಾಗು ನಿಸರ್ಗದ ಬೆರಗು ಇವುಗಳ ನಡುವಿನ ಅಂತರ್ ಸಂಬಂಧವನ್ನು ಕುರಿತ ಹುಡುಕಾಟವನ್ನು ಇವರ ಕಾವ್ಯ ನಡೆಸುತ್ತದೆ. ಬದುಕಿನ ಗಂಭೀರತೆಯನ್ನು ನಿಸರ್ಗದ ಚೆಲುವಿನೊಳಗೆ ಬೆರೆಸಿ ಕೃತಿರಚಿಸುವ ವಿಶಿಷ್ಟತೆಯಿಂದಾಗಿಯೇ ಇವರ ಕವಿತೆಗಳು ಜನರನ್ನು ಮುಟ್ಟುವಲ್ಲಿ ಯಶಸ್ವಿಯಾಗುತ್ತವೆ.

ನವ್ಯರ ವ್ಯಕ್ತಿನಿಷ್ಠತೆಯ ಚಿಪ್ಪೊಡೆದು ಸಮೂಹದತ್ತ ಹರಡಿಕೊಂಡ ಇವರ ಕಾವ್ಯ ಸಹಜವಾಗಿಯೆ ಜನಪ್ರಿಯವಾಯಿತು.

ಕೆ.ಎಸ್. ನರಸಿಂಹಸ್ವಾಮಿಯವರ ನಂತರ ಅಷ್ಟೇ ತೀವ್ರವಾಗಿ ಪ್ರೇಮಗೀತೆಗಳನ್ನು ರಚಿಸಲು ಹೊರಟವರಲ್ಲಿ ದೊಡ್ಡರಂಗೇಗೌಡರು ಪ್ರಮುಖರಾಗಿದ್ದಾರೆ. ಮನುಷ್ಯನನ್ನು ತಲುಪಲು ಮನುಷ್ಯನಿಗಷ್ಟೇ ಸಾಧ್ಯ' ಎಂಬಂತೆ ಇವರ ಜೀವನಾನುಭವ ಹಾಗೂ ಪಾರದರ್ಶಕ ಭಾಷೆಯ ಕಾವ್ಯ ಸಿನಿಮಾ ಮಾಧ್ಯಮದ ಮೂಲಕ ಜನರ ಎದೆಯನ್ನು ತಲ್ಲಣಗೊಳಿಸಿತು. ಪಡುವಾರ ಹಳ್ಳಿ ಪಾಂಡವರು. ಪರಸಂಗದ ಗೆಂಡೆತಿಮ್ಮ, ಬಂಗಾರದ ಜಿಂಕೆ, ಭೂಲೋಕದಲ್ಲಿ ಯಮರಾಜ, ಅನುಪಮ, ವರ್ಣಚಕ್ರ, ಮತ್ಸರ, ಅನ್ವೇಷಣೆ, ಪಂಚಮವೇದ, ಒಲವಿನ ಆಸರೆ, ಅರುಣರಾಗ, ಶ್ವೇತ ಗುಲಾಬಿ, ಮುದುಡಿದ ತಾವರೆ ಅರಳಿತು, ಬಾಡದ ಹೂ, ಅಶ್ವಮೇಧ, ರಂಜಿತಾ, ರಶ್ಮಿ ಪ್ರೇಮ ಪರ್ವ, ಕೃಷ್ಣ ರುಕ್ಮಿಣಿ, ಹೊಸನೀರು, ಒಲವೇ ಬದುಕು, ಆಲೆಮನೆ, ಗಣೇಶನ ಮದುವೆ, ಕಾವ್ಯ, ಜನುಮದ ಜೋಡಿ ಮುಂತಾದ ಸಿನಿಮಾಗಳಿಗೆ ಗೀತೆಗಳನ್ನು ರಚಿಸಿ ಖ್ಯಾತರಾಗಿದ್ದಾರೆ.

ಸುಮಾರು 400ಕ್ಕೂ ಹೆಚ್ಚು ಕನ್ನಡ ಚಿತ್ರಗೀತೆಗಳನ್ನು ರಚಿಸಿರುವ ಇವರು ತಮ್ಮ ಗೀತೆಗಳೊಳಗೆ ಮನುಷ್ಯನ ಭಾವನೆಗಳ ನೈಜತೆಯನ್ನು ತೀವ್ರವಾಗಿ ಅಭಿವ್ಯಕ್ತಿಸಿದ್ದಾರೆ. ಇವರ ಒಂದೊಂದು ಹಾಡುಗಳೂ ಚಲನಚಿತ್ರ ರಂಗದಲ್ಲಿ ವಿಭಿನ್ನ ನೆಲೆಯನ್ನು ಗಳಿಸಿಕೊಂಡಿವೆ. ನಾಲ್ಕು ಕೋಟಿ ಕನ್ನಡಿಗರ ಹೃದಯವನ್ನು ತಮ್ಮ ಶಕ್ತಿಯಿಂದ ಲೂಟಿಮಾಡಿವೆ. ಇವರ ಗೀತೆಗಳು ಕನ್ನಡ ಭಾಷೆಯಿರುವವರೆಗೂ ಜನರ ಎದೆಯೊಳಗೆ ಮುಲುಗುಡುತ್ತಿರುತ್ತವೆ. ''ತೇರನೇರಿ ಅಂಬರದಾಗೆ ನೇಸರ ನಗುತಾನೆ...''ಯಂಥ ಅಪೂರ್ವ ಗೀತೆಗಳನ್ನೊಳಗೊಂಡ 'ಪರಸಂಗದ ಗೆಂಡೆತಿಮ್ಮ' ಚಿತ್ರದ ಜೀವ, ಅನೇಕಸಲ ಇವರ ಗೀತೆಗಳಲ್ಲೇ ಅಡಗಿದೆಯೆನ್ನಿಸುತ್ತದೆ. ಆಲನಹಳ್ಳಿ ಕೃಷ್ಣರಂತಹ ಉತ್ತಮ ಲೇಖಕರ ಕಥೆಗೆ ಅಷ್ಟೇ ಉತ್ತಮ ಗೀತೆ ರಚಿಸಿದ ಇವರ ಸೃಜನಶೀಲತೆ ಪ್ರಶಂಸನೀಯವಾಗಿದೆ. ಈ ಹಾಡು ನವೋದಯದ ಸಂದರ್ಭದಲ್ಲಿ ಸೂರ್ಯೋದಯವನ್ನು ಕುರಿತು ಬರೆದ ಬೇಂದ್ರೆ, ಕುವೆಂಪು, ಆಲನಹಳ್ಳಿಯವರ ಕವಿತೆಗಳಂತೆಯೇ ವಿಶಿಷ್ಟ ಆಯಾಮವನ್ನು ಹೊಂದಿದೆ.

'ನಮ್ಮೂರ ಮಂದಾರ ಹೂವೆ...' ' ನಾನೊಂದು ತೀರ.. ನೀನೊಂದು ತೀರ' ಇತ್ಯಾದಿ

ಗೀತೆಗಳು ಕನ್ನಡ ಚಲನಚಿತ್ರರಂಗದಲ್ಲಿ ಅನನ್ಯತೆಯನ್ನು ಪಡೆದು, ಆಗಾಗ ಅಲೆಯೆಬ್ಬಿಸುತ್ತಿರುವುದನ್ನು ಕಾಣುತ್ತಿದ್ದೇವೆ.

ಇತ್ತೀಚೆಗೆ 'ಜನುಮದ ಜೋಡಿ' ಚಲನಚಿತ್ರಕ್ಕೆ ರಚಿಸಿದ ಇವರ 'ಕೋಲುಮಂಡೆ ಜಂಗಮ ದೇವರು...' ಗೀತೆ ಕನ್ನಡಿಗರನ್ನು ಆಕರ್ಷಿಸಿತು. ಜಾನಪದೀಯ ಲಯಗಳನ್ನು ವರ್ತಮಾನದ ಸಂಕೀರ್ಣತೆಗಳಿಗೆ ಒಗ್ಗಿಸಿಕೊಂಡು ರಚಿಸಿದ ಈ ಗೀತೆ ತನ್ನ ಕಲೆಗಾರಿಕೆ ಮತ್ತು ಪ್ರೇಮದ ಪರಿಕಲ್ಪನೆಯಿಂದ ಜನರ ತಲೆಯೊಳಗೆ ಕುಣಿದಾಡಿತು. 'ಜಾನಪದ' ಎಂದ ತಕ್ಷಣ ತಲೆದೂಗುವುದು ಕಷ್ಟ. ಯಾಕೆಂದರೆ ಅದು ಏಕತಾನತೆಯ, ಜಡತೆಯ ಕವಚವನ್ನು ಹಾಕಿಕೊಂಡಿರುತ್ತದೆ. ಈ ಗುಣವಿರುವ ಜಾನಪದವನ್ನು ವರ್ತಮಾನದ ಉಡುಪಿನಿಂದ ಕಾಣಲು ಹೋದಾಗ ವಿಚಿತ್ರ ಅನುಭವಗಳಾಗುತ್ತವೆ. ಇಂತಹ 'ವರ್ತಮಾನದ' ಉಡುಪನ್ನು ಸೃಷ್ಟಿಸಬಲ್ಲವನೇ ನಿಜವಾದ ಲೇಖಕನಾಗುತ್ತಾನೆ. ದೊಡ್ಡರಂಗೇಗೌಡರು 'ಜಾನಪದವನ್ನು' ಮನುಷ್ಯನ ಭಾವನೆಯ ಮೊತ್ತವಾಗಿ ಗ್ರಹಿಸಿ ಈ ಕಾಲಕ್ಕೆ ತಕ್ಕುದಾದ ಉಡುಪನ್ನು ಸೃಷ್ಟಿಸಲು ತೊಡಗುವುದರಿಂದಲೇ ಗಮನಸೆಳೆಯುತ್ತಾರೆ. ಇದರ ಫಲವೇ 'ಜನುಮದ ಜೋಡಿ'ಯ ಗೀತೆ.

1972ರಲ್ಲಿ 'ಕಣ್ಣು ನಾಲಗೆ ಕಡಲು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದ ಇವರ ''ಪ್ರೀತಿ ಪ್ರಗಾಥ'' ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ 1991ರಲ್ಲಿ ವರ್ಷದ ಶ್ರೇಷ್ಠ ಕಾವ್ಯಕೃತಿಯೆಂದು ಆಯ್ಕೆಮಾಡಿತು. ರತ್ನಾಕರವರ್ಣಿ, ಮುದ್ದಣ್ಣ ಕಾವ್ಯ ಪುರಸ್ಕಾರಗಳು ಇವರಿಗೆ ಲಭಿಸಿವೆ. 1990ರಲ್ಲಿ ಬೆಳಗಾಂನ ಪಾಚ್ಛಾಪುರ ಸಾಹಿತ್ಯವೇದಿಕೆ 'ಸಪ್ತ ಶೃಂಗ' ಕೃತಿಗೆ ಪುರಸ್ಕಾರ ನೀಡಿದೆ. 1997ರಲ್ಲಿ ಆರ್ಯಭಟ ಪ್ರಶಸ್ತಿ ಲಭಿಸಿದೆ.

1977ರಲ್ಲಿ ದೆಹಲಿಯಲ್ಲಿ ನಡೆದ ಸರ್ವಭಾಷಾ ಕವಿಗೋಷ್ಠಿಗೆ ಪಾಲ್ಗೊಳ್ಳಲು ಕೇಂದ್ರ ಸರ್ಕಾರ ಇವರಿಗೆ ಅವಕಾಶ ನೀಡಿ ಗೌರವಿಸಿತು. 1985ರ ವಿಶ್ವ ಕನ್ನಡ ಸಮ್ಮೇಳನದಲ್ಲಿ ರಾಷ್ಟ್ರಕವಿ ಕುವೆಂಪು ಅವರು ಅಧ್ಯಕ್ಷತೆವಹಿಸಿದ್ದ ಕವಿಗೋಷ್ಠಿಯಲ್ಲಿ ಯುವಜನರ ಪ್ರತಿನಿಧಿ ಯಾಗಿ ಗೌಡರು ಪಾಲ್ಗೊಂಡರು.

ಈ ಅಂಶಗಳನ್ನು ಗಮನಿಸಿದಾಗ ದೊಡ್ಡರಂಗೇಗೌಡರ ಗ್ರಾಮೀಣ ಪ್ರತಿಭೆ ವಿಕಾಸಗೊಂಡುದು ಒಂದು ಮಹತ್ವದ ಚರಿತ್ರೆಯೇ ಆಗುತ್ತದೆ. ಸಾಂಸ್ಕೃತಿಕ ದೃಷ್ಟಿಯಿಂದ ಮುಖ್ಯವಾಗುತ್ತದೆ.

ದೊಡ್ಡರಂಗೇಗೌಡರು ಹಳ್ಳಿಯ ವೃತ್ತವನ್ನು ದಾಟಿ ವಿಶ್ವಮಾನ್ಯತೆಗೊಂಡಿದ್ದಂತೂ ಸಾಹಿತ್ಯ ಮತ್ತು ವ್ಯಕ್ತಿಯ ಸೃಜನಶೀಲ ವಿಕಾಸದ ದೃಷ್ಟಿಯಿಂದ ಗಮನಾರ್ಹವಾದುದಾಗಿದೆ.

ಈವರೆಗೆ ಇವರ 65 ಕನ್ನಡ ಕವಿತೆಗಳು ಇಂಗ್ಲೀಷ್‌ಗೆ ಅನುವಾದಗೊಂಡಿವೆ. ರಾಷ್ಟ್ರಮಟ್ಟದ ಪತ್ರಿಕೆಗಳಲ್ಲಿ ಪ್ರಕಟಗೊಂಡು ಹೆಸರುಗಳಿಸಿವೆ. ಹಿಂದಿ ಹಾಗೂ ಉರ್ದು ಭಾಷೆಗೂ ಅನುವಾದವಾಗಿವೆ.

ಈ ರೀತಿಯ ಅನುವಾದದ ಮೂಲಕ ಇವರ ಕವಿತೆಗಳು ವಿಭಿನ್ನ ಭಾಷೆ, ಭೌಗೋಳಿಕತೆ ಹಾಗೂ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಹೊಂದಿರುವ ಜನರಿಗೆ ತಲುಪುವ ಮೂಲಕ ಕನ್ನಡವನ್ನು ಅನನ್ಯಗೊಳಿಸುವ ಪ್ರಯತ್ನಮಾಡಿವೆ. ಈ ದೃಷ್ಟಿಯಿಂದ ಕನ್ನಡಕ್ಕೆ ಅಮೋಘವಾದ ಸೇವೆ ಸಲ್ಲಿಸಿದವರಲ್ಲಿ ಇವರು ಮುಖ್ಯರಾಗುತ್ತಾರೆ.

ಅಮೆರಿಕನ್ ಬಯಾಗ್ರಫಿಕಲ್ (USA) ಅವರು ಪ್ರಕಟಿಸಿರುವ "1992/93 Most Admired men and women of the year annual poll" ಗ್ರಂಥದಲ್ಲಿ ಉಲ್ಲೇಖಗೊಂಡಿರುವ 500 ಜನ ವಿಶ್ವಪ್ರತಿಭಾವಂತರ ಪಟ್ಟಿಯಲ್ಲಿ ದೊಡ್ಡರಂಗೇಗೌಡರ ಹೆಸರು ದಾಖಲಾಗಿದೆ. ಇಂಗ್ಲೆಂಡಿನ 'ಕೇಂಬ್ರಿಡ್ಜ್'ನವರು ಇವರಿಗೆ . "Men of Achievement" ಪ್ರಶಸ್ತಿಯನ್ನುನೀಡಿ ಗೌರವಿಸುವುದರ ಜೊತೆಗೆ vol 16 ರಲ್ಲಿ ಇವರ ಸಾಧನೆ ವಿಶ್ವದಾಖಲೆಯಾಗಿದೆ. 1997ರಿಂದ ಅಮೆರಿಕನ್ ಬಯಾಗ್ರಫಿಕಲ್ ಇನ್‌ಸ್ಟಿಟ್ಯೂಟ್ (ABI) USA ಸಂಸ್ಥೆಯವರು ಇವರನ್ನು ಭಾರತೀಯ ಸಲಹೆಗಾರರನ್ನಾಗಿ ನೇಮಕ ಮಾಡಿದೆ. ಇಂಟರ್ ನ್ಯಾಷನಲ್ " who is who of intellectuals - 13th edition" (IBC Cambridbe) ಕೃತಿಯಲ್ಲಿ ಇವರನ್ನು ಪ್ರಶಂಸಿಸಿರುವ ಲೇಖನ ಪ್ರಕಟವಾಗಿದೆ.

ಇಂಥ ಪ್ರತಿಭಾವಂತ ಕವಿಯ ಬಗ್ಗೆ ಪ್ರೊ॥ ಎನ್. ನಂಜುಂಡ ಶಾಸ್ತ್ರಿಯವರು "The upcoming modrern Kannada poet, Dodda Range Gowda" ಎಂಬ ಲೇಖನವನ್ನು ಬರೆದು ಪ್ರಕಟಿಸಿದ್ದಾರೆ. ಇತ್ತೀಚಿನ "ASIA - PACIFIC 98" ನಲ್ಲಿ ಇವರ ಸಾಧನೆ ಉಲ್ಲೇಖವಾಗಿದೆ.

ಇಂತಹ ಗಮನಾರ್ಹ ವ್ಯಕ್ತಿತ್ವವುಳ್ಳ ದೊಡ್ಡರಂಗೇಗೌಡರು ಕ್ಯಾಸೆಟ್ ಕವಿಯಾಗಿಯೂ ಯಶಸ್ವಿಯಾಗಿದ್ದಾರೆ. ಮಾವು-ಬೇವು, ಗೀತ ವೈಭವ, ಕಾವ್ಯ ಕಾವೇರಿ, ತಂಗಾಳಿ, ಪ್ರೀತಿ ಭಾವನೆ, ಪ್ರೇಮಪಯಣ, ಹೃದಯದ ಹಕ್ಕಿ, ಹೋಳಿ ಹುಣ್ಣಿಮೆ, ಕನಸು-ನನಸು ಮುಂತಾದ ಭಾವಗೀತೆಯ ಕ್ಯಾಸೆಟ್‌ಗಳು ಸುಗಮಸಂಗೀತ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆ ನೀಡಿವೆ.

ಲೇಖಕ ಯಾವುದಾದರೊಂದು ಪಂಥಕ್ಕೆ ಅಂಟಿಕೊಳ್ಳಬೇಕೆಂಬ ಭಾವನೆಯಿಂದ ಸಂಪೂರ್ಣ ಅಂತರವನ್ನು ಕಾಪಾಡಿಕೊಂಡಿರುವ ಇವರು ಸೃಜನಶೀಲತೆಯ ಹೂಗೊರಳಿಗೆ ಶುಷ್ಕ ಸಿದ್ಧಾಂತ, ಕುತರ್ಕಗಳ ಕಲ್ಲನ್ನು ಹೇರಲು ಪ್ರಯತ್ನಿಸಿದಂತೆ ಕಾಣುವುದಿಲ್ಲ. ಅದಕ್ಕಾಗಿಯೇ ಇಡೀ ಮನುಕುಲ, ಜೀವರಾಶಿ, ನಿಸರ್ಗವನ್ನು ಇವರ ಕೃತಿಗಳು ಹೃದಯವನ್ನಾಗಿಸಿಕೊಂಡಿವೆ.

ಇವರ ಬರಹದ ನದಿ ಎಲ್ಲೆಂದರಲ್ಲಿ ಹರಿದು ಹಸಿರನ್ನು ಸೃಷ್ಟಿಸಿದೆ. ಶ್ರೀ ಅಯ್ಯಪ್ಪ ಸ್ವಾಮಿ ಭಕ್ತಿ ಪುಷ್ಪಾಂಜಲಿ, ಶ್ರೀ ಸನ್ನಿಧಿ, ಶ್ರೀ ಚುಂಚನಗಿರಿ ಭಕ್ತಿ ಗೀತೆಗಳು, ಶ್ರಿ ಅಯ್ಯಪ್ಪಸ್ವಾಮಿ ಭಕ್ತಿ

ಶರಣಾಂಜಲಿ, ಶ್ರೀ ಸಿದ್ಧೇಶ್ವರ ಸ್ತುತಿ, ಕಾವ್ಯಾಂಜಲಿ, ಭಾಗ್ಯಧಾತೆ ಬನಶಂಕರಿ, ಭಕ್ತಿ ತರಂಗಿಣಿ, ಜಯ ಜಯ ಎನ್ನಿ ಭೈರವಗೆ, ಸಪ್ತ ಮಾತೃಕಾಭಕ್ತಿಗೀತೆಗಳು, ಪಾರ್ವತಿ-ಪರಶಿವ, ವೀರಾಂಜನೇಯ, ಚಿರಂತನ ಚಾಮುಂಡೇಶ್ವರಿ, ಮಧುರಗಣಪತಿ, ಚಿನ್ಮಯಿ ಗೀತಾಂಜಲಿ, ಶ್ರೀ ಅಷ್ಟದೇವಿ ಭಕ್ತಿಮಾಲಾ ಇತ್ಯಾದಿ ಭಕ್ತಿ ಗೀತೆಗಳ ಧ್ವನಿಸುರಳಿಗಳನ್ನು ಹೊರತಂದಿದ್ದಾರೆ.

'ಜಾನಪದ'ದಲ್ಲಿ 'ಧರ್ಮ' ಒಂದು ಮೂಲಭೂತ ತತ್ವವಾಗಿದೆ. ಈ ಧರ್ಮವನ್ನು ದೊಡ್ಡರಂಗೇಗೌಡರು ತಮ್ಮ ಬರಹದಲ್ಲಿ ಕಾಣಸುವುದುಂಟು. ಹಾಗಾಗಿಯೇ ಭಕ್ತಿಗೀತೆಗಳ ರಚನೆ ಅವರಿಗೆ ಸಾಧ್ಯವಾಗಿದೆ. ಆದ್ದರಿಂದ ಇವರನ್ನು ಒಬ್ಬ ಜಾನಪದ ಕವಿಯಾಗಿಯೂ ಗುರುತಿಸಬಹುದಾಗಿದೆ.

ಅಂಕುರ, ಶಕ್ತಿ ಕೊಡುವ ಪ್ರಭುವೆ, ಕಾಡುಮಲ್ಲಿಗೆ, ಶ್ರೀ ಸನ್ನಿಧಿ, ವಾತ್ಸಲ್ಯ ಗೀತೆ ಧ್ವನಿ ಸುರಳಿಗಳಲ್ಲಿ ಭಾವಗೀತೆಗಳನ್ನು ಹಾಡುವ ಮೂಲಕ ಗಾಯನ ಕ್ಷೇತ್ರದಲ್ಲಿ ತಮ್ಮ ಪ್ರತಿಭೆಯನ್ನು ಹೊರಹೊಮ್ಮಿಸಿದ್ದಾರೆ. ಬರಹದಲ್ಲಷ್ಟೇ ಅಲ್ಲದೆ ಎರಡು ವರ್ಷಗಳ ಕಾಲ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಸದಸ್ಯರಾಗಿ ಕೆಲಸಮಾಡಿದ್ದಾರೆ. ಈಗ ಮತ್ತೊಮ್ಮೆ ಸದಸ್ಯರಾಗಿ ಆಯ್ಕೆಯಾಗಿರುವುದು ಇವರ ಬಹುಮುಖ ಪ್ರತಿಭೆ ಮತ್ತು ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಬೆಂಗಳೂರಿನ ಎಸ್.ಎಲ್.ಎನ್. ಕಾಲೇಜಿನಲ್ಲಿ ಕಳೆದ 25 ವರ್ಷಗಳಿಂದ ಕನ್ನಡ ಅಧ್ಯಾಪಕರಾಗಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆಸಲ್ಲಿಸಿರುವ ಇವರು ಸಾವಿರಾರು ವಿದ್ಯಾರ್ಥಿಗಳ ಕಣ್ಣಿಗೆ ಜ್ಞಾನದ ಬೆಳಕನ್ನು ತುಂಬಿದ್ದಾರೆ. ಶ್ರೀ. ಲ. ನ. ಧರ್ಮಸಂಸ್ಥೆ 'ಗೌರ್ನಿಂಗ್ ಕೌನ್ಸಿಲ್' ಪ್ರಾಧ್ಯಾಪಕ ಸದಸ್ಯರಾಗಿ ಕೂಡ ಕಾರ್ಯ ನಿರ್ವಹಿಸುತ್ತಿದ್ದಾರೆ.

ದೊಡ್ಡರಂಗೇಗೌಡರು ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ ಹಾಗೂ 'ಆರ್ಟ್ ಆಫ್ ಲಿವಿಂಗ್ ಫೌಂಡೇಷನ್' ಮತ್ತು 'ಪಶ್ಚಿಮ ಕಾಶಿ-ದಿ ಗ್ರೇಟ್‌ರ್ ಫ್ಲಿಂಟ್ ಹಿಂದೂ ಟೆಂಪಲ್ ಫೌಂಡೇಶನ್ ಸ್ಪಿರಿಚುಯಲ್ ಯೂನಿವರ್ಸಿಟಿ ಇಂಗೆಂಡ್ ಇವರ ಪ್ರಾಯೋಜಕತ್ವದಲ್ಲಿ 97ರಲ್ಲಿ ಅಮೆರಿಕ, ಇಂಗ್ಲೆಂಡ್, ಜರ್ಮನಿ, ಸಿಂಗಾಪೂರ್‌ಗಳಲ್ಲಿ ಪ್ರವಾಸ ಮಾಡಿ ನಮ್ಮ ಧರ್ಮ, ಸಂಸ್ಕೃತಿ ಸಾಹಿತ್ಯ ಪರಂಪರೆಯನ್ನು ಕುರಿತು ಉಪನ್ಯಾಸಗಳನ್ನು ನೀಡಿದ್ದಾರೆ.

ಇಂಥ ಬೇರೆ ಬೇರೆ ವಲಯಗಳಲ್ಲಿ ತೊಡಗಿಸಿಕೊಂಡಿರುವ ಮೌಲ್ಯಮಯಿಗಳಾದ ದೊಡ್ಡರಂಗೇಗೌಡರು ಸಾಹಿತ್ಯ ಕ್ಷೇತ್ರದಂತೆಯೇ ಚಲನಚಿತ್ರರಂಗದಲ್ಲಿಯೂ ಶಾಶ್ವತ ಸ್ಥಾನ ಪಡೆದಿದ್ದಾರೆ. ಇವರ ಸಾಧನೆ ನಮ್ಮ ಯುವ ಸಮುದಾಯಕ್ಕೆ ಆದರ್ಶವಾಗಬಲ್ಲದು.

❑



# ದೊಡ್ಡ ಮನಸ್ಸಿನ ದೊಡ್ಡರಂಗೇಗೌಡರು

• ಕಂಬ್ಯಾಣಿ ಶರಣಪ್ಪ

ಬಿದರಕುಂದಿ ಮುದ್ದೇಬಿಹಾಳ ತಾಲೂಕಿನ ಒಂದು ಚಿಕ್ಕ ಹಳ್ಳಿಯಾದರೂ ಚೊಕ್ಕ ಗ್ರಾಮ. ಮುದ್ದೇಬಿಹಾಳ ಪಟ್ಟಣದ ಪಕ್ಕದಲ್ಲಿಯೇ ಇದ್ದು ಇದೀಗ ಅದರ ಉಪನಗರವೇ ಆಗಿದೆ. ಸದಾ ಒಂದಿಲ್ಲೊಂದು ಸಾಹಿತ್ಯಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದೇ ಇರುತ್ತವೆ. ಇಂದಿಗೆ ಹತ್ತು ಹನ್ನೆರಡು ವರ್ಷಗಳ ಹಿಂದೆ ಮಡಿಕೇಶ್ವರ ಸ್ವಾಮಿಗಳೆಂದೇ ಪ್ರಖ್ಯಾತರಾದ ಶ್ರೀ ಶಿವಕುಮಾರ ಸ್ವಾಮಿಗಳು ಇಲ್ಲಿ "ಶಿವಯೋಗಾಶ್ರಮ" ಎಂಬ ಒಂದು ಸಾಂಸ್ಕೃತಿಕ ಕೇಂದ್ರವನ್ನು ಸ್ಥಾಪಿಸಿದರು. ಗ್ರಾಮದ ಪಕ್ಕದಲ್ಲಿಯೇ ಎತ್ತರವಾದ ಬಯಲು ಪ್ರದೇಶದಲ್ಲಿ ಗಿಡಗಂಟೆಗಳ ಮಧ್ಯ ಪ್ರಶಾಂತ ಸ್ಥಳದಲ್ಲಿ ಭವ್ಯವಾದ ಸುಂದರ ಸದನವನ್ನು ನಿರ್ಮಿಸಿದರು. ಅದು ನಾಡಿನ ಪುಸ್ತಕ ಸಂಸ್ಕೃತಿಯ ಕೇಂದ್ರವಾಗಬೇಕೆಂಬುದು ಅವರ ಸಂಕಲ್ಪವಾಗಿತ್ತು. ಅಲ್ಲಿ ಅಭೂತಪೂರ್ವ ಪುಸ್ತಕ ಪ್ರದರ್ಶನ, ಪುಸ್ತಕ ಪ್ರಕಟಣೆ, ಪುಸ್ತಕ ಸಂಸ್ಕೃತಿ, ಕುರಿತು ಚರ್ಚೆ ನಡೆಯುತ್ತಲೇ ಬಂದವು. ನಾಡಿನ ಹಿರಿಯ ಸಾಹಿತಿಗಳು ಮಠಾಧಿಪತಿಗಳು ಇಂಥ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದುದುಂಟು. ವಿಜಾಪುರ ಜ್ಞಾನಯೋಗಾಶ್ರಮದ ಪೂಜ್ಯ ಸಿದ್ಧೇಶ್ವರ ಸ್ವಾಮಿಗಳ ಪ್ರವಚನ ತಿಂಗಳವರೆಗೆ ನಡೆದು ಈ ಭಾಗದಲ್ಲಿ ದಾಖಲೆ ಸ್ಥಾಪಿಸಿದ್ದುಂಟು. ಅದರಂತೆ ಯುವ ಪೀಳಿಗೆಗಾಗಿ ಪುನಶ್ಚೇತನ ಶಿಬಿರಗಳೂ ನಡೆಯುತ್ತಲೇ ಇದ್ದವು. ಹೀಗೆ ಸದಾ ಚಟುವಟಿಕೆಯ ಕೇಂದ್ರವಾದ ಈ ಗ್ರಾಮದ ಒಂದು ಸಾಮಾನ್ಯ ಕುಟುಂಬದವರು ಗ್ರಾಮಸ್ಥರ ಸಹಕಾರದಿಂದ ಮಹಾತ್ಮ ಗಾಂಧಿ ಜಯಂತಿಯನ್ನು ಪ್ರತಿವರ್ಷ ಸ್ವಂತ ಖರ್ಚಿನಿಂದ ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾ ಬಂದಿದ್ದಾರೆ. ಅವರು ಅದೇ ಗ್ರಾಮದ ನಾಯ್ಕೋಡಿ ಮನೆತನದವರು. ಮನೆಯ ಯಜಮಾನ ದಿ. ನಬೀಸಬ ನಾಯ್ಕೋಡಿಯವರು ಇಂದು ಇಲ್ಲ. ಆದರೆ ಅವರ ಮಗ ಅಬ್ದುಲ್ ರಹೀಮ ಇವರು ಶಿಕ್ಷಕರಾಗಿದ್ದ ತಮ್ಮ ತಂದೆಯ ಸ್ಮರಣೆಗಾಗಿ ಅಂದು ಇಬ್ಬರು ಆದರ್ಶ ನಿವೃತ್ತ ಶಿಕ್ಷಕರನ್ನು ಗೌರವಪೂರ್ವಕವಾಗಿ ಸನ್ಮಾನಿಸುತ್ತಾ ಬಂದಿದ್ದಾರೆ.

ದಿ. ಸಬೀಸಾಬ ನಾಯ್ಕೋಡಿಯವರು ಅದೇ ಗ್ರಾಮದಲ್ಲಿ ಹುಟ್ಟಿ ಬೆಳೆದವರು. ಹಳ್ಳಿಯಲ್ಲಿ ಹುಟ್ಟಿ, ಹಳ್ಳಿಯ ಶಾಲೆಯಲ್ಲಿ ಕಲಿತು, ಹಳ್ಳಿಯ ಶಾಲಾ ಶಿಕ್ಷಕರಾಗಿ ಮೂವತ್ತಾರು ವರ್ಷ ಹಳ್ಳಿಯ ಮಕ್ಕಳ ಸೇವೆ ಮಾಡಿದವರು. ಅವರು ಸಾದಾ ಸರಳ ಸಜ್ಜನಿಕೆ ಜೀವನ ಸಾಗಿಸಿದವರು. ಅವರು ನನ್ನ ಸನ್ಮಿತ್ರರೂ ಆಗಿದ್ದರು. ಜೀವನದುದ್ದಕ್ಕೂ ತಮ್ಮ ಶಿಕ್ಷಕ ವೃತ್ತಿಯನ್ನೇ ಪ್ರವೃತ್ತಿಯನ್ನಾಗಿ ಶಿಕ್ಷಕ ವೃತ್ತಿಗೆ ಗೌರವ ತಂದುಕೊಟ್ಟಿದ್ದರು. ಒಮ್ಮೆಯೂ ಮಾನ ಸನ್ಮಾನ ಯಾವುದನ್ನು ಬಯಸಿದವರಲ್ಲ. ಅವರ ಸ್ಮರಣಾರ್ಥವಾಗಿ ಗೌರವಿಸಲ್ಪಡುವ ಸನ್ಮಾನ ಸಮಾರಂಭಕ್ಕೆ ಆ ವರ್ಷ ನಾಡಿನ ಪ್ರಸಿದ್ಧ ಸಾಹಿತಿಗಳಾದ ಡಾ॥ ದೊಡ್ಡರಂಗೇಗೌಡರನ್ನು ಮುಖ್ಯ ಅತಿಥಿಗಳನ್ನಾಗಿ ಬರಮಾಡಿಕೊಳ್ಳಲಾಗಿತ್ತು. ವಿದ್ವನ್ಮಣಿಗಳಾದ ಡಾ॥ ದೊಡ್ಡರಂಗೇಗೌಡರು ಸಪತ್ನಿಕರಾಗಿ ಸಂಭ್ರಮದಿಂದ ಈ ಸಮಾರಂಭದಲ್ಲಿ ಪಾಲ್ಗೊಂಡು ಹೆಚ್ಚಿನ ಶೋಭೆ ತಂದುಕೊಟ್ಟಿದ್ದರು. ಡಾ॥ ರಂಗೇಗೌಡರು ತಮ್ಮೂರಿಗೆ ಬರುವುದೊಂದು ಬಲುದೊಡ್ಡ ಭಾಗ್ಯವೆಂದು ಗ್ರಾಮದ ಜನರು ನಿಜವಾಗಿ ಸಂಭ್ರಮಿಸಿದ್ದರು. ಸುತ್ತಲಿನ ಹತ್ತಾರು ಗ್ರಾಮದ ಜನರು ಕಿಕ್ಕಿರಿದು ನೆರೆದಿದ್ದರು.

ಅಂದು ಸನ್ಮಾನಿಸಲ್ಪಡುವ ಇಬ್ಬರು ನಿವೃತ್ತ ಶಿಕ್ಷಕರಲ್ಲಿ ನಾನೂ ಒಬ್ಬನಾಗಿದ್ದೆ. ನಾನು ಅದೇ ತಾಲ್ಲೂಕಿನವನೆಂಬ ಅಭಿಮಾನದಿಂದ ನನ್ನನ್ನು ಆಮಂತ್ರಿಸಿದ್ದರು. ಮತ್ತೊಬ್ಬರು ನಿಜವಾಗಿ ಸನ್ಮಾನಕ್ಕೆ ಅರ್ಹ ಶಿಕ್ಷಕರು. ಅವರೇ, ಆಧುನಿಕ ವಚನಕಾರ ಶಿವಕವಿ ಶಿಕ್ಷಕ ಸಾಹಿತಿ ಶ್ರೀ ಹೊಸಮನಿ ಸಂಗಮೇಶರು. ಅವರು ನಲ್ವತ್ತು ವರ್ಷಗಳ ಹಿಂದೆ ಇದೇ ಬಿದರಕುಂದಿ ಗ್ರಾಮದಲ್ಲಿ ದಕ್ಷ ಶಿಕ್ಷಕರಾಗಿ ಕೆಲಸ ಮಾಡಿದ್ದರು. ಅಂಥವರನ್ನು ಅವರ ಶಿಷ್ಯವರ್ಗ ಮರೆಯಲು ಸಾಧ್ಯವೇ? ನಿಜ ಹೇಳಬೇಕೆಂದರೆ ಡಾ॥ ದೊಡ್ಡರಂಗೇಗೌಡರಿಂದ ಸನ್ಮಾನಿತನಾಗುವುದು ನನ್ನ ಭಾಗ್ಯವೆಂದೇ ನಾನು ಭಾವಿಸಿದ್ದೆ. ಆದರೆ ಪ್ರೀತ್ಯಾದರಗಳಿಂದ ತುಂಬಿ ತುಳುಕುವ ಆ ಸಭೆಯಲ್ಲಿ ಆತ್ಮೀಯವಾಗಿ ಶಾಲು ಹೊದಿಸಿ ನಮ್ಮನ್ನು ಸನ್ಮಾನಿಸಿದ ಅವರು "ಇಂಥ ಶಿಕ್ಷಕರನ್ನು ಸನ್ಮಾನಿಸುವುದೇ ನನ್ನ ಭಾಗ್ಯ" ಎಂದು ಸಭೆಗೆ ಸಾರಿ ಹೇಳುತ್ತಾ ತಮ್ಮ ಹೃದಯ ವೈಶಾಲ್ಯತೆಯನ್ನು ಮೆರೆದರು. ನಮ್ಮನ್ನಷ್ಟೇ ಅಲ್ಲ ಇಡೀ ಸಭೆಯನ್ನು ರೋಮಾಂಚನಗೊಳಿಸಿದರು.

ತಮ್ಮ ಭಾಷಣದುದ್ದಕ್ಕೂ ಶಿಕ್ಷಣದ ಮಹತ್ವ, ಶಿಕ್ಷಕ ಪ್ರವೃತ್ತಿಯ, ಪಾವಿತ್ರ್ಯತೆ ಕುರಿತು ಮನನೀಯವಾಗಿ ಮಾತನಾಡಿದರು. ತಪ್ಪಿಯೂ ಕೂಡ ಶಿಕ್ಷಕರಿಗಾಗಲಿ ಸಭಿಕರಿಗಾಗಲಿ ಉಪದೇಶದ ಭಾರ ಹೇರಲಿಲ್ಲ. ಬದಲಾಗಿ ತಮ್ಮ ಸ್ವರಚಿತ ನೂತನ ಕಾವ್ಯವಾಚನದಿಂದ ಸಭಿಕರನ್ನು ರಂಜಿಸಿದರು. ಸತಿಪತಿಗಳೀರ್ವರು ತಮ್ಮ ಅಮೇರಿಕಾ ಪ್ರವಾಸದ ಅನುಭವಗಳನ್ನು ಅಲ್ಲಿಯ ನೋವು ನಲಿವುಗಳನ್ನು ನವಿರಾಗಿ ಹಂಚಿಕೊಂಡರು. ಭಾರತೀಯ ಸಂಸ್ಕೃತಿಯ ಸೊಬಗನ್ನು ಗ್ರಾಮೀಣ ಜೀವನ ಶೈಲಿಯ ಸತ್ವವನ್ನು ಎತ್ತಿ ಹೇಳಿದರು.

ಪ್ರಪಂಚವನ್ನು ಸುತ್ತು ಹಾಕಿಬಂದ ಸುಶಿಕ್ಷಿತ ದಂಪತಿಗಳೀರ್ವರು ನಮ್ಮೆಲ್ಲರ ಮಧ್ಯ

ಸಾಮಾನ್ಯರಂತೆ ದೇವಸ್ಥಾನದ ಅಂಗಳದಲ್ಲಿ ಕುಳಿತು ಯಾವ ಸಂಕೋಚವಿಲ್ಲದೆ ಸಂತಸದಿಂದ ಊಟ ಮಾಡಿದರು. ತಟ್ಟೆಯಲ್ಲಿ ತಂದಿಟ್ಟ ಮೃಷ್ಟಾನ್ನವನ್ನು ಬದಿಗಿರಿಸಿ ತಮಗಿಷ್ಟವಾದ ಎಳ್ಳು ಹಚ್ಚಿದ ತೆಳ್ಳನೆಯ ರೊಟ್ಟಿ, ಎಣ್ಣೆ ಬದನೆಕಾಯಿ ಹೆಸರು ಬೇಳೆ ಪಲ್ಯ ಕೆನೆಕೆನೆ ಮೊಸರು ಬಾಯಿ ಚಪ್ಪರಿಸಿ ಸವಿದರು. ''ಕಾಳೆಮ್ಮೆ ಕರೆದ ಹಯನಾಗಿ ಬೆಳವಲದ ಮೇಳ ನೋಡೆಂದ'' ಸರ್ವಜ್ಞನ ಲೋಕಾನುಭವವನ್ನು ಸ್ಮರಿಸಿಕೊಂಡರು. ಗ್ರಾಮೀಣರ ಆದರಾತಿಥ್ಯ ಮೆಚ್ಚಿ ಆತ್ಮೀಯವಾಗಿ ಕೃತಜ್ಞತೆ ಹೇಳಿದರು. ಅವರ ಸರಳ ನೈಜ ನಿರಾಡಂಬರ ನಡೆ ನುಡಿಗೆ ಜನರೂ ಸಂತಸಪಟ್ಟರು. ದೊಡ್ಡವರ ಮನಸ್ಸು ದೊಡ್ಡದಾಗಿರುತ್ತದೆ ಎಂಬುದಕ್ಕೆ ದೊಡ್ಡರಂಗೇಗೌಡ ದಂಪತಿಗಳು ತಕ್ಕ ನಿದರ್ಶನವಾಗಿದ್ದಾರೆ.





# ಸರಳ ಜೀವಿಗಳು

• ಎಂ.ಎಸ್. ಮಂಜೇಗೌಡ

ನಾನೊಮ್ಮೆ ಹನುಮಂತನಗರದಲ್ಲಿ ಪೋಲೀಸ್ ಇನ್ಸ್‌ಪೆಕ್ಟರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ನನ್ನ ಸಾಹಿತ್ಯ ರಚನೆಯನ್ನೊಮ್ಮೆ ತೋರಿಸಲೆಂದು ಯೂನಿಫಾರಂನಲ್ಲಿ ನಾನು ಜೀಪಿನಲ್ಲಿ ಬಂದು ಮನೆಯಲ್ಲಿ ವಿಚಾರಿಸಿದೆ. ನಾನು ಜೀಪಿನಲ್ಲಿ ಬಂದು ವಿಚಾರಿಸಿದ್ದು ಗೌಡರ ಮನೆಯವರಿಗೆ ಏನೋ ಗಾಬರಿಯಾದಂತೆ ಕಂಡೆ. ಅವರು ಇಲ್ಲ ಎಂದು ಒಳಗಿನಿಂದ ಉತ್ತರ. ಸ್ವಲ್ಪ ಸ್ವಂತ ಕೆಲಸ ಇತ್ತು ಮೇಡಂ. ಸಾಹೇಬರನ್ನು ನೋಡಬೇಕಾಗಿತ್ತು ಎಂದೆ. ಇನ್ನು ಮುಂದೆ ನಮ್ಮ ಮನೆಹತ್ತಿರ ಯೂನಿಫಾರಂನಲ್ಲಿ ಬರಬೇಡಿ ಎಂಬ ಉತ್ತರ. ನನಗೂ ಮುಜುಗರ ಜೊತೆಗೆ ಪೋಲೀಸರೆಂದರೆ ಇಷ್ಟೊಂದು ತಾತ್ಸಾರವೆ ಎನಿಸಿದರು, ನಂತರ ಇವರು ಪ್ರಜ್ಞಾವಂತರಿಗೆ, ವಿಚಾರವಾದಿಗಳಿಗೆ ಪೋಲೀಸರನ್ನು ಕಂಡರೆ ಭಯ, ಇಲ್ಲ ಪೋಲೀಸರಿಂದ ಯಾವುದೋ ಘಟನೆ ನಡೆದಿರಬೇಕು, ಅಥವಾ ಪೋಲೀಸರು ಮನೆಯ ಬಾಗಿಲಿಗೆ ಬಂದರೆ ಇವರು ಯಾವುದೊ ಕ್ರಿಮಿನಲ್ ಕೇಸಿನಲ್ಲಿ ಸಿಕ್ಕಿಕೊಂಡಿರಬೇಕೆಂಬ ಭಾವನೆ ಬೇರೆಯವರಲ್ಲಿ ಮೂಡಬಹುದೇನೋ ಎಂಬ ಆತಂಕದಿಂದ ಈ ರೀತಿ ಮಾತನಾಡಿರಬಹುದೆಂದು ಭಾವಿಸಿದೆ.

ನಂತರ ಗೌಡರನ್ನು ಯೂನಿಫಾರಂನಲ್ಲಿ ಭೇಟಿ ಮಾಡಿ ನನ್ನ ಬರವಣಿಗೆ ನೀಡಿದೆ. ತಿದ್ದಿ ಚೆನ್ನಾಗಿದೆ ಅಚ್ಚುಹಾಕಿ ಎಂದು ಪ್ರೋತ್ಸಾಹ ನೀಡಿ ಮುನ್ನುಡಿಯನ್ನು ಪುಸ್ತಕಕ್ಕೆ ದಯಪಾಲಿಸಿದರು. ಚಳಿಬಿಟ್ಟು ಬರೆಯಿರಿ ಎಂದು ಉತ್ತೇಜಿಸಿದರು. ಮುಂದೊಂದು ದಿನ ಮತ್ತೊಂದು ಕವನ ರಚಿಸುವಂತೆ ಬೆನ್ನು ತಟ್ಟಿದ್ದರು, ಸರಳಜೀವಿಗಳು ಆದ ಇವರು ಹೆಚ್ಚು ಮಾತನಾಡಿದರೆ ಅವರ ಮನಸ್ಸಿಗೆಲ್ಲಿ ನೋವಾಗುತ್ತದೋ ಎಂದು ತಿಳಿಯುವ ಮೃದು ಸ್ವಭಾವದವರು.

ಮತ್ತೊಂದು ದಿನ ನಾನು ಗೌಡರಿಂದ ಫೋನನ್ನು ಸ್ವೀಕರಿಸಿದೆ ಅವರು ಬಹಳ ಗಾಬರಿಯಲ್ಲಿದ್ದಂತೆ ಕಂಡೆ. ನೀವು ಎಲ್ಲಿದ್ದೀರಿ ಎಂದರು. ಹೇಳಿ ಸಾರ್ ಏನು ವಿಚಾರ ಎಂದಾಗ

ನಾನು ನಿಮ್ಮನ್ನು ಕಾಣಬೇಕು ಅಲ್ಲಿಗೆ ಬರುತ್ತೇನೆ, ಎಲ್ಲಿದ್ದೀರಿ ಎಂದು ಕೇಳಿದರು. ನನಗೂ ಸಂಕೋಚ ಸಾಹಿತ್ಯದಲ್ಲಿ ಇಷ್ಟೊಂದು ಹೆಸರುಮಾಡಿರುವವರು ನನ್ನಲ್ಲಿಗೆ ಬರುತ್ತೇನೆ ಎಂದರೆ ಏನೋ ಸಮಸ್ಯೆ ಇರಬೇಕು ನೀವು ಇರುವಲ್ಲಿಗೆ ಬರುತ್ತೇನೆ ಎಂದು ಮೌಂಟ್ ಜಾಯ್ ಹತ್ತಿರ ಇರುವ ಮನೆಗೆ ಬಂದೆ. ಎಲ್ಲಾದರೂ ಏಕಾಂತದಲ್ಲಿ ಮಾತನಾಡಬೇಕು ಎಂದರು. ನಾನು ದೊಡ್ಡಗಣೇಶನ ದೇವಸ್ಥಾನದ ಬಳಿ ಸೂಕ್ತ ಎಂದು ಅಲ್ಲಿಗೆ ಕರೆದೊಯ್ದೆ.

ವಿಷಯ ಕಾಲೇಜಿನ ವಿದ್ಯಾರ್ಥಿಗಳದ್ದಾಗಿತ್ತು. ಇದಕ್ಕೆ ಯಾಕೆ ಇಷ್ಟೊಂದು ತಲೆಕೆಡಿಸಿಕೊಂಡಿದ್ದೀರಿ ಎಂದು ಅವರನ್ನು ಕಲಾಸಿಪಾಳ್ಯ ಪೋಲಿಸ್ ಠಾಣೆಗೆ ಕರೆದೊಯ್ದು ದೂರು ಕೊಡಿಸಿ, ಪಿ.ಎಸ್.ಐ.ರವರಿಗೆ ವಿಚಾರವನ್ನು ಮನವರಿಕೆ ಮಾಡಿದ ಮೇಲೆ ಕಾಲೇಜಿಗೆ ನಾಳೆ ಭೇಟಿ ನೀಡುವುದಾಗಿ ಅವರು ತಿಳಿಸಿದ ನಂತರ ಸಮಾಧಾನದಿಂದ ಗೌಡರು ಮನೆ ಸೇರಿದರು. ಇಷ್ಟೊಂದು ಹೆಸರು ಮಾಡಿರುವ ಸಹೃದಯಿ ಕವಿ ದೊಡ್ಡರಂಗೇಗೌಡರು ಕಾಲೇಜಿನ ವಿದ್ಯಾರ್ಥಿಗಳು–ಹಳೇ ವಿದ್ಯಾರ್ಥಿಗಳ ಜೊತೆ ಸೇರಿಕೊಂಡು ಕೆಟ್ಟ ಹವ್ಯಾಸಗಳಿಗೆ ಬಲಿಯಾಗಿ ನಾಳೆ ಕಾಲೇಜಿಗೆ ಕೆಟ್ಟಹೆಸರು ಬರಬಾರದೆಂಬ ಧೀರ್ಘಾಲೋಚನೆಯನ್ನುಳ್ಳ ಇಂತಹ ವ್ಯಕ್ತಿಯನ್ನು ಕಂಡು ನನಗೆ ಅತ್ಯಂತ ಹರ್ಷವೆನಿಸಿ ಕಾಲೇಜಿನ ವಿದ್ಯಾರ್ಥಿಗಳ ಬಗ್ಗೆ ಹಾಗೂ ಕಾಲೇಜಿನ ಬಗ್ಗೆ ಅವರಲ್ಲಿರುವ ಕಾಳಜಿಯನ್ನು ಮನಗಂಡು ಅವರನ್ನು ಅಭಿನಂದಿಸಿದೆನು.

ಉತ್ತಮ ವಾಗ್ಮಿಗಳು–ದೊಡ್ಡ ಸಾಹಿತ್ಯ ಭಂಡಾರವೆ ಇವರಾಗಿದ್ದು ಕನ್ನಡದ ಕ್ರಾಂತಿಕಾರರು,ಸ ಯುವಜನತೆಗೆ ಮಾರ್ಗದರ್ಶಕರೂ, ಶ್ರೀ ಆದಿಚುಂಚನಗಿರಿಯ ಆರಾಧಕರು, ಸದಾ ಚಿಂತಕರಾಗಿ ಸೇವಾ ಮನೋಭಾವ ಮೈಗೂಡಿಸಿಕೊಂಡಿರುವ ಸರಳಜೀವಿ ದೊಡ್ಡರಂಗೇಗೌಡರು ಅಭಿನಂದನೆಗೆ ಅರ್ಹರು. ಅವರಿಂದ ಕನ್ನಡ ಸಾಹಿತ್ಯಸೇವೆ ನಿರಂತರವಾಗಿ ನಡೆಯಲಿ ಎಂದು ಅಭಿನಂದಿಸುತ್ತೇನೆ.

❑



# ನೆಲೆಯಾಗಿ ನಿಂತಿದ್ದಾರೆ!

● ಸಾ.ಮ. ಶಿವಮಲ್ಲಯ್ಯ ಸಾಸಲಾಪುರ

ಕನಕಪುರ ತಾಲ್ಲೂಕು 6ನೇ ಕನ್ನಡ ಸಾಹಿತ್ಯ ಸಮ್ಮೇಳನ ದಿನಾಂಕ 29.2.2000ರಂದು ದೊಡ್ಡ ಮರಳವಾಡಿಯಲ್ಲಿ ನಡೆಯುತ್ತಿತ್ತು. ನಾನು ಸಹ ಕವನ ವಾಚನ ಮಾಡಲು ಹೋಗಿದ್ದೆ. ಅಂದಿನ ಕವಿಗೋಷ್ಠಿಯ ಅಧ್ಯಕ್ಷತೆ ನಾಡಿನ ಖ್ಯಾತ ಸಾಹಿತಿ ದೊಡ್ಡರಂಗೇಗೌಡರದು. ಕವಿಗೋಷ್ಠಿ ಸಮಯಕ್ಕೆ ಸರಿಯಾಗಿ ಗೌಡರು ಆಗಮಿಸಿದರು. ಇನ್ನೂ ಪ್ರಬಂಧ ಮಂಡನೆ ನಡೆಯುತ್ತಿತ್ತು. ಮುಂದಿನ ಸಾಲಿನ ಆಸನದಲ್ಲಿ ನಾನು ಕುಳಿತಿದ್ದೆ. ನನ್ನ ಪಕ್ಕವೇ ಬಂದು ಕುಳಿತರು. ಎಲ್ಲರೂ ದೊಡ್ಡರಂಗೇಗೌಡರು ಬಂದರು ಎನ್ನುತ್ತಿದ್ದುದನ್ನು ನೋಡಿ ನನಗೆ ಅರ್ಥವಾಯಿತು. ಇವರೇ ದೊಡ್ಡರಂಗೇಗೌಡರೆಂದು. ಅದೇ ಮೊದಲು ನಾನು ಅವರನ್ನು ಕಂಡದ್ದು! ಕ್ಯಾಮರದವರು ಕ್ಲಿಕ್ ಮಾಡಿದ್ದೆ ಮಾಡಿದ್ದು. ನನಗಂತು ಬಹಳ ಆನಂದವಾಯಿತು "ನಾಡಿನ ಖ್ಯಾತ ಕವಿಗಳ ಪಕ್ಕ ಕುಳಿತಿದ್ದೇನೆ ಧನ್ಯನಾದೆ' ಎಂದು ಮನ ಹೇಳಿತು. ಆದರೂ ಅವರೊಡನೆ ಮಾತನಾಡಲು ನನಗೆ ಧೈರ್ಯ ಬರಲಿಲ್ಲ. ಹಿಂಜರಿಕೆ ಕಾಡುತ್ತಿತ್ತು. "ಎಷ್ಟು ಗಂಟೆಗೆ ಶುರುವಾಯ್ತು" ಎಂದು ಕೇಳಿದರು. ಅದಕ್ಕೆ ಸಂಕೋಚದಿಂದಲೇ ಉತ್ತರಿಸಿ ಸುಮ್ಮನೆ ಕುಳಿತುಕೊಂಡೆ. ಕವಿಗೋಷ್ಠಿ ಪ್ರಾರಂಭವಾಗುವ ಮುನ್ನವೇ ಮೇಘರಾಜನ ಆಗಮನ! ಸಾಂಕೇತಿಕವಾಗಿ ಇಬ್ಬರು ಕವನ ವಾಚನ ಮಾಡಿದರು. ಗೌಡರು ಅಧ್ಯಕ್ಷೀಯ ಭಾಷಣ ಮಾಡಿ ಕವನ ಓದಿ ಕಾರ್ಯಕ್ರಮ ಮುಗಿಸಿದರು.

2001ರಲ್ಲಿ ನಾನೊಂದು ಕವನ ಸಂಕಲನ ಹೊರ ತರಲು ಸಿದ್ದನಾದೆ. 'ಅದಕ್ಕೆ ಮುನ್ನುಡಿ ಬರೆಯಿಸುವುದು ಯಾರಿಂದ?' ಎಂದು ಯೋಚಿಸಿದಾಗ ದೊಡ್ಡರಂಗೇಗೌಡರ ನೆನಪಾಯಿತು. ಅವರ ವಿಳಾಸ ನನಗೆ ಗೊತ್ತಿರಲಿಲ್ಲ. ಸಾಹಿತ್ಯ ಪರಿಷತ್ತಿಗೆ ಹೋಗಿ ವಿಳಾಸ ಪಡೆದು ಮನೆ ಹುಡುಕಿದೆ. ಆ ದಿನ ಗೌಡರು ಮನೆಯಲ್ಲಿರಲಿಲ್ಲ. ಅವರ ಮಕ್ಕಳಿದ್ದರು. 'ನಮ್ಮ ತಂದೆಯವರು ಇಲ್ಲ' ಎಂದು ಹೇಳಿದರು. "ಮುನ್ನುಡಿ ಬರೆಸಿಕೊಳ್ಳಲು ಬಂದಿದ್ದೇನೆ. ಕವನಗಳನ್ನು ಕೊಡುತ್ತೇನೆ

ಬಂದ ಮೇಲೆ ಕೊಡಿರಿ'' ಎಂದೆ. ''ನಮ್ಮ ತಂದೆಯವರು ಬಂದ ಮೇಲೆ ಬನ್ನಿ ನಾವು ತೆಗೆದುಕೊಂಡರೆ ಸರಿ ಇಲ್ಲ'' ಎಂದು ಹೇಳಿದರು. ಸರಿ ಎಂದು ಊರಿಗೆ ಮರಳಿದೆ. ಐದಾರು ದಿವಸಗಳು ಕಳೆದ ಮೇಲೆ ಮತ್ತೆ ಹೋದೆ. ಆ ದಿನ ಕವಿಗಳು ಮನೆಯಲ್ಲಿದ್ದರು. ನಮಸ್ಕಾರ ಮಾಡಿ ''ಸಾರ್ ನಾನು ಕನಕಪುರ ತಾಲ್ಲೂಕಿನಿಂದ ಬಂದಿದ್ದೇನೆ ಕವನ ಸಂಕಲನಕ್ಕೆ ಮುನ್ನುಡಿ ಬೇಕು'' ಎಂದೆ. ''ನೋಡಿ ಇವ್ರೆ ನನಗೆ ಈಗ ಬಿಡುವಿಲ್ಲ'' ಎಂದರು. ''ಸಾರ್ ನಿಮ್ಮಿಂದಲೇ ಬರೆಯಿಸಲು ನಾನು ಮನಸ್ಸು ಮಾಡಿದ್ದೇನೆ,'' ಎಂದೆ. ''ನಿಜ ಆದರೆ ನನಗೆ ಬಹಳಷ್ಟು ಕೆಲಸಗಳಿವೆ. ಒಂದು ವೇಳೆ ತೆಗೆದುಕೊಂಡರೂ ಬರೆದು ಕೊಡಲು ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆ'' ಎಂದರು. ಆಗಲಿ ಸಾರ್. ನಿಧಾನವಾಗಿಯೇ ಬರೆದು ಕೊಡಿ'' ಎಂದೆ. ''ಆಯ್ತು'' ಎಂದು ಪ್ರತಿಯನ್ನು ಪಡೆದರು. ನಾನು ಊರಿಗೆ ಹೊರಟೆ. ದಾರಿಯುದ್ದಕ್ಕೂ ಗೌಡರ ಬಗ್ಗೆ ಯೋಚಿಸಿದೆ. ಸರಿಯಾದ ರೀತಿಯಲ್ಲಿ ಮಾತನಾಡಲಿಲ್ಲ, ಬರೆದು ಕೊಡಲು ಮನಸ್ಸಿರಲಿಲ್ಲ ಏಕೆ? ಎಂದು ಯೋಚಿಸಿದೆ ಆದರೆ ಉತ್ತರ ಸಿಗಲಿಲ್ಲ.

ಇಪ್ಪತ್ತು ದಿನಗಳು ಕಳೆದ ಮೇಲೆ ದೂರವಾಣಿ ಕರೆ ಮಾಡಿದೆ. ''ಒಂದೆರಡು ಕವನಗಳನ್ನು ನೋಡಿದ್ದೇನೆ ಎಂಟತ್ತು ದಿನ ಕಳೆದ ಮೇಲೆ ಫೋನ್ ಮಾಡಿರಿ'' ಎಂದರು. ಈಗಲು ಹೆಚ್ಚು ಮಾತನಾಡಲಿಲ್ಲ. ಹದಿನೈದು ದಿನಗಳು ಕಳೆದ ಮೇಲೆ ದೂರವಾಣಿ ಕರೆ ಮಾಡಿದೆ ''ಕವನಗಳನ್ನೆಲ್ಲ ಓದಿದ್ದೇನೆ. ನಾಲ್ಕೈದು ದಿನಗಳಲ್ಲಿ ಬರೆದು ಕೊಡುತ್ತೇನೆ'' ಎಂದರು. ''ಸಾರ್ ಕವನಗಳು ಹೇಗಿವೆ?'' ಎಂದೆ. ''ಚೆನ್ನಾಗಿವೆ ನನ್ನ ಮನಸ್ಸಿಗಿಡಿಸಿದವು'' ಎಂದು ನಗುತ್ತ ಮಾತನಾಡಿದರು. ನನಗೀಗ ಬಹಳ ಆನಂದವಾಯಿತು. ಈ ಹಿಂದೆ ಮಾತನಾಡಿದ ದೊಡ್ಡರಂಗೇಗೌಡರಿಗೂ ಈ ದಿನ ಮಾತನಾಡಿದ ದೊಡ್ಡರಂಗೇಗೌಡರಿಗೂ ಬಹಳಷ್ಟು ವ್ಯತ್ಯಾಸವಿತ್ತು. ಖುಶಿ ಪಟ್ಟೆ!

ಎಂಟತ್ತು ದಿನ ಬಿಟ್ಟು ಕರೆ ಮಾಡಿದೆ ''ಬರೆದು ನಾಲ್ಕೈದು ದಿನಗಳು ಆಗಿವೆ. ನೀವು ಯಾವಾಗ ಬರುತ್ತೀರಿ ಹೇಳಿ? ಬರುವಾಗ ಫೋನ್ ಮಾಡಿ ಬನ್ನಿ. ನಾನು ಕಾಲೇಜಿಗೆ ತರುತ್ತೇನೆ'' ಎಂದರು. ''ಸಾರ್ ನಾಳೆ ಬರುತ್ತೇನೆ'' ಎಂದೆ. ಮಾರನೆಯ ದಿನ 11 ಗಂಟೆ ಹೊತ್ತಿಗೆ ಕಾಲೇಜಿನ ಹತ್ತಿರ ಹೋದೆ. ಕವಿಗಳನ್ನು ಕಂಡೊಡನೆ ನಮಸ್ಕರಿಸಿದೆ. ಬಹಳ ದಿನಗಳಿಂದ ಆಪ್ತರಾಗಿದ್ದ ರೀತಿ ಬೆನ್ನ ಮೇಲೆ ಕೈ ಮಡಗಿ ತಮ್ಮ ಕೊಠಡಿಯತ್ತ ಕರೆದುಕೊಂಡು ಹೋದರು. ''ನೋಡಿ ಶಿವಮಲ್ಲಯ್ಯ ನಿಮ್ಮ ಕವನಗಳು ನನಗೆ ಮೆಚ್ಚುಗೆಯಾಗಿವೆ. ಚೆನ್ನಾಗಿ ಬರೆಯಬಲ್ಲಿರಿ! ನಿಮ್ಮ ಕವಿತೆಗಳು ನನಗೆ ತೃಪ್ತಿ ತಂದಿವೆ'' ಎಂದು ಬಹಳ ಮೆಚ್ಚುಗೆಯ ಮಾತಾಡಿದರು. ನಾನು ಮೊದಲು ಗೌಡರನ್ನು ಕಂಡಾಗ ಸರಿಯಾಗಿ ಏಕೆ ಮಾತನಾಡಲಿಲ್ಲ ಎಂಬುದು ನನಗಾಗ ಅರ್ಥವಾಯಿತು. ಸಂಕಲನಕ್ಕೆ 'ಬೆಳದಿಂಗಳ ರಾತ್ರಿ' ಎಂಬ ಹೆಸರು ಸೂಚಿಸಿದ್ದೆ. ಈಗ ಬೇರೆ ಹೆಸರು ಹೇಳಿದೆ. ಅದಕ್ಕೆ ಗೌಡರು ಒಪ್ಪಲಿಲ್ಲ. ''ನನ್ನ ನಲವತ್ತು ವರ್ಷದ ಅನುಭವದ ಆಧಾರದ ಮೇಲೆ ಹೇಳುವುದಾದರೆ

ಸಂಕಲನಕ್ಕೆ ಸರಿಯಾದ ಹೆಸರಿಡಬೇಕು. ಈಗ ನೀವು ಇಟ್ಟಿರುವ ಹೆಸರು ಸೂಕ್ತವಾಗಿದೆ ಮತ್ತೆ ಬದಲಿಸಿ'' ಗೈರು ಹಾಜರಾಗಬೇಡಿ ಎಂದರು. ಅವರ ಮಾತಿನಂತೆ 'ಬೆಳದಿಂಗಳ ರಾತ್ರಿ'ಯನ್ನೇ ಇಟ್ಟುಕೊಂಡೆ. ಮುನ್ನುಡಿ ಬರೆಯುವ ಪ್ರಾರಂಭದಲ್ಲಿ ತಾವು ಒಂದು ಶೀರ್ಷಿಕೆ ಕೊಟ್ಟಿದ್ದಾರೆ 'ಅಭಿವ್ಯಕ್ತಿಯ ಖಾತ್ರಿ ಬೆಳದಿಂಗಳ ರಾತ್ರಿ' ಎಂದು ನಂತರ ಮುನ್ನುಡಿ ಬರೆದಿದ್ದಾರೆ. ಅಂದಿನಿಂದ ಗೌಡರು  ನನ್ನ ಮನದಾಳದಲ್ಲಿ ನೆಲೆಯಾಗಿ ನಿಂತಿದ್ದಾರೆ. ಅವರಿಗೆ ಅಭಿನಂದನೆಯನ್ನು ಈ ಮೂಲಕ ಸಲ್ಲಿಸುತ್ತಿದ್ದೇನೆ.





# ಆತ್ಮೀಯ ಒಡನಾಡಿ

• ಉಪ್ಪುಂದ ಚಂದ್ರಶೇಖರ ಹೊಳ್ಳ

1968ರಲ್ಲಿ ಮೈಸೂರಿನ ಅಂಚೆ ತಂತಿ ಇಲಾಖೆಯ ದೂರವಾಣಿ ವಿಭಾಗದಲ್ಲಿ ನಾನು ಉದ್ಯೋಗಿಯಾಗಿದ್ದಾಗ - ಈಗ ಡಾಕ್ಟರೇಟ್ ಪಡೆದ - ದೊಡ್ಡರಂಗೇಗೌಡರು ರಾತ್ರಿಪಾಳಿಯಲ್ಲಿ ರೈಲ್ವೇ ಮೇಲ್ ಸರ್ವಿಸ್‌ನಲ್ಲಿ ಉದ್ಯೋಗದಲ್ಲಿರುತ್ತಲೇ ವಿದ್ಯಾಭ್ಯಾಸ ಮುಂದುವರಿಸಿ ಎಂ.ಎ. ಓದುತ್ತಿದ್ದರು.

ಗೆಳೆಯ ಗಂಗಾಧರ ಮೂರ್ತಿ ಮತ್ತು ಎಸ್. ನಾರಾಯಣರ ಮೂಲಕ ನನ್ನ ಗೌಡರ ಸ್ನೇಹ ಕೊಂಡಿ ಬೆಸೆದಿತ್ತು. ಎಡಪಂಥೀಯ ಕಾರ್ಮಿಕ ಸಂಘಟನೆಯ ಮುಂಚೂಣಿಯಲ್ಲಿದ್ದು ಉದ್ಯೋಗದಲ್ಲಿದ್ದೇ ಕಾನೂನು ವ್ಯಾಸಂಗ ಮಾಡುತ್ತಿದ್ದ ನಾನು, ಮೈಸೂರಿನ ಅಂಚೆ ತಂತಿ ಬಳಗದಲ್ಲಿ ಸಕ್ರಿಯನಾಗಿದ್ದೆ. ಒಡನಾಡಿ ಎಸ್. ನಾರಾಯಣ 'ವಿಕಸ ಪ್ರಕಾಶನ'ದ ಸಂಪಾದಕ ಮಂಡಳಿಯಲ್ಲೂ ಇದ್ದೆ. ಪ್ರಗತಿಪರ ಚಿಂತಕರ ಆತ್ಮೀಯ ಒಡನಾಟದಲ್ಲಿ ಹಲವು ಉತ್ತಮ ವರ್ಷಗಳನ್ನು ಕಳೆಯುತ್ತಿದ್ದಾಗ ದೊಡ್ಡರಂಗೇಗೌಡರು ನಮ್ಮೊಡನೆ ಇದ್ದರು.

ಆಗಾಗ ಮೈಸೂರಿಗೆ ಬಂದು ವಿಚಾರಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ ಅವರು ಸದ್ದುಗದ್ದಲವಿಲ್ಲದೇ - ತಿಳಿನಗೆಯ ಮೂಲಕ ಎಂತಹ ಸನ್ನಿವೇಶವನ್ನಾದರೂ ತಿಳಿಗೊಳಿಸಬಲ್ಲ ಹದವರಿತ ನುಡಿ ಪರಿಣಿತರು.

ಯಾವ 'ಇಸಂ'ಗೂ ಜೋತು ಬೀಳದೇ ಮಾನವೀಯತೆಯನ್ನು ದೇಶಿ ಸಂಸ್ಕೃತಿಯ ಆಚರಣೆಯಲ್ಲಿಯೇ ಕಂಡುಕೊಳ್ಳಬಹುದೆನ್ನುವ ದೊಡ್ಡರಂಗೇಗೌಡರನ್ನು ಮೊದಲು ಕಂಡಾಗ ನನಗೆ ಅವರು ದೈಹಿಕವಾಗಿ 'ದೊಡ್ಡ'ವರಾಗಿ ಕಂಡಿರಲಿಲ್ಲ. ಹೊರನೋಟದಲ್ಲಿ 'ರಂಗು' ಕಾಣುತ್ತಿರಲಿಲ್ಲ. 'ಗೌಡಿಕೆ'ಯ ಅಬ್ಬರವೂ ಇದ್ದಿರಲಿಲ್ಲ.'

ಓದು ಮುಗಿಸಿ, ಇಲಾಖೆ ಬಿಟ್ಟು ಉಪನ್ಯಾಸಕರಾಗಿ ಬೆಂಗಳೂರಿನ ಸಾಹಿತ್ಯ ಸಂಸ್ಕೃತಿ

ವಲಯುದಲ್ಲಿ ಅಪಾರ ಸೇವೆ ಸಲ್ಲಿಸಿದ ಎಲ್ಲರ ಮೆಚ್ಚುಗೆಯ 'ಅಜಾತ ಶತ್ರು' ಗೌಡರನ್ನು ಪತ್ರಿಕೆಗಳಲ್ಲಿ, ರೇಡಿಯೋ, ಟೀವಿ ಸಿನೇಮಾ ಪದ್ಯಗಳಲ್ಲಿ ಕಂಡು ಸಂತೋಷಪಟ್ಟಿದ್ದೆ.

ಈ ನಾಲ್ಕೈದು ವರ್ಷಗಳ ಹಿಂದೆ ನಾನು ಈಗ ವಿಶ್ರಾಂತ ಜೀವನ ನಡೆಸುತ್ತಿರುವ ಕುಂದಾಪುರದ ಕರಾವಳಿ ಉತ್ಸವದಲ್ಲಿ ಭೇಟ್ಟಿಯದಾಗ ಕೆಂಪುಬಿಳಿ ಕೂದಲು ಬಿಟ್ಟರೆ ಬೇರೆಲ್ಲ ಅದೇ ಆಗಿರುವ ಇನ್ನೂ ಮಾಗಿದ ಗೌಡರ ಬಳಿ ಮೈಸೂರಿನ ಪ್ರಸ್ತಾಪವೆತ್ತಿದಾಗ ಮತ್ತೆ ಅದೇ ಆ ಎಳೇ ಒಡನಾಟದ ಸವಿನೆನಪುಗಳ ಮರು ಅವತರಣಿಕೆ.

ಮೂವತ್ತು ವರ್ಷಗಳ ದೀರ್ಘ ಅವಧಿಯಲ್ಲಿ ಒಮ್ಮೆಯೂ ಭೆಟ್ಟಿಯಾಗದ, ಪತ್ರವ್ಯವಹಾರ ಮಾಡದ ನಮ್ಮ ನಿಷ್ಕಲ್ಮಶ ಸ್ನೇಹದ ಸವಿ ಗೌಡರಲ್ಲೂ ಹಾಗೆಯೇ ಹಚ್ಚ ಹಸಿರಾಗಿತ್ತು. ವಿದ್ಯೆ, ಹುದ್ದೆ ಪ್ರಶಸ್ತಿಗಳು ತಲೆ ತಿರುಗಿಸುತ್ತವೆ. ನೆನಪುಗಳು ಮಾಸುವಂತೆ ಮಾಡುತ್ತವೆ. ರಾಜಧಾನಿ ವಾಸ ಎಲ್ಲವನ್ನೂ ಎಲ್ಲರನ್ನೂ 'ಅಧೀನ' ನೋಟದಿಂದ ನೋಡುವಂತೆ ಮಾಡುತ್ತದೆ. ಮಾಯಾನಗರಿ ಚಿತ್ರರಂಗದ ಥಳುಕಿನಿಂದ ಪಾರಾಗಿ ಸ್ವಂತ ವ್ಯಕ್ತಿತ್ವ ಉಳಿಸಿಕೊಳ್ಳುವುದು ಬಹಳ ಕಷ್ಟ

ದೊಡ್ಡರಂಗೇಗೌಡರು – ಈ ಎಲ್ಲದರ ಕೋಟಲೆಗಳಿಂದ ಹೊರತಾಗಿ ಗ್ರಾಮಾಂತರ ಪ್ರದೇಶದ ನೈಜ ಮನಸ್ಸು, ತಿಳಿನಗೆ, ಸ್ನೇಹ, ಬಾಂಧವ್ಯಗಳ ಕೊಡು–ಕೊಳ್ಳುವ ವ್ಯಕ್ತಿಯಾಗಿಯೇ ಉಳಿದಿದ್ದರು. ನಮ್ಮಲ್ಲಿ ಬಹಳಷ್ಟು ಜನ ಚಿಂತಕರು, ಮೇಧಾವಿಗಳು ಯೋಚನಾ ಲಹರಿಯಲ್ಲಿ ಭಾವನಾತ್ಮಕತೆಯನ್ನು ಕಳೆದುಕೊಂಡು ಸ್ವಾರ್ಥ, ಕ್ರೌರ್ಯಕ್ಕೆ ಬಲಿಯಾಗುತ್ತಾರೆ. ಅದನ್ನು ಮರೆಸಲು ಮುಖವಾಡ ಧರಿಸಿ ನಾಟಕವಾಡುತ್ತಾರೆ. ಗೌಡರ ವಿಶಾಲ ಹೃದಯವಂತಿಕೆ ಸಧೃಢವಾಗಿದ್ದು ತಲೆಭಾರ ಕಾಣಲಿಲ್ಲ.

ಕರಾವಳಿ ಕರ್ನಾಟಕದ ಬಹು ಮಂದಿ ಬೆಂಗಳೂರಿಗರಿಗೆ ದೊಡ್ಡರಂಗೇಗೌಡರ ಬಗ್ಗೆ ಅಪಾರ ಗೌರವ. ಇಲ್ಲಿನ ಸಾಹಿತ್ಯ ಪ್ರಿಯರಿಗೂ ಹಾಗೇ. ಅವರ ಮಾತು ಕೇಳಿದಷ್ಟೂ ಸಾಲದು. ಅವರೊಡನೆ ಕಲೆತಷ್ಟೂ ಸಾಲದು.

ಕರಾವಳಿ ಉತ್ಸವದ ಸಮಾರೋಪದ ದಿನ ಸಾಧಕರಿಗೆ ಸನ್ಮಾನಗೈಯಲು ಡಾ। ದೊಡ್ಡರಂಗೇಗೌಡ ಬಂದಿದ್ದರು. ಅವರಿಂದ ಸನ್ಮಾನಗೊಳ್ಳುವಾಗ ಹಿಂದಿನ ಸ್ನೇಹ ಸಂಬಂಧಗಳಿಂದ ಆ ಸನ್ಮಾನದ ಆತ್ಮೀಯತೆ ಬಹುವಾಗಿತ್ತು.

ನನ್ನ ಓರಗೆಯ ಡಾ। ದೊಡ್ಡರಂಗೇಗೌಡರ ಅಭಿನಂದನಾ ಗ್ರಂಥ ಚೆನ್ನಾಗಿ ಬರಲಿ. ನಾಡು ನುಡಿಗೆ ಬಹುಕಾಲ ಸೇವೆ ಸಲ್ಲಿಸುವಂತೆ ಆಯುಷ್ಯ, ಆರೋಗ್ಯ ಸಕಲ ಸಂಪತ್ತುಗಳು ಗೌಡರಿಗೆ ಒದಗಿ ಬರಲಿ ಎಂದು ಹಾರೈಸುತ್ತೇನೆ.

❑



# ಸಾಮಾಜಿಕ ಕಳಕಳಿಯ ಕವಿ

● ಟಿ.ಎ. ನಾರಾಯಣಗೌಡ

ಬಹುಮುಖ ಪ್ರತಿಭೆಯ ಸೇವಾ ಸನ್ಮಾರ್ಗಿ, ಸುಸಂಸ್ಕೃತ, ಸಮಾಜಮುಖಿ ಕವಿ ಪ್ರೊ॥ ದೊಡ್ಡರಂಗೇಗೌಡರು. ಪ್ರಕೃತಿ ಆರಾಧಕ ಕವಿ ದೊಡ್ಡರಂಗೇಗೌಡರ ಹೆಸರನ್ನು ಕೇಳಿದ ಮಾತ್ರದಿಂದಲೇ ಸಜ್ಜನಿಕೆಯ ಮೂರ್ತಿರೂಪ ಎದುರು ಬಂದು ನಿಲ್ಲುತ್ತದೆ. ಇವರೊಂದಿಗಿರುವ ಸಮಾಜ ಮುಖಿಯ ವಿಶೇಷಣದಲ್ಲಿ ಗೌಡರು ಸಮಾಜದ ಅಂಕುಡೊಂಕುಗಳನ್ನು ತಿದ್ದುವಲ್ಲಿ ತಾವು ಮಾಡಿರುವ ಪ್ರಯತ್ನವನ್ನು ನಾವು ಕಾಣಬಹುದಾಗಿದೆ. ಕನ್ನಡ ನಾಡು ನುಡಿಯ ಬಗ್ಗೆ ಅವರಿಗಿರುವ ಅದಮ್ಯ ಚಿಂತನೆ ಉತ್ಸಾಹ, ಯುವಕರಿಗೆ ಸ್ಫೂರ್ತಿಯ ಚಿಲುಮೆಯಾಗಿದೆ.

ಕರ್ನಾಟಕ ರಕ್ಷಣಾ ವೇದಿಕೆಯ ಆರಂಭದ ದಿನಗಳಿಂದ ಇಂದಿನವರೆವಿಗೂ ಅವರು ನೀಡುತ್ತಿರುವ ಮಾರ್ಗದರ್ಶನ ಕರ್ನಾಟಕ ರಕ್ಷಣಾ ವೇದಿಕೆ ರಾಜ್ಯವ್ಯಾಪ್ತಿ ಬೆಳೆಯಲು ಸಹಕಾರಿಯಾಗಿದೆ ಎಂಬುದು ಅತಿಶಯೋಕ್ತಿಯಲ್ಲ. ಕರ್ನಾಟಕ ರಕ್ಷಣಾ ವೇದಿಕೆಯ ಹೋರಾಟಗಳು, ನಾಡಪರ ಚಿಂತನೆಯ ಬಗ್ಗೆ ಅವರು ಸೂಚಿಸಿದ ಮಾರ್ಗದರ್ಶನ ಅನುಕರಣೀಯ, ಅಲ್ಲದೇ ವೇದಿಕೆಯು ನಿರ್ಮಿಸಿದ ಕನ್ನಡ ಪರ ಚಿಂತನೆಯ ಕ್ರಾಂತಿಗೀತೆ ಧ್ವನಿ ಸುರುಳಿಗೆ ಸುಲಲಿತ ಸಾಹಿತ್ಯ ಒದಗಿಸಿ ಕನ್ನಡಿಗರ ಹೃನ್ಮನದಲ್ಲಿ ಕನ್ನಡದ ಜೀವ ಜ್ಯೋತಿಯನ್ನು ಬೆಳಗಿಸಿದ ಕೀರ್ತಿ ಗೌಡರಿಗೆ ಸಲ್ಲುತ್ತದೆ. ನಮ್ಮ ವೇದಿಕೆಯ ಎಲ್ಲಾ ಶಾಖಾ ಪ್ರಾರಂಭೋತ್ಸವ ಮತ್ತು ಕನ್ನಡಿಗರ ಜಾಗೃತಿ ಸಮಾವೇಶದ ಸಮಾರಂಭಗಳಲ್ಲಿ ಗೌಡರು ಉಪಸ್ಥಿತರಿದ್ದು ನಮ್ಮ ವೇದಿಕೆಗೆ ಕಳಸ ಪ್ರಾಯವಾಗಿ ಸಂದರ್ಭೋಚಿತವಾಗಿ ಮಾತನಾಡಿದ ವಿಚಾರ ಲಹರಿ ನಮ್ಮನ್ನು ನಾಡು ಕಟ್ಟುವ ಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಪ್ರೇರಕವಾಗಿದೆ.

ದೊಡ್ಡರಂಗೇಗೌಡರು ಒಬ್ಬ ವ್ಯಕ್ತಿಯಲ್ಲ, ಅವರೊಂದು ನಾಡು ಕಟ್ಟುವ ಶಕ್ತಿ. ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಸಾಮಾಜಿಕ ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ

ತಮ್ಮನ್ನು ಅರ್ಪಿಸಿಕೊಂಡಿರುವ ಅವರೊಂದು ದಿವ್ಯ ಚೇತನ. ಅವರಿಗೆ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಸಂದಿರುವ ಗೌರವ ಸನ್ಮಾನಗಳು ಅಪಾರ, ಅಪರಿಮಿತ.

ಮನಸ್ಸಿನಲ್ಲಿ ಉದಾತ್ತ ಮೌಲ್ಯಗಳನ್ನು ತುಂಬಿಕೊಂಡಿರುವ ದೊಡ್ಡರಂಗೇಗೌಡರು ಪ್ರಸ್ತುತ ಸಮಾಜದಲ್ಲಿ ಕಂಡು ಬರುವ ಅನೀತಿ ಅತ್ಯಾಚಾರಗಳನ್ನು ನೋಡಿ ಕೇಳಿ ಸಿಡಿದೇಳುವುದು ಸಹಜ. ಇಂತಹ ಅಧಃಪತನವನ್ನು ತಮ್ಮ ಹರಿತವಾದ ಲೇಖನಿ ಮೂಲಕ ಸಮಾಜದ ಮುಂದಿಟ್ಟು ಚಿಕಿತ್ಸಕ ಬುದ್ಧಿಯಿಂದ ಪರಿಶೀಲಿಸುವ ಅವರ ಮನಸ್ಸು ನಿತ್ಯ ಚೇತನ.

ಒಬ್ಬ ಉತ್ತಮ ಪ್ರಾಧ್ಯಾಪಕ, ಖ್ಯಾತ ಕವಿ, ಸಾಹಿತಿ, ಜಾನಪದ ವಿದ್ವಾಂಸ, ಚಲನಚಿತ್ರ ಗೀತರಚನಕಾರರಾಗಿ ಮಾನವೀಯ ಮೌಲ್ಯಗಳನ್ನು ತುಂಬಿಕೊಂಡಿರುವ ದೊಡ್ಡರಂಗೇಗೌಡರು ನಾಡಿನ ಕಣ್ಮಣಿ. ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕಿನ ಕುರುಬರಹಳ್ಳಿಯಲ್ಲಿ ಜನಿಸಿದ ಗೌಡರು ಪ್ರಸ್ತುತ ಹಳ್ಳಿಯ ಸ್ಥಿತಿಯನ್ನು ಕಂಡು ಮರುಗುತ್ತಾರೆ. ಜಾತಿ ಜಾತಿ ಎಂದು ಊರುಗಳ ಶಾಂತಿ ಭಂಗವಾಗಿ ದೇಶಕ್ಕೂ ಅದೇ ಗತಿ ಬಂದಿದೆ ಎಂದು ಹಲುಬುತ್ತಿರುವ ಗೌಡರು ಸಾಮಾಜಿಕ ಕಳಕಳಿಗೆ ಸ್ಪಂದಿಸುವ ಮತ್ತಷ್ಟು ಹೃದಯಗಳು ಹೆಚ್ಚಬೇಕು ಎಂದು ಆಶಿಸುತ್ತಾರೆ.

ಕವಿ ಹೃದಯದ ಸಾಮಾಜಿಕ ಕಳಕಳಿಯ ಗೌಡರು ಹೇಳುತ್ತಾರೆ, ನಮ್ಮ ಸಮಸ್ಯೆಗಳ ಪರಿಹಾರಕ್ಕೆ ಅವತಾರ ಪುರುಷನ ನಿರೀಕ್ಷಣೆಯಲ್ಲಿ ಕೂರದೇ ನಮ್ಮಲ್ಲಿ ಅಂತಃ ಶಕ್ತಿಯಿಂದ ಶ್ರೀ ಕೃಷ್ಣ ಶಕ್ತಿಯನ್ನು ಪಡೆಯಬೇಕು. ನಿಷ್ಠೆಯ ಪಾಂಚಜನ್ಯವನ್ನು ಮೊಳಗಿಸಬೇಕು ಎನ್ನುವ ಮಾತಿನಲ್ಲಿ ಗೌಡರ ಆಶಾವಾದದ ಹೋರಾಟದ ಮನೋಭಾವವನ್ನು ಕಾಣಬಹುದು.

17/09

ಅಮೇರಿಕನ್ನರ ಆತಿಥ್ಯ ಮೈತ್ರಿ ಆಗ
ಒಡಲಿಗೆ ವಿಶ್ವಾಸದ ಓಗರ
ವಿಶ್ವಾಸವಿದೆ ಎಲ್ಲ ಹತ್ತಿರ.

ಚೇತನಾ ಮೂರ್ತಿ ದೊಡ್ಡರಂಗೇಗೌಡರು ಕರ್ನಾಟಕ ರಕ್ಷಣಾ ವೇದಿಕೆಯ ಸಂಸ್ಥಾಪನೆಯ ದಿನಗಳಿಂದ ಈ ದಿನದವರೆವಿಗೂ ವೇದಿಕೆಯ ಅವಿಭಾಜ್ಯ ಅಂಗವಾಗಿ ಶಿಸ್ತು, ನಿಷ್ಠೆ, ಸರಳ ಸಜ್ಜನಿಕೆ ಮಾರ್ಗದರ್ಶನ ನೀಡುತ್ತಿರುವುದು ಕನ್ನಡ ಕುವರರಿಗೆ ಅನುಕರಣೀಯ. ಕನ್ನಡ ನಾಡು, ನುಡಿ, ನೆಲ, ಜಲ, ಸಂಸ್ಕೃತಿ ಸಂವರ್ಧನೆಯ ಹರಿಕಾರರಾಗಿ ಸಾರ್ಥಕ ಸೇವೆ ಸಲ್ಲಿಸುತ್ತಿರುವ ದೊಡ್ಡರಂಗೇಗೌಡರು ನೂರ್ಕಾಲ ನಮ್ಮೊಂದಿಗಿರಲಿ ಎಂಬುದು ನಮ್ಮೆಲ್ಲರ ಆಶಯ.





# ರಾಗಮುಖಿ

**• ಹೂವಿನಹಳ್ಳಿ ನರಸಿಂಹಮೂರ್ತಿ**

ಭಾವಗೀತ ಪ್ರಕಾರವೊಂದನ್ನು ಸಾಹಿತ್ಯ ಬದುಕಿನ ಮಾಧ್ಯಮವಾಗಿ ಬಳಸಿಕೊಂಡ ದೊಡ್ಡರಂಗೇಗೌಡರವರು ಬದುಕಿನ ಹಲವು ರಂಗಗಳನ್ನ ಕವಿತೆಯಲ್ಲಿ ತೆರೆದಿಟ್ಟಿದ್ದಾರೆ, ಅಂತರಂಗದ ಒತ್ತಡದಿಂದ ಹೊರಹಾಕಿದ ಭಾವಗಳೆ ಕವಿತೆಗಳಾಗಿ ಹುಟ್ಟಿಕೊಳ್ಳುತ್ತವೆ.

**'ರಾಗಮುಖಿ'** ಸಂಕಲನದ ಬಹುತೇಕ ಕವಿತೆಗಳು ಒಲುಮೆಯತ್ತ ಮುಖ ಮಾಡಿಕೊಂಡಿವೆಯಾದರೂ ಕವಿ ತಾನು ವಾಸಿಸುತ್ತಿದ್ದ ಸುತ್ತಮುತ್ತಲ ಪರಿಸರದ ಜೀವನದ ವಿವಿಧ ಮುಖಗಳನ್ನ ಕಾವ್ಯ ಹೆಣೆದುಕೊಂಡಿದೆ. ಕವಿಯೊಬ್ಬನು ಹದಗೊಂಡ ಬದುಕಿನ ಜೀವನದುದ್ದಕ್ಕು ಪಟ್ಟ ಪಾಡು, ನೋವು, ದುಃಖ, ಸುಖ, ಅಪಮಾನ ಸಮಾಜಮುಖಿಯಾದ ಭಾವಗಳೆಲ್ಲವು ಕವಿಯಾದವನ ಭಾವನೆಯ ಕುಲುಮೆಯಲ್ಲಿ ಬೆಂದು ಹದಗೊಂಡಾಗ ಅವುಗಳಿಗೊಂದು ಆಕಾರ ಸಿಗುತ್ತದೆ. ಕವಿಯಾದವನ ಮನಸ್ಸು ಕೂಡ ಕಮ್ಮಾರನ ಕುಲುಮೆಯಿದ್ದಂತೆ.

**'ರಾಗಮುಖಿ'** ಕವನ ಸಂಕಲನದಲ್ಲಿಯೂ ಕವಿಯ ಭಾವಕನ್ನಡಿ ಇಂಥ ಹಲವು ಆಕಾರಗಳು ರೂಪ ಪಡೆದುಕೊಂಡು ಕವಿತೆಗಳಾಗಿವೆ. ಪ್ರೀತಿಯ ಜೋಳಿಗೆಗೆ ಹೆಗಲುಕೊಟ್ಟು ದಾರಿಯುದ್ದಕ್ಕೂ 'ರಾಗಮುಖಿ'ಯಾಗಿ ಬಂದವಳೆ, ಮೌನವಾಗಿ ಬಿರುಕು ಬಿಟ್ಟ ನೆಲದಂತಾಗಿ ಹಿಡಿ ಮಣ್ಣಾಗಿ ಸಮೃದ್ಧಿಯ ಸಂಕೇತವಾಗಿ ಕಾಣಿಸಿಕೊಂಡಿದ್ದಾಳೆ ಹೆಣ್ಣು. ಒಲುಮೆಯ ಸುಗ್ಗಿ ಹಿಗ್ಗಿ ಆತ್ಮ ಸಾಕ್ಷಾತ್ಕಾರದ ಆಡಂಬರವಲ್ಲದ ನೈಜ ಮನಸ್ಸು, ಮನಸ್ಸು ಮನಸ್ಸು ಕಟ್ಟಿಕೊಳ್ಳುವ ಗೂಡಾಗಿದೆಯೇ ಹೊರತು ಆಡಂಬರವಾದ ಅರಮನೆಯ ಕನಸುಗಳ ಕೋಟೆಯಲ್ಲಿ ಬಂದಿಯಾಗಿಲ್ಲ. ಆತ್ಮದ ಅರಗಿಣಿಯೊಂದು ಎದೆಯಲ್ಲಿ ಕೂಗಿ ಕರೆಯುವ, ಆ ಕೂಗಿಗೆ ನಾಯಕನ ಪ್ರೀತಿ ಹೆಪ್ಪಿಟ್ಟ ಹಾಲಾಗಿದೆ.

‘ಜಾಣಕಿವುಡ’ ಕವಿತೆಯಲ್ಲಿ ರೈತ ಪರವಾದ ಧ್ವನಿಯೆತ್ತಿ ರೈತರಿಗಾಗುವ ಅನ್ಯಾಯದ ವಿರುದ್ಧ ನೋವಿನ ನೆಲೆಯಲ್ಲಿ ನಿಂತು ಮಾತಾಡಿದ್ದಾರೆ. ಅಧಿಕಾರದ ಕುರ್ಚಿಯೊಂದು ಬೆವರು ಮಣ್ಣು ಮೆತ್ತಿಕೊಂಡ ಭೂಮಿತಾಯಿಯ ಮಕ್ಕಳ ಮೇಲೆ ಹೇಗೆ ದರ್ಪಗಾರಿಕೆ ನಡೆಸುತ್ತದೆ ಎಂಬುದರ ಮನವರಿಕೆ ಮಾಡಿಕೊಟ್ಟಿದ್ದಾರೆ.

ಕನ್ನಡ ಭಾಷೆ, ಸಾಹಿತ್ಯದ ಬಗ್ಗೆ ತುಡಿತವಿದೆ ‘ಕನ್ನಡದ ಮುನ್ನಡೆ’ ಮಧು ಮಧುರ ಕನ್ನಡ ಕವಿತೆಗಳಲ್ಲಿ, ಸರಸ್ವತಿಯ ಚರಿತೆ, ನೆಲ ಸಂಸ್ಕೃತಿಯ ಮಣ್ಣು ಮಕ್ಕಳ ತಾಯಿ ಭಾರತಿಯ ಕನ್ನಡ ನಾಡು ನುಡಿಯು ಜೀವ ಪಡೆದುಕೊಂಡಿವೆ. ದೊಡ್ಡರಂಗೇಗೌಡರವರ ಕನ್ನಡ ಕವಿತೆಗಳು ‘ನಿರೀಕ್ಷೆ’ಯ ಕವಿತೆಯಲಿ ಕವಿಯ ಮನಸೊಂದು ಬದುಕಿನ ಸುಖ ದುಃಖ ತಾಪದುರಿ, ಮಿಲನ, ಸರಸ, ವಿರಸ, ನೋವು ನಲಿವಿನ ವಿಚಾರಗಳನ್ನು, ಕರಿಯ ಮೋಡ, ಅರುಣ ಕಿರಣ, ಕಪಿಯ ಒಗರು, ಸಿಹಿಯ ಕ್ಷಣ, ಬೇವು, ಮಾವು, ಬಿಸಿಲು, ಮಳೆ ಹೀಗೆ ಪ್ರಕೃತಿಯ ಪರಿಕರಗಳೊಂದಿಗೆ ಸಮೀಕರಿಸಿದ್ದಾರೆ.

**‘ಕೆಂಗಣ್ಣ ಜ್ವಾಲೆಗಳು’** ಬೇಸಿಗೆಯ ಬಿಸಿಲ ತಾಪದ ನೆನಪು ಮಾಡಿಕೊಟ್ಟಿವೆ. ಪ್ರಕೃತಿಯ ಸೊಬಗೆಲ್ಲವು ಬಾಡಿ, ಸೊರಗಿ ಬೆಂಡಾಗಿ ಬ್ಯಾಸಿಗೆಯ ದಗೆಯದೊಂದು ಪದ ಚಿತ್ರಣವಿಲ್ಲಿದೆ.

ಕ್ಷಿತಿಜ ತುಂಬ ರಣಗುಟ್ಟುವ
ಕೆಂಪು ಕಿರಣ ಮಂಡಲ
ಮನುಜರೆಲ್ಲ ಕಂಗೆಡುವ ಲೀಲೆ
ಹರಡಿತಯ್ಯ ತಾಪ ಜಾಲ
ಬಾಡಿದುವೇಕೆ ಬಾಳ ಕಂಡ
ಮಾಂದಳಿರಿನ ಕೋಮಲ ಎಲೆ?
ಒಣಗಿದುವೇಕೆ ಬಿರಿದ ಮೊಗ್ಗು
ಉರಿದವಯ್ಯ ಕೆಂಗಣ್ಣು ಜ್ವಾಲೆ!

ನೋವಿನುಂಡೆಗಳನ್ನು ನುಂಗಿಕೊಂಡು ಪಯಣಿಸುತ್ತಿದ್ದ ಪಯಣಿಗನಿಗೆ ಪರಿಚಯವೊಂದು ಒಲುಮೆಯಾಗಿ ಬೆಳೆದು ಬ್ಯಾಸರದ ಬಾಳಿಗೆ ಆಸರೆಯಾಗಿ ಬದುಕಿನುದ್ದಕ್ಕು ಸೊಬಗ ನೀಡುವ ಹೊಂಬಾಳೆಯಾಗಿ ಬಂದವಳ ನೆನಪು ‘ಬೇವುಂಡ ಮೇಲೆ’ ಕವಿತೆಯಲ್ಲಿ ಕಾಣುತ್ತದೆ. ‘ಬಾಲ್ಯದ ನೆನಪು’ ಕವಿತೆಯು ಕವಿಯ ಹುಡುಗ ಮನಸ್ಸಿನ ತುಂಟಾಟ ಆ ತುಂಟಾಟದಲ್ಲಿ ಪಡುತ್ತಿದ್ದ ಆನಂದ, ಕುಣಿದಾಟ ತನ್ನವಾರಿಗೆಯರೊಂದಿಗೆ ಆಟವಾಡಿಕೊಂಡು ಅನುಭವಿಸುತ್ತಿದ್ದ ಸುಖ ಸಂತೋಷಗಳೆಲ್ಲವು ಕವಿ ಮನಸ್ಸಿಗೆ ನೋವುಂಟಾದಾಗ ನೆನಪಿಗೆ ಬರುತ್ತವೆ. ಬಾಲ್ಯದ ನೆನಪುಗಳೊಂದಿಗೆ ತನ್ನ ನೋವೆಲ್ಲವನ್ನು ಮರೆಯುವಂಥ ಭಾವ ಕವಿತೆಯಲ್ಲಿದೆ.

**'ಬರಬಾರದೇ ಮಳೆ'** ಕವಿತೆಯಲ್ಲಿ ಬರಗಾಲದ ಬೇಸಗೆಯೊಂದರ ಚಿತ್ರಣ ಕಂಡು ಬರುತ್ತದೆ. ಆ ಬೇಸಗೆ ಕಾಲದಲ್ಲಿ ಭೂಮಿಯೆಲ್ಲ ಸುಡುವ ಪಂಜಾಗಿದೆ, ಭೂಮಿಯೊಂದು ತಂಪು ಕಂಡು ನೆಮ್ಮದಿಯಿಂದ ಉಸಿರಾಡುವ ಪರಿಸರ ನಿರ್ಮಾಣವಾಗುತ್ತದೆಂಬ ಬಯಕೆ ಮಳೆಯನ್ನೇ ಆಧರಿಸಿ ಬದುಕುತ್ತಿರುವ ಜನಗಳ ಕೊರಗಾಗಿದೆ. ಬಯಲು ಸೀಮೆಯ ಜನರ ಬದುಕು ಮಳೆಗಾಲದಲ್ಲಾದರೂ ಹಸಿರ ಸುಗ್ಗಿಯ ಪದವಾಡಿಕೊಂಡು ಲಗ್ಗೆ ಹಾಕುವ ಸುಗ್ಗಿಯ ಕುಣಿತವಿಲ್ಲವೆಂಬ ಕೊರಗಿದೆ ಕವಿತೆಯಲ್ಲಿ. ದೊಡ್ಡರಂಗೇಗೌಡರ ಕವಿತೆಗಳಲ್ಲಿ ಜನಪದ ಸೊಗಡಿನ ಭಾಷಾ ಬಳಕೆ ಕವಿತೆಗಳ ತುಂಬಾ ಹೊದಿಕೆಯೋಪಾದಿಯಲ್ಲಿ ಹಾಸಿಕೊಂಡಿದೆ. **'ಬಡತನದ ರಕ್ಷಕರು'** ಕವಿತೆಯಲ್ಲಿ ಭಿಕ್ಷಾಟನೆಯ ಭಿಕ್ಷುಕನ ದೀನ ಸ್ಥಿತಿಯನ್ನು ಚಿತ್ರಿಸಿದ್ದಾರೆ. ಭಿಕ್ಷಾಟನೆಯೆಂಬುದು ಒಂದು ಕಾಲಕ್ಕೆ ಅದು ಬುಡಕಟ್ಟು ಜನಾಂಗದವರು ಮಾಡುವ ಕಸುಬಾಗಿತ್ತು. ಇತ್ತೀಚೆಗೆ ಅದು ತನ್ನ ತನವನ್ನು ಕಳೆದುಕೊಂಡಿದೆ. ದುಡಿಯುವ ವಯಸ್ಸಿದ್ದರೂ ದುಡಿದು ತಿನ್ನದೆ ಭಿಕ್ಷಾಟನೆಯ ಸೋಗು ಹಾಕಿಕೊಂಡು ಮೈಗಳ್ಳರಾಗುತ್ತಿರುವ ಪರಿಸ್ಥಿತಿಯೊಂದು ಸೃಷ್ಟಿಯಾಗುತ್ತಿದೆ.

**'ತಾಯಿಸಿರಿ'** ಕವಿತೆಯಲ್ಲಿ ಕನ್ನಡ ಕಂಪು ಸಾಹಿತ್ಯ ರೂಪದಲ್ಲಿ ಜನಪದದಿಂದಿಡಿದು ದಲಿತ ಸಾಹಿತ್ಯದವರೆಗೆ ಬೆಳೆದ ಹಾದಿಯನ್ನು ಹೇಳಲಾಗಿದೆ. ಆದಿಕವಿಯ ಕೃತಿಯಲ್ಲಿ ಕನ್ನಡ ಪಸರಿಸಿ ಶರಣರಲ್ಲಿ ಭಕ್ತಿಯುತ್ತಸಾಗಿ ದಾಸ ಸಾಹಿತ್ಯದಲ್ಲಿ ಭಕ್ತಿ ಮತ್ತು ಮುಕ್ತಿ ನವೋದಯ ಸಾಹಿತ್ಯದಲ್ಲಿ ಆದರ್ಶವಾದದ ಬಗ್ಗೆ ಹೇಳುತ್ತಾ ದಲಿತರಲ್ಲಿ ಜಾಗೃತಿಯನ್ನು ಮೂಡಿಸಿದೆ, ಕವಿತೆಯಲ್ಲಿ ಕನ್ನಡ ಸಾಹಿತ್ಯ ಬೆಳೆದ ಪರಿಯ ಬಗೆಯನ್ನು ವಿವೇಚಿಸುತ್ತಾರೆ.

ಸೂರ್ಯೋದಯವಾದ ನಂತರ ನಡೆಯುವ ಮನುಷ್ಯ ಮತ್ತು ಸಸ್ಯ ವ್ಯಾಪಾರದ ಬದುಕಿನ ಚಿತ್ರಣ ನೀಡುತ್ತಾರೆ. **'ಮೈತ್ರಿ ಗೀತ'**ದಲ್ಲಿ ಮಾನವ ಧರ್ಮವೊಂದೆ. ಅದನ್ನರಿತು ಬದುಕ ಸಾಗಿಸಿದರೆ ಅದೆ ರಾಮರಾಜ್ಯ. ಇಲ್ಲಿ ಬೇರೊಂದು ಧರ್ಮ, ದೇವರಿಗೆ, ಎಡೆ ಮಾಡಿಕೊಟ್ಟು ರಾವಣರಾಗುವ ಜಾತಿ ಸಂಸ್ಕೃತಿಯೊಂದನ್ನು ನಿರಾಕರಿಸುತ್ತಾರೆ. ನಮ್ಮ ದೇಶದಲ್ಲಿ ಮೊದಲಿನಿಂದಲೂ ಭಕ್ತಿ, ಧರ್ಮ, ಜಾತಿ ಆಧಾರದ ಮೇಲೆ ಜನರ ಮನಸ್ಸನ್ನು ಕಲಕಿ ಅಶಾಂತಿಯ ಸ್ಥಿತಿಯತ್ತ ಕೊಂಡೊಯ್ಯುವ ಕೆಲಸ ಮುಂದುವರಿಯುತ್ತಲೆ ಇದೆ. ಅದಕ್ಕೆ ಅಂತ್ಯವಾಗಿ ಮನುಷ್ಯ ಧರ್ಮ ಮೆರೆಯಬೇಕೆಂಬುದು ಕವಿತೆಯ ನಿಲುವಾಗಿದೆ.

**'ಕೂಲಿಗಳ ಪಾಡು'** ಕವಿತೆಯು ಶ್ರಮಜೀವಿಗಳ ನೋವಿನ ಬದುಕಿನ ಯಾತನೆಯ ಸ್ಥಿತಿಯನ್ನು ತಣ್ಣನೆಯ ಧ್ವನಿಯಲ್ಲಿ ಚಿತ್ರಿಸಿದ್ದಾರೆ. ಕೂಲಿಯವರು ಪಡುವ ಪಾಡು ಅವರ ಅಳಲು ಗೊತ್ತು ಗುರಿಯಿಲ್ಲದ ಅಲೆಮಾರಿಯ ಜೀವನ ಚಿತ್ರಣ ಮಡುಗಟ್ಟಿನಿಂತಿದೆ. **ರಾಗಮುಖಿ** ಕವಿತೆಗಳಲ್ಲಿ ಒಲುಮೆಯ ಸರಸ, ವಿರಸದೊಂದಿಗೆ ಬೆಸೆದುಕೊಂಡು ಕುಟುಂಬದಲ್ಲಿ ನಡೆಯುವ

ಏರುಪೇರುಗಳನ್ನು ವಿವೇಚಿಸುತ್ತವೆ. ಬದುಕು-ಪ್ರೀತಿ, ಪ್ರೀತಿ-ಬದುಕು ಹೀಗೆ ಒಂದಕ್ಕೊಂದು ಹೊಂದಿಕೊಂಡು ಹೋದಾಗ ಮಾತ್ರ ಬದುಕಿನ ಬಂಡಿ ಸರಾಗವಾಗಿ ಸಾಗುತ್ತದೆ ಎಂಬಂಥ ಅಂಶಗಳನ್ನು ಮನವರಿಕೆ ಮಾಡಿಕೊಡುತ್ತದೆ.

ಗ್ರಾಮೀಣ ಗೀತೆಯಲ್ಲಿ ಗ್ರಾಮೀಣ ಪರಿಸರದ ಸುಗ್ಗಿಯ ಕಾಲವನ್ನು ಚಿತ್ರಿಸಿರುವ ಹಳ್ಳಿಯ ಪದಗಳ ಮೋಡಿತನದ ಚಮತ್ಕಾರವಡಗಿದೆ.

ಮೂಕ ಮಾತಾಡ್ತಾನೋ
ಬೆಡಗೇ ಹರಿದಾಡ್ತಾವೋ
ನೊಂದು ಬೆಂದ ಮನಕೆ ಹಳ್ಳಿಗಾಡು
ಹುರುಪು ತಂದೈತೋ!

ಮಳೆಗಾಲದ ಸುಗ್ಗಿಯಲ್ಲಿ ಪ್ರಕೃತಿಯೆಲ್ಲ ಅಚ್ಚ ಹಾವಸೆಯನ್ನುಟ್ಟು ಕಂಗೊಳಿಸುವ ಚಿತ್ರ ನೋಡುವ ಕಣ್ಣುಗಳಿಗೆ ಆನಂದವಾಗುತ್ತದೆ. ಮಾತು ಬಾರದಿರುವವನು ಸಹ ಮಾತನಾಡುತ್ತಾನೆ ಎನ್ನುವ ಮಾತಿನಲ್ಲಿ ಅವನಿಗಾಗುವ ಆನಂದ ಗರಿಗೆದರಿ ನಾನು ಸಹ ಈ ಪ್ರಕೃತಿಯೊಂದಿಗೆ ಮಾತನಾಡಬೇಕೆನ್ನುವ ಆಕಾಂಕ್ಷೆ ಅವನಲ್ಲಿ ತುಂಬಿ ತುಳುಕುತ್ತದೆ.

ಹಳ್ಳಿ ಪದ ಹರಿದಾವೋ
ಸೊಬಗ ಸಿರಿ ಸಾರಿಯಾವೋ
ಬದುಕು ಬವಣೆ ಮರೆಸೋ
ಹಳ್ಳಿಗಾಡು ಹಿಗ್ಗು ತಂದೈತೋ!

ಹಳ್ಳಿಯ ಪರಿಸರದ ಚಿತ್ರಣ ಕವಿತೆಯಲ್ಲಿ ಬಂದಿದೆ. ಮಳೆಗಾಲದ ಸುಗ್ಗಿಯಲ್ಲಿ ಅವರಿಗಾಗುವ ಸಂತೋಷ ಹಳ್ಳಿಯ ಪದದಲ್ಲಿ ಕಟ್ಟಿಕೊಂಡಿದೆ. ಜೀವನದ ಕಷ್ಟ ದುಃಖ ದುಮ್ಮಾನಗಳನ್ನು ಮರೆಸುವ ಹಳ್ಳಿಯ ಪದಗಳ ಸೊಬಗು ಸಿರಿಯ ರೂಪದಲ್ಲಿ ಹರಡಿಕೊಂಡಿವೆ.

**'ಮತ್ತೆ ಯುಗಾದಿ ಬಂದಿದೆ'** ಕವಿತೆಯು ಹೊಸ ವರುಷದಲ್ಲಿ ಪ್ರಕೃತಿಯ ಸೊಬಗು ಅರಳಿ ಹೊಸ ಬಾಳಿನತ್ತ ಸಾಗಿದೆ. ಆದರೆ ಮನುಷ್ಯ ಬದುಕು ಮಾತ್ರ ಎಷ್ಟೇ ಯುಗಾದಿಗಳು ಬಂದು ಹೋದರೂ ಅವನ ಬಾಳಿನಲ್ಲಿ ಹೊಸತನಗಳು ಬರಲಿಲ್ಲ. ಹುಳುಕಿಡಿದ ಸಮಾಜದ ವಿಪರ್ಯಾಸಗಳು ಕಿಲುಬುಗಟ್ಟಿವೆ.

**'ನನ್ನ ಹೃದಯ ನಿನ್ನ ಬಿಡದು'** ಕವಿತೆಯಲ್ಲಿ ಒಲುಮೆಯು ಹೃದಯಾಂತರಾಳದಿಂದ ಬೇರುಬಿಟ್ಟುಕೊಂಡಿದೆ. ಅವರಿಬ್ಬರ ಪ್ರೀತಿಯು ಕೆಸರಷ್ಟು ಅಂಟು ನಂಟಿನ ಸಂಬಂಧ

ಪಡೆದುಕೊಂಡಿದೆ. ನೈಜ ಪ್ರೀತಿಯೊಂದು ಕವಿತೆಯ ಭಾಗವಾಗಿದೆ. ಮನಸ್ಸುಗಳು ಪ್ರೀತಿಯ ಹೃದಯಾಳದಲ್ಲಿ ಬೇರು ಬಿಟ್ಟುಕೊಂಡಿವೆ. ಪ್ರೇಮ ಬಾಳ ಬೆಸುಗೆಯನ್ನು ಯಾರು ಬಿಡಿಸಲಾರದಷ್ಟು ಅಂತರ್ ಸಂಬಂಧವನ್ನು ಪಡೆದುಕೊಂಡಿದೆ. ಒಲವೆಂಬುದು ಮನಸ್ಸಿನ ಕ್ರಿಯೆಯೇ ಹೊರತು ದೇಹದ ಕ್ರಿಯೆಯಲ್ಲ ಎಂಬುದನ್ನು ತಿಳಿಯ ಪಡಿಸುತ್ತದೆ.

ಕಮಲ ಕೂಡ ಜಲವಬಿಟ್ಟು ಬದುಕಲುಬಹುದು
ನಿನ್ನ ನೆನಪು ನನ್ನ ತೊರೆದು ಇರಲು ಆಗದು;

ಎಂಬ ಸಾಲುಗಳು ಪ್ರೀತಿಯ ಹದವನ್ನು ಅರ್ಥಮಾಡಿಕೊಡುತ್ತವೆ. ನಲ್ಲ ನಲ್ಲೆಯರ ಪ್ರೀತಿ ಪ್ರಸಂಗದ ಅನಿಸಿಕೆಗಳ ಮಹಾಪೂರವೇ ಇಲ್ಲಿದೆ.

**'ನಿರಂತರ'** ಕವಿತೆಯು ದುಡಿಯುವ ಜನಾಂಗದ ನೋವಿನ ಅಳಲು ಅಳಲಿನೊಂದಿಗೆ ಅಂಟಿಕೊಂಡಿರುವ ಬಡತನ ಬಡವರಿಗೆ ಆಶ್ರಯ ನೀಡದ ಸರ್ಕಾರಗಳು ಬಂದು ಹೋದವು. ಇದೆಲ್ಲವನ್ನು ನೋಡುತ್ತಿರುವ ಗ್ರಾಮದೇವತೆಯಾದ ಮಾರಮ್ಮ ಮೌನದಿಂದ ನೋಡುತ್ತಿರುವ ದೃಶ್ಯ ಬಿದ್ದು ಹಾಳಾಗಿರುವ ಮಣ್ಣು ಹೆಂಟೆಯ ಮನೆಗಳು ಮತ್ತೆ ಹೊಸ ಮನೆಯ ರೂಪನ್ನು ಕಾಣದೆ ತನ್ನ ಸ್ಥಿತಿಯನ್ನು ಹೇಳುವ ಸಾಕ್ಷಿಯ ಸರಮಾಲೆಯಾಗಿ ಬಡವನ ಗೋಳು ಬತ್ತಲಾರದ ಗಂಗೆಯಂತೆ ಕಣ್ಣೀರಲ್ಲಿ ಕೈತೊಳೆಯುತ್ತಿದ್ದರೂ ಕೇಳುವವರಿಲ್ಲವಲ್ಲವೆಂಬ ಅಸಹಾಯಕ ಸ್ಥಿತಿಯನ್ನು ಕವಿತೆ ಧ್ವನಿಸುತ್ತದೆ.

**''ಜಾಗೃತಿ ಗೀತೆ''**ಯಲ್ಲಿ ಪರಕೀಯ ಸಂಸ್ಕೃತಿಯು ಸಂಪ್ರದಾಯಗಳು ಸ್ವದೇಶಿ ಸಂಸ್ಕೃತಿಯೊಂದಿಗೆ ಬೆರೆತುಕೊಂಡು ಭಾರತೀಯ ಸಂಸ್ಕೃತಿ, ಸಂಪ್ರದಾಯ ರೀತಿ ನೀತಿಗಳನ್ನು ಮರೆಯುತ್ತಿದ್ದೇವೆ. ಪರಕೀಯ ಸಂಪ್ರದಾಯದ ಗುಲಾಮರಾಗುತ್ತಿದ್ದೇವೆ ಎಂಬ ಎಚ್ಚರಿಕೆಯ ಕರೆ ನೀಡಿದ್ದಾರೆ.

ಸಾಕು ಸಾಕಪ್ಪೋ ವಿದೇಶಿ ಫ್ಯಾಷನ್ನು!
ಮತ್ತೆ ನಾವು ಗುಲಾಮರಾಗ್ತೀವೇನು?
ಬಹುರಾಷ್ಟ್ರೀಯ ಸಂಸ್ಥೆಗಳು ಬಂದು
ಸಾವಿರ ಸಾವಿರ ಸರಕನ್ನು ತಂದು....
ಅರ್ಥವ್ಯವಸ್ಥೆ ಹಿಂದು ಮುಂದು!
ಜೀತಕ್ಕಿಳಿದರೆ ನಮ್ಮವರು ಇಂದು?

ಭಾರತದಲ್ಲಿನ ಆರ್ಥಿಕ ಪರಿಸ್ಥಿತಿಯು ಬಹುರಾಷ್ಟ್ರೀಯ ಕಂಪನಿಗಳ ಸಂಸ್ಥೆಯ ಪ್ರಭಾವಕ್ಕೊಳಗಾಗಿ ಸ್ವದೇಶಿಯ ಸರಕುಗಳಿಗೆ ಮಾರುಕಟ್ಟೆಯಲ್ಲಿ ಬೆಲೆ ಸಿಗದೆ ಜೀತಕ್ಕಿಳಿಯುವ

ತೋಚನೀಯ ಬದುಕು ನಮ್ಮವರದಾಗಿದೆ. ಜಾಗತೀಕರಣದ ವ್ಯಾಪಾರ ಮಾರುಕಟ್ಟೆಯಲ್ಲಿ ಸ್ವದೇಶಿಯ ಸರಕುಗಳಿಗೆ ನ್ಯಾಯಯುತವಾದ ಬೆಲೆ ಸಿಗಬೇಕೆಂಬ ಬಯಕೆಯಾಗಿದೆ. ನಾವು ಜಾಗೃತರಾಗಿ ಬಹುರಾಷ್ಟ್ರೀಯ ಕಂಪನಿಯ ಸಂಸ್ಥೆಗಳ ವಿರೋಧ ಹಾಗು ಪರಕೀಯರ ವಸ್ತುಗಳ ಬಹಿಷ್ಕಾರ ಹಾಕುವುದೇ ಕವಿಪರ ನಿಲುವಾಗಿದೆ.





# ‘ಭಾವ’ ಮತ್ತು ‘ಗೀತ’

• ಡಾ|| ಬೈರಮಂಗಲ ರಾಮೇಗೌಡ

ಕನ್ನಡದ ಮಹತ್ವದ ಕವಿಗಳಲ್ಲಿ ಒಬ್ಬರಾದ ಡಾ|| ಜಿ.ಎಸ್. ಶಿವರುದ್ರಪ್ಪನವರು ಕವನ ಸಂಕಲನವೊಂದಕ್ಕೆ ಮುನ್ನುಡಿ ಬರೆಯುತ್ತ ಭಾಮಹ ಎಂಬ 6ನೇ ಶತಮಾನದ ಕಾವ್ಯ ಮೀಮಾಂಸಕನ ಮಾತುಗಳನ್ನು ಉಲ್ಲೇಖಿಸುತ್ತಾರೆ. ಭಾಮಹ ಹೇಳುವಂತೆ ಕವಿತೆಯನ್ನು ಬರೆಯದಿದ್ದರೆ ಯಾವ ಪಾಪವೂ ಬರುವುದಿಲ್ಲ; ಕವಿತೆಯನ್ನು ಬರೆಯದಿದ್ದರೆ ಯಾವ ರೋಗವು ಪ್ರಾಪ್ತವಾಗುವುದಿಲ್ಲ; ಕವಿತೆಯನ್ನು ಬರೆಯದಿದ್ದರೆ ಅದೊಂದು ಮಹಾಪರಾಧವೆಂದು ಯಾರೂ ಶಿಕ್ಷೆ ವಿಧಿಸುವುದಿಲ್ಲ,'' ಹೀಗಿದ್ದೂ ಕವಿತೆಯ ಹಾದಿಯಲ್ಲಿ ಯಾಕಿಷ್ಟು ನೂಕುನುಗ್ಗಲು! ಅದಕ್ಕೆ ಕವಿತೆಯ ಬಗೆಗಿರುವ ಮೋಹ, ಆಕರ್ಷಣೆಗಳೇ ಕಾರಣ. ಕವಿತೆಯ ಸೆಳೆತದಿಂದ ತಪ್ಪಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಅಲ್ಪಸ್ವಲ್ಪ ಸಾಹಿತ್ಯದ ರುಚಿ ಹತ್ತಿದವರನ್ನೂ ಅದು ಬಿಡದ ಮಾಯೆಯಾಗಿ ಕಾಡುತ್ತದೆ. ಸಾಹಿತ್ಯದ ಬಗೆಗೆ ರುಚಿ ಹುಟ್ಟಿಸುವುದಕ್ಕೆ ಕವಿತೆ ಪ್ರೇರಕವಾಗುತ್ತದೆ. ಹೃದಯವಂತನಾದ, ಸಂವೇದನಾಶೀಲನಾದ ಮನುಷ್ಯನನ್ನು ಸುತ್ತಣ ಜಗತ್ತು ನೂರು ಬಗೆಯಲ್ಲಿ ಕಾಡುತ್ತದೆ. ಅವನೊಳಗೆ ಸ್ಪಂದಿಸುತ್ತದೆ. ಅವನೊಳಗೆ ಇಳಿದು ರೂಪಾಂತರ ಪಡೆಯುತ್ತದೆ. ಕಂಡ ಸತ್ಯಗಳನ್ನು ಅನಾವರಣಗೊಳಿಸುತ್ತದೆ. ವಿವಿಧ ವಿದ್ಯಮಾನಗಳಿಗೆ ಕಸಿವಿಸಿಗೊಳ್ಳುತ್ತದೆ. ಸಮೃದ್ಧ ಬದುಕಿನ ವೈವಿಧ್ಯಮಯ ಅನುಭವಗಳನ್ನು ಮಾತಿನಲ್ಲಿ ಹಿಡಿದು ಸುರಿಯುತ್ತದೆ. ಕವಿ ತನ್ನ ಕಾಲದ ಬದುಕನ್ನು ಹೇಗೆ ವಿಶಿಷ್ಟವಾಗಿ ಗ್ರಹಿಸಿದ್ದಾನೆ, ಇತರರಿಗಿಂತ ಭಿನ್ನವಾಗಿ ಅಭಿವ್ಯಕ್ತಿಸಿದ್ದಾನೆ ಎಂದು ದಾಖಲಿಸುತ್ತದೆ.

ಕನ್ನಡಿಗರ ಪ್ರೀತಿಯ ಕವಿಯಾಗಿರುವ ದೊಡ್ಡರಂಗೇಗೌಡರ ಕಾವ್ಯ ವೈಶಿಷ್ಟ್ಯವನ್ನು ಗುರುತಿಸಲು ಸಹಾಯಕವಾಗುವ ವಿಚಾರಗಳು ಮೇಲಿನ ವಿವರಣೆಯಲ್ಲಿವೆ. ''ನೀವೇಕೆ ಯಾವಾಗಲೂ ಕವಿತೆಯನ್ನೇ ಬರೆಯುತ್ತೀರಿ?'' ಎನ್ನುವ ಸಹೃದಯರ ಪ್ರಶ್ನೆಗೆ ಗೌಡರು ಅನೇಕ ಬಾರಿ ಮುಖಾಮುಖಿಯಾಗಿದ್ದಾರೆ. ಅದಕ್ಕೆ ಅವರು ಕೊಟ್ಟಿರುವ, ಕೊಡುತ್ತ ಬಂದಿರುವ ಪ್ರಾಮಾಣಿಕ

ಉತ್ತರ ಹೀಗಿದೆ; ''ನಾನು ನನ್ನ ಬಾಲ್ಯದಲ್ಲಿ ಕಂಡದ್ದು ಅತ್ಯಂತ ಸುಂದರ ಜಗತ್ತು. ಅಲ್ಲಿ ಹೊಲ, ಗದ್ದೆ, ಹಳ್ಳ, ಕೊಳ್ಳ, ತೋಟ-ತುಡಿಕೆ, ಸಮೃದ್ಧ ಹೂವು-ಹಣ್ಣು ಅವುಗಳನ್ನೆಲ್ಲ ನೋಡುತ್ತ, ಆಟ ಆಡುತ್ತ, ಹಾಡುತ್ತ ಹಾಡುತ್ತ ತುಂಬಾ ಆನಂದ ಕಂಡಿದ್ದೇನೆ. ಆ ಹಸಿರು ಮರಗಳ ತೋಪು, ಹೊಂಗೆ ಮರಗಳ ಸಾಲು, ಕಾಲುವೆ ದಂಡೆ, ಸೀಗೆ, ಹುಣಸೆ, ಮಾವು ಏನೆಲ್ಲ ಸಸ್ಯರಾಶಿ! ಅಲ್ಲಿ ಹಕ್ಕಿಪಕ್ಕಿಗಳ ಹಿಂಡು. ಬೆಳ್ಳಕ್ಕಿ, ಗಿಳಿ ಗೊರವಂಕಗಳು ಅಗಣಿತ. ಅವುಗಳ ಜೊತೆ ಮಾತಾಡಿದ್ದೇನೆ! ಆ ನನ್ನ ನಲ್ಮೆಯ ಹಳ್ಳಿಯ ಪರಿಸರದಲ್ಲಿ ನಾನು ಹಾಡದೆ ಮೌನವಾಗಿರಲು ಕಾರಣಗಳೇ ಇರಲಿಲ್ಲ. ಹೂವ ನೋಡಿದೆ. ಚಿಟ್ಟೆ ಕಂಡು ಹಾಡಿದೆ. ತೆನೆತೆನೆಯ ಜೊತೆ ಓಲಾಡಿ ಉಕ್ಕಿ ಬಂದ ಪದಗಳ ಜೊತೆ ಆಟವಾಡಿದೆ. ಗೆಳೆಯರಿಗೆ ಎಷ್ಟೆಷ್ಟೋ ಹಾಡು ಹೇಳಿಕೊಟ್ಟೆ. ಅದು ಓದಿದ್ದಲ್ಲ, ಗಟ್ಟಿ ಮಾಡಿದ್ದಲ್ಲ, ತನಗೆ ತಾನೇ ಮೂಡಿದ್ದು. ಅಲ್ಲೇ ಆ ನಿಸರ್ಗದ ರಮ್ಯ ಮಡಿಲಲ್ಲೇ ನನಗೆ ನಾನೇ ಕಟ್ಟಿದ್ದು. ಪ್ರಕೃತಿಯ ಮಡಿಲಲ್ಲಿ ನಾನು ಮೇಸ್ಟ್ರಾಗಿದ್ದೆ. ರಜಾದಲ್ಲಿ ಆಟ. ಆಟದಲ್ಲಿ ನಾನು ಹಾಡು ಹೇಳಿಕೊಡುವ ಪರಿಪಾಠ. ಪುಟ್ಟ ಮಗುವಿನ, ಚಂದದ ನಗೆಯಲ್ಲೂ ನನಗೆ ಹಾಡೇ ಕಂಡಿತು. ಗೆಳೆಯರು 'ಕವಿ' ಅಂದರು. ಶಾಲೆಯಲ್ಲಿ ಮೇಸ್ಟ್ರುಗಳು ಬೆನ್ನು ಕಟ್ಟಿದರು''

'ಭೂಮಿ-ಭಾನು' ಭಾವಗೀತೆಗಳ ಸಂಕಲನದ ಆರಂಭದಲ್ಲಿ ಕವಿಯ ಹೃದಯಾಂತರಾಳದಿಂದ ಬಂದ ಮಾತುಗಳಿವು; ''ನನಗೆ ಬುದ್ಧಿ ಬಂದ ಮೇಲೆ, ನಾನು ನನ್ನ ಅಮ್ಮನನ್ನು ಬಿಟ್ಟರೆ ಹೆಚ್ಚು ಹೆಚ್ಚು ಮೆಚ್ಚಿಕೊಂಡದ್ದು-ನಮ್ಮೆಲ್ಲರಿಗೂ ಆಶ್ರಯದಾತೆಯಾಗಿರುವ ಭೂಮಿತಾಯಿಯನ್ನೇ. ಹಸಿಹಸಿರಿನ ತರುಲತೆಗಳ ಹೂಗಣ್ಣಿನ ಅಪಾರ ಚೆಲುವಿನ ಇಳೆಯನ್ನು ಕಣ್ತುಂಬ ನೋಡುವಾಗೆಲ್ಲ ಅದೇನೋ ಆನಂದ ಮನಸ್ಸಿಗೆ. ಅದೇನೋ ಹೊಸ ಬಗೆ ಮುದ ಭಾವಾಂತರಾಳಕ್ಕೆ. ದೊಡ್ಡವನಾದ ಮೇಲೂ ವಸುಂಧರೆಯ ಆ ಚೆಲುವಿಗೆ ಮನಸೋತು ಅಲೆಮಾರಿಯಾಗಿದ್ದೇನೆ'' ವ್ಯಕ್ತಿ ಕವಿಯಾಗಿ ರೂಪುಗೊಳ್ಳುವುದರಲ್ಲಿ, ಕವಿ ಹಾಡಿಗೆ ಒಲಿಯುವುದರಲ್ಲಿ ಪ್ರಕೃತಿ-ಪರಿಸರದ ಪ್ರಭಾವ ಒಡನಾಟಗಳು ಹೇಗೆ ಪ್ರೇರಕ ಶಕ್ತಿಗಳಾಗಿರುತ್ತವೆಂದು ಅರ್ಥೈಸುವ ದೃಷ್ಟಿಯಿಂದ ಮೇಲಿನ ಮಾತುಗಳು ಮುಖ್ಯವಾದವುಗಳೆಂದು ನಾನು ಭಾವಿಸಿದ್ದೇನೆ.

ಇವೆಲ್ಲದರ ಜೊತೆಗೆ ತುಮಕೂರು ಜಿಲ್ಲೆಯ ಗ್ರಾಮೀಣ ಪರಿಸರದಿಂದ ಮೂಡಿ ಬಂದ ಗೌಡರಿಗೆ ಹುಟ್ಟೂರಾದ ಮಧುಗಿರಿ ತಾಲ್ಲೂಕಿನ ಕುರುಬರಹಳ್ಳಿಯಲ್ಲಿ, ಅಲ್ಲಿರುವಷ್ಟೂ ಕಾಲ ನಿರಂತರವಾಗಿ ಜನಪದಗೀತೆಗಳನ್ನು ಕಿವಿಯ ಮೇಲೆ ಬೀಳಿಸಿಕೊಳ್ಳುತ್ತಲೇ ಇರುವ ಭಾಗ್ಯವೂ ಇತ್ತು. ಮಕ್ಕಳನ್ನು ತೊಟ್ಟಿಲಲ್ಲಿ ತೂಗಿ ಮಲಗಿಸಲು 'ಜೋಗುಳ' ಇತ್ತು. ರಾಗಿಕಲ್ಲನ್ನು ಸುತ್ತಿಸುತ್ತ ಹೇಳುವ ಪದಗಳಿದ್ದವು. ಸೋಬಾನೆ ಪದಗಳಿದ್ದವು. ಹಬ್ಬ ಹರಿದಿನಗಳಲ್ಲಿನ ಆಚರಣೆಗಳಿಗೆ ಮೆರುಗು ಕೊಡುತ್ತಿದ್ದ ದೇವರ ಪದಗಳಿದ್ದವು. ನಾಟಿ, ಕಟಾವು, ಒಕ್ಕಣೆಗಳ ಸಂದರ್ಭದಲ್ಲಿ ಮೂಡಿ ಬರುತ್ತಿದ್ದ ಪದಗಳಿದ್ದವು. ಅವುಗಳನ್ನೆ ಮತ್ತೆ ಮತ್ತೆ ಕೇಳುತ್ತ ಗುನುಗುತ್ತ ಆಸ್ವಾದಿಸುತ್ತ

ಒಳಗೊಳಗೇ ಚಿಗುರುತ್ತಿದ್ದ ಕವಿಯನ್ನು ಹಾಡಿನ ಮೋಡಿಯಲ್ಲಿ ಅದ್ದುತ್ತ, ಬೆಂಗಳೂರಿಗೆ ಬಂದು ಎಂ.ಎ. ಅಧ್ಯಯನಕ್ಕೆ ತೊಡಗಿದಾಗ ಅಲ್ಲಿ ಸಹಜವಾಗಿಯೇ 'ಜಾನಪದ'ಕ್ಕೆ ಒಲಿದರು. ಕಂಬಾರರಂಥವರ ಗರಡಿಯಲ್ಲಿ ರಂಗಭೂಮಿಗೂ ಪ್ರವೇಶಿಸಿ ಹಿಮ್ಮೇಳದಲ್ಲೂ ಕುಳಿತು ಹಾಡಿದರು. ಅಧ್ಯಾಪಕ ವೃತ್ತಿಯ ಒತ್ತಡದಲ್ಲಿ ಇನ್ನೂ ಹೆಚ್ಚಿನ ಶ್ರಮಕ್ಕೆ ಗೌಡರು ಸಿದ್ಧವಾಗಿದ್ದರೆ ಅವರನ್ನು ಸುಪ್ರಸಿದ್ಧ ಗಾಯಕರ ಸಾಲಿನಲ್ಲಿ ನೋಡಬಹುದಿತ್ತು.

ಮುಂದೆ ಚಿತ್ರರಂಗಕ್ಕೆ ಪ್ರವೇಶಿಸಿದ ಗೌಡರು ತಮಗೆ ಎಂದೆಂದಿನಿಂದಲೂ ಪ್ರಿಯವಾಗಿದ್ದ ಹಾಡನ್ನೇ ಹಿಂಬಾಲಿಸಲು ಹಿಂದೆ ಮುಂದೆ ನೋಡಲೇ ಇಲ್ಲ. ಇದು ಗೌಡರಿಗೂ ಹಾಡಿಗೂ ಅಂಟಿದ ನಂಟು. ಕವಿ ಭಾವವನ್ನು ಸಹೃದಯನ ಮನಸಲ್ಲಿ ಪ್ರತಿಷ್ಠಾಪಿಸುವ ಶಕ್ತಿಯಿರುವುದು ಹಾಡಿಗೆ ಮಾತ್ರ ಎಂದು ದೊಡ್ಡರಂಗೇಗೌಡರ ಬಲವಾದ ನಂಬಿಕೆ. ಅವರ ಕಾವ್ಯರಾಶಿಯಲ್ಲಿ ಭಾವಗೀತೆಗಳದ್ದೇ ಮೇಲುಗೈ. ಅವರು ನವ್ಯಕಾವ್ಯ ಕೃತಿಗಳೆಂದು ಕರೆದುಕೊಂಡಿರುವ ಸಂಕಲನದಲ್ಲಿರುವ ಕವಿತೆಗಳೂ ಕೂಡ ಹಾಡಿಗೆ ಒಗ್ಗುವಂಥವೇ.

ಕವಿತೆ ಬರೆಯಲೆಳಸಿ ಕ್ರಿಯಾಶೀಲರಾಗುವ ಗೌಡರ ಭಾವಗಳು ಧುಮ್ಮಿಕ್ಕುವುದೇ ರಾಗರಂಜಿತವಾಗಿ, ಲಯಬದ್ಧವಾಗಿ ಇನ್ನೂ ಅಚ್ಚರಿಯೆಂದರೆ ಅವರ ಎಲ್ಲ ಕವನ ಸಂಕಲನಗಳಲ್ಲಿರುವ ಕೆಲವು ಕವಿತೆಗಳ ಶೀರ್ಷಿಕೆಯಾದರೂ ಕೊನೆಗೊಳ್ಳುವುದು 'ಹಾಡು' ಎಂದೇ. ಉದಾಹರಣೆಗೆ-ಹಾಡೋ ಗೆಳೆಯ ಹಾಡೋ, ಬಂಗಾರ ಬೆಳಕಿನ ಹೊಸತಿನ ಹಾಡು, ಶುಭದೀವಳಿಗೆ ಪದ, ಮನುಕುಲದ ಹಾಡು, ವಿಡಂಬನಾ ಗೀತೆ, ಕ್ರಾಂತಿ ಗೀತೆ, ನೆಲದ ಹಾಡು, ಪರಿಸರ ಗೀತೆ, ಸಮರ್ಪಣಾ ಗೀತೆ, ಹತಾಶೆಯ ಹಾಡು, ಹಾಡು ಗೆಳೆಯಾ ಹಾಡು, ಸಂಕ್ರಾಂತಿ ಗೀತ, ಋತುಗಾನ ಇತ್ಯಾದಿ.

ಭಾವವನ್ನು ಹಾಡಾಗಿಯೇ ಮಿಡಿಯುವ ಗೌಡರ ಮೋಹ ಎಷ್ಟು ಬಲವತ್ತರವಾದುದು, ಅವರಿಗೆ ಹಾಡು ಯಾಕೆ ಅಷ್ಟೊಂದು ಪ್ರಿಯ, ಹಾಡಿನ ಅಭಿವ್ಯಕ್ತಿ ಸಾಧ್ಯತೆ-ಸಾಮರ್ಥ್ಯ ಎಂಥದ್ದು ಎನ್ನುವುದಕ್ಕೆ ಅವರ ಕವಿತೆಗಳಿಂದಲೇ ವಿವರಗಳನ್ನು ಹೆಕ್ಕಬಹುದು. ಹಾಡಿನ ಅಲರ್ಜಿಯಿರುವ ಕವಿಗಳೆದುರು, ಅತಿಥಿಗಳೆದುರು ದೊಡ್ಡರಂಗೇಗೌಡರು ಕವಿಗೋಷ್ಠಿಗಳಲ್ಲಿ ಹಾಡುವುದಕ್ಕೆಂದೇ ಉದ್ದೇಶಪೂರ್ವಕವಾಗಿ ಆಯ್ಕೆ ಮಾಡಿಕೊಳ್ಳುವ ಕವಿತೆ 'ಹಾಡೋ ಗೆಳೆಯ ಹಾಡೋ', ಇದರಲ್ಲಿ ಹಾಡು ಕುರಿತ ಅವರ ಅಭಿಮತವನ್ನು ಸ್ಪಷ್ಟಪಡಿಸಿದ್ದಾರೆ. ಅವರ ದೃಷ್ಟಿಯಲ್ಲಿ ''ಹಾಡು ಇಂದಿನದಲ್ಲ, ಹಾಡು ನಿನ್ನೆಯದಲ್ಲ, ಹಾಡು ಎಂದಿನಿಂದಲೂ ಹರಿದು ಬಂದದ್ದು, ಕವಿ ಭಾವಗಂಗೆಯನ್ನು ಹೊತ್ತು ತಂದದ್ದು'', ಹಾಡು ಎಲ್ಲೆಲ್ಲೂ ಉಡಿರಾಡಿ ಬೆಳೆದದ್ದು, ತಲೆತಲೆಮಾರಿನಿಂದ ಹೊಳೆದದ್ದು. ಅದು ಹಗುರ ಮಾತಿನದಲ್ಲ, ಪೊಗರು ಭಾಷಣದ್ದಲ್ಲ, ಜೀವ ಜೀವಾಳ ಬಿತ್ತಿ ಬೆಳೆದದ್ದು. ಮಾತು ಮಥಿಸಿ, ಕೆತ್ತಿ ಕಡೆದದ್ದು ಕೋಟಿ ಬವಣೆ ಕಂಡೋರು

ಸುಡಿದದ್ದು. ಮಣ್ಣು ಮಕ್ಕಳ ಕಣ್ಣು ಕಂಡದ್ದು. ಹೊಲದ ಬಸಿರು ಹಸಿರಾಗಿ ಬೆಳೆದ ರೈತಾಪಿ ಉಸಿರಾಡಿದ್ದು. ಕೂಲಿನಾಲಿ ಪಡೆದ ಕಾರ್ಮಿಕರು ಮೊರೆದ ಕಷ್ಟಜನರ ಕೆಂಪು ನೆತ್ತರಾಗಿ ಹರಿದದ್ದು. ಚೆಂದಿ ಆಯೋ ಮಂದಿ, ನೊಂದು ಬೆಂದೋರ ಬವಣೆಯು ತನಿಲಯದ ಹಕ್ಕಿ ಹಾಡು. ಭಾವನೆಗಳು ತೀವ್ರವಾಗಿ ಹೊಮ್ಮಿ ಬರುವಾಗ ಅದು ತನ್ನದೇ ಆದ ಲಯವೊಂದನ್ನು ಕಂಡುಕೊಳ್ಳುತ್ತದೆ. ಆಗ ಮಾಮೂಲಿ ಮಾತುಗಳಿಗೂ ಒಂದು ಸೊಗಸು ಸೊಗಡು ಪ್ರಾಪ್ತವಾಗುತ್ತದೆ. ಇದೇ ಹಾಡಿನ ಮೂಲ. ಅನಕ್ಷರಸ್ಥ ಜನಪದ ಸಮುದಾಯದಲ್ಲಿ ಹೆಪ್ಪುಗಟ್ಟಿದ ಭಾವಗಳು ಉಕ್ಕಿ ಹರಿದು ಹಾಡಾದದ್ದು ಇದೇ ಕಾರಣಕ್ಕೆ. ಈ ಹಿನ್ನೆಲೆಯನ್ನು ಅರ್ಥಮಾಡಿಕೊಂಡ ಸಂವೇದನಾಶೀಲರಿಗೆ ಬದುಕಿನ ಅನಂತ ವಿಸ್ತಾರದಲ್ಲಿ ಎಲ್ಲೆಲ್ಲಿಯೂ ಹಾಡು ಕೇಳಬಹುದು ಅಥವಾ ಎಲ್ಲೆಲ್ಲೂ ಹುದುಗಿರುವ ಹಾಡನ್ನು ಗುರುತಿಸುವುದು ಸಾಧ್ಯವಾಗಬಹುದು.

ಗೌಡರು ಈ ವರ್ಗಕ್ಕೇ ಸೇರಿದವರಾದ್ದರಿಂದ ''ಕಾಡಿನಲ್ಲಿದೆ ಹಾಡು, ಬೀಡಿನಲ್ಲಿದೆ ಹಾಡು, ಓ ಜಾಣ ಕಿವುಡು ಗೆಳೆಯ ಕಿವಿತೆರೆದು ಕೇಳಿ ನೋಡು'' ಎಂದು ಕರೆ ಕೊಡುತ್ತಾರೆ. ಅಷ್ಟೇ ಅಲ್ಲ ಗಾಳಿಯಲ್ಲೂ ಬೇಲಿಯಲ್ಲೂ ಹಾಡಿದೆ. ಅದು ಸಿನಿಕರಾಗಿ ಕಿಚಿಮುಚ್ಚಿ ಕುಳಿತವರಿಗೆ ಕೇಳದು. ಹುಟ್ಟುವಾಗಲೂ ಸಾಯುವಾಗಲೂ ಹಸಿವಿನಲ್ಲೂ ಬಿಸಿಬೆದೆಯಲ್ಲೂ ಇರುವ ಹಾಡು ಹೃದಯವಿದ್ದವರಿಗೆ ಮಾತ್ರ ಕೇಳಿತು. ಹಕ್ಕಿಯಿಂಚರದಲ್ಲಿ ಲೆಕ್ಕವಿರದುಕ್ಕವದ ಉತ್ಕರ್ಷ ಸ್ವರದಲ್ಲಿ ನಲಿನಲಿವ ಒಲವಿನ ಚೆಲುವು ಹಾಡಿದ್ದರೆ, ಬಿಕ್ಕಿ ಅಳುವೆಡೆಯಲ್ಲಿ ಉಕ್ಕುವ ದುಃಖದಲಿ ಎದೆ ಕುಕ್ಕುವ ಹಾಡಿದೆ. ಪಾಡಿನಿಂದ ದೂರಾಗಬೇಕಾದರೆ ಒಣ ಪ್ರತಿಷ್ಠೆಯ ಬಿಟ್ಟು ಹಾಡಬೇಕೆನ್ನುವ ಜನಪದರ ಸಹಜ ಸಿದ್ಧಾಂತವನ್ನೇ ದೊಡ್ಡರಂಗೇಗೌಡರು ನೆಮ್ಮಿ ನಡೆದವರು.

ಜನಪದ-ಜಾನಪದ ಎರಡನ್ನೂ ಉತ್ಕಟವಾಗಿ ಪ್ರೀತಿಸುವ ದೊಡ್ಡರಂಗೇಗೌಡ ಆಧುನಿಕತೆ ಉತ್ಕರ್ಷದಲ್ಲಿ ಕೊಚ್ಚಿಹೋದವರಲ್ಲ. ಗ್ರಾಮೀಣ ಮಾತಿನ ಸೊಗಡನ್ನು , ಮನದ ಮುಗ್ಧತೆಯನ್ನು ಕಳೆದುಕೊಂಡವರಲ್ಲ, ಸಿಂಗರದ ವೇಷಗಳಿಂದ ಕೃತಕಗೊಂಡವರಲ್ಲ, ಸುಂದರ ಪುರಾತನತೆಯ ಪ್ರತೀಕದಂತಿರುವ ಗೌಡರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ 50 ಕೃತಿಗಳನ್ನು ಪ್ರಕಟಿಸಿದ್ದರೂ, 400ಕ್ಕೂ ಹೆಚ್ಚು ಚಲನಚಿತ್ರಗೀತೆಗಳನ್ನು ಬರೆದು ಮನೆಮಾತಾಗಿದ್ದರೂ, ರಾಜ್ಯೋತ್ಸವ ಪ್ರಶಸ್ತಿಯೂ ಸೇರಿ ಕರ್ನಾಟಕ ಸರ್ಕಾರದಿಂದ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ.

"Who is who" ನಲ್ಲಿ ಹೆಸರು ದಾಖಲಾಗಿರುವುದೂ ಸೇರಿ ರಾಷ್ಟ್ರೀಯ ಪುರಸ್ಕಾರಗಳನ್ನು ಪಡೆದುಕೊಂಡಿದ್ದರೂ, ಸಾಹಿತ್ಯ ಕ್ಷೇತ್ರದ ಅನನ್ಯ ಸೇವೆಗಾಗಿ ವಿದೇಶಗಳ ಮನ್ನಣೆಗೆ ಪಾತ್ರರಾಗಿದ್ದರೂ, ಮೂವತ್ತಕ್ಕೂ ಹೆಚ್ಚು ಧ್ವನಿಸುರುಳಿಗಳು ಹೊರಬಂದು ಜನಪ್ರಿಯತೆಯ ಔನ್ನತ್ಯಕ್ಕೇರಿದ್ದರೂ, ಸಾಹಿತ್ಯ ಸಂಸ್ಕೃತಿಯ ಪರಿಚಾರಕರಾಗಿ ಅಮೆರಿಕ ಇಂಗ್ಲೆಂಡ್

ಜರ್ಮನಿ ದೇಶಗಳಲ್ಲಿ ಪ್ರವಾಸ ಮಾಡಿ ಕರ್ನಾಟಕದ ಸಾಂಸ್ಕೃತಿಕ ಘನತೆಯನ್ನು ಎತ್ತಿ ಹಿಡಿದಿದ್ದರೂ ಕೀರ್ತಿಶನಿ ಅವರ ತಲೆ ತಿರುಗಿಸಿಲ್ಲ. ಅವರ ಬಗ್ಗೆ ಪ್ರೀತಿ, ಗೌರವ ತೋರುವ ಎಲ್ಲರ ಪಾಲಿಗೆ ಆತ್ಮೀಯ ಬಂಧುವಿನಂತೆ ಆಪ್ತರಾಗಿಯೇ ಉಳಿದುಕೊಂಡಿದ್ದಾರೆ.

ತಮ್ಮ ಹೃದಯ ಶ್ರೀಮಂತಿಕೆಯಿಂದ ಸರಳತೆ ಸಜ್ಜನಿಕೆಗಳಿಗೂ ಒಂದು ಘನತೆ ತಂದುಕೊಟ್ಟಿದ್ದಾರೆ. ನಿಸರ್ಗಾರಾಧನೆಯಲ್ಲಿ ರೂಪ ಬದುಕಿನ ಕಟುವಾಸ್ತವವನ್ನು ಮರೆಯದೆ ಸುತ್ತಣ ಸಮಾಜದ ತಾರತಮ್ಯ ಕಂಡು ಸಿಡಿಮಿಡಿಗೊಂಡಿದ್ದಾರೆ. ಅನ್ಯಾಯ ಅಗತ್ಯ ಅಪ್ರಾಮಾಣಿಕತೆಗಳಿಗೆ ರೋಸಿ ಲೇಖನಿಯನ್ನು ಖಡ್ಗವಾಗಿಸಿಕೊಂಡಿದ್ದಾರೆ. ಗೋಸುಂಬೆ ವ್ಯಕ್ತಿತ್ವವನ್ನು ಬಟಾಬಯಲಾಗಿಸಿದ್ದಾರೆ.

ವರ್ಗ ವರ್ಣಗಳ ಛೇಡಿಸಿ ಕಪಟಿಗಳ ಕುತಂತ್ರಗಳನ್ನು ಸೀಳಿದ್ದಾರೆ. ಜನರ ಬದುಕು ಹಸನಾಗಬೇಕೆಂಬ ಅಭೀಪ್ಸೆಯಿಂದ ಬೂಟಾಟಿಕೆಗಳನ್ನು ಈಡಾಡುತ್ತ ಸಮಾಜ ಮುಖಿಯಾಗಿ ಕಾವ್ಯ ಬರೆದಿದ್ದಾರೆ. ಇದು ಗೌಡರ ಉಸಿರಲ್ಲಿ ಉಸಿರಾಗಿ ಬೆರೆತುಹೋಗಿರುವ ಜಾನಪದಕ್ಕಿರುವ ಶಕ್ತಿ. ಅದರಲ್ಲಿ ಅಂತರ್ಗತವಾಗಿರುವ ಭಾವತೀವ್ರತೆಗಿರುವ ಶಕ್ತಿ. ಅದನ್ನು ವ್ಯಕ್ತಪಡಿಸಲು ಅತ್ಯುತ್ತಮ ಮಾಧ್ಯಮವಾಗಿರುವ ಹಾಡಿಗಿರುವ ಶಕ್ತಿ, ಈ ಶಕ್ತಿ ಮತ್ತಷ್ಟು ರಾಗಗಳಲ್ಲಿ ವಿಸ್ತಾರಗೊಳ್ಳಲಿ, ಇನ್ನಷ್ಟು ರಂಗುಗಳಿಂದ ಆಕರ್ಷಕವಾಗಲಿ ಎಂದು ಹಾರೈಸುತ್ತೇನೆ.





# ಚಿಂತನೆಗೆ ತೊಡಗಿಸುವ ಭಾವಗೀತೆಗಳ 'ಹೊಸ ಹೊನಲು'

● ಕೆ. ಕುಮಾರ್

'ಹೊಸ ಹೊನಲು' ಭಾವಗೀತೆಗಳಲ್ಲಿ ವ್ಯಕ್ತವಾಗಿರುವ ಪ್ರಧಾನ ಭಾವ 'ಒಲವು'. ಇಲ್ಲಿ ಮಾತ್ರವಲ್ಲ ದೊಡ್ಡರಂಗೇಗೌಡರ ಯಾವುದೇ ಕೃತಿಗಳಲ್ಲಿಯೂ 'ಒಲವಿಗೆ', 'ಪ್ರೇಮಕ್ಕೆ' ಪ್ರಧಾನವಾದ ಸ್ಥಾನ. ಭಾವುಕ ಕವಿಯಾದ ಇವರು ಮಾನವ ಪ್ರೇಮದ ಹಲವು ಮಜಲುಗಳನ್ನು ತಮ್ಮ ಭಾವಗೀತೆಗಳಲ್ಲಿ ಚಿತ್ರಿಸಿದ್ದಾರೆ. ಅದರಲ್ಲೂ ಗಂಡು-ಹೆಣ್ಣಿನ ನಡುವಿನ ಒಲವು, ದಾಂಪತ್ಯ ಪ್ರೇಮ ಇವರ ಪ್ರಧಾನ ಆಸಕ್ತಿ. ಇಲ್ಲಿ ತಲ್ಲೀನರಾಗಿ, ಭಾವಶುದ್ಧಿಯಿಂದ ನಿರ್ಮಲ ಪ್ರೇಮದ, ನಿಷ್ಕಳಂಕ ಪ್ರಣಯದ, ಉತ್ಕಟ ಪ್ರೀತಿಯ ಭಾವನೆಗಳನ್ನು ಸರಳ, ಸುಂದರ, ಗೇಯತೆಯಿಂದ ಕೂಡಿದ ಭಾವಗೀತೆಗಳಾಗಿ ರಚಿಸಿದ್ದಾರೆ.

ಎಲ್ಲಿಯವಳೋ ನೀನು
ಎಲ್ಲಿಯವನೋ ನಾನು
ಸದ್ದಿನಾ ಶಹರಿನಲ್ಲಿ ಸಂಧಿಸಿದೆವು
ಪ್ರೇಮವನೆ ಬಾಳಿಗೆ ಹೊಂದಿಸಿದೆವು
ಬವಣೆ ಬವಣೆ ಬೆಂಕಿಯನ್ನೇ ನಂದಿಸಿದೆವು
ಎಂದೆಂದೂ ಪ್ರೇಮಕ್ಕೆ ಸ್ಪಂದಿಸಿದೆವು (ಪ್ರೇಮದ ಸ್ಪಂದನ)

ಇದು ಬರೀ ಕಾಮದ ಬೆಂಕಿಯನ್ನು ನಂದಿಸುವ ಪ್ರೇಮದ ಕಲ್ಪನೆಯಲ್ಲ. ಬವಣೆ ಬೆಂಕಿಯನ್ನು ನಂದಿಸುವ ಪ್ರೇಮಕ್ಕೆ ಸ್ಪಂದಿಸುವ ದೊಡ್ಡರಂಗೇಗೌಡರು ಕಟ್ಟಿಕೊಡುವ ಪ್ರೇಮದ ಪರಿ. ಈ ಪ್ರೇಮದ ಸ್ಪಂದನ ಎಂದೆಂದೂ ಬಿಡಿಸದ ಬೆಸುಗೆ, ಅದು ನೆರಳಿನಂತೆ ಸದಾ ಜೀವನದಲ್ಲಿ ಅನುಚರ.

ಎಲ್ಲಿ ಹೋಗಲಿ ನಾನು
ಅಲ್ಲಿ ಬಂದಳು ಅವಳು
ನೆರಳಂಗೆ ಬೆನ್ನ ಹಿಂದೆ
ನಾನು ಅವಳಲಿ ಸೇರಿ
ಅವಳು ನನ್ನಲಿ ಕೂಡಿ
ದ್ವಿದಳ ಏಕವಾಯಿತಂದೇ (ಐಕ್ಯ ಗಾನ)

ಎತ್ತ ನೀನು ಅತ್ತ ನಾನು
ನಾನು ಚಿತ್ತ ನಲ್ಮೆ ಜೇನು
ನನಗೆ ನೀನು ನಿನಗೆ ನಾನು
ಹೊಳೆದ ಬಾಳ ಒಲುಮೆ ಭಾನು (ನನ್ನ ಒಲುಮೆ ಭಾನು ನೀನು)

ಇಂತಹ ಒಲುಮೆಯನ್ನು ಸೃಜಿಸುವುದು ಬರೀ ಪ್ರೇಮ ಮಾತ್ರವಾಗಿರದು. ಬರಿಯ ಪ್ರೇಮ ದೇಹಾಕರ್ಷಣೆಯಲ್ಲೇ ತನ್ನ ಇರುವನ್ನು ಪ್ರಕಟಿಸುತ್ತದೆ. ಅದು ಕ್ಷಣಿಕ. ನಿಜವಾದ ಪ್ರೇಮಕ್ಕೆ ಸ್ನೇಹದ ಸೇತುವೆ ಕೊಂಡಿಯಾಗಿ ಕೊನೆಯವರೆಗೂ ಕಾಯುತ್ತದೆ. ಸ್ನೇಹವಿಲ್ಲದ ಪ್ರೀತಿ ಬರಿಯ ತೋರಿಕೆಯದು ಎಂಬುದು ದೊಡ್ಡರಂಗೇಗೌಡರ ನಿಲುವು.

ಎಲ್ಲಿ ಸ್ನೇಹ ಗಂಗೆಯಾಗಿ ತುಂಬಿ ಹರಿವುದೋ
ಅಲ್ಲಿ ನಲ್ಮೆ ದೋಣಿಯಾಗಿ ತೇಲಿ ಬರುವುದು! (ಒಲವೇ ಬೆಡಗು)

ಸ್ನೇಹ ಬೆಸೆಯೆ ನನಗೆ ನೀನು
ಪ್ರೇಮ ಉದಿಸಿ ನಿನಗೆ ನಾನು! (ಪ್ರೇಮದೊಸಗೆ)

ಇಂತಹ ಸ್ನೇಹ ತುಂಬಿದ ಪ್ರೀತಿ, ತುಂಬು ಜೀವನದ ಅನಂತ ಆನಂದಕ್ಕೆ ಪುಟಿವ ಕಾರಂಜಿಯಾಗಿ ಒಲವಿನ ಸಾಕ್ಷಾತ್ಕಾರಕ್ಕೆ ತನ್ನನ್ನು ಅರ್ಪಿಸಿಕೊಳ್ಳುತ್ತದೆ. ಅಂತಹ ಒಲವಿನ ಜೀವನವೇ ಸ್ವರ್ಗದಾನಂದ

ಒಲವೇ ಜೀವನ ಒಲವೇ ಪಾವನ
ಒಲವೇ ನಮಗೆ ಸೀ ಹೂರಣ!
(ಒಲವೇ ನಮ್ಮ ಸೀ ಹೂರಣ)

ಬೇರೇನು ಬೇಕಿದೆ ಒಲವು ತುಂಬಿದ ಬದುಕಿಗೆ?

ದೊಡ್ಡರಂಗೇಗೌಡರ ಭಾವಗೀತೆಗಳು ಪ್ರೇಮದ ಪಾಕವನ್ನು ಎರಕ ಹೊಯ್ಯುತ್ತಾ, ಪ್ರೇಮದ ಅಮಲಿನಲ್ಲಿ ಮುಳುಗಿಯೂ ಸಾಮಾಜಿಕ ಆಶಯಕ್ಕೆ ಬೆನ್ನು ತಿರುಗಿಸಿಲ್ಲ. ಇವರ ಭಾವಗೀತೆಗಳು ಸಾಮಾಜಿಕ ಕಳಕಳಿಯನ್ನು ತಮ್ಮ ಮೂಲದಲ್ಲಿಯೇ ಅಡಕವಾಗಿಸಿಕೊಂಡಿವೆ. ಸಾಮಾಜಿಕ ಜವಾಬ್ದಾರಿಯನ್ನು ಅರಿತ ಲೇಖಕ ವಾಸ್ತವದಲ್ಲಿ ನಿಂತು ಬರೆಯುವಾಗ ಆತ ಸಮಕಾಲೀನ ಸಮಾಜವನ್ನು ತನ್ನ ಬರವಣಿಗೆಯ ಭಾಗವಾಗಿಯೇ ಗ್ರಹಿಸಿ ತನ್ನ ನಿಲುವಿಗೆ ಬದ್ಧನಾಗಿರುತ್ತಾನೆ. ಹಾಗಾಗಿಯೇ ಆತನಲ್ಲಿ ಅಂತರ್ಗತವಾಗಿರುವ ಈ ಸಮಾಜಮುಖಿ ನಿಲುವು ಸೃಜನಶೀಲ ಬರವಣಿಗೆಯಲ್ಲಿಯೂ ಸೀಳಿಕೊಂಡು ಹೊರಬರುತ್ತದೆ.

ದೊಡ್ಡರಂಗೇಗೌಡರ ಸಾಹಿತ್ಯದಲ್ಲಿ ಮೈದುಂಬಿ ನಿಂತಿರುವ ಈ ಸಾಮಾಜಿಕ ಜವಾಬ್ದಾರಿಯನ್ನು ಕಂಡಿರುವುದರಿಂದಲೇ ಅವರ ಅಭಿನಂದನಾ ಗ್ರಂಥಕ್ಕೆ 'ಸಮಾಜಮುಖಿ' ಎಂದು ನಾಮಕರಣ ಮಾಡಿದ್ದಾರೆ.

ಗೌಡರ ಸಮಾಜ ಚಿಂತನೆಯ ಜೊತೆಯಲ್ಲೇ ಬೆರೆತುಕೊಂಡಿರುವ ಸಂಸ್ಕೃತಿ ಚಿಂತನೆಯ ಕಾಳಜಿಪೂರ್ವಕ ಗೀತೆಗಳು ಈ ಕೃತಿಯಲ್ಲಿ ಸ್ಥಾನ ಪಡೆದಿವೆ. 'ವಿಷಾದ ಗೀತೆ'ಯಲ್ಲಿ ವಾಸ್ತವವಾಗಿ ನಮ್ಮ ಸಮಾಜ ಸಾಂಸ್ಕೃತಿಕವಾಗಿ ಎಂತಹ ವಿಷಮ ಸ್ಥಿತಿಯಲ್ಲಿ ಇದೆ ಎಂಬುದನ್ನು ಬಹಳ ನೋವಿನಿಂದ ಹೇಳಿದ್ದಾರೆ. ವಿಶ್ವಗ್ರಾಮ (Global Village) ಕಲ್ಪನೆಯ ಬಹುರಾಷ್ಟ್ರೀಯ ಕಂಪನಿಗಳ ನಿಲುವು ಹೇಗೆ ನಮ್ಮ ನಾಡಿನ ದೇಶೀಯತೆಯನ್ನು ತನ್ನ ಹೈಟೆಕ್ ತಂತ್ರಜ್ಞಾನದಿಂದ ಕತ್ತು ಹಿಸುಕುತ್ತಿದೆ ಎಂಬುದರ ಚಿತ್ರಣವನ್ನು ಗೌಡರು ಸಮರ್ಥವಾಗಿ ಕಟ್ಟಿಕೊಡುತ್ತಾರೆ. 'ವಿಷಮಗಾಥೆ' ಕವಿತೆಯಲ್ಲಿ ಜಾಗತೀಕರಣದ ಪಾಶವೀಶಕ್ತಿ ಬೆರ್ಚಪ್ಪನಾಗಿ ನಿಂತು ನಮ್ಮಲ್ಲಿನ ಸಹಜ ಶಕ್ತಿಯನ್ನು ಕುಂದಿಸಿ ನಮ್ಮನ್ನು ಅಗಾಧವಾದ ಭಯದ ಕೂಪದಲ್ಲಿ ತಳ್ಳಿದ್ದಾನೆ ಎಂಬುದನ್ನು ಕವಿ ಮನವರಿಕೆ ಮಾಡಿಕೊಡುತ್ತಾರೆ. ನಂತರ ಅವರು ಈ ಅನ್ಯಾಕ್ರಮಣ ಸಂಸ್ಕೃತಿಯಿಂದ ನಮ್ಮ ದೇಸಿ ಸಂಸ್ಕೃತಿಯ ಉಳಿವಿಗಾಗಿ ಮಾರ್ಗೋಪಾಯಗಳನ್ನೂ ಎಚ್ಚರಿಕೆಯನ್ನೂ ನೀಡುತ್ತಾರೆ.

ನಮ್ಮ ನೆಲದಲ್ಲಿ ನಮ್ಮತನದ
ಕಹಳೆ ಮೊಳಗಲಿ ಮೊದಲಿಗೆ
ಅನ್ಯ ಸಂಸ್ಕೃತಿ ದೂರವಿರಿಸುವ
ಆಂದೋಲನವಾಗಲಿ ಒಮ್ಮೆಗೆ! (ದೇಸಿಯತೆ)

ಎಂದು ಹೇಳುತ್ತಾ ಅನ್ಯ ಸಂಸ್ಕೃತಿಯನ್ನು ಪ್ರತಿಭಟನೆಯಿಂದ ದೂರವಿಡಬೇಕು ಎಂಬ ಮುನ್ನೆಚ್ಚರಿಕೆಯನ್ನು ಕೊಡುತ್ತಾರೆ.

'ನಗರ ನಾಗರನ ತೆಕ್ಕೆಯಲ್ಲಿ' ಬರುವ ಬಡತನದ ಚಿತ್ರಣ ನಗರ ಜೀವನದ ಅಂಧಕಾರದಲ್ಲಿ ತುತ್ತು ಅನ್ನಕ್ಕಾಗಿ ಪಾಡುಪಡುವ ಜನರ ಕಠೋರ ಬದುಕಿನ ನೈಜ ವಿವರವನ್ನು, ನಗರದ ಮರೆ ಮಾಡಿದ ಮುಖವನ್ನು ಬೆಳಕಿಗೆ ತರುತ್ತದೆ.

ಹತ್ತಿದ್ದೇ ಹತ್ತಿದ್ದು ಇಳಿದದ್ದೇ ಇಳಿದದ್ದು
ಹೊತ್ತಿದ್ದು ಮಾತ್ರ ಬಡತನದ ಬೆಟ್ಟ

ಇದು ಬಡವನ ದುಡಿಮೆಯ ಚಿತ್ರಣ. ಹಗಲಿರುಳೆನ್ನದ ಅಗಾಧ ದುಡಿಮೆಗೆ ಆತ ಹೊರುವ ಹೊರೆ ಬರೀ ಬಡತನದ ಬೆಟ್ಟ. ಹಳ್ಳಿಯ ನಿಸರ್ಗದ ಮಡಿಲಿನಲ್ಲಿ ಪ್ರಕೃತಿಯ ಶಿಶುವಾಗಿ ಬೆಳೆದು ಉದರ ನಿಮಿತ್ತವಾಗಿ ಈ ನಗರದ ತೆಕ್ಕೆಯಲ್ಲಿ ಬಂದು ಬೀಳುವ ಅದೆಷ್ಟೋ ಮುಗ್ಧ ಜೀವಿಗಳ ಬಾಳು ನಗರದ ಕೊಳಚೆ ಗುಂಡಿಗಳಲ್ಲಿ ಕರಗಿ ಹೋಗುತ್ತದೆ. ಹಾಗೆ ಅಳಿದುಳಿದ ಬಾಳಿನ ದಿನಗಳಲ್ಲಿ ನಿಂತು ನೋಡಿದಾಗ ತನ್ನ ಹಳ್ಳಿಯ ನೆನಪು ಕಾಡುವುದು ಸಹಜ. ಈ ನಗರ ಆ ಹಳ್ಳಿಯ ಬದುಕಿನ ನಡುವಿನ ಸಂಘರ್ಷದಲ್ಲಿ ನಗರ ಹಳ್ಳಿಯನ್ನು ಸಂಪೂರ್ಣವಾಗಿ ನುಂಗಿ ಹಾಕಿದರೂ ಆ ನೆನಪುಗಳನ್ನು ನುಂಗಿ ಹಾಕಲಾರದು. ಅಂತಹ ನೆನಪುಗಳನ್ನೇ ಗೌಡರು 'ನೆನಪಿನ ನದಿ'ಯಾಗಿಸಿ ಹಳ್ಳಿ ನಗರಗಳ ಬದುಕಿನ ಹೋಲಿಕೆಗೆ ತೊಡಗಿದ್ದಾರೆ.

ಅಂದಲ್ಲಿ ಗುಡ್ಡ ಬೆಟ್ಟದ ಜೊತೆಗೆ ಮಾತು
ಇಂದಿಲ್ಲಿ ನಗರ ನಾಗರ ಕಚ್ಚಿ ಸೋತು
ಹೊತು ಹೋಗಿದೆ ಉತ್ಸಾಹ ಬದುಕು ಭಾರ
ಹೊತ್ತು! (ನೆನಪಿನ ನದಿ)

ನಗರ ನಾಗರದ ಕಡಿತದಿಂದ ಹತ್ತಿದ ವಿಷ ಇಡೀ ಬದುಕಿನ ಉತ್ಸಾಹವನ್ನೇ ಆಹುತಿ ತೆಗೆದುಕೊಂಡು ಬದುಕನ್ನೇ ಕುಂದಿಸುವುದಾದರೆ ಹಳ್ಳಿಯ ಸಹಜ ಬದುಕಿನ ದಿನಗಳ ನೆನಪು ಕಾಡದಿರುತ್ತದೆಯೇ?

ಹೀಗೆ ಚಿಂತನೆಗೆ ಹತ್ತಿಸುವ ಇಲ್ಲಿನ ಭಾವಗೀತೆಗಳು ಹೊರಡಿಸುವ ಧ್ವನಿ ಇಂದಿನ ಮತ್ತು ಹಿಂದಿನಿಂದಲೂ ಕಾಡುತ್ತಿರುವ ಅನೇಕ ಪಿಡುಗುಗಳ ವಿರುದ್ಧ ತೆರೆದುಕೊಳ್ಳುತ್ತದೆ. ಜಾತೀಯತೆ, ವಿಧವಾ ಸಮಸ್ಯೆ, ಹೆಣ್ಣಿನ ಸ್ಥಾನಮಾನ ಮುಂತಾದ ಸಮಸ್ಯೆಗಳ ವಿರುದ್ಧ ಬಂಡೇಳುತ್ತದೆ. ಅಲ್ಲದೆ ಆಧುನಿಕತೆಯ ಸೋಗಿನಲ್ಲಿ ಕವಲು ದಾರಿಯಲಿ ನಡೆಯುತ್ತಿರುವ ಇಂದಿನ ಯುವ ಪೀಳಿಗೆಯನ್ನು ಎಚ್ಚರಿಸುವಂತಹ ಗೀತೆಗಳು ಇಲ್ಲಿ ಸ್ಥಾನ ಪಡೆದಿವೆ. ಇಂದಿನ ಜಗತ್ತನ್ನು ಕಾಡುತ್ತಿರುವ ಭಯೋತ್ಪಾದನೆಯ ಭೂತವನ್ನು ಎದುರಿಸಿ ಓಡಿಸಲು ತರುಣ ಜನಾಂಗಕ್ಕೆ ಕರೆಕೊಡುವ ಕ್ರಾಂತಿ ಗೀತೆಯೂ ಇದೆ. ಇನ್ನುಳಿದಂತೆ ಪ್ರಕೃತಿ ವರ್ಣನೆ. ನಾಡು ನುಡಿಯನ್ನು ಕುರಿತ ಗೀತೆಗಳು

ಇದ್ದರೂ ನನ್ನ ಆಸಕ್ತಿ ಸಾಮಾಜಿಕ ಸಾಂಸ್ಕೃತಿಕ ಚಿಂತನೆಯನ್ನು ಒಳಗೊಂಡವುಗಳ ಕಡೆಗೆ ಹೆಚ್ಚುವಾಲುತ್ತದೆ.

ಯಾವುದೇ ಸಿದ್ಧವಾದ ಕಾವ್ಯ ಧೋರಣೆಗಳನ್ನು ಮುಂದಿಟ್ಟುಕೊಳ್ಳದೆ ಕಾವ್ಯಾಸಕ್ತರು ಸಹಜ ನಿರೀಕ್ಷೆ, ಕುತೂಹಲದಿಂದ ಮುಕ್ತ ಮನಸ್ಸಿನಿಂದ ಸ್ವೀಕರಿಸಬಹುದಾದ ಕೃತಿ 'ಹೊಸ ಹೊನಲು'. ಇಲ್ಲಿಯ ದೊಡ್ಡರಂಗೇಗೌಡರ ಸಹಜ ಶೈಲಿ, ಸರಳ ನಿರೂಪಣೆ, ಕಾಠಿಣ್ಯವಲ್ಲದ ಭಾಷೆ, ಆಭಾಸವಾಗದ ಪ್ರಾಸ, ಲಯಾನ್ವಿತವಾದ ನಡೆ ಇವೆಲ್ಲಾ ಕೃತಿಯನ್ನು ಆತ್ಮೀಯವಾಗಿಸುತ್ತದೆ. ಒಟ್ಟಾರೆ ಕೃತಿಯ ಚೌಕಟ್ಟಿಗೆ ನಿಲುಕುವ ಇವೆಲ್ಲವುಗಳ ಸೌಂದರ್ಯದಿಂದಾಗಿ ಕೃತಿ ಸರಳವಾಗಿ ಓದಿಸಿಕೊಳ್ಳುತ್ತದೆ.

❑






# ಡಾ|| ದೊ.ರಂ.ಗೌ.ರವರ ಭಾವಗೀತೆ ಒಂದು ಅನಿಸಿಕೆ.

• ಹೇಮಾಪ್ರಸಾದ್

ಅದೊಂದು ಸಮಾರಂಭ. ಅಲ್ಲಿಗೆ ಆಗಮಿಸಿದ್ದ ಉದಯೋನ್ಮುಖ ಗಾಯಕಿಯೊಬ್ಬರು ಭಾವಪೂರ್ಣವಾಗಿ ಹಾಡುತ್ತಿದ್ದರು....

"ಯಾರಿಗುಂಟು, ಯಾರಿಗಿಲ್ಲ? ಬಾಳೆಲ್ಲ ಬೇವುಬೆಲ್ಲ!
ಬಂದದ್ದೆಲ್ಲ ನೀಸ ಬೇಕಯ್ಯಾ! ಗೆಳೆಯಾ;
ಬಾರದ್ದಕ್ಕೆ ಚಿಂತೆ ಯಾಕಯ್ಯಾ;
ಗೋಣು ಹಾಕಿ ಕೂಡಬ್ಯಾಡ! ಗತ್ತಿನಾಗ ಬಾಳನೋಡ!"

ಕಾರ್ಯಕ್ರಮದ ನಂತರ ನೆರೆದಿದ್ದ ಪ್ರೇಕ್ಷಕರೆಡೆಯಿಂದ ಒಬ್ಬಾತ ಬಂದು ಗಾಯಕಿಯ ಬಳಿ ನುಡಿದ. 'ಅಮ್ಮಾ, ನೀವಿವತ್ತು ನಂಗೆ ಈ ಹಾಡಿನ ಮೂಲಕ ಬದುಕಲು ಹೊಸ ಉತ್ಸಾಹ ತುಂಬಿದಿರಿ. ನಡೆದ ಕೆಲವು ಘಟನೆಗಳಿಂದ, ಬದುಕಿನಲ್ಲಿ ಬೇಸರವುಂಟಾಗಿ, ಜೀವನವೇ ಭಾರವಾಗಿತ್ತು. ನಿಮ್ಮ ಹಾಡು ಕೇಳಿದ ನಂತರ ಎಲ್ಲವನ್ನು ಎದುರಿಸಿ ಜೀವಿಸಲು ಮನಸ್ಸಾಗುತ್ತಿದೆ' ಎಂದು. ಆ ಕ್ಷಣಕ್ಕೆ ಅನ್ನಿಸಿತು, ಈ ಸಾಲುಗಳನ್ನು ಬರೆದ ಕವಿ ನಿಜಕ್ಕೂ ಧನ್ಯರೆಂದು. ಆ ಕವಿ ಮತ್ತಾರೂ ಆಗಿರದೆ ನಮ್ಮೆಲ್ಲರ ಮೆಚ್ಚಿನ ಡಾ|| ದೊಡ್ಡರಂಗೇಗೌಡ ಅವರು.

ಡಾ|| ದೊ.ರಂ.ಗೌಡರವರು ರಚಿಸುವ ಗೀತೆಗಳು ಅತಿ ಸರಳ ಹಾಗೂ ನೈಜತೆಗೆ ಅತಿ ಹತ್ತಿರವಾದಂಥವುಗಳು. ಅತ್ಯಂತ ಸರಳ ಮನಸ್ಸಿನ ವ್ಯಕ್ತಿಯಾದ ದೊ.ರಂ.ಗೌಡರವರು ಆ ಸರಳತೆಯನ್ನು ತಮ್ಮ ಭಾವಗೀತೆಗಳಲ್ಲೂ ಎತ್ತಿ ಹಿಡಿದಿದ್ದಾರೆ. ಹೀಗಾಗಿ ಆ ಗೀತೆಗಳನ್ನು ಹಾಡುವಾಗ, ಯಾರೇ ಆಗಿರಲಿ ಸ್ವತಃ ಅನುಭವಿಸಿ ಹಾಡುವಂತಾಗುತ್ತದೆ.

ಉದಾ :- ನಾನು ಕಂಡ ಮೊದಲ ದೇವತೆ
ಅಮ್ಮ ನೀನೇ
ನಿನ್ನ ರೂಪು ಹೊನ್ನ ಹಣತೆ
ನನ್ನ ಬೆಳಕೂ ನೀನೇ!

ನೂರು ನೋವ ಸಹಿಸಿ ಕೂಡ ನನ್ನ ಸಲಹಿ ನೀನು
ಧರೆಯ ಮೇಲೆ ಸ್ವರ್ಗವನ್ನು ತೋರಿಸಿರುವೆ ನೀನು....

ತಾಯ ಮೇಲಿನ ಪ್ರೇಮವನ್ನು ಬಿಂಬಿಸುವ ಈ ಕವಿತೆ ತಾಯಿಯನ್ನು ಪ್ರೀತಿಸುವ ಎಲ್ಲರಿಗೂ ಪ್ರಿಯವಾಗುತ್ತದೆ.

ಪ್ರಕೃತಿ ಪ್ರಿಯರಾದ ಕವಿಯ ಗೀತೆಗಳಲ್ಲಿ ಆ ಸ್ವರೂಪ ಎದ್ದು ಕಾಣುತ್ತದೆ :-

ಅಸೀಮರೂಪಿ ಅಂಬರದಾಗೆ ಮುಂಗಾರು ಮೂಡಿದೆ.
ವಸುಂಧರೆಯ ಹೂಮೈಯಲ್ಲಿ ಹೊನ್ನಾರು ಹೂಡಿದೆ
ಮಸೆವ ಬಿಸಿಲು ಮಾಗಿರುವಲ್ಲಿ ಮಂದಹಾಸ ಕೂಡಿದೆ
ಹಸಿದ ರೈತ ಸಂಕುಲದಲ್ಲಿ ಹೊಸ ಆಸೆ ಹಾಡಿದೆ.

ಪ್ರಕೃತಿ ಮಾತೆಯ ಸೌಂದರ್ಯವನ್ನು ವರ್ಣಿಸುತ್ತಾ ಮಾನವತೆಗೆ ಹತ್ತಿರವಾಗುವಂಥಾ ಸಾಲನ್ನು ಸೇರಿಸಿ ಹೆಣೆಯುವ ಜಾಣ್ಮೆ ಕವಿಯ ಲೇಖನಿಗಿದೆ. ಕವಿಯ ಪ್ರತಿಯೊಂದು ಗೀತೆಯಲ್ಲೂ ನಿಸರ್ಗದ ಮೇಲಿನ ಪ್ರೇಮದ ಸುಳುಹು ಕಂಡುಬರುತ್ತದೆ. ಹಾಗೆಯೇ ಹಳ್ಳಿಯ ಪರಿಸರದ ವರ್ಣನೆ, ಮತ್ತು ಭಾಷೆಯ ಸೊಗಡು, ನಮ್ಮ ಜನಪದ ಮಣ್ಣಿನ ಸಮೀಪಕ್ಕೆ ನಮ್ಮ ಮನಸ್ಸನ್ನು ಕೊಂಡೊಯ್ಯುವಲ್ಲಿ ಸಫಲವಾಗುತ್ತದೆ.

ಕೋಗಿಲೆ ಕೂಗುತಾವೋ
ನವ್ವಾಲೆ ಕುಣಿಯುತಾವೋ
ಮುಂಗಾರು ಬರುವಾಗ
ತಂಗಾಳಿ ತರುವಾಗ
ತೆಂಗೆಲ್ಲಾ ತೂಗುತಾವೋ

ಕೆಲವೊಮ್ಮೆ ಸಾಧಾರಣವೆನಿಸುವ ಈ ವಸ್ತು ಸಂಗತಿಗಳು ಕವಿಮನಸ್ಸಿನಿಂದ ನೋಡುವಾಗ ಬೇರೆಯೇ ರೀತಿಯದಾಗಿ ಕಾಣುತ್ತವೆ. ವಿಶಿಷ್ಟ ಹೊಳಪನ್ನು ಪಡೆದು ಪ್ರಕಾಶಿಸುತ್ತವೆ. ಸಾಮಾನ್ಯ

ಸಂಗತಿಗೆ ರಂಗಿನ ರಂಗೋಲೆ ತುಂಬಿ, ವರ್ಣಗಳ ಪಾಕದೊಂದಿಗೆ ಹದವಾಗಿಸಿ ಈ ಕಾವ್ಯ ಜಗತ್ತಿಗೆ ಉಣಬಡಿಸುವ ಕವಿಯ ಶ್ರೇಷ್ಠ ವಿಚಾರಧಾರೆ ಮೆಚ್ಚುವಂಥಹದು.

ಅಂದೆನ್ನ ಒಡಲು ಹೂ ಹಸಿರ ಮಡಿಲು
ಇಂದೇಕೆ ಬರಡು ಹೀಗೆ?
ಕಬ್ಬಿಣದ ಮನುಜ ತಾಯಿ ಮರೆತನೇಕೆ?
ಬೀಳಾಯಿತೆ ಮನವು?

ಮೇಲಿನ ಸಾಲುಗಳು ಡಾ॥ ದೊ.ರಂ. ಗೌಡರವರ ಪ್ರಕೃತಿ ಪ್ರೇಮಕ್ಕೆ ಹಿಡಿದ ಕನ್ನಡಿಯಂತಿವೆ. ಇಲ್ಲಿ ವನದೇವತೆ ಮಾನವನ ದೌರ್ಜನ್ಯಕ್ಕೆ ದುಃಖಿಸುತ್ತಾ ತನ್ನ ಅಳಲನ್ನು ತೋಡಿಕೊಳ್ಳುತ್ತಿದ್ದಾಳೆ. ಹಳ್ಳಿಯಲ್ಲಿಯೆ ಹುಟ್ಟಿ ಬೆಳೆದ ಕವಿ ಸಹಜವಾಗೇ ತನ್ನ ಸುತ್ತಲಿನ ಪರಿಸರದಲ್ಲಿಯೇ ಒಂದು ಸುಂದರ ಜಗತ್ತನ್ನು ಕಾಣುತ್ತಾನೆ. ಹೊಲ ಗದ್ದೆ ನದಿ-ಹಳ್ಳ, ಪೈರು-ಪಚ್ಚೆ, ಹಕ್ಕಿಗಳ ಕಲರವ, ಚಿಟ್ಟೆಗಳ ಹೂವಿನಾಟ ಎಲ್ಲವೂ ಕವಿತೆಗೆ ವಸ್ತುವಾಗುತ್ತವೆ. ನಂತರದ ಕೆಲವು ಕವಿತೆಗಳಲ್ಲಿ ಕವಿ ತನ್ನ ಕ್ರಾಂತಿಕಾರೀ ಮನಸ್ಸನ್ನೂ ತೆರೆದಿಡುತ್ತಾರೆ....

ಅತ್ತ ಅನ್ಯಾಯ ಸಂತೆ-
ಇತ್ತ ಕವುದಿ ಕಂತೆ,
ಮೂಲೆಯಲಿ ಸೊಪ್ಪಿನ ಬೊಂತೆ
ಇದು 'ದೇಶದ ಪ್ರಗತಿ'ಯಂತೆ!

ವಸ್ತು ಸ್ಥಿತಿಯಲ್ಲಿ ಪ್ರಪಂಚದಲ್ಲಿ ನಡೆಯುತ್ತಿರುವ ಅನ್ಯಾಯಗಳ ಬಗ್ಗೆ ಒಂದು ನೋವಿನ ಕೂಗಿದು.

ಡಾ॥ ದೊ.ರಂ.ಗೌಡರವರ ಕವನಗಳಲ್ಲಿ ಅನುಕರಣೆಯ ಸುಳುಹು ಕಾಣುವುದಿಲ್ಲ. ನೈಜತೆಗೆ ಹತ್ತಿರವಾಗಿ, ಸ್ವಂತಿಕೆಯ ಜೀವಂತಿಕೆಯೊಂದಿಗೆ ಸಹೃದಯರ ಮನಸ್ಸಿನಲ್ಲಿ ಚಿರವಾಗಿ ನಿಲ್ಲುವಂತಹ ದನಿಯಿದೆ ಈ ಕವಿತೆಗಳಲ್ಲಿ

ನನ್ನ ಕವಿತೆಗಳು, ಕವಿತೆಗಳಲ್ಲ
ಅಂತರಾತ್ಮದ ಸರಿತೆಗಳು.
ನನ್ನ ಕವಿತೆಗಳು, ಕವಿತೆಗಳಲ್ಲ
ವಾಗ್ದೇವಿಯ ಚರಿತೆಗಳು

ಹೀಗೆ ಹೇಳುತ್ತಾ ತಮ್ಮ ಶಕ್ತಿಯನ್ನೆಲ್ಲಾ ತಾಯಿ ಶಾರದಾಂಬೆಗೆ ಅರ್ಪಿಸುವ ಕವಿಯ ಮನಸ್ಸೇ ಧನ್ಯ.

ನಾಡು ನುಡಿಯ ಬಗ್ಗೆ ಕವಿಯ ಅಭಿಮಾನ ಕಮ್ಮಿಯದೇನಲ್ಲ:-

ಮುರುಳಿ ನುಡಿಸಿದಂತೆ-ಮೋಹನ
ಗಾನ ಹರಿಸಿದಂತೆ;
ಐದು ಕೋಟಿ ಜನರೆದೆಯ ಸುಸ್ವರ
ತಾಯಿ ಭುವನೇಶ್ವರಿ ನೀಡಿದೆ ಸಿರಿವರ
ಮಧುರ ಮಧುರ ಕನ್ನಡ
ಹಾಡಿ, ಅಮ್ಮನ ಸಂಗಡ

ಕನ್ನಡಿಗರ ಸುಪ್ತ ಚೇತನವನ್ನು ಬಡಿದೆಬ್ಬಿಸಿ, ನಾಡು ನುಡಿಯ ಬಗೆಗಿನ ಕಾಳಜಿಯನ್ನು ಹೊಮ್ಮಿಸುವ ಈ ಗೀತೆ, ಅಭಿಮಾನಿಗಳ ಹೃದಯವನ್ನು ಸೆರೆ ಹಿಡಿಯುವಂತಿದೆ. ಡಾ|| ದೊಡ್ಡರಂಗೇಗೌಡರವರ ಕವಿತೆಗಳು ಕ್ಲೀಶೆ-ಕ್ಲಿಷ್ಟತೆಗಳಿಂದ ದೂರವಾಗುಳಿದದ್ದು, ಸರಳವಾಗಿ, ಸುಲಭವಾಗಿ, ಭಾವಕ್ಕೆ ತಕ್ಕಂತೆ ರೂಪುಗೊಂಡು, ಶ್ರೀ ಸಾಮಾನ್ಯನ ಬಾಳಲಹರಿಗೆ ಅತಿಹತ್ತಿರವಾದ ಭಾವಗೀತೆಗಳಾಗಿವೆ. ಈ ಗೀತೆಗಳು ಕವಿಯಿಂದ ರಚಿತವಾದವುಗಳಾದರೂ, ಹಾಡುವಾಗ ತಮ್ಮನ್ನು ಕುರಿತೇ ಬರೆದವುಗಳೇನೋ ಎಂಬ ಭ್ರಮೆ ಹುಟ್ಟಿಸುತ್ತವೆ, ಮನಸ್ಸಿಗೆ ಹತ್ತಿರವಾಗುವ ಪದಪುಂಜಗಳ ಜೋಡಣೆ ಆ ರೀತಿಯದಾಗಿರುತ್ತವೆ.

ಜೀವ ಜೀವದ ಮಧುರ ಮಿಲನ
ಸ್ನೇಹದ ಬಂಧನ,
ಹಾಲು ಜೇನಿನ ಸವಿ ಬೆರೆತಂತೆಯೇ
ಸ್ನೇಹಕ್ಕೆ ಇನಿದು ಗುಣ!

ಮತ್ತೊಮ್ಮೆ ಕವಿ ನುಡಿಯುತ್ತಾರೆ:-

ನನ್ನ ಬಾಳ ದೇಗುಲಕೆ ನೀನೇ ರೂವಾರಿ
ರಮ್ಯ ಪ್ರೇಮ ನಂದನದ ನಾಟ್ಯ ಮಯೂರಿ....

ನನ್ನೆದೆಯ ತುಡಿತವೇ ನೀನಾಗಿಹೆ
ನಿನ್ನೆದೆಯ ಬಡಿತವೇ ನಾನಾಗಿಹೆ....

ಅನುರಾಗದ ಹಕ್ಕಿ ಕೂಗಿ-
ಹಾರಾಡಿದೆ ಎಲ್ಲೆ ಮೀರಿ,
ಸಂತೋಷದ ರೆಕ್ಕೆ ತೂಗಿ-
ತೇಲಾಡಿದೆ ಬಾನಿಗೇರಿ....

ನನ್ನಾಸೆಗಳ ಒಂದೂ ಬಿಡದೆ-
ನಿನ್ನ ಬಳಿಯೇ ಹೇಳೋ ಬಯಕೆ;
ನನ್ನೀ ಹೃದಯ ಕೂಗಿ ಮೊರೆವ-
ಈ ಭಾವಗಳ ಹಾಡೋ ಬಯಕೆ.

ಈ ಮೇಲಿನ ಕವಿತೆಗಳ ಕೆಲವು ಸಾಲುಗಳನ್ನು ಕಂಡಾಗ ಕವಿಯ ಮನಸ್ಸಿನ ಪ್ರೇಮದ ಪರಿಯ ಅರಿವಾಗುತ್ತದೆ. ಚೈತ್ರಮಾಸದಲ್ಲಿ ಕೋಗಿಲೆಯಂತೆ ನಲಿವ, ವಸಂತದಂತೆ ಸಂಭ್ರಮಿಸುವ ಮನ ಆಷಾಢದಲ್ಲಿ ವಿರಹದ ಬೇಗೆಯಿಂದ ಬಳಲುತ್ತವೆ...

ಆಷಾಢ ಮಾಸ ಯಾಕೆ ಬಂತೊ?
ಭೂಮಿಯಾ... ಮ್ಯಾಗೆ...?
ವಿರಹದ ಬೆಂಕಿಯ ತಾಪವೋ
ಎಂದು ಬರುವೆಯೋ
ಕಾದ ಕಣ್ಣು ಸೊರಗಿತೋ!

ವಿರಹದ ಬೇಗೆಯಲಿ ತಾಳದೆ ಮನದ ತಾಪ
ನೆನಪಿನ ಲೋಕದಲಿ ಕಾಡಿದೆ ನಿನ್ನ ರೂಪ

ನಿನ್ನ ಬಿಟ್ಟು ಬದುಕೆಲ್ಲೈತೆ ಎದೆಯಾಗೆ ಬೆಂಕಿ
ಚೀರುತೈತೆ ಪ್ರೀತಿ ಹಕ್ಕಿ ನಿನ್ನನ್ನೇ ಕೂಗಿ

ಹೀಗೆಂದು ವಿರಹದ ಬಗೆ ಬಗೆಯನ್ನೂ ತೆರೆದಿಟ್ಟು ಕಡೆಗೆ ಹೀಗೆ ನುಡಿಯುತ್ತಾರೆ:-

ಶ್ರಾವಣಕೆ ಪೂರಾ ಹಿಗ್ಗಿ
ವೈಶಾಖ ಬರಲು ಕುಗ್ಗಿ
ನೂರು ನೋವು ಕಂಡೆ
ನೋವಲ್ಲೂ ನಲಿವನ್ನುಂಡೆ.

ಡಾ|| ದೊ.ರಂ.ಗೌಡರವರ ಹಲವಾರು ಭಾವಗೀತೆಗಳು, ಚಿತ್ರದಲ್ಲಿ ಅಳವಡಿಸಿ, ಚಲನಚಿತ್ರಗೀತೆಗಳಾಗಿ ಜನರ ಮನಸ್ಸಿನಲ್ಲಿ ಇಂದಿಗೂ ಅಚ್ಚಳಿಯದೆ ಉಳಿದಿವೆ. ನಾಡಿನ ಹೆಸರಾಂತ ಸುಗಮ ಸಂಗೀತ ಕಲಾವಿದರು ಗೌಡರ ಭಾವಗೀತೆಗಳನ್ನು ಹಾಡಿ, ನಾಡಿನ ಮೂಲೆ ಮೂಲೆಗೂ ಅವುಗಳ ಕಂಪನ್ನು ಹರಡಿದ್ದಾರೆ.

ಗೌಡರು ಬರೀ ಕವಿಯಷ್ಟೇ ಆಗಿರದೆ ಸ್ವತಃ ಗಾಯಕರೂ ಆಗಿದ್ದಾರೆ.

ರಾಗಮುಖೀ....ರಾಗಮುಖೀ
ನೀನೆ ನನ್ನ ಬಾಳ ಸಖೀ!
ಜ್ಞಾನಮುಖೀ...ಧ್ಯಾನ ಮುಖೀ
ನೀನಾಗು ನಲ್ಮೆ ಕಾವ್ಯಮುಖಿ!

ಈ ಮೇಲಿನ ಅವರ ಕವನವನ್ನು ಅವರ ಧ್ವನಿಯಿಂದಲೇ ಮಧುರವಾಗಿ ಕೇಳಿದ ಭಾಗ್ಯವೂ ನನ್ನದಾಗಿದೆ.

ಕಡೆಯಲ್ಲಿ, ಡಾ|| ದೊ.ರಂ.ಗೌಡರವರ ಹಾಗೂ ನನ್ನ ಸಹೋದರ ಜಿ.ವಿ. ಅತ್ರಿಯ ಸ್ನೇಹದ ಕಂಪನ್ನು ಬೀರುವ ಕುರುಹಾಗಿ ಇರುವ ಗೀತೆ, ಅತ್ರಿ ತನ್ನ ಎಲ್ಲಾ ಕಾರ್ಯಕ್ರಮದಲ್ಲೂ ತಪ್ಪದೆ ಹಾಡುತ್ತಿದ್ದ ಈ ಮಂಗಳಗೀತೆಯೊಂದಿಗೆ ನನ್ನೀ ತೊದಲ್ನುಡಿಗಳನ್ನು ನಿಲ್ಲಿಸುತ್ತಿದ್ದೇನೆ.

ತಾಯಿ ಪೃಥ್ವಿ

ಕಾಡ ಹಕ್ಕಿಗಳೆ ನಿಮ್ಮ ಚಿಲಿಪಿಲಿಯು
ಮೇಳವಾಯ್ತು ಧರೆಗೆ,
ಹೀಗೆ ಹಾಡುತಿರಿ....ಹಾಡಿ ಹರಸುತಿರಿ
ಮಂಗಳವಾಗಲಿ ತಾಯಿಗೆ!

ಹುಟ್ಟಿ ಸಾಯುವ ಮಣ್ಣ ಮನುಜರೇ
ಭಾರವಾಗದಿರಿ ತಾಯಿಗೇ!
ಮಂಗಳವಾಗಲಿ ತಾಯಿಗೇ!





# ತಂಗಾಳಿಯ ತಂಪು

● ಮಂಜುಳ ಗುರುರಾಜ್

1980-81ರಲ್ಲಿ, ಆಗಷ್ಟೇ ನನ್ನ ಮದುವೆಯಾಗಿ ವರ್ಷವಾಗಿತ್ತು. ನಮಗೆ, ನನ್ನ ಪತಿ ಒಂದು ಪುಸ್ತಕ ನೀಡಿ, ಧ್ವನಿಸುರಳಿ ಮಾಡಬೇಕು, 8-10 ಕವನಗಳಿಗೆ ರಾಗ ಸಂಯೋಜಿಸಿ, ಹಾಡಬೇಕು ಎಂದು ಹೇಳಿದರು; ನಾನು ಕವನಗಳತ್ತ ಕಣ್ಣು ಹಾಯಿಸಿದೆ, ಎಷ್ಟು ಸರಳ, ಸುಂದರ ಸಾಲುಗಳು ನೇರವಾಗಿ ಹೃದಯ ನಾಟಿ, ಸ್ಪಂದಿಸಿತು. ನನಗೇ ಅರಿವಿಲ್ಲದಂತೆ ಸುಲಲಿತವಾಗಿ, ಸರಾಗವಾಗಿ ನನ್ನ ಕಲ್ಪನೆಯಿಂದ ಆ ಸಾಲುಗಳಿಗೆ ರಾಗ, ಭಾವಗಳು ಮೂಡತೊಡಗಿದವು, ಕೇವಲ 5/6 ಘಂಟೆಗಳಲ್ಲಿ.

ಹತ್ತು ಹಾಡುಗಳು ಸಿದ್ಧವಾಗಿಬಿಟ್ಟವು, ಯಾರದ್ದು ರೀ ಈ ಕವನಗಳು''- ಗ್ರಾಮ್ಯ ಶೈಲಿ, ವಿಶೇಷ ಪದಗಳ ಬಳಕೆ ಎಷ್ಟು ಚೆನ್ನಾಗಿದೆ ಎಂದು ನನ್ನ ಪತಿಯವರನ್ನು ಕೇಳಿದೆ. ಅವರು ಹೇಳಿದ ಹೆಸರೂ ಕೂಡಾ ಬಹಳ ಪ್ರಿಯವೆನಿಸಿತು, ಅವರೇ ಕವಿ ''ದೊಡ್ಡ ರಂಗೇಗೌಡ''. ಹೀಗೆ, ಅವರ ಮುಖ ಪರಿಚಯವಾಗುವ ಮುಂಚೆಯೇ ಅವರ ಕವನಗಳ ಪರಿಚಯವೆನಗಾಯ್ತು. ಅದೇ, ನಾನು, ಸ್ವರ ಸಂಯೋಜಿಸಿದ ಮೊಟ್ಟಮೊದಲ ಭಾವಗೀತೆಗಳ ಧ್ವನಿಸುರುಳಿ ''ತಂಗಾಳಿ''. ಬೆಂಗಳೂರಿನ ಪ್ರಸಿದ್ಧ 'ವಿಕ್ರಂ' ಎಂಟರ್‌ಪ್ರೈಸಸ್ ಕಂಪನಿಯವರು ಇದನ್ನು ತಯಾರಿಸಿದವರು. ಇದರ ಧ್ವನಿಮುದ್ರಣಕ್ಕಾಗಿ ಮದರಾಸಿಗೆ ಹೋದೆವು. ಆಗ ಮೊಟ್ಟಮೊದಲಬಾರಿಗೆ ನಾನು ''ದೊಡ್ಡರಂಗೇಗೌಡ'' ಅವರನ್ನು ನೋಡುವ ಅವಕಾಶವಾಯ್ತು. ಅವರ ಕವನಗಳಲ್ಲಿ ಪ್ರತಿಬಿಂಬಿಸುವ ಗ್ರಾಮೀಣ ಸೊಗಡಿನ ಮುಗ್ಧತೆಯ ಅವರ ಮುಖ, ನಡೆ, ನುಡಿಯಲ್ಲಿನ ನಯ, ವಿನಯ, ಈ ವಿಶೇಷಗುಣಗಳೆಲ್ಲ ಅವರನ್ನು ಬಹಳ ಆತ್ಮೀಯವನ್ನಾಗಿಸಿದವು. ಇಂದಿಗೂ ಅದೇ ವಿಶೇಷತೆಯನ್ನು, ಇಷ್ಟು ಕೀರ್ತಿ ಶಿಖರವೇರಿದ್ದರೂ ಅವರಲ್ಲಿ ಕಾಣುತ್ತಿದ್ದೇನೆ. ಅದೇ ಆತ್ಮೀಯತೆ, ಅದೇ ಮುಗ್ಧ ನಗು, ಮೆಲು ಮಾತಿನಲ್ಲೇ ತಮ್ಮ ಅನಿಸಿಕೆಯನ್ನು ನೇರವಾಗಿ, ದಿಟ್ಟವಾಗಿ ಹೇಳುವ ರೀತಿ, ಇವೆಲ್ಲವೂ-ಅವರ ಜೊತೆಯಲ್ಲೇ ಬೆಳೆದು ಬಂದಿದೆ.

ಚಲನಚಿತ್ರ ಜಗತ್ತಿನಲ್ಲಿ ನಾವಿಬ್ಬರೂ ಆಗಾಗ ಭೇಟಿಯಾಗುತ್ತಿದ್ದೆವು. ಎಲ್ಲರಿಗೂ ತಿಳಿದಿರುವಂತೆ, ಈ ಚಿತ್ರರಂಗವೆಂಬ ಮಾಯಾಲೋಕದಲ್ಲಿ ಟೆನ್ಷನ್‌ಗಳೇ ಜಾಸ್ತಿ. ಗೀತರಚನಕಾರರಿಗಂತೂ ಅತ್ಯಂತ ಸಹನೆ, ಸಂಯಮ ಪರೀಕ್ಷೆಗಳು. ಆಗೆಲ್ಲ ಸಂಗೀತ ಸಂಯೋಜನೆ ವೇಳೆಯಲ್ಲಿ ಗಾಯಕರುಗಳೂ ಇರುತ್ತಿದ್ದೆವು. ಎಲ್ಲರೂ ಒಟ್ಟಿಗೆ, ಅಂದರೆ, ಸಂಗೀತ ನಿರ್ದೇಶಕ, ಗೀತರಚನಕಾರ, ಚಿತ್ರ ನಿರ್ದೇಶಕ, ಕ್ಯಾಮೆರಾಮೆನ್‌ಗಳೂ, ಗಾಯಕರೂ, ಒಂದು ಹಾಡು ಪೂರ್ಣವಾಗಿ ರೂಪುಗೊಳ್ಳುವವರೆಗೂ ಚರ್ಚೆಗಳಿರುತ್ತಿದ್ದವು. ಎಷ್ಟೋಸಲ ಒಂದು ಪಲ್ಲವಿ, ಅಂದರೆ ಹಾಡಿನ ಆರಂಭದ ಸಾಲುಗಳನ್ನು 3-4 ಸಾಲುಗಳನ್ನು ಸುಮಾರು 20,25 ವಿವಿಧ ರೀತಿಯಲ್ಲಿ, ವಿಧ ವಿಧ ಪದಗಳ ಬಳಕೆಗಳನ್ನು ಕವಿಗಳು ಮಾಡಬೇಕಾಗಿತ್ತು. ಇಲ್ಲೇ ಗೀತರಚನಕಾರರ ನಿಜವಾದ ಪ್ರತಿಭೆ ಒರೆಗೆಹಚ್ಚಲ್ಪಡುತ್ತದೆ. ಇಷ್ಟೆಲ್ಲ ಬರೆದರೂ ಒಪ್ಪದೇ ಮತ್ತೆ ಹೊಸ ಸಾಲುಗಳನ್ನೂ ಕೇಳುತ್ತಾರೆ, ಅಥವಾ ಕೆಲವು ಸಲ, ಮೊಟ್ಟ ಮೊದಲು ಬರೆದ ಸಾಲುಗಳೇ ಇರಲಿ ಎಂದು (ಕಡೆಗೆ) ಆಯ್ಕೆಯಾದದ್ದೂ ಉಂಟು, ಇಂತಹ ಕ್ಲಿಷ್ಟ ಸಮಯಗಳಲ್ಲಿ ನಾನು ದೊ.ರಂ.ಗೌಡರನ್ನು ನೋಡಿರುವೆ. ಮೆಚ್ಚಿರುವೆ, ಕಾರಣ, ಎಂತಹ ಒತ್ತಡಗಳ ಸಮಯದಲ್ಲೂ ಆ ಸೌಮ್ಯತೆ, ಮೆಲುನಗು, ಸಹನೆ ಒಂದಿನಿತೂ ಮಾಸುತ್ತಿರಲಿಲ್ಲ. ಸ್ವರ ಸಂಯೋಜಕರಾಗಲೀ, ನಿರ್ದೇಶಕರಾಗಲೀ ಕೇಳಿದಷ್ಟು ಸಲವೂ ಹೊಸ ಹೊಸ ರೀತಿಯಲ್ಲಿ, ಹೊಸ ಹೊಸ ಪದಗಳ ಬಳಕೆ ಮಾಡುತ್ತಿದ್ದದ್ದು, ಅವರಲ್ಲಿನ ಶಬ್ದ ಭಂಡಾರಕ್ಕೆ ಸಾಕ್ಷಿ. ಅವರಲ್ಲಿನ ಸಂಯಮವನ್ನು ಸ್ವಲ್ಪ ಮಟ್ಟಿಗೆ ನಾನೂ ನನ್ನ ಜೀವನದಲ್ಲಿ ಅಳವಡಿಸಿಕೊಂಡಿರುವೆ ಎಂದರೆ ಉತ್ಪ್ರೇಕ್ಷೆ ಅಲ್ಲ.

ಇನ್ನು ಅವರ ಕುಟುಂಬದ ಬಗ್ಗೆ ಹೇಳಬೇಕೆಂದರೆ ಅದರಲ್ಲೂ ವಿಶೇಷತೆ. ಗಂಡ, ಹೆಂಡತಿ, ಮಗ, ಮಗಳು, ನಾಲ್ಕೂ ಜನ ಕನ್ನಡ ಉಪನ್ಯಾಸಕರಾಗಿ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದು. ಶ್ರೀಮತಿ, ಕೆ. ರಾಜೇಶ್ವರಿಯವರು ಇವರಿಗೆ ಅನುರೂಪ ಜೋಡಿ. ಇವರ ದಾಂಪತ್ಯವನ್ನು 1981ರಿಂದ ಬಲ್ಲೆ. ಒಬ್ಬರಿಗೊಬ್ಬರು, ತಮ್ಮ ಕೆಲಸಗಳಲ್ಲಿ, ಅದರಲ್ಲೂ ಸಾಹಿತ್ಯ ಕ್ಷೇತ್ರದಲ್ಲಿ ಎಷ್ಟು ಪೂರಕವಾಗಿರ್ತಾರೆ ಎಂದರೆ, ನಿಜವಾಗಲೂ ಇವರದು ''ಆದರ್ಶ ಜೋಡಿ''.

ನಮ್ಮ ಕವಿಗಳ ಮುಂದೆ ರಾಜೇಶ್ವರಿಯವರು ಸ್ವಲ್ಪ ಹೆಚ್ಚು ಮಾತುಗಾರ್ತಿ ಎನಿಸಿದರೂ, ತುಂಬಾ ಜ್ಞಾನಿ, ನಿರರ್ಗಳವಾಗಿ ಮಾತನಾಡಬಲ್ಲರೂ, ಒಳ್ಳೆಯ ಬರಹಗಾರ್ತಿ, ಅವರು ಬರೆದಿರುವ ''ಆದಿಚುಂಚನಗಿರಿ ಸಾಂಸ್ಕೃತಿಕ ಅಧ್ಯಯನ'' ಮೈಸೂರು ವಿ.ವಿ. ವಿಷಯಕ್ಕೆ ಡಾಕ್ಟರೇಟ್ ಕೂಡಾ ಪಡೆದಿದ್ದಾರೆ. ಇವರಿಬ್ಬರ ಮಗ ಶ್ರೀ ಭರತ್, ಕನ್ನಡದ ಅಧ್ಯಾಪಕರಾಗಿದ್ದೂ ತಂದೆಯಂತೆ ಚಿತ್ರರಂಗದಲ್ಲೂ ಗೀತರಚನಕಾರರಾಗಿ ಕೆಲಸ ಮಾಡುತ್ತಿದ್ದಾರೆ. ಇದೂ ಹೆಮ್ಮೆಯ ವಿಷಯ. ಮುದ್ದಿನ ಮಗಳು 'ಸ್ಮಿತಾ' ಕನ್ನಡ ಉಪನ್ಯಾಸಕಿಯಾಗಿದ್ದು, ಇಷ್ಟರಲ್ಲೇ ಹಸೆಮಣೆ ಏರುತ್ತಿದ್ದಾಳೆ.

ಹೀಗೆ ಇಡೀ ಕುಟುಂಬವೇ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ನಮ್ಮ ದೊಡ್ಡರಂಗೇಗೌಡರಿಗೆ ಸಾಕಷ್ಟು ಪ್ರಶಸ್ತಿ, ಪುರಸ್ಕಾರಗಳು ಬಂದಿದ್ದರೂ, ಅವರ ಪ್ರತಿಭೆಯನ್ನು ನಮ್ಮ ಕನ್ನಡ ಚಿತ್ರರಂಗ ಇನ್ನೂ ಉತ್ತಮ ರೀತಿಯಲ್ಲಿ ಬಳಸಿಕೊಳ್ಳಬಹುದಿತ್ತು ಅನ್ನಿಸದೇ ಇರದು.

60 ವರ್ಷಗಳ ಸಾರ್ಥಕ ಬದುಕು ನಡೆಸುತ್ತಿರುವ ಕವಿ ದೊಡ್ಡರಂಗೇಗೌಡರು ಹಾಗೂ ಅವರ ಕುಟುಂಬದವರಿಗೂ ಸಕಲ ಸನ್ಮಂಗಳವಾಗಲೆಂದೂ, ಕಲಾ ಕ್ಷೇತ್ರದಲ್ಲಿ ಕರ್ನಾಟಕದ ಕೀರ್ತಿಯನ್ನು ಮೆರೆಸಿ, ಅಂತಾರಾಷ್ಟ್ರೀಯ ಮಟ್ಟದಲ್ಲಿ, ಇನ್ನೂ ಹೆಚ್ಚು ಹೆಸರು ಮಾಡಿ ಎಲ್ಲರಿಗೂ ಆದರ್ಶವಾಗಲೆಂದು ಹೃತ್ಪೂರ್ವಕ ಹಾರೈಸುತ್ತೇನೆ.





# ಸ್ನೇಹಜೀವಿ

**• ಮನೋರಂಜನ್ ಪ್ರಭಾಕರ್**

ಶ್ರೀಯುತ ದೊಡ್ಡರಂಗೇಗೌಡರು ನನಗೆ ಬಹಳ ವರ್ಷಗಳಿಂದ ಪರಿಚಿತರು. ಅವರು ಎಸ್.ಎಲ್.ಎನ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಕಾಲದಲ್ಲಿ ನಾನು ಅವರಿಂದ ಗೀತೆಗಳನ್ನು ಬರೆಸುತ್ತಾ ಬಂದಿದ್ದೀನಿ. ತುಂಬ ಸರಳ ಮನುಷ್ಯ. ಸ್ನೇಹ ಪ್ರಿಯ. ಅವರ ಜೊತೆ ಸ್ವಲ್ಪ ಸಮಯ ಕಳೆದರೂ ಎಷ್ಟೋ ವರ್ಷದ ಸ್ನೇಹವಿರುವಂತೆ ಭಾಸವಾಗುತ್ತದೆ. ಜಾನಪದ ಶೈಲಿಯಲ್ಲಿ ಗೀತೆ ಬರೆಯಬೇಕೆಂದರೆ ಸಾಮಾನ್ಯವಾಗಿ ದೊಡ್ಡರಂಗೇಗೌಡರನ್ನು ಕರೆಸುತ್ತಿದ್ದರು. ಅಷ್ಟೊಂದು ಜನಪ್ರಿಯತೆಯನ್ನು ಪಡೆದುಕೊಂಡ ಕವಿ ಅವರು. ನನ್ನ ಜೊತೆಗೆ ಅವರು ಸಾಕ್ಷ್ಯಚಿತ್ರಗಳಿಗೆ, ಚಲನಚಿತ್ರಗಳಿಗೆ ಹಾಗೂ ಕೆಸೆಟ್‌ಗಳಿಗೆ ಗೀತೆಗಳನ್ನು ಬರೆದಿದ್ದಾರೆ. ಒಂದು ರಾಗವನ್ನು ಕೊಟ್ಟರೆ, ಆ ರಾಗಕ್ಕೆ ಗೌಡರು ಒಂದು ಪಲ್ಲವಿಯನ್ನು ಕೊಡುತ್ತಿರಲಿಲ್ಲ. ಐದಾರು ಪಲ್ಲವಿಗಳನ್ನು ಕೊಡುತ್ತಿದ್ದರು. ಹೆಚ್ಚು ಸೂಕ್ತವೆನಿಸಿದ್ದನ್ನು ನಾವು ಆರಿಸಿಕೊಳ್ಳುತ್ತಿದ್ದೆವು. ಗೌಡರ ಜೊತೆ ವಾಗ್ವಾದ ಸಾಧ್ಯ. ಎಂದೂ ಅವರೂ ತಮ್ಮ ಸಹನೆಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಪದಗಳು, ಶಬ್ದಗಳು ಅವರಲ್ಲಿ ಪುನರಾವರ್ತನೆಗೊಂಡರೂ ಅವು ವಿಶಿಷ್ಟ ಸಂದರ್ಭವನ್ನು ಸೂಚಿಸುತ್ತಿದ್ದವು. ಅಂತಹ ವಾತಾವರಣವನ್ನು ಗೌಡರು ನಿರ್ಮಿಸುತ್ತಿದ್ದರು.

ದೊಡ್ಡರಂಗೇಗೌಡರು ನನಗೆ ಪರಿಚಯವಾದದ್ದು ನಾನು ಹೆಸರಾಂತ ಸಂಗೀತ ನಿರ್ದೇಶಕರ ಬಳಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದಾಗ. ಅಧ್ಯಾಪಕರಲ್ಲಿ ಇರುತ್ತಿದ್ದ ಗತ್ತು ಇವರಲ್ಲಿ ಇರುತ್ತಿರಲಿಲ್ಲ. ಬದಲಿಗೆ ಒಬ್ಬ ಸೌಜನ್ಯ ವಿದ್ಯಾರ್ಥಿಗೆ ಇರುವಂಥ ವಿನಯತೆ ಇವರಲ್ಲಿತ್ತು. ಈ ಗುಣ ಬಹಳ ಅಪರೂಪದ ಗುಣ. ಹೀಗಾಗಿಯೇ ಅವರು ನನಗೆ ಹತ್ತಿರವಾದರು. ಇನ್ನೊಂದು ವಿಷಯವೆಂದರೆ ಗೌಡರ ಬಗ್ಗೆ ಯಾರನ್ನೇ ಕೇಳಿದರೂ ಅವರಿಂದ ಬರುವ ಉತ್ತರ ನಾನು ಮೇಲೆ ಹೇಳಿರುವ ಉತ್ತರವೆ! ಅಂದಮೇಲೆ ಗೌಡರು **'ಅಜಾತಶತ್ರು'!** ಹಲವಾರು ಚಿತ್ರಗಳಲ್ಲಿ ನಾವು ಒಟ್ಟಿಗೆ ಕೆಲಸಮಾಡಿದೆವು. ತಾತ್ವಿಕವಾಗಿ ನಾನು ಅವರು ಕೆಲವು ಸಂದರ್ಭದಲ್ಲಿ 'ಜಗಳ' ಆಡಿರುವುದೂ ಉಂಟು! ಆದರೆ ಆ ಘಳಿಗೆ ಕಳೆದ ನಂತರ ನಾವು ಸ್ನೇಹಿತರಾಗಿಬಿಡುತ್ತಿದ್ದೆವು.

ನನಗೆ ಅವರು ಎಷ್ಟು ಹಿಡಿಸಿಬಿಟ್ಟಿದ್ದರು ಎಂದರೆ ಅವರ ಕವನಗಳನ್ನು ಬಳಸಿಕೊಂಡು ಧ್ವನಿ ಸುರುಳಿಯೊಂದನ್ನು ತರಬೇಕೆಂಬ ಹಂಬಲವಿತ್ತು. ನನ್ನ ಆಸೆಯನ್ನು ಅವರ ಮುಂದೆ ಹೇಳಿಕೊಂಡೆ. ಅವರು ತುಂಬು ಪ್ರೀತಿಯಿಂದ ಒಪ್ಪಿಕೊಂಡು ಅದ್ಭುತವಾದ ಎಂಟು ಹಾಡುಗಳನ್ನು ಬರೆದುಕೊಟ್ಟರು. ನನ್ನ ಪಾಲಿಗೆ ಅದು ಎಂಟು ರತ್ನಗಳು! ಇವುಗಳಲ್ಲಿ ಒಂದು ಕವನ ನನಗೆ ಅತ್ಯಂತ ಪ್ರಿಯವಾದದ್ದು. ಮನುಷ್ಯನ ಹುಟ್ಟಿನಿಂದ ಸಾವಿನತನಕ ನಡೆಯುವ ಪ್ರಕೃತಿ ಸಹಜವಾದ ಕ್ರಿಯೆಯನ್ನು ಕುರಿತು ಬರೆದಿದ್ದಾರೆ.

> ''ಯಾರ್ಯಾರ ಬಾಳು ಎಲ್ಲಿ ಬರದೈತೋ ಕಂಡೋರ್ಯಾರಯ್ಯ
> ಎಲ್ಲೋ ಹುಟ್ಟಿ ಎಲ್ಲೋ ಬೆಳೆದು ಎಲ್ಲೋ ಜೊತೆಗೂಡಿ
> ಮರೆಯಾಗ್ತೀವಯ್ಯ''....

ಈ ಗೀತೆ ಇಂದಿಗೂ ಜನಪ್ರಿಯತೆಯನ್ನು ಹೊಂದಿದೆ. ಮೆಲುಕು ಹಾಕುವಂತಿದೆ. ಗೀತೆ ಚೆನ್ನಾಗಿದ್ದರೆ ರಾಗಸಂಯೋಜನೆಯು ಚೆನ್ನಾಗಿರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಗೀತೆ ಚೆನ್ನಾಗಿಲ್ಲದಿದ್ದರೂ ರಾಗ ಸಂಯೋಜನೆಯಿಂದ ಜನಪ್ರಿಯವಾಗುತ್ತದೆ. ಆದರೆ ಗೌಡರು ಒಳ್ಳೆಯ ಗೀತೆ ಬರೆದಿದ್ದರಿಂದಲೆ ಮೇಲಿನ ಹಾಡು ಜನಪ್ರಿಯತೆ ಹೊಂದಿರುವುದು. ಇದು ಕೇವಲ ಒಂದು ಉದಾಹರಣೆ ಮಾತ್ರ. ಅಂದಿನಿಂದ ಇಂದಿನವರೆವಿಗೂ ಗೌಡರು ನನ್ನ ಸಂಗೀತ ನಿರ್ದೇಶನದ ಧ್ವನಿ ಸುರುಳಿಗಳಿಗೆ, ಚಲನಚಿತ್ರಗಳಿಗೆ, ಟಿವಿ ಧಾರಾವಾಹಿಗಳಿಗೆ ತಮ್ಮ ಸಾಹಿತ್ಯವನ್ನು ನೀಡುತ್ತಾ ಬಂದಿದ್ದಾರೆ. 'ಸ್ನೇಹಜೀವಿ', 'ಹಸನ್ಮುಖಿ', 'ರಾಜಕೀಯ ಇಲ್ಲ' ಇವು ಗೌಡರ ವಿಶೇಷಗುಣಗಳು. ಯಾರಿಗೆ ಆದರೂ ಇವರ ಸ್ವಭಾವ ಮಾದರಿಯಾಗುವಂಥದು.

❑



# ಚೈತ್ರದ ಹೂವು

• ಬಿ.ವಿ. ಶ್ರೀನಿವಾಸ್

ಕವಿಯಾಗುವುದು ಕೋಟಿ ಜನ್ಮದ ತಪಸು
ನನದೋ ಬರೀ ಕನಸು ಆಗುವುದೆ ನನಸು?
ಹಾಗಾಗದಿದ್ದರೂ!
ಕವಿಗಳೊಡನಾಟ ಎಂಥಾ ಸೊಗಸು
ಅದಕಾಗಿ ಬಯಸುವುದು ನನ್ನ ಒಳಮನಸು

ಕವಿ ಶ್ರೀ ದೊಡ್ಡರಂಗೇಗೌಡರ ಬಗ್ಗೆ ನನ್ನ ಪ್ರೀತಿಯ ಅನುಭವಗಳನ್ನು ಬರೆಯಲು ಕುಳಿತಾಗಲಷ್ಟೇ ನನಗೆ ಅರಿವಾದುದು ಬರೆಯುವುದು ಎಷ್ಟು ಕಷ್ಟವೆಂದು. ಮನದ ಭಾವನೆಗಳನ್ನು ಕವಿಗಳಂತೆ ಲೇಖನಿಯಲ್ಲಿ ಮೂಡಿಸಲಾದೀತೆ? ನನ್ನ ತೊದಲು ಬರವಣಿಗೆಯನ್ನು, ಅದಲು ಬದಲಾಗುವ ಭಾವನೆಗಳ ವಾಕ್ಯಗಳನ್ನು ಅರಿತು ಓದುವ ಪಂಡಿತರಿಗೆ, ಬರೆಯಲು ನನಗೆ ಅವಕಾಶವಿತ್ತ ನೆಚ್ಚಿನ ಸತ್ಯರವರಿಗೆ ನನ್ನ ಮೊದಲ ನಮನ.

ತುಂಬಾ ವರ್ಷದ ಹಿಂದೆ ನಾನು ಶ್ರೀಮತಿ ಬಿ.ಕೆ. ಸುಮಿತ್ರಾರವರ ಜೊತೆ ಶ್ರೀ ದೊಡ್ಡರಂಗೇಗೌಡರ ಕವಿತೆಯನ್ನ ಧ್ವನಿಸುರಳಿಗಾಗಿ ರಾಗ ಸಂಯೋಜನೆ ಮಾಡುವಾಗ ಅವರ ಕವಿತೆಗಳು ನನ್ನನ್ನು ಸೆಳೆದವು. ಪ್ರಕೃತಿಯ ವರ್ಣನೆ ಅದರ ಲಯ, ಪ್ರಾಸಗಳು ಸೋಜಿಗವೆನಿಸಿತ್ತು. ನನ್ನೊಡನೆ ಶ್ರೀ ಗೋಪಿಯವರೂ ಹಾಗೂ ಅವರೇ ಹಾಡಿದ "ನೀನು ದೂರ ಹೋದಷ್ಟು ಪ್ರೀತಿಯಾಳ ಕಂಡಿದೆ" ಎಂಬ ವಿರಹ ಗೀತೆಯಂತೂ ನನ್ನ ಮನಸ್ಸಿಗೆ ಸಂತೋಷಕೊಟ್ಟಿತ್ತು. ಸುಮಿತ್ರರವರು ಹಾಡಿದ "ಹೊಂಬಿಸಿಲಲಿ ಮೀಯುತ್ತಿದೆ ಚೈತ್ರದ ಹೂವು" ಎಂಬ ಗೀತೆಯು ಆಗ ನನಗೆ ತುಂಬಾ ಮೆಚ್ಚುಗೆಯಾಗಿತ್ತು.

ನಾನು ಮೊದಲು ಈ ಕವಿಶ್ರೀಗಳನ್ನು ಭೇಟಿಯಾಗಿದ್ದು ಶ್ರೀ ವೈ.ಕೆ. ಮುದ್ದುಕೃಷ್ಣರೊಡನೆ,

ಅವರಿಗಾಗಿ ಧ್ವನಿಮುದ್ರಿಸಿದ ''ಪ್ರೇಮಪಯಣ''ದ ಸಂದರ್ಭದಲ್ಲಿ. ಆ ಸಮಯದಲ್ಲಿ ನನ್ನೊಡನೆ ತೋರಿದ ಅವರ ಮೆಚ್ಚುಗೆ ಮತ್ತು ಪ್ರೀತಿಯನ್ನಂತು ನಾನೆಂದೂ ಮರೆಯಲಾಗದ್ದು. ಅವರ ''ಕೊರಳ ಕೊಳಲ ಮಾಡಿಕೊಂಡು'' ''ನೀ ಬಳಿಯಿದ್ದರೆ'' ''ಚಂದಕ್ಕಿ ಚಂದಮಾಮ'' ಹಾಗೂ ಇನ್ನೂ ಹಲವಾರು ಕವಿತೆಗಳು ನನಗೆ ತುಂಬಾ ಮೆಚ್ಚುಗೆಯಾಗಿದ್ದವು. ಪ್ರಕೃತಿಯ ಬಗ್ಗೆ ಅವರ ಒಲವು, ನಮ್ಮ ಸಂಸ್ಕೃತಿಯ ಬಗ್ಗೆ ಅವರಿಗಿರುವ ಕಾಳಜಿ ಅವರ ಬಗ್ಗೆ ಗೌರವ ಮೂಡಿಸುತ್ತೆ. ಅವರ ಸಾಹಿತ್ಯದಲ್ಲಿಯ ಭಾವದ ಅಕ್ಷರಕ್ಷರವೂ ವಿಶೇಷ ಸ್ವರಗಳಿಗಾಗಿ ನಮ್ಮನ್ನು ಸಂಯೋಜನೆಗೆ ಹುರಿದುಂಬಿಸುತ್ತದೆ. ಅವರ ''ಕೊರಳ ಕೊಳಲ ಮಾಡಿಕೊಂಡು'' ನನ್ನ ಸಂಯೋಜನೆಯನ್ನು ನಾನೇ ಮೆಚ್ಚಿಕೊಂಡ ಕವಿತೆ. ಅದನ್ನು ಶ್ರೀಮತಿ ಬಿ.ಆರ್. ಛಾಯರವರು ಸುಶ್ರಾವ್ಯವಾಗಿ, ಭಾವತುಂಬಿ ಆ ಹಾಡಿಗೆ ಜೀವ ತುಂಬಿರುತ್ತಾರೆ. ಆದರೆ ನನ್ನಂಥ ಪುಟ್ಟ ಸಂಯೋಜಕನೆಂದೋ ಏನೋ ಹೇಗೋ ಆಗ ಆ ಹಾಡ್ನ ಬೇರೆ ಗಾಯಕರ್‍ಯಾರು ಅದನ್ನು ಹಾಡಲು ಮನಸ್ಸು ಮಾಡಲಿಲ್ಲ. ನನಗಂತೂ ಅದರಿಂದ ಖಂಡಿನ ನೋವಿಲ್ಲ. ಆದರೆ ಅಂಥಾ ಅದ್ಭುತ ಕವಿತೆ ನನ್ನಿಂದಾಗಿ ಶ್ರೋತೃಗಳ ರಸಿಕ ಮನಕ್ಕೆ ತಲುಪಲಿಲ್ಲವೆಂಬ ನೋವಿದೆ.

ದೊಡ್ಡರಂಗೇಗೌಡರ ಎರಡು ಭಕ್ತಿಗೀತೆಗಳ ಧ್ವನಿಸುರಳಿಗೂ ನಾನು ಸಂಗೀತ ನಿರ್ದೇಶನ ಮಾಡಿದ್ದೇನೆ. ಆದಿಚುಂಚನಗಿರಿ ಕ್ಷೇತ್ರದ ಅವರ ಸಾಹಿತ್ಯ ಬೇರೆಲ್ಲದಕ್ಕಿಂತ ಭಿನ್ನವಾಗಿತ್ತು.

ನಾನು ಕಂಡಾಗಲೆಲ್ಲಾ ಪ್ರೀತಿಯ ಮೆಚ್ಚುಗೆಯ ಅವರ ನೋಟ ಸ್ನೇಹಪೂರ್ವಕ ಮಾತು ಮನಸ್ಸಿಗೆ ಮುದವನ್ನು ನೀಡುತ್ತದೆ.

ಕವಿವರೇಣ್ಯರ ಪ್ರೀತಿ ಮತ್ತು ಮೆಚ್ಚುಗೆಯನ್ನು ಪಡೆದ ನಾನು ನನ್ನಲ್ಲೇ ಧನ್ಯತೆಯ ಭಾವದಿಂದ ಮೈಮರೆತಿದ್ದೇನೆ.

ಎಲ್ಲರನ್ನೂ ಪ್ರೀತಿಸುವ, ಗೌರವಿಸುವ ಈ ಪ್ರಕೃತಿಯ ಕವಿಯು ಇನ್ನೂ ನೂರ್ಕಾಲ ಬಾಳಿ, ಈ ನಾಡ ಸಾಹಿತ್ಯಲೋಕದ ಧೃವತಾರೆಯಾಗಲೆಂದು, ಸಾಹಿತ್ಯ ಪ್ರಿಯರ ಮನತಣಿಸಲೆಂದು ಹೃದಯತುಂಬಿ ಹಾರೈಸುತ್ತೇನೆ.

❑



# ನೇಸರನ ಒಲವು

• ಯಶವಂತ ಹಳಿಬಂಡಿ

ಸುಮಾರು 25 ವರ್ಷಗಳ ಹಿಂದಿನ ಮಾತು..... ಆಗ ಟಿವಿ ಇರಲಿಲ್ಲ. ಆಕಾಶವಾಣಿಯಿಂದ ಪ್ರಸಾರವಾಗುವ ವಿವಿಧ ಕಾರ್ಯಕ್ರಮಗಳೇ ಜನರ ಮನರಂಜನೆಯ ಪ್ರಬಲ ಮಾಧ್ಯಮವಾಗಿತ್ತು. ಆಕಾಶವಾಣಿಯಲ್ಲಿ ಪ್ರಸಾರವಾಗುವ ಅಂದಿನ ಚಲನಚಿತ್ರಗೀತೆಗಳು ಸಾಹಿತ್ಯ-ಸಂಗೀತ ಪ್ರಧಾನವಾದ್ದರಿಂದ ಜನ ಸಾಮಾನ್ಯರ ನಾಲಗೆಯ ಮೇಲೆ ಇಂದಿನವರೆಗೂ ಅಂದಿನ ಗೀತೆಗಳೇ ಗುನುಗುತ್ತವೆ. 70 ಹಾಗೂ 80ರ ಈ ಎರಡು ದಶಕಗಳು ಕನ್ನಡ ಚಿತ್ರರಂಗಕ್ಕೆ ಸುಮಧುರ ಸಂಗೀತ ಕೊಟ್ಟ ದಶಕಗಳು. ಎಂದರೆ ತಪ್ಪಾಗಲಾರದು. ಈ ಸುಮಧುರ ಎರಡು ದಶಕಗಳ ಕಾರಣಕರ್ತರು ಕವಿಗಳು ಸಂಗೀತ-ಸಂಯೋಜಕರು ಹಾಗೂ ಗಾಯಕರು.

ಈ ಸುಮಧುರ ಎರಡು ದಶಕಗಳ ಗೀತೆಗಳಲ್ಲಿ ಒಂದಾದ, ಆಕಾಶವಾಣಿಯಲ್ಲಿ ಪ್ರಸಾರವಾಗುತ್ತಿರುವ ಪರಸಂಗದ ಗೆಂಡೆತಿಮ್ಮ ಚಿತ್ರದ ''ತೇರಾ ಏರಿ ಅಂಬರದಾಗೆ ನೇಸರು ನಗುತಾನೆ'' ಈ ಗೀತೆ ನನ್ನನ್ನು ಬಹಳ ಆಕರ್ಷಿಸಿತ್ತು. ದಕ್ಷಿಣ ಕರ್ನಾಟಕದ ಆಡು ಭಾಷೆಯ ಕಂಸಾಳೆ ಜಾನಪದದ ಸೊಗಡಿನಿಂದ ಕೂಡಿದ ಈ ಗೀತೆ ಮಹಾನ್ ಗಾಯಕ ಶ್ರೀ. ಎಸ್.ಪಿ. ಬಾಲಸುಬ್ರಹ್ಮಣ್ಯಂ ಸಿರಿಕಂಠದಲ್ಲಿ ಇಡೀ ಕನ್ನಡ ನಾಡಿನ ಸಂಗೀತ ರಸಿಕರನ್ನು ತನ್ನತ್ತ ಸೆಳೆದಿತ್ತು. ಈ ಗೀತೆಯಿಂದ ಪ್ರಭಾವಿತನಾದ ನಾನು ಈ ಗೀತೆ ರಚಿಸಿದ ಕವಿ ಶ್ರೀ ದೊಡ್ಡರಂಗೇಗೌಡರ ಬಗ್ಗೆ ಗಮನ ಹರಿಸಿದಾಗ ಇವರು ಚಿತ್ರ ಸಾಹಿತಿ ಅಷ್ಟೇ ಅಲ್ಲ, ನಮ್ಮ ನಾಡಿನ ಕನ್ನಡ ಸಾರಸ್ವತ ಲೋಕಕ್ಕೆ ಭಾವಗೀತೆಗಳನ್ನು ನೀಡುತ್ತಿರುವ ಸೃಜನಶೀಲ ಕವಿ ಎಂದು ಅರಿತುಕೊಂಡೆ. 23 ವರ್ಷಗಳ ಹಿಂದೆ ಉತ್ತರ ಕನ್ನಡ ಜಿಲ್ಲೆಯ ಸಿರಸಿಯಲ್ಲಿ ಜರುಗಿದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದೊಡ್ಡರಂಗೇಗೌಡರ ವೈಯಕ್ತಿಕ ಪರಿಚಯ ಮಾಡಿಕೊಂಡೆ. ಹದಿನೆಂಟು ವರ್ಷಗಳಿಂದ ನಾನು ಬೆಂಗಳೂರಿನಲ್ಲಿ ನೆಲೆಸಿರುವುದರಿಂದ ನಮ್ಮಿಬ್ಬರಲ್ಲಿ ಆತ್ಮೀಯತೆ ಬೆಳೆದು ನಾವು ಸ್ನೇಹಿತರಾಗಿದ್ದೇವೆ.

ದೊಡ್ಡರಂಗೇಗೌಡರು ಭಾವಗೀತೆ ಹಾಗೂ ಚಲನ ಚಿತ್ರಗೀತೆ ರಚಿಸುವ ಅಪರೂಪದ "ಕನ್ನಡ ಕವಿ". ಇವರದು "ಕನ್ನಡ ಮನೆ". ಕನ್ನಡ ಭಾಷೆಯ ಒಳಿತಿಗೆ ಶ್ರಮಿಸುವ ಕಟ್ಟಾ ಕನ್ನಡದ ಕವಿ. ಇವರು ಸ್ವತಃ ಕನ್ನಡ ಉಪನ್ಯಾಸಕರು. (ಸದ್ಯ ನಿವೃತ್ತರಾಗಿದ್ದಾರೆ) ಇವರ ಶ್ರೀಮತಿಯವರು ಹಾಗೂ ಮಕ್ಕಳು ಕನ್ನಡ ಉಪನ್ಯಾಸಕರು. ಇವರದು "ಕನ್ನಡ ಕುಟುಂಬ"

ವರಕವಿ ದ.ರಾ. ಬೇಂದ್ರೆಯವರಿಗೆ ಶ್ರಾವಣ ಬಗ್ಗೆ ಒಲವು ಇದ್ದಂತೆ.... ಕುವೆಂಪುರವರಿಗೆ ನಿಸರ್ಗದ ಬಗ್ಗೆ ಒಲವು ಇದ್ದಂತೆ.... ದೊಡ್ಡರಂಗೇಗೌಡರಿಗೆ ನೇಸರನ ಬಗ್ಗೆ ಅಪಾರ ಒಲವು ಇದೆ ಎಂದು ಅವರ ಕವನಗಳಲ್ಲಿ ನಾನು ಗಮನಿಸಿದ್ದೇನೆ... ಹಾಡಿದ್ದೇನೆ. ಗಾಯಕರು ಹೆಮ್ಮೆಯಿಂದ ದೊಡ್ಡರಂಗೇಗೌಡರ ಕವನಗಳನ್ನು ಹಾಡುತ್ತಾರೆ. ಗೇಯತೆಯಿಂದ ಕೂಡಿದ ಸ್ವರಸಂಯೋಜನೆಗೆ ಸ್ಫೂರ್ತಿ ತರುವವು ಇವರ ಕವನಗಳು. ಅರವತ್ತು ಸಂವತ್ಸರಗಳನ್ನು ಪೂರೈಸಲಿರುವ ನನ್ನ ನೆಚ್ಚಿನ, ನಾಡಿನ ಹೆಮ್ಮೆಯ ಕವಿ ದೊಡ್ಡರಂಗೇಗೌಡರಿಗೆ ನನ್ನ ಅನಂತ ಅಭಿನಂದನೆಗಳು.





# ಡಾ॥ ದೊಡ್ಡರಂಗೇಗೌಡ

• ಬಾಲಿ

"ನಿನ್ನ ಹೊರತು ಬದುಕು ಶೂನ್ಯ
ನಿನ್ನ ಒಲುಮೆ ನನಗೆ ಮಾನ್ಯ...."

1970ರ ದಶಕದ ಉತ್ತರದಲ್ಲಿ ಉದಯೋನ್ಮುಖರಾಗಿದ್ದ ಕವಿ ದೊಡ್ಡರಂಗೇಗೌಡರು ಒಂದು ಧ್ವನಿಸುರುಳಿಗಾಗಿ ಬರೆದಿದ್ದ ಕವಿತೆಯ ಪಲ್ಲವಿಯ ಸಾಲುಗಳಿವು. ಆ ಕವಿತೆಗೆ ಸ್ವರಸಂಯೋಜನೆ ಮಾಡಿದ್ದುದು ಶ್ರೀ ಆರ್. ದಾಮೋದರ್. ಮಾಧುರ್ಯಭರಿತ ಆ ಗೀತೆಯನ್ನು ಹಾಡಿದ ಶ್ರೀ ಜಯಪಾಲ್ ಶ್ರೀಮತಿ ಕಸ್ತೂರಿ ಶಂಕರ್ ಅವರುಗಳ ಗಾಯನದಿಂದ ಇಡೀ ಪ್ರಭಾತ್ ಸ್ಟುಡಿಯೋ ಝೇಂಕರಿಸುತ್ತಿತ್ತು. ಧ್ವನಿಮುದ್ರಣ ಕಾರ್ಯದಲ್ಲಿ ಭಾಗವಹಿಸುತ್ತಿದ್ದ ಎಲ್ಲ ಕಲಾವಿದರಿಗೂ ಒಂದು ತರಹದ ತೃಪ್ತಿ ತುಂಬಿತ್ತು. ಸಂಗೀತ ಕ್ಷೇತ್ರದಲ್ಲಿ ಇನ್ನೂ ಇಂದಿನ Commereialisation (ವ್ಯಾಪಾರಿ ಮನೋಭಾವ) ಹೊಕ್ಕಿರದ ಸಮಯವದು - ಕಲೆ ಕಲೆಗಾಗಿಯೇ ಇದ್ದ ಸಮಯ.

ಕವಿತೆಯ ಮೊದಲೆರಡು ಸಾಲುಗಳು ಮೇಲ್ನೋಟಕ್ಕೆ ಒಂದು ಪ್ರೇಮಗೀತೆಯಂತೆಯೇ ತೋರಿದರೂ (ಯುಗಳ ಗೀತೆಯಾಗಿ ಧ್ವನಿ ಮುದ್ರಿಸಿದ್ದೂ ಒಂದು ಕಾರಣವಿರಬಹುದು) ಆಳದಲ್ಲಿ ಕವಿಯ ಆಸ್ತಿಕತೆ ಕಾಣುತ್ತಿತ್ತು. ದೇವರಿಲ್ಲದೆ ಒಬ್ಬೊಬ್ಬ ಮನಷ್ಯನ (ದೈವಕೃಪೆಯಿಲ್ಲದೆ) ಬಾಳು, ಬದುಕು ಅರ್ಥಹೀನ ಅವನ ಒಲುಮೆ, ನೆಮ್ಮದಿಯ ಬಾಳಿಗೆ ಬಹಳ ಮುಖ್ಯ ಎಂಬ ತತ್ವ ಅಡಗಿದ್ದ ಈ ಸಾಲುಗಳ ಬಗ್ಗೆ ದೊಡ್ಡರಂಗೇಗೌಡರ ಜೊತೆ ಅಂದೇ ವಿಚಾರ ಮಾಡಿದ್ದೆ; ಈ ತರಹದ ವಿಚಾರ ವಿನಿಮಯ ನನ್ನ ಮತ್ತು ದೊಡ್ಡರಂಗೇಗೌಡರ ಮಧ್ಯೆ ಆಗಾಗ್ಗೆ ನಡೆಯುತ್ತಿದ್ದು ನನಗಿಂತ ಹಿರಿಯರಾಗಿದ್ದರೂ ಸಹ, ನನ್ನನ್ನು ಎಲ್ಲೇ ನೋಡಿದರೂ ಅವರು ಎಷ್ಟೇ ಕೆಲಸದ ಒತ್ತಡದಲ್ಲಿದ್ದರೂ, ಸನಿಹಕೆ ಬಂದು 'ಬಾಲಿಯವರು, ನಮಸ್ಕಾರ; ಹೇಗೆ ನಡೆಯುತ್ತಿದೆ ಕೆಲಸ?' ಎಂದು ಆತ್ಮೀಯವಾಗಿ ವಿಚಾರಿಸುತ್ತಿದ್ದರು ಈ ಸ್ನೇಹಮಯಿ. 'ತೇರಾ ಏರಿ ಅಂಬರದಾಗೆ'

‘ನೋಟದಾಗೆ ನಗೆಯ ಮೀಟಿ’ ‘ನಮ್ಮೂರ ಮಂದಾರ ಹೂವೆ’ ಮುಂತಾದ ಚಲನಚಿತ್ರಗೀತೆಗಳಿಂದ ಆಗಲೇ ಪ್ರಸಿದ್ಧರಾಗಿದ್ದರೂ ಎಲ್ಲರಲ್ಲೂ ಸದ್ಭಾವನೆಯಿಂದಿರುತ್ತಿದ್ದ ಇವರಿಗೆ ಎಲ್ಲರೂ ಸ್ನೇಹಿತರೇ, ಹಿತೈಷಿಗಳೇ ಎಂಬುದು ಅತಿಶಯವೇನಲ್ಲ.

ಆ ಸಮಯದಲ್ಲೇ ಪ್ರಸಿದ್ಧ ಹಿನ್ನೆಲೆ ಗಾಯಕರಾದ ಎಸ್.ಪಿ. ಬಾಲಸುಬ್ರಹ್ಮಣ್ಯಂ ಗಾಯನದ ‘ಮಾವು-ಬೇವು’ ಧ್ವನಿಸುರುಳಿ ಹೊರಬಂದು, ಕರ್ನಾಟಕದ ಮನೆ ಮನೆ ಮಾತಾಗಿದ್ದ ದೊಡ್ಡರಂಗೇಗೌಡರು, ಚಲನಚಿತ್ರ ಸಾಹಿತಿಗಳ ಮಧ್ಯೆ ಅಧಿಕ ಹೆಸರುಗಳಿಸಿ ಕೆಲವರಿಗೆ ನಿದ್ದೆಗೆಡಿಸಿರಬಹುದು; ಅವರ ಸಾಹಿತ್ಯ, ಚಲನಚಿತ್ರಕ್ಕೆ ಆದರೂ, ವಿಭಿನ್ನವಾಗಿರುತ್ತಿದ್ದುದು ಚಿತ್ರಗೀತೆಗಳ ಸ್ವಾರಸ್ಯವನ್ನು ಹೆಚ್ಚಿಸಿತ್ತು. ಬಾಲ್ಯದಲ್ಲಿ ಹಳ್ಳಿಯ ವಾತಾವರಣದಲ್ಲೇ ಬೆಳೆದು ಪ್ರಕೃತಿಯ ಸೌಂದರ್ಯ, ಕೊಡುಗೆಗಳನ್ನು ಹೆಚ್ಚು ಅನುಭವಿಸಿದ್ದ ದೊಡ್ಡರಂಗೇಗೌಡರ ಸಾಹಿತ್ಯದಲ್ಲಿ ಜಾನಪದ ಸೊಗಡಿನ, ಅರ್ಥ ಗಾಂಭೀರ್ಯವುಳ್ಳ ಸಾಲುಗಳು, ಮಿಕ್ಕ ಸಾಹಿತಿಗಳಿಗಿಂತ ಜನರಲ್ಲಿ ಹೆಚ್ಚು ಪರಿಣಾಮ ಬೀರಿ, ಕೇಳುಗರಿಗೆ ಒಂದು ವ್ಯತ್ಯಾಸವಾದ ಅನುಭವವನ್ನು ನೀಡುತ್ತಿತ್ತು.

ನನ್ನ ಮತ್ತು ಅವರ ಸ್ನೇಹ ಬೆಳೆಯುತ್ತಲೇ ಇದ್ದು 1985ರಲ್ಲಿ ಕನ್ನಡ ಚಲನಚಿತ್ರರಂಗ ತನ್ನ ಎಲ್ಲ ಚಟುವಟಿಕೆಗಳನ್ನೂ ಇದೇ ಬೆಂಗಳೂರಿನಲ್ಲೇ ತೊಡಗಿದ್ದ ಸಮಯದಲ್ಲಿ ನಾಗ್ ಸೋದರರ ಸಂಕೇತ್ ಸ್ಟುಡಿಯೋದಲ್ಲಿ ದೊಡ್ಡರಂಗೇಗೌಡರು ಮತ್ತು ನಾನು ಸಾಮಾನ್ಯವಾಗಿ ಎಲ್ಲ ಧ್ವನಿ ಮುದ್ರಣ ಕಾರ್ಯದಲ್ಲಿ ಭಾಗಿಯಾಗಿ ಇರುತ್ತಿದ್ದೆವು. ನಮ್ಮ ಒಡನಾಟ ಮುಂದೆ ನಾನೇ ಸ್ವತಃ ಸ್ವರ ಸಂಯೋಜಿಸಲು ಸ್ಫೂರ್ತಿಯಾಗಿ, ನನಗಾಗಿ ಅವರು ಬರೆದು ಕೊಟ್ಟ ಮೊಟ್ಟ ಮೊದಲ ಕವಿತೆ ‘ಹೊಂಬಾಳೆ ಹೂವರಳಿತೊ’ ಆ ಗೀತೆ ಹೆಚ್ಚು ಜನಪ್ರಿಯತೆಗಳಿಸಿ ನನ್ನನ್ನು ಶ್ರೋತೃಗಳು ಒಬ್ಬ ಸಂಗೀತ ನಿರ್ದೇಶಕನಾಗಿ ಗುರುತಿಸಲು ಅನುವು ಮಾಡಿಕೊಟ್ಟಿತು. ಮುಂದೆ ಅವರು ಬರೆದುಕೊಟ್ಟ ಸಾಹಿತ್ಯ ಸಾಲುಗಳೆಷ್ಟೋ, ಅವುಗಳಿಗೆಲ್ಲಾ ಸ್ವರ ಸಂಯೋಜನೆ ಮಾಡಲು ನನಗೆ ಸಿಕ್ಕ ಅವಕಾಶ ಹೇರಳ. ಸ್ವರ ಸಂಯೋಜಿಸುವಾಗ ಜೊತೆಗೇ ಕುಳಿತು ಒಂದು ಉತ್ತಮ ಗೀತೆಯಾಗಿ ಅದು ಪರಿಣಮಿಸಲು ಅತ್ಯದ್ಭುತ ನೆರವು ನೀಡುತ್ತಿದ್ದ ಸಹನೆಯುಳ್ಳ ಕವಿ, ದೊಡ್ಡರಂಗೇಗೌಡರು. ಆ ಹೊತ್ತಿನಲ್ಲಿ ಅತಿ ಹೆಚ್ಚು ಗೀತೆಗಳನ್ನು ಬರೆಯುತ್ತಿದ್ದ ಅವರು ಎಷ್ಟು ಪ್ರಸಿದ್ಧರು ಎಂದರೆ (ಒಂದು ತಮಾಷೆ ಆದರೂ ನಿಜವಾದ ವಿಷಯವೆಂದರೆ) ಅಂಜನ್‌ಕುಮಾರ್ ಎಂಬ ಒಬ್ಬ ಗಾಯಕ, (ಧ್ವನಿ ಮುದ್ರಣ ಸಮಯದಲ್ಲಿ ಆಗಾಗ್ಗೆ ನಾನು ಕೆಲ ಸಾಹಿತಿಗಳ ಗೀತೆಗಳ ಸಾಲುಗಳ ಬದಲಾವಣೆಗಳ ಬಗ್ಗೆ ಚರ್ಚಿಸುತ್ತಿದ್ದೆ; ಪರಸ್ಪರ ವಿಚಾರ ಮಾಡಿದ ನಂತರವೇ ಗಾಯನ ಧ್ವನಿ ಮುದ್ರಿಸುತ್ತಿದ್ದೆ) ನನ್ನನ್ನು ಎಲ್ಲಿ ಕಂಡರೂ ‘ಓ ಬಂದ್ರು ನೋಡ್ರಪ್ಪ ಚಿಕ್ರಂಗೇಗೌಡ್ರು’ ಅಂತಲೇ ಹೇಳಿ ಎಲ್ಲರನ್ನೂ ನಗಿಸುತ್ತಿದ್ದ. ಆತ ಆವರೆಗೂ ದೊಡ್ಡರಂಗೇಗೌಡ ಅವರನ್ನು ಭೇಟಿಯಾಗಿರಲಿಲ್ಲ, ಅವರ ಸಾಹಿತ್ಯದಿಂದ ಪ್ರಭಾವಿತನಾಗಿದ್ದ ಗಾಯಕ ಆತ, ಎಸ್.ಪಿ.ಬಿ.

ಅವರ ಗಾಯನಕ್ಕೆ ಶರಣಾಗಿ ಎಸ್.ಪಿ.ಜಿ. ದೊಡ್ಡರಂಗೇಗೌಡರ Combination ಗೀತೆಗಳನ್ನು ಅನಾಯಾಸವಾಗಿ, ಅದ್ಭುತವಾಗಿ ಹಾಡುತ್ತಿದ್ದವೆ.

ಚಲನಚಿತ್ರ ಸಾಹಿತಿಯೆಂದೇ ಪ್ರಸಿದ್ಧಿ ಪಡೆದಿದ್ದರೂ ಅವರ ಇತರ ಕವಿತೆಗಳನ್ನು ಓದಿದವರು, ದೊಡ್ಡರಂಗೇಗೌಡ ಅವರ ಬಗ್ಗೆ ನಮ್ಮ ನಿಲುವುಗಳನ್ನು ಬದಲಿಸಿಕೊಳ್ಳಲೇ ಬೇಕಾಗಿತ್ತು-ಉದಾಹರಣೆಗೆ ಅವರ 'ಮಣ್ಣಿನ ಮಾತುಗಳು' ಸಂಕಲನವನ್ನು ಓದಿದರೆ, ಅದರಲ್ಲಿ ಉಪಯೋಗಿಸಿರುವ ಪದಗಳು, ತತ್ವಗಳು, ಶೈಲಿ, ದೊಡ್ಡರಂಗೇಗೌಡ ಅವರನ್ನು ಉನ್ನತ ಮಟ್ಟಕ್ಕೆ ಏರಿಸಿ 'ಅನಭಿಷಿಕ್ತ ದೊರೆ'ಯಾಗಿರುವುದನ್ನು ಕಾಣಬಹುದು. ಕುವೆಂಪು-ಡಿ.ವಿ.ಜಿ. ಅವರ ಸಂಗಮದ ಕಾವ್ಯದಂತೆ ಇರುವ ಡಾ|| ದೊಡ್ಡರಂಗೇಗೌಡರ 'ಮಣ್ಣಿನ ಮಾತುಗಳು' ಅವರ ಸ್ವಭಾವ, ವ್ಯಕ್ತಿತ್ವ, ಶಕ್ತಿ ಇವುಗಳನ್ನು ಕೈಗನ್ನಡಿಯಂತೆ ತೋರಿಸುತ್ತದೆ.

ಮೂವತ್ತಕ್ಕೂ ಹೆಚ್ಚು ವರ್ಷಗಳಿಂದ ನಾನು ಬಲ್ಲ ದೊಡ್ಡರಂಗೇಗೌಡ ಅವರು ಎಂದಿಗೂ ನಗುನಗುತಾ, ಯಾರ ಮೇಲೂ ಯಾವ ಸಂದರ್ಭದಲ್ಲೂ ಕೋಪಿಸಿಕೊಳ್ಳದೇ, ತಮಗಿತ್ತ ಕಾರ್ಯದಲ್ಲೇ ಮಗ್ನರಾಗಿ ತಾಳ್ಮೆ, ಸಹನೆಯಿಂದ ಕೆಲಸವನ್ನು ಪೂರೈಸುವುದರಲ್ಲಿ ನಿರತರಾದ ಅತಿ ಸರಳವ್ಯಕ್ತಿ - ''ಸರಳತೆಯೇ ಅವರ ಶಕ್ತಿ, ಸರಳತೆಯೇ ಅವರ ಗುಣ'' - ಕೆಲವು ಬಾರಿ ಅವರು ಮೌನವಾಗಿರುವುದನ್ನು ನೋಡಿದಾಗ "If you cannot understand my silence, you cannot understand my words" ಎಂದು ಹೇಳುವಂತಿರುತ್ತಿತ್ತು. ಇಂಥ ಸಜ್ಜನರ ಸಹವಾಸ, ಒಡನಾಟದಿಂದ ನಮ್ಮಂಥವರಿಗೆ ಲಾಭವೇ!

❑






# ಮಂದಾರ ಲೋಕದ ಮಧುರ ಕವಿ

• ಡಾ॥ ಪಂಚಾಕ್ಷರಿ ಹಿರೇಮಠ

ಕಾವ್ಯ-ಮಾನವೀಯ ಸಂವೇದನೆಗಳನ್ನು ಅಭಿವ್ಯಕ್ತಿಗೊಳಿಸುವ ಶಕ್ತಿಶಾಲಿ ಮಾಧ್ಯಮವಾಗಿದೆ. ಕಾವ್ಯ-ರೂಪವಿಲ್ಲದ ಭಾವನೆಗಳಿಗೆ ಶಬ್ದಾತ್ಮಕ ರೂಪ ನೀಡುತ್ತದೆ, ಲಯ ನೀಡುತ್ತದೆ, ಗತಿ ನೀಡುತ್ತದೆ. ಕಾವ್ಯರಚನಾಕಾರನೊಂದಿಗೆ, ಓದುಗನನ್ನು ಕೇಳುಗನನ್ನು ಯಾವ ಕಾವ್ಯ ತನ್ನ ಗೇಯತೆಯೊಂದಿಗೆ, ಪ್ರಭಾವದೊಂದಿಗೆ ಬಂಧಿಸುತ್ತದೆಯೋ ಹಾಗೂ ಪರಿವರ್ತನೆಗೊಳಿಸುತ್ತದೆಯೋ ಅಂಥ ಕಾವ್ಯ ಮಾತ್ರ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳಬಲ್ಲುದೆಂದು ನಾನು ಭಾವಿಸಿದ್ದೇನೆ.

ನನ್ನ ಪರಮ ಕವಿಬಂಧು ಡಾ॥ ದೊಡ್ಡರಂಗೇಗೌಡರ ಕಾವ್ಯದಲ್ಲಿ, ಬದುಕಿನಲ್ಲಿ ಇಂಥ ಸಾರ್ಥಕತೆಯನ್ನು ಕಂಡಿದ್ದೇನೆ. ಏಕೆಂದರೆ ಗೌಡರ ಕಾವ್ಯ, ತಪಸ್ಸಿನಿಂದ ಕೂಡಿದ ಓರ್ವ ಸಾಧಕನ ವಾಣಿಯಾಗಿದೆ. ಇಂಥ ವಾಣಿ ಮಾತ್ರ ಜೀವನದಲ್ಲಿ ಬೆಳಕನ್ನು ತರಬಲ್ಲುದೆಂದು ನಂಬಿದವನು ನಾನು. ನಲವತ್ತು ವರ್ಷಗಳಿಂದ ಡಾ. ದೊಡ್ಡರಂಗೇಗೌಡರು ಕನ್ನಡದ ಕಾವ್ಯ ಕಣಜವನ್ನು ಸಾರ್ಥಕವಾದ ತಮ್ಮ ಗೇಯ ಗೀತಗಳಿಂದ ತುಂಬಿದ್ದಾರೆ, ಕನ್ನಡಿಗರ ಮನವನ್ನು ಗೆದ್ದಿದ್ದಾರೆ.

ನರತ್ವಂ ದುರ್ಲಭಂ ಲೋಕೆ
ವಿದ್ಯಾ ತತ್ರ ಸುದುರ್ಲಭಾ।
ಕವಿತ್ವಂ ದುರ್ಲಭಂ
ತತ್ರ ಶಕ್ತಿ ಸ್ತತ್ರ ಸುದುರ್ಲಭಾ॥

ಅಗ್ನಿ ಪುರಾಣದಲ್ಲಿ ಬರುವ ಈ ಶ್ಲೋಕದ ಅರ್ಥ ಹೀಗಿದೆ-ಲೋಕದಲ್ಲಿ ಮನುಷ್ಯನಾಗಿ ಜನಿಸುವುದೇ ದುರ್ಲಭ. ಹೀಗಿರುವಾಗ ವಿದ್ಯೆಯನ್ನು ಸಂಪಾದಿಸುವುದು ಇನ್ನೂ ದುರ್ಲಭ. ಇದಕ್ಕಿಂತ ಕಠಿಣವಾದುದು ಕಾವ್ಯಶಕ್ತಿ ಪಡೆಯುವುದು. ಇದೆಲ್ಲಕ್ಕಿಂತಲೂ ಕಠಿಣ ಮತ್ತು ಅತ್ಯಂತ ದುರ್ಲಭವಾದುದು ಕಾವ್ಯ ಸಹಜಾಭಿವ್ಯಕ್ತಿ ಹಾಗೂ ಸ್ವಾಭಾವಿಕ ಶಕ್ತಿ ಸಾಧಿಸುವುದು.

ಇಂಥ ಅಭೂತಪೂರ್ವ ಶಕ್ತಿಯನ್ನು ಸಾಧಿಸಿದವರು ನನ್ನ ಆತ್ಮೀಯ ಕವಿಮಿತ್ರ ಡಾ|| ದೊಡ್ಡರಂಗೇಗೌಡರು.

ತಮ್ಮ ಅಂತರಂಗದ ಈ ಶಕ್ತಿಯನ್ನು, ಬೆಳಕನ್ನು ಲೋಕ ಕಲ್ಯಾಣಕ್ಕಾಗಿ ತಮ್ಮ ಕಾವ್ಯದ ಮೂಲಕ ನೀಡಿದ ಹಿರಿಮೆ ನಮ್ಮ ಡಾ|| ದೊಡ್ಡರಂಗೇಗೌಡರದು.

ಡಾ. ಗೌಡರ ಮನಸ್ಸಿಗೆ ಕಡಲ ಆಳ ಹಾಗೂ ಆಗಸದ ವಿಸ್ತಾರವಿದೆ. ಅಂತೆಯೇ ಇಂಥ ಹಿರಿಮೆ ಗಳಿಸಲು ಅವರಿಗೆ ಸಾಧ್ಯವಾಗಿದೆ.

ಭಾವ, ಭಾಷೆಯ ಶರೀರ ಹೊತ್ತು ಮೂರ್ತವಾಗುತ್ತದೆ. ಅಮೂರ್ತವಾದುದ್ದನ್ನು ಮೂರ್ತವಾಗಿಸುವಲ್ಲಿ ಏನೆಲ್ಲ ಕಷ್ಟಗಳಿವೆಯೆಂಬುದನ್ನು ಓರ್ವ ಕವಿಯಾಗಿ ನಾನು ಚೆನ್ನಾಗಿ ತಿಳಿದಿದ್ದೇನೆ. ಈ ಕಷ್ಟಗಳು, ಅಮೂರ್ತದಿಂದ ಮೂರ್ತಗೊಳ್ಳುವ ಪ್ರಕ್ರಿಯೆಯ ಅನುಭವ ಯಾರಿಗಿಲ್ಲವೋ ಅವರಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ಕಾವ್ಯದ ಹುಟ್ಟಿನ ಹಿಂದಿರುವ ಕವಿಯ ಜೀವನಾನುಭವ, ಶ್ರಮ, ನಿಷ್ಠೆ ಮತ್ತು ಕ್ರಾಫ್ಟ್‌ಮನ್‌ಷಿಪ್‌ನ್ನು ನಾವು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಡಾ. ಗೌಡರ ಕಾವ್ಯ ಇದನ್ನು ಬಯಸುತ್ತದೆ.

ಡಾ|| ಗೌಡರು ತಮ್ಮ ಪ್ರತಿಭೆ ಮತ್ತು ಜೀವನಾನುಭವ ಹಾಗೂ ಅಪಾರ ಕ್ರಿಯಾಶೀಲತೆಯಿಂದ ಕ್ರಿಯೆಯ ದೀಪದಲ್ಲಿ ಜೀವ ತೈಲವೆರೆದು ತನ್ನ ಬೆರಳುಗಳ ಪ್ರಕಂಪನದಿಂದ ದೀಪ ಶಿಖಾಕ್ಕೆ (ಕಾವ್ಯಕ್ಕೆ) ಪ್ರಾಣದಾನ ಮಾಡಿದ್ದಾರೆ, ಮಂದಾರ ಲೋಕದ ಮಧುರ ಕವಿ ಡಾ|| ಗೌಡರು.

ಡಾ|| ಗೌಡರ ಈ ಗೇಯಗೀತ ನನ್ನನ್ನು ಮಂತ್ರಮುಗ್ಧಗೊಳಿಸಿದೆ.

"ನೀಲಾಂಬರದಲ್ಲಿ ಪೂರ್ಣಚಂದ್ರ ತೇಲುತಿರೆ
ಕವಿಯಂತರಂಗದಲ್ಲಿ ಕಾವ್ಯಾಮೃತಧಾರೆ!
ಹೂಬೆಳುದಿಂಗಳೇ ಜಗದ ಜಗಲಿ ತುಂಬುತಿರೆ
ನಲ್ಲನಲ್ಲೆಯರಲ್ಲಿ ಪ್ರೇಮೋತ್ಸವ ಸೂರೆ!
ಸ್ಫೂರ್ತಿಯ ಸೆಲೆಯಲ್ಲಿ ಸೃಜನಶೀಲ ಮೀಯುತಿರೆ
ವಾಗರ್ಥದ ನದಿ ತುಂಬಿತುಳುಕಿ ಧ್ವನಿ ಚಹರೆ!

ಬೆಳ್ಳಿಚುಕ್ಕಿ ನಾಡಿನಲ್ಲಿ ಚಂದ್ರ ಮೇರೆ ಮೀರುತಿರೆ
ಪ್ರೇಮಿಗಳ ಹೃದಯದಲ್ಲಿ ಮದನಾವತಾರ ಬೇರೆ!
ದಿವ್ಯ ಸನ್ನಿಧಿಯಲ್ಲಿ ಜೊನ್ನ ತೆರೆ ನಮಿಸುತಿರೆ
ಕಾವ್ಯ ಮಂದಿರದಲ್ಲಿ ರಮ್ಯ ಗೀತದ ಕದಿರೇ!

ರಾಗರತಿಯ ರಾಜ್ಯದಲ್ಲಿ ಶೃಂಗಾರ ಸೊಗಸುತಿರೆ
ವಸುಂಧರೆಯ ವದನದಲ್ಲಿ ಶಾಂತ ಲಹರಿಯ ಮೊಹರೇ!''

ಈ ಇಡೀ ಗೇಯಗೀತ ಆಲೋಕಪುಂಜವಾಗಿದೆ. ಗೀತದ ಆರಂಭವೇ ಅದ್ಭುತವಾದ ಲೌಕಿಕ ಲೋಕವೊಂದನ್ನು ನಮ್ಮ ಕಣ್ಮುಂದೆ ಕಟ್ಟಿದು ನಿಲ್ಲಿಸುತ್ತದೆ. 'ನೀಲಾಂಬರ'-ಸುಮ್ಮನೆ ನಾವು ಕಲ್ಪಿಸಿಕೊಂಡರೂ ಸಾಕು ಅದರ ವಿಸ್ತಾರ ಮತ್ತು ಅದರ ಚೆಲುವನ್ನು ರೋಮಾಮಾಂಚನವಾಗದಿರದು. ಮತ್ತೆ 'ವಾಗರ್ಥ' – ಮಹಾ ಕವಿ ಕಾಳಿದಾಸ ನಮ್ಮೆದುರಿಗೇ ಬಂದು ನಿಲ್ಲುತ್ತಾನೆ. 'ದಿವ್ಯ ಸನ್ನಿಧಿಯಲ್ಲಿ ಜೊನ್ನ ತೆರೆ ನಮಿಸುತಿರೆ'' ಎಂಬುವಲ್ಲಿ ನಮ್ಮ ಲೌಕಿಕ ಪ್ರೇಮ ಭಗವದ್ಭಕ್ತಿಯಲ್ಲಿ ಪರಿವರ್ತನೆ ಹೊಂದುವ ಕ್ರಿಯಯೆಯನ್ನು ಅನುಭವಿಸುತ್ತೇವೆ. ಈ ಇಡೀ ಕವಿತೆ ನನ್ನ ಪರಮ ಬಂಧು ಡಾ. ಗೌಡರ ಜೀವನದ, ಬದುಕಿನ ಕಾವ್ಯದ ಎತ್ತರವನ್ನು ನಮ್ಮೆದುರು ನಿಲ್ಲಿಸುತ್ತದೆ.

ಡಾ॥ ದೊಡ್ಡರಂಗೇಗೌಡರು ನಿಜವಾಗಿಯೂ ಬಹುದೊಡ್ಡವರು. ಮೂರು ದಶಕಗಳಿಂದ ಅವರ ಸ್ನೇಹ, ವಾತ್ಸಲ್ಯ, ಅಭಿಮಾನ ಪಡೆದಿರುವ ನಾನು, ಅವರ ಸೌಜನ್ಯ, ವಿನಯಕ್ಕೆ ತುಂಬ ಮಾರುಹೋಗಿದ್ದೇನೆ. ಅವರ ಜೀವನ ಪ್ರೀತಿ ನನ್ನನ್ನು ಮುಗ್ಧಗೊಳಿಸಿದೆ. ಅವರ ಎಲ್ಲ ಗೀತಗಳೂ ಚಿದಾಕಾಶದಲ್ಲಿ ಮೆಲ್ಲ ಮೆಲ್ಲನೆ ಆನಂದ-ಉನ್ಮಾದದ ದೀಪ ಹಚ್ಚಿದ ಅನುಭವ ನೀಡುತ್ತದೆ. ಓದುಗ ಈ ಪ್ರೇಮ ಗಂಗೆಯಲ್ಲಿ ಅಭಯತ್ವ ಕಾಣುತ್ತಾನೆ. ಸೀಮೆಯಿಂದ ಅಸೀಮನಾಗುತ್ತಾನೆ. ಇವೆಲ್ಲ ಡಾ॥ ಗೌಡರು ಬದುಕಿದ ಚೈತನ್ಯ ನಿಷ್ಠೆಯ ಜೀವಂತ ಸಾಧನೆಯ ಪ್ರತಿಬಿಂಬಗಳಾಗಿವೆ.

ಈ ಕವಿಯ ಇಂಥ ಸಾಧನೆಯ ಹಿಂದೆ, ಆತನ ಜೀವನ ಸಂಗಾತಿಯಾಗಿ ಬಂದು, ತನ್ನ ನಿರ್ವ್ಯಾಜ ಪ್ರೇಮದಿಂದ ಕವಿಯ ಬದುಕನ್ನು ತುಂಬಿರುವ ಸೋದರಿ ಡಾ॥ ರಾಜೇಶ್ವರಿಯ ಶಕ್ತಿ ಸಂಚಯವೂ ಇದೆಂಬುದನ್ನು ನಾನು ಮರೆತಿಲ್ಲ. ಆಕೆ ನಿಜಕ್ಕೂ ಡಾ॥ ದೊಡ್ಡರಂಗೇಗೌಡರ ಗೀತಗಳಿಗೆ ಅಧಿದೇವತೆ.

ನಾವಿಬ್ಬರೂ ನಮ್ಮ ಕಾವ್ಯ ಕ್ಷೇತ್ರದಲ್ಲಿ ಸುಮ್ಮನೆ ದುಡಿಯುತ್ತ, ಕೃಷಿಗೈಯುತ್ತ ಬಂದವರು. ಯಾವ ಗದ್ದಲ, ಗುಂಪುಗಾರಿಕೆ, ಆಡಂಬರಕ್ಕೂ ಹೋದವರಲ್ಲ. ನನ್ನ ಹಾಗೆಯೇ ನನ್ನೀ ಕವಿಬಂಧು ಸತತ ಸೃಜನಶೀಲತೆಯಲ್ಲಿ ತೊಡಗಿಸಿಕೊಂಡವರು. ಅಂತೆಯೇ ನನಗೆ ಈ ಕವಿ ಹತ್ತಿರದವರು. ನನ್ನೀ ಹತ್ತಿರದ, ತಮ್ಮ ಮಧುರ ಗೇಯ ಗೀತಗಳಿಂದ ಜನಮನ ಗೆದ್ದಿರುವ ಕವಿಗೆ ಈಗ ಅರವತ್ತರ ವಸಂತ. ಮಂದಾರ ಲೋಕದ ಈ ನನ್ನ ಕವಿಬಂಧುವಿಗೆ ನೂರು ವಸಂತಗಳಿರಲೆಂದು, ಸಕಲ ಭಾಗ್ಯಗಳಿರಲೆಂದು ಹೃದಯ ತುಂಬಿ ಹಾರೈಸುತ್ತೇನೆ.

❑



ಕುರುಬರಹಳ್ಳಿಯಲ್ಲಿನ ದೊಡ್ಡರಂಗೇಗೌಡರ ಪೂರ್ವಜರ ಮನೆ



ದೊಡ್ಡರಂಗೇಗೌಡರು ಓದಿದ ಪ್ರಾಥಮಿಕ ಶಾಲೆ
ಕುರುಬರಹಳ್ಳಿ.



ದೊಡ್ಡರಂಗೇಗೌಡರ ತಂದೆ-ತಾಯಿ
ಮೇಷ್ಟ್ರು ಕೆ. ರಂಗೇಗೌಡರು ಹಾಗೂ ಶ್ರೀಮತಿ ಅಕ್ಕಮ್ಮನವರು



ಧರ್ಮಪತ್ನಿ ಡಾ|| ಕೆ. ರಾಜೇಶ್ವರಿ ಅವರೊಂದಿಗೆ



ದೊಡ್ಡರಂಗೇಗೌಡರನ್ನು ಕವಿಯಾಗಿ ಮಾಡಿದ ಮಧುಗಿರಿ ಪ್ರೌಢಶಾಲೆ



''ಪರಸಂಗದ ಗೆಂಡೆತಿಮ್ಮ'' ಚಿತ್ರದ ಹಾಡಿನ ಧ್ವನಿಮುದ್ರಣ ಸನ್ನಿವೇಶದಲ್ಲಿ
ಶ್ರೀ ರಾಜನ್-ನಾಗೇಂದ್ರ, ಮಾರುತಿ ಶಿವರಾಂ, ಡಾ।। ಎಸ್.ಪಿ. ಬಾಲಸುಬ್ರಹ್ಮಣ್ಯಂ
ಹಾಗೂ ನಿರ್ಮಾಪಕರೊಂದಿಗೆ....



''ಸೂರ್ಯವಂಶ'' ಚಿತ್ರದ ಹಾಡಿನ ಧ್ವನಿ ಮುದ್ರಣದ ಸನ್ನಿವೇಶದಲ್ಲಿ ಡಾ|| ರಾಜ್ ಅವರ ಜೊತೆ



ತಾಯಿ, ತಮ್ಮಂದಿರು, ತಂಗಿಯರ ಜೊತೆ ದೊಡ್ಡರಂಗೇಗೌಡರು



ಗೀತರಚನೆಗೆ ರಾಜ್ಯ ಪ್ರಶಸ್ತಿ ಪಡೆದಾಗ ಅಂದಿನ ಮುಖ್ಯಮಂತ್ರಿ
ಜೆ.ಹೆಚ್. ಪಟೇಲರೊಡನೆ



''ಶತಾಯುಷಿ'' ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರೊಡನೆ
ಚರ್ಚೆಯಲ್ಲಿ ನಿಮಗ್ನರಾದಾಗ...



ದೊಡ್ಡರಂಗೇಗೌಡರು ಹೆಂಡತಿ, ಮಕ್ಕಳು, ಮೊಮ್ಮಗಳೊಂದಿಗೆ



ಶ್ರೀ ಗುರು ಬಾಲಗಂಗಾಧರನಾಥ ಸ್ವಾಮೀಜಿ ಅವರಿಂದ ''ಆರ್ಯಭಟ''
ಪ್ರಶಸ್ತಿ ಸ್ವೀಕರಿಸುವಾಗ



''ಧ್ವನಿ'' ಸಂಸ್ಥೆ ದೊಡ್ಡರಂಗೇಗೌಡರು ಹಾಗೂ ಸಂಗೀತ ನಿರ್ದೇಶಕರಾದ ಜಿ.ಪಿ. ಕಾರಂತರನ್ನು ಅಭಿನಂದಿಸಿದಾಗ....



ಉಪರಾಷ್ಟ್ರಪತಿ ಡಾ|| ಫಕ್ರುದ್ದೀನ್ ಅಲಿ ಅಹ್ಮದ್ ಅವರ ಜೊತೆ ದೊಡ್ಡರಂಗೇಗೌಡರು ಹಾಗೂ ಪ್ರೊ|| ಜಿ.ಎ. ಶ್ರೀಧರ್



ರಾಜ್ಯೋತ್ಸವ ಪ್ರಶಸ್ತಿ ಪಡೆದಾಗ ಅಂದಿನ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಅಭಿನಂದಿಸುತ್ತಿರುವಾಗ....



ತಾಯಿ ತಂದೆ ಹಾಗೂ ಅಪೂರ್ವ ಕುಟುಂಬದೊಡನೆ



ವರ್ಷದ ಶ್ರೇಷ್ಠಗೀತೆ ಪ್ರಶಸ್ತಿ ಪ್ರಧಾನ : ಶ್ರೀ ವೀರಪ್ಪ ಮೊಯಿಲಿ ಅವರೊಡನೆ.

17109



''ಹೊಸನೀರು'' ಹಾಡುಗಳ ಧ್ವನಿ ಮುದ್ರಣದಂದು ವರನಟ ಡಾ॥ ರಾಜ್ ಅವರೊಂದಿಗೆ.



ಅನ್ವೇಷಣ ಚಿತ್ರದ ಹಾಡಿನ ಧ್ವನಿಮುದ್ರಣದಲ್ಲಿ ಡಾ॥ ಪಿ.ಬಿ.ಎಸ್. ಅವರೊಂದಿಗೆ



ದಕ್ಷಿಣ ಭಾರತದ ಶ್ರೇಷ್ಠ ಸಂಗೀತ ನಿರ್ದೇಶಕರಾದ ಶ್ರೀ ಇಳಯರಾಜ ಅವರೊಂದಿಗೆ
ದೊಡ್ಡರಂಗೇಗೌಡ ಗೆಳೆಯರು



ಭಕ್ತಿಗೀತೆಗಳ ಧ್ವನಿಸುರಳಿ ಬಿಡುಗಡೆಯ ಸಂದರ್ಭದಲ್ಲಿ ಪರಮಪೂಜ್ಯ
ಶ್ರೀ ಗುರುಗಳೊಡನೆ.



ಗೌಡರು ಬರೆದ ಗೀತೆಯನ್ನು ರಾಜನ್-ನಾಗೇಂದ್ರ ಗಾಯಕ ಎಸ್.ಪಿ.
ಬಾಲಸುಬ್ರಹ್ಮಣ್ಯಂ ಅವರಿಗೆ ಹಾಡಿ ತೋರಿಸುವಾಗ....



ಅಪೂರ್ವ ಮಿಲನ : ಕೆ. ಕಲ್ಯಾಣ್, ಎ. ಮನೋಹರ್, ಮಂಜುಳಾ ಗುರುರಾಜ್ ಅವರೊಂದಿಗೆ



ವಿದೇಶದಲ್ಲಿ ಆತ್ಮೀಯ ಗೆಳೆಯರೊಡನೆ...



ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎ. ಪದವಿ ಪಡೆದಾಗ



ನಾಡಿನ ಶ್ರೇಷ್ಠ ಹಿಂದೂಸ್ಥಾನಿ ಗಾಯಕಿ ಶ್ರೀಮತಿ ಶ್ಯಾಮಲಾ ಜಿ. ಭಾವೆ ಅವರೊಡನೆ ದೊಡ್ಡರಂಗೇಗೌಡರು.



ದೊಡ್ಡರಂಗೇಗೌಡರು ಸರ್.ಎಂ.ವಿ. ಪ್ರಶಸ್ತಿ ವಿತರಣೆ ಸಮಾರಂಭ ಉದ್ಘಾಟನೆ ಸಂದರ್ಭದಲ್ಲಿ



ನಲವತ್ತೇಳು ಹಾಡುಗಳ ಗೀತರೂಪಕ ''ಹಿಮಶ್ವೇತಾ'' ಧ್ವನಿಮುದ್ರಣದಂದು ಗಾಯಕ ಗಾಯಕಿಯರ ಜೊತೆ...



ತಾಯಿ ಶ್ರೀಮತಿ ಅಕ್ಕಮ್ಮ ಅವರ ಜೊತೆ ಅಂದಿನ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ದೊಡ್ಡರಂಗೇಗೌಡರು.



ಒಬ್ಬ ಕವಿಯ ಅರವತ್ತು ವಸಂತಗಳೆಂದರೆ ಅದೊಂದು ಸಾಹಿತ್ಯ ಚರಿತ್ರೆಯ ದಾಖಲೆ ಎಂದೇ ಅರ್ಥ. ಅಂದರೆ ಕವಿಯೊಬ್ಬ ತನ್ನ ಸಮಕಾಲೀನ ಬದುಕನ್ನು ಚಿಂತಿಸುತ್ತಲೇ ತನ್ನ ಸಮಯದ ಆಗು-ಹೋಗುಗಳನ್ನು ದಾಖಲಿಸುತ್ತಾ ಇತಿಹಾಸವನ್ನು ರಚಿಸುತ್ತಲೇ ಸಾಗುತ್ತಿರುತ್ತಾನೆ.

ಹೀಗೆ ಕಾವ್ಯದ ಜಾಡು ಹಿಡಿದು ಇತಿಹಾಸವನ್ನು ಜನಸಾಮಾನ್ಯರ ತೆಕ್ಕೆಗೆ ಒದಗಿಸಿಕೊಟ್ಟ ಸಾರಸ್ವತ ಲೋಕದ ಹಲವು ಗಣ್ಯರ ನಡುವೆ ನಮ್ಮೆಲ್ಲರ ಹೆಮ್ಮೆಯ ಕವಿ ಡಾ॥ ದೊಡ್ಡರಂಗೇಗೌಡರು ಪ್ರಮುಖವಾಗಿ ನಿಲ್ಲುತ್ತಾರೆ. ಪದಗಳನ್ನು ಪದಗಳಿಗೆ ಜೋಡಿಸಿ ಕಾವ್ಯ ಕಟ್ಟುವಿಕೆ ಒಂದು ಬಗೆಯಾದರೆ ನೆಲದ ಒಡಲಿಂದ ಮಣ್ಣಿನ ಧ್ವನಿಯನ್ನು ಹಿಡಿದು ಹಾಡಾಗಿ ಕಾವ್ಯಕಟ್ಟುವ ಬಗೆಯೇ ವಿಶಿಷ್ಟವಾದುದು. ಅಂದರೆ ಶ್ರಮಿಕರ, ಕೃಷಿಕರ, ಕೂಲಿಕಾರರ ಶ್ರಮ ಜೀವನದ ನಡುವೆ ಹುಟ್ಟಿದ ಕಾವ್ಯ ಗೌಡರದು. ಹಾಗಾಗಿ ಗೌಡರು ಜಾನಪದ ಜಂಗಮ ಮಾತ್ರವಲ್ಲ ಜನಸಾಮಾನ್ಯರ ಒಳದನಿಯನ್ನು ನಾಡಿನ ಉದ್ದಗಲಕ್ಕೆ ಹಂಚಿದ ಕವಿ.

ಈ ಮಣ್ಣಿನ ಸೊಗಡು; ರಾಗಿತೆನೆಯ ಕಂಪು; ಗುಡಿಸಲ ಬದುಕು; ಅಂಬರದೆಡೆಗೆ ಕಣ್ಣಿಟ್ಟು ಸಾಗುವ ಅಪಾರ ನಿರೀಕ್ಷೆ; ಪ್ರಕೃತಿಯ ಸೊಬಗನ್ನೆಲ್ಲಾ ಬೊಗಸೆಯಲ್ಲೇ ತುಂಬಿಕೊಳ್ಳುವ ಜೀವನ ಪ್ರೀತಿ-ಗೌಡರ ಕಾವ್ಯದಲ್ಲಿ ಕಾಣುವ ವಿಶೇಷ ಸೊಗಡು ಇದು. ಹಾಗೆಯೇ ಬೆವರ ಬದುಕಲ್ಲಿ ಹುಟ್ಟಿದ ಲಯಬದ್ಧ ಕವಿತೆ, ನೋವಿನ ಮಡುವಲ್ಲಿ ಕಟ್ಟಿದ ಹೃದಯ ಗೀತೆ.... ಹೀಗೆ ಬದುಕಿನ ಅನುಭವವೆಲ್ಲಾ ಹಾಡಾಗಿ ಹರಿದಿರುವುದು ಗೌಡರ ಕಾವ್ಯದ ಅತ್ಯಂತ ಅಮೂಲ್ಯ ಸಂಗತಿಗಳಲ್ಲೊಂದು.

ಕವಿತೆಯಾಗಲಿ, ಸಿನಿಮಾ ಹಾಡಾಗಲಿ, ಸುಗಮ ಸಂಗೀತವಾಗಲಿ, ಭಾವಗೀತೆಯಾಗಲಿ ಎಲ್ಲೂ ಗೌಡರು ತಮ್ಮ ಈ ನೆಲದ ಬದುಕನ್ನು ಬಿಟ್ಟು ಕೊಡದಷ್ಟು ದಟ್ಟವಾಗಿ ಈ ಹೃದಯಗೀತೆ ಹೊಮ್ಮುತಿದೆ. ಗೌಡರ ಅರವತ್ತು ವಸಂತಗಳನ್ನು ನೆನೆಯುವ ಈ ದಿನ ಕನ್ನಡ ಕಾವ್ಯದ ಈ ಸೊಗಸನ್ನು ಚಿಂತಿಸಿದರೆ ಅದು ಎಲ್ಲರ ಬದುಕಲ್ಲಿ ಜೀವನ ಪ್ರೀತಿಯನ್ನು ಉಕ್ಕಿಸಬಲ್ಲದು.

**ಸತ್ಯಮೂರ್ತಿ ಆನಂದೂರು**

ಪ್ರಸ್ತುತ ಪ್ರಕಾಶನ, ಬೆಂಗಳೂರು

